॥ ಶ್ರೀಃ ॥

ಶ್ರೀ ಜಯಚಾಮರಾಜೇಂದ್ರಗ್ರಂಥರತ್ನಮಾಲಾ

(ಸಂ. ೪೨)

# ಶ್ರೀ ಶಿವರಹಸ್ಯ

ಸಂಪುಟ ೨೦



ಅನುವಾದಕ

ಆಸ್ಥಾನವಿದ್ವಾನ್ ಎಚ್. ಗಂಗಾಧರಶಾಸ್ತ್ರೀ

ಧರ್ಮಪ್ರಕಾಶ ಡಿ. ಬನುಮಯ್ಯನವರ ಹೈಸ್ಕೂಲು ಅಧ್ಯಾಪಕ

ಮೈಸೂರು



ಮೈಸೂರು

ಶ್ರೀ ಪಂಚಾಚಾರ್ಯ ಎಲೆಕ್ಟ್ರಿಕ್ ಪ್ರೆಸ್

1950

|| ಶ್ರೀಃ ||

ಶ್ರೀ ಜಯಚಾಮರಾಜೇಂದ್ರಗ್ರಂಥರತ್ನಮಾಲಾ

(ಸಂ. ೩೨)

# ಶ್ರೀಶಿವರಹಸ್ಯ

ಸಂಪುಟ ೨೦



ಅನುವಾದಕ

ಆಸ್ಥಾನವಿದ್ವಾನ್ ಎಚ್. ಗಂಗಾಧರಶಾಸ್ತ್ರೀ

ಧರ್ಮಪ್ರಕಾಶ ಡಿ. ಬನುಮಯ್ಯನವರ ಹೈಸ್ಕೂಲು ಅಧ್ಯಾಪಕ

ಮೈಸೂರು



ಮೈಸೂರು

ಶ್ರೀ ಪಂಚಾಚಾರ್ಯ ಎಲೆಕ್ಟ್ರಿಕ್ ಪ್ರೆಸ್

1950

# ಮುನ್ನುಡಿ

ಶ್ರೀ ಶಿವರಹಸ್ಯದಲ್ಲಿ ಏಳನೆಯ ಅಂಶದ ಪೂರ್ವಾರ್ಧವು ಈ ಭಾಗದಿಂದ ಪೂರ್ಣವಾಗುವುದು. ಒಟ್ಟು ಸಪ್ತಮಾಂಶದ ಪೂರ್ವಾರ್ಧದಲ್ಲಿ ಕೇವಲ ಇಪ್ಪತ್ತೊಂಬತ್ತೇ ಅಧ್ಯಾಯಗಳಿದ್ದರೂ, ಒಂದೊಂದು ಅಧ್ಯಾಯವು ಸಾವಿರಾರು ಶ್ಲೋಕಗಳಿಂದ ಕೂಡಿ, ದ್ವಾದಶಾಂಶಗಳಲ್ಲಿಯೂ ಇದು ಬಹುದೊಡ್ಡಭಾಗವೆನಿಸಿದೆ. ಈ ಅಂಶದಲ್ಲಿ ಶಾಸ್ತ್ರೀಯವಿಷಯಗಳು ಅಧಿಕವಾಗಿಲ್ಲದಿದ್ದರೂ ತೀರ್ಥಕ್ಷೇತ್ರಗಳ ಸಮಗ್ರವಿಚಾರವೂ, ಶಿವಪಾರ್ವತಿಯರ ಸ್ತೋತ್ರಗಳೂ ಬಹುಸಂಖ್ಯೆಯಲ್ಲಿ ತೋರುತ್ತಿವೆ. ಇಪ್ಪತ್ತೈದನೆಯ ಅಧ್ಯಾಯದಲ್ಲಿ "ನ ಯಾಚೇ ನ ಯಾಚೇ ಮಹಾದೇವ ಶಂಭೋ" ಎಂದು ಪ್ರಾರಂಭವಾಗುವ ಶಿವಸ್ತೋತ್ರವೂ, ಹೀಗೆಯೇ ಮುಂದಿನ ಅಧ್ಯಾಯಗಳಲ್ಲಿ ಅಲ್ಲಲ್ಲಿ ಕಂಡುಬರುವ ಇತರಸ್ತೋತ್ರಗಳು, ಲಲಿತಪದಗಳಿಂದಲೂ, ಅರ್ಥಗಾಂಭೀರ್ಯದಿಂದಲೂ ವಾಚಕರ ಮನಸ್ಸನ್ನು ಆಕರ್ಷಿಸುವುವು. ಇಪ್ಪತ್ತೇಳನೆಯ ಅಧ್ಯಾಯದಲ್ಲಿ ಬರುವ ದಧೀಚಿಪ್ರೋಕ್ತವಾದ ಶಿವಕವಚಸ್ತೋತ್ರವು ಸ್ಕಾಂದ ಪುರಾಣದಲ್ಲಿ ಪ್ರತಿಪಾದಿತವಾಗಿ ಈಗ ಜನಜನಿತವಾಗಿರುವ ಶಿವಕವಚಸ್ತೋತ್ರದಂತೆಯೇ ಸುಲಭಶೈಲಿಯಲ್ಲಿ ಮಹಿಮಾಪೂರ್ಣವಾಗಿ ಕಂಡುಬರುತ್ತಿದೆ ಅದೇ ಅಧ್ಯಾಯದಲ್ಲಿ ಕಾಶೀಮಹಿಮೆಯನ್ನು ತಿಳಿಯಪಡಿಸುವ ವೃತ್ತಪದ್ಯಗಳು ಕಾವ್ಯಶೈಲಿಯಲ್ಲಿ ಗಂಗಾಪ್ರವಾಹದಂತೆ ಕವಿತಾಪ್ರೌಢಿಮೆಯನ್ನು ತೋರ್ಪಡಿಸುತ್ತಿವೆ. ಕಾಶೀಕ್ಷೇತ್ರದ ಹಿರಿಮೆಯನ್ನು ಈ ಗ್ರಂಥದಲ್ಲಿ ನೋಡುವಂತೆ ಮತ್ತೆಲ್ಲಿಯೂ ನಾವು ನೋಡಲಾರೆವು. ಕುಂಭಘೋಣ, ಮಧ್ಯಾರ್ಜುನ, ಚಿದಂಬರ ಮುಂತಾದ ದಕ್ಷಿಣ ಭಾರತದ ಶಿವಕ್ಷೇತ್ರಗಳು ಅತಿಪವಿತ್ರಗಳೆಂಬುದನ್ನು ಇತಿಹಾಸವಿಮರ್ಶನಪೂರ್ವಕವಾಗಿ ಇಲ್ಲಿ ನಿರೂಪಿಸಿರುವರು. ಮತ್ತು ಭಾರತದ ಎಲ್ಲ ಶಿವಕ್ಷೇತ್ರಗಳ ವಾಸದ ಫಲವೇ ಕಾಶೀಕ್ಷೇತ್ರವಾಸ ಎಂದು ಅಲ್ಲಲ್ಲಿ ಹೇಳಿ ಶಿವಕ್ಷೇತ್ರಗಳಲ್ಲೆಲ್ಲಾ ಕಾಶಿಯೇ ಮೂರ್ಧನ್ಯಸ್ಥಾನವಾದುದೆಂಬುದನ್ನು ಸ್ಪಷ್ಟವಾಗಿ ತಿಳಿಸಿರುವರು. ವ್ಯತ್ತಿಕಾಲಿಂಗಾರ್ಚನೆ, ಶಿವಲಿಂಗದಾನ, ಭಸ್ಮರುದ್ರಾಕ್ಷಗಳ ವೈಶಿಷ್ಟ್ಯ ಇವು ಈ ಭಾಗದಲ್ಲಿ ತೋರಿಬರುವ ವಿಶೇಷಾಂಶಗಳು.

ಪ್ರಪಂಚದ ಯಾವ ಭಾಷೆಯಲ್ಲಿಯೂ ಅಚ್ಚಾಗದೆ ಕೇವಲ ಹಸ್ತಲಿಖಿತಪ್ರತಿಯಲ್ಲಿದ್ದ ಈ ಶಿವರಹಸ್ಯಗ್ರಂಥದ ಪ್ರಕಾಶಕ್ಕೆ ಸಂಪೂರ್ಣ ಪ್ರೋತ್ಸಾಹವನ್ನಿತ್ತು,

ನಮ್ಮನ್ನಾಳುವ ಶ್ರೀಮನ್ಮಹಾರಾಜ **ಶ್ರೀ ಜಯಚಾಮರಾಜ ಒಡೆಯರ್ ಬಹದ್ದೂರ್, ಜಿ.ಸಿ.ಬಿ., ಜಿ.ಸಿ.ಎಸ್.ಐ.,** ಮಹಾಪ್ರಭುಗಳವರು ಕನ್ನಡಿಗರಿಗೆ ಮಹೋಪಕಾರವೆಸಗಿದ್ದಾರೆ. ಹೀಗೆಯೇ ಅನೇಕ ಪ್ರಾಚೀನಗ್ರಂಥಗಳಿಗೂ, ಕಲೆಗಳಿಗೂ ಪೂರ್ಣಪ್ರೋತ್ಸಾಹವನ್ನಿತ್ತು ಜನತೆಗೆ ಜ್ಞಾನಾಮೃತವು ದೊರಕುವಂತೆ ಮಾಡಿರುವ ನಮ್ಮ ಮಹಾಸ್ವಾಮಿಯವರಿಗೂ, ಅವರ ಕುಟುಂಬವರ್ಗಕ್ಕೂ ಜಗದೀಶ್ವರನು ಸಮಸ್ತಕಲ್ಯಾಣಗಳನ್ನೂ ಅನುಗ್ರಹಿಸಿ ಚಿರಕಾಲ ರಕ್ಷಿಸುತ್ತಿರಲಿ ಎಂದು ಅನನ್ಯಭಕ್ತಿಯಿಂದ ಸರ್ವೇಶ್ವರನನ್ನು ಪ್ರಾರ್ಥಿಸುತ್ತೇನೆ.

ವಿಕೃತಿನಾಮ ಸಂವತ್ಸರದ
ವೈಶಾಖ ಕೃಷ್ಣ ದಶಮೀ
ಗುರುವಾರ
11—5—1950

ಸಜ್ಜನವಿಧೇಯ,
**ಹೊನ್ನೇನಹಳ್ಳಿ ಗಂಗಾಧರಶಾಸ್ತ್ರೀ,**
ಆಸ್ಥಾನವಿದ್ವಾನ್, ಮೈಸೂರು.

# ಶ್ರೀಶಿವರಹಸ್ಯದ ಏಳನೆಯ ಅಂಶದ ಪೂರ್ವಾರ್ಧದ ವಿಷಯಾನುಕ್ರಮಣಿಕಾ

## (೨೫ನೇ ಅಧ್ಯಾಯದಿಂದ ೨೯ ನೇ ಅಧ್ಯಾಯಗಳು ಪೂರ್ತಿ)

### ಇಪ್ಪತ್ತೈದನೆಯ ಅಧ್ಯಾಯ

ವಿಷ್ಣುವು ಶಿವಧರ್ಮವನ್ನು ಚಿದಂಬರಕ್ಷೇತ್ರದ ಹೇಮಸಭಾಮಧ್ಯದಲ್ಲಿ ನೆರೆದಿದ್ದ ಶೈವಶ್ರೇಷ್ಠರಿಗೆಲ್ಲಾ ಉಪದೇಶಿಸುವುದು. ಒಬ್ಬ ಬ್ರಾಹ್ಮಣನು ಶಿವಪೂಜಾರ್ಥವಾಗಿ ಬಿಲ್ವಪತ್ರೆಗಳನ್ನು ವೇಷಾಂತರದಿಂದ ಪರಮೇಶ್ವರನೇ ಅಪಹರಿಸಿ ಅವನ ಭಕ್ತಿಯನ್ನು ಪರೀಕ್ಷಿಸಿ ಅವನಿಗೆ ಮುಕ್ತಿಯನ್ನಿತ್ತ ಇತಿಹಾಸ, ಹಾಗೆಯೇ ಭಸ್ಮನಿಯಮದಿಂದಿದ್ದ ಭಕ್ತನ ಭಸ್ಮವನ್ನಪಹರಿಸಿ, ಅದರಿಂದ ಅವನನ್ನು ಪರೀಕ್ಷಿಸಿ ಅವನನ್ನುದ್ಧರಿಸಿದ ಕಥೆ. ಒಮ್ಮೆ ಅಕಸ್ಮಾತ್ತಾಗಿ ಬಂದ ಅಗಸ್ತ್ಯಮಹಾಮುನಿಯನ್ನು ನೋಡಿ ಋಷಿಗಳೆಲ್ಲರೂ ಸಂಸಾರ ದುಃಖದಿಂದ ಪಾರಾಗುವ ಉಪಾಯವನ್ನು ಪ್ರಶ್ನಿಸಿದುದು. ವಿದರ್ಭ ರಾಜಕುಮಾರಿಯೊಬ್ಬಳ ವೃತ್ತಾಂತ. ಆಕೆಗೆ ಜನ್ಮಾಂತರದಲ್ಲಿ ಬಂದಿದ್ದ ಶಾಪವಿಚಾರ. ಆಕೆಗೆ ಶಿವಸಾಯುಜ್ಯವು ದೊರೆತ ವಿಚಾರ. ಲಕ್ಷ್ಮೀಸಮೇತನಾದ ಮಹಾವಿಷ್ಣುವಿಗೆ ಚಿದಂಬರೇಶ್ವರ ದರ್ಶನಾನಂತರ ಕಾಶೀಕ್ಷೇತ್ರ ವಾಸವು ಲಭಿಸಿದುದು. ಜಾತಾಶೌಚ ಮೃತಾಶೌಚಗಳಲ್ಲಿಯೂ, ಸ್ತ್ರೀಯರು ರಜಸ್ವಲೆಯರಾದಾಗಲೂ ಶಿವಲಿಂಗಪೂಜಾನಿರ್ವಹಣಕ್ರಮ ನಿರೂಪಣೆ.



### ಇಪ್ಪತ್ತಾರನೆಯ ಅಧ್ಯಾಯ

ಕುಂಭಘೋಣಕ್ಷೇತ್ರ ಮಹಿಮೆ—ಶಿವಪ್ರದಕ್ಷಿಣೆ, ಶಿವನಮಸ್ಕಾರ ಇವುಗಳನ್ನು ನಡೆಸುವ ವಿಧಾನ. ಬಿಲ್ವಪತ್ರೆಯ ಪುಡಿಯಿಂದಲೂ ಶಂಕರನನ್ನು ಪೂಜಿಸಬಹುದೆಂಬ ವಿಚಾರ. ಶುದ್ಧಾಚಮನಮಾಡುವಾಗ ಶಿವ, ಶಂಭು, ಮಹೇಶ ಎಂಬ ನಾಮತ್ರಯಗಳನ್ನುಚ್ಚರಿಸಬೇಕೆಂಬ ನಿಯಮ. ಪ್ರತಿಮಾಸದಲ್ಲಿಯೂ ಸ್ನಾನಕಾಲದಲ್ಲಿ ಉಚ್ಚರಿಸುವ ಬೇರೆ ಬೇರೆ ಮಂತ್ರಗಳು (ಶ್ಲೋಕಗಳು)

## ಇಪ್ಪತ್ತೇಳನೆಯ ಅಧ್ಯಾಯ



## ಇಪ್ಪತ್ತೆಂಟನೆಯ ಅಧ್ಯಾಯ

## ಇಪ್ಪತ್ತೊಂಬತ್ತನೆಯ ಅಧ್ಯಾಯ

ಕಾಶೀ ವಿಶ್ವೇಶ್ವರಲಿಂಗಮಹಿಮಾ. ಜ್ಞಾನವಾಪೀ ಮಹಿಮಾ. ಪಂಚಕ್ರೋಶ ಯಾತ್ರಾಫಲ. ಕಾಶೀವಾಸದಿಂದ ಲಭಿಸುವ ಸುಕೃತವಿಚಾರ. ಕಾಶೀ ಮರಣದಿಂದ ಮುಕ್ತಿದೊರೆಯುವ ವಿಚಾರ. ಅನ್ನಪೂರ್ಣಾಷ್ಟೋತ್ತರ ಶತನಾಮಸ್ತೋತ್ರ. ಶಿವಲಿಂಗಾರ್ಚನವಿಧಿ-ಶಿವಲಿಂಗದಾನಮಂತ್ರ, ಕಾರ್ತಿಕ ಶುದ್ಧ ಚತುರ್ದಶೀ ತಿಥಿಯಲ್ಲಿ ನಡೆಸುವ ಶಿವಾರ್ಚನೆಯ ಫಲ. ಕಾಶೀ ಕ್ಷೇತ್ರದಲ್ಲಿ ಶಿವಲಿಂಗಾರ್ಚನೆಮಾಡುತ್ತಿರುವ ವಿಷ್ಣ್ವಾದಿದೇವತಾಂತರಗಳನ್ನು ಪರಶಿವನೇ ಸಾಕ್ಷಾತ್ತಾಗಿ ಪಾರ್ವತಿಗೆ ವಿವರಿಸಿ ಹೇಳುವುದು. ಕಾಶೀ ವಿಶ್ವೇಶ್ವರಲಿಂಗವು ಸ್ವಪ್ರಕಾಶಕವೆಂಬುದನ್ನು ಸ್ಥಿರಪಡಿಸುವುದು.

ಪುಟ ೫೪೬--೭೧೬

॥ ಶ್ರೀಃ ॥

॥ ಶ್ರೀ ಶಿವಾಯನಮಃ ॥

# ಅಥ ಶ್ರೀ ಶಿವರಹಸ್ಯೇ

## ಉಗ್ರಾಖ್ಯೇ

### ಸಪ್ತಮಾಂಶೇ ಪೂರ್ವಾರ್ಧೇ

## ಪಂಚವಿಂಶೋಽಧ್ಯಾಯಃ

ಶ್ರೀಶಿವ ಉವಾಚ ॥

**ಪಶ್ಯತಾಂ ನೃತ್ಯಮಾನಂದಂ ಸುರಾಣಾಂ ಶೋಭನೇ ತತಃ ।**
**ಕ್ಷಣಮಾತ್ರಮಭೂದ್ರಾತ್ರಿರರುಣೋಽಪ್ಯುದಿತಸ್ತತಃ ॥೧॥**

**ತತಃ ಸ್ನಾತ್ವಾ ಯಥಾಶಾಸ್ತ್ರಮುದ್ಧೂಲ್ಯಾಂಗಾನಿ ಭಸ್ಮನಾ ।**
**ರುದ್ರಾಕ್ಷಧಾರಣಂ ಕೃತ್ವಾ ಸಂಧ್ಯಾಂ ಚಕ್ರುಸ್ತತಃ ಪರಂ ॥೨॥**

## ಶ್ರೀಶಿವರಹಸ್ಯದಲ್ಲಿ ಏಳನೆಯ ಅಂಶದ ಪೂರ್ವಾರ್ಧದಲ್ಲಿ ಇಪ್ಪತ್ತೈದನೆಯ ಅಧ್ಯಾಯ

ಪರಮೇಶ್ವರನು ತಾನು ಚಿದಂಬರಕ್ಷೇತ್ರದಲ್ಲಿ ನಡೆಸಿದ ನಾಟ್ಯವೈಭವವನ್ನು ವಿವರಿಸಿ ತಿಳಿಸುತ್ತಾ ಪಾರ್ವತಿಯೊಡನೆ ಹೀಗೆಂದನು : —

ಮಂಗಳಾಂಗಿಯೇ, ಆನಂದಪ್ರದವಾದ ನನ್ನ ನರ್ತನವನ್ನು ದೇವತೆಗಳು ನೋಡುತ್ತಿದ್ದಂತೆಯೇ ಅವರಿಗೆ ರಾತ್ರಿಯೆಲ್ಲಾ ಕ್ಷಣಮಾತ್ರದಂತೆ ಕಳೆದು, ಅರುಣೋದಯವಾಯಿತು. ಅನಂತರ ಎಲ್ಲರೂ ಸ್ನಾನಮಾಡಿ ಭಸ್ಮಲೇಪನೆ, ವಿಭೂತಿತ್ರಿಪುಂಡ್ರಧಾರಣೆ ಮತ್ತು ರುದ್ರಾಕ್ಷಧಾರಣೆಗಳನ್ನು ಮಾಡಿಕೊಂಡು ಸಂತೋಷದಿಂದ ಸಂಧ್ಯಾಕರ್ಮವನ್ನು ನೆರವೇರಿಸಿದರು. ॥೧-೨॥

ತತೋ ವಿಷ್ಣುವಿಧೀಂದ್ರಾದ್ಯಾ ಮುನಯಶ್ಚ ಪ್ರಯತ್ನತಃ ।
ಶ್ರೀಮೂಲಸ್ಥಾನನಾಥಂ ಮಾಂ ಪೂಜಯಾಮಾಸುರಂಬಿಕೇ

ಪ್ರದಕ್ಷಿಣಾದಿಕಂ ಕೃತ್ವಾ ಪಂಚಾಕ್ಷರಜಪಂ ತತಃ ।
ಸರ್ವೇ ಹೇಮಸಭಾಮಧ್ಯಂ ಪ್ರವಿಷ್ಟಾಃ ಕಮಲಾನನೇ ॥೪॥

ತತಸ್ತೇ ಶಾಂಕರಾಃ ಸರ್ವೇ ಭಸ್ಮೋದ್ಧೂಳಿತವಿಗ್ರಹಾಃ ।
ಶಿವಧರ್ಮಾನ್ವದಸ್ವೇತಿ ವಿಷ್ಣುಮೂಚುರ್ಮದರ್ಚಕಂ ॥೫॥

ತತಃ ಪ್ರಣಮ್ಯ ವಿಷ್ಣುರ್ಮಾಂ ಭಕ್ತ್ಯಾ ವಿನಯಪೂರ್ವಕಂ ।
ಮದರ್ಚನಫಲಂ ವಕ್ತುಂ ಮುದೈವೋಪಚಕ್ರಮೇ ಶಿವೇ ॥೬॥

॥ ಶ್ರೀ ವಿಷ್ಣುರುವಾಚ ॥

ಭುಕ್ತಿಮುಕ್ತಿಪ್ರದಂ ಪುಣ್ಯಂ ಶ್ರೀಮಹಾದೇವಪೂಜನಂ ।
ಶ್ರುತಂ ಶ್ರುತಿಷು ಸರ್ವತ್ರ ತತ್ಕಾರ್ಯಮಮರೈರ್ದ್ವಿಜೈಃ ॥೭॥

ಬಿಲ್ವಪತ್ರೇಣ ಸಂಪೂಜ್ಯ ಲಿಂಗರೂಪಿಣಮೀಶ್ವರಂ ।
ಬ್ರಹ್ಮಹತ್ಯಾದಿಕೋಟಿಭ್ಯೋ ಮುಚ್ಯತೇ ನಾತ್ರ ಸಂಶಯಃ ॥೮॥

---

ಅನಂತರ ವಿಷ್ಣು, ಬ್ರಹ್ಮ ಮತ್ತು ಇಂದ್ರ ಮುಂತಾದವರೆಲ್ಲರೂ ನಿಯಮದಿಂದ ಶ್ರೀ ಮೂಲನಾಥನೆನಿಸಿದ ನನ್ನನ್ನು ಪೂಜೆಮಾಡಿದರು ಹಾಗೆಯೇ ಪ್ರದಕ್ಷಿಣ ನಮಸ್ಕಾರಗಳನ್ನು ಮಾಡಿ, ಶಿವಪಂಚಾಕ್ಷರ ಮಂತ್ರವನ್ನು ಜಪಿಸಿದ ತರುವಾಯ ಎಲ್ಲರೂ ಸುವರ್ಣಮಯವಾದ ಹೇಮಸಭಾಮಧ್ಯವನ್ನು ಪ್ರವೇಶಿಸಿದರು. ॥೩-೪॥

ಆ ಮೇಲೆ ಅಲ್ಲಿ ನೆರೆದಿದ್ದ ನನ್ನ ಭಕ್ತರೆಲ್ಲರೂ ವಿಭೂತ್ಯಲಂಕೃತ ಶರೀರವುಳ್ಳವರಾಗಿ, ನನ್ನ ಪೂಜಕನಾದ ವಿಷ್ಣುವನ್ನು ಕುರಿತು, ಶಿವಧರ್ಮಗಳನ್ನು ಹೇಳೆಂದು ಪ್ರಾರ್ಥಿಸಿದರು. ಆಗ ವಿಷ್ಣುವು ವಿನಯಪೂರ್ವಕವಾಗಿ ಭಕ್ತಿಯಿಂದ ನನಗೆ ನಮಸ್ಕಾರಮಾಡಿ, ನನ್ನನ್ನು ಪೂಜೆಮಾಡುವುದರಿಂದುಂಟಾಗುವ ಫಲವನ್ನು ಹೇಳಲು ಸಂತೋಷದಿಂದ ಪ್ರಾರಂಭಿಸಿದನು. ॥೫-೬॥

"ಮಹಾದೇವನ ಪೂಜೆಯು, ಇಹದಲ್ಲಿ ಸಕಲ ಭೋಗಗಳನ್ನೂ ಪರದಲ್ಲಿ ಮುಕ್ತಿಯನ್ನೂ ಕೊಡುವಂತಹ ಪುಣ್ಯಪ್ರದವಾದದ್ದೆಂದು, ವೇದಗಳಲ್ಲಿ ಎಲ್ಲಾ ಕಡೆ

ಬಿಲ್ವಪತ್ರೈರ್ಮಹಾದೇವಃ ಪೂಜಿತಃ ಶ್ರದ್ಧಯಾ ದ್ವಿಜಾಃ ।
ಅವಶೋಽಪಿ ಸ್ವತಃ ಶುದ್ಧೋ ವಶೋ ಭವತಿ ವಸ್ತುತಃ ॥೯॥

ಪುರಾ ಕಶ್ಚಿದ್ದ್ವಿಜವರಃ ಶಿವಲಿಂಗಾರ್ಚನಪ್ರಿಯಃ ।
ಬಿಲ್ವಪತ್ರೈರ್ಮಹಾದೇವಂ ಪೂಜಯಿತ್ವಾ ಸ್ಥಿತಃ ಸದಾ ॥೧೦॥

ಬಿಲ್ವಪತ್ರಾಣ್ಯಲಭ್ಯಾನಿ ಭವಿಷ್ಯಂತೀತಿ ಶಂಕಯಾ ।
ಸ ಶುಷ್ಕಬಿಲ್ವಪತ್ರಾಣಿ ಗೃಹೇ ಸಂಸ್ಥಾಪ್ಯ ಸಂಸ್ಥಿತಃ ॥೧೧॥

ನವಾನಿ ಬಿಲ್ವಪತ್ರಾಣಿ ನ ಪ್ರಾಪ್ನೋತಿ ಯದಾ ತದಾ ।
ಶಿವಲಿಂಗಂ ಬಿಲ್ವಪತ್ರೈಃ ಶುಷ್ಕೈರಭ್ಯರ್ಚ್ಯ ಸಂಸ್ಥಿತಃ ॥೧೨॥

ಬಿಲ್ವಪತ್ರೈರನಭ್ಯರ್ಚ್ಯ ಶಿವಲಿಂಗಂ ಶಿವಾತ್ಮಕಂ ।
ನ ಪಿಬತ್ಯೇವ ಸ ಜಲಂ ತೃಷಾರ್ತೋಽಪಿ ಪ್ರಯತ್ನತಃ ॥೧೩॥

ಗಳಲ್ಲಿಯೂ ಪ್ರಸಿದ್ಧವಾಗಿರುವುದರಿಂದ, ದೇವತೆಗಳೂ ಮತ್ತು ಬ್ರಾಹ್ಮಣರೂ ತಪ್ಪದೇ ಆ ಶಿವಾರಾಧನೆಯನ್ನು ನಡೆಸಲೇಬೇಕು. ಲಿಂಗಸ್ವರೂಪಿಯಾದ ಈಶ್ವರನನ್ನು ಬಿಲ್ವದಳಗಳಿಂದ ಪೂಜೆಮಾಡಿದರೆ ಬ್ರಹ್ಮಹತ್ಯಾ ಮುಂತಾದ ಕೋಟ್ಯಂತರ ಮಹಾ ಪಾಪಗಳೂ ಸಂದೇಹವೇ ಇಲ್ಲದೇ ನಾಶವಾಗುತ್ತವೆ. ॥೭-೮॥

ದ್ವಿಜಶ್ರೇಷ್ಠರೇ, ಮಹಾದೇವನನ್ನು ಬಿಲ್ವಪತ್ರೆಗಳಿಂದ ಶ್ರದ್ಧಾಪೂರ್ವಕವಾಗಿ ಪೂಜೆಮಾಡಿದರೆ, ವಸ್ತುತಃ ಮತ್ತೊಬ್ಬರಿಗೆ ಅಧೀನನಲ್ಲದೆ ಸ್ವತಂತ್ರನಾಗಿರುವ ಶಂಕರನು ತನ್ನ ಭಕ್ತರಿಗೆ ನಿಜವಾಗಿಯೂ ವಶನಾಗುತ್ತಾನೆ ॥೯॥

ಇದಕ್ಕೆ ಒಂದು ಇತಿಹಾಸವುಂಟು. ಹಿಂದೆ ಒಬ್ಬ ಶಿವಲಿಂಗಪೂಜಕನಾದ ಬ್ರಾಹ್ಮಣೋತ್ತಮನು ಯಾವಾಗಲೂ ಬಿಲ್ವದಳಗಳಿಂದಲೇ ಮಹಾದೇವನನ್ನು ಪೂಜೆಮಾಡುತ್ತಾ ಇದ್ದನು. ಆತನು ಮುಂದೆ ಬಿಲ್ವಪತ್ರೆಗಳು ದೊರೆಯದೇ ಹೋದಾವೆಂಬ ಸಂದೇಹದಿಂದ ಒಣಗಿದ ಬಿಲ್ವಪತ್ರೆಗಳನ್ನೆಲ್ಲಾ ಮನೆಯಲ್ಲಿ ಸಂಗ್ರಹ ಮಾಡಿಟ್ಟಿದ್ದನು. ಹೊಸ ಚಿಗುರು ಬಿಲ್ವದಳಗಳು ದೊರೆಯದೇ ಹೋದಾಗ ತಾನು ಸಂಗ್ರಹಮಾಡಿಟ್ಟುಕೊಂಡಿದ್ದ ಒಣ ಬಿಲ್ವಪತ್ರೆಗಳಿಂದಲೇ ಶಿವಲಿಂಗವನ್ನು ಪೂಜಿಸುತ್ತಿದ್ದನು. ॥೧೦-೧೧-೧೨॥

ನಿತ್ಯವೂ ಅವನು ಶಿವಸ್ವರೂಪವೇ ಆಗಿರುವ ಶಿವಲಿಂಗವನ್ನು ಬಿಲ್ವದಳ

ಏವಂ ಸ್ಥಿತೇನ ತೇನೈವ ಸುಪ್ರೀತಃ ಶಾಂಕರಃ ಕೃತಃ ।
ಬಿಲ್ವರಕ್ಷಕ ಇತ್ಯೇತನ್ನಾಮ ತಸ್ಯ ಬಭೂವ ಚ ॥೧೪॥

ತತಃ ಕದಾಚಿದ್ಗೌರೀಶಸ್ತಸ್ಮೈ ದಾತುಂ ವರಾನ್ದ್ವಿಜಾಃ ।
ಚೋರರೂಪಂ ಸಮಾಶ್ರಿತ್ಯ ಪ್ರವಿವೇಶ ತದಾಲಯಂ ॥೧೫॥

ಚೋರರೂಪಧರೈರೇವ ಪ್ರಮಥೈರಪಿ ಸಂವೃತಃ ।
ತಂ ದ್ವಿಜಂ ಗೃಹಮಧ್ಯಸ್ಥಮುವಾಚ ಸ್ವಾರ್ಚಕಂ ಶಿವಃ ॥೧೬॥

॥ ಶಿವ ಉವಾಚ ॥

ರೇ ರೇ ಕಿಂ ಕ್ರಿಯತೇ ವಿಪ್ರ ದ್ರವ್ಯಂ ದರ್ಶಯ ದರ್ಶಯ ।
ಅನ್ಯಥಾ ತಾಡಯಿಷ್ಯಾಮಿ ಪ್ರಾಣಾನ್ಗೃಹ್ಣಾಮ್ಯಸಂಶಯಂ ॥೧೭॥

ವಿಷ್ಣುರುವಾಚ

ಇತ್ಯುಕ್ತ್ವಾ ಗೃಹಮಧ್ಯಸ್ಥಾನ್ಬಿಲ್ವಪತ್ರಘಟಾನ್ಬಹೂನ್ ।
ದೃಷ್ಟ್ವಾ ಪ್ರೋವಾಚ ವಚನಂ ಪ್ರಮಥಾನ್ಪ್ರತಿ ಶಂಕರಃ ॥೧೮॥

---

ಗಳಿಂದ ಪೂಜೆಮಾಡದೇ, ತನಗೆ ಎಷ್ಟೇ ಬಾಯಾರಿದ್ದರೂ ನೀರನ್ನೂ ಸಹ ಕುಡಿಯು ತ್ತಿರಲಿಲ್ಲ. ಅದೂ ಅಲ್ಲದೆ ಪ್ರತಿದಿನವೂ ಶೈವಧರ್ಮಾನುಯಾಯಿಯೊಬ್ಬನಿಗೆ ಸತ್ಕಾರಮಾಡಿ ಅವನನ್ನು ತೃಪ್ತಿಪಡಿಸುತ್ತಿದ್ದನು ಹೀಗೆಯೇ ಅವನು ಶೈವಧರ್ಮದ ಲ್ಲಿರುವಾಗ ಇವನಿಗೆ ಬಿಲ್ವರಕ್ಷಕ ಎಂಬ ಹೆಸರು ಪ್ರಸಿದ್ಧಿಗೆ ಬಂದಿತು. ॥೧೩-೧೪॥

ಹೀಗೆಯೇ ಕೆಲವುಕಾಲ ಕಳೆಯಲು ಒಂದು ದಿನ ಗೌರೀರಮಣನು ಅವನಿಗೆ ವರವನ್ನು ಕೊಡಬೇಕೆಂದು ಬಯಸಿ, ಕಳ್ಳನ ವೇಷವನ್ನು ಧರಿಸಿ, ಅವನ ಮನೆಯನ್ನು ಹೊಕ್ಕನು. ಅವನ ಜತೆಯಲ್ಲಿ ಕಳ್ಳನ ರೂಪವನ್ನು ಧರಿಸಿರುವ ಪ್ರಮಥಗಣಗಳೂ ಬಂದಿದ್ದರು. ಶಿವಾರಾಧಕನಾದ ಆ ಬ್ರಾಹ್ಮಣನು ತನ್ನ ಮನೆಯ ಮಧ್ಯದಲ್ಲಿದ್ದಾಗ ಚೋರವೇಷಧಾರಿಯಾದ ಶಿವನು ಅವನೊಡನೆ ಹೀಗೆ ಮಾತನಾಡಿದನು. ॥೧೫-೧೬॥

ಏ ವಿಪ್ರನೇ! ಏನುಮಾಡುತ್ತಿರುವೆ; ನಿನ್ನ ಹಣವೆಲ್ಲಿದೆ? ಈಗಲೇ ತೋರಿಸು. ಇಲ್ಲದಿದ್ದರೆ ನಿನ್ನನ್ನು ಹೊಡೆದು ಪ್ರಾಣತೆಗೆದುಬಿಡುತ್ತೇನೆಂದು ಚೋರರೂಪಿಯಾದ ಶಿವನು ಆ ಬ್ರಾಹ್ಮಣನನ್ನು ಹೆದರಿಸಿದನು. ॥೧೭॥

ಮತ್ತು ತಾನೇ ಅವನ ಮನೆಯನ್ನೆಲ್ಲಾ ಹುಡುಕಿ ಮನೆಯ ಮಧ್ಯದಲ್ಲಿ

ಶ್ರೀಶಿವ ಉವಾಚ ||

ಏತೇ ಧನಘಟಾಃ ಸರ್ವೇ ಶತಾವಧಿ ಗೃಹಸ್ಥಿತಾಃ ।
ಏತಾನ್ಘಟಾನ್ಗೃಹೀತ್ವೈವ ಭವಂತೋ ಯಾಂತ್ವಿತಿ ದ್ವಿಜಾಃ ॥೧೯॥

ವಿಷ್ಣುರುವಾಚ

ಇತ್ಯುಕ್ತಂ ತದ್ವಚಃ ಶ್ರುತ್ವಾ ಸ ವಿಪ್ರೋ ದುಃಖಿತಸ್ತದಾ ।
ಬಿಲ್ವಪತ್ರಘಟಾಃ ಸರ್ವೇ ಧನಂ ನೇತೀಶಮುಬ್ರವೀತ್ ॥೨೦॥

ಇತ್ಯುಕ್ತ್ವಾ ಬಿಲ್ವಪತ್ರಾಣಿ ಘಟಮಧ್ಯಸ್ಥಿತಾನಿ ಸಃ ।
ಸತ್ವರಂ ದರ್ಶಯಾಮಾಸ ತಮುವಾಚ ತತಃ ಶಿವಃ ॥೨೧॥

ಶ್ರೀಶಿವ ಉವಾಚ ||

ಜಾಯತೇ ಧನಮೇತೇಭ್ಯಃ ಪತ್ರೇಭ್ಯೋ ನಾತ್ರ ಸಂಶಯಃ ।
ರಕ್ಷಣಂ ನವಭಾಂಡೇಷು ಪತ್ರಾಣಾಂ ಕಥಮನ್ಯಥಾ ॥೨೨॥

ಏತೇ ಘಟಾಃ ಪ್ರಯತ್ನೇನ ನೇಯಾ ಏವ ನ ಸಂಶಯಃ ।
ಪ್ರಾಪ್ತವ್ಯಂ ಧನಮೇತೇಭ್ಯಃ ಪತ್ರೇಭ್ಯೋಽಸ್ಮಾಭಿರನ್ವಹಂ ॥೨೩॥

ಟ್ಟಿದ್ದ ಬಿಲ್ವಪತ್ರೆಗಳಿಂದ ತುಂಬಿದ ಅನೇಕ ಗಡಿಗೆಗಳನ್ನು ಕಂಡು, ಸಮೀಪದಲ್ಲಿ ನಿಂತಿದ್ದ ಪ್ರಮಥಗಣಗಳನ್ನು ನೋಡಿ ಆ ಶಂಕರನು ಹೀಗೆ ಆಜ್ಞಾಪಿಸಿದನು. ||೧೮||

"ಅನುಚರರೇ! ಇಗೋ, ಇಲ್ಲಿ ನಿಧಿ ತುಂಬಿದ ಘಟಗಳಿವೆ. ಇಲ್ಲಿ ಕಾಣುವ ನೂರಾರು ದ್ರವ್ಯಘಟಗಳನ್ನೆಲ್ಲಾ ನೀವು ಈಗಲೇ ತೆಗೆದುಕೊಂಡು ಹೋಗಿರಿ" ಎಂದು ಆಜ್ಞೆಮಾಡಿದನು. ||೧೯||

ಹೀಗೆ ನುಡಿದ ಮಾತುಗಳನ್ನು ಕೇಳಿ ಆ ಬ್ರಾಹ್ಮಣನು ಅತ್ಯಂತ ದುಃಖಿತನಾಗಿ 'ಇವೆಲ್ಲವೂ ಬಿಲ್ವಪತ್ರೆಗಳ ಗಡಿಗೆಗಳು, ದುಡ್ಡಿನ ಘಟಗಳಲ್ಲ' ಎಂಬುದಾಗಿ ಈಶ್ವರನನ್ನು ಕುರಿತು ಹೇಳುತ್ತಾ ಗಡಿಗೆಯ ಮಧ್ಯದಲ್ಲಿದ್ದ ಬಿಲ್ವಪತ್ರೆಗಳನ್ನು ಕೂಡಲೇ ತೋರಿಸಿದನು. ಆಗ ಪರಶಿವನು ಅವನನ್ನು ಕುರಿತು ಹೀಗೆ ನುಡಿದನು ||೨೦-೨೧||

ಈ ಬಿಲ್ವಪತ್ರೆಗಳಿಂದ ನಿನಗೆ ನಿಧಿ ಬರುವುದರಲ್ಲಿ ಸಂದೇಹವೇ ಇಲ್ಲ. ಇಲ್ಲದಿದ್ದರೆ ಈ ಪತ್ರೆಗಳನ್ನೇಕೆ ಹೊಸಮಡಿಕೆಗಳಲ್ಲಿ ನೀನು ರಕ್ಷಣೆಮಾಡುತ್ತಿದ್ದೆ?

|| ವಿಷ್ಣುರುವಾಚ ||

ಇತ್ಯುಕ್ತಂ ತದ್ವಚಃ ಶ್ರುತ್ವಾ ದ್ವಿಜೋ ದುಃಖಸಮಾಕುಲಃ ।
ದೃಷ್ಟ್ವಾ ಮಾಂ ತದನುಪ್ರೀತ್ಯಾ ನಯೈತಾನೀತ್ಯುವಾಚ ತಂ ॥೨೪॥

ತಥೈವಾಸ್ತ್ವಿತಿ ಗೌರೀಶಃ ಶಸ್ತ್ರಮುದ್ಯಮ್ಯ ಪಾಣಿನಾ ।
ತತಃ ಪರಂ ಸ ವಿಪ್ರೋಽಪಿ ನಿಶ್ಚಿತ್ಯ ಮರಣಂ ಸ್ವಕಂ ॥೨೫॥

ಚಿಂತಾವ್ಯಾಕುಲಿತೋ ಭೂತ್ವಾ ಸ್ವಪುತ್ರಂ ಪ್ರತ್ಯುವಾಚ ಸಃ ॥೨೬॥

|| ದ್ವಿಜ ಉವಾಚ ||

ಪುತ್ರ ಬಿಲ್ವದಲಾನ್ಯೇತಾನ್ಯತಿಯತ್ನೇನ ಸಾದರಂ ।
ಸಂಪಾದಿತಾನಿ ಬಹುಧಾ ಪೂರಿತಾನಿ ಘಟೇಷ್ವಪಿ ॥೨೭॥

ಏತಾವಂತ್ಯಪಿ ಪತ್ರಾಣಿ ಸಂಪಾದ್ಯಾನಿ ಕಥಂ ಮಯಾ ।
ಅಧುನಾ ಬಿಲ್ವಪತ್ರಾಣಿ ವನೇಷ್ವಪಿ ನ ಸರ್ವಥಾ ॥೨೮॥

ಈ ಗಡಿಗೆಗಳನ್ನೆಲ್ಲಾ ಅವಶ್ಯವಾಗಿ ತೆಗೆದುಕೊಂಡೇ ಹೋಗಲೇಬೇಕು. ಇದರಿಂದ ಪ್ರತಿನಿತ್ಯವೂ ನಮಗೆ ಸಂದೇಹವಿಲ್ಲದೇ ದ್ರವ್ಯವು ಲಭಿಸುವುದು. ಎಂದು ವೇಷಧಾರಿ ಶಿವನು ಆ ಬ್ರಾಹ್ಮಣನಿಗೆ ಪ್ರತ್ಯುತ್ತರ ಹೇಳಿದನು. ||೨೨-೨೩||

ಈ ಮಾತುಗಳನ್ನು ಕೇಳಿದ ದ್ವಿಜನು ದುಃಖಾಕ್ರಾಂತನಾಗಿ, ಚೋರವೇಷ ಧಾರಿಯಾದ ಶಿವನನ್ನು ನೋಡುತ್ತಾ, ದಿಕ್ಕುತೋರದೆ ಪ್ರೀತಿಯಿಂದ ಇವುಗಳನ್ನು ತೆಗೆದುಕೊಂಡು ಹೋಗೆಂದು ಒಪ್ಪಿಗೆಯಿತ್ತನು. ಹಾಗೆಯೇ ಆಗಲೆಂದು ಗೌರೀ ರಮಣನು ತನ್ನ ಕೈಯಲ್ಲಿ ಶಸ್ತ್ರವನ್ನು ಹಿಡಿದುಕೊಂಡನು. ಇದನ್ನು ಕಂಡು ಆ ಬ್ರಾಹ್ಮಣನೂ ತನ್ನ ಮರಣವನ್ನು ನಿಶ್ಚಯಿಸಿ ಚಿಂತಾಯುಕ್ತನಾಗಿ ತನ್ನ ಮಗನನ್ನು ಕುರಿತು ಇಂತೆಂದನು. ||೨೪-೨೫-೨೬||

'ಪುತ್ರನೇ, ಈ ಬಿಲ್ವದಳಗಳನ್ನು ಬಹು ಕಷ್ಟಪಟ್ಟು ಸಂಪಾದಿಸಿ ಆದರದಿಂದ ಈ ಗಡಿಗೆಗಳಲ್ಲಿ ತುಂಬಿಟ್ಟಿದ್ದೆನು. ಈಗ ಈ ಬಿಲ್ವಪತ್ರೆಗಳು ಕೈಬಿಟ್ಟು ಹೋದ ಮೇಲೆ ಪುನಃ ಇಷ್ಟು ಬಿಲ್ವಪತ್ರೆಗಳನ್ನು ನಾನು ಹೇಗೆ ಸಂಪಾದಿಸಲಿ? ಈಗ ಈ ಕಾಡುಗಳಲ್ಲಿಯೂ ಸಹ ಬಿಲ್ವಪತ್ರೆಗಳು ದೊರೆಯುವಂತಿಲ್ಲಾ! ||೨೭-೨೮||

ಬಿಲ್ವಪತ್ರಾರ್ಚನಂ ತ್ಯಕ್ತ್ವಾ ನ ಪಿಬಾಮಿ ಜಲಾನ್ಯಪಿ।
ಬಿಲ್ವಪತ್ರಾರ್ಚನಾಭಾವೇ ಮರಣಂ ಮೇ ಭವಿಷ್ಯತಿ ॥೨೯॥

ತಥಾ ಚಾದ್ಯೈವ ಸಂತ್ಯಕ್ಷ್ಯೇ ತನುಮೇತಾಂ ನ ಸಂಶಯಃ।
ಪ್ರಾಯಶೋ ಮೃತ್ಯುಕಾಲೋಽದ್ಯ ಮಮಾಯಂ ಸಮುಪಸ್ಥಿತಃ॥೩೦॥

ಗಚ್ಛ ಜೀವ ಸುತಾರಣ್ಯಂ ಬಿಲ್ವವೃಕ್ಷಸಮಾವೃತಂ।
ಬಿಲ್ವಪತ್ರೈರ್ಬಿಲ್ವಮೂಲೇ ಶಿವಮರ್ಚಯ ಸಾದರಂ ॥೩೧॥

ಮಾ ತ್ಯಜಾರ್ಭಕ ಭಸ್ಮಾಂಗೇ ಮೋಹೇನಾಪಿ ಶಿವಾರ್ಚನಂ।
ಬಿಲ್ವಪತ್ರೈಃ ಪ್ರಯತ್ನೇನ ಪೂಜಯಸ್ವ ಸದಾಶಿವಂ ॥೩೨॥

ವನವಾಸರತೈಃ ಸಾಕಂ ಪ್ರೀತಿಂ ಕುರು ಸದಾರ್ಭಕ।
ಶೃಣು ಶೈವೀಂ ಕಥಾಮೇವ ಜಪ ಪಂಚಾಕ್ಷರಂ ಸದಾ ॥೩೩॥

ಉದ್ಧೂಳನತ್ರಿಪುಂಡ್ರಾಭ್ಯಾಮಲಂಕುರು ತನುಂ ಸದಾ।
ರುದ್ರಾಕ್ಷಧಾರಣಂ ಪ್ರೀತ್ಯಾ ಕುರು ಯತ್ನೇನ ಸಂತತಂ ॥೩೪॥

ಪರಶಿವನನ್ನು ಬಿಲ್ವಪತ್ರೆಗಳಿಂದ ಪೂಜೆಮಾಡದೇ ನೀರನ್ನೂ ಸಹ ನಾನು ಕುಡಿಯುವುದಿಲ್ಲ. ಬಿಲ್ವಪೂಜೆಮಾಡದಿದ್ದರೆ ನನಗೆ ಮರಣವೇ ಉಂಟಾಗುವುದು. ಆದ್ದರಿಂದ ಈಗಲೇ ಈ ಶರೀರವನ್ನು ತ್ಯಾಗಮಾಡುವೆನು. ಇದರಲ್ಲಿ ಸಂಶಯವೇ ಇಲ್ಲ. ನನಗೆ ಮರಣಕಾಲವು ಈಗಲೇ ಸಮೀಪಿಸಿದೆಯೆಂದು ತೋರುತ್ತದೆ ॥೨೯-೩೦॥

ಮಗುವೆ! ಇನ್ನು ಮುಂದೆ ನೀನು ಬಿಲ್ವಮರಗಳಿಂದ ನಿಬಿಡವಾದ ಕಾಡಿಗೆ ಹೋಗಿ ಜೀವಿಸುತ್ತಾ, ಬಿಲ್ವವೃಕ್ಷದ ಬುಡದಲ್ಲೇ ನಿತ್ಯವೂ ಬಿಲ್ವದಳಗಳನ್ನು ತಂದು ಅದರಿಂದ ಶಿವನನ್ನು ಪೂಜೆಮಾಡು. ಅಜ್ಞಾನದಿಂದಲಾದರೂ ಭಸ್ಮವನ್ನು ಅವಯವದಲ್ಲಿ ಧರಿಸದೇ ಶಿವಪೂಜೆಮಾಡಬೇಡ. ಬಿಲ್ವದಳಗಳಿಂದಲೇ ಯಾವಾಗಲೂ ನಿಯಮಬದ್ಧನಾಗಿ ಆ ಮಹೇಶ್ವರನನ್ನು ಅರ್ಚಿಸುತ್ತಿರು. ॥೩೧-೩೨॥

ಮಗನೆ, ಯಾವಾಗಲೂ ಕಾಡಿನಲ್ಲಿ ವಾಸಮಾಡುವವರ ಜತೆಯಲ್ಲಿಯೇ ನೀನು ಪ್ರೀತಿಯಿಂದಿರು. ಶಿವನ ಕಥೆಗಳನ್ನೇ ಕೇಳುತ್ತಾ ಯಾವಾಗಲೂ ಶಿವ ಪಂಚಾಕ್ಷರಮಂತ್ರವನ್ನೇ ಜಪಮಾಡುತ್ತಿರು. ಸರ್ವದಾ ಭಸ್ಮಲೇಪನ, ಭಸ್ಮ

|| ವಿಷ್ಣುರುವಾಚ ||

ಇತಿ ತದ್ವಚನಂ ಶ್ರುತ್ವಾ ಪುತ್ರೋಽಪಿ ಪಿತೃವತ್ಸಲಃ ।
ಮಯಾಪಿ ಬಿಲ್ವಪತ್ರಾರ್ಥೇ ತನುಸ್ತ್ಯಜ್ಯೇತ್ಯುವಾಚ ತಂ ||೩೫||

ದ್ವಿಜಪತ್ನ್ಯಪಿ ತಂ ದೃಷ್ಟ್ವಾ ಸ್ವಪತಿಂ ಮರ್ತುಮುದ್ಯತಂ ।
ಮಯಾಪಿ ಬಿಲ್ವಪತ್ರಾರ್ಥಂ ತನುಸ್ತ್ಯಜ್ಯೇತ್ಯುವಾಚ ತಂ ||೩೬||

ತತಃ ಪರಂ ಸ ವಿಪ್ರೇಂದ್ರೋ ಭಸ್ಮ ಧೃತ್ವಾ ಯಥಾವಿಧಿ ।
ಸ ರುದ್ರಾಕ್ಷೋ ಮಹಾದೇವಂ ಪೂಜಯಾಮಾಸ ಭಕ್ತಿತಃ ||೩೭||

ಪ್ರದಕ್ಷಿಣನಮಸ್ಕಾರಾಂಶ್ಚಕಾರ ತದನಂತರಂ ।
ಶಿವತೀರ್ಥಂ ತತೋ ವಿಪ್ರಃ ಪಪೌ ಪಾವನಪಾವನಂ ||೩೮||

ತತಃ ಶಿವಾರ್ಪಿತಾಂ ಶುದ್ಧಾಂ ಬಿಲ್ವಮಾಲಾಂ ದಧಾರ ಸಃ ।
ತತಸ್ತುಷ್ಟಾವ ಗಿರಿಶಂ ರುದ್ರಸೂಕ್ತೈರನೇಕಧಾ ||೩೯||

---

ತ್ರಿಪುಂಡ್ರಾದಿಗಳಿಂದ ಶರೀರವನ್ನಲಂಕರಿಸಿಕೋ. ಅನವರತವೂ ರುದ್ರಾಕ್ಷಮಾಲೆಗಳನ್ನು ಪ್ರೀತಿಯಿಂದ ಧರಿಸುವನಾಗು. ||೩೩-೩೪||

ತಂದೆಯ ಮಾತನ್ನು ಕೇಳಿ ಪಿತೃವತ್ಸಲನಾದ (ತಂದೆಯಲ್ಲಿ ತುಂಬಾ ಭಕ್ತಿಯುಳ್ಳ) ಮಗನೂ ಕೂಡ, ಈ ಬಿಲ್ವದಳಕ್ಕೋಸ್ಕರ ನಾನೂ ಪ್ರಾಣತ್ಯಾಗಮಾಡುವೆನೆಂದನು. ಬ್ರಾಹ್ಮಣನ ಹೆಂಡತಿಯೂ ಮರಣೋದ್ಯುಕ್ತನಾಗಿರುವ ತನ್ನ ಪತಿಯನ್ನು ನೋಡಿ, ನಾನೂ ಬಿಲ್ವಪತ್ರೆಗಳಿಗಾಗಿಯೇ ಈ ಶರೀರ ತ್ಯಾಗಮಾಡುತ್ತೇನೆಂಬುದಾಗಿ ದೃಢವಾಗಿ ಹೇಳಿದಳು. ||೩೫-೩೬||

ಇದನ್ನು ಕೇಳಿ ಆ ಬ್ರಾಹ್ಮಣೋತ್ತಮನು ವಿಧಿಪೂರ್ವಕವಾಗಿ ವಿಭೂತಿಯನ್ನು ಹಚ್ಚಿಕೊಂಡು, ರುದ್ರಾಕ್ಷಾಲಂಕೃತನಾಗಿ, ಭಕ್ತಿಯಿಂದ ಆ ಮಹಾದೇವನನ್ನು ಮತ್ತೊಮ್ಮೆ ಪೂಜೆಮಾಡಿದನು. ಶಿವನಿಗೆ ಪ್ರದಕ್ಷಿಣೆ ನಮಸ್ಕಾರಗಳನ್ನೂ ಮಾಡಿ ತರುವಾಯ ಅತ್ಯಂತ ಪಾವನವಾದ ಶಿವತೀರ್ಥವನ್ನು ಪ್ರಾಶನಮಾಡಿದನು. ಅನಂತರ ಶಿವನಿಗೆ ಸಮರ್ಪಣೆ ಮಾಡಿದ ಪರಿಶುದ್ಧವಾದ ಬಿಲ್ವಮಾಲೆಯನ್ನು ಧರಿಸಿ, ಗಿರಿಶನನ್ನು (ಕೈಲಾಸಪರ್ವತದಲ್ಲಿ ನೆಲಸಿರುವವನನ್ನು) ರುದ್ರಸೂಕ್ತ ಮಂತ್ರಗಳಿಂದ ಬಹಳವಾಗಿ ಸ್ತೋತ್ರಮಾಡಿದನು. ||೩೭-೩೮-೩೯||

ತತೋ ಜಜಾಪ ಶುದ್ಧಾತ್ಮಾ ಶಿವಪಂಚಾಕ್ಷರಂ ದ್ವಿಜಃ ।
ತತೋ ಜಜಾಪ ಶ್ರೀರುದ್ರಂ ಶಿವಲಿಂಗಸ್ಯ ಸಂನಿಧೌ ॥೪೦॥

ತತ್ಪುತ್ರೋ ಭಸ್ಮರುದ್ರಾಕ್ಷಾನ್ಧೃತ್ವಾ ಮಾತೃಸಮನ್ವಿತಃ ।
ಚಕಾರ ಪೂಜನಂ ಶಂಭೋಃ ಪಿತೃವತ್ಪಿತೃವತ್ಸಲಃ ॥೪೧॥

ತತಸ್ತ್ರಯೋಽಪಿ ರುದ್ರಾಕ್ಷಾನ್ಸ್ಥಾಪಯಿತ್ವಾ ಮುಖಾಂತರೇ ।
ತತಶ್ಚಕ್ರುಃ ಪುನಃ ಪೂಜಾಂ ಶಿವಲಿಂಗೇ ಶಿವಾತ್ಮಕೇ ॥೪೨॥

ಸಕುಟುಂಬಸ್ತತೋ ವಿಪ್ರಃ ಶಿವಪಂಚಾಕ್ಷರಂ ಜಪನ್ ।
ಸತ್ವರಂ ಮಾರಯೇತ್ಯುಕ್ತ್ವಾ ಶಿವಾಗ್ರೇ ಸಂವಿವೇಶ ಸಃ ॥೪೩॥

ತತಃ ಕೃಪಾನಿಧಿಃ ಶಂಭುಸ್ತಂ ವಿಪ್ರಂ ಮರಣೋನ್ಮುಖಂ ।
ದೃಷ್ಟ್ವಾ ಸ್ವರೂಪಮಮಲಂ ದರ್ಶಯಾಮಾಸ ಸತ್ವರಂ ॥೪೪॥

ಅನಂತರ ಆ ಬ್ರಾಹ್ಮಣನು ಪರಿಶುದ್ಧ ಮನಸ್ಸಿನಿಂದ ಶಿವಪಂಚಾಕ್ಷರ ಮಂತ್ರವನ್ನು ಜಪಮಾಡಿ, ಶಿವಲಿಂಗದ ಸನ್ನಿಧಿಯಲ್ಲಿಯೇ ಶ್ರೀ ರುದ್ರಮಂತ್ರವನ್ನು ಪಾರಾಯಣಮಾಡಿದನು. ಅವನ ಮಗನು ಭಸ್ಮವನ್ನು ಧರಿಸಿಕೊಂಡು ರುದ್ರಾಕ್ಷ ಮಾಲೆಯಿಂದ ಅಲಂಕೃತನಾಗಿ, ತಾಯಿಯೊಡಗೂಡಿ ತಂದೆಯಂತೆಯೇ ತಾನೂ ಈಶ್ವರಾರಾಧನೆಮಾಡಿದನು. ಆಮೇಲೆ ಮೂರು ಮಂದಿಯೂ ಕಂಠದಲ್ಲಿ ರುದ್ರಾಕ್ಷಗಳನ್ನು ಧರಿಸಿಕೊಂಡು, ಪುನಃ ಶಿವಸ್ವರೂಪವಾದ ಶಿವಲಿಂಗವನ್ನು ಭಯಭಕ್ತಿಯಿಂದ ಪೂಜೆಮಾಡಿದರು. ॥೪೦-೪೧-೪೨॥

ಪುನಃ ಪೂಜೆಯಾದ ಮೇಲೆ ಆ ಬ್ರಾಹ್ಮಣನು ಶಿವಪಂಚಾಕ್ಷರವನ್ನು ಜಪಿಸುತ್ತಾ ಕುಟುಂಬಸಮೇತನಾಗಿ ಚೋರರೂಪಧಾರಿಯಾದ ಶಿವನ ಮುಂದೆ ಪ್ರವೇಶಿಸಿ, ಜಾಗ್ರತೆ ಕೊಲ್ಲೆಂದು ಹೇಳುತ್ತಾ ನಿಂತುಬಿಟ್ಟನು. ದಯಾಸಮುದ್ರನಾದ ಶಂಭುವು ಆಗ ಧರ್ಮಕ್ಕಾಗಿ ಸಾಯಲು ಸಿದ್ಧನಾಗಿರುವ ಬ್ರಾಹ್ಮಣನನ್ನು ಕಂಡು ಜಾಗ್ರತೆಯಾಗಿ ಅವನಿಗೆ ನಿರ್ಮಲವಾದ ತನ್ನ ನಿಜಸ್ವರೂಪವನ್ನು ತೋರಿಸಿದನು. ॥೪೩-೪೪॥

ಸ ದದರ್ಶ ಮಹಾದೇವಂ ಸಕುಟುಂಬೋ ದ್ವಿಜೋತ್ತಮಃ ।
ಅತ್ಯುಚ್ಚವೃಷಭಾರೂಢಂ ಪ್ರಮಥೈರುಪಸೇವಿತಂ ॥೪೫॥

ಸಂಸ್ತೂಯಮಾನಮಮರೈರ್ವೇದೈರ್ನಾನಾವಿಧೈರಪಿ ।
ಉಮಾಸಂಶ್ಲಿಷ್ಟವಾಮಾಂಗಂ ವ್ಯಾಘ್ರಚರ್ಮಧರಂ ಪ್ರಭುಂ ॥೪೬॥

ಅನೇಕಚಂದ್ರಸೂರ್ಯಾಗ್ನಿಪ್ರಭಾವಿಸ್ಫುರಿತಪ್ರಭಂ ।
ಚಂದ್ರಾವತಂಸಮನಘಂ ಭಸ್ಮಭೂಷಿತವಿಗ್ರಹಂ ॥೪೭॥

ಅನೇಕರತ್ನಮಾಲಾಭಿಃ ಸಮಲಂಕೃತವಿಗ್ರಹಂ ।
ಚಂದ್ರಸೂರ್ಯಾಗ್ನಿನಯನಂ ಪ್ರಸನ್ನಮುಖಪಂಕಜಂ ॥೪೮॥

ಏತಾದೃಶಂ ಮಹಾದೇವಂ ದೃಷ್ಟ್ವಾ ಸಂತುಷ್ಟಮಾನಸಃ ।
ಸ ವಿಪ್ರಃ ಪೂಜಯಾಮಾಸ ಬಿಲ್ವಪತ್ರಾದಿಸಾಧನೈಃ ॥೪೯॥

ಆಗ ಆ ಬ್ರಾಹ್ಮಣೋತ್ತಮನು ತನ್ನ ಹೆಂಡತಿಮಕ್ಕಳೊಡನೆ, ಪರಶಿವನ ಸ್ವರೂಪವನ್ನು ಈ ರೀತಿ ನೋಡಿದನು. "ಪರಮೇಶ್ವರನು ಎತ್ತರವಾದ ವೃಷಭವನ್ನೇರಿ ಪ್ರಮಥಗಣಗಳಿಂದ ಸೇವಿಸಲ್ಪಡುತ್ತಾ ಶಾಂತಮೂರ್ತಿಯಾಗಿದ್ದನು. ಆ ಸಂದರ್ಭದಲ್ಲಿ ದೇವತೆಗಳು ನಾನಾರೀತಿಯ ವೇದವಚನಗಳನ್ನುಚ್ಚರಿಸುತ್ತಾ ಉಮಾದೇವಿಯಿಂದ ಆಲಿಂಗಿತವಾದ ಎಡಭಾಗವುಳ್ಳವನೂ, ಹುಲಿಯ ಚರ್ಮವನ್ನು ಹೊದೆದಿರುವನೂ ಆದ ಪ್ರಭುವನ್ನು ಸ್ತೋತ್ರಮಾಡುತ್ತಿದ್ದರು. ಆ ದೇವದೇವನು ಕೋಟಿ ಸೂರ್ಯಚಂದ್ರರ ಕಾಂತಿಗಿಂತಲೂ ಅತ್ಯಧಿಕವಾದ ತೇಜಸ್ಸಿನಿಂದ ಶೋಭಿಸುತ್ತಿದ್ದನು. ಚಂದ್ರನನ್ನು ತಲೆಯಲ್ಲಿ ಆಭರಣದಂತೆ ಧರಿಸಿ, ನಿರ್ದುಷ್ಟನೆನಿಸಿ, ಮೈಗೆಲ್ಲಾ ವಿಭೂತಿಯನ್ನು ಹಚ್ಚಿಕೊಂಡಿದ್ದನು. ನಾನಾವಿಧವಾದ ರತ್ನಮಾಲೆಗಳು ದೇವದೇವನ ಶರೀರವನ್ನು ಬೆಳಗಿಸುತ್ತಿದ್ದುವು. ಚಂದ್ರ, ಸೂರ್ಯ ಮತ್ತು ಅಗ್ನಿ ಇವುಗಳನ್ನೇ ಮೂರು ಕಣ್ಣುಗಳನ್ನಾಗಿ ಮಾಡಿಕೊಂಡು ಪ್ರಸಾದಗುಣವನ್ನು ಹೊರಚಿಮ್ಮುತ್ತಿರುವ ಮುಖತಾವರೆಯಿಂದ ಕಂಗೊಳಿಸುತ್ತಿದ್ದನು." ॥೪೫-೪೬-೪೭-೪೮॥

ಈ ರೀತಿಯಾಗಿ ದಿವ್ಯರೂಪವನ್ನು ತಾಳಿರುವ ಆ ಮಹಾದೇವನನ್ನು ನೋಡಿ ಆ ಬ್ರಾಹ್ಮಣನು ಸಂತುಷ್ಟಾಂತರಂಗನಾಗಿ ಬಿಲ್ವಪತ್ರೆ ಮುಂತಾದ ಪೂಜಾ

ತತಸ್ತುಷ್ಟಾವ ಗಿರಿಶಂ ರುದ್ರಾಧ್ಯಾಯಾದಿಭಿರ್ದ್ವಿಜಃ ।
ತತಃ ಪ್ರಣಮ್ಯ ಬಹುಧಾ ಕೃತಾಂಜಲಿಪುಟಃ ಸ್ಥಿತಃ ॥೫೦॥

ತತಸ್ತುತೋ ಮಹಾದೇವಃ ಪೂಜಿತಶ್ಚ ಪ್ರಯತ್ನತಃ ।
ದಾಸ್ಯಾಮೀಷ್ಟವರಾನ್ವಿಪ್ರ ವರಯೇತಿ ತಮಬ್ರವೀತ್ ॥೫೧॥

ಕೃತಾರ್ಥೋಽಸ್ಮಿ ಮಹಾದೇವ ತ್ವತ್ಪಾದಾಂಬುಜದರ್ಶನಾತ್ ।
ಯದಿದಂ ಕಾಂಕ್ಷ್ಯತೇ ನಿತ್ಯಂ ಯೋಗಿಭಿರ್ಯೋಗತತ್ಪರೈಃ ॥೫೨॥

ತದಿದಂ ಪಾದಕಮಲಂ ತವ ದೇವೋತ್ತಮ ಪ್ರಭೋ ।
ಸರ್ವದೇವಸ್ತುತಂ ನಿತ್ಯಂ ದೃಷ್ಟಂ ಭಾಗ್ಯವಶಾನ್ಮಯಾ ॥೫೩॥

ಯದ್ವಿಷ್ಣುನೇತ್ರಪದ್ಮೇನ ಪೂಜಿತಂ ತತ್ಪದಾಂಬುಜಂ ।
ಸರ್ವಾಮರಗಣಾರಾಧ್ಯಂ ದೃಷ್ಟಂ ಭಾಗ್ಯವಶಾನ್ಮಯಾ ॥೫೪॥

ಸಾಧನಗಳಿಂದ ವಿಶೇಷರೀತಿಯಲ್ಲಿ ಪೂಜೆಮಾಡಿದನು. ಅನಂತರ ಆ ಬ್ರಾಹ್ಮಣನು ಗಿರಿಜಾರಮಣನನ್ನು ರುದ್ರಾಧ್ಯಾಯ ಮುಂತಾದವುಗಳಿಂದ ಸ್ತೋತ್ರಮಾಡಿ ಬಹಳವಾಗಿ ನಮಸ್ಕರಿಸಿ, ಕೈಮುಗಿದುಕೊಂಡು ಎದುರಿನಲ್ಲಿ ನಿಂತನು. ॥೪೯-೫೦॥

ಆಗ ಆ ಬ್ರಾಹ್ಮಣನಿಂದ ಸ್ತೋತ್ರಮಾಡಲ್ಪಟ್ಟು ನಿಯಮದಿಂದ ಪೂಜಿತನಾದ ಮಹಾದೇವನು, ಅಯ್ಯ ಬ್ರಾಹ್ಮಣನೇ, ನಿನಗೆ ಇಷ್ಟವಾದ ವರಗಳನ್ನು ನೀಡುತ್ತೇನೆ, ಸಂತೋಷದಿಂದ ಬೇಡು. ಎಂಬುದಾಗಿ ಆ ಬ್ರಾಹ್ಮಣನಿಗೆ ಆಶ್ವಾಸನವಿತ್ತನು. ॥೫೧॥

ಆಗ ಬ್ರಾಹ್ಮಣನು ಹೀಗೆ ಬಿನ್ನೈಸಿಕೊಂಡನು. "ಮಹಾದೇವನೇ, ನಿನ್ನ ಅಡಿದಾವರೆಯ ದರ್ಶನದಿಂದ ನಾನು ಇಂದು ಕೃತಕೃತ್ಯನಾದೆನು. ಯೋಗನಿರತರಾದ ಯೋಗಿಗಳು ನಿತ್ಯವೂ ನಿನ್ನ ದರ್ಶನವನ್ನು ಅಪೇಕ್ಷಿಸುತ್ತಿರುವರು. ದೇವತೋತ್ತಮನಾದ ಪ್ರಭುವೇ, ಸಕಲ ದೇವತೆಗಳಿಂದಲೂ ಸ್ತುತಿಸಲ್ಪಡುವುದೂ ಶಾಶ್ವತವೂ ಆದ ಈ ನಿನ್ನ ಪಾದಕಮಲವು ಭಾಗ್ಯವಶದಿಂದ ಇಂದು ನನಗೆ ಗೋಚರವಾಯಿತು. ॥೫೨-೫೩॥

ವಿಷ್ಣುವಿನ ನೇತ್ರಕಮಲದಿಂದ ಪೂಜಿಸಲ್ಪಟ್ಟುದೂ, ಸಕಲ ದೇವಸಮೂಹಗಳಿಂದ ಪೂಜಿತವಾದುದೂ ಆಗಿರುವ ಈ ನಿನ್ನ ಪಾದಕಮಲವು ಅದೃಷ್ಟವಶದಿಂದ

ಇದಮತ್ಯುತ್ತಮಂ ರೂಪಂ ದೃಷ್ಟಂ ಕೇನಾಪಿ ನ ಪ್ರಭೋ ।
ದೃಷ್ಟಮದ್ಯ ಮಯಾ ಶಂಭೋ ತ್ವತ್ಪ್ರಸಾದೇನ ಮೋಕ್ಷದಂ ॥೫೫॥

ಭಕ್ತಿಸ್ತ್ವಯ್ಯೇವ ಸತತಂ ಮಮಾಸ್ತ್ವವ್ಯಭಿಚಾರಿಣೀ ।
ನಿತ್ಯಂ ತವೈವ ಪೂಜಾಯಾಂ ಮತಿರಸ್ತು ಮಮ ಪ್ರಭೋ ॥೫೬॥

ತವ ನಾಮಜಪೇ ಭಕ್ತಿರ್ಮಮಾಸ್ತ್ವನ್ವಹಮೀಶ್ವರ ।
ಭಕ್ತಿರಸ್ತ್ವನಿಶಂ ಶಂಭೋ ತವ ನಾಮಾನುಕೀರ್ತನೇ ॥೫೭॥

ನಿತ್ಯಂ ಮಮ ಮನೋಭೃಂಗಸ್ತವೈವ ಚರಣಾಂಬುಜೇ ।
ಸಂಚರತ್ವತಿಸಂತುಷ್ಟೋ ಮೋಕ್ಷಪುಷ್ಪರಸಾನ್ವಿತೇ ॥೫೮॥

ತ್ವತ್ಪಾದಕಮಲದ್ವಂದ್ವೇ ದ್ವಂದ್ವದುಃಖನಿವಾರಕೇ ।
ವಿಷ್ಣುನೇತ್ರಾಂಚಿತೇ ನಿತ್ಯಂ ಪ್ರೀತಿರಸ್ತು ಮಮೇಶ್ವರ ॥೫೯॥

ಮಮಾಸ್ತು ಭಕ್ತಿರನಿಶಂ ಭಸ್ಮರುದ್ರಾಕ್ಷಧಾರಣೇ ।
ಮಮಾಸ್ತು ಭಕ್ತಿರನಿಶಂ ಶಿವಭಕ್ತಾಭಿಪೂಜನೇ ॥೬೦॥

ಇಂದು ನಮಗೆ ಗೋಚರವಾಯಿತು. ಪ್ರಭುವೇ, ಅತ್ಯುತ್ತಮವಾದ ಈ ನಿನ್ನ ರೂಪವು ಮತ್ತಾರಿಗೂ ಸುಲಭವಾಗಿ ದೊರೆಯತಕ್ಕುದಲ್ಲ. ಶಂಭುವೇ, ಮೋಕ್ಷಪ್ರದವಾದ ಈ ನಿನ್ನ ದಿವ್ಯರೂಪವು ನಿನ್ನ ಅನುಗ್ರಹದಿಂದ ಮಾತ್ರ ನನಗೆ ಈಗ ಲಭ್ಯವಾಗಿದೆ. ॥೫೪-೫೫॥

ಪ್ರಭೋ, ಅನವರತವೂ ತಪ್ಪದೇ ನಿನ್ನಲ್ಲಿಯೇ ನಮಗೆ ಭಕ್ತಿಯುಂಟಾಗಲಿ. ನನ್ನ ಬುದ್ಧಿಯು ಯಾವಾಗಲೂ ನಿನ್ನ ಪೂಜೆಯಲ್ಲಿಯೇ ನಿರತವಾಗಿರಲಿ. ಪ್ರತಿದಿನವೂ ನಿನ್ನ ದಿವ್ಯನಾಮಜಪದಲ್ಲಿಯೇ ನನಗೆ ಆಸಕ್ತಿಯೇರ್ಪಡಲಿ. ಈಶ್ವರನೇ, ಯಾವಾಗಲೂ ನಿನ್ನ ನಾಮಸಂಕೀರ್ತನೆಯಲ್ಲಿ ನನಗೆ ಶ್ರದ್ಧೆಯುಂಟಾಗಲಿ. ಶಂಭೋ, ನನ್ನ ಮನಸ್ಸೆಂಬ ದುಂಬಿಯು ನಿತ್ಯವೂ ಮೋಕ್ಷರೂಪವಾದ ಮಧುವಿನಿಂದ ಕೂಡಿರುವ ನಿನ್ನ ಪಾದಕಮಲದಲ್ಲಿಯೇ ಸಂತೋಷದಿಂದ ಸಂಚರಿಸಲಿ. ॥೫೬-೫೭-೫೮॥

ಈಶ್ವರನೇ, ವಿಷ್ಣುವಿನ ಕಣ್ಣಿನಿಂದ ಪೂಜಿಸಲ್ಪಟ್ಟು, ಸಂಸಾರರೂಪವಾಗಿ ಬರುವ ಶೀತೋಷ್ಣ, ಜನ್ಮಮೃತ್ಯುರೂಪಗಳಾದ ದ್ವಂದ್ವದುಃಖವನ್ನು ಹೋಗಲಾಡಿ

ಶಂಭೋ ಶಿವಶಿವೇತ್ಯೇವ ವದತೋ ಮಮ ಶಂಕರ ।
ಭಸ್ಮರುದ್ರಾಕ್ಷವಪುಷಸ್ತನುತ್ಯಾಗೋಽಸ್ತು ಮೇ ಪ್ರಭೋ ॥೬೧॥

॥ ವಿಷ್ಣುರುವಾಚ ॥

ಇತಿ ತದ್ಯಾಚಿತಾನ್ದತ್ವಾ ವರಾನ್ದೇವೋತ್ತಮಃ ಶಿವಃ ।
ಪುನಃ ಸಂಪೂಜಿತಸ್ತೇನ ತತ್ರೈವಾಂತರ್ದಧೇ ದ್ವಿಜಾಃ ॥೬೨॥

ಏತಾದೃಶಂ ವೇದವೇದ್ಯಂ ಕೃಪಾಸಾಗರಮೀಶ್ವರಂ ।
ಪೂಜಯಂತ್ಯತಿಯತ್ನೇನ ಭೂರಿಪುಣ್ಯತಪೋಧನಾಃ ॥೬೩॥

ಭಸ್ಮನಾ ಬಿಲ್ವಪತ್ರೈಶ್ಚ ಯೋಽರ್ಚಯಂತಿ ಸದಾಶಿವಂ ।
ನ ತೇಷಾಂ ಗರ್ಭವಾಸಾದಿ ದುಃಖಾನೀತಿ ಶ್ರುತಿರ್ದ್ವಿಜಾಃ ॥೬೪॥

ಸುವ ನಿನ್ನ ಪಾದಕಮಲಗಳೆರಡರಲ್ಲಿಯೂ ನಿತ್ಯವೂ ನನಗೆ ಪ್ರೀತಿಯುಂಟಾಗಲಿ. ಅಲ್ಲದೇ ಭಸ್ಮರುದ್ರಾಕ್ಷಗಳನ್ನು ಧರಿಸುವುದರಲ್ಲಿಯೂ, ಶಿವಭಕ್ತಿಯುತಜನಗಳ ಪೂಜೆಯಲ್ಲಿಯೂ ನನಗೆ ಅನವರತವೂ ಆಸಕ್ತಿಯುಂಟಾಗಲಿ. ॥೫೯-೬೦॥

ಜಗನ್ಮಂಗಳಕರನೂ, ಪ್ರಭುವೂ ಆದ ಶಂಭುವೇ, ಕೊನೆಗಾಲದಲ್ಲಿ ಭಸ್ಮ ರುದ್ರಾಕ್ಷಗಳನ್ನು ಧರಿಸಿ, 'ಶಿವ,' 'ಶಿವ' ಎಂದು ನಿನ್ನ ದಿವ್ಯನಾಮಗಳನ್ನುಚ್ಚಾರ ಮಾಡುತ್ತಿರುವ ಹಾಗೆಯೇ ಈ ನನ್ನ ಶರೀರವು ಮೃತವಾಗಲಿ," ಎಂಬುದಾಗಿ ಆ ಬ್ರಾಹ್ಮಣನು ಪರಶಿವನಲ್ಲಿ ವರ ಬೇಡಿದನು. ॥೬೧॥

ದ್ವಿಜವರ್ಯರೇ ಕೇಳಿರಿ, ದೇವತೋತ್ತಮನಾದ ಶಿವನು ಹಾಗೆ ಅವನು ಬೇಡಿದ ವರಗಳನ್ನೆಲ್ಲಾ ಕೊಟ್ಟು, ಪುನಃ ಅವನಿಂದ ಪೂಜಿತನಾಗಿ ಅಲ್ಲಿಯೇ ಅಂತರ್ಧಾನನಾದನು. ವೇದಗಳಿಂದ ತಿಳಿಯಲ್ಪಡುವವನೂ ದಯಾಸಾಗರನೂ ಆದ ಈಶ್ವರನನ್ನು, ಪುಣ್ಯರೂಪವಾದ ತಪಸ್ಸನ್ನೇ ಧನವಾಗುಳ್ಳ ಮಹಾತ್ಮರು ಮಾತ್ರ ನಿಯಮದಿಂದ ಪೂಜೆ ಮಾಡುತ್ತಾರೆ ವಿಭೂತಿ, ಬಿಲ್ವಪತ್ರೆ, ಮುಂತಾದುವುಗಳಿಂದ ಆ ಸದಾಶಿವನನ್ನು ಭಕ್ತಿಯಿಂದರ್ಚಿಸುವವರಿಗೆ ಗರ್ಭವಾಸವೇ ಮುಂತಾದ ಯಾವ ದುಃಖಗಳೂ ಉಂಟಾಗುವುದಿಲ್ಲವೆಂದು ವೇದವು ಸಾರಿಸಾರಿ ಹೇಳುತ್ತಿರುವುದು. ॥೬೨-೬೩-೬೪॥

ಪುರಾ ಕಶ್ಚಿದ್ದ್ವಿಜವರೋ ಜಾಬಾಲಾರ್ಥವಿದನ್ವಹಂ ।
ಉದ್ಧೂಲನಂ ತ್ರಿಪುಂಡ್ರಂಚ ಕುರ್ವನ್ನೇವ ಸ್ಥಿತಃ ಸದಾ ॥೬೫॥

ಸ ನಿತ್ಯಂ ಭಸ್ಮನಾ ಶಂಭುಂ ಲಿಂಗರೂಪಿಣಮವ್ಯಯಂ ।
ಸಂಪೂಜ್ಯ ಬಿಲ್ವಪತ್ರಾದ್ಯೈಸ್ತತೋಽರ್ಚಯತಿ ಸಾದರಂ ॥೬೬॥

ಸ ಸರ್ವದಾ ನವೇ ಭಾಂಡೇ ಭಸ್ಮ ಸಂಪೂರ್ಯ ಸಾದರಂ ।
ಕರೋತಿ ಭಸ್ಮನೋ ನಿತ್ಯಂ ರಕ್ಷಣಂ ಯತ್ನಪೂರ್ವಕಂ ॥೬೭॥

ಸ್ವಯಮುದ್ಧೂಳನಂ ಕೃತ್ವಾ ಕೃತ್ವಾ ನಿತ್ಯಂ ತ್ರಿಪುಂಡ್ರಕಂ ।
ರುದ್ರಾಕ್ಷಧಾರಣಂ ಕೃತ್ವಾ ಸಮರ್ಚಯತಿ ಶಂಕರಂ ॥೬೮॥

ಸ್ವಾರ್ಥಂ ಭೂತಿಂ ಪೃಥಕ್ಕೃತ್ವಾ ಶಿವಪೂಜಾರ್ಥಮವ್ಯಯಂ ।
ಕೃತ್ವಾ ಭಸ್ಮ ಪೃಥಙ್ನಿತ್ಯಂ ಶಿವಾರ್ಚನಪರೋಽಭವತ್ ॥೬೯॥

ಕದಾಚಿದೀದೃಶೋ ವಿಪ್ರಃ ಪ್ರಾತಃಕಾಲೇ ಸಮುತ್ಥಿತಃ ।
ಸ್ನಾತ್ವೋದ್ಧೂಳ್ಯ ತ್ರಿಪುಂಡ್ರಂ ಚ ಕೃತ್ವಾ ಸಂಧ್ಯಾದಿಕಂ ತತಃ ॥೭೦॥

ಹಿಂದೆ ಜಾಬಾಲಶ್ರುತಿಯ ಅರ್ಥವನ್ನು ಪೂರ್ಣವಾಗಿ ಅರಿತ ಬ್ರಾಹ್ಮಣೋತ್ತಮನೊಬ್ಬನು ಪ್ರತಿದಿನವೂ ಭಸ್ಮೋದ್ಧೂಳನ ಭಸ್ಮತ್ರಿಪುಂಡಗಳನ್ನು ತಪ್ಪದೇ ಧರಿಸುತ್ತಿದ್ದನು. ಅವನು ನಿತ್ಯವೂ ಲಿಂಗಸ್ವರೂಪಿಯೂ ನಾಶರಹಿತನೂ ಆದ ಶಂಭುವನ್ನು ಭಸ್ಮದಿಂದ ಅಲಂಕರಿಸಿ, ಅನಂತರ ಆದರದಿಂದ ಬಿಲ್ವಪತ್ರೆ ಮುಂತಾದುವುಗಳನ್ನು ತಂದು ಪೂಜಿಸುತ್ತಿದ್ದನು. ಅವನು ಯಾವಾಗಲೂ ಹೊಸಮಡಿಕೆಯಲ್ಲಿ ವಿಭೂತಿಯನ್ನು ತುಂಬಿಕೊಂಡಿದ್ದು ನಿತ್ಯವೂ ಅದರ ರಕ್ಷಣೆಯಲ್ಲೇ ಗಮನವಿಟ್ಟು ನಡೆಯುತ್ತಿದ್ದನು. ॥೬೫-೬೬-೬೭॥

ತಾನು ನಿತ್ಯವೂ ಭಸ್ಮಲೇಪನ ಮತ್ತು ಭಸ್ಮತ್ರಿಪುಂಡ್ರಧಾರಣೆ, ರುದ್ರಾಕ್ಷಧಾರಣೆ, ಇವುಗಳಿಂದ ಶುದ್ಧನಾಗಿ ಶಂಕರನನ್ನು ತಪ್ಪದೆ ಪೂಜಿಸುತ್ತಿದ್ದನು. ತನ್ನ ಧಾರಣೆಗೆ ಬೇಕಾದ ವಿಭೂತಿಯನ್ನೂ, ಶಿವಪೂಜೆಗೆ ಉಪಯೋಗಿಸುವ ವಿಭೂತಿಯನ್ನೂ ಬೇರೆ ಬೇರೆಯಾಗಿಟ್ಟು ನಿತ್ಯವೂ ಶಿವಪೂಜಾನಿರತನಾಗಿರುತ್ತಿದ್ದನು. ಇಂತಹ ಬ್ರಾಹ್ಮಣನು ಒಂದು ದಿವಸ ಪ್ರಾತಃಕಾಲ ಸ್ನಾನಮಾಡಿ, ಭಸ್ಮಲೇಪನ ಭಸ್ಮತ್ರಿಪುಂಡ್ರಧಾರಣೆ

ಶಿವಲಿಂಗಾರ್ಚನಂ ಕರ್ತುಂ ಸಂಕಲ್ಪ್ಯ ವಿಧಿಪೂರ್ವಕಂ ।
ರುದ್ರಸೂಕ್ತಾದಿಭಿಃ ಸಮ್ಯಕ್ಚಕ್ರೇ ರುದ್ರಾಭಿಷೇಚನಂ ॥೨೧॥

ತತೋ ವಿಭೂತಿಪೂಜಾರ್ಥಂ ವಿಭೂತಿಮವಲೋಕಯತ್ ।
ಭೂತಿಂ ಗೃಹೀತುಮುದ್ಯುಕ್ತೋ ಭೂತಿಪೂಜಾಪರಾಯಣಃ ॥೨೨॥

ತದಾನೀಂ ಶ್ರೀಮಹಾದೇವೋ ದಾತುಂ ತಸ್ಮೈ ವರಂ ಪರಂ ।
ಸಮುದ್ಯುಕ್ತೋ ಭಸ್ಮ ಸರ್ವಂ ಜಹಾರಾದೃಶ್ಯಮೂರ್ತಿಮಾನ್ ॥೨೩॥

ತತಃ ಸ ವಿಪ್ರಃ ಪೂಜಾರ್ಥಮಲಬ್ಧ್ವಾ ಭಸ್ಮಶಾಂಕರಂ ।
ಅತಿದುಃಖಸಮಾಕ್ರಾಂತೋ ಗಲದ್ಬಾಷ್ಪೋ ಬಭೂವಹ ॥೨೪॥

ಶಿವಾರ್ಚನಾರ್ಥಂ ಸಂಕಲ್ಪಃ ಕೃತೋಽದ್ಯ ಶಿವಸಂನಿಧೌ ।
ಶಿವಪೂಜಾ ಕಥಂ ವಾ ಸ್ಯಾದ್ವಿನಾ ಶಂಕರಭಸ್ಮನಾ ॥೨೫॥

ಗಳನ್ನು ಮಾಡಿಕೊಂಡು ಸಂಧ್ಯಾಕರ್ಮವನ್ನು ನೆರವೇರಿಸಿದ ಮೇಲೆ ವಿಧಿಪೂರ್ವಕವಾಗಿ ಶಿವಲಿಂಗಪೂಜೆ ಮಾಡುತ್ತೇನೆಂದು ಸಂಕಲ್ಪಮಾಡಿಕೊಂಡು ರುದ್ರಸೂಕ್ತವೇ ಮುಂತಾದ ಮಂತ್ರಗಳಿಂದ ಶಿವಲಿಂಗಕ್ಕೆ ಭಕ್ತಿಯಿಂದ ಅಭಿಷೇಕ ಮಾಡಿದನು. ॥೧೮-೧೯-೨೦-೨೧॥

ಆನಂತರ ವಿಭೂತಿಯಿಂದ ಆ ಮಹಾದೇವನನ್ನು ಪೂಜಿಸಬೇಕೆಂದು ಭಸ್ಮಪೂಜಾನಿರತನಾದ ಆ ಬ್ರಾಹ್ಮಣನು ವಿಭೂತಿಯನ್ನು ತೆಗೆದುಕೊಳ್ಳುವುದಕ್ಕೋಸ್ಕರ ಭಸ್ಮವನ್ನು ನೋಡಿದನು. ಅಲ್ಲಿ ಸ್ವಲ್ಪವೂ ಭಸ್ಮವೇ ಇರಲಿಲ್ಲ ಶ್ರೀ ಮಹಾದೇವನು ಅವನಿಗೆ ಉತ್ತಮವಾದ ವರವನ್ನು ಕೊಡಬೇಕೆಂದು ಯೋಚಿಸಿ, ಅವನನ್ನು ಪರೀಕ್ಷಿಸಲು ಕಣ್ಣಿಗೆ ಕಾಣದ ಮೂರ್ತಿಯುಳ್ಳವನಾಗಿ ಭಸ್ಮವನ್ನೆಲ್ಲಾ ಅಪಹರಿಸಿದ್ದನು. ॥೨೨-೨೩॥

ಅನಂತರ ಆ ಬ್ರಾಹ್ಮಣನು ಶಿವಲಿಂಗಕ್ಕೆ ಪೂಜೆಮಾಡಲು ಯೋಗ್ಯವಾದ ಭಸ್ಮವು ದೊರೆಯದಿರುವುದನ್ನು ಕಂಡು ದುಃಖಾಕ್ರಾಂತನಾಗಿ, ಕಣ್ಣೀರು ಸುರಿಸತೊಡಗಿದನು. ಶಂಕರನೇ, ನಿನ್ನ ಸನ್ನಿಧಿಯಲ್ಲಿ ಶಿವಪೂಜೆಮಾಡುತ್ತೇನೆಂದು ಸಂಕಲ್ಪ ಮಾಡಿದುದಾಯಿತು ಭಸ್ಮವಿಲ್ಲದೇ ಶಿವಪೂಜೆ ಹೇಗೆ ಪೂರ್ಣವಾಗು

ಜಾಬಾಲೋಕ್ತೇನ ವಿಧಿನಾ ಭಸ್ಮ ಕಾರ್ಯಂ ಪ್ರಯತ್ನತಃ ।
ತತಃ ಪರಂ ಪೂಜನೀಯೋ ಭಸ್ಮನಾ ಗಿರಿಜಾಪತಿಃ ॥೨೬॥

ಬಹುಭಿರ್ದಿವಸೈರ್ಭಸ್ಮ ಶಾಂಕರಂ ಜಾಯತೇ ತತಃ ।
ತಾವತ್ಕಾಲಂ ಕಥಂ ತ್ಯಾಜ್ಯಾ ಶಿವಪೂಜಾ ಶ್ರುತಿಶ್ರುತಾ ॥೨೭॥

ಪ್ರತಿಯಾಮೇ ಚ ಕರ್ತವ್ಯಂ ಮಯಾ ಶಂಕರಪೂಜನಂ ।
ತತ್ಪೂಜನಂ ವಿನಾ ಭಸ್ಮ ಕಥಂ ವಾದ್ಯ ಭವಿಷ್ಯತಿ ॥೨೮॥

ಪಾನೀಯಮಪಿ ನ ಗ್ರಾಹ್ಯಂ ಶಿವಪೂಜಾಂ ವಿನಾ ಮಯಾ ।
ಮಮ ಪ್ರಾಣಾ ವಿನಶ್ಯಂತಿ ಪಾನೀಯಗ್ರಹಣಂ ವಿನಾ ॥೨೯॥

ಶಿವಪೂಜಾಂತರಾಯೇಣ ಸಂಕಲ್ಪ್ಯ ಪ್ರಚ್ಯವೋಽಪ್ಯಭೂತ್ ।
ಶಿವಪೂಜಾ ಪರಿತ್ಯಾಗೇ ನರಕೋಽಪಿ ಭವಿಷ್ಯತಿ ॥೩೦॥

ಅತಃ ಪರಂ ಮಯಾದ್ಯೇಹ ಶರೀರಂ ಯತ್ನಪೂರ್ವಕಂ ।
ತ್ಯಾಜ್ಯಂ ಭಸ್ಮಾಭಿಪೂತೇನ ಶಿವಧ್ಯಾನಪುರಸ್ಸರಂ ॥೩೧॥

ತ್ತದೆ? ಜಾಬಾಲೋಪನಿಷತ್ತಿನಲ್ಲಿ ಹೇಳಿರುವ ವಿಧಿಯನ್ನನುಸರಿಸಿ ನಿಯಮದಿಂದ ವಿಭೂತಿಯನ್ನು ಮಾಡಬೇಕು. ಆಮೇಲೆ ಆ ಭಸ್ಮದಿಂದ ಗಿರಿಜಾರಮಣನಾದ ನಿನ್ನನ್ನು ಪೂಜಿಸಬೇಕು. ॥೨೪-೨೫-೨೬॥

ಶಂಕರನ ಪೂಜಾಯೋಗ್ಯವಾದ ಭಸ್ಮವನ್ನು ಸಿದ್ಧಗೊಳಿಸಲು ಬಹಳ ದಿನಗಳು ಬೇಕಾಗುವುದು ಅಲ್ಲಿಯವರೆಗೆ ವೇದಪ್ರಸಿದ್ಧವಾದ ಶಿವಪೂಜೆಯನ್ನು ಬಿಡುವುದು ಹೇಗೆ? ಪ್ರತಿಯೊಂದು ಜಾವದಲ್ಲಿಯೂ ನಾನು ಶಂಕರನನ್ನು ಪೂಜೆ ಮಾಡಲೇಬೇಕು. ಭಸ್ಮವೇ ಇಲ್ಲದೆ ಆ ಪೂಜೆಯಾಗುವುದೆಂತು? ಶಿವಪೂಜೆ ಮಾಡದೇ ನಾನು ನೀರನ್ನೂ ಸಹ ತೆಗೆದುಕೊಳ್ಳುವುದಿಲ್ಲವಲ್ಲಾ! ನೀರನ್ನೂ ಕುಡಿಯದೇ ಬಿಟ್ಟರೆ ನನ್ನ ಪ್ರಾಣಗಳೇ ಹೋಗಿಬಿಡುವುವು! ॥೨೭-೨೮-೨೯॥

ವಿಧಿವತ್ತಾಗಿ ಸಂಕಲ್ಪಮಾಡಿದ ಶಿವಪೂಜೆಗೆ ಈಗ ವಿಘ್ನವುಂಟಾಯಿತು ಶಿವಪೂಜೆಯನ್ನು ಬಿಟ್ಟರೆ ನರಕವು ಲಭಿಸುವುದು ನಿಜ. ಆದ್ದರಿಂದ ನಾನು ಈಗಲೇ ಭಸ್ಮಧಾರಣೆಯಿಂದ ಪರಿಶುದ್ಧವಾಗಿರುವ ಈ ದೇಹವನ್ನು ಶಿವಧ್ಯಾನಪುರಸ್ಸರವಾಗಿ

ಯತ್ನೇನ ಯದಿ ದೇಹಸ್ಯ ತ್ಯಾಗೋ ನ ಕ್ರಿಯತೇ ತದಾ ।
ತೃಷಾರ್ತಸ್ಯಾವಿಲಂಬೇನ ತನುರೇಷಾ ಗಮಿಷ್ಯತಿ ॥೮೨॥

ತೃಷಾರ್ತಸ್ಯ ಭವೇನ್ಮೋಹೋ ಮೋಹೇ ಸತಿ ತತಃ ಪರಂ ।
ಶಿವಸ್ಮರಣಮೇತಸ್ಯ ಕಥಂ ಮಮ ಭವಿಷ್ಯತಿ ॥೮೩॥

ಯೇ ತ್ಯಜಂತಿ ತನುಂ ಮರ್ತ್ಯಾಃ ಶಿವಸ್ಯ ಸ್ಮರಣಂ ವಿನಾ ।
ತೇಷಾಂ ಭವತ್ಯಘೋರೇಷು ನರಕೇಷು ಚ ಸಂಸ್ಥಿತಿಃ ॥೮೪॥

ತಥಾ ಚಾದ್ಯ ಪ್ರಯತ್ನೇನ ಚಿತಿಂ ಕೃತ್ವಾ ಸ್ವಕಾಂ ತನುಂ ।
ಸತ್ವರಂ ನಿಕ್ಷಿಪಾಮ್ಯಗ್ನೌ ಜ್ವಲತ್ವೇಷಾ ತನುರ್ಮಮ ॥೮೫॥

ಶಿವಾರ್ಚನಾಸಾಧನಸ್ಯ ಶರೀರಸ್ಯಾಸ್ಯ ರಕ್ಷಣಂ ।
ವೃಥಾ ಭವತ್ಯತೋಽದ್ಯೈವ ಜ್ವಾಲನೀಯಾ ತನುರ್ಮಮ ॥೮೬॥

ಬಲಾತ್ಕಾರದಿಂದ ತ್ಯಾಗಮಾಡಬೇಕು. ಬಾಯಾರಿಕೆಯಿಂದ ಬಳಲುತ್ತಿರುವ ಈ ದೇಹವನ್ನು ಬಲವಂತದಿಂದ ತ್ಯಾಗಮಾಡಿದರೆ ಸುಲಭವಾಗಿ ಈ ಶರೀರವು ಹೋಗಿಬಿಡುವುದು. ||೮೦-೮೧-೮೨||

ಆದರೆ ಬಾಯಾರಿಕೆಯಿಂದ ಪೀಡಿತನಾದ ನನಗೆ ಮೋಹವುಂಟಾಗಬಾರದು. ಮೋಹವುಂಟಾದಮೇಲೆ ಹೇಗೆ ನನಗೆ ಮರಣಕಾಲದಲ್ಲಿ ಶಿವನ ಸ್ಮರಣೆಯುಂಟಾದೀತು ? ಶಿವಸ್ಮರಣೆಮಾಡದೆ ಶರೀರತ್ಯಾಗಮಾಡುವ ಮಾನವರಿಗೆ ಭಯಂಕರವಾದ ನರಕಗಳಲ್ಲಿ ವಾಸವು ಏರ್ಪಡುವುದು. ಆದಕಾರಣ ಅವಶ್ಯವಾಗಿ ಚಿತೆಯನ್ನೇರ್ಪಡಿಸಿ ಜಾಗ್ರತೆಯಾಗಿ ಈ ದೇಹವನ್ನು ಬೆಂಕಿಯಲ್ಲಿಟ್ಟು ಬಿಡುವೆನು. ಇದು ಸುಟ್ಟು ಬೇಗ ಭಸ್ಮವಾಗಿಹೋಗಲಿ. ||೮೩-೮೪-೮೫||

ಶಿವಪೂಜೆಗೆ ಸಾಧಕವಾಗದ ಈ ನನ್ನ ಶರೀರವನ್ನು ಕಾಪಾಡುವುದು ಕೇವಲ ವ್ಯರ್ಥವೇ ಆಗಿರುವುದರಿಂದ, ಈಗಲೇ ಈ ಶರೀರವನ್ನು ನಾನು ಅಗ್ನಿಯಲ್ಲಿ ಉರಿಸಬೇಕು. ||೮೬||

॥ ವಿಷ್ಣುರುವಾಚ ॥

ಇತಿ ನಿಶ್ಚಿತ್ಯ ವಿಪ್ರೇಂದ್ರಃ ಸತ್ವರಂ ಭಸ್ಮನಾ ವಿನಾ ।
ಪೂಜಯಾಮಾಸ ಯತ್ನೇನ ಬಿಲ್ವಪತ್ರಾದಿಭಿಃ ಶಿವಂ ॥೮೭॥

ತತಃ ಪ್ರಣಮ್ಯ ಬಹುಧಾ ಸ್ತುತ್ವಾ ಚ ಬಹುಧಾ ಸ್ತವೈಃ ।
ಜಜಾಪ ಶತರುದ್ರೀಯಂ ಜಜಾಪ ಚ ಷಡಕ್ಷರಂ ।೮೮॥

ತತಃ ಪುನಃ ಪ್ರಣಮ್ಯೇಶಂ ಕೃತ್ವಾ ಕರ್ಮ ಶಿವಾರ್ಪಣಂ ।
ತತಃ ಕಾಷ್ಠೈಃ ಪ್ರಯತ್ನೇನ ಸ ಚಕಾರ ಚಿತಿಂ ದ್ವಿಜಾಃ ॥೮೯॥

ತತಃ ಪ್ರಜ್ವಾಲಯಾಮಾಸ ಚಿತಿಂ ಪರ್ವತಸನ್ನಿಭಾಂ ।
ಚಿತಿಪ್ರದಕ್ಷಿಣಂ ಚಕ್ರೇ ಶಂಕರಂ ಹೃದಿ ಸಂಸ್ಮರನ್ ॥೯೦॥

ತತಃ ಶಿವ ಮಹೇಶಾನ ಶಂಕರೇತಿ ಸಮುಚ್ಚರನ್ ।
ಪ್ರವಿವೇಶ ಚಿತಿಂ ವಿಪ್ರಃ ಶಿವಂ ಧ್ಯಾಯನ್ನುಮಾಪತಿಂ ॥೯೧॥

ಆ ಬ್ರಾಹ್ಮಣಶ್ರೇಷ್ಠನು ಹೀಗೆ ನಿಶ್ಚಯಿಸಿ, ಕೂಡಲೇ ಭಸ್ಮವಿಲ್ಲದೇ ಕೇವಲ ಬಿಲ್ವಪತ್ರೆ ಮುಂತಾದವುಗಳಿಂದಲೇ ನಿಯಬದ್ಧನಾಗಿ ಪರಶಿವನನ್ನು ಪೂಜಿಸಿದನು. ಹಾಗೆಯೇ ಪ್ರದಕ್ಷಿಣಾದಿಗಳನ್ನು ನೆರವೇರಿಸಿ ವಿಶೇಷವಾಗಿ ಸ್ತೋತ್ರಮಾಡಿದನಂತರ ಶತರುದ್ರೀಯಮಂತ್ರವನ್ನೂ ಷಡಕ್ಷರಮಹಾಮಂತ್ರವನ್ನೂ ಜಪಮಾಡಿದನು. ॥೮೭-೮೮॥

ವಿಪ್ರರೇ, ಪುನಃ ಪುನಃ ಈಶ್ವರನಿಗೆ ನಮಸ್ಕಾರಮಾಡುತ್ತಾ ಶಿವಪೂಜಾ ಕರ್ಮವನ್ನು ಶಿವನಿಗೆ ಸಮರ್ಪಿಸಿ, ಒಣಕಟ್ಟಿಗೆಗಳಿಂದ ಪ್ರಯತ್ನಪೂರ್ವಕವಾಗಿ ಚಿತಿಯನ್ನೇರ್ಪಡಿಸಿದನು. ಪರ್ವತಕ್ಕೆ ಸಮಾನವಾದ ಆ ಚಿತಿಗೆ ಬೆಂಕಿಯಿಟ್ಟು ಶಂಕರನನ್ನು ಹೃದಯದಲ್ಲಿ ಸ್ಮರಣೆಮಾಡುತ್ತಾ ಚಿತಿಗೆ ಪ್ರದಕ್ಷಿಣೆಮಾಡಿದನು. ॥೮೯-೯೦॥

ಬ್ರಾಹ್ಮಣನು ಅನಂತರ ಶಿವ, ಮಹೇಶ್ವರ, ಶಂಕರ ಎಂಬುದಾಗಿ ಶಿವನಾಮ ಗಳನ್ನು ಉಚ್ಚರಿಸುತ್ತಾ ಉಮಾರಮಣನಾದ ಶಿವನನ್ನು ಧ್ಯಾನಮಾಡುತ್ತಾ ಆ ಬ್ರಾಹ್ಮಣನು ಚಿತಿಯನ್ನು ಪ್ರವೇಶಮಾಡಿದನು. ಆಗ ದಯಾಸಮುದ್ರನೂ ಪ್ರಭುವೂ

ತದಾನೀಂ ಶ್ರೀಮಹಾದೇವಃ ಕರುಣಾಸಾಗರಃ ಪ್ರಭುಃ ।
ಆವಿರಾಸೀದ್ವೃಷಾರೂಢಃ ಶಿವಾಸಂಶ್ಲಿಷ್ಟವಿಗ್ರಹಃ ॥೯೨॥

ಶಶಾಮ ಶೀತಲೋ ಜಾತಃ ಪ್ರಜ್ವಲನ್ನಪಿ ಪಾವಕಃ ।
ಸ ದದರ್ಶ ತತಃ ಶಂಭುಂ ನಾನಾಪ್ರಮಥಸೇವಿತಂ ॥೯೩॥

ಉಮಾಸಂಶ್ಲಿಷ್ಟವಾಮಾಂಗಂ ವೃಷಭಾರೂಢಮವ್ಯಯಂ ।
ಸೋಮಸೂರ್ಯಾಗ್ನಿನಯನಂ ಸೋಮಾರ್ಧಕೃತಶೇಖರಂ ॥೯೪॥

ಅಭಯಪ್ರದಮೀಶಾನಂ ಚೇಕಿತಾನಮಜಂ ವಿಭುಂ ।
ಭಸ್ಮಭೂಷಿತಸರ್ವಾಂಗಂ ರುದ್ರಾಕ್ಷವಲಯಾನ್ವಿತಂ ॥೯೫॥

ಅನಂತಚಂದ್ರಪ್ರತಿಮಮನಂತರವಿಸಂನಿಭಂ ।
ಅನಂತವಹ್ನಿಪ್ರತಿಮಂ ವಸ್ತುತೋಽಪ್ರತಿಮಂ ಶಿವಂ ॥೯೬॥

ಉಮಾಲಿಂಗಿತ ದೇಹವುಳ್ಳವನೂ ಆದ ಶ್ರೀಮಹಾದೇವನು ವೃಷಭವನ್ನೇರಿ ಪ್ರತ್ಯಕ್ಷನಾದನು. ಶಿವನಮಹಿಮೆಯಿಂದ, ಬೆಂಕಿಯು ಉರಿಯುತ್ತಿದ್ದರೂ ಅದು ಬ್ರಾಹ್ಮಣನಿಗೆ ತಣ್ಣಗೆ ಶಾಂತವಾದಂತಾಯಿತು. ಆ ಸಮಯದಲ್ಲಿ ಬ್ರಾಹ್ಮಣನು ತನ್ನ ಎದುರಿನಲ್ಲಿ ಅನೇಕ ಪ್ರಮಥಗಣಗಳಿಂದ ಸೇವಿಸಲ್ಪಡುತ್ತಿರುವ ಶಂಭುವನ್ನು ಪ್ರತ್ಯಕ್ಷವಾಗಿ ನೋಡಲಾರಂಭಿಸಿದನು. ॥೯೧-೯೨-೯೩॥

ಪರಮೇಶ್ವರನ ಶರೀರದ ಎಡಭಾಗದಲ್ಲಿ ಉಮಾದೇವಿಯು ವಿರಾಜಿಸುತ್ತಿದ್ದಳು. ವೃಷಭಾರೂಢನಾಗಿ ನಾಶರಹಿತನೂ, ಚಂದ್ರ, ಸೂರ್ಯ ಮತ್ತು ಅಗ್ನಿ ಇವುಗಳನ್ನೇ ಮೂರು ಕಣ್ಣುಗಳನ್ನಾಗಿ ಉಳ್ಳವನೂ, ಅರ್ಧಚಂದ್ರನನ್ನು ತಲೆಯಲ್ಲಿ ಧರಿಸಿ ಅಲಂಕಾರ ಮಾಡಿಕೊಂಡಿರುವವನೂ, ಭಕ್ತರಿಗೆ ಅಭಯಪ್ರದಾನ ಮಾಡುವವನೂ ಆದ ಈಶ್ವರನು ತೇಜೋರೂಪದಿಂದ ಪ್ರಕಾಶಿಸುತ್ತಿದ್ದನು. ಉತ್ಪತ್ತಿರಹಿತನೂ, ವಿಭುವೂ, ಸಕಲ ಅವಯವಗಳಲ್ಲಿಯೂ ವಿಭೂತಿಯನ್ನು ಅಲಂಕರಿಸಿಕೊಂಡಿರುವವನೂ, ರುದ್ರಾಕ್ಷಗಳ ಕಂಕಣದಿಂದ ಯುಕ್ತನಾದವನೂ, ಅಪರಿಮಿತ ಚಂದ್ರರಿಗೆ ಸಮಾನನಾದವನೂ, ಅನಂತ ಸೂರ್ಯಸದೃಶನೂ, ಅನೇಕ ಅಗ್ನಿಗಳಂತೆ ಶೋಭಿಸುವವನೂ ಆದ ಮಹಾನುಭಾವನಾದ ಮಹೇಶ್ವರನನ್ನು ಬ್ರಾಹ್ಮಣನು ಆಶ್ಚರ್ಯದಿಂದ ನೋಡುತ್ತಿದ್ದನು. ॥೯೪-೯೫-೯೬॥

ಅತಿಸುಂದರಮೀಶಾನಮಮೇಯಗುಣಸಂಶ್ರಯಂ ।
ಮಂದಾರಮಾಲಾಸಂವೀತಂ ವೃಂದಾರಕಗಣಾರ್ಚಿತಂ ॥೯೭॥

ಏತಾದೃಶಂ ಶಿವಂ ದೃಷ್ಟ್ವಾ ಪ್ರಹೃಷ್ಟವದನೋ ದ್ವಿಜಃ ।
ಪೂಜಯಾಮಾಸ ಯತ್ನೇನ ಪ್ರಣಮ್ಯ ಸ ಪುನಃ ಪುನಃ ॥೯೮॥

ತತಃ ಪರಂ ಮಹಾದೇವಂ ಶ್ರೀರುದ್ರೇಣ ಕೃತಾಂಜಲಿಃ ।
ತುಷ್ಟಾವ ಪರಯಾ ಭಕ್ತ್ಯಾ ಸ್ತವೈರನ್ಯೈಶ್ಚ ಸಾದರಂ ॥೯೯॥

ಸುಪ್ರೀತೋ ಭಗವಾನ್ ಶಂಭುರ್ವರಂ ವರಯ ಸುವ್ರತ ।
ಪ್ರಸನ್ನೋಽಸ್ಮೀತಿ ತಂ ಪ್ರಾಹ ತದಾ ಭಕ್ತವರಪ್ರದಃ ॥೧೦೦॥

ಇತ್ಯುಕ್ತಮೀಶವಚನಂ ಶ್ರುತ್ವಾ ಸೋಽಪಿ ದ್ವಿಜೋತ್ತಮಃ ।
ಮೂರ್ಧನ್ಯಂಜಲಿಮಾದಾಯ ಪ್ರಾಹ ಶಂಭುಂ ಶಿವಾರ್ಚಕಃ ॥೧೦೧॥

ಅತ್ಯಂತ ಸೌಂದರ್ಯಶಾಲಿಯೂ, ಸಕಲೈಶ್ವರ್ಯಭರಿತನೂ, ಅಪರಿಮಿತ ಗುಣಗಳಿಗೆ ಆಶ್ರಯನೂ, ಮಂದಾರಪುಷ್ಪಗಳ ಮಾಲೆಯಿಂದ ವ್ಯಾಪ್ತನಾದವನೂ, ದೇವತೆಗಳ ಸಮೂಹದಿಂದ ಪೂಜಿತನೂ ಆದ ಇಂತಹ ಪರಶಿವನನ್ನು ನೋಡಿ ಬ್ರಾಹ್ಮಣನು ಸಂತುಷ್ಟನಾಗಿ ಶಂಕರನಿಗೆ ನಮಸ್ಕಾರಮಾಡಿ ಪುನಃಪುನಃ ಪೂಜಿಸ ಲಾರಂಭಿಸಿದನು. ॥೯೭-೯೮॥

ಪೂಜಾನಂತರ ಆ ಬ್ರಾಹ್ಮಣನು ಕೈಮುಗಿದುಕೊಂಡು, ಶ್ರೀ ರುದ್ರಮಂತ್ರ ದಿಂದಲೂ, ಮತ್ತು ಇತರ ಬೇರೆ ಶಿವಸ್ತೋತ್ರಗಳಿಂದಲೂ ಭಕ್ತಿಪುರಸ್ಸರವಾಗಿ ಮಹಾ ದೇವನನ್ನು ಸ್ತೋತ್ರಮಾಡಿದನು. ಆಗ ಭಗವಂತನಾದ ಶಂಭುವು ಪ್ರಸನ್ನನಾಗಿ "ಅಯ್ಯ ಪುಣ್ಯಶಾಲಿಯೆ, ಭಕ್ತರಿಗೆ ಬೇಕಾದ ವರಗಳನ್ನು ಕೊಡುವ ನಾನು ನಿನಗೆ ಈಗ ಪ್ರಸನ್ನನಾಗಿರುವೆನು. ಬೇಕಾದ ವರವನ್ನು ಬೇಡು" ಎಂದು ಹೇಳಲು ಮಹೇಶನ ಮಾತುಗಳನ್ನು ಕೇಳಿ ಶಿವಪೂಜಕನಾದ ಆ ಬ್ರಾಹ್ಮಣೋತ್ತಮನು ತಲೆಯಮೇಲೆ ಕೈಜೋಡಿಸಿಟ್ಟುಕೊಂಡು ಶಂಭುವನ್ನು ಕುರಿತು ಹೀಗೆ ಪ್ರಾರ್ಥಿಸಿ ದನು. ॥೯೯-೧೦೦-೧೦೧॥

॥ ದ್ವಿಜ ಉವಾಚ ॥

ಕೃತಾರ್ಥೋಽಸ್ಮಿ ಮಹಾದೇವ ತವ ಪಾದಾಬ್ಜವಂದನಾತ್ ।
ಧನ್ಯೋಽಸ್ಮಿ ಕೃತಕೃತ್ಯೋಽಸ್ಮಿ ಪುನೀತೋಽಸ್ಮಿ ಮಹೇಶ್ವರ ॥೧೦೨॥

ಜನ್ಮ ಪಾವನಮೇತನ್ಮೇ ಮಮ ವಂಶೋಽಪಿ ಪಾವನಃ ।
ಯತಸ್ತ್ವತ್ಪಾದಪದ್ಮಸ್ಯ ದರ್ಶನಂ ಜಾತಮದ್ಯ ಮೇ ॥೧೦೩॥

ಮಮ ಮಾತಾಽಭವದ್ಧನ್ಯಾ ಪಿತಾ ಧನ್ಯೋಽಭವನ್ಮಮ ।
ಯತಸ್ತ್ವತ್ಪಾದಕಮಲಂ ದೃಷ್ಟಂ ಮುಕ್ತಿಪ್ರದಂ ಪ್ರಭೋ ॥೧೦೪॥

ತವೈತದುತ್ತಮಂ ರೂಪಂ ನ ದೇವೈರಪಿ ದೃಶ್ಯತೇ ।
ಮಯಾ ಭಾಗ್ಯವಶಾದದ್ಯ ದೃಷ್ಟಂ ರೂಪಂ ತವ ಪ್ರಭೋ ॥೧೦೫॥

ಮಹೇಶ ತವ ಪೂಜಾರ್ಥಮುಪದಿಷ್ಟಸ್ಯ ಮೇ ಪ್ರಭೋ ।
ಪ್ರತ್ಯೂಹಾ ಮಾವಿಶಂತ್ವೀಶ ಕದಾಚಿದಪಿ ಸರ್ವಥಾ ॥೧೦೬॥

ಶಂಭೋ ಮಮಾಸ್ತು ವಿಶ್ವಾಸಃ ಶಿವಲಿಂಗೈಕಪೂಜನೇ ।
ತ್ವಯ್ಯೇವಾವ್ಯಭಿಚಾರೇಣ ಭಕ್ತಿರಸ್ತು ಮಮ ಪ್ರಭೋ ॥೧೦೭॥

" ಮಹಾದೇವನೇ, ನಿನ್ನ ಪಾದಕಮಲದರ್ಶನದಿಂದಲೂ, ವಂದನದಿಂದಲೂ ನಾನು ಕೃತಕೃತ್ಯನಾಗಿದ್ದೇನೆ. ಮಹೇಶ್ವರನೇ, ಈಗ ನಾನು ಧನ್ಯನೂ, ಕೃತಾರ್ಥನೂ ಮತ್ತು ಪವಿತ್ರನೂ ಆಗಿರುವೆನು. ನನ್ನ ಜನ್ಮವೂ ಮತ್ತು ನನ್ನ ವಂಶವೂ ನಿನ್ನ ಪಾದಕಮಲದರ್ಶನದಿಂದ ಇಂದು ಪಾವನವಾಯಿತು. ॥೧೦೨-೧೦೩॥

ಪ್ರಭೋ, ಮೋಕ್ಷಪ್ರದವಾದ ನಿನ್ನ ಪಾದಕಮಲವು ಈಗ ಗೋಚರವಾದುದರಿಂದ ನನ್ನ ತಾಯಿತಂದೆಗಳೂ ಧನ್ಯರೆನಿಸಿದರು. ಉತ್ತಮವಾದ ಈ ನಿನ್ನ ರೂಪವು ಸುಲಭವಾಗಿ ದೇವತೆಗಳಿಗೂ ಗೋಚರವಾಗುವುದಲ್ಲ. ಪ್ರಭೋ, ಅಂತಹ ನಿನ್ನ ದಿವ್ಯಸ್ವರೂಪವು ಭಾಗ್ಯವಶದಿಂದ ಈಗ ನನಗೆ ಪ್ರತ್ಯಕ್ಷವಾಗಿದೆ. ॥೧೦೪-೧೦೫॥

ಮಹೇಶ್ವರನೆನಿಸಿದ ಪ್ರಭುವೇ, ನಿನ್ನನ್ನು ಪೂಜೆಮಾಡಲು ಕುಳಿತುಕೊಂಡಾಗ ನನಗೆ ಎಂದಿಗೂ ವಿಘ್ನಗಳುಂಟಾಗದಿರಲಿ. ಶಂಭುವೇ, ಶಿವಲಿಂಗಪೂಜಾ

ಶಿವಮಂತ್ರಜಪೇಽಸ್ಮೇವಂ ಶ್ರದ್ಧಾಸ್ತು ಮಮ ಶಂಕರ ।
ಶಿವತೀರ್ಥಾಟನೇಽಸ್ಮೇವಂ ಶ್ರದ್ಧಾಸ್ತು ಮಮ ಶಂಕರ ॥೧೦೮॥

ನಿತ್ಯಂ ಶಿವಕಥಾಸ್ವೇವಂ ಶ್ರೋತ್ರಮೇತತ್ಪ್ರವರ್ತತಾಂ ।
ಶಿವನಾಮಾಮೃತಂ ಪಾತುಂ ಜಿಹ್ವೈಷಾಽಪಿ ಪ್ರವರ್ತತಾಂ ॥೧೦೯॥

ಶಿವತೀರ್ಥಾನ್ಯಗಮನೇ ಮೋಹಾದ್ಯದಿ ಮತಿರ್ಮಮ ।
ತದಾ ಭವಂತು ಬಹವಃ ಪ್ರತ್ಯೂಹಾಃ ಶ್ರೀಮಹೇಶ್ವರ ॥೧೧೦॥

ಶಿವ ತ್ವದನ್ಯಪೂಜಾಯಾಂ ಮೋಹಾದ್ಯದಿ ಮತಿರ್ಮಮ ।
ತದಾ ಭವಂತು ಬಹವಃ ಪ್ರತ್ಯೂಹಾಃ ಶ್ರೀಮಹೇಶ್ವರ ॥೧೧೧॥

ಶಿವ ತ್ವದನ್ಯಪ್ರಣತೌ ಮೋಹಾದ್ಯದಿ ಮತಿರ್ಮಮ ।
ತದಾ ಭವಂತು ಬಹವಃ ಪ್ರತ್ಯೂಹಾಃ ಶ್ರೀಮಹೇಶ್ವರ ॥೧೧೨॥

ಶಿವ ತ್ವದನ್ಯವೀಕ್ಷಾಯಾಂ ಮೋಹಾದ್ಯದಿ ಮತಿರ್ಮಮ ।
ತದಾ ಭವಂತು ಬಹವಃ ಪ್ರತ್ಯೂಹಾಃ ಶ್ರೀಮಹೇಶ್ವರ ॥೧೧೩॥

ಶಿವ ತ್ವದನ್ಯಚಿಂತಾಯಾಂ ಮೋಹಾದ್ಯದಿ ಮತಿರ್ಮಮ ।
ತದಾ ಭವಂತು ಬಹವಃ ಪ್ರತ್ಯೂಹಾಃ ಶ್ರೀಮಹೇಶ್ವರ ॥೧೧೪॥

ಮಾತ್ರದಲ್ಲಿಯೇ ನನಗೆ ಸದಾ ಆಸಕ್ತಿಯುಂಟಾಗಲಿ. ಪ್ರಭೋ, ಎಡಬಿಡದೇ ನಿನ್ನಲ್ಲಿಯೇ ನನಗೆ ಅಸದೃಶವಾದ ಭಕ್ತಿಯು ಅವಿಚ್ಛಿನ್ನವಾಗಿರಲಿ. ||೧೦೬-೧೦೭||

ಪಾರ್ವತೀಪತಿಯೇ, ಶಿವಮಂತ್ರಜಪ, ಶಿವಸಂಬಂಧವಾದ ತೀರ್ಥಯಾತ್ರೆ, ಇವುಗಳಲ್ಲಿ ನನಗೆ ಹೀಗೆಯೇ ಶ್ರದ್ಧೆಯುಂಟಾಗಿರಲಿ. ಈ ನನ್ನ ಕಿವಿಯು ನಿತ್ಯವೂ ಶಿವಕಥಾಶ್ರವಣದಲ್ಲಿಯೇ ನಿರತವಾಗಲಿ. ಈ ನನ್ನ ನಾಲಿಗೆಯು ಶಿವನಾಮಗಳೆಂಬ ಅಮೃತವನ್ನು ಪಾನಮಾಡಲು ಸದಾ ಹಾತೊರೆಯುತ್ತಿರಲಿ. ||೧೦೮-೧೦೯||

ಮಂಗಳಕರನಾದ ಮಹೇಶ್ವರನೇ, ಒಂದುವೇಳೆ ಅಜ್ಞಾನದಿಂದ ಶಿವತೀರ್ಥಗಳಲ್ಲದ ಇತರ ತೀರ್ಥಗಳ ಯಾತ್ರೆ, ನಿನ್ನನ್ನು ಬಿಟ್ಟು ಇತರ ದೇವತೆಗಳ ಪೂಜೆ, ನಮಸ್ಕಾರ, ದರ್ಶನ ಮತ್ತು ಧ್ಯಾನಗಳಲ್ಲಿ ನನಗೆ ಬುದ್ಧಿಯುಂಟಾದರೆ, ಆಗ ಅದಕ್ಕೆ ಬಹಳ ವಿಘ್ನಗಳು ಸಂಭವಿಸಲಿ. ||೧೧೦-೧೧೧-೧೧೨-೧೧೩-೧೧೪||

ಶಿವ ತ್ವದನ್ಯವಾರ್ತಾಯಾಂ ಮೋಹಾದ್ಯದಿ ಮತಿರ್ಮಮ ।
ತದಾ ಭವಂತು ಬಹವಃ ಪ್ರತ್ಯೂಹಾಃ ಶ್ರೀಮಹೇಶ್ವರ ॥೧೧೫॥

ಶಿವ ತ್ವದನ್ಯಪೂಜಾಯಾಂ ಮೋಹಾದ್ಯದಿ ಮತಿರ್ಮಮ ।
ತದಾ ಭವಂತು ಬಹವಃ ಪ್ರತ್ಯೂಹಾಃ ಶ್ರೀಮಹೇಶ್ವರ ॥೧೧೬॥

ಶಿವಾನ್ಯದೇವಶ್ರವಣೇ ಮೋಹಾದ್ಯದಿ ಮತಿರ್ಮಮ ।
ತದಾ ಭವಂತು ಬಹವಃ ಪ್ರತ್ಯೂಹಾಃ ಶ್ರೀಮಹೇಶ್ವರ ॥೧೧೭॥

ಶಿವಾನ್ಯದೇವಸ್ತೋತ್ರೇಷು ಯದಿ ಮೋಹಾನ್ಮತಿರ್ಮಮ ।
ತದಾ ಭವಂತು ಬಹವಃ ಪ್ರತ್ಯೂಹಾಃ ಶ್ರೀಮಹೇಶ್ವರ ॥೧೧೮॥

ಶಿವಾನ್ಯತೀರ್ಥಗ್ರಹಣೇ ಮೋಹಾದ್ಯದಿ ಮತಿರ್ಮಮ ।
ತದಾ ಭವಂತು ಬಹವಃ ಪ್ರತ್ಯೂಹಾಃ ಶ್ರೀಮಹೇಶ್ವರ ॥೧೧೯॥

ಶಿವಾನ್ಯದೈವನೈವೇದ್ಯೇ ಯದಿ ಮೋಹಾನ್ಮತಿರ್ಮಮ ।
ತದಾ ಭವಂತು ಬಹವಃ ಪ್ರತ್ಯೂಹಾಃ ಶ್ರೀಮಹೇಶ್ವರ ॥೧೨೦॥

ಶಿವಾನ್ಯದೇವನಿರ್ಮಾಲ್ಯೇ ಯದಿ ಮೋಹಾನ್ಮತಿರ್ಮಮ ।
ತದಾ ಭವಂತು ಬಹವಃ ಪ್ರತ್ಯೂಹಾಃ ಶ್ರೀಮಹೇಶ್ವರ ॥೧೨೧॥

ದೇವದೇವನೇ, ನಿನ್ನ ವಿಷಯವನ್ನು ಬಿಟ್ಟು ಇತರ ವಿಷ್ಣ್ವಾದಿದೇವತೆಗಳ ಮಹಿಮಾವಿಚಾರದಲ್ಲಿ, ಇತರರ ಪೂಜೆ ಮತ್ತು ಇತರ ದೇವತಾಸಂಬಂಧವಾದ ಕಥಾ ಶ್ರವಣಗಳಲ್ಲಿ ಒಂದುವೇಳೆ ಅಜ್ಞಾನವಶದಿಂದ ನನ್ನ ಬುದ್ಧಿಯು ಪ್ರವರ್ತಿಸುವುದಾದರೆ ಮಹೇಶ್ವರನಾದ ನಿನ್ನ ಅನುಗ್ರಹದಿಂದ ಅದಕ್ಕೆ ಬಹಳ ವಿಘ್ನಗಳುಂಟಾಗಲಿ. ||೧೧೫-೧೧೬-೧೧೭||

ಸಂಪದ್ಭರಿತನಾದ ಮಹೇಶ್ವರನೇ, ಶಿವೇತರವಾದ ದೇವತೆಗಳ ಸ್ತೋತ್ರ, ಶಿವ ಸಂಬಂಧವಿಲ್ಲದ ತೀರ್ಥಕ್ಷೇತ್ರಗಳ ಸೇವೆ, ಶಿವನನ್ನುಳಿದ ಇತರ ದೇವತೆಗಳಿಗೆ ಸಮರ್ಪಿಸಿದ ನೈವೇದ್ಯ, ಅದರಂತೆಯೇ ಇತರ ವಿಷ್ಣ್ವಾದಿದೇವತೆಗಳ ನಿರ್ಮಾಲ್ಯ, ನಿನ್ನ ಭಕ್ತರಲ್ಲದವರಲ್ಲಿ ಶ್ರದ್ಧೆ, ಶಿವೇತರ ದೇವತಾಧ್ಯಾನ ಮತ್ತು ಶಿವನನ್ನು ಬಿಟ್ಟು ಉಳಿದ

ಶಿವಾನ್ಯದೇವಭಕ್ತೇಷು ಯದಿ ಮೋಹಾನ್ಮತಿರ್ಮಮ ।
ತದಾ ಭವಂತು ಬಹವಃ ಪ್ರತ್ಯೂಹಾಃ ಶ್ರೀಮಹೇಶ್ವರ ॥೧೨೨॥

ಶಿವಾನ್ಯದೇವತಾಧ್ಯಾನೇ ಯದಿ ಮೋಹಾನ್ಮತಿರ್ಭವೇತ್ ।
ತದಾ ಭವಂತು ಬಹವಃ ಪ್ರತ್ಯೂಹಾಃ ಶ್ರೀಮಹೇಶ್ವರ ॥೧೨೩॥

ಶಿವಾನ್ಯದೇವತಾಸ್ಪರ್ಶೇ ಯದಿ ಮೋಹಾನ್ಮತಿರ್ಮಮ ।
ತದಾ ಭವಂತು ಬಹವಃ ಪ್ರತ್ಯೂಹಾಃ ಶ್ರೀಮಹೇಶ್ವರ ॥೧೨೪॥

ಶಂಭೋ ತ್ವದನ್ಯದೇವಾನಾಂ ಕಥಾ ಯಾಸ್ತಾಸು ಸರ್ವಥಾ
ಅಶ್ರದ್ಧಾ ಸರ್ವಕಾಲೇಷು ನೈರಂತರ್ಯೇಣ ಜಾಯತಾಂ ॥೧೨೫॥

ಶಂಭೋ ಶಿವಕಥಾಸ್ವೇವ ಭಕ್ತಿಃ ಶ್ರದ್ಧಾ ಚ ಸಂತತಂ ।
ಭವತು ತ್ವತ್ಪ್ರಸಾದೇನ ಮಮ ದೇವಶಿಖಾಮಣೇ ॥೧೨೬॥

ಮತಿರಸ್ತು ಮಮ ಸ್ವಾಮಿನ್ಕೇವಲೇ ಭಸ್ಮಧಾರಣೇ ।
ಮತಿರಸ್ತು ಮಮ ಸ್ವಾಮಿನ್ ಶುದ್ಧೇ ರುದ್ರಾಕ್ಷಧಾರಣೇ ॥೧೨೭॥

ವಿಷ್ಣ್ವಾದಿ ದೇವತೆಗಳ ಸ್ಪರ್ಶ, ಇವುಗಳಲ್ಲಿ ಅಜ್ಞಾನದಿಂದೇನಾದರೂ ನನಗೆ ಬುದ್ಧಿಯುಂಟಾಗುವ ಪಕ್ಷದಲ್ಲಿ ಆಗ ಆ ಕಾರ್ಯಗಳಿಗೆ ಅನೇಕ ವಿಘ್ನಗಳುಂಟಾಗಲಿ. ॥೧೧೮-೧೧೯-೧೨೦-೧೨೧-೧೨೨-೧೨೩-೧೨೪॥

ಶಂಭುವೇ, ನಿನ್ನನ್ನುಳಿದ ಇತರ ದೇವತೆಗಳ ಕಥೆಗಳಲ್ಲಿ ಯಾವಾಗಲೂ ನಿಜವಾಗಿಯೂ ಎಡಬಿಡದೆ ನನಗೆ ಅಪನಂಬಿಕೆಯುಂಟಾಗಲಿ. ದೇವ, ಪರಶಿವಕಥೆಗಳಲ್ಲಿಯೇ ನನಗೆ ಭಕ್ತಿ ಶ್ರದ್ಧೆಗಳುದಯಿಸಲಿ. ದೇವಶಿಖಾಮಣಿಯಾದ ಶಂಭುವೇ, ನಿನ್ನನುಗ್ರಹದಿಂದ ಕೇವಲ ಭಸ್ಮಧಾರಣೆ, ಶುದ್ಧವಾದ ರುದ್ರಾಕ್ಷಧಾರಣೆಗಳಲ್ಲಿ ನನಗೆ ವಿಶೇಷಾಸಕ್ತಿ ಹುಟ್ಟಲಿ. ॥೧೨೫-೧೨೭॥

ದೇವ ದೇವನೇ, ಪರಿಶುದ್ಧವಾದ ಶಿವಪೂಜೆ ಮತ್ತು ಶಿವನಾಮಸ್ಮರಣೆಗಳನ್ನು ಮಾಡಬೇಕೆಂಬುದಾಗಿಯೇ ನನಗೆ ಬುದ್ಧಿಯುಂಟಾಗಲಿ. ಓ ಗೌರೀರಮಣನೇ, ಮಹಾದೇವ, ಶಿವ ಎಂಬುದಾಗಿ ನಿನ್ನ ದಿವ್ಯನಾಮಗಳನ್ನು ಸ್ಮರಣೆ ಮಾಡುತ್ತಾ ನಿನ್ನ ಪೂಜಾ ಪುರಸ್ಸರವಾಗಿಯೇ ಈ ನನ್ನ ಶರೀರವು ನಾಶವಾಗಲಿ.

ಕೇವಲಾ ಶಿವಪೂಜೈವ ಕರ್ತವ್ಯೇತ್ಯಸ್ತು ಮೇ ಮತಿಃ ।
ಕೇವಲಂ ಶಿವನಾಮ್ನೈವ ಸ್ಮರ್ತವ್ಯಮಿತಿ ಚಾಸ್ತು ಧೀಃ ॥೧೨೮॥

ಉಮಾಪತೇ ಮಹಾದೇವ ಶಿವೇತಿ ವದತೋ ಮಮ ।
ತನುತ್ಯಾಗೋಽಸ್ತು ಗೌರೀಶ ತ್ವದರ್ಚನಪುರಸ್ಸರಂ ॥೧೨೯॥

ದಾನಪಾತ್ರಮಹಂ ಶಂಭೋ ದಾನಕಾಲೋಽಯಮೀಶ್ವರ ।
ದಾತಾ ತ್ವಂ ನೇತರೋ ಯಾಚ್ಯೋ ಯಾಚ್ಯಾ ಭಕ್ತಿಸ್ತ್ವಯಿ ಪ್ರಭೋ ॥೧೩೦॥

ನ ಯಾಚೇ ನ ಯಾಚೇ ಮಹಾದೇವ ಶಂಭೋ
ವರಾನನ್ಯಲಭ್ಯಾನಹಂ ಭಕ್ತಬಂಧೋ ।
ಪರಂ ತ್ವೇಕರೂಪಾಂ ಮದನ್ಯೈರಲಭ್ಯಾಂ
ಭವದ್ಭಕ್ತಿಮೇಕಾಂ ಪರಾಮೀಶ ಯಾಚೇ ॥೧೩೧॥

ಯಯೈವೇಶಭಕ್ತ್ಯಾ ತೃಣೀಕೃತ್ಯ ಸರ್ವಾ-
ನುಪೇಂದ್ರಾದಿದೇವಾನಹಂ ಸರ್ವಥಾಪಿ ।

ಶಂಭುವೇ, ಈಗ ದಾನ ಸ್ವೀಕಾರಮಾಡಲು ನಾನು ಪಾತ್ರನಾಗಿರುವೆನು. ಈಶ್ವರನೇ, ಉಚಿತವಾದ ದಾನಕಾಲವೂ ಆಗಿರುವುದು. ದೇವ, ನೀನೇ ದಾತೃವು, ಮತ್ತಾರನ್ನೂ ನಾನು ಬೇಡುವುದಿಲ್ಲ, ಬೇಡುವವನಲ್ಲ. ಆದ್ದರಿಂದ ಯಾವಾಗಲೂ ನಿನ್ನಲ್ಲಿ ನನಗೆ ಸ್ಥಿರಭಕ್ತಿಯುಂಟಾಗಲೆಂದು ವರವನ್ನು ಯಾಚಿಸುತ್ತೇನೆ. ಆ ವರವನ್ನು ದಾನಮಾಡು. ||೧೨೮-೧೨೯-೧೩೦||

ಭಕ್ತವತ್ಸಲನೂ, ಮಹಾದೇವನೂ ಎನಿಸಿದ ಶಂಭುವೇ, ವಿಷ್ಣ್ವಾದಿದೇವತೆಗಳಿಂದ ಕೊಡಲಸಾಧ್ಯವಾದ ವರಗಳನ್ನೇ ನಾನು ನಿನ್ನಿಂದ ಬೇಡುತ್ತಿರುವೆನೇ ಹೊರತು ಸಾಮಾನ್ಯರಿಂದ ಹೊಂದಲು ಸಾಧ್ಯವಾದ ವರಗಳನ್ನು ಬೇಡುತ್ತಿಲ್ಲ ಆದರೆ ಈಶ್ವರನೇ, ಅದ್ವಿತೀಯವೂ, ಇತರರಾರಿಂದಲೂ ಹೊಂದಲಸಾಧ್ಯವೂ, ಅತ್ಯುತ್ಕೃಷ್ಟವೂ ಆದ ನಿನ್ನ ಭಕ್ತಿಯೊಂದು ಅವಿಚ್ಛಿನ್ನವಾಗಿ ನನ್ನಲ್ಲಿ ನೆಲಸಲೆಂದು ನಾನು ವರವನ್ನು ಈಗ ಯಾಚಿಸುತ್ತಿರುವೆನು. ||೧೩೧||

ನೀನು ಅನುಗ್ರಹಿಸುವ ಈಶ್ವರ ವಿಷಯಕವಾದ ಸ್ಥಿರಭಕ್ತಿಯಿಂದ ನಾನು ವಿಷ್ಣು ಮುಂತಾದ ದೇವತೆಗಳೆಲ್ಲರನ್ನೂ ಹುಲ್ಲಿಗಿಂತಲೂ ಕಡೆಯಾಗಿ ಕಂಡು,

ತ್ವದರ್ಚಾಪರೋ ನಿತ್ಯಮವ್ಯಗ್ರಚಿತ್ತೋ
ನಿರಾತಂಕಮೇಕಂ ಭವಂತಂ ಭಜಾಮಿ ॥೧೩॥

ತವೈತತ್ಪದದ್ವಂದ್ವಮಿಂದ್ರಾದಿವಂದ್ಯಂ
ಸದೋಪೇಂದ್ರಹೃತ್ಪಂಕಜಾರೂಢಮೀಡ್ಯಂ ।
ಮಮಾಪಿ ಸ್ಫುರತ್ವೀಶ ಹೃತ್ಪದ್ಮಮಧ್ಯೇ
ಮುಕುಂದಾಕ್ಷಿಪದ್ಮಾರ್ಚಿತಂ ವೇದವೇದ್ಯಂ ॥೧೪॥

ಮಹಾದೇವ ವಿಶ್ವೇಶ ವಿಶ್ವೈಕವಂದ್ಯ
ಸ್ಮರಾರೇ ಪುರಾರೇ ಮಹಾಪಾತಕಾರೇ ।
ಮಹೇಶೇತಿ ನಾಮಾಮೃತಂ ತ್ವತ್ಪ್ರಸಾದಾ-
ತ್ಪಿಬತ್ವನ್ವಹಂ ಸಾಧು ಜಿಹ್ವಾ ಮಮೇಶ ॥೧೫॥

ಅನವರತವೂ ನಿನ್ನನ್ನು ಪೂಜಿಸುವುದರಲ್ಲಿಯೇ ಆಸಕ್ತನಾಗಿ ಚಂಚಲವಾಗದ ಮನಸ್ಸಿನಿಂದ ಆತಂಕರಹಿತನೂ, ಅದ್ವಿತೀಯನೂ ಆದ ನಿನ್ನೊಬ್ಬನನ್ನೇ ಧ್ಯೇಯವಸ್ತುವನ್ನಾಗಿ ಮಾಡಿಕೊಂಡು ಭಜನೆ ಮಾಡುವೆನು. ॥೧೩॥

ಈಶನೇ, ಇಂದ್ರಾದಿಗಳಿಂದ ಸರ್ವದಾ ನಮಸ್ಕರಿಸಲ್ಪಡುತ್ತಿರುವುದೂ, ಯಾವಾಗಲೂ ವಿಷ್ಣುವಿನ ಹೃದಯಕಮಲದಲ್ಲಿ ನೆಲಸಿರುವುದೂ, ಜಗತ್ಪೂಜ್ಯವೂ, ಮುಕುಂದನ ಕಣ್ದಾವರೆಯಿಂದ ಪೂಜಿಸಲ್ಪಟ್ಟುದೂ, ವೇದವೇದ್ಯವೂ ಆದ ನಿನ್ನ ಪಾದಕಮಲಯುಗ್ಮವು ನನ್ನ ಹೃದಯಕಮಲದ ಮಧ್ಯದಲ್ಲಿ ಸದಾ ಪ್ರಕಾಶಿಸಲಿ. ಇದೇ ನನ್ನ ಪ್ರಾರ್ಥನೆ. ॥೧೪॥

ಈಶ್ವರನೇ, ಈ ನನ್ನ ನಾಲಿಗೆಯು ಅನುದಿನವೂ ಮಹಾದೇವ, ವಿಶ್ವೇಶ, (ಜಗದೊಡೆಯ) ವಿಶ್ವೈಕವಂದ್ಯ, (ಸಕಲ ಜಗತ್ತಿನಿಂದಲೂ ನಮಸ್ಕಾರಾರ್ಹನೂ) ಸ್ಮರಾರೇ, (ಮನ್ಮಥನ ಶತ್ರು) ಪುರಾರೆ, (ತ್ರಿಪುರರನ್ನು ನಾಶಮಾಡಿದವನು) ಮಹಾಪಾತಕಾರೆ, (ಬ್ರಹ್ಮಹತ್ಯೆ, ಸುರಾಪಾನ ಮುಂತಾದ ಮಹಾಪಾಪಗಳನ್ನು ಹೋಗಲಾಡಿಸುವನೂ) ಮಹೇಶ, (ಮಹದೈಶ್ವರ್ಯಸಂಪನ್ನ) ಎಂಬುದಾಗಿ ನಿನ್ನ ದಿವ್ಯ ನಾಮಾವಳಿಯನ್ನುಚ್ಚರಿಸುತ್ತಾ ನಿನ್ನ ಅನುಗ್ರಹದಿಂದ ಶಿವನಾಮಾಮೃತ ಪಾನ ಮಾಡಲಿ. ॥೧೫॥

ವಿಭೋ ದೇವ ದೇವೇಶ ಗೌರೀಶ ಶಂಭೋ
ಯಮಾರೇ ಗಜಾರೇ ಭವಾರೇಽಂಧಕಾರೇ ।
ಶಿವೇಶೇತಿ ನಾಮಾಮೃತಂ ತ್ವತ್ಪ್ರಸಾದಾ
ತ್ಪಿಬತ್ವನ್ವಹಂ ಸಾಧು ಜಿಹ್ವಾ ಮಮೇಶ ॥೧೩೫॥

ಉಮಾಕಾಂತ ಮೌನೀಂದ್ರವಿಶ್ರಾಮಹೇತೋ
ಜಗಜ್ಜೀವನಾನಂದಧರ್ಮೈಕಸೇತೋ ।
ನಿರೀಹೇತಿ ನಾಮಾಮೃತಂ ತ್ವತ್ಪ್ರಸಾದಾ-
ತ್ಪಿಬತ್ವನ್ವಹಂ ಸಾಧು ಜಿಹ್ವಾ ಮಮೇಶ ॥೧೩೬॥

ನಿರಾಕಾರ ನಿರ್ಲಿಪ್ತ ಚಂದ್ರಾರ್ಧಮೌಲೇ
ಮುಕುಂದಾದಿವೃಂದಾರಕಾರಾಧ್ಯಮೂರ್ತೇ ।
ಪರೇಶೇತಿ ನಾಮಾಮೃತಂ ತ್ವತ್ಪ್ರಸಾದಾ-
ತ್ಪಿಬತ್ವನ್ವಹಂ ಸಾಧು ಜಿಹ್ವಾ ಮಮೇಶ ॥೧೩೭॥

ವಿಭು, (ಸರ್ವವ್ಯಾಪಕನೂ) ದೇವ, (ಕ್ರೀಡಾದಿ ಗುಣಸಂಪೂರ್ಣನೂ) ದೇವೇಶ, (ದೇವತೆಗಳಿಗೆ ಒಡೆಯ) ಗೌರೀಶ, (ಗೌರೀರಮಣ) ಶಂಭೋ, (ಮಂಗಳಪ್ರದನೂ) ಯಮ, ಗಜಾಸುರ, ಅಂಧಕಾಸುರ ಇವರುಗಳನ್ನು ನಿಗ್ರಹಿಸಿದವನೂ, ಮತ್ತು ಈ ಸಂಸಾರಬಂಧವನ್ನು ತೊಲಗಿಸುವನೂ, ಶಿವ (ಯೋಗಿಗಳ ಮನಸ್ಸಿನಲ್ಲಿ ಯಾವಾಗಲೂ ನೆಲಸಿರುವನು) ಈಶ (ಐಶ್ವರ್ಯಭರಿತ) ಎಂಬುದಾಗಿರುವ ನಿನ್ನ ದಿವ್ಯನಾಮರೂಪವಾದ ಅಮೃತವನ್ನು ಅನವರತವೂ ಈ ನನ್ನ ನಾಲಿಗೆಯು ಅತ್ಯಾಸಕ್ತಿಯಿಂದ ಪಾನಮಾಡಲಿ. ॥೧೩೫॥

ಉಮಾರಮಣನೇ, ಮುನಿಶ್ರೇಷ್ಠರಿಗೆ ವಿಶ್ರಾಂತಿಯುಂಟಾಗಲು ಕಾರಣಭೂತನಾಗಿರುವವನೇ, ಸಕಲ ಜಗದ್ರಕ್ಷಕನೂ, ಆನಂದಪ್ರದವಾದ ಧರ್ಮಗಳಿಗೆ ಮುಖ್ಯವಾದ ಸೇತುವೆಯಂತಿರುವವನೂ, ಇಚ್ಛಾರಹಿತನೂ, ಆಕಾರಶೂನ್ಯನೂ, ನಿರ್ಲಿಪ್ತನೂ, ಅರ್ಧಚಂದ್ರನನ್ನು ತಲೆಯಲ್ಲಿ ಅಲಂಕರಿಸಿಕೊಂಡಿರುವವನೂ, ವಿಷ್ಣುವೇ ಮೊದಲಾದ ದೇವತೆಗಳಿಂದ ಪೂಜಿಸಲ್ಪಡುವ ಆಕೃತಿಯುಳ್ಳವನೂ, ಉತ್ತಮವಾದ

ಮುನಿಸ್ವಾಂತ ಪದ್ಮಪ್ರಬೋಧೈಕಭಾನೋ
ಸ್ಫುರತ್ಫಾಲಭಾಗೋತ್ಥಲೀಲಾಕ್ಷಕೃಶಾನೋ ।
ಗಿರೀಶೇತಿ ನಾಮಾಮೃತಂ ತ್ವತ್ಪ್ರಸಾದಾ-
ತ್ಪಿಬತ್ವನ್ವಹಂ ಸಾಧು ಜಿಹ್ವಾ ಮಮೇಶ ॥೧೩೮॥

ಗುಣಾತೀತ ಕಲ್ಯಾಣನಾನಾಗುಣಾಬ್ಧೇ
ವೃಷಾಧೀಶಕೇತೋ ಮಹಾಪುಣ್ಯಹೇತೋ ।
ಸುರೇಶೇತಿ ನಾಮಾಮೃತಂ ತ್ವತ್ಪ್ರಸಾದಾ-
ತ್ಪಿಬತ್ವನ್ವಹಂ ಸಾಧು ಜಿಹ್ವಾ ಮಮೇಶ ॥೧೩೯॥

ಅನಂತಾರ್ಕಚಂದ್ರಾನಲಾಕಾರಮೂರ್ತೇ
ಸ್ಫುರದ್ವೇದರಾಶಿಸ್ತುತಾಮೇಯಕೀರ್ತೇ ।
ನಿರೀಶೇತಿ ನಾಮಾಮೃತಂ ತ್ವತ್ಪ್ರಸಾದಾ-
ತ್ಪಿಬತ್ವನ್ವಹಂ ಸಾಧು ಜಿಹ್ವಾ ಮಮೇಶ ॥೧೪೦॥

---

ಪ್ರಭುವೂ ಎನಿಸಿರುವ ನಿನ್ನ ನಾಮ ಪಾರಾಯಣರೂಪವಾದ ಅಮೃತವನ್ನು ನನ್ನ ನಾಲಿಗೆಯು ಅನುದಿನವೂ ಭಕ್ತಿಯಿಂದ ಪಾನಮಾಡುತ್ತಿರಲಿ. ॥೧೩೬-೧೩೭॥

ಈಶ್ವರನೇ, ಮುನಿಗಳ ಮನಸ್ಸೆಂಬ ಕಮಲವನ್ನು ಅರಳಿಸುವುದರಲ್ಲಿ ಸೂರ್ಯನೆನಿಸಿರುವವನೂ, ಹಣೆಯ ಭಾಗದಲ್ಲಿ ಲೀಲೆಯಿಂದ ಪ್ರಜ್ವಲಿಸುತ್ತಿರುವ ಅಗ್ನಿರೂಪವಾದ ಕಣ್ಣುಳ್ಳವನೂ, ಪರ್ವತಗಳಿಗೆಲ್ಲಾ ಒಡೆಯನೂ, ಸಕಲ ಗುಣಗಳನ್ನು ಅತಿಕ್ರಮಿಸಿರುವನೂ, ಮಂಗಳಪ್ರದವಾದ ಅನೇಕ ಸದ್ಗುಣಗಳಿಗೆ ಸಮುದ್ರದಂತೆ ಆಶ್ರಯನೂ, ವೃಷಭರಾಜನನ್ನೇ ಬಾವುಟವಾಗಿ ಧರಿಸಿರುವವನೂ, ಮಹಾ ಪುಣ್ಯಗಳಿಗೆ ಕಾರಣಭೂತವಾಗಿರುವವನೂ, ದೇವತೆಗಳಿಗೊಡೆಯನೂ, ಎಂದು ಸ್ತೋತ್ರಮಾಡಲ್ಪಡುವ ನಿನ್ನ ದಿವ್ಯನಾಮರೂಪವಾದ ಅಮೃತವನ್ನು ಈ ನನ್ನ ನಾಲಿಗೆಯು ಅನವರತವೂ ತಪ್ಪದೆ ಚೆನ್ನಾಗಿ ಪಾನಮಾಡಲಿ. ॥೧೩೮-೧೩೯॥

ಪರಮೇಶ್ವರನೇ, ಅನೇಕ ಸೂರ್ಯ, ಚಂದ್ರ ಮತ್ತು ಅಗ್ನಿಗಳ ಆಕಾರದಂತೆ ಶೋಭಿಸುತ್ತಿರುವ ಆಕಾರವುಳ್ಳವನೂ, ಪ್ರಕಾಶಿಸುತ್ತಿರುವ ವೇದರಾಶಿಗಳಿಂದ ಸ್ತೋತ್ರಮಾಡಲ್ಪಟ್ಟ ಅಪರಿಮಿತವಾದ ಕೀರ್ತಿಯುಳ್ಳವನೂ, ಸ್ವತಂತ್ರನೂ, ದಯಾ

ಕೃಪಾಪಾತ್ರ ಚಂದ್ರಾನಲೋಷ್ಣಾಂಶುನೇತ್ರ
ಸ್ವಭಕ್ತೈಕಮಿತ್ರಾದ್ರಿಕನ್ಯಾಕಲತ್ರ ।
ಉಮೇಶೇತಿ ನಾಮಾಮೃತಂ ತ್ವತ್ಪ್ರಸಾದಾ-
ತ್ಪಿಬತ್ವನ್ವಹಂ ಸಾಧು ಜಿಹ್ವಾ ಮಮೇಶ ॥೧೪೧॥

ಶಿವ ಶ್ರೀಪತಿಸ್ವಚ್ಛನೇತ್ರಾರವಿಂದ-
ಸ್ಫುರತ್ಪಾದಪದ್ಮಾಮಿತಾನಂತಭೋಗ ।
ಕೃಪಾದ್ಯೇತಿ ನಾಮಾಮೃತಂ ತ್ವತ್ಪ್ರಸಾದಾ-
ತ್ಪಿಬತ್ವನ್ವಹಂ ಸಾಧು ಜಿಹ್ವಾ ಮಮೇಶ ॥೧೪೨॥

ಹರಾಮೇಯ ನಿರ್ದ್ವಂದ್ವ ವೇದಾಂತವೇದ್ಯ
ತ್ರಿಶೂಲಿನ್ನುಮಾಕಾಂತ ಕರ್ಪೂರಗೌರ ।
ನಿರಂಗೇತಿ ನಾಮಾಮೃತಂ ತ್ವತ್ಪ್ರಸಾದಾ
ತ್ಪಿಬತ್ವನ್ವಹಂ ಸಾಧು ಜಿಹ್ವಾ ಮಮೇಶ ॥೧೪೩॥

ಪಾತ್ರನೂ, ಚಂದ್ರ, ಅಗ್ನಿ, ಸೂರ್ಯ ಇವರನ್ನೇ ಕಣ್ಣಾಗಿ ಉಳ್ಳವನೂ, ತನ್ನ ಭಕ್ತರಿಗೆ ಮುಖ್ಯವಾಗಿ ಸ್ನೇಹಿತನೂ, ಗಿರಿರಾಜಕುಮಾರಿಯನ್ನೇ ಹೆಂಡತಿಯನ್ನಾಗಿ ಮಾಡಿಕೊಂಡಿರುವವನೂ, ಉಮಾರಮಣನೂ, ಎಂಬುದಾಗಿರುವ ನಿನ್ನ ದಿವ್ಯನಾಮಾಮೃತವನ್ನು ಈ ನನ್ನ ನಾಲಿಗೆಯು ನಿನ್ನ ಅನುಗ್ರಹದಿಂದ ಅನವರತವೂ ಪಾನಮಾಡುತ್ತಿರಲಿ. ॥೧೪೦-೧೪೧॥

ಈಶ್ವರನೇ, ಮಂಗಳಸ್ವರೂಪನೂ, ಲಕ್ಷ್ಮೀಕಾಂತನಾದ ಮಹಾವಿಷ್ಣುವಿನ ಶುಭ್ರವಾದ ನೇತ್ರಕಮಲದಿಂದ ಶೋಭಿಸುತ್ತಿರುವ ಅಡಿದಾವರೆಯುಳ್ಳವನೂ, ಅಪರಿಮಿತವೂ, ಅನಂತವೂ ಆದ ಭೋಗಗಳುಳ್ಳವನೂ, ದಯಾಸ್ವರೂಪನೂ, ಭಕ್ತರ ಪಾಪರಾಶಿಯನ್ನು ನಾಶಮಾಡುವವನೂ, ಪ್ರಮಾಣರಹಿತನೂ, ಅದ್ವಿತೀಯನೂ, ವೇದಾಂತಗೋಚರನೂ, ತ್ರಿಶೂಲಾಯುಧವನ್ನು ಧರಿಸಿದವನೂ, ಉಮಾರಮಣನೂ, ಕರ್ಪೂರದಂತೆ ಶುಭ್ರವಾದ ಬಣ್ಣವುಳ್ಳವನೂ, ಅವಯವಶೂನ್ಯನೂ, ಇತ್ಯಾದ್ಯರ್ಥಗಳನ್ನು ಕೊಡುವ ನಿನ್ನ ದಿವ್ಯನಾಮಾಮೃತವನ್ನು ಈ ನನ್ನ ನಾಲಿಗೆಯು ಅನವರತವೂ ನಿನ್ನ ಅನುಗ್ರಹದಿಂದ ಪಾನಮಾಡುತ್ತಿರಲಿ. ॥೧೪೨-೧೪೩॥

**ವಿಷ್ಣುರುವಾಚ**

**ಇತಿ ಸ್ತುತೋ ಮಹಾದೇವಃ ಸರ್ವದೇವಶಿಖಾಮಣಿಃ ।**
**ತಥಾಸ್ತ್ವಿತ್ಯರ್ಚಿತೋ ಲಿಂಗೇ ತತ್ರೈವಾಂತರ್ದಧೇ ದ್ವಿಜಾಃ ॥೧೪೪॥**

**ಏತಾದೃಶೋ ಮಹಾದೇವಃ ಸರ್ವದೇವಸ್ತುತಃ ಸದಾ ।**
**ಪೂಜನೀಯಃ ಪ್ರಯತ್ನೇನ ಮನೋವಾಕ್ಕಾಯಕರ್ಮಭಿಃ ॥೧೪೫॥**

**ಪುರಾ ಹಿಮಾದ್ರಿಶಿಖರೇ ವಸಿಷ್ಠಾದ್ಯಾ ಮುನೀಶ್ವರಾಃ ।**
**ತಪಸ್ತೇಪುಃ ಶಿವಾಚಾರೇ ವಿಶ್ವಾಸೋಽಸ್ತ್ವಿತಿ ಸರ್ವದಾ ॥೧೪೬॥**

**ತಪ್ಯಮಾನಾಸ್ತಪಸ್ತೀವ್ರಂ ಸರ್ವೇ ಪಂಚಾಗ್ನಿಮಧ್ಯಗಾಃ ।**
**ಅಗಸ್ತ್ಯಂ ದದೃಶುರ್ವಿಪ್ರಾಃ ಶಿವಪೂಜಾಪರಾಯಣಂ ॥೧೪೭॥**

**ತಮಗಸ್ತ್ಯಂ ವಸಿಷ್ಠಾದ್ಯಾಃ ಸಂಪೂಜ್ಯಾರ್ಘ್ಯಾದಿಸಾಧನೈಃ ।**
**ಸಂಸಾರತಾರಣೋಪಾಯಂ ಪಪ್ರಚ್ಛುರ್ವಿನಯಾನ್ವಿತಾಃ ॥೧೪೮॥**

ವಿಪ್ರರೆ! ಹೀಗೆ ಆ ಬ್ರಾಹ್ಮಣನಿಂದ ಸ್ತೋತ್ರಮಾಡಲ್ಪಟ್ಟ ಸಕಲ ದೇವತಾ ಶಿಖಾಮಣಿಯಾದ ಮಹಾದೇವನು, ಹಾಗೆಯೇ ಆಗಲೆಂದು ನುಡಿದು ವರವನ್ನಿತ್ತು ಪುನಃ ಶಿವಲಿಂಗದಲ್ಲಿ ಪೂಜಿತನಾಗಿ ಅಂತರ್ಧಾನನಾದನು. ಸಕಲ ದೇವತೆಗಳಿಂದಲೂ ಸ್ತೋತ್ರಮಾಡಲ್ಪಟ್ಟ ಇಂತಹ ಮಹಾದೇವನನ್ನು ಅನವರತವೂ, ಮನಸ್ಸು, ಮಾತು, ಮತ್ತು ಕಾರ್ಯರೂಪವಾದ ಮೂರು ಸಾಧನಗಳಿಂದಲೂ ನಿಯಮದಿಂದ ಪೂಜೆಮಾಡಬೇಕು. ॥೧೪೪-೧೪೫॥

ಬಹುಕಾಲದ ಹಿಂದೆ ಹಿಮವತ್ಪರ್ವತದ ಶಿಖರದಲ್ಲಿ ವಸಿಷ್ಠರೇ ಮುಂತಾದ ಮುನಿಪುಂಗವರು, ಶಿವಸಂಬಂಧವಾದ ಆಚಾರಗಳಲ್ಲಿ ಯಾವಾಗಲೂ ವಿಶ್ವಾಸವು ಉಂಟಾಗಲೆಂದು ತಪಸ್ಸನ್ನೆಸಗಿದರು. ಆಗ ಅವರೆಲ್ಲರೂ ಪಂಚಾಗ್ನಿಗಳ ಮಧ್ಯದಲ್ಲಿ ನಿಂತು ಘೋರವಾಗಿ ತಪಸ್ಸುಮಾಡುತ್ತಿರುವಾಗ, ಆ ತಪಸ್ವಿಗಳ ಸಮೀಪಕ್ಕೆ ಶಿವ ಪೂಜಾನಿರತನಾದ ಅಗಸ್ತ್ಯಮಹಾಮುನಿಯು ಬಂದನು. ಆ ವಸಿಷ್ಠಾದಿಮುನಿಗಳೆಲ್ಲರೂ ಅರ್ಘ್ಯ, ಪಾದ್ಯ, ಆಚಮನೀಯಾದಿಸಾಧನಗಳಿಂದ ಅಗಸ್ತ್ಯಮುನಿಯನ್ನು ಸತ್ಕರಿಸಿ ವಿನಯಯುಕ್ತರಾಗಿ ಈ ಸಂಸಾರದಿಂದ ಮಾನವನು ಉದ್ಧಾರವಾಗುವ

|| ದ್ವಿಜಾ ಊಚುಃ ||

ತರಣೀಯಃ ಕಥಂ ಮರ್ತ್ಯೈರ್ಘೋರಸಂಸಾರಸಾಗರಃ ।
ಕೋ ವಾಸ್ತಿ ತರಣೋಪಾಯಃ ಸರ್ವವೇದಾಂತಸಂಶ್ರುತಃ ॥೧೪೯॥

ವಿಷ್ಣುರುವಾಚ

ಅಗಸ್ತ್ಯಸ್ತದ್ವಚಃ ಶ್ರುತ್ವಾ ಭಸ್ಮಭೂಷಿತವಿಗ್ರಹಃ ।
ಸಂಸಾರತಾರಣೋಪಾಯಂ ತತೋ ವಕ್ತುಮುಪಕ್ರಮೇ ॥೧೫೦॥

|| ಅಗಸ್ತ್ಯ ಉವಾಚ ||

ಸಂಸಾರತರಣೋಪಾಯಃ ಪಾರ್ವತೀವಲ್ಲಭಾರ್ಚನಂ ।
ತತ್ರ ಯೋ ನಿಯತಸ್ತೇನ ತೀರ್ಣಃ ಸಂಸಾರಸಾಗರಃ ॥೧೫೧॥

ಶಿವಾರ್ಚನಂ ವಿನಾ ನಾನ್ಯದ್ಘೋರಸಂಸಾರತಾರಕಂ ।
ತಸ್ಮಾಚ್ಛಿವಾರ್ಚನಂ ಕಾರ್ಯಂ ಘೋರಸಂಸಾರನಾಶಕಂ ॥೧೫೨॥

ಉಪಾಯವಾವುದು ? ಅದಕ್ಕೆ ಮಾಡಬೇಕಾದ ಕಾರ್ಯವೇನೆಂಬುದಾಗಿ ಪ್ರಶ್ನೆ ಮಾಡಿದರು. ||೧೪೬-೧೪೭-೧೪೮||

ಮತ್ತು ಆ ದ್ವಿಜರೆಲ್ಲರೂ ಅಗಸ್ತ್ಯರನ್ನು ಕುರಿತು “ ಮುನೀಶ್ವರನೇ! ಮಾನವರು ಈ ಘೋರವಾದ ಸಂಸಾರವೆಂಬ ಸಾಗರವನ್ನು ಯಾವುದರಿಂದ ಸುಲಭವಾಗಿ ದಾಟಬಹುದು ? ಸಕಲ ವೇದಾಂತಪ್ರಸಿದ್ಧವಾದ ಉದ್ಧಾರದ ಉಪಾಯವು ಆವುದಿರುವುದು ? ” ಎಂದು ಪ್ರಾರ್ಥಿಸಲು, ಆ ಮಾತುಗಳನ್ನು ಕೇಳಿ ಅಗಸ್ತ್ಯಮುನಿಯು ಭಸ್ಮಾಲಂಕೃತಶರೀರನಾಗಿ ಸಂಸಾರಸಾಗರದಿಂದ ಉದ್ಧಾರವಾಗುವ ಉಪಾಯವನ್ನು ಹೇಳಲುಪಕ್ರಮಿಸಿದನೆಂದು ವಿಷ್ಣುವು ಅಲ್ಲಿ ನೆರೆದಿದ್ದ ಶಿವಧರ್ಮಾನುಯಾಯಿಗಳಿಗೆ ನುಡಿದನು. ||೧೪೯-೧೫೦||

“ ವಸಿಷ್ಠಾದಿ ಮಹರ್ಷಿಗಳೇ, ಕೇಳಿರಿ. ಪಾರ್ವತೀರಮಣನಾದ ಮಹೇಶ್ವರನ ಪೂಜೆಯೇ ಈ ಸಂಸಾರದಿಂದ ಉದ್ಧಾರಮಾಡುವ ಮುಖ್ಯ ಸಾಧನ. ಅದರಲ್ಲಿ ನಿಯಮದಿಂದಿರುವವನೇ ಈ ಸಂಸಾರರೂಪವಾದ ದುಃಖಸಾಗರವನ್ನು ದಾಟಿದವನು. ಶಿವಪೂಜೆಯನ್ನುಳಿದು ಬೇರೆ ಯಾವುದೂ ಈ ಘೋರವಾದ ಸಂಸಾರವನ್ನು

ಪುರಾ ಶಚೀಪತಿಃ ಸ್ವರ್ಗೇ ಸಭಾಮಂಡಲಮಧ್ಯಗಃ ।
ಮನ್ಯೇ ಕೃತಾರ್ಥಮಾತ್ಮಾನಂ ಸಭಾಸತ್ಸಮುಪಾಸಿತಃ ॥೧೫೮॥

ತತಃ ಸ ಮೋಹಸಂಕ್ರಾಂತೋ ಮುಹೂರ್ತಂ ವಿವಶೋ ದ್ವಿಜಾಃ ।
ಉವಾಸ ಪಾರ್ವತೀನಾಥಸ್ಮರಣೇನ ವಿನಾ ತದಾ ॥೧೫೯॥

ತತೋಽತಿವ್ಯಾಕುಲೋ ಜಾತಃ ಸ ದೇವೇಂದ್ರಸ್ತತಃ ಪರಂ ।
ಗುರುಂ ಸಂವೀಕ್ಷ್ಯ ನಿಕಟೇ ಬಭಾಷೇ ವಚನಂ ದ್ವಿಜಾಃ ॥೧೬೦॥

॥ ಇಂದ್ರ ಉವಾಚ ॥

ವ್ಯಾಕುಲಂ ಸಮಭೂಚ್ಚಿತ್ತಂ ಗುರೋ ಹೇತುಂ ವಿನಾದ್ಯ ಮೇ ।
ಕಂಪತೇ ತನುರೇಷಾ ಚ ವಾಯುನೀತಲತೇವ ಮೇ ॥೧೬೧॥

ಸ್ವೇದೋಽಪಿ ಜಾಯತೇ ಪಶ್ಯ ಶುಷ್ಕಮೋಷ್ಠಮಭೂನ್ಮಮ ।
ವಾಚೋ ನ ನಿಃಸರಂತ್ಯೇವ ಸರಲಾ ಲಲಿತಾ ಇವ ॥೧೬೨॥

ಬಹುಕಾಲದ ಹಿಂದೆ ಶಚೀರಮಣನಾದ ದೇವೇಂದ್ರನು ಸ್ವರ್ಗಲೋಕದಲ್ಲಿ ತನ್ನ ಸಭಾಮಂಟಪದಲ್ಲಿ ನಿಂತುಕೊಂಡು, ಇಂತಹ ಸಭಾಸದರಿಂದ ಸೇವಿಸಲ್ಪಡುತ್ತಿರುವ ನಾನೇ ಧನ್ಯನೆಂದು ಮನಸ್ಸಿನಲ್ಲಿ ಭಾವಿಸಿಕೊಂಡನು. ಮತ್ತು ಇಂದ್ರನು ಮೋಹದಿಂದ ಭ್ರಾಂತನಾಗಿ ಒಂದು ಮುಹೂರ್ತಕಾಲವೂ ಆ ಪಾರ್ವತೀರಮಣನನ್ನು ಸ್ಮರಣೆಮಾಡದೇ ಅಹಂಕಾರದಿಂದ ಉದಾಸೀನನಾಗಿದ್ದನು. ಸ್ವಲ್ಪಹೊತ್ತಿನಲ್ಲಿಯೇ ಇಂದ್ರನಿಗೆ ಅಕಾರಣವಾದ ಮನೋವ್ಯಥೆಯುಂಟಾಯಿತು. ಹೇಳಲಾಗದಷ್ಟು ವ್ಯಾಕುಲವನ್ನು ಅನುಭವಿಸುತ್ತಾ ಇಂದ್ರನು ತನ್ನ ಸಮೀಪದಲ್ಲಿ ಕುಳಿತಿದ್ದ ಬೃಹಸ್ಪತ್ಯಾಚಾರ್ಯರನ್ನು ನೋಡಿ ಅವರೊಡನಿಂತೆಂದನು. ॥೧೫೮-೧೫೯ ೧೬೦॥

"ಗುರುವೇ, ಕಾರಣವೇ ಇಲ್ಲದೆ ಈಗ ನನ್ನ ಮನಸ್ಸು ಬಹಳವಾಗಿ ವ್ಯಾಕುಲಗೊಂಡಿದೆ. ಗಾಳಿಯಿಂದ ಒಯ್ಯಲ್ಪಟ್ಟ ಬಳ್ಳಿಯಂತೆ ಈ ನನ್ನ ಶರೀರವೂ ನಡುಗುತ್ತಿರುವುದು. ಬೆವರೊಂದುಕಡೆ ಸುರಿಯುತ್ತಿದೆ. ಆಚಾರ್ಯನೇ, ನನ್ನ ತುಟಿಯು ಒಣಗುತ್ತಿರುವುದನ್ನು ನೋಡು. ಸರಳವಾಗಿಯೂ ಲಲಿತವಾಯೂ ಮಾತುಗಳೇ ಹೊರಡುತ್ತಿಲ್ಲವಲ್ಲಾ! ಮುಂದೇನುಮಾಡಲಿ! ॥೧೬೧-೧೬೨॥

ವಿಷ್ಣುರುವಾಚ

ಇತಿ ಸ್ತುತೋ ಮಹಾದೇವಃ ಸರ್ವದೇವಶಿಖಾಮಣಿಃ ।
ತಥಾಸ್ತ್ವಿತ್ಯರ್ಚಿತೋ ಲಿಂಗೇ ತತ್ರೈವಾಂತರ್ದಧೇ ದ್ವಿಜಾಃ ॥೧೪೪॥

ಏತಾದೃಶೋ ಮಹಾದೇವಃ ಸರ್ವದೇವಸ್ತುತಃ ಸದಾ ।
ಪೂಜನೀಯಃ ಪ್ರಯತ್ನೇನ ಮನೋವಾಕ್ಕಾಯಕರ್ಮಭಿಃ ॥೧೪೫॥

ಪುರಾ ಹಿಮಾದ್ರಿಶಿಖರೇ ವಸಿಷ್ಠಾದ್ಯಾ ಮುನೀಶ್ವರಾಃ ।
ತಪಸ್ತೇಪುಃ ಶಿವಾಚಾರೇ ವಿಶ್ವಾಸೋಽಸ್ತ್ವಿತಿ ಸರ್ವದಾ ॥೧೪೬॥

ತಪ್ಯಮಾನಾಸ್ತಪಸ್ತೀವ್ರಂ ಸರ್ವೇ ಪಂಚಾಗ್ನಿಮಧ್ಯಗಾಃ ।
ಅಗಸ್ತ್ಯಂ ದದೃಶುರ್ವಿಪ್ರಾಃ ಶಿವಪೂಜಾಪರಾಯಣಂ ॥೧೪೭॥

ತಮಗಸ್ತ್ಯಂ ವಸಿಷ್ಠಾದ್ಯಾಃ ಸಂಪೂಜ್ಯಾರ್ಘ್ಯಾದಿಸಾಧನೈಃ ।
ಸಂಸಾರತಾರಣೋಪಾಯಂ ಪಪ್ರಚ್ಛುರ್ವಿನಯಾನ್ವಿತಾಃ ॥೧೪೮॥

ವಿಪ್ರರೆ! ಹೀಗೆ ಆ ಬ್ರಾಹ್ಮಣನಿಂದ ಸ್ತೋತ್ರಮಾಡಲ್ಪಟ್ಟ ಸಕಲ ದೇವತಾ ಶಿಖಾಮಣಿಯಾದ ಮಹಾದೇವನು, ಹಾಗೆಯೇ ಆಗಲೆಂದು ನುಡಿದು ವರವನ್ನಿತ್ತು ಪುನಃ ಶಿವಲಿಂಗದಲ್ಲಿ ಪೂಜಿತನಾಗಿ ಅಂತರ್ಧಾನನಾದನು. ಸಕಲ ದೇವತೆಗಳಿಂದಲೂ ಸ್ತೋತ್ರಮಾಡಲ್ಪಟ್ಟ ಇಂತಹ ಮಹಾದೇವನನ್ನು ಅನವರತವೂ, ಮನಸ್ಸು, ಮಾತು, ಮತ್ತು ಕಾರ್ಯರೂಪವಾದ ಮೂರು ಸಾಧನಗಳಿಂದಲೂ ನಿಯಮದಿಂದ ಪೂಜೆಮಾಡಬೇಕು. ॥೧೪೪-೧೪೫॥

ಬಹುಕಾಲದ ಹಿಂದೆ ಹಿಮವತ್ಪರ್ವತದ ಶಿಖರದಲ್ಲಿ ವಸಿಷ್ಠರೇ ಮುಂತಾದ ಮುನಿಪುಂಗವರು, ಶಿವಸಂಬಂಧವಾದ ಆಚಾರಗಳಲ್ಲಿ ಯಾವಾಗಲೂ ವಿಶ್ವಾಸವು ಉಂಟಾಗಲೆಂದು ತಪಸ್ಸನ್ನೆಸಗಿದರು. ಆಗ ಅವರೆಲ್ಲರೂ ಪಂಚಾಗ್ನಿಗಳ ಮಧ್ಯದಲ್ಲಿ ನಿಂತು ಘೋರವಾಗಿ ತಪಸ್ಸುಮಾಡುತ್ತಿರುವಾಗ, ಆ ತಪಸ್ವಿಗಳ ಸಮೀಪಕ್ಕೆ ಶಿವ ಪೂಜಾನಿರತನಾದ ಅಗಸ್ತ್ಯಮಹಾಮುನಿಯು ಬಂದನು. ಆ ವಸಿಷ್ಠಾದಿಮುನಿಗಳೆಲ್ಲರೂ ಅರ್ಘ್ಯ, ಪಾದ್ಯ, ಆಚಮನೀಯಾದಿಸಾಧನಗಳಿಂದ ಅಗಸ್ತ್ಯಮುನಿಯನ್ನು ಸತ್ಕರಿಸಿ ವಿನಯಯುಕ್ತರಾಗಿ ಈ ಸಂಸಾರದಿಂದ ಮಾನವನು ಉದ್ಧಾರವಾಗುವ

|| ದ್ವಿಜಾ ಊಚುಃ ||

ತರಣೀಯಃ ಕಥಂ ಮರ್ತ್ಯೈರ್ಘೋರಸಂಸಾರಸಾಗರಃ ।
ಕೋ ವಾಸ್ತಿ ತರಣೋಪಾಯಃ ಸರ್ವವೇದಾಂತಸಂಶ್ರುತಃ ॥೧೪೯॥

|| ವಿಷ್ಣುರುವಾಚ ||

ಅಗಸ್ತ್ಯಸ್ತದ್ವಚಃ ಶ್ರುತ್ವಾ ಭಸ್ಮಭೂಷಿತವಿಗ್ರಹಃ ।
ಸಂಸಾರತಾರಣೋಪಾಯಂ ತತೋ ವಕ್ತುಮುಪಕ್ರಮೇ ॥೧೫೦॥

|| ಅಗಸ್ತ್ಯ ಉವಾಚ ||

ಸಂಸಾರತರಣೋಪಾಯಃ ಪಾರ್ವತೀವಲ್ಲಭಾರ್ಚನಂ ।
ತತ್ರ ಯೋ ನಿಯತಸ್ತೇನ ತೀರ್ಣಃ ಸಂಸಾರಸಾಗರಃ ॥೧೫೧॥

ಶಿವಾರ್ಚನಂ ವಿನಾ ನಾನ್ಯದ್ಘೋರಸಂಸಾರತಾರಕಂ ।
ತಸ್ಮಾಚ್ಛಿವಾರ್ಚನಂ ಕಾರ್ಯಂ ಘೋರಸಂಸಾರನಾಶಕಂ ॥೧೫೨॥

ಉಪಾಯವಾವುದು? ಅದಕ್ಕೆ ಮಾಡಬೇಕಾದ ಕಾರ್ಯವೇನೆಂಬುದಾಗಿ ಪ್ರಶ್ನೆ ಮಾಡಿದರು. ||೧೪೬-೧೪೭-೧೪೮||

ಮತ್ತು ಆ ದ್ವಿಜರೆಲ್ಲರೂ ಅಗಸ್ತ್ಯರನ್ನು ಕುರಿತು "ಮುನೀಶ್ವರನೇ! ಮಾನವರು ಈ ಘೋರವಾದ ಸಂಸಾರವೆಂಬ ಸಾಗರವನ್ನು ಯಾವುದರಿಂದ ಸುಲಭವಾಗಿ ದಾಟಬಹುದು? ಸಕಲ ವೇದಾಂತಪ್ರಸಿದ್ಧವಾದ ಉದ್ಧಾರದ ಉಪಾಯವು ಆವುದಿರುವುದು?" ಎಂದು ಪ್ರಾರ್ಥಿಸಲು, ಆ ಮಾತುಗಳನ್ನು ಕೇಳಿ ಅಗಸ್ತ್ಯಮುನಿಯು ಭಸ್ಮಾಲಂಕೃತಶರೀರನಾಗಿ ಸಂಸಾರಸಾಗರದಿಂದ ಉದ್ಧಾರವಾಗುವ ಉಪಾಯವನ್ನು ಹೇಳಲುಪಕ್ರಮಿಸಿದನೆಂದು ವಿಷ್ಣುವು ಅಲ್ಲಿ ನೆರೆದಿದ್ದ ಶಿವಧರ್ಮಾನುಯಾಯಿಗಳಿಗೆ ನುಡಿದನು. ||೧೪೯-೧೫೦||

"ವಸಿಷ್ಠಾದಿ ಮಹರ್ಷಿಗಳೇ, ಕೇಳಿರಿ. ಪಾರ್ವತೀರಮಣನಾದ ಮಹೇಶ್ವರನ ಪೂಜೆಯೇ ಈ ಸಂಸಾರದಿಂದ ಉದ್ಧಾರಮಾಡುವ ಮುಖ್ಯ ಸಾಧನ. ಅದರಲ್ಲಿ ನಿಯಮದಿಂದಿರುವವನೇ ಈ ಸಂಸಾರರೂಪವಾದ ದುಃಖಸಾಗರವನ್ನು ದಾಟಿದವನು. ಶಿವಪೂಜೆಯನ್ನುಳಿದು ಬೇರೆ ಯಾವುದೂ ಈ ಘೋರವಾದ ಸಂಸಾರವನ್ನು

ಉಮಾಕಾಂತಾರ್ಚನಂ ವಿಪ್ರಾಃ ಸಂಸಾರವಿಷಭೇಷಜಂ ।
ತದ್ಭೇಷಜಂ ನ ಯಸ್ಯಾಸ್ತಿ ಸ ಸಂಸಾರವಿಷಾಪ್ಲುತಃ ॥೧೫೩॥

ಶಿವಾಸಾರಾಧನಾಜ್ಜಾತಾಃ ಸರ್ವೇ ಸಂಸಾರಿಣೋ ದ್ವಿಜಾಃ ।
ತಿಷ್ಠಂತ್ಯಪಿ ಭವಿಷ್ಯಂತಿ ಬಹವಃ ಪ್ರತಿಜನ್ಮನಿ ॥೧೫೪॥

ಶಿವಾರಾಧನಮಾತ್ರೇಣ ಘೋರಸಂಸಾರಸಾಗರಃ ।
ಶುಷ್ಕೋ ಭವತಿ ವಿಪ್ರೇಂದ್ರಾಃ ಸತ್ಯಂ ಸತ್ಯಂ ನ ಸಂಶಯಃ ॥೧೫೫॥

ಯಥಾ ಸರ್ಪವಿಷಗ್ರಸ್ತಾ ಮ್ರಿಯಂತೇ ಭೇಷಜಂ ವಿನಾ ।
ತಥಾ ನಶ್ಯಂತಿ ಬಹವೋ ಮಹಾದೇವಾರ್ಚನಂ ವಿನಾ ॥೧೫೬॥

ಸಂಸಾರಸಾಗರೋ ನಾಮ ದುಃಖಸಾಗರ ಉಚ್ಯತೇ ।
ತದ್ದುಃಖಾಬ್ಧೌ ಪತಂತ್ಯೇವ ಸಂತ್ಯಕ್ತಶಿವಪೂಜನಾಃ ॥೧೫೭॥

ಉದ್ಧಾರಮಾಡಲಾರದು. ಆದ್ದರಿಂದಲೇ ಮಾನವರು ಈ ಭಯಂಕರ ಸಂಸಾರವನ್ನು ನಾಶಮಾಡುವ ಶಿವಪೂಜೆಯನ್ನು ಅವಶ್ಯವಾಗಿ ಮಾಡಬೇಕು. ||೧೫೧-೧೫೨||

ವಿಪ್ರೋತ್ತಮರೇ, ಉಮಾರಮಣನ ಪೂಜೆಯು ಸಂಸಾರರೂಪವಾದ ವಿಷಕ್ಕೆ ಔಷಧಿಪ್ರಾಯವಾದುದು. ಆ ಔಷಧಿಯಿಲ್ಲದವನು ಸಂಸಾರವೆಂಬ ವಿಷದಿಂದ ಆವರಿಸಲ್ಪಡುವನು ವಿಪ್ರರೆ, ಶಿವನನ್ನು ಪೂಜೆಮಾಡದೇ ಎಲ್ಲರೂ ಸಂಸಾರಿಗಳಾಗಿರುವರು. ಮುಂದೆಯೂ ಪ್ರತಿಯೊಂದು ಜನ್ಮದಲ್ಲಿಯೂ ಅನೇಕರು ಸಂಸಾರಿಗಳಾಗಿಯೇ ಜನಿಸಿ ಕಷ್ಟವನ್ನನುಭವಿಸುವರು. ದ್ವಿಜಶ್ರೇಷ್ಠರೇ, ಶಿವನ ಪೂಜಾಮಾತ್ರದಿಂದಲೇ ಘೋರವಾದ ಈ ಸಂಸಾರಸಾಗರವು ಸತ್ಯವಾಗಿಯೂ ಒಣಗಿ ಹೋಗುವುದರಲ್ಲಿ ಸಂದೇಹವೇ ಇಲ್ಲ. ||೧೫೩-೧೫೪-೧೫೫||

ಹಾವಿನ ವಿಷದಿಂದ ಯುಕ್ತರಾದವರು ಔಷಧವಿಲ್ಲದೇ ಸಾಯುವಂತೆ, ಆ ಮಹಾದೇವನನ್ನು ಪೂಜೆಮಾಡದೆ ಸಾಂಸಾರಿಕ ಕಷ್ಟಗಳಿಗೆ ಸಿಕ್ಕಿ ಬಹಳ ಜನಗಳು ನಾಶವಾಗುತ್ತಿರುವರು. ಈ ಸಂಸಾರವೆಂಬ ಸಾಗರವು ದುಃಖಸಾಗರವೆಂದೇ ಹೇಳಲ್ಪಡುವುದು. ಪಂಶಿವಪೂಜೆಯನ್ನು ಮಾಡದವರು ಆ ದುಃಖಸಮುದ್ರದಲ್ಲಿ ತಪ್ಪದೇ ಬೀಳುವರು. ||೧೫೬-೧೫೭||

ಪುರಾ ಶಚೀಪತಿಃ ಸ್ವರ್ಗೇ ಸಭಾಮಂಡಲಮಧ್ಯಗಃ ।
ಮನ್ಯೇ ಕೃತಾರ್ಥಮಾತ್ಮಾನಂ ಸಭಾಸತ್ಸಮುಪಾಸಿತಃ ॥೧೫೮॥

ತತಃ ಸ ಮೋಹಸಂಕ್ರಾಂತೋ ಮುಹೂರ್ತಂ ವಿವಶೋ ದ್ವಿಜಾಃ ।
ಉವಾಸ ಪಾರ್ವತೀನಾಥಸ್ಮರಣೇನ ವಿನಾ ತದಾ ॥೧೫೯॥

ತತೋಽತಿವ್ಯಾಕುಲೋ ಜಾತಃ ಸ ದೇವೇಂದ್ರಸ್ತತಃ ಪರಂ ।
ಗುರುಂ ಸಂವೀಕ್ಷ್ಯ ನಿಕಟೇ ಬಭಾಷೇ ವಚನಂ ದ್ವಿಜಾಃ ॥೧೬೦॥

॥ ಇಂದ್ರ ಉವಾಚ ॥

ವ್ಯಾಕುಲಂ ಸಮಭೂಚ್ಚಿತ್ತಂ ಗುರೋ ಹೇತುಂ ವಿನಾದ್ಯ ಮೇ ।
ಕಂಪತೇ ತನುರೇಷಾ ಚ ವಾಯುನೀತಲತೇವ ಮೇ ॥೧೬೧॥

ಸ್ವೇದೋಽಪಿ ಜಾಯತೇ ಪಶ್ಯ ಶುಷ್ಕಮೋಷ್ಠಮಭೂನ್ಮಮ ।
ವಾಚೋ ನ ನಿಃಸರಂತ್ಯೇವ ಸರಲಾ ಲಲಿತಾ ಇವ ॥೧೬೨॥

ಬಹುಕಾಲದ ಹಿಂದೆ ಶಚೀರಮಣನಾದ ದೇವೇಂದ್ರನು ಸ್ವರ್ಗಲೋಕದಲ್ಲಿ ತನ್ನ ಸಭಾಮಂಟಪದಲ್ಲಿ ನಿಂತುಕೊಂಡು, ಇಂತಹ ಸಭಾಸದರಿಂದ ಸೇವಿಸಲ್ಪಡುತ್ತಿರುವ ನಾನೇ ಧನ್ಯನೆಂದು ಮನಸ್ಸಿನಲ್ಲಿ ಭಾವಿಸಿಕೊಂಡನು. ಮತ್ತು ಇಂದ್ರನು ಮೋಹದಿಂದ ಭ್ರಾಂತನಾಗಿ ಒಂದು ಮುಹೂರ್ತಕಾಲವೂ ಆ ಪಾರ್ವತೀರಮಣನನ್ನು ಸ್ಮರಣೆಮಾಡದೇ ಅಹಂಕಾರದಿಂದ ಉದಾಸೀನನಾಗಿದ್ದನು. ಸ್ವಲ್ಪಹೊತ್ತಿನಲ್ಲಿಯೇ ಇಂದ್ರನಿಗೆ ಅಕಾರಣವಾದ ಮನೋವ್ಯಥೆಯುಂಟಾಯಿತು. ಹೇಳಲಾಗದಷ್ಟು ವ್ಯಾಕುಲವನ್ನು ಅನುಭವಿಸುತ್ತಾ ಇಂದ್ರನು ತನ್ನ ಸಮೀಪದಲ್ಲಿ ಕುಳಿತಿದ್ದ ಬೃಹಸ್ಪತ್ಯಾಚಾರ್ಯರನ್ನು ನೋಡಿ ಅವರೊಡನಿಂತೆಂದನು. ॥೧೫೮-೧೫೯ ೧೬೦॥

" ಗುರುವೇ, ಕಾರಣವೇ ಇಲ್ಲದೆ ಈಗ ನನ್ನ ಮನಸ್ಸು ಬಹಳವಾಗಿ ವ್ಯಾಕುಲಗೊಂಡಿದೆ. ಗಾಳಿಯಿಂದ ಒಯ್ಯಲ್ಪಟ್ಟ ಬಳ್ಳಿಯಂತೆ ಈ ನನ್ನ ಶರೀರವೂ ನಡುಗುತ್ತಿರುವುದು. ಬೆವರೊಂದುಕಡೆ ಸುರಿಯುತ್ತಿದೆ. ಆಚಾರ್ಯನೇ, ನನ್ನ ತುಟಿಯು ಒಣಗುತ್ತಿರುವುದನ್ನು ನೋಡು. ಸರಳವಾಗಿಯೂ ಲಲಿತವಾಯೂ ಮಾತುಗಳೇ ಹೊರಡುತ್ತಿಲ್ಲವಲ್ಲಾ! ಮುಂದೇನುಮಾಡಲಿ ! ॥೧೬೧-೧೬೨॥

ಉಷ್ಣಸ್ಥಪುಷ್ಪಮಾಲೇವ ಗಾತ್ರಯಷ್ಟಿರಭೂನ್ಮಮ ।
ಕೃಷ್ಣಭೂತೇಂದುರೇಖೇವ ದೃಶ್ಯತೇಯಂ ಮಯಾ ತನುಃ ॥೧೬೩॥

ಏತಾವತ್ಕಾಲಪರ್ಯಂತಂ ಸುಖೇನೈವ ಸ್ಥಿತಂ ಮಯಾ ।
ಅಧುನೈವೇದಮುತ್ಪನ್ನಂ ದುಃಖಮಜ್ಞಾತಹೇತುಕಂ ॥೧೬೪॥

ದುಃಖಮೇತನ್ಮಯಾ ಸರ್ವಂ ಚತುರ್ವಕ್ತ್ರಾಯ ಸತ್ವರಂ ।
ನಿವೇದನೀಯಂ ಯತ್ನೇನ ತ್ವಮುಪ್ಯಾಯಾಹಿ ಮದ್ಗುರೋ ॥೧೬೫॥

॥ ಅಗಸ್ತ್ಯ ಉವಾಚ ॥

ಇತ್ಯುಕ್ತ್ವಾ ಸ ಗುರುಂ ವಜ್ರೀ ಗುರುಣಾಪಿ ಸಮನ್ವಿತಃ ।
ಪ್ರಯಯೌ ಬ್ರಹ್ಮಲೋಕಾಯ ದದರ್ಶ ಸ ವಿಧಿಂ ತತಃ ॥೧೬೬॥

ರುದ್ರಾಕ್ಷಮಾಲಾವೀತಾಂಗಂ ಭಸ್ಮೋದ್ಧೂಳಿತವಿಗ್ರಹಂ ।
ಲಿಂಗಾರ್ಚನಪರಂ ನತ್ವಾ ಪ್ರಕೃತಂ ವಿನಿವೇದಯತ್ ॥೧೬೭॥

---

ಶಾಖವಾದ ಸ್ಥಳದಲ್ಲಿಟ್ಟ ಹೂಮಾಲೆಯಂತೆ ಈ ನನ್ನ ದಂಡದಂತಿರುವ ಶರೀರವು ಏಕೋ ಬಾಡುತ್ತಿರುವುದು. ಈಗ ನನ್ನ ದೇಹವು ಕಪ್ಪಾದ ಚಂದ್ರರೇಖೆಯಂತೆ ಕಾಣುತ್ತಿರುವುದು. ಇಲ್ಲಿಯವರೆಗೆ ನಾನು ಸುಖವಾಗಿದ್ದೆನು. ಈಗತಾನೆ ಕಾರಣವೇ ತಿಳಿಯದಂತಿರುವ ಈ ದುಃಖವು ನನಗೊದಗಿದೆ. ಈ ದುಃಖವನ್ನೆಲ್ಲಾ ನಾನು ಜಾಗ್ರತೆಯಾಗಿ ಚತುರ್ಮುಖಬ್ರಹ್ಮನಿಗೆ ತಿಳಿಸಬೇಕೆಂದಿರುವೆನು. ಆದ್ದರಿಂದ ನನಗೆ ಗುರುಗಳಾಗಿರುವ ತಾವೂ ನನ್ನ ಜತೆಯಲ್ಲಿ ಅಲ್ಲಿಗೆ ದಯಮಾಡಿಸಬೇಕು" ಎಂದು ಇಂದ್ರನು ಬೃಹಸ್ಪತ್ಯಾಚಾರ್ಯರನ್ನು ಪ್ರಾರ್ಥಿಸಿದನು. ॥೧೬೩-೧೬೪-೧೬೫॥

ವಜ್ರಾಯುಧಧಾರಿಯಾದ ಇಂದ್ರನು ಹೀಗೆ ನುಡಿದು, ಆ ಗುರುವಿನೊಡನೆ ಬ್ರಹ್ಮಲೋಕಕ್ಕೆ ತೆರಳಿ ಅಲ್ಲಿ ಬ್ರಹ್ಮನನ್ನು ದರ್ಶನಮಾಡಿದನು. ಆಗ ಬ್ರಹ್ಮನು ರುದ್ರಾಕ್ಷಮಾಲೆಯನ್ನು ಅಲಂಕರಿಸಿಕೊಂಡು, ತನ್ನ ಶರೀರಕ್ಕೆಲ್ಲಾ ಭಸ್ಮಲೇಪನ ಮಾಡಿಕೊಂಡು ಶಿವಲಿಂಗಪೂಜಾನಿರತನಾಗಿದ್ದನು. ಹೀಗೆ ಶಿವಪೂಜೆಯಲ್ಲಿ ತತ್ಪರ ನಾಗಿದ್ದ ಬ್ರಹ್ಮನಿಗೆ ಇಂದ್ರನು ಪ್ರಕೃತ ತಾನು ಬಂದ ಸಮಾಚಾರವನ್ನು ಅರಿಕೆ ಮಾಡಿಕೊಂಡನು. ಆಗ ಬ್ರಹ್ಮನು ಇಂದ್ರನ ಮಾತುಗಳನ್ನು ಕೇಳಿ ವಿಸ್ಮಯ

ತತಸ್ತದ್ವಚನಂ ಶ್ರುತ್ವಾ ವಿಧಿರ್ವಿಸ್ಮಿತಮಾನಸಃ ।
ಉವಾಚೇಂದ್ರಂ ಯಥಾಯೋಗ್ಯಂ ಯತ್‌ಜ್ಞಾತಂ ತತ್ತಥಾ ದ್ವಿಜಾಃ॥೧೬೮॥

॥ ಬ್ರಹ್ಮೋವಾಚ ॥

ಇಂದ್ರಾದ್ಯ ನ ತ್ವಯಾ ಸಮ್ಯಕ್ಪೂಜಿತಃ ಪಾರ್ವತೀಪತಿಃ ।
ತೇನೈವ ವ್ಯಾಕುಲಂ ಜಾತಂ ತವ ಚಿತ್ತಮನಾಕುಲಂ ॥೧೬೯॥

ಯೇನ ನ ಕ್ರಿಯತೇ ನಿತ್ಯಂ ಯಥಾವಿಧಿ ಶಿವಾರ್ಚನಂ ।
ತೇನ ದುಃಖಾನಿ ಸರ್ವಾಣಿ ಪ್ರಾಪ್ಯಂತೇ ನಾತ್ರ ಸಂಶಯಃ ॥೧೭೦॥

ದುಃಖಾಲಯಾ ಭವಂತ್ಯೇವ ಸರ್ವೇ ತ್ಯಕ್ತಶಿವಾರ್ಚನಾಃ ।
ತ್ಯಕ್ತೇಶಪೂಜನೈರೇವ ಪ್ರಾಪ್ಯಂತೇ ದುಃಖಮನ್ವಹಂ ॥೧೭೧॥

ಶಂಕರಂ ಶಂಕರಂ ನಿತ್ಯಂ ಯೋ ನಾರ್ಚಯತಿ ಸಾದರಂ ।
ನ ತಸ್ಯ ಸುಖಲೇಶೋಽಪಿ ಸತ್ಯಂ ಸತ್ಯಂ ನ ಸಂಶಯಃ ॥೧೭೨॥

ಗೊಂಡ ಮನಸ್ಸುಳ್ಳವನಾಗಿ ತನಗೆ ತಿಳಿದುದನ್ನು ಯೋಗ್ಯತಾನುಸಾರವಾಗಿ ಇಂದ್ರನಿಗೆ ಹೀಗೆ ನಿರೂಪಿಸಿದನು. ॥೧೬೬-೧೬೭-೧೬೮॥

"ದೇವೇಂದ್ರನೇ, ಇಂದು ನೀನು ಆ ಪಾರ್ವತೀರಮಣನನ್ನು ಚೆನ್ನಾಗಿ ಪೂಜೆಮಾಡಲಿಲ್ಲವಾದ್ದರಿಂದ ಯಾವಾಗಲೂ ವ್ಯಾಕುಲವಾಗದ ನಿನ್ನ ಮನಸ್ಸು ಈಗ ವ್ಯಾಕುಲಗೊಂಡಿದೆ. ನಿತ್ಯವೂ ವಿಧಿಪೂರ್ವಕವಾಗಿ ಶಿವಪೂಜೆಮಾಡದವನಿಗೆ ಸಕಲ ದುಃಖಗಳೂ ಉಂಟಾಗುವುದರಲ್ಲಿ ಸಂದೇಹವೇ ಇಲ್ಲ. ಇದನ್ನು ದೃಢವಾಗಿ ನಂಬು. ॥೧೬೯-೧೭೦॥

ಶಿವಪೂಜೆಯನ್ನು ಮಾಡದೇ. ಬಿಟ್ಟವರೆಲ್ಲರೂ ದುಃಖಾಶ್ರಯರಾಗುತ್ತಾರೆ. ಅಂತಹವರಿಗೇ ಅನುದಿನವೂ ತಪ್ಪದೆ ಒಂದಲ್ಲ ಒಂದು ದುಃಖವುಂಟಾಗುತ್ತಿರುತ್ತದೆ. ಸುಖಕರನಾದ ಶಂಕರನನ್ನು ನಿತ್ಯವೂ ಆದರದಿಂದ ಪೂಜೆಮಾಡದವನಿಗೆ ಅಲ್ಪ ಸುಖವೂ ದೊರೆಯಲಾರದು. ಅದರಲ್ಲಿ ಸಂದೇಹವೇ ಬೇಡ. ॥೧೭೧-೧೭೨॥

ಯಥಾ ದುಃಖವಶಂ ಯಾಂತಿ ಶಂಕರೇತರಪೂಜಕಾಃ ।
ತಥಾ ದುಃಖವಶಂ ಯಾಂತಿ ತ್ಯಕ್ತಶಂಕರಪೂಜನಾಃ ॥೧೭೩॥

ಶಂಕರಂ ಸಮ್ಯಗಾರಾಧ್ಯ ಪ್ರಾಪ್ನುವಂತಿ ಶಮನ್ವಹಂ ।
ಶಂಕರಾರಾಧನೇ ತ್ಯಕ್ತೇ ಕಥಂ ಶಮುಪಲಭ್ಯತೇ ॥೧೭೪॥

ಶಂಕರಾರ್ಚನಮೇವೈಕಂ ಪರಮಾನಂದಸಾಧನಂ ।
ತದನ್ಯನ್ನ ಶ್ರುತಂ ವಜ್ರಿನ್ಪರಮಾನಂದಸಾಧನಂ ॥೧೭೫॥

ದೇವೇಷ್ವನ್ಯೇಷು ವಾ ವಜ್ರಿನ್ ಶಂಕರಾನ್ಯೋ ನ ಶಂಕರಃ ।
ತತಃ ಶಮಾಪ್ತುಂ ಕುರ್ವಂತಿ ಶಂಕರಾರಾಧನಂ ದ್ವಿಜಾಃ ॥೧೭೬॥

ಶಮಾಪ್ತುಂ ಯತತೇ ಯಸ್ತು ವಿನಾ ಶಂಕರಪೂಜನಂ ।
ಸ ಮೂರ್ಖ ಇತಿ ವಿಜ್ಞೇಯೋ ನೇತರೋ ಮೂರ್ಖ ಉಚ್ಯತೇ॥೧೭೭॥

ಕಾಯೇನ ಮನಸಾ ವಾಚಾ ಯಃ ಶಂಕರಮುಪಾಸತೇ ।
ಸ ಪಂಡಿತ ಇತಿ ಜ್ಞೇಯಃ ಸ ಪೂಜ್ಯೋ ಧನಿಭಿರ್ಧನ್ಯೈಃ ॥೧೭೮॥

---

ಶಂಕರನನ್ನು ಬಿಟ್ಟು ಇತರ ದೇವತೆಗಳನ್ನು ಪೂಜೆಮಾಡುವರಂತೆ, ಶಿವನನ್ನು ಪೂಜೆಮಾಡುವುದನ್ನು ಬಿಟ್ಟವರೂ ದುಃಖಭಾಗಿಗಳಾಗುತ್ತಾರೆ. ಶಂಕರನನ್ನು ಚೆನ್ನಾಗಿ ಪೂಜಿಸಿದವರು ನಿತ್ಯವೂ ಸುಖವನ್ನು ಪಡೆಯುತ್ತಾರೆ. ಆ ಶಂಕರನ ಪೂಜೆಯನ್ನೇ ಬಿಟ್ಟರೆ ಸುಖವೆಲ್ಲಿಂದತಾನೇ ಬಂದೀತು? ॥೧೭೩-೧೭೪॥

ಎಲೈ ಇಂದ್ರನೆ, ಶಂಕರನ ಪೂಜೆಯೊಂದೇ ಪರಮಾನಂದವನ್ನು ಪಡೆಯಲು ಸಾಧನವೆಂದು ಹೇಳಲ್ಪಟ್ಟಿದೆಯೇ ವಿನಾ ಇತರ ಯಾವುದೂ ಸುಖಸಾಧನವೆನಿಸಿಲ್ಲ. ಅಯ್ಯ ದೇವೇಂದ್ರನೇ, ದೇವತೆಗಳಲ್ಲಾಗಲೀ, ಇತರರಲ್ಲೇ ಆಗಲಿ ಆ ಶಂಕರನನ್ನು ಬಿಟ್ಟು ಬೇರೆ ಯಾರೂ ಮಾನವರಿಗೆ ಸುಖವನ್ನುಂಟುಮಾಡಲಾರರು. ಆದ್ದರಿಂದಲೇ ದ್ವಿಜರಾದವರು ನಿತ್ಯಸುಖವನ್ನು ಪಡೆಯುವುದಕ್ಕೋಸ್ಕರ ಆ ಶಂಕರನನ್ನು ತಪ್ಪದೆ ಪೂಜೆಮಾಡುತ್ತಾರೆ. ॥೧೭೫-೧೭೬॥

ಶಂಕರನನ್ನು ಪೂಜೆಮಾಡದೇ ಸುಖವನ್ನು ಹೊಂದಲು ಪ್ರಯತ್ನಿಸುವವರೇ ನಿಜವಾದ ಮೂರ್ಖರು, ಬುದ್ಧಿಹೀನರು. ಕಾಯ, ಮನಸ್ಸು ಮತ್ತು ವಾಕ್ಕುಗಳಿಂದ

ಶಂಕರಾಸಕ್ತಚಿತ್ತಾನಾಂ ನ ದೂರೇ ಶಮತಃ ಸದಾ ।
ಶಂಕರಾರಾಧನಂ ಕಾರ್ಯಂ ಶಮರ್ಥಿಭಿರಹರ್ನಿಶಂ ॥೧೭೯॥

ಸ್ವರ್ಗಾಪವರ್ಗಫಲದಂ ಶಂಕರಂ ಲೋಕಶಂಕರಂ ।
ಯೇ ಪೂಜಯಂತಿ ಸತತಂ ತೇ ಧನ್ಯಾ ನಾತ್ರ ಸಂಶಯಃ ॥೧೮೦॥

ಭಗವಾನ್ಪಾರ್ವತೀನಾಥಃ ಸರ್ವಾಭೀಷ್ಟಫಲಪ್ರದಃ ।
ಸ ಯೇನ ಪೂಜ್ಯತೇ ನಿತ್ಯಂ ತಸ್ಯ ದುಃಖಂ ನ ಸರ್ವಥಾ ॥೧೮೧॥

ಮಹಾದೇವಮನಭ್ಯರ್ಚ್ಯ ಯಸ್ತಿಷ್ಠತಿ ಚ ಸರ್ವಥಾ ।
ನ ಪ್ರಾಪ್ನೋತಿ ಸುಖಂ ನೂನಮಿತಿ ಜಾಬಾಲವಾದಿನಃ ॥೧೮೨॥

ವೇದಾಃ ಸೃಷ್ಟಾ ಮಹೇಶೇನ ವೇದೋಕ್ತವಿಧಿನಾ ಸದಾ ।
ಯತ್ನೇನ ಸ್ವಾರ್ಚನಂ ಕಾರ್ಯಂ ಸರ್ವೇಷ್ಟದಮಿತಿ ಧ್ರುವಂ ॥೧೮೩॥

---

ಆ ಶಂಕರನನ್ನು ಪೂಜೆಮಾಡುವವನು ಪಂಡಿತನೆನಿಸುವನು. ಅಂತಹವನನ್ನು ಧನಿಕರು ತಮ್ಮಲ್ಲಿರುವ ದ್ರವ್ಯಗಳಿಂದ ಅರ್ಚಿಸಬೇಕು. ॥೧೭೭-೧೭೮॥

ಆ ಶಂಕರನಲ್ಲಿಯೇ ನೆಲಸಿರುವ ಮನವುಳ್ಳವರಿಗೆ ಯಾವಾಗಲೂ ಸುಖವೆಂಬುದು ಕರಗತವಾಗಿರುವುದು. ಆದ್ದರಿಂದಲೇ ಸುಖಾಪೇಕ್ಷಿಗಳು ಹಗಲಿರುಳೂ ಆ ಶಂಕರನನ್ನು ಪೂಜೆಮಾಡಬೇಕು. ಸ್ವರ್ಗ ಮತ್ತು ಮೋಕ್ಷರೂಪವಾದ ಪರಮ ಫಲವನ್ನು ಕೊಡುವವನೂ, ಜಗನ್ಮಂಗಳಕರನೂ ಆಗಿರುವ ಆ ಶಂಕರನನ್ನು ಅನವರತವೂ ಪೂಜೆಮಾಡುವವರು ಧನ್ಯರೆನಿಸುವುದರಲ್ಲಿ ಸಂದೇಹವೇ ಇಲ್ಲ. ॥೧೭೯-೧೮೦॥

ಸಕಲ ಇಷ್ಟಾರ್ಥಗಳನ್ನೂ ಕೊಡುವ ಭಗವಂತನಾದ ಪಾರ್ವತೀರಮಣನನ್ನು ನಿತ್ಯವೂ ಪೂಜೆಮಾಡುವವನಿಗೆ ಖಂಡಿತವಾಗಿಯೂ ದುಃಖವುಂಟಾಗುವುದಿಲ್ಲ. ಮಹಾದೇವನನ್ನು ಪೂಜೆಮಾಡದೇ ಅಹಂಕಾರದಿಂದ ಉದಾಸೀನನಾಗಿರುವವನು ನಿಶ್ಚಯವಾಗಿಯೂ ಸುಖವನ್ನು ಹೊಂದುವುದಿಲ್ಲವೆಂದು ಜಾಬಾಲಮತವನ್ನವಲಂಬಿಸಿದವರು ಸ್ಪಷ್ಟವಾಗಿ ಹೇಳುವರು. ॥೧೮೧-೧೮೩॥

ಬಹವೋ ಮುನಯಃ ಪೂರ್ವಮುಮಾಕಾಂತಸ್ಯ ಪೂಜಯಾ ।
ದುಃಖಪಾಶವಿನಿರ್ಮುಕ್ತಾಃ ಶಂಕರಂ ಸಮುಪಾಯಯುಃ ॥೧೮೪॥

ಪುರಾ ವಿಷ್ಣುಃ ಪ್ರಮಾದೇನ ವಿಹಾಯ ಶಿವಪೂಜನಂ ।
ಅಕಾಂಡೇ ವ್ಯಾಕುಲೇ ಜಾತಃ ಖಿನ್ನಗಾತ್ರೋಷ್ಠತಾಲುಕಃ ॥೧೮೫॥

ತತೋಽತಿದುಃಖಿತಂ ದೃಷ್ಟ್ವಾ ಕಮಲಾ ಕಮಲಾಪತಿಂ ।
ದುಃಖಾಪಹಾರಕಂ ವಾಕ್ಯಮುವಾಚ ಕೃತನಿಶ್ಚಯಾ ॥೧೮೬॥

॥ ಲಕ್ಷ್ಮ್ಯುವಾಚ ॥

ವಿಷ್ಣೋ ಪೂಜಯ ದೇವೇಶಮುಮಾಕಾಂತಮನಾಮಯಂ ।
ಯತ್ಪೂಜಯೈವ ದುಃಖೇಭ್ಯಃ ಸದ್ಯೋ ಮುಕ್ತೋ ಭವಿಷ್ಯಸಿ ॥೧೮೭॥

ಮೃತ್ಯುಂಜಯಂ ಜಯಾಕಾಂಕ್ಷೀ ತ್ವಮೇವಾಭ್ಯರ್ಚ್ಯ ಸಾದರಂ ।
ಪ್ರಾಪ್ತೋಽಸಿ ವಿಜಯಂ ಪೂರ್ವಮತಿದುಷ್ಟಾನ್ಮುರಾದ್ಧರೇ ॥೧೮೮॥

ವೇದವಿಹಿತವಾದ ವಿಧಿಯನ್ನನುಸರಿಸಿ ಸಕಲ ಇಷ್ಟಾರ್ಥಪ್ರದವಾದ ತನ್ನ ಪೂಜೆಯನ್ನು ಮಾನವರು ಯಾವಾಗಲೂ ನಿಯಮದಿಂದ ಆಚರಿಸಬೇಕೆಂದು ಆ ಮಹೇಶ್ವರನು ವೇದವನ್ನು ಲೋಕೋಪಕಾರಕ್ಕಾಗಿ ಸೃಷ್ಟಿಸಿದನು. ಅನೇಕಮಂದಿ ಮುನಿಗಳು ಹಿಂದೆ ಉಮಾರಮಣನ ಪೂಜೆಯಿಂದ ದುಃಖವೆಂಬ ಪಾಶದಿಂದ ಬಿಡುಗಡೆ ಹೊಂದಿ ಕೊನೆಗೆ ಆ ಶಂಕರನನ್ನೇ ಹೊಂದಿದರು. ॥೧೮೩-೧೮೪॥

ಹಿಂದೆ ಮಹಾವಿಷ್ಣುವು ಪ್ರಮಾದದಿಂದ ಶಿವನನ್ನು ಪೂಜೆಮಾಡದೇ ಅಕಾಲದಲ್ಲಿ ವ್ಯಾಕುಲಿತನಾಗಿ, ಬಾಡಿದ ಶರೀರ, ತುಟಿ ಮತ್ತು ದವಡೆಗಳುಳ್ಳವನಾದನು. ಆಗ ಲಕ್ಷ್ಮೀದೇವಿಯು ದುಃಖಿತನಾಗಿರುವ ತನ್ನ ಪತಿಯನ್ನು ನೋಡಿ, ದುಃಖನಾಶಕವಾದ ಕಾರ್ಯವೊಂದನ್ನು ನಿಶ್ಚಯಮಾಡಿಕೊಂಡು ಇಂತು ನುಡಿದಳು. ॥೧೮೫-೧೮೬॥

ಮಹಾವಿಷ್ಣುವೇ, ದೇವತಾಧಿಪತಿಯೆನಿಸಿದ ಉಮಾರಮಣನನ್ನು ನೀನು ಪೂಜೆಮಾಡುವನಾಗು. ಆ ಪೂಜೆಯಿಂದ ಈ ನಿನ್ನ ದುಃಖಗಳೆಲ್ಲವೂ ಕೂಡಲೇ ಬಿಡುಗಡೆಯಾಗುವುವು. ಹಿಂದೆ ವಿಜಯಾಪೇಕ್ಷೆಯಿಂದ ಮೃತ್ಯುಂಜಯನೆನಿಸಿದ

ಯದಾ ದುಃಖಂ ತ್ವಯಾ ಪ್ರಾಪ್ತಮಸುರೇಭ್ಯಸ್ತದಾ ತ್ವಯಾ ।
ಪೂಜಿತಃ ಶ್ರೀಮಹಾದೇವೋ ಭಕ್ತಿಶ್ರದ್ಧಾಪುರಸ್ಸರಂ ॥೧೮೯॥

ಶ್ರೀಮಹಾದೇವಪೂಜಾಯಾಂ ತ್ವಮತ್ಯಂತಮುತ್ಸುಕಃ ।
ಅತೋಽದ್ಯಾಪಿ ಪ್ರಯತ್ನೇನ ಪೂಜಯಸ್ವ ಮಹೇಶ್ವರಂ ॥೧೯೦॥

ಮಹಾದೇವಂ ವಿನಾಽಸ್ಮಾಕಂ ನಾಸ್ತಿ ದುಃಖನಿವಾರಕಃ ।
ತತ್ಪೂಜಾಂ ಕುರು ಯತ್ನೇನ ಕೇಶವ ಕ್ಲೇಶನಾಶಿನೀಂ ॥೧೯೧॥

ಅಸ್ಮಾಕಮಮರಾದೀನಾಂ ಶಿವ ಏವೇಷ್ಟದೈವತಂ ।
ದುಃಖಂ ವಿನಶ್ಯತ್ಯಖಿಲಮಿಷ್ಟದೈವತಪೂಜಯಾ ॥೧೯೨॥

ಕರಿಷ್ಯಸಿ ಯದಿ ಪ್ರೀತ್ಯಾ ಸತ್ವರಂ ಶಂಕರಾರ್ಚನಂ ।
ತದಾ ತ್ವಯಾಽಧುನಾ ಪ್ರಾಪ್ತಂ ಸೌಖ್ಯಮದ್ಯ ಜನಾರ್ದನ ॥೧೯೩॥

ಮಹಾದೇವನನ್ನು ಆದರದಿಂದ ಪೂಜೆಮಾಡಿ ನೀನು ಅತ್ಯಂತ ದುಷ್ಟನಾದ ಮುರನೆಂಬ ರಾಕ್ಷಸನನ್ನು ಗೆದ್ದು ಜಯಪಡೆದಿರುವೆ. ॥೧೮೭-೧೮೮॥

ಹಿಂದೆ ನಿನಗೆ ರಾಕ್ಷಸರ ದೆಸೆಯಿಂದ ಭಯವೊದಗಿದಾಗಲೆಲ್ಲಾ ನೀನು ಭಕ್ತಿಶ್ರದ್ಧೆಗಳಿಂದ ಆ ಮಹಾದೇವನನ್ನು ಪೂಜೆಮಾಡಿದ್ದೀಯೆ. ಶ್ರೀ ಮಹಾದೇವನ ಪೂಜೆಯಲ್ಲಿ ನೀನು ಉತ್ಸಾಹಭರಿತನಾಗಿರುವುದರಿಂದಲೇ ಈಗಲೂ ಆ ಮಹೇಶ್ವರನನ್ನು ನಿಯಮದಿಂದ ನೀನು ಪೂಜೆಮಾಡುವವನಾಗು. ॥೧೮೯-೧೯೦॥

ಆ ಮಹಾದೇವನನ್ನು ಬಿಟ್ಟರೆ ನಮ್ಮ ದುಃಖವನ್ನು ನಿವಾರಣೆ ಮಾಡುವವರು ನಮಗೆ ಬೇರೆ ಯಾರೂ ಇಲ್ಲವಾದ್ದರಿಂದ, ಕೇಶವನೇ, ದುಃಖನಾಶಕವಾದ ಮಹಾದೇವನ ಪೂಜೆಯನ್ನು ನಿಯಮದಿಂದ ಈಗಲೂ ಮಾಡುವವನಾಗು. ದೇವತೆಗಳೇ ಮುಂತಾದ ನಮ್ಮೆಲ್ಲರಿಗೂ ಆ ಪರಶಿವನೇ ಇಷ್ಟದೈವನಾಗಿರುವನು ಇಷ್ಟದೇವರ ಪೂಜೆಯಿಂದ ಸಕಲ ದುಃಖಗಳೂ ತಪ್ಪದೇ ನಾಶವಾಗುತ್ತವೆ ಯೆಂಬುದು ಪ್ರಸಿದ್ಧವಾಗಿಯೇ ಇದೆ. ॥೧೯೧-೧೯೨॥

ಜನಾರ್ದನನೇ, ಪ್ರೀತಿಯಿಂದ ಈಗಲೇ ಶಂಕರನನ್ನು ಪೂಜೆಮಾಡುವೆಯಾದರೆ ನಿನಗೆ ಸೌಖ್ಯವು ಈಗಲೇ ಬಂದಿತೆಂದೇ ತಿಳಿ. ಕೇಶವನೇ, ಆದ್ದರಿಂದ

ಕೇಶವಾಲಸ್ಯರಹಿತಃ ಕುರು ಶಂಕರಪೂಜನಂ ।
ಯದಾಲಸ್ಯಂ ತದಾ ಪ್ರಾಪ್ತಂ ದುಃಖಮುದ್ಯ ಪುನರ್ಹರೇ ॥೧೪೪॥

॥ ಬ್ರಹ್ಮೋವಾಚ ॥

ಇತ್ಯುಕ್ತಂ ತದ್ವಚಃ ಶ್ರುತ್ವಾ ಕೇಶವಃ ಸತ್ವರಂ ತದಾ ।
ಶಂಕರಂ ಪೂಜಯಾಮಾಸ ಭಸ್ಮ ಧೃತ್ವಾ ಯಥಾವಿಧಿ ॥೧೪೫॥

ತತೋ ದುಃಖವಿನಿರ್ಮುಕ್ತಃ ಸ ಬಭೂವ ಜನಾರ್ದನಃ ।
ಸೌಖ್ಯಂ ಬಹುತರಂ ಪ್ರಾಪ ಶ್ರೀಮಹಾದೇವಪೂಜಯಾ ॥೧೪೬॥

ತದಾ ಪ್ರಭೃತಿ ವಿಶ್ವೇಶಂ ಶಿವಲಿಂಗಸ್ವರೂಪಿಣಂ ।
ಸ್ವಹೃತ್ಪದ್ಮೇ ಸಂನಿವೇಶ್ಯ ಪೂಜಯತ್ಯನಿಶಂ ಹರಿಃ ॥೧೪೭॥

ಹರಿಹೃತ್ಪದ್ಮಸಂವಿಷ್ಟಂ ಶಿವಲಿಂಗಮನುತ್ತಮಂ ।
ದ್ರಷ್ಟವ್ಯಮಿತಿ ಯಾಸ್ಯಾಮಿ ತ್ವಮಪ್ಯಾಯಾಹಿ ಸತ್ವರಂ ॥೧೪೮॥

ಔದಾಸೀನ್ಯವನ್ನು ತೊರೆದು ನಿಯಮದಿಂದ ಆ ಶಂಕರನನ್ನು ಈಗಲೇ ಪೂಜಿಸು. ನಿನಗೆ ಆಲಸ್ಯವುಂಟಾದಾಗ ಪುನಃ ನಿನಗೆ ಈ ವಿಧವಾದ ದುಃಖವುಂಟಾಗುವುದೆಂಬುದನ್ನು ಮರೆಯಬೇಡ ಎಂಬುದಾಗಿ ಲಕ್ಷ್ಮಿಯು ವಿಷ್ಣುವಿಗೆ ಹಿತವಚನಗಳನ್ನು ತಿಳಿಸಿದಳು. ॥೧೪೩-೧೪೪॥

ಲಕ್ಷ್ಮಿಯ ಆ ಮಾತುಗಳನ್ನು ಕೇಳಿ ಕೇಶವನು ಸಂತೋಷದಿಂದ ಕೂಡಲೇ ವಿಧಿಪೂರ್ವಕವಾಗಿ ವಿಭೂತಿಯನ್ನು ಧಾರಣೆಮಾಡಿಕೊಂಡು ಶಂಕರನನ್ನು ಪೂಜೆ ಮಾಡಿದನು. ಅನಂತರ ಜನಾರ್ದನನು ಆ ಶಿವಪೂಜಾಮಹಿಮೆಯಿಂದ ದುಃಖರಹಿತನಾಗಿ ಶಾಶ್ವತವಾದ ಸೌಖ್ಯವನ್ನು ಪಡೆದನು.. ॥೧೪೫-೧೪೬॥

ಅದುಮೊದಲು ಶಿವಲಿಂಗರೂಪಿಯಾದ ವಿಶ್ವೇಶ್ವರನನ್ನು ಮಹಾವಿಷ್ಣುವು ತನ್ನ ಹೃದಯಕಮಲದಲ್ಲಿ ಸರ್ವದಾ ಧ್ಯಾನಿಸುತ್ತಾ ಅನವರತವೂ ಪೂಜೆಮಾಡುತ್ತಿರುವನು. ಆ ವಿಷ್ಣುವಿನ ಹೃದಯಕಮಲದಲ್ಲಿ ನೆಲಸಿರುವ ಅತ್ಯುತ್ತಮವಾದ ಶಿವಲಿಂಗಸ್ವರೂಪವನ್ನು ಅರಿಯಬೇಕೆಂದು ಈಗ ಹೊರಡುವೆನು. ಇಂದ್ರನೇ! ನೀನೂ ಜಾಗ್ರತೆಯಾಗಿ ನನ್ನೊಡನೆ ಬಾ ಎಂದು ಬ್ರಹ್ಮನು ಇಂದ್ರನಿಗೆ ಹೇಳಿದನು. ॥೧೪೭-೧೪೮॥

|| ಅಗಸ್ತ್ಯ ಉವಾಚ ||

ಇತ್ಯುಕ್ತ್ವಾ ವಿಷ್ಣುಲೋಕಾಯ ಸದೇವೇಂದ್ರೋ ವಿಧಿರ್ಯಯೌ ।
ದದರ್ಶ ಚ ತತೋ ವಿಷ್ಣುಂ ಶಿವಪೂಜಾಪರಾಯಣಃ ||೧೯೯||

ಭಸ್ಮೋದ್ಧೂಳಿತಸರ್ವಾಂಗಂ ತ್ರಿಪುಂಡ್ರಾಂಕಿತಮಸ್ತಕಂ ।
ರುದ್ರಾಕ್ಷಮಾಲಾಭರಣಂ ಶಂಕರಸ್ಮರಣೋತ್ಸುಕಂ ||೨೦೦||

ದೃಷ್ಟ್ವಾ ವಿಷ್ಣುಂ ಸ ದೇವೇಂದ್ರೋ ವಿಧಿರ್ನತ್ವಾ ಕೃತಾಂಜಲಿಃ ।
ದೇವೇಂದ್ರೋಕ್ತಂ ಯಥಾಪೂರ್ವಂ ಜ್ಞಾಪಯಾಮಾಸ ವಿಷ್ಣವೇ ||೨೦೧||

ತತಸ್ತದ್ವಚನಂ ಶ್ರುತ್ವಾ ವಿಷ್ಣುಃ ಶಂಕರಪೂಜಕಃ ।
ವೇದವೇದಾಂತತತ್ವಜ್ಞಃ ಪ್ರಾಹ ವಾಚಂ ಸುಖಾವಹಾಂ ||೨೦೨||

|| ವಿಷ್ಣುರುವಾಚ ||

ತಾವದ್ವಸಂತಿ ದುಃಖಾನಿ ಯಾವನ್ನಾರಾಧ್ಯತೇ ಶಿವಃ ।
ತಾವದೇವ ಯಮಾದ್ಭೀತಿರ್ಯಾವನ್ನಾರಾಧ್ಯತೇ ಶಿವಃ ||೨೦೩||

---

ಬ್ರಹ್ಮನು ಹೀಗೆ ನುಡಿದು ದೇವೇಂದ್ರನೊಡನೆ ವಿಷ್ಣುಲೋಕಕ್ಕೆ ಹೋಗಿ ಅಲ್ಲಿ ಶಿವಪೂಜಾನಿರತನಾದ ವಿಷ್ಣುವನ್ನು ದರ್ಶನಮಾಡಿದನು. ಆಗ ವಿಷ್ಣುವು ತನ್ನ ಸಕಲ ಅವಯವಗಳಿಗೂ ವಿಭೂತಿಯನ್ನು ಲೇಪನಮಾಡಿಕೊಂಡು ಹಣೆಯಲ್ಲಿ ಭಸ್ಮ ತ್ರಿಪುಂಡ್ರಗಳನ್ನು ಧರಿಸಿ, ರುದ್ರಾಕ್ಷಮಾಲಾಲಂಕೃತನಾಗಿ ಶಂಕರನ ಸ್ಮರಣೆಯಲ್ಲಿಯೇ ನಿರತನಾಗಿ ಶಿವಪೂಜಾಪರಾಯಣನಾಗಿದ್ದನು. ||೧೯೯-೨೦೦||

ಬ್ರಹ್ಮನು ದೇವೇಂದ್ರನೊಡನೆ ಕೈಮುಗಿದುಕೊಂಡು ಮಹಾವಿಷ್ಣುವಿಗೆ ನಮಸ್ಕಾರಮಾಡಿ, ಹಿಂದೆ ದೇವೇಂದ್ರನು ತನಗೆ ತಿಳಿಸಿದ್ದನ್ನೆಲ್ಲಾ ವಿಷ್ಣುವಿಗೆ ಅರಿಕೆ ಮಾಡಿದನು. ಶಂಕರನ ಪೂಜಕನಾದ ವಿಷ್ಣುವು ಆ ಬ್ರಹ್ಮನ ಮಾತುಗಳನ್ನು ಕೇಳಿ, ವೇದವೇದಾಂತತತ್ವಗಳನ್ನರಿತವನಾದ್ದರಿಂದ ಕೇಳುವವರಿಗೆ ಸುಖಪ್ರದವಾದ ಮಾತುಗಳನ್ನು ಹೀಗೆ ನುಡಿದನು. ||೨೦೧-೨೦೨||

"ಬ್ರಹ್ಮಾದಿಗಳೇ ಕೇಳಿರಿ. ಆ ಪರಶಿವನನ್ನು ಪೂಜೆಮಾಡುವವರೆಗೆ ಸಕಲ ದುಃಖಗಳೂ, ದೊಡ್ಡ ದೊಡ್ಡ ರೋಗಗಳೂ ಮತ್ತು ಯಮನಿಂದ ಭಯವೂ

ತಾವದೇವ ಮಹಾವ್ಯಾಧಿರ್ಯಾವನ್ನಾರಾಧ್ಯತೇ ಶಿವಃ ।
ದುಃಖಾನಿ ವಿಲಯಂ ಯಾಂತಿ ಸಮ್ಯಗಾರಾಧಿತೇ ಶಿವೇ ॥೨೦೪॥

ತಾವದ್ವಸಂತಿ ಪಾಪಾನಿ ಯಾವನ್ನಾರಾಧ್ಯತೇ ಶಿವಃ ।
ತಾವದ್ಭವತಿ ದಾರಿದ್ರ್ಯಂ ಯಾವನ್ನಾರಾಧ್ಯತೇ ಶಿವಃ ॥೨೦೫॥

ಯಥಾ ಸೂರ್ಯೋದಯೇ ಜಾತೇ ವಿನಶ್ಯತಿ ತಮಸ್ತಥಾ ।
ಪೂಜಿತೇ ಶ್ರೀಮಹಾದೇವೇ ದುಃಖಮಾತ್ರಂ ವಿನಶ್ಯತಿ ॥೨೦೬॥

ನಾನಾದುಃಖಮಹಾವ್ಯಾಧಿಭೇಷಜಂ ಶಿವಪೂಜನಂ ।
ಸತ್ಯಂ ಸತ್ಯಂ ಪುನಃ ಸತ್ಯಮುದ್ಧೃತ್ಯ ಭುಜಮುಚ್ಯತೇ ॥೨೦೭॥

ನಾನಾಸಂಸಾರದುಃಖಾನಿ ನಶ್ಯಂತಿ ಶಿವಪೂಜಯಾ ।
ಸತ್ಯಂ ಸತ್ಯಮಿತಿ ಪ್ರಾಹ ಜಾಬಾಲೋಽಪಿ ಸ್ವಯಂ ವಿಧೇ ॥೨೦೮॥

ಸಂಸಾರಜಾಂ ರುಜಂ ರುದ್ರೋ ದ್ರಾವಯತ್ಯರ್ಚಿತಃ ಸದಾ ।
ತತೋಽರ್ಚನೀಯಮನಿಶಂ ರುದ್ರಲಿಂಗಂ ಮುಮುಕ್ಷುಭಿಃ ॥೨೦೯॥

ಉಂಟಾಗುವುವೇ ಹೊರತು ಆ ಪರಶಿವನನ್ನು ಚೆನ್ನಾಗಿ ಪೂಜೆಮಾಡಿದನಂತರ ಸಕಲ ದುಃಖಗಳೂ ಕ್ಷಣಕಾಲದಲ್ಲಿ ನಾಶವಾಗಿಬಿಡುವುವು. ॥೨೦೩-೨೦೪॥

ಪರಮಶಿವನನ್ನು ಪೂಜೆಮಾಡುವ ವರೆಗೆ ಮಾತ್ರ ಸಕಲ ಪಾಪಗಳೂ ಬಡತನವೂ ಮನುಷ್ಯರಲ್ಲಿ ಬೇರೂರಿರುವುವು. ಸೂರ್ಯನು ಹುಟ್ಟಿದಮೇಲೆ ಕತ್ತಲೆಯೆಲ್ಲಾ ನಾಶವಾಗುವಂತೆ ಶ್ರೀಮಹಾದೇವನನ್ನು ಪೂಜೆಮಾಡಿದೊಡನೆಯೇ ದುಃಖರಾಶಿಯು ಕೊಂಚವೂ ಉಳಿಯದಂತೆ ನಾಶವಾಗುವುದು. ॥೨೦೫-೨೦೬॥

ಶಿವಪೂಜೆಯೆಂಬುದು ಅನೇಕ ದುಃಖಗಳೆಂಬ ಮಹಾರೋಗಗಳಿಗೆ ದಿವ್ಯೌಷಧಿಯೆಂದು ಸತ್ಯವಾಗಿಯೂ ನಾನು ಪದೇ ಪದೇ ಭುಜವೆತ್ತಿ ಹೇಳುವೆನು. ಪರಶಿವನ ಪೂಜೆಯಿಂದ ಅನೇಕ ಬಗೆಯ ಸಂಸಾರದುಃಖಗಳೂ ನಾಶವಾಗುವುವು. ಬ್ರಹ್ಮನೇ, ಈ ವಿಷಯವು ಸತ್ಯವಾದುದೆಂದು ಜಾಬಾಲಮುನಿಯು ತಾನೆ ಸ್ವತಃ ಹೇಳಿದ್ದಾನೆ. ॥೨೦೭-೨೦೮॥

ಆ ರುದ್ರನನ್ನು ಪೂಜೆಮಾಡಿದರೆ ಈ ಸಂಸಾರಸಂಬಂಧಗಳಾದ ಸಕಲ ರೋಗಗಳೂ ನಾಶವಾಗುವುವಾದ್ದರಿಂದ ಮೋಕ್ಷವನ್ನು ಬಯಸುವವರು ಅನವರತವೂ

ಸರ್ವಮನ್ಯತ್ಪರಿತ್ಯಜ್ಯ ಶಿವ ಏಕಃ ಶಿವಂಕರಃ ।
ಧ್ಯೇಯ ಇತ್ಯಾಹ ಹಿ ನಿಧೇ ಸಾಕ್ಷಾದಾಥರ್ವಣಃ ಶ್ರುತಿಃ ॥೨೧೦॥

ಪೂಜನೀಯೋ ಮಹಾರುದ್ರೋ ಮನೋವಾಕ್ಕಾಯಕರ್ಮಭಿಃ ।
ತತ್ಪೂಜಯೈವ ನಶ್ಯಂತಿ ದುಃಖಾನಿ ವಿವಿಧಾನ್ಯಪಿ ॥೨೧೧॥

ವಿನಾಶಯತಿ ಸಂಸಾರಂ ಯಃ ಸಕೃತ್ಪೂಜಯಾ ಶಿವಃ ।
ಸ ಕಿಮನ್ಯಾನಿ ದುಃಖಾನಿ ನ ನಾಶಯತಿ ಪೂಜಿತಃ ॥೨೧೨॥

ಭಾವಪೂತಂ ಮಹಾದೇವಂ ಯೋಽರ್ಚಯಿಷ್ಯತಿ ಸಂತತಂ ।
ಸ ಸಂಪ್ರಾಪ್ನೋತಿ ಧರ್ಮಾರ್ಥ ಕಾಮಮೋಕ್ಷಾನ್ನ ಸಂಶಯಃ ॥೨೧೩॥

ಸಂಸಾರಸಾಗರಂ ಘೋರಂ ಯಃ ಸಮುತ್ತರ್ತುಮಿಚ್ಛತಿ ।
ತೇನ ನಿತ್ಯಂ ಮಹಾದೇವಃ ಪೂಜನೀಯಃ ಪ್ರಯತ್ನತಃ ॥೨೧೪॥

ರುದ್ರಲಿಂಗವನ್ನು ಪೂಜೆಮಾಡಬೇಕು. ಬ್ರಹ್ಮದೇವನೇ, ಇತರ ಹವ್ಯಾಸಗಳನ್ನೆಲ್ಲಾ ಬಿಟ್ಟು ಮಂಗಳಕರನಾದ ಆ ಶಿವನೊಬ್ಬನನ್ನೇ ಧ್ಯಾನಮಾಡಬೇಕೆಂದು ಅಥರ್ವಣ ವೇದವು ಪ್ರತ್ಯಕ್ಷವಾಗಿ ಹೇಳುತ್ತಿರುವುದು. ॥೨೦೯-೨೧೦॥

ಮನಸ್ಸು, ಮಾತು ಮತ್ತು ಕರ್ಮಗಳಿಂದ ಆ ಮಹಾರುದ್ರನನ್ನು ತಪ್ಪದೆ ಪೂಜೆಮಾಡಬೇಕು. ಆ ಪೂಜೆಯಿಂದಲೇ ನಾನಾವಿಧವಾದ ದುಃಖಗಳೂ ನಾಶವಾಗುವುವು. ಒಂದು ಬಾರಿ ಪೂಜೆಮಾಡಿದುದರಿಂದಲೇ ಈ ಸಂಸಾರ ಬಂಧನವನ್ನು ಹೋಗಲಾಡಿಸುವ ಮಹಾದೇವನು ಅನವರತವೂ ಪೂಜೆಮಾಡಲ್ಪಟ್ಟರೆ ಸಂಪೂರ್ಣ ದುಃಖಗಳನ್ನು ನಾಶಮಾಡುವುದಿಲ್ಲವೇನು ! ॥೨೧೧-೨೧೨॥

ಅನವರತವೂ ಪರಿಶುದ್ಧವಾದ ಭಕ್ತಿಯಿಂದ ಮಹಾದೇವನನ್ನು ಪೂಜೆಮಾಡುವವನು ಧರ್ಮ, ಅರ್ಥ, ಕಾಮ ಮತ್ತು ಮೋಕ್ಷಗಳೆಂಬ ನಾಲ್ಕುವಿಧಗಳಾದ ಪುರುಷಾರ್ಥಗಳನ್ನೂ ಸಂದೇಹವಿಲ್ಲದೇ ಹೊಂದುವನು. ಈ ಘೋರವಾದ ಸಂಸಾರವೆಂಬ ಸಾಗರವನ್ನು ದಾಟಬಯಸುವವನು ನಿತ್ಯವೂ ನಿಯಮಬದ್ಧನಾಗಿ ಮಹಾದೇವನನ್ನು ಪೂಜೆಮಾಡಲೇಬೇಕು. ॥೨೧೩-೨೧೪॥

ಧನ್ಯಃ ಸ ಇತಿ ವಿಜ್ಞೇಯೋ ಯಃ ಶಶ್ವಚ್ಛಿವಪೂಜಕಃ ।
ಸ ತರತ್ಯೇವ ಸಂಸಾರಂ ನಾನಾಪಾತಕಸಾಗರಂ ॥೨೧೫॥

ಶಿವೇತಿ ನಾಮದಾವಾಗ್ನೇರ್ಮಹಾಪಾತಕಪರ್ವತಾಃ ।
ಭಸ್ಮೀಭವಂತ್ಯನಾಯಾಸಾತ್ಸತ್ಯಂ ಸತ್ಯಂ ನ ಸಂಶಯಃ ॥೨೧೬॥

ಪಾಪಮೂಲಾನಿ ದುಃಖಾನಿ ವಿವಿಧಾನ್ಯಪಿ ತಾನ್ಯತಃ ।
ಶಿವಾರ್ಚನೈಕನಾಶ್ಯಾನಿ ನಾನ್ಯನಾಶ್ಯಾನಿ ಸರ್ವಥಾ ॥೨೧೭॥

ಶಿವಾರ್ಚನಪರೈರೇವ ಘೋರಸಂಸಾರಸಾಗರಃ ।
ತೀರ್ಣೋ ನಾನ್ಯೈಃ ಸ ಸಂಸಾರಸಾಗರಸ್ತೀರ್ಯತೇ ಧ್ರುವಂ ॥೨೧೮॥

ಸಂಸಾರಸಾಗರಂ ಘೋರಂ ಯಃ ಶೋಷಯಿತುಮಿಚ್ಛತಿ ।
ಸ ಕರೋತಿ ಪ್ರಯತ್ನೇನ ನವಬಿಲ್ವೈಃ ಶಿವಾರ್ಚನಂ ॥೨೧೯॥

ವಿವಿಧಾನ್ಯಪಿ ಪಾಪಾನಿ ಯಾನ್ಯನಂತಾನಿ ತಾನಿ ತು ।
ವಿನಶ್ಯಂತಿ ವಿಧೇ ನಿತ್ಯಂ ತ್ರಿಪುರಾಂತಕಪೂಜಯಾ ॥೨೨೦॥

ತಪ್ಪದೆ ಅನವರತವೂ ಪರಶಿವನನ್ನು ಪೂಜೆಮಾಡುವವನೇ ಧನ್ಯನೆನಿಸುವನು. ಅವನೇ ನಾನಾವಿಧವಾದ ಪಾಪಗಳಿಗೆ ಸಾಗರದಂತೆ ಆಶ್ರಯವಾಗಿರುವ ಈ ಸಂಸಾರವನ್ನು ಖಂಡಿತವಾಗಿಯೂ ದಾಟುವವನು. ಶಿವನಾಮವೆಂಬ ಕಾಡುಗಿಚ್ಚಿನಿಂದ ಮಹಾಪಾಪಗಳೆಂಬ ಪರ್ವತಗಳೆಲ್ಲವೂ ಸುಲಭವಾಗಿ ಬೂದಿಯಾಗಿಬಿಡುವುವು. ಇದು ಸತ್ಯವೆಂದು ನಂಬು. ಇದರಲ್ಲಿ ಸಂಶಯಪಡಬೇಡ. ॥೨೧೫-೨೧೬॥

ಬಗೆಬಗೆಯಾದ ದುಃಖಗಳೆಲ್ಲವೂ ಪಾಪಮೂಲಕವೇ ಆಗಿರುವುದರಿಂದ ಅವೆಲ್ಲವೂ ಶಿವಪೂಜೆಯೊಂದರಿಂದಲೇ ನಾಶವಾಗುವುವೇ ಹೊರತು, ಇತರ ಯಾವುದರಿಂದಲೂ ಹೋಗುವುದಿಲ್ಲ. ಶಿವಪೂಜಾನಿರತರಾದವರಿಂದ ಮಾತ್ರ ಈ ಘೋರವಾದ ಸಂಸಾರಸಾಗರವು ದಾಟಲ್ಪಡುವುದೇ ಹೊರತು, ಇತರರಿಂದ ಖಂಡಿತವಾಗಿಯೂ ಭಯಂಕರವಾದ ಸಂಸಾರರೂಪದಿಂದಿರುವ ಈ ಸಾಗರವನ್ನು ದಾಟಲು ಅಸಾಧ್ಯ. ॥೨೧೭-೨೧೮॥

ಅನಾದಿಯಾಗಿ ಬಂದಿರುವ ಘೋರವಾದ ಈ ಸಂಸಾರಸಾಗರವನ್ನು ಒಣಗಿಸಲು ಬಯಸುವವನು ಹೊಸ ಬಿಲ್ವದಳಗಳನ್ನು ತಂದು ನಿಯಮದಿಂದ ಶಿವಪೂಜೆ

ಅನಭ್ಯರ್ಚ್ಯ ಮಹಾದೇವಂ ನಿಷ್ಪಾಪೋಽಸ್ಮೀತಿ ಯೋ ವದೇತ್ ।
ಸ ಪಾತಕೀತಿ ವಿಜ್ಞೇಯೋ ವೇದವೇದಾಂತಪಾರಗೈಃ ॥೨೨೦॥

ಸಮಭ್ಯರ್ಚ್ಯ ಮಹಾದೇವಂ ನಿಷ್ಪಾಪೋಽಸ್ಮೀತಿ ಯೋ ವದೇತ್ ।
ಸ ಪಾವನ ಇತಿ ಜ್ಞೇಯೋ ವೇದವೇದಾಂತಪಾರಗೈಃ ॥೨೨೨॥

ಸ ವೈದಿಕಃ ಸ ಪುಣ್ಯಾತ್ಮಾ ಸ ಧನ್ಯಃ ಸ ಬುಧೋ ವಿಧೇ ।
ಯಃ ಸದಾ ಕಾಯವಾಕ್ಚಿತ್ತೈಃ ಶರಣಂ ಯಾತಿ ಶಂಕರಂ ॥೨೨೩॥

ಭವಂತಿ ವಿವಿಧಾ ಧರ್ಮಾ ಯೇಷಾಂ ಸದ್ಯಃ ಫಲೋನ್ಮುಖಾಃ ।
ತೇಷಾಂ ಭವತಿ ವಿಶ್ವಾಸಸ್ತ್ರಿಪುರಾಂತಕಪೂಜನೇ ॥೨೨೪॥

ಪಾತಕಾನಿ ವಿನಶ್ಯಂತಿ ಯಾವಂತಿ ಶಿವಪೂಜಯಾ ।
ಭುವಿ ತಾವಂತಿ ಪಾಪಾನಿ ನ ಸಂತ್ಯೇವ ಚತುರ್ಮುಖ ॥೨೨೫॥

ಮಾಡುತ್ತಾನೆ. ಅಯ್ಯ ಬ್ರಹ್ಮನೆ, ಅಪರಿಮಿತವೂ, ನಾನಾವಿಧವೂ ಆದ ಪಾಪಗಳೆಲ್ಲವೂ ಆ ತ್ರಿಪುರಾಸುರಧ್ವಂಸಕನ ಪೂಜೆಯಿಂದ ನಿತ್ಯವೂ ನಾಶವಾಗುವುವು. ||೨೧೯-೨೨೦||

ಮಹಾದೇವನನ್ನು ಪೂಜೆಮಾಡದೇ ಪಾಪರಹಿತನಾಗಿರುವೆನೆಂದು ಹೇಳುವವನು ಪಾಪಿಯೆಂಬುದಾಗಿ ವೇದವೇದಾಂತಪಾರಂಗತರಾದವರು ತಿಳಿಯುತ್ತಾರೆ. ಅದೇ ವೇದವೇದಾಂತದಲ್ಲಿ ನಿಷ್ಣಾತರಾದವರು, ಮಹಾದೇವನನ್ನು ಪೂಜೆಮಾಡಿ ಪಾಪವಿಲ್ಲದವನೆಂದು ಹೇಳುವವನನ್ನು ಪರಮಪಾವನನೆಂಬುದಾಗಿ ತಿಳಿಯುತ್ತಾರೆ. ||೨೨೧.೨೨೨||

ಓ ಬ್ರಹ್ಮನೇ, ಯಾವಾಗಲೂ ಕಾಯ, ವಾಕ್ಕು, ಮತ್ತು ಮನಸ್ಸುಗಳಿಂದ ಆ ಶಂಕರನನ್ನು ಮರೆಹೊಗುವವನೇ ವೈದಿಕನೂ, ಪುಣ್ಯಾತ್ಮನೂ, ಧನ್ಯನೂ ಮತ್ತು ಪಂಡಿತನೂ ಎಂಬುದಾಗಿ ಹೇಳಿಸಿಕೊಳ್ಳುವನು. ಫಲಪ್ರಾಪ್ತಿಯಲ್ಲಿ ಮುಂದಾಗಿರುವ ವಿವಿಧ ಧರ್ಮಗಳಲ್ಲಿ ಆಸಕ್ತಿಯುಳ್ಳವರಿಗೆ ಮಾತ್ರ ತ್ರಿಪುರಾಸುರನನ್ನು ನಾಶಮಾಡಿದ ಪರಶಿವನ ಪೂಜೆಯಲ್ಲಿ ವಿಶ್ವಾಸವುಂಟಾಗುತ್ತದೆ ||೨೨೩-೨೨೪||

ಚತುರ್ಮುಖನೇ, ಶಿವಪೂಜೆಯಿಂದ ನಾಶವಾಗುವಷ್ಟು ಪಾಪಗಳು ಈ ಭೂಮಿಯಲ್ಲಿ ಇಲ್ಲವೇ ಇಲ್ಲ ಬ್ರಹ್ಮಹತ್ಯ ಮುಂತಾದ ಮಹಾಪಾಪಗಳ ರಾಶಿಯೂ

ಬ್ರಹ್ಮಹತ್ಯಾದಿಪಾಪಾನಾಂ ರಾಶಯೋಽಪ್ಯಮಿತಾ ವಿಧೇ ।
ಶಿವಸ್ಮೃತ್ಯಾ ವಿನಶ್ಯಂತಿ ನ ತೇ ಕಿಂ ಶಿವಪೂಜಯಾ ॥೨೨೬॥

ಶಿವನಾಮರತಿಂ ಪ್ರಾಪ್ಯ ಸಂಸಾರಾಬ್ಧಿಂ ತರಂತಿ ತೇ ।
ಸಂಸಾರಮೂಲಪಾಪಾನಿ ತೇನ ನಶ್ಯಂತ್ಯಸಂಶಯಂ ॥೨೨೭॥

ಸಂಸಾರಮೂಲಭೂತಾನಾಂ ಪಾತಕಾನಾಂ ಚತುರ್ಮುಖ ।
ಶಿವನಾಮಕುಠಾರೇಣ ವಿನಾಶೋ ಜಾಯತೇ ಧ್ರುವಂ ॥೨೨೮

ಶಿವನಾಮಾಮೃತಂ ಪೇಯಂ ಪಾಪದಾವಾನಲಾರ್ದಿತೈಃ ।
ಪಾಪದಾವಾಗ್ನಿತಪ್ತಾನಾಂ ಶಾಂತಿಸ್ತೇನ ವಿನಾ ನ ಹಿ ॥೨೨೯॥

ಶಿವೇತಿ ನಾಮಪೀಯೂಷವರ್ಷಧಾರಾಪರಿಪ್ಲುತಾಃ ।
ಸಂಸಾರದವಮಧ್ಯೇಽಪಿ ನ ಶೋಚಂತಿ ನ ಸಂಶಯಃ ॥೨೩೦॥

ಆ ಶಿವನ ಸ್ಮರಣೆಯಿಂದಲೇ ನಾಶವಾಗುವಾಗ ಶಿವನ ಪೂಜೆಯಿಂದ ಉಳಿಯುವ ಪಾಪರಾಶಿಯಾವುದು ? ॥೨೨೫-೨೨೬॥

ಆಸ್ತಿಕರಾದವರು ಶಿವನಾಮಗಳಲ್ಲಿ ಆಸಕ್ತರಾಗಿ ಅವುಗಳ ಜಪ ಧ್ಯಾನಾದಿಗಳಿಂದ ಈ ಸಂಸಾರಸಾಗರವನ್ನು ದಾಟುತ್ತಾರೆ. ಅದರಿಂದ ಈ ಸಂಸಾರ ಬಂಧನಕ್ಕೆ ಮೂಲಭೂತವಾದ ಪಾಪಗಳೆಲ್ಲವೂ ಸಂದೇಹವೇ ಇಲ್ಲದೇ ನಾಶವಾಗುವುವು. ಅಯ್ಯ ಚತುರ್ಮುಖಬ್ರಹ್ಮನೇ! ಈ ಸಂಸಾರಕ್ಕೆ ಮೂಲಭೂತವಾದ ಪಾಪರಾಶಿಯು ಶಿವನಾಮವೆಂಬ ಕೊಡಲಿಯಿಂದ ನಿಶ್ಚಯವಾಗಿಯೂ ನಾಶವಾಗುವುದು. ॥೨೨೭-೨೨೮॥

ಪಾಪವೆಂಬ ಕಾಳ್ಗಿಚ್ಚಿನಿಂದ ಪೀಡಿತರಾದವರು ಶಿವನಾಮವೆಂಬ ಅಮೃತವನ್ನು ಪಾನಮಾಡಬೇಕು. ಆದರಿಂದಲೇ ಅವರಿಗೆ ಶಾಂತಿಯುಂಟಾಗಬೇಕೇ ವಿನಾ ಮತ್ತಾವುದೂ ಶಾಂತಿಪ್ರದವಾಗಲಾರದು. ಶಿವನಾಮವೆಂಬ ಅಮೃತದ ಧಾರೆಗಳಿಂದ ಪರಿಪೂರ್ಣವಾಗಿ ವ್ಯಾಪ್ತರಾದವರು ಈ ಸಂಸಾರವೆಂಬ ಕಾಡುಕಿಚ್ಚಿನ ಮಧ್ಯದಲ್ಲಿದ್ದರೂ ಕೊಂಚವೂ ದುಃಖಪಡುವುದಿಲ್ಲ. ಇದರಲ್ಲಿ ಸಂಶಯವಿಲ್ಲ ॥೨೨೯-೨೩೦॥

ಯೇಷಾಂ ಧರ್ಮಃ ಸ್ವಭಾವಾನಾಂ ಮಹೇಶಃ ಕುಲದೈವತಂ ।
ತೇ ಧನ್ಯಾಸ್ತೇ ಮಮಾರಾಧ್ಯಾಸ್ತೇ ಮಹೇಶ ಕೃಪಾಶ್ರಯಾಃ ॥೨೩೧॥

ನ ಭಕ್ತಿಃ ಶಂಕರೇ ಪುಂಸಾಂ ರಾಗದ್ವೇಷರತಾತ್ಮನಾಂ ।
ತದ್ವಿಧಾನಾಂ ನ ಸಹಸಾ ಮುಕ್ತಿರ್ಭವತಿ ಸರ್ವಥಾ ॥೨೩೨॥

ಅನಂತಜನ್ಮಭಿರ್ಯೇನ ತಪಸ್ತಪ್ತಂ ಭವಿಷ್ಯತಿ ।
ತಸ್ಯೈವ ಭಕ್ತಿರ್ಭವತಿ ಭವಾನೀಪ್ರಾಣವಲ್ಲಭೇ ॥೨೩೩॥

ಜಾತಾಽಪಿ ಶಂಕರೇ ಭಕ್ತಿರನ್ಯಸಾಧಾರಣಾ ವೃಥಾ ।
ಪರಂ ತ್ವವ್ಯಭಿಚಾರೇಣ ಶಿವಭಕ್ತಿರಪೇಕ್ಷಿತಾ ॥೨೩೪॥

ಯಸ್ಯಾಸ್ತ್ಯಾಮರಣಂ ಶಂಭೌ ಭಕ್ತಿರವ್ಯಭಿಚಾರಿಣೀ ।
ತಸ್ಯೈವ ಮೋಕ್ಷಃ ಸುಲಭೋ ನಾನ್ಯಸ್ಯೇತಿ ಮತಿರ್ಮಮ ॥೨೩೫॥

ವಿಧೇ ಭವಂತಿ ಪ್ರತ್ಯೂಹಾಃ ಶಿವಭಕ್ತಿವಿಘಾತಕಾಃ ।
ಪ್ರತ್ಯೂಹಾಸ್ತೇ ಶಮಂ ಯಾಂತಿ ಮಹೇಶಾನುಗ್ರಹಾತ್ಪರಾತ್ ॥೨೩೬॥

ಉಪದೇಶಾದಿಗಳಿಲ್ಲದೆ ಮಹೇಶನೇ ಕುಲದೇವತೆಯೆಂಬ ನಂಬಿಕೆಯುಳ್ಳವರೇ ಲೋಕದಲ್ಲಿ ಧನ್ಯರು. ಅವರೇ ನನಗೂ ಪೂಜ್ಯರೆನಿಸಿದವರು ಮಹೇಶ್ವರನ ದಯೆಗೂ ಅವರೇ ಪಾತ್ರರಾಗುವರು. ರಾಗದ್ವೇಷಗಳಲ್ಲಿ ತತ್ಪರರಾದ ಪುರುಷರಿಗೆ ಎಂದೂ ಶಂಕರನಲ್ಲಿ ಭಕ್ತಿಯುಂಟಾಗುವುದಿಲ್ಲ. ಅಂತಹವರಿಗೆ ಖಂಡಿತವಾಗಿಯೂ ಮೋಕ್ಷವು ಲಭಿಸುವುದಿಲ್ಲ. ||೩೩೧-೨೩೨||

ಅನೇಕ ಜನ್ಮಗಳಲ್ಲಿ ತಪಸ್ಸುಮಾಡಿದವನಿಗೆ ಮಾತ್ರ ಭವಾನೀ ಪ್ರಾಣಕಾಂತನಾದ ಶಂಕರದಲ್ಲಿ ಭಕ್ತಿಯುದಯಿಸುತ್ತದೆ. ಇತರರಂತೆ ಸಾಧಾರಣವಾದ ಭಕ್ತಿಯು ಆ ಶಂಕರನಲ್ಲುಂಟಾದರೂ ಅದೂ ವ್ಯರ್ಥವೇ ಸರಿ. ಆದ್ದರಿಂದ ಶಿವನಲ್ಲಿ ಅನಿತರ ಸಾಧಾರಣವಾದ ಭಕ್ತಿಯು ಸರ್ವರಿಗೂ ಅಪೇಕ್ಷಿತವಾದುದು. ||೨೩೩-೨೩೪||

ಸಾಯುವವರೆಗೂ ತಡೆಯಿಲ್ಲದ ಭಕ್ತಿಯು ಶಂಭುವಿನಲ್ಲಿ ಹುಟ್ಟಿದವನಿಗೇ ಮೋಕ್ಷವು ಸುಲಭವಾಗಿ ದೊರೆಯುವುದೇ ವಿನಾ, ಇತರರಿಗಲ್ಲವೆಂದು ನಾನು ಭಾವಿಸುವೆನು. ಆದರೆ ಶಿವಭಕ್ತಿಯುಕ್ತನಿಗೆ ಅನೇಕ ವಿಘ್ನಗಳೊದಗುವುವು.

ಯಸ್ಯ ಭಕ್ತಿರನುಸ್ಯೂತಾ ದೇಹಪಾತಾಂತಮೀಶ್ವರೇ ।
ಸ ಶಿವಾನುಗೃಹೀತೋಽನ್ಯೋ ನ ಭವತ್ಯೇವ ತಾದೃಶಃ ॥೨೩೭॥

ಯಸ್ಯ ಭಕ್ತಿರ್ಮಹಾದೇವೇ ಧಾರಾರೂಪಾನುವರ್ತತೇ ।
ನಮಸ್ತಸ್ಮೈ ಸವಂಶಾಯ ಸಮಿತ್ರಾಯ ಚತುರ್ಮುಖ ॥೨೩೮॥

ಶಿವೌ ಪೂಜ್ಯೌ ಯಥಾನಿತ್ಯಂ ತಥಾ ಪೂಜ್ಯಃ ಶಿವಾರ್ಚಕಃ ।
ಶಿವಾರ್ಚಕಃ ಶಿವಾವೇತಿ ತ್ರಯಃ ಪೂಜ್ಯಾ ಮಮಾನ್ವಹಂ ॥೨೩೯॥

ಅನೇಕಜನ್ಮತಪಸಾ ಪೂತಃ ಪುಣ್ಯೌಘಸಂಶ್ರಯಃ ।
ಮಹಾದೇವಪರೋ ಭೂತ್ವಾ ಯಜತಿ ಶ್ರೀಮಹೇಶ್ವರಂ ॥೨೪೦॥

ಯಸ್ಯ ಶ್ರೀಮನ್ಮಹಾದೇವೇ ಭಕ್ತಿರವ್ಯಭಿಚಾರಿಣೀ ।
ತಸ್ಯ ಹೃತ್ಕಮಲೇ ಸಾಂಬಃ ಸರ್ವದಾಽಪ್ಯಧಿತಿಷ್ಠತಿ ॥೨೪೧॥

---

ಆದರೆ ಆ ವಿಘ್ನಗಳೆಲ್ಲಾ ಕ್ಷಣಕಾಲದಲ್ಲಿ ಆ ಮಹೇಶ್ವರನ ಅನುಗ್ರಹದಿಂದ ಶಾಂತವಾಗುವುವು. ॥೨೩೫-೨೩೬॥

ಈ ಶರೀರವು ನಾಶವಾಗುವವರೆಗೂ ಈಶ್ವರನಲ್ಲಿ ಯಾರಿಗೆ ಭಕ್ತಿಯು ಅನುಸರಿಸಿ ಬರುವುದೋ, ಅವರೇ ಶಿವನಿಂದ ಅನುಗ್ರಹ ಪಡೆದವರೆನಿಸುವರು. ಶಿವಭಕ್ತಿ ವಿರಹಿತರಿಗೆ ಶಿವಾನುಗ್ರಹವು ದೊರೆಯಲಾರದು. ಧಾರಾಕಾರವಾಗಿ ಮಹಾದೇವನಲ್ಲಿ ಭಕ್ತಿಯು ಯಾರಿಗೆ ಅನುಸ್ಯೂತವಾಗಿ ಬರುವುದೋ, ಅವನ ವಂಶ, ಸ್ನೇಹಿತರು ಇವರೆಲ್ಲರಿಗೂ ನಾನು ನಮಸ್ಕಾರ ಮಾಡುತ್ತೇನೆ. ॥೨೩೭-೨೩೮॥

ಪ್ರಪಂಚ ಮಾತಾಪಿತೃಗಳಾದ ಉಮಾಮಹೇಶ್ವರರಂತೆ ಶಿವಪೂಜಕನೂ ನಿತ್ಯವೂ ಪೂಜ್ಯನೆನಿಸುವನು. ನನಗೆ ಶಿವಪೂಜಕನೂ, ಉಮಾಮಹೇಶ್ವರರೂ ಈ ಮೂರು ಮಂದಿಯೂ ನಿತ್ಯವೂ ಪೂಜ್ಯರೇ ಆಗಿರುವರು. ಅನೇಕ ಜನ್ಮಗಳಲ್ಲಿ ಮಾಡಿದ ತಪಸ್ಸಿನಿಂದ ಪಾವನನಾಗಿ ಪುಣ್ಯರಾಶಿಗಳಿಗೆ ಆಶ್ರಯನೆನಿಸಿರುವವನು ಮಾತ್ರ ಮಹಾದೇವನಲ್ಲಿ ತತ್ಪರನಾಗಿ ಮಹೇಶ್ವರನನ್ನು ಪೂಜೆಮಾಡುತ್ತಾನೆ. ॥೨೩೯-೨೪೦॥

ಆ ಮಹಾದೇವನಲ್ಲಿ ಯಾವನು ನಿಶ್ಚಲವಾದ ಭಕ್ತಿಯುಳ್ಳವನೋ ಅಂತಹವನ ಹೃದಯಕಮಲದಲ್ಲಿ ಅಂಬಿಕಾರಮಣನು ಯಾವಾಗಲೂ ನೆಲಸಿರುತ್ತಾನೆ.

ಸಾಂಬಸ್ಯ ಶ್ರೀಮಹೇಶಸ್ಯ ಸನ್ನಿಧಿರ್ಯತ್ರ ಸರ್ವದಾ ।
ನ ತಸ್ಯ ಪಾಪಲೇಶೋಽಸ್ತಿ ಸತ್ಯಂ ಸತ್ಯಂ ನ ಸಂಶಯಃ ॥೨೪೨॥

ಸರ್ವತ್ರ ವಿದ್ಯಮಾನೋಽಪಿ ಶಿವೋ ಭಕ್ತಹೃದಂಬುಜೇ ।
ಲಿಂಗರೂಪಂ ಸಮಾಶ್ರಿತ್ಯ ಕ್ರೀಡಾಲೋಲೋಽಧಿತಿಷ್ಠತಿ ॥೨೪೩॥

ಊಧಸ್ಯೇವ ಯಥಾ ಕ್ಷೀರಂ ಗೋಸರ್ವಾಂಗಗತಂ ತಥಾ ।
ಶಿವಃ ಸರ್ವವ್ಯಾಪಕೋಽಪಿ ಶಿವಲಿಂಗೇಽಧಿತಿಷ್ಠತಿ ॥೨೪೪॥

ಅತಃ ಸರ್ವಂ ಪರಿತ್ಯಜ್ಯ ಶಿವಲಿಂಗಂ ಪ್ರಯತ್ನತಃ ।
ಪೂಜನೀಯಂ ವಿಧೇ ನಿತ್ಯಂ ವಿಧಿವದ್ಭಕ್ತಿಪೂರ್ವಕಂ ॥೨೪೫॥

ಶಿವಲಿಂಗೇ ಶಿವಃ ಪೂಜ್ಯೋ ನಾನ್ಯತ್ರ ತು ಕದಾಚನ ।
ಯತಃ ಶಿವೋ ಲಿಂಗರೂಪೀ ಲಿಂಗರೂಪೋಽಭಿಪೂಜ್ಯತೇ ॥೨೪೬॥

ಕ್ಷೀರೋಪಲಬ್ಧಿರ್ನ ಯಥಾ ವಿಷಾಣಾದೌ ಸ್ತನಂ ವಿನಾ ।
ಶಿವಲಿಂಗಂ ವಿನಾ ತದ್ವಚ್ಛಿವೋ ನಾನ್ಯತ್ರ ಪೂಜ್ಯತೇ ॥೨೪೭॥

---

ಅಂಬಿಕಾಪತಿಯೆನಿಸಿದ ಮಹೇಶ್ವರನ ಸಾನ್ನಿಧ್ಯವು ಅನವರತವೂ ಇರುವೆಡೆಯಲ್ಲಿ ಆ ಮಾನವನಿಗೆ ಸತ್ಯವಾಗಿಯೂ ಪಾಪಸಂಬಂಧವೇ ತೋರುವುದಿಲ್ಲ. ಇದು ಸತ್ಯ. ॥೨೪೧-೨೪೨॥

ಪರಶಿವನು ಸರ್ವವ್ಯಾಪಿಯೆನಿಸಿದ್ದರೂ ಭಕ್ತರ ಹೃದಯಕಮಲಗಳಲ್ಲಿ ಲಿಂಗಾಕಾರವನ್ನು ಪಡೆದು ಲೀಲೆಯಿಂದ ವಿಹರಿಸುತ್ತಿರುವನು. ಹಸುವಿನ ಎಲ್ಲಾ ಅವಯುವಗಳಲ್ಲಿಯೂ ಅಡಗಿರುವ ಹಾಲು ವಿಶೇಷವಾಗಿ ಕೆಚ್ಚಲಿನಲ್ಲಿಯೇ ಗೋಚರಿಸುವಂತೆ, ಆ ಶಿವನು ಸರ್ವವ್ಯಾಪಕನಾದರೂ ಶಿವಲಿಂಗಗಳಲ್ಲಿಯೇ ವಿಶೇಷವಾದ ಸಾನ್ನಿಧ್ಯವನ್ನಿಟ್ಟಿರುವನು. ಆದ್ದರಿಂದ ಎಲೈ ಬ್ರಹ್ಮನೇ, ಇತರ ಹವ್ಯಾಸಗಳನ್ನೆಲ್ಲಾ ಬಿಟ್ಟು ವಿಧಿಪೂರ್ವಕವಾಗಿ ಭಕ್ತಿಯಿಂದ ನಿಯಮಬದ್ಧನಾಗಿ ನಿತ್ಯವೂ ಶಿವಲಿಂಗವನ್ನು ಪೂಜೆಮಾಡಬೇಕು. ॥೨೪೩-೨೪೪-೨೪೫॥

ಶಿವನು ಲಿಂಗಾಕೃತಿಯುಳ್ಳವನಾಗಿ ಲಿಂಗರೂಪದಿಂದಲೇ ಪೂಜಿಸಲ್ಪಡುವನಾದ್ದರಿಂದ ಅವನನ್ನು ಶಿವಲಿಂಗದಲ್ಲಿ ಬಿಟ್ಟು ಬೇರೆಕಡೆಗಳಲ್ಲಿ ಎಂದಿಗೂ ಪೂಜೆ

ಲಿಂಗರೂಪಂ ಮಹಾದೇವಂ ಯೋಽರ್ಚಯಿಷ್ಯತಿ ಸಾದರಂ ।
ಸ ಸರ್ವಪಾಪನಿರ್ಮುಕ್ತೋ ಭವತ್ಯೇವ ನ ಸಂಶಯಃ ॥೨೪೮॥

ಕೃತ್ವಾಪ್ಯನಂತಪಾಪಾನಿ ಯದಿ ಶಂಕರಮರ್ಚಯೇತ್ ।
ಸ ಸರ್ವಪಾಪ ನಿರ್ಮುಕ್ತೋ ಭವತ್ಯೇವ ನ ಸಂಶಯಃ ॥೨೪೯॥

ಶಿವಪೂಜಾ ಕೃತಾ ಯೇನ ತತ್ಪಾಪಾನಿ ಬಹೂನ್ಯಪಿ ।
ಕ್ಷಣೇನೈವ ವಿನಶ್ಯಂತಿ ವಹ್ನಿಗಾಃ ಶಲಭಾ ಇವ ॥೨೫೦॥

ಭವಂತಿ ಭಸ್ಮಸಾದ್ವೃಕ್ಷಾ ದವದಗ್ಧಾ ಯಥಾ ವನೇ ।
ತಥಾ ಭವಂತಿ ದಗ್ಧಾನಿ ಶಾಂಕರಾಣಾಮಘಾನ್ಯಪಿ ॥೨೫೧॥

ನಿಷ್ಪಾಪಾಃ ಶಾಂಕರಾಃ ಸರ್ವೇ ಶಂಕರಧ್ಯಾನತತ್ಪರಾಃ ।
ಶಂಕರಾರಾಧನಾಸಕ್ತಾ ಮನೋವಾಕ್ಕಾಯಕರ್ಮಭಿಃ ॥೨೫೨॥

---

ಮಾಡಬಾರದು. ಹಸುವಿನ ಮೊಲೆಯನ್ನು ಬಿಟ್ಟು, ಕೊಂಬು, ಮುಂತಾದ ಇತರ ಅವಯವಗಳಲ್ಲಿ ಹಾಲು ದೊರೆಯದಿರುವಂತೆ ಶಿವಲಿಂಗವನ್ನು ಬಿಟ್ಟರೆ ಉಳಿದೆಡೆಗಳಲ್ಲಿ ಆ ಶಿವನು ಪೂಜಿಸಲ್ಪಡುವುದಿಲ್ಲ. ಲಿಂಗಸ್ವರೂಪಿಯಾದ ಮಹಾದೇವನನ್ನು ಆದರದಿಂದ ಪೂಜೆಮಾಡುವವನು ಸಕಲ ಪಾಪಗಳಿಂದಲೂ ಬಿಡುಗಡೆ ಹೊಂದುವುದರಲ್ಲಿ ಸಂದೇಹವೇ ಇಲ್ಲ. ॥೨೪೬-೨೪೭-೨೪೮॥

ಮಾನವನು ಅನೇಕ ಪಾಪಗಳನ್ನು ಮಾಡಿದ್ದರೂ ಶಂಕರನನ್ನು ಪೂಜೆ ಮಾಡುವುದರಿಂದ, ಅವನು ಸಂಶಯವಿಲ್ಲದೇ 'ಸಕಲ ಪಾಪಗಳಿಂದಲೂ ಬಿಡುಗಡೆ ಹೊಂದುತ್ತಾನೆ. ಶಿವನನ್ನು ಪೂಜೆಮಾಡಿದವನ ಸಮಸ್ತ ಪಾಪಗಳು ಬೆಂಕಿಗೆ ಬಂದು ಬಿದ್ದ ಪತಂಗದ ಹುಳುಗಳಂತೆ ಕ್ಷಣಕಾಲದಲ್ಲಿ ನಾಶವಾಗುವುವು. ಕಾಳ್ಗಿಚ್ಚಿನಿಂದ ಅರಣ್ಯದಲ್ಲಿರುವ ಮರಗಳು ಭಸ್ಮವಾಗುವಂತೆ ಶಂಕರನ ಭಕ್ತನೆನಿಸಿದವನ ಪಾಪಗಳೆಲ್ಲವೂ ಅಲ್ಪಕಾಲದಲ್ಲಿಯೇ ಬೂದಿಯಾಗುವುವು. ॥೨೪೯-೨೫೦-೨೫೧॥

ಮನಸ್ಸು, ಮಾತು ಮತ್ತು ಕರ್ಮಗಳಿಂದ ಶಂಕರನ ಧ್ಯಾನ ಮತ್ತು ಪೂಜೆಗಳಲ್ಲಿಯೇ ನಿರತರಾದ ಈಶ್ವರಭಕ್ತರೆಲ್ಲರೂ ಪಾಪರಹಿತರಾಗುವರು. ಶಂಕರನ ಪೂಜೆಯಂತೆಯೇ ಶಂಕರಭಕ್ತನ ಪೂಜೆಯಲ್ಲಿಯೂ ಮಹಿಮೆಯಿದೆ. ಆದರಿಂದಲೇ

ಯಥಾ ಶಂಕರಪೂಜಾಯಾಮುತ್ಸುಕಂ ಜಾಯತೇ ಮನಃ ।
ತಥಾ ಶಾಂಕರಪೂಜಾಯಾಮಪ್ಯುದ್ಯುಕ್ತಂಚ ಮನೋ ಮಮ ॥೨೫೩॥

ಸಿತೇನ ಭಸ್ಮನಾ ನಿತ್ಯಮುದ್ಧೂಳ್ಯಾಪಾದಮಸ್ತಕಂ ।
ಯಃ ಪೂಜಯತಿ ಗೌರೀಶಂ ಸ ಮೋಕ್ಷಮಧಿಗಚ್ಛತಿ ॥೨೫೪॥

ಭಸ್ಮೋದ್ಧೂಳಿತಸರ್ವಾಂಗೋ ಯೋ ಜಪೇಚ್ಛಾಂಭವಂ ಮನುಂ ।
ಸ ಮಹಾಪಾಪನಿರ್ಮುಕ್ತಃ ಸದ್ಯ ಏವ ಭವಿಷ್ಯತಿ ॥೨೫೫॥

ಏಕೇನಾಪಿ ಜಲಾರ್ದ್ರೇಣ ಬಿಲ್ವಪತ್ರೇಣ ಶಂಕರಂ ।
ಯಃ ಪೂಜಯತಿ ಯತ್ನೇನ ಸ ಪಾಪೇಭ್ಯೋ ವಿಮುಚ್ಯತೇ ॥೨೫೬॥

ಭಕ್ತ್ಯಾ ಬಿಲ್ವದಳೈರೀಶಂ ಯಃ ಪೂಜಯತಿ ಸರ್ವದಾ ।
ಸ ವಂಶಕೋಟಿಸಂಯುಕ್ತಃ ಶಿವಲೋಕಂ ಪ್ರಯಾಸ್ಯತಿ ॥೨೫೭॥

ನನ್ನ ಪೂರ್ಣ ಮನಸ್ಸು ಶಾಂಭವರ ಆರಾಧನೆಯಲ್ಲಿಯೂ ಉದ್ಯುಕ್ತವಾಗಿದೆ. ||೨೫೨-೨೫೩||

ನಿತ್ಯವೂ ಕಾಲಿನಿಂದ ತಲೆಯವರೆಗೂ ಶುಭ್ರವಾದ ವಿಭೂತಿಯನ್ನು ಲೇಪನ ಮಾಡಿಕೊಂಡು, ಗೌರೀರಮಣನನ್ನು ತಪ್ಪದೆ ಪೂಜೆಮಾಡುವವನು ಮೋಕ್ಷವನ್ನು ಹೊಂದುತ್ತಾನೆ. ಸಕಲ ಅವಯುವಗಳಿಗೂ ಭಸ್ಮವನ್ನು ಲೇಪನಮಾಡಿಕೊಂಡು ಶಂಭುವಿನ ಸಂಬಂಧವಾದ ಮಂತ್ರವನ್ನು (ಶಿವಪಂಚಾಕ್ಷರ ಮಂತ್ರವನ್ನು) ಜಪ ಮಾಡುವವನು ಕೂಡಲೆ ಸಮಸ್ತ ಮಹಾಪಾಪಗಳಿಂದಲೂ ಬಿಡುಗಡೆ ಹೊಂದುತ್ತಾನೆ. ||೨೫೪-೨೫೫||

ನೀರಿನಿಂದ ನೆನೆಸಿದ ಒಂದೇಒಂದು ಬಿಲ್ವದಳದಿಂದಲಾದರೂ ನಿಯಮ ಪೂರ್ವಕವಾಗಿ ಶಂಕರನನ್ನು ಪೂಜೆಮಾಡುವವನು ಸಕಲ ಪಾಪಗಳಿಂದಲೂ ಮುಕ್ತನಾಗುತ್ತಾನೆ. ಅನವರತವೂ ಬಿಲ್ವಪತ್ರೆಗಳಿಂದ ಪರಮೇಶ್ವರನನ್ನು ತೃಪ್ತಿಪಡಿಸುವವರು ತನ್ನ ಕೋಟಿವಂಶಗಳ ಸಮೇತವಾಗಿ ಶಿವಲೋಕವನ್ನೈದುವರು. ||೨೫೬-೨೫೭||

ಯಃ ಸಕೃತ್ಪೂಜಯಿತ್ವಾಪಿ ಶಂಕರಂ ಲೋಕಶಂಕರಂ ।
ಪ್ರಯಾತಿ ಶಿವಸಾಯುಜ್ಯಂ ಕಿಂ ಪುನರ್ನಿತ್ಯಪೂಜಯಾ ॥೨೫೮॥

ನಿತ್ಯಂ ಬಿಲ್ವದಲೈರೀಶಃ ಪೂಜನೀಯಃ ಪ್ರಯತ್ನತಃ ।
ವೇದೋಕ್ತಶಿವಮಂತ್ರೇಣ ಚತುರ್ವರ್ಗಫಲಾರ್ಥಿಭಿಃ ॥೨೫೯॥

ಶಿವಲಿಂಗಾರ್ಚನೇನೈವ ಮುಕ್ತಿರ್ಭವತಿ ಸರ್ವಥಾ ।
ತಸ್ಮಾತ್ಪ್ರಯತ್ನತಃ ಕಾರ್ಯಂ ನಿತ್ಯಂ ಶಂಕರಪೂಜನಂ ॥೨೬೦॥

ಶಿವಾರ್ಚನಪರಾ ಧೀರಾ ಭವಂತಿ ಭುವಿ ಧಾರ್ಮಿಕಾಃ ।
ತೇ ಭವಂತಿ ಶಿವಾಕಾರಾ ಯತಸ್ತೇ ಶಿವಪೂಜಕಾಃ ॥೨೬೧॥

ಪಾಪಾದ್ರಿಪಕ್ಷವಿಚ್ಛೇದದಕ್ಷವಜ್ರಂ ಶಿವಾರ್ಚನಂ ।
ಸತ್ಯಮೇತತ್ಪುನಃ ಸತ್ಯಮುದ್ಧೃತ್ಯ ಭುಜಮುಚ್ಯತೇ ॥೨೬೨॥

ಭಕ್ತಿಯಿಂದ ಒಂದುಬಾರಿ ಪೂಜೆಮಾಡಿದ ಮಾತ್ರದಿಂದಲೇ ಜಗನ್ಮಂಗಳಕರನಾದ ಶಂಕರನ ಸಾಯುಜ್ಯವನ್ನು ಹೊಂದುವಾಗ ನಿತ್ಯವೂ ಆ ಶಿವನನ್ನು ಪೂಜೆಮಾಡಿದವನ ವಿಷಯದಲ್ಲಿ ಹೇಳುವುದೇನು ? ಧರ್ಮ, ಅರ್ಥ, ಕಾಮ ಮತ್ತು ಮೋಕ್ಷರೂಪವಾದ ಪುರುಷಾರ್ಥಫಲಗಳನ್ನಪೇಕ್ಷಿಸುವವರು ನಿತ್ಯವೂ ಬಿಲ್ವದಳಗಳನ್ನು ಸಂಪಾದಿಸಿ ವೇದಪ್ರತಿಪಾದಿತಗಳಾದ ಶಿವಮಂತ್ರಗಳಿಂದ ನಿತ್ಯವೂ ಆ ಈಶ್ವರನನ್ನು ಪೂಜೆಮಾಡಬೇಕು. ಆ ಶಿವಲಿಂಗಪೂಜೆಯಿಂದಲೇ ಖಂಡಿತವಾಗಿಯೂ ಮುಕ್ತಿ ಲಭಿಸುವುದರಿಂದ ನಿಯಮದಿಂದ ಮುಮುಕ್ಷುಗಳಾದ ಎಲ್ಲರೂ ಶಂಕರನನ್ನು ಪೂಜೆಮಾಡಲೇಬೇಕು. ॥೨೫೮-೨೫೯-೨೬೦॥

ಭೂಮಿಯಲ್ಲಿ ಶಿವಪೂಜಾನಿರತರೂ, ಧೀರರೂ ಆದ ಮಾನವರು ಧರ್ಮಿಷ್ಠರೆನಿಸುವರು. ಅವರು ಶಿವನನ್ನೇ ಪೂಜೆಮಾಡುವುದರಿಂದ ಕೊನೆಗೆ ಅವರು ಶಿವನ ಸಾರೂಪ್ಯರೂಪವಾದ ಮುಕ್ತಿಯನ್ನೇ ಹೊಂದುವರು. ಈ ಶಿವಪೂಜೆಯು ಪಾಪಗಳೆಂಬ ಬೆಟ್ಟಗಳ ರೆಕ್ಕೆಗಳನ್ನು ಕಡಿದುಹಾಕುವುದರಲ್ಲಿ ವಜ್ರಾಯುಧದಂತೆ ಸಮರ್ಥವಾದುದು. ಇದು ಸತ್ಯವೆಂದು ಪದೇಪದೇ ಭುಜವೆತ್ತಿ ಸಾರುವೆನು. ॥೨೬೧-೨೬೨॥

ಬಿಲ್ವೈಃ ಶಿವಾರ್ಚನಂ ಕರ್ತುಂ ಯತತೇ ಯೋ ಯದಾ ತದಾ ।
ರುದಂತಿ ಪಾಪಗಿರಯಃ ಕ್ವ ಗಂತವ್ಯಮಿತಿ ಧ್ರುವಂ ॥೧೬೩॥

ಪ್ರಯಚ್ಛತಿ ಯದಾ ಭಕ್ತ್ಯಾ ಯೋ ಬಿಲ್ವಂ ಲಿಂಗಮಸ್ತಕೇ ।
ತದಾ ತದಘಸಂಘಾತೋ ದಗ್ಧೋ ಭವತಿ ಸರ್ವಥಾ ॥೧೬೪॥

ಯೋ ನಿತ್ಯಂ ಭಸ್ಮಪೂತಾಂಗಃ ಶಿವಪೂಜೋನ್ಮುಖೋ ಭವೇತ್ ।
ಸ ತರತ್ಯೇವ ಸಂಸಾರಮಘೋರಮತಿದಾರುಣಂ ॥೧೬೫॥

ಭಕ್ತಿಶ್ರದ್ಧಾಕೃತಂ ಬ್ರಹ್ಮನ್ ಶ್ರೀಮಹಾದೇವಪೂಜನಂ ।
ಘೋರಸಂಸಾರಕಾಲಾಹಿವಿಷಭೇಷಜಮುಚ್ಯತೇ ॥೧೬೬॥

ಸಂಸಾರಸರ್ಪದಷ್ಟಾನಾಂ ಶಿವಪೂಜೈವ ಭೇಷಜಂ ।
ಶಿವಪೂಜಾತಿರಿಕ್ತಂ ತು ನೈವ ತದ್ವಿಷಭೇಷಜಂ ॥೧೬೭॥

ಸಂಸಾರನಾಶನೋಪಾಯಃ ಶಿವಸ್ಯೈವಾರ್ಚನಂ ವಿಧೇ ।
ಸಂಸಾರನಾಶನೋಪಾಯಸ್ತದನ್ಯೋ ನೈವ ದೃಶ್ಯತೇ ॥೧೬೮॥

ಮಾನವನು ಬಿಲ್ವದಳಗಳಿಂದ ಶಿವಪೂಜೆಮಾಡಲು ಪ್ರಯತ್ನಪಡುವಾಗಲೆಲ್ಲಾ ಗಿರಿಗಳಂತಿರುವ ಅವನ ಪಾಪರಾಶಿಯು ನಾವಿನ್ನೆಲ್ಲಿ ಹೋಗೋಣವೆಂಬುದಾಗಿ ಗೋಳಾಡುವುದು. ಇದು ಸತ್ಯವೆಂದು ತಿಳಿ. ಭಕ್ತಿಯಿಂದ ಶಿವಲಿಂಗದ ತಲೆಯ ಮೇಲೆ ಬಿಲ್ವದಳವನ್ನು ಪೂಜೆಮಾಡಿದಾಗ ಆತನ ಪಾಪರಾಶಿಯು ನಿಶ್ಚಯವಾಗಿಯೂ ಸುಟ್ಟು ಭಸ್ಮವಾಗಿಬಿಡುವುದು. ॥೧೬೩-೧೬೪॥

ನಿತ್ಯವೂ ವಿಭೂತಿಧಾರಣೆಯಿಂದ ಪವಿತ್ರವಾದ ಅವಯವವುಳ್ಳವನಾಗಿ ಶಿವಪೂಜಾತತ್ಪರನಾಗುವವನು ಅತ್ಯಂತ ಘೋರವಾದ ಈ ಸಂಸಾರವನ್ನು ಖಂಡಿತವಾಗಿ ದಾಟುತ್ತಾನೆ. ಓ ಬ್ರಹ್ಮನೇ, ಭಕ್ತಿ ಶ್ರದ್ಧೆಗಳಿಂದ ಮಾಡಿದ ಶ್ರೀ ಮಹಾದೇವನ ಪೂಜೆಯು ಭಯಂಕರವಾದ ಸಂಸಾರವೆಂಬ ಕೃಷ್ಣಸರ್ಪದ ವಿಷವನ್ನು ನಿರ್ಮೂಲಗೊಳಿಸುವ ಔಷಧರೂಪವಾಗಿರುವುದೆಂದು ಹೇಳಲ್ಪಟ್ಟಿರುವುದು. ॥೧೬೫-೧೬೬॥

ಸಂಸಾರವೆಂಬ ಸರ್ಪಗಳಿಂದ ಕಚ್ಚಲ್ಪಟ್ಟವರಿಗೆ ಆ ಶಿವಪೂಜೆಯೇ ಒಂದು ಪರಮೌಷಧವು. ಅದನ್ನು ಬಿಟ್ಟು ಬೇರೆ ಯಾವುದೂ ಸಂಸಾರರೂಪವಾದ ಹಾವಿನ

ಬ್ರಹ್ಮಸ್ವಹರಣಂ ಕೃತ್ವಾ ಹತ್ವಾಪಿ ಬ್ರಾಹ್ಮಣಾನ್ಬಹೂನ್
ನ ಲಿಪ್ಯತೇ ನರಃ ಪಾಪೈರ್ವಿರೂಪಾಕ್ಷಸಮರ್ಚಕಃ ॥೨೬೯॥

ವಿಲೋಕ್ಯ ವೇದಾನಖಿಲಾನ್ ಶಿವಸ್ಯೈವಾರ್ಚನಂ ಪರಂ
ಸಂಸಾರನಾಶನೋಪಾಯ ಇತಿ ಪೂರ್ವಂ ವಿನಿಶ್ಚಿತಂ ॥೨೭೦॥

ಅನಂತೈರ್ವಿವಿಧೈರ್ವೇದೈರ್ವೇದಾಂತೈರಾಗಮೈರಪಿ ।
ಶಿವ ಏವ ಸದಾ ಪೂಜ್ಯೋ ನಾನ್ಯ ಇತ್ಯುಚ್ಯತೇ ಧ್ರುವಂ ॥೨೭೧॥

ಶಿವಪೂಜಾ ಬಹುವಿಧಾ ಕಥ್ಯತೇ ನಿಗಮೈರ್ವಿಧೇ ।
ಆಗಮೈರಪಿ ಸಾ ಪೂಜಾ ವಿವಿಧೈವೇತಿ ಕಥ್ಯತೇ ॥೨೭೨॥

ಷೋಡಶೈರುಪಚಾರೈಶ್ಚ ಪೂಜನೀಯೋಽನ್ವಹಂ ಶಿವಃ ।
ತೇಷು ಮಂತ್ರಾಶ್ಚ ವಿವಿಧಾ ನಿಗಮಾಗಮಚೋದಿತಾಃ ॥೨೭೩॥

ವಿಷಕ್ಕೆ ಔಷಧವೆನಿಸಲಾರದು. ಅಯ್ಯ ಬ್ರಹ್ಮದೇವನೇ, ಈ ಸಂಸಾರದುಃಖವನ್ನು ನಾಶಮಾಡುವುದೆಂದರೆ ಆ ಶಿವಪೂಜೆಯೊಂದೇ ಸರಿ. ಬೇರೆ ಯಾವುದೂ ಕಾಣುವುದಿಲ್ಲವೆಂದು ತಿಳಿ. ॥೨೬೭-೨೬೮॥

ಬ್ರಾಹ್ಮಣರ ದ್ರವ್ಯವನ್ನಪಹರಿಸಿದ್ದರೂ, ಅನೇಕಮಂದಿ ಬ್ರಾಹ್ಮಣರನ್ನೇ ಕೊಂದಿದ್ದರೂ, ವಿರೂಪಾಕ್ಷನನ್ನು ಭಕ್ತಿಯಿಂದರ್ಚಿಸುವ ಮಾನವನಿಗೆ ಆ ಪಾಪಗಳು ಎಂದಿಗೂ ಸಂಬಂಧಿಸುವುದಿಲ್ಲ. ಸಕಲ ವೇದಗಳನ್ನೂ ನೋಡಿ ಈ ಸಂಸಾರವನ್ನು ನಾಶಮಾಡಲು ಶಿವಪೂಜೆಯೊಂದೇ ಉತ್ಕೃಷ್ಟವಾದುದೆಂದು ಹಿಂದೆ ತೀರ್ಮಾನ ಮಾಡಲ್ಪಟ್ಟಿದೆ. ॥೨೬೯-೨೭೦॥

ಅಪರಿಮಿತವೂ ವಿಧವಿಧವೂ ಆದ ವೇದಗಳು, ವೇದಾಂತ ಮತ್ತು ಆಗಮಗಳಿಂದ ಆ ಶಿವನೇ ಪೂಜ್ಯನು, ಇತರರು ಪೂಜ್ಯರಲ್ಲವೆಂದು ನಿಶ್ಚಯವಾಗಿಯೂ ಹೇಳಲ್ಪಡುತ್ತಿದೆ. ಎಲೈ ಬ್ರಹ್ಮನೇ, ವೇದಗಳೂ, ಆಗಮಗಳೂ ಆ ಶಿವಪೂಜೆಯು ಬಗೆಬಗೆಯಾಗಿವೆಯೆಂದು ಹೇಳುತ್ತಿವೆ. ॥೨೭೧-೨೭೨॥

ಪ್ರತಿದಿನವೂ ಆವಾಹನ, ಆಸನಪ್ರದಾನಾದಿಯಾದ ಹದಿನಾರು . ಉಪಚಾರಗಳಿಂದ ಆ ಶಿವನನ್ನು ಪೂಜೆಮಾಡಬೇಕು. ಆ ಪೂಜೆಮಾಡಲು, ವೇದಗಳು ಮತ್ತು

ಮಂತ್ರಾಃ ಶಿವಪರಾಃ ಸರ್ವೇ ನಿಗಮಾಗಮಚೋದಿತಾಃ ।
ಸಮ್ಯಗ್ಜ್ಞಾತುಂ ನ ಶಕ್ಯಂತೇ ವಿವಿಧಾ ಬಹವೋ ಯತಃ ॥೨೭೪॥

ತಥಾಪಿ ತೇಷು ಮಂತ್ರೇಷು ಶಿವಪಂಚಾಕ್ಷರಃ ಪರಃ ।
ತೇನ ಮಂತ್ರೇಣ ವಿಶ್ವೇಶಃ ಪೂಜನೀಯಃ ಪ್ರಯತ್ನತಃ ॥೨೭೫॥

ಶಿವಪಂಚಾಕ್ಷರೋ ಮಂತ್ರಃ ಸರ್ವಮಂತ್ರೋತ್ತಮೋತ್ತಮಃ ।
ನ ತಸ್ಮಾದಧಿಕೋ ಮಂತ್ರೋ ವೇದಮಂತ್ರೇಷು ದೃಶ್ಯತೇ ॥೨೭೬॥

ಶಿವಪಂಚಾಕ್ಷರೋ ಮಂತ್ರೋ ವೈದಿಕೋ ವೇದಸಂಮತಃ ।
ವೇದೇಷು ಪಠ್ಯತೇ ತದ್ವದ್ವೇದಾಂತೇಷ್ವಪಿ ಪಠ್ಯತೇ ॥೨೭೭॥

ಋಷಿಭಿಃ ಸಂಸ್ತುತೋ ಮಂತ್ರಃ ಶಿವಮಂತ್ರೋ ಮುಮುಕ್ಷುಭಿಃ ।
ಶಿವೇನಾಪಿ ಸ್ತುತೋ ಮಂತ್ರಃ ಶಿವಮಂತ್ರಃ ಶಿವಪ್ರದಃ ॥೨೭೮॥

ಆಗಮಗಳಲ್ಲಿ ನಾನಾವಿಧವಾದ ಮಂತ್ರಗಳು ಹೇಳಲ್ಪಟ್ಟಿವೆ. ಶಿವಪರವಾದ ವೇದಾಗಮಗಳಲ್ಲಿ ಹೇಳಿದ ಮಂತ್ರಗಳೆಲ್ಲವೂ ಅಪಾರವಾಗಿರುವುದರಿಂದ ಅವುಗಳನ್ನು ಚೆನ್ನಾಗಿ ಅರಿಯಲು ಸಾಧ್ಯವಾಗುವುದಿಲ್ಲ ॥೨೭೩-೨೭೪॥

ಆದರೂ ಆ ಮಂತ್ರಗಳಲ್ಲೆಲ್ಲಾ ಶಿವಪಂಚಾಕ್ಷರಮಂತ್ರವು ಉತ್ಕೃಷ್ಟವೆನಿಸಿರುವುದು. ಆ ಶಿವಪಂಚಾಕ್ಷರಮಂತ್ರದಿಂದ ವಿಶ್ವೇಶ್ವರನನ್ನು ನಿಯಮಪೂರ್ವಕವಾಗಿ ಧ್ಯಾನಿಸಿ ಪೂಜಿಸಬೇಕು. ಸಕಲ ಮಂತ್ರಗಳಲ್ಲಿಯೂ ಶಿವಪಂಚಾಕ್ಷರಮಂತ್ರವು ಅತ್ಯುತ್ತಮವೆನಿಸಿರುವುದು. ವೇದಮಂತ್ರಗಳಲ್ಲಿ ಶಿವಪಂಚಾಕ್ಷರಕ್ಕಿಂತ ಉತ್ತಮವಾದ ಮಂತ್ರವೇ ಬೇರೊಂದಿಲ್ಲ. ॥೨೭೫-೨೭೬॥

ವೇದಸಂಮತವೂ, ವೈದಿಕವೂ ಆದ ಶಿವಪಂಚಾಕ್ಷರ ಮಂತ್ರವು ವೇದಗಳಲ್ಲಿಯೂ, ವೇದಾಂತಗಳಲ್ಲಿಯೂ ಸಹ ಹೊಗಳಲ್ಪಟ್ಟಿದೆ. ಮೋಕ್ಷಾಪೇಕ್ಷಿಗಳಾದ ಋಷಿಗಳು ಆ ಶಿವಮಂತ್ರವನ್ನು ಬಹಳವಾಗಿ ಸ್ತೋತ್ರಮಾಡಿದ್ದಾರೆ. ಮಂಗಳಪ್ರದವಾದ ಈ ಶಿವಮಂತ್ರವನ್ನು ಸಾಕ್ಷಾತ್ಪರಶಿವನೂ ಹೊಗಳಿದ್ದಾನೆ. ॥೨೭೭-೨೭೮॥

ಮಂತ್ರಮಾಲಾಮಧ್ಯವರ್ತೀ ಶಿವಮಂತ್ರಶಿರೋಮಣಿಃ ।
ಈದೃಶೋ ಮಂತ್ರಮಾಲಾಸ್ಥೋ ಮಣಿರತ್ಯಂತದುರ್ಲಭಃ ॥೨೭೯॥

ವೇದಾವತಂಸೋ ಮಂತ್ರೋಽಯಂ ಶಿವಪಂಚಾಕ್ಷರಸ್ತತಃ ।
ತೇನ ಮಂತ್ರೇಣ ಕರ್ತವ್ಯಂ ಶಿವಲಿಂಗಾರ್ಚನಂ ಬುಧೈಃ ॥೨೮೦॥

ಅನೇನ ಶಿವಮಂತ್ರೇಣ ವೇದಾಃ ಸರ್ವೇಽಪ್ಯಲಂಕೃತಾಃ ।
ಅತೋಽನೇನೈವ ಕರ್ತವ್ಯಂ ಶ್ರೀಮಹಾದೇವಪೂಜನಂ ॥೨೮೧॥

ಅನೇನೈವ ಹಿ ಮಂತ್ರೇಣ ಮಂತ್ರಾಃ ಸರ್ವೇಽಪ್ಯಲಂಕೃತಾಃ ।
ಅತೋಽನೇನೈವ ಮಂತ್ರೇಣ ಕರ್ತವ್ಯಂ ಶಂಕರಾರ್ಚನಂ ॥೨೮೨॥

ಶ್ರೀಮತ್ಪಂಚಾಕ್ಷರೇ ಮಂತ್ರೇ ಸರ್ವಾಘೌಘವಿನಾಶಕೇ ।
ಸ್ಮೃತೇಽಪಿ ಪಾಪಗಿರಯೋ ಭವಂತ್ಯೇವ ಹಿ ಭಸ್ಮಸಾತ್ ॥೨೮೩॥

ಪುರಾ ದ್ವಿಜಾಧಮಃ ಕಶ್ಚಿದಾಜನ್ಮಾಮರಣಂ ತದಾ ।
ಚಕಾರಾಶೇಷಪಾಪಾನಿ ದುರ್ವೃತ್ತವಿವೃತೋ ವಿಧೇ ॥೨೮೪॥

ಶಿವಮಂತ್ರ ಚೂಡಾಮಣಿಯೆನಿಸಿದ ಇದು ಸಕಲಮಂತ್ರಗಳ ಮಾಲೆಯ ಮಧ್ಯದಲ್ಲಿ ಶೋಭಿಸುತ್ತಿದೆ. ಇಂತಹ ಮಂತ್ರಮಾಲೆಯಲ್ಲಿರುವ ಈ ರತ್ನವು ಅತ್ಯಂತ ದುರ್ಲಭವಾದದ್ದು. ಆ ಶಿವಪಂಚಾಕ್ಷರಮಂತ್ರವು ವೇದಗಳಿಗೆ ಶಿರೋಭೂಷಣವಾದ ಮಂತ್ರವೆನಿಸಿದೆ. ಪಂಡಿತರಾದವರು ಆ ಮಂತ್ರದಿಂದ ಶಿವಲಿಂಗವನ್ನು ತಪ್ಪದೆ ಪೂಜೆಮಾಡಬೇಕು. ॥೨೭೯-೨೮೦॥

ಈ ಶಿವಪಂಚಾಕ್ಷರಮಂತ್ರದಿಂದ, ವೇದಗಳೆಲ್ಲವೂ ಅಲಂಕರಿಸಲ್ಪಟ್ಟಿರುವುದ ರಿಂದ ಆ ಮಂತ್ರದಿಂದಲೇ ಶ್ರೀ ಮಹಾದೇವನನ್ನು ಪೂಜೆಮಾಡಬೇಕು. ಅಲ್ಲದೆ ಸಕಲ ಮಂತ್ರಗಳೂ ಸಹ ಈ ಶಿವಮಂತ್ರದಿಂದಲೇ ಶಕ್ತಿಯುತವಾಗಿರುವುವು. ಈ ಕಾರಣದಿಂದಲೇ ಎಲ್ಲರೂ ಈ ಮಂತ್ರವನ್ನುಚ್ಚರಿಸಿಯೇ ಆ ಶಂಕರನನ್ನು ಪೂಜೆ ಮಾಡಬೇಕು. ॥೨೮೧-೨೮೨॥

ಸಕಲ ಪಾಪರಾಶಿಗಳನ್ನೂ ನಾಶಮಾಡುವ ಸಂಪತ್ಕರವಾದ ಶಿವಪಂಚಾಕ್ಷರ ಮಂತ್ರವನ್ನು ಸ್ಮರಣೆಮಾಡಿದರೂ ಪಾಪರೂಪವಾದ ಬೆಟ್ಟಗಳು ಭಸ್ಮವಾಗಿ ಬಿಡು

ತೇನ ಯಾವಂತಿ ಪಾಪಾನಿ ಕೃತಾನಿ ಪ್ರತಿವಾಸರಂ ।
ತಾನಿ ತಾವಂತಿ ಪಾಪಾನಿ ಸಂಖ್ಯೇಯಾನಿ ನ ಸರ್ವಥಾ ॥೨೮೫॥

ಏತಾದೃಶಃ ಸ ಪಾಪಿಷ್ಠಃ ಕದಾಚಿದ್ವಿಪಿನಂ ಯಯೌ ।
ತತ್ರಾಪಶ್ಯತ್ಸರೋ ರಮ್ಯಂ ಪದ್ಮವೃಂದನಿಷೇವಿತಂ ॥೨೮೬॥

ರಾಜಹಂಸಸಮಾಕೀರ್ಣಂ ಚಂಡಕಾರಂಡಮಂಡಿತಂ ।
ಡಿಂಡೀರಗಣಸಂಕೀರ್ಣಂ ಕುಂದಮಂಡಲಮಂಡಿತಂ ॥೨೮೭॥

ದದರ್ಶ ತತ್ರ ಚಂಡಾಲೀಮುದ್ದಂಡಕುಚಮಂಡಿತಾಂ ।
ದೋರ್ದಂಡೇ ಧೃತಡಿಂಡೀರಾಮುದ್ದಂಡಮುಖಮಂಡಲಾಂ ॥೨೮೮॥

ಜಲಾವಗಾಹನಪರಾಂ ವಿವಸ್ತ್ರಾಂ ಮದನಾತುರಃ ।
ಬಭಾಷೇ ವಚನಂ ವಿಪ್ರೋ ಮಂದಹಾಸಪುರಸ್ಸರಂ ॥೨೮೯॥

ವುವು. ಅಯ್ಯ ಬ್ರಹ್ಮನೇ, ಇದಕ್ಕೊಂದು ಇತಿಹಾಸವಿದೆ. ಹಿಂದೆ ಬ್ರಾಹ್ಮಣಾಧಮನೊಬ್ಬನು ಹುಟ್ಟಿದಾರಭ್ಯ ಸಾಯುವವರೆಗೂ ದುರುಳತನದಿಂದ ಕೊಬ್ಬಿ ಸಕಲ ಪಾಪಕಾರ್ಯಗಳನ್ನು ನಡೆಸುತ್ತಿದ್ದನು. ॥೨೮೩-೨೮೪॥

ಅವನು ಪ್ರತಿದಿನವೂ ಮಾಡಿದ್ದ ಪಾಪಕಾರ್ಯಗಳನ್ನು ಖಂಡಿತವಾಗಿಯೂ ಎಣಿಸುವುದಕ್ಕೆ ಸಾಧ್ಯವಿರಲಿಲ್ಲ. ಇಂತಹ ಆ ಪಾಪಿಯು ಒಂದುದಿನ ಕಾಡಿಗೆ ಹೋದನು. ಅಲ್ಲಿ ಒಂದೆಡೆ ತಾವರೆಯ ಗುಂಪಿನಿಂದ ಸೇವಿಸಲ್ಪಟ್ಟು ಮನೋಹರವಾಗಿರುವ ಒಂದು ಸರೋವರವನ್ನು ಕಂಡನು. ಆ ಸರೋವರದಲ್ಲಿ ರಾಜಹಂಸಗಳು ಗುಂಪುಗುಂಪಾಗಿದ್ದು, ಬಣ್ಣಬಣ್ಣದ ನೀರು ಹಕ್ಕಿಗಳು ಆ ಸರೋವರಕ್ಕೆ ಅಲಂಕಾರವನ್ನುಂಟುಮಾಡುತ್ತಿದ್ದುವು. ನೀರಿನ ಮೇಲೆ ವಿಶೇಷವಾದ ನೊರೆಯಿಂದ ಬೆಳಗುತ್ತಿದ್ದ ಆ ಸರೋವರದ ದಡದಲ್ಲಿ ಮಲ್ಲಿಗೆಯ ಬಳ್ಳಿಗಳು ಪುಷ್ಪಭರಿತಗಳಾಗಿ ಶೋಭಿಸುತ್ತಿದ್ದವು. ॥೨೮೫-೨೮೬-೨೮೭॥

ಅಂತಹ ದಿವ್ಯಸರೋವರದಲ್ಲಿ ಆ ಬ್ರಾಹ್ಮಣಾಧಮನು ಉನ್ನತವಾದ ಸ್ತನಮಂಡಲಗಳಿಂದ ಯುಕ್ತಳಾಗಿ ದಂಡದಂತೆ ನೀಳವಾಗಿರುವ ತನ್ನ ಕೈಯಿಂದ ನೀರಿನ ನೊರೆಯನ್ನು ತೆಗೆದುಕೊಳ್ಳುತ್ತಾ, ವಿಶಾಲವಾದ ಮತ್ತು ಮಂಡಲಾಕಾರ

|| ದ್ವಿಜಾಧಮ ಉವಾಚ ||

ಅಯಿ ಬಾಲೇ ಕ್ವತೇ ಭರ್ತಾ ನಗರೇಽಪಿ ಕ್ವ ತೇ ಗೃಹಂ ।
ಇದಂ ಸರ್ವಮಶೇಷೇಣ ಯಥಾರ್ಥಂ ವದ ಸತ್ವರಂ ॥೨೯೦॥

|| ವಿಷ್ಣುರುವಾಚ ||

ಇತಿ ತದ್ವಚನಂ ಶ್ರುತ್ವಾ ಚಂಡಾಲೀ ಸಾ ರಜಸ್ವಲಾ ।
ವಿಜ್ಞಾಯ ಸ್ವಾಮಸಂಭಾಷ್ಯಾಂ ತಥಾಪ್ಯಾಹಾತಿವಿಸ್ಮಿತಾ ॥೨೯೧॥

|| ಚಂಡಾಲ್ಯುವಾಚ ||

ಮದ್ಗೃಹಸ್ಯೋಪಯೋಗಃ ಕೋ ಮದ್ಭರ್ತುರಪಿ ತೇ ದ್ವಿಜ
ಗಚ್ಛ ಗಚ್ಛ ಸ್ವಮಾರ್ಗೇಣ ಯತ್ರ ಗಚ್ಛಸಿ ಸತ್ವರಂ ॥೨೯೨॥

ವಿವಸ್ತ್ರಾಂ ಜಲತೀರಸ್ಥಾಂ ಮಾ ವಿಲೋಕಯ ಮಾಂ ದ್ವಿಜ ।
ವಿವಸ್ತ್ರಾಂ ಯುವತೀಂ ದೃಷ್ಟ್ವಾ ದೂರೇ ಗಚ್ಛಂತಿ ಸಾಧವಃ ॥೨೯೩॥

---

ವಾಗಿರುವ ಮುಖದಿಂದ ಶೋಭಿಸುತ್ತಾ ಜಲಕ್ರೀಡೆಯಾಡಲು ಉದ್ಯುಕ್ತಳಾಗಿ ಬೆತ್ತಲೆಯಲ್ಲಿದ್ದ ಚಂಡಾಲಕನ್ಯೆಯನ್ನು ನೋಡಿ ಕಾಮಾತುರನಾಗಿ ಅವಳೊಡನೆ ಮಂದಹಾಸದಿಂದ ಹೀಗೆ ಮಾತನಾಡಿದನು. ||೨೮೮-೨೮೯||

"ಎಲೌ ಬಾಲಿಕೆಯೇ, ನಿನ್ನ ಗಂಡನೆಲ್ಲಿ? ಈ ಪಟ್ಟಣದಲ್ಲಿ ನಿನ್ನ ಮನೆಯು ಯಾವ ಪ್ರದೇಶದಲ್ಲಿರುವುದು? ಇವೆಲ್ಲವನ್ನೂ ವಿಸ್ತಾರವಾಗಿ ನನಗೆ ಜಾಗ್ರತೆ ತಿಳಿಸು" ||೨೯೦||

ನೀಚಬ್ರಾಹ್ಮಣನ ಆ ಅನುಚಿತ ನುಡಿಗಳನ್ನು ಕೇಳಿ ರಜಸ್ವಲೆಯಾಗಿದ್ದ ಆ ಚಂಡಾಲಿಯು, ಈ ಬ್ರಾಹ್ಮಣನನ್ನು ನೋಡಿ ಮತ್ತೊಬ್ಬರೊಡನೆ ಮಾತನಾಡಬಾರದೆಂದು ತಿಳಿದಿದ್ದರೂ ಅತಿ ವಿಸ್ಮಯಗೊಂಡವಳಾಗಿ ಇಂತೆಂದಳು. ||೨೯೧||

"ಅಯ್ಯ ಬ್ರಾಹ್ಮಣನೇ, ನನ್ನ ಮನೆ ಮತ್ತು ಪತಿ ಇವರ ವಿಷಯವನ್ನರಿಯುವುದರಿಂದ ನಿನಗಾಗುವ ಪ್ರಯೋಜನವೇನು? ಕೂಡಲೇ ನಿನ್ನ ದಾರಿಹಿಡಿದು ಜಾಗ್ರತೆ ಹೊರಡು. ವಸ್ತ್ರಹೀನಳಾಗಿ ನೀರಿನ ತೀರದಲ್ಲಿ ಏಕಾಕಿಯಾಗಿ ನಿಂತಿರುವ

ಜನಸಮ್ಮರ್ದಭೀತ್ಯಾತ್ರ ಮಯಾಪ್ಯದ್ಯ ಸಮಾಗತಂ ।
ಗತೇ ಮಯಿ ತ್ವಯಾಪ್ಯತ್ರ ಸ್ಥಾತವ್ಯಂ ಸ್ವೇಚ್ಛಯಾ ದ್ವಿಜ ॥೨೯೪॥

॥ ದ್ವಿಜಾಧಮ ಉವಾಚ ॥

ತ್ವಯಾ ಸಹಾತ್ರ ಸ್ಥಾತವ್ಯಂ ಮಯಾ ಕಮಲಲೋಚನೇ ।
ಯುವತೀಯುವಯೋರತ್ರ ಸಂಗಮಃ ಸುಖದಾಯಕಃ ॥೨೯೫॥

॥ ಚಂಡಾಲ್ಯುವಾಚ ॥

ಪತಿವ್ರತಾಸ್ಮ್ಯಹಂ ವಿಪ್ರ ಚಂಡಾಲ್ಯಪಿ ತತೋ ದ್ವಿಜ ।
ಮಾ ವದೈವಂ ಮಯಿ ಪ್ರೀತ್ಯಾ ತ್ಯಾಜ್ಯೋ ಧರ್ಮೋsತ್ರ ನ ತ್ವಯಾ॥೨೯೬॥

ಪರಸ್ತ್ರೀಗಮನಂ ಪಾಪಂ ಬಹುದಾ ಶ್ರೂಯತೇ ನ ಕಿಂ ।
ಸಾಭಿಲಾಷಂ ಪರಸ್ತ್ರೀಷು ಭಾಷಣಂ ಚಾತಿನಿಂದಿತಂ ॥೨೯೭॥

---

ನನ್ನನ್ನು ಖಂಡಿತವಾಗಿ ನೀನು ನೋಡಬೇಡ. ಬೆತ್ತಲೆಯಾಗಿರುವ ಯುವತಿಯನ್ನು ಒಂದುವೇಳೆ ಕಂಡರೆ ಸತ್ಪುರುಷರು ಹತ್ತಿರ ಕೂಡ ಬರದೇ ದೂರಸರಿದು ಹೋಗುವರು. ॥೨೯೨-೨೯೩॥

ಇತರೆಡೆಗಳಲ್ಲಿ ಜನಗಳ ಗುಂಪಿದ್ದುದರಿಂದ ನಾನಿಲ್ಲಿಗೆ ಬಂದೆನು. ಅಯ್ಯ ಬ್ರಾಹ್ಮಣನೇ, ನಾನು ಇಲ್ಲಿಂದ ಸ್ನಾನಮಾಡಿ ಹೊರಟುಹೋದಮೇಲೆ ನೀನಿಲ್ಲಿ ಸ್ವೇಚ್ಛೆಯಾಗಿ ನೆಲಸಬಹುದು" ಎಂದು ಚಂಡಾಲಿಯು ಗದರಿಸಿದಳು. ॥೨೯೪॥

ಅಷ್ಟಕ್ಕೆ ಬಿಡದೆ ಆ ದ್ವಿಜಾಧಮನು "ಎಲೌ ತಾವರೆಗಣ್ಣಿನವಳೆ, ನಿನ್ನೊಡನೆ ನಾನು ಇಲ್ಲಿರಬೇಕೆಂದಪೇಕ್ಷಿಸುವೆನು. ಈ ಸ್ಥಳವು ಯುವತೀ ಮತ್ತು ಯುವಕರಾಗಿರುವ ನಮ್ಮಿಬ್ಬರ ಪರಸ್ಪರ ಸಂಬಂಧದಿಂದ ನಮಗೆ ಆನಂದಪ್ರದವಾಗಲಿ" ಎಂದು ಆ ಚಂಡಾಲಕನ್ಯೆಯೊಡನೆ ಹೇಳಿದನು. ॥೨೯೫॥

"ಅಯ್ಯ ದ್ವಿಜನೇ, ನಾನು ಚಂಡಾಲಿಯಾಗಿದ್ದರೂ ಪತಿವ್ರತೆಯಾಗಿರುವೆನು. ಆದ್ದರಿಂದ ಹೀಗೆ ನುಡಿಯಬೇಡ. ವಿಪ್ರನೇ, ನನ್ನಮೇಲಿನ ಪ್ರೀತಿಯಿಂದ ನಿನ್ನ ಧರ್ಮವನ್ನು ಬಿಡಬೇಡ. ಪರನಾರಿಯರ ಸಂಗಮವು ಬಹಳ ಪಾಪಕರವೆಂಬುದನ್ನು

ಪತಿವ್ರತಾಸು ನಾರೀಷು ಯೋನ್ಯಥಾ ಕುರುತೇ ಮತಿಂ ।
ನ ತಸ್ಯ ನರಕಾದ್ಘೋರಾತ್ಸಹಸಾ ನಿರ್ಗಮೋ ದ್ವಿಜ ॥೨೯೮॥

ಚಂಡಾಲ್ಯಾ ಸಹ ಸಂಬಂಧಃ ಕಥಂ ವಾ ತವ ರೋಚತೇ ।
ಜುಗುಪ್ಸಾಪಿ ಕಥಂ ವಿಪ್ರ ಮಯಿ ನೈವಾಭಿಜಾಯತೇ ॥೨೯೯॥

ಬ್ರಾಹ್ಮಣಾಃ ಪಥಿ ಚಂಡಾಲಛಾಯಾಯಾ ಅಪಿ ಸಂಗಮೇ ।
ಸ್ನಾನಂ ಕುರ್ವಂತಿ ಯತ್ನೇನ ಸಚೈಲಂ ಮಂತ್ರಪೂರ್ವಕಂ ॥೩೦೦॥

ಚಂಡಾಲೀಗಮನಂ ಸಾಕ್ಷಾತ್ಕಥಂ ಕರ್ತುಂ ಸಮುದ್ಯತಃ ।
ನ ಸ್ಮರ್ಯತೇ ತ್ವಯಾ ಪ್ರಾಯಃ ಪರಲೋಕಭಯಂ ದ್ವಿಜ ॥೩೦೧॥

ಭೀತಿರ್ಭವತು ವಾ ಮಾ ವಾ ವಿಪ್ರ ತೇ ಪಾರಲೌಕಿಕೀ ।
ಭವಂತಂ ಬ್ರಾಹ್ಮಣಾಃ ಸರ್ವೇ ಬಹಿಷ್ಕುರ್ವಂತಿ ನೇಹ ಕಿಂ ॥೩೦೨॥

ನೀನು ಕೇಳಿಲ್ಲವೇನು ? ಇಚ್ಛಾಪೂರ್ವಕವಾಗಿ ಪರನಾರಿಯರೊಡನೆ ಮಾತಾಡುವುದೇ ಅತ್ಯಂತ ನಿಷೇಧವಾದುದು. ॥೨೯೬-೨೯೭॥

ಬ್ರಾಹ್ಮಣನೇ, ಪತಿವ್ರತೆಯರಾದ ಹೆಂಗಸರಲ್ಲಿ ವಿಪರೀತವಾದ ಭಾವನೆಯಿಂದ ವರ್ತಿಸುವವನಿಗೆ ಘೋರವಾದ ನರಕದಿಂದ ಜಾಗ್ರತೆ ಬಿಡುಗಡೆಯೇ ಇರುವುದಿಲ್ಲ. ವಿಪ್ರನೇ, ಚಂಡಾಲಿಯ ಸಂಬಂಧವು ನಿನಗೆ ಹೇಗೆ ರುಚಿಸುತ್ತದೆ ? ನನ್ನ ವಿಷಯದಲ್ಲಿ ನಿನಗೆ ಜುಗುಪ್ಸೆಯಾದರೂ ಆಗುವುದಿಲ್ಲವೇ ? ಬ್ರಾಹ್ಮಣರು ದಾರಿಯಲ್ಲಿ ಚಂಡಾಲರ ನೆರಳು ಸೋಕಿದರೂ ನಿಯಮದಿಂದ ಮಂತ್ರಪೂರ್ವಕವಾಗಿ ತಾವುಟ್ಟಿದ್ದ ಬಟ್ಟೆಯೊಡನೆ ಸ್ನಾನಮಾಡಿ ಶುದ್ಧರಾಗುತ್ತಾರೆ. ॥೨೯೮-೨೯೯-೩೦೦॥

ಪ್ರತ್ಯಕ್ಷವಾಗಿ ಚಂಡಾಲಸ್ತ್ರೀಸಮಾಗಮವನ್ನು ನೀನು ಹೇಗೆತಾನೆ ಮಾಡಲು ಯತ್ನಿಸುತ್ತಿರುವೆ ? ಅಯ್ಯೊ ಬ್ರಾಹ್ಮಣನೇ, ನಿನಗೆ ಪರಲೋಕದ ಭೀತಿಯು ಸ್ಮರಣೆಗೆ ಬರುತ್ತಿಲ್ಲವೆಂದು ತೋರುವುದು. ಬ್ರಾಹ್ಮಣನೇ, ಒಂದುವೇಳೆ ನಿನಗೆ ಪರಲೋಕದ ಭಯವಿಲ್ಲದಿದ್ದರೂ ನಿಮ್ಮ ಕುಲದ ಬ್ರಾಹ್ಮಣರೆಲ್ಲರೂ ನಿನ್ನನ್ನು ಬಹಿಷ್ಕರಿಸುವುದಿಲ್ಲವೆ ! ಅದಕ್ಕಾದರೂ ನೀನು ಹಿಂಜರಿಯಬೇಡವೆ ? ॥೩೦೧-೩೦೨॥

ಕಿಂ ಚಾತ್ರ ಯದಿ ಭರ್ತಾಮೇ ದೈವಾದಾಯಾತಿ ಕಾನನೇ ।
ಸ ಭವಂತಂ ಮದಾಸಕ್ತಂ ಶಸ್ತ್ರೇಣೈವ ಹನಿಷ್ಯತಿ ॥೩೦೩॥

ಮಯಾಪಿ ದೇಯಃ ಶಾಪೋಽದ್ಯ ಯದಿ ಮಾಂ ಸ್ಪ್ರಷ್ಟುಮುದ್ಯತಃ ।
ದತ್ತಃ ಪತಿವ್ರತಾಶಾಪೋ ನಾನ್ಯಥಾ ಸ ಭವಿಷ್ಯತಿ ॥೩೦೪॥

ನಾಹಂ ವಿಲೋಕಯಿಷ್ಯಾಮಿ ಭರ್ತೃಭಿನ್ನನರಂ ನವಂ ।
ವ್ರಜ ವಿಪ್ರ ತತಃ ಶೀಘ್ರಂ ಯತ್ರ ಕುತ್ರಾಪಿ ದುರ್ಮತೇ ॥೩೦೫॥

॥ ವಿಷ್ಣುರುವಾಚ

ಇತಿ ತದ್ವಚನಂ ಶ್ರುತ್ವಾ ಸ ವಿಪ್ರೋ ಮದನಾತುರಃ ।
ಚಂಡಾಲೀಗಮನಂ ಕರ್ತುಂ ಬಲಾತ್ಸಮುಪಚಕ್ರಮೇ ॥೩೦೬॥

ಮಾ ಯಾಹಿ ವಿಪ್ರ ಮಾ ಯಾಹಿ ಮಾ ಯಾಹೀತ್ಯಾಹ ಸಾ ತದಾ ।
ತದೇವ ವಾಕ್ಯಂ ಶುಶ್ರಾವ ತದ್ಭರ್ತಾ ವನಮಧ್ಯಗಃ ॥೩೦೭॥

ಅಲ್ಲದೇ ಒಂದುವೇಳೆ ಅದೃಷ್ಟವಶದಿಂದ ಕಾಡಿನಲ್ಲಿ ಸಂಚರಿಸುತ್ತಾ ಇಲ್ಲಿಗೆ ನನ್ನ ಗಂಡನೇನಾದರೂ ಬಂದರೆ, ನನ್ನೊಡನಾಸಕ್ತನಾಗಿರುವ ನಿನ್ನನ್ನು ಕತ್ತಿಯಿಂದಲೇ ಕೊಂದುಬಿಡುವನು. ಅದೂ ಅಲ್ಲದೆ ನನ್ನನ್ನು ಬಲಾತ್ಕಾರದಿಂದ ಮುಟ್ಟಲು ನೀನು ಪ್ರಯತ್ನಿಸುವೆಯಾದರೆ, ನಾನೂ ನಿನಗೆ ಶಾಪವನ್ನು ಕೊಡುವೆನು. ಪತಿವ್ರತೆಯರಿಂದ ಕೊಡಲ್ಪಟ್ಟ ಶಾಪವು ಎಂದಿಗೂ ಸುಳ್ಳಾಗಲಾರದು. ನನ್ನ ಗಂಡನಿಗಿಂತಲೂ ಬೇರೆಯವನಾದ ಪರಪುರುಷನ ಮುಖವನ್ನೇ ನಾನು ಎಂದೂ ನೋಡುವುದಿಲ್ಲ. ಬ್ರಾಹ್ಮಣನೇ, ಬುದ್ಧಿಹೀನನಾದ ನೀನು ವಿವೇಕವನ್ನು ಹೊಂದಿ ಜಾಗ್ರತೆಯಾಗಿ ನಿನ್ನ ಮನಬಂದಲ್ಲಿಗೆ ಹೊರಡು" ಎಂದು ಚಂಡಾಲಿಯು ಬ್ರಾಹ್ಮಣಾಧಮನಿಗೆ ಹೇಳಿದಳು. ॥೩೦೩-೩೦೪-೩೦೫॥

ಈ ಚಂಡಾಲಯುವತಿಯ ಮಾತುಗಳನ್ನು ಕೇಳಿ, ಕಾಮಾತುರನಾದ ಆ ವಿಪ್ರನು ಚಂಡಾಲಕನ್ಯೆಯ ಸಂಗಮವನ್ನು ಬಯಸಿ ಬಲಾತ್ಕಾರವಾಗಿ ಆಕೆಯನ್ನು ಎಳೆಯಲು ಪ್ರಯತ್ನಿಸಿದನು. ಹಾಗೆ ತನ್ನೊಡನೆ ಸಂಭೋಗಮಾಡಲು ಮುಂದೆ ಬರುತ್ತಿರುವ ವಿಪ್ರನನ್ನು ನೋಡಿ, ಆ ಚಂಡಾಲಿಯು "ಎಲೈ ವಿಪ್ರನೇ, ಮುಂದೆ

ತತಃ ಸತ್ವರಮಾಗತ್ಯ ತದ್ಭರ್ತಾ ಶಸ್ತ್ರಸಂಯುತಃ ।
ತದ್ದ್ವಿಜಂ ಹಂತುಮುದ್ಯುಕ್ತೋ ಧೃತ್ವಾ ಕೇಶಾನ್ದೃಢಾಸಿನಾ ॥೩೦೮॥

ತದಾ ತದ್ಧನನೋದ್ಯುಕ್ತಂ ಸ್ವಪತಿಂ ಸಾಬ್ರವೀತ್ತದಾ ।
ಧರ್ಮಶಾಸ್ತ್ರವಿಚಾರಜ್ಞಾ ಸ್ವಭರ್ತೃಹಿತಕಾಂಕ್ಷಿಣೀ ॥೩೦೯॥

ವಿಪ್ರಃ ಕೃತಾಪರಾಧೋಽಪಿ ನ ಹಂತವ್ಯೋ ಮನೀಷಿಭಿಃ ।
ಪರಂ ತು ದೂರತಸ್ತ್ಯಾಜ್ಯಃ ಸತ್ಯಮೇವ ಮಯೋಚ್ಯತೇ ॥೩೧೦॥

ತತಸ್ತಮಾಹ ವಿಪ್ರೋಽಪಿ ಪ್ರಾಣಾನ್ಮಾಹರ ಮಾಹರ ।
ತವ ದಾಸ್ಯಂ ಕರಿಷ್ಯಾಮೀತ್ಯತಿಭೀತಸ್ತದಾ ವಿಧೇ ॥೩೧೧॥

ಇತಿ ತದ್ವಚನಂ ಶ್ರುತ್ವಾ ಚಂಡಾಲೀ ಶಿವತತ್ಪರಾ ।
ಶಸ್ತ್ರಪಾಣಿಂ ಕ್ರೂರಚಿತ್ತಂ ಚಂಡಾಲಂ ತಮುವಾಚ ಸಾ ॥೩೧೨॥

---

ಬರಬೇಡ, ಈ ಅಕಾರ್ಯದಲ್ಲಿ ಮುಂದುವರಿಯಬೇಡ" ಎಂದು ಕೂಗಿಕೊಳ್ಳುತ್ತಿರಲು ಆ ಮಾತನ್ನೇ ಕಾಡಿನ ಮಧ್ಯದಲ್ಲಿದ್ದ ಅವಳ ಪತಿಯು ಕೇಳಿದನು. ||೩೦೬-೩೦೭||

ಕೂಡಲೇ ಆ ಚಂಡಾಲೀಪತಿಯು ಕುಪಿತನಾಗಿ ಕತ್ತಿಯನ್ನು ತೆಗೆದುಕೊಂಡೇ ಅಲ್ಲಿಗೆ ಬಂದು, ಕಾಮಾತುರನಾಗಿದ್ದ ಆ ದ್ವಿಜನನ್ನು ಜುಟ್ಟುಹಿಡಿದು ಗಟ್ಟಿಯಾದ ಖಡ್ಗದಿಂದ ಕೊಲ್ಲಲು ಪ್ರಯತ್ನಿಸಿದನು. ಧರ್ಮಶಾಸ್ತ್ರವಿಚಾರವನ್ನರಿತವಳೂ, ತನ್ನ ಪತಿಗೆ ಹಿತವನ್ನು ಬಯಸುವವಳೂ ಆದ ಆ ಚಂಡಾಲಯುವತಿಯು ಆ ಕಾಮುಕನನ್ನು ಕೊಲ್ಲಲು ಪ್ರಯತ್ನಿಸುತ್ತಿರುವ ತನ್ನ ಗಂಡನನ್ನು ಕುರಿತು ಇಂತೆಂದಳು. ||೩೦೮-೩೦೯||

" ಪತಿದೇವನೇ, ವಿಪ್ರನಾದವನು ತಪ್ಪುಮಾಡಿದರೂ ವಿವೇಕಿಗಳಾದವರು ಅವನನ್ನು ಕೊಲ್ಲಬಾರದು. ಆದರೆ ಅವನ ತಪ್ಪಿಗೋಸ್ಕರ ಆತನನ್ನು ದೂರಮಾಡಿಬಿಡಬೇಕು. ಇದು ಧರ್ಮವೆಂದು ನನ್ನ ಮಾತನ್ನು ನಂಬು" ಎಂದು ಚಂಡಾಲಿಯು ನುಡಿದಳು. ಆಗಲೇ ವಿಪ್ರನೂ ಕೂಡ ಚಂಡಾಲನನ್ನು ಕುರಿತು "ಅಯ್ಯಾ, ನನ್ನ ಪ್ರಾಣಗಳನ್ನು ಅಪಹರಿಸಬೇಡ. ನಾನು ಮಾಡಿದ ತಪ್ಪಿಗೋಸ್ಕರ ನಿನ್ನ ದಾಸ್ಯವ

|| ಚಂಡಾಲ್ಯುವಾಚ ||

**ಅನೇನ ಮಾಹರೇತ್ಯುಕ್ತಂ ದ್ವಿವಾರಂ ದೈವಯೋಗತಃ ।**
**ಅತೋ ಹರ ಹರೇತ್ಯುಕ್ತಂ ನಾಮಾನೇನ ಹರಾತ್ಮಕಂ ॥೩೧೩॥**

**ಹರಸ್ಮರಣಶೀಲಸ್ಯ ಹನನಂ ಪಾಪಸಾಧನಂ ।**
**ತಸ್ಮಾದೇತಸ್ಯ ಹನನಂ ನ ಕರ್ತವ್ಯಂ ತ್ವಯಾ ಧ್ರುವಂ ॥೩೧೪॥**

**ಕೃತಾನಂತಮಹಾಪಾಪೋಽಪ್ಯಪರಾಧಯುತೋಽಪಿ ವಾ ।**
**ನರಃ ಸ್ಮೃತಹರಃ ಸದ್ಯಃ ಸರ್ವಪಾಪೈಃ ಪ್ರಮುಚ್ಯತೇ ॥೩೧೫॥**

**ದ್ವಿಜಸ್ಯ ಪಾಪಹೀನಸ್ಯ ಹನನಂ ನೋಚಿತಂ ತತಃ ।**
**ಅಯಂ ಕೃತಾಪರಾಧೋಽಪಿ ತ್ಯಾಜ್ಯ ಏವ ನ ಸಂಶಯಃ ॥೩೧೬॥**

ನ್ನಾದರೂ ಮಾಡಲು ಸಿದ್ಧನಾಗಿರುವೆನು " ಎಂದು ಬಹು ಭಯದಿಂದ ಬೇಡಿಕೊಳ್ಳಲಾರಂಭಿಸಿದನು. ಅಯ್ಯ ಬ್ರಹ್ಮನೇ, ಆ ದೀನವಾಕ್ಯಗಳನ್ನು ಕೇಳಿ ಶಿವತತ್ಪರಳಾದ ಚಂಡಾಲಯುವತಿಯು ಕತ್ತಿಯನ್ನು ಹಿಡಿದು ಕ್ರೂರವಾದ ಮನಸ್ಸಿನಿಂದ ನಿಂತಿರುವ ತನ್ನ ಪತಿಯನ್ನು ಕುರಿತು ಮತ್ತೂ ಇಂತೆಂದಳು. ||೩೧೧-೩೧೨||

ಪತಿದೇವನೇ, ಈತನು ಅದೃಷ್ಟವಶದಿಂದ "ಮಾಹರ, ಮಾಹರ" ಎಂಬುದಾಗಿ ಎರಡು ಬಾರಿ ನುಡಿದಿರುವನು. ಆ ಮಾತುಗಳಲ್ಲಿ ಅರ್ಥವು ಬೇರೆಯಾಗಿದ್ದರೂ 'ಹರ, ಹರ' ಎಂಬ ಪರಶಿವನ ನಾಮವನ್ನು ಎರಡು ಬಾರಿ ಉಚ್ಚರಿಸಿದ ಹಾಗಾಯಿತು. ಆ ಪರಮೇಶ್ವರನ ಸ್ಮರಣೆಯಲ್ಲಿ ನಿರತನಾದವನನ್ನು ಕೊಲ್ಲುವುದು ಪಾಪಕ್ಕೆ ಕಾರಣವು. ಆದ್ದರಿಂದ ಈತನನ್ನು ನೀನು ನಿಶ್ಚಯವಾಗಿಯೂ ಕೊಲ್ಲಬೇಡ. ||೩೧೩-೩೧೪||

ಅಪರಿಮಿತವಾದ ಮಹಾಪಾಪಗಳನ್ನು ಮಾಡಿ, ಇತರ ಮಹಾಪರಾಧಗಳಿಂದ ಕೂಡಿದ್ದರೂ, ಮಾನವನು ಪರಮೇಶ್ವರನನ್ನು ಸ್ಮರಣೆಮಾಡಿದರೆ ಕೂಡಲೇ ಆತನು ಸಕಲ ಪಾಪಗಳಿಂದಲೂ ಬಿಡುಗಡೆ ಹೊಂದುವನು. ಪಾಪರಹಿತನಾದ ದ್ವಿಜನನ್ನು ಕೊಲ್ಲುವುದು ಉಚಿತವಲ್ಲವಾದ್ದರಿಂದ ಈತನು ಅಪರಾಧಮಾಡಿದರೂ ಇವನನ್ನು ಸಂದೇಹವಿಲ್ಲದೇ ಬಿಟ್ಟುಬಿಡಬೇಕು. ||೩೧೫-೩೧೬||

ಪತಿವ್ರತಾಸು ನಾರೀಷು ಯೋನ್ಯಥಾ ಕುರುತೇ ಮತಿಂ ।
ನ ತಸ್ಯ ನರಕಾದ್ಘೋರಾತ್ಸಹಸಾ ನಿರ್ಗಮೋ ದ್ವಿಜ ॥೨೯೮॥

ಚಂಡಾಲ್ಯಾ ಸಹ ಸಂಬಂಧಃ ಕಥಂ ವಾ ತವ ರೋಚತೇ ।
ಜುಗುಪ್ಸಾಪಿ ಕಥಂ ವಿಪ್ರ ಮಯಿ ನೈವಾಭಿಜಾಯತೇ ॥೨೯೯॥

ಬ್ರಾಹ್ಮಣಾಃ ಪಥಿ ಚಂಡಾಲಛಾಯಾಯಾ ಅಪಿ ಸಂಗಮೇ ।
ಸ್ನಾನಂ ಕುರ್ವಂತಿ ಯತ್ನೇನ ಸಚೈಲಂ ಮಂತ್ರಪೂರ್ವಕಂ ॥೩೦೦॥

ಚಂಡಾಲೀಗಮನಂ ಸಾಕ್ಷಾತ್ಕಥಂ ಕರ್ತುಂ ಸಮುದ್ಯತಃ ।
ನ ಸ್ಮರ್ಯತೇ ತ್ವಯಾ ಪ್ರಾಯಃ ಪರಲೋಕಭಯಂ ದ್ವಿಜ ॥೩೦೧॥

ಭೀತಿರ್ಭವತು ವಾ ಮಾ ವಾ ವಿಪ್ರ ತೇ ಪಾರಲೌಕಿಕೀ ।
ಭವಂತಂ ಬ್ರಾಹ್ಮಣಾಃ ಸರ್ವೇ ಬಹಿಷ್ಕುರ್ವಂತಿ ನೇಹ ಕಿಂ ॥೩೦೨॥

ನೀನು ಕೇಳಿಲ್ಲವೇನು? ಇಚ್ಛಾಪೂರ್ವಕವಾಗಿ ಪರನಾರಿಯರೊಡನೆ ಮಾತಾಡುವುದೇ ಅತ್ಯಂತ ನಿಷೇಧವಾದುದು. ॥೨೯೬-೨೯೭॥

ಬ್ರಾಹ್ಮಣನೇ, ಪತಿವ್ರತೆಯರಾದ ಹೆಂಗಸರಲ್ಲಿ ವಿಪರೀತವಾದ ಭಾವನೆಯಿಂದ ವರ್ತಿಸುವವನಿಗೆ ಘೋರವಾದ ನರಕದಿಂದ ಜಾಗ್ರತೆ ಬಿಡುಗಡೆಯೇ ಇರುವುದಿಲ್ಲ. ವಿಪ್ರನೇ, ಚಂಡಾಲಿಯ ಸಂಬಂಧವು ನಿನಗೆ ಹೇಗೆ ರುಚಿಸುತ್ತದೆ? ನನ್ನ ವಿಷಯದಲ್ಲಿ ನಿನಗೆ ಜುಗುಪ್ಸೆಯಾದರೂ ಆಗುವುದಿಲ್ಲವೇ? ಬ್ರಾಹ್ಮಣರು ದಾರಿಯಲ್ಲಿ ಚಂಡಾಲರ ನೆರಳು ಸೋಕಿದರೂ ನಿಯಮದಿಂದ ಮಂತ್ರಪೂರ್ವಕವಾಗಿ ತಾವುಟ್ಟಿದ್ದ ಬಟ್ಟೆಯೊಡನೆ ಸ್ನಾನಮಾಡಿ ಶುದ್ಧರಾಗುತ್ತಾರೆ. ॥೨೯೮-೨೯೯-೩೦೦॥

ಪ್ರತ್ಯಕ್ಷವಾಗಿ ಚಂಡಾಲಸ್ತ್ರೀಸಮಾಗಮವನ್ನು ನೀನು ಹೇಗೆತಾನೆ ಮಾಡಲು ಯತ್ನಿಸುತ್ತಿರುವೆ? ಅಯ್ಯ ಬ್ರಾಹ್ಮಣನೇ, ನಿನಗೆ ಪರಲೋಕದ ಭೀತಿಯು ಸ್ಮರಣೆಗೆ ಬರುತ್ತಿಲ್ಲವೆಂದು ತೋರುವುದು. ಬ್ರಾಹ್ಮಣನೇ, ಒಂದುವೇಳೆ ನಿನಗೆ ಪರಲೋಕದ ಭಯವಿಲ್ಲದಿದ್ದರೂ ನಿಮ್ಮ ಕುಲದ ಬ್ರಾಹ್ಮಣರೆಲ್ಲರೂ ನಿನ್ನನ್ನು ಬಹಿಷ್ಕರಿಸುವುದಿಲ್ಲವೆ! ಆದಕ್ಕಾದರೂ ನೀನು ಹಿಂಜರಿಯಬೇಡವೆ? ॥೩೦೧-೩೦೨॥

ಕಿಂ ಚಾತ್ರ ಯದಿ ಭರ್ತಾನೋ ದೈವಾದಾಯಾತಿ ಕಾನನೇ ।
ಸ ಭವಂತಂ ಮದಾಸಕ್ತಂ ಶಸ್ತ್ರೇಣೈವ ಹನಿಷ್ಯತಿ ॥೩೦೩॥

ಮಯಾಪಿ ದೇಯಃ ಶಾಪೋಽದ್ಯ ಯದಿ ಮಾಂ ಸ್ಪ್ರಷ್ಟುಮುದ್ಯತಃ ।
ದತ್ತಃ ಪತಿವ್ರತಾಶಾಪೋ ನಾನ್ಯಥಾ ಸ ಭವಿಷ್ಯತಿ ॥೩೦೪॥

ನಾಹಂ ವಿಲೋಕಯಿಷ್ಯಾಮಿ ಭರ್ತೃರ್ಭಿನ್ನನರಂ ನವಂ ।
ವ್ರಜ ವಿಪ್ರ ತತಃ ಶೀಘ್ರಂ ಯತ್ರ ಕುತ್ರಾಪಿ ದುರ್ಮತೇ ॥೩೦೫॥

॥ ವಿಷ್ಣುರುವಾಚ ॥

ಇತಿ ತದ್ವಚನಂ ಶ್ರುತ್ವಾ ಸ ವಿಪ್ರೋ ಮದನಾತುರಃ ।
ಚಂಡಾಲೀಗಮನಂ ಕರ್ತುಂ ಬಲಾತ್ಸಮುಪಚಕ್ರಮೇ ॥೩೦೬॥

ಮಾ ಯಾಹಿ ವಿಪ್ರ ಮಾ ಯಾಹಿ ಮಾ ಯಾಹೀತ್ಯಾಹ ಸಾ ತದಾ ।
ತದೇವ ವಾಕ್ಯಂ ಶುಶ್ರಾವ ತದ್ಭರ್ತಾ ವನಮಧ್ಯಗಃ ॥೩೦೭॥

---

ಅಲ್ಲದೇ ಒಂದುವೇಳೆ ಅದೃಷ್ಟವಶದಿಂದ ಕಾಡಿನಲ್ಲಿ ಸಂಚರಿಸುತ್ತಾ ಇಲ್ಲಿಗೆ ನನ್ನ ಗಂಡನೇನಾದರೂ ಬಂದರೆ, ನನ್ನೊಡನಾಸಕ್ತನಾಗಿರುವ ನಿನ್ನನ್ನು ಕತ್ತಿಯಿಂದಲೇ ಕೊಂದುಬಿಡುವನು. ಅದೂ ಅಲ್ಲದೆ ನನ್ನನ್ನು ಬಲಾತ್ಕಾರದಿಂದ ಮುಟ್ಟಲು ನೀನು ಪ್ರಯತ್ನಿಸುವೆಯಾದರೆ, ನಾನೂ ನಿನಗೆ ಶಾಪವನ್ನು ಕೊಡುವೆನು. ಪತಿವ್ರತೆಯರಿಂದ ಕೊಡಲ್ಪಟ್ಟ ಶಾಪವು ಎಂದಿಗೂ ಸುಳ್ಳಾಗಲಾರದು. ನನ್ನ ಗಂಡನಿಗಿಂತಲೂ ಬೇರೆಯವನಾದ ಪರಪುರುಷನ ಮುಖವನ್ನೇ ನಾನು ಎಂದೂ ನೋಡುವುದಿಲ್ಲ. ಬ್ರಾಹ್ಮಣನೇ, ಬುದ್ಧಿಹೀನನಾದ ನೀನು ವಿವೇಕವನ್ನು ಹೊಂದಿ ಜಾಗ್ರತೆಯಾಗಿ ನಿನ್ನ ಮನಬಂದಲ್ಲಿಗೆ ಹೊರಡು" ಎಂದು ಚಂಡಾಲಿಯು ಬ್ರಾಹ್ಮಣಾಧಮನಿಗೆ ಹೇಳಿದಳು. ||೩೦೩-೩೦೪-೩೦೫||

ಈ ಚಂಡಾಲಯುವತಿಯ ಮಾತುಗಳನ್ನು ಕೇಳಿ, ಕಾಮಾತುರನಾದ ಆ ವಿಪ್ರನು ಚಂಡಾಲಕನ್ಯೆಯ ಸಂಗಮವನ್ನು ಬಯಸಿ ಬಲಾತ್ಕಾರವಾಗಿ ಆಕೆಯನ್ನು ಎಳೆಯಲು ಪ್ರಯತ್ನಿಸಿದನು. ಹಾಗೆ ತನ್ನೊಡನೆ ಸಂಭೋಗಮಾಡಲು ಮುಂದೆ ಬರುತ್ತಿರುವ ವಿಪ್ರನನ್ನು ನೋಡಿ, ಆ ಚಂಡಾಲಿಯು "ಎಲೈ ವಿಪ್ರನೇ, ಮುಂದೆ

ತತಃ ಸತ್ವರಮಾಗತ್ಯ ತದ್ಭರ್ತಾ ಶಸ್ತ್ರಸಂಯುತಃ ।
ತದ್ದ್ವಿಜಂ ಹಂತುಮುದ್ಯುಕ್ತೋ ಧೃತ್ವಾ ಕೇಶಾನ್ದೃಢಾಸಿನಾ ॥೩೦೮॥

ತದಾ ತದ್ಧನನೋದ್ಯುಕ್ತಂ ಸ್ವಪತಿಂ ಸಾಬ್ರವೀತ್ತದಾ ।
ಧರ್ಮಶಾಸ್ತ್ರವಿಚಾರಜ್ಞಾ ಸ್ವಭರ್ತೃಹಿತಕಾಂಕ್ಷಿಣೀ ॥೩೦೯॥

ವಿಪ್ರಃ ಕೃತಾಪರಾಧೋಽಪಿ ನ ಹಂತವ್ಯೋ ಮನೀಷಿಭಿಃ ।
ಪರಂ ತು ದೂರತಸ್ತ್ಯಾಜ್ಯಃ ಸತ್ಯಮೇವ ಮಯೋಚ್ಯತೇ ॥೩೧೦॥

ತತಸ್ತಮಾಹ ವಿಪ್ರೋಽಪಿ ಪ್ರಾಣಾನ್ಮಾಹರ ಮಾಹರ ।
ತವ ದಾಸ್ಯಂ ಕರಿಷ್ಯಾಮೀತ್ಯತಿಭೀತಸ್ತದಾ ವಿಧೇ ॥೩೧೧॥

ಇತಿ ತದ್ವಚನಂ ಶ್ರುತ್ವಾ ಚಂಡಾಲೀ ಶಿವತತ್ಪರಾ ।
ಶಸ್ತ್ರಪಾಣಿಂ ಕ್ರೂರಚಿತ್ತಂ ಚಂಡಾಲಂ ತಮುವಾಚ ಸಾ ॥೩೧೨॥

ಬರಬೇಡ, ಈ ಅಕಾರ್ಯದಲ್ಲಿ ಮುಂದುವರಿಯಬೇಡ'' ಎಂದು ಕೂಗಿಕೊಳ್ಳು ತ್ತಿರಲು ಆ ಮಾತನ್ನೇ ಕಾಡಿನ ಮಧ್ಯದಲ್ಲಿದ್ದ ಅವಳ ಪತಿಯು ಕೇಳಿದನು. ॥೩೦೬-೩೦೭॥

ಕೂಡಲೇ ಆ ಚಂಡಾಲೀಪತಿಯು ಕುಪಿತನಾಗಿ ಕತ್ತಿಯನ್ನು ತೆಗೆದುಕೊಂಡೇ ಅಲ್ಲಿಗೆ ಬಂದು, ಕಾಮಾತುರನಾಗಿದ್ದ ಆ ದ್ವಿಜನನ್ನು ಜುಟ್ಟುಹಿಡಿದು ಗಟ್ಟಿಯಾದ ಖಡ್ಗದಿಂದ ಕೊಲ್ಲಲು ಪ್ರಯತ್ನಿಸಿದನು. ಧರ್ಮಶಾಸ್ತ್ರವಿಚಾರವನ್ನರಿತವಳೂ, ತನ್ನ ಪತಿಗೆ ಹಿತವನ್ನು ಬಯಸುವವಳೂ ಆದ ಆ ಚಂಡಾಲಯುವತಿಯು ಆ ಕಾಮುಕ ನನ್ನು ಕೊಲ್ಲಲು ಪ್ರಯತ್ನಿಸುತ್ತಿರುವ ತನ್ನ ಗಂಡನನ್ನು ಕುರಿತು ಇಂತೆಂದಳು. ॥೩೦೮-೩೦೯॥

"ಪತಿದೇವನೇ, ವಿಪ್ರನಾದವನು ತಪ್ಪುಮಾಡಿದರೂ ವಿವೇಕಿಗಳಾದವರು ಅವನನ್ನು ಕೊಲ್ಲಬಾರದು. ಆದರೆ ಅವನ ತಪ್ಪಿಗೋಸ್ಕರ ಆತನನ್ನು ದೂರಮಾಡಿ ಬಿಡಬೇಕು. ಇದು ಧರ್ಮವೆಂದು ನನ್ನ ಮಾತನ್ನು ನಂಬು'' ಎಂದು ಚಂಡಾಲಿಯು ನುಡಿದಳು. ಆಗಲೇ ವಿಪ್ರನೂ ಕೂಡ ಚಂಡಾಲನನ್ನು ಕುರಿತು "ಅಯ್ಯ, ನನ್ನ ಪ್ರಾಣಗಳನ್ನು ಅಪಹರಿಸಬೇಡ. ನಾನು ಮಾಡಿದ ತಪ್ಪಿಗೋಸ್ಕರ ನಿನ್ನ ದಾಸ್ಯವ

|| ಚಂಡಾಲ್ಯುವಾಚ ||

**ಅನೇನ ಮಾಹರೇತ್ಯುಕ್ತಂ ದ್ವಿವಾರಂ ದೈವಯೋಗತಃ ।**
**ಅತೋ ಹರ ಹರೇತ್ಯುಕ್ತಂ ನಾಮಾನೇನ ಹರಾತ್ಮಕಂ ॥೩೧೩॥**

**ಹರಸ್ಮರಣಶೀಲಸ್ಯ ಹನನಂ ಪಾಪಸಾಧನಂ ।**
**ತಸ್ಮಾದೇತಸ್ಯ ಹನನಂ ನ ಕರ್ತವ್ಯಂ ತ್ವಯಾ ಧ್ರುವಂ ॥೩೧೪॥**

**ಕೃತಾನಂತಮಹಾಪಾಪೋಽಪ್ಯಪರಾಧಯುತೋಽಪಿ ವಾ ।**
**ನರಃ ಸ್ಮೃತಹರಃ ಸದ್ಯಃ ಸರ್ವಪಾಪೈಃ ಪ್ರಮುಚ್ಯತೇ ॥೩೧೫॥**

**ದ್ವಿಜಸ್ಯ ಪಾಪಹೀನಸ್ಯ ಹನನಂ ನೋಚಿತಂ ತತಃ ।**
**ಅಯಂ ಕೃತಾಪರಾಧೋಽಪಿ ತ್ಯಾಜ್ಯ ಏವ ನ ಸಂಶಯಃ ॥೩೧೬॥**

---

ನ್ನಾದರೂ ಮಾಡಲು ಸಿದ್ಧನಾಗಿರುವೆನು '' ಎಂದು ಬಹು ಭಯದಿಂದ ಬೇಡಿಕೊಳ್ಳಲಾರಂಭಿಸಿದನು. ಅಯ್ಯ ಬ್ರಹ್ಮನೇ, ಆ ದೀನವಾಕ್ಯಗಳನ್ನು ಕೇಳಿ ಶಿವತತ್ಪರಳಾದ ಚಂಡಾಲಯುವತಿಯು ಕತ್ತಿಯನ್ನು ಹಿಡಿದು ಕ್ರೂರವಾದ ಮನಸ್ಸಿನಿಂದ ನಿಂತಿರುವ ತನ್ನ ಪತಿಯನ್ನು ಕುರಿತು ಮತ್ತೂ ಇಂತೆಂದಳು. ||೩೧೧-೩೧೨||

ಪತಿದೇವನೇ, ಈತನು ಅದೃಷ್ಟವಶದಿಂದ '' ಮಾಹರ, ಮಾಹರ '' ಎಂಬುದಾಗಿ ಎರಡು ಬಾರಿ ನುಡಿದಿರುವನು ಆ ಮಾತುಗಳಲ್ಲಿ ಅರ್ಥವು ಬೇರೆಯಾಗಿದ್ದರೂ ' ಹರ, ಹರ ' ಎಂಬ ಪರಶಿವನ ನಾಮವನ್ನು ಎರಡು ಬಾರಿ ಉಚ್ಚರಿಸಿದ ಹಾಗಾಯಿತು. ಆ ಪರಮೇಶ್ವರನ ಸ್ಮರಣೆಯಲ್ಲಿ ನಿರತನಾದವನನ್ನು ಕೊಲ್ಲುವುದು ಪಾಪಕ್ಕೆ ಕಾರಣವು. ಆದ್ದರಿಂದ ಈತನನ್ನು ನೀನು ನಿಶ್ಚಯವಾಗಿಯೂ ಕೊಲ್ಲಬೇಡ. ||೩೧೩-೩೧೪||

ಅಪರಿಮಿತವಾದ ಮಹಾಪಾಪಗಳನ್ನು ಮಾಡಿ, ಇತರ ಮಹಾಪರಾಧಗಳಿಂದ ಕೂಡಿದ್ದರೂ, ಮಾನವನು ಪರಮೇಶ್ವರನನ್ನು ಸ್ಮರಣೆಮಾಡಿದರೆ ಕೂಡಲೇ ಆತನು ಸಕಲ ಪಾಪಗಳಿಂದಲೂ ಬಿಡುಗಡೆ ಹೊಂದುವನು. ಪಾಪರಹಿತನಾದ ದ್ವಿಜನನ್ನು ಕೊಲ್ಲುವುದು ಉಚಿತವಲ್ಲವಾದ್ದರಿಂದ ಈತನು ಅಪರಾಧಮಾಡಿದರೂ ಇವನನ್ನು ಸಂದೇಹವಿಲ್ಲದೇ ಬಿಟ್ಟುಬಿಡಬೇಕು. ||೩೧೫-೩೧೬||

ಅಮುಂ ಸ್ಮೃತಹರಂ ವಿಪ್ರಂ ಬಲಾದ್ಯದಿ ಹನಿಷ್ಯಸಿ ।
ತದಾ ಭವಿಷ್ಯತಿ ಕ್ರೂರನರಕೇಷ್ವೇವ ತೇ ಸ್ಥಿತಿಃ ॥೩೧೭॥

ಉಪಕಾರೋಽಪ್ಯನೇನಾದ್ಯ ಕೃತ ಏವಾಥುನಾವಯೋಃ ।
ಆವಾಭ್ಯಾಂ ಸಂಸ್ಮೃತೋ ಯಸ್ಮಾದೇತದ್ದ್ವಾರಾ ಹರಃ ಪರಃ॥೩೧೮॥

ಇದಂ ಹರಹರೇತ್ಯೇತನ್ನಾಮ ಸಾಕ್ಷಾದ್ಧರಾತ್ಮಕಂ ।
ಶ್ರುತಿಶ್ರುತಂ ಶ್ರೋತ್ರಪೇಯಂ ಶ್ರುತಮದ್ಯಾಘಹಾರಕಂ ॥೩೧೯॥

ಹರಸ್ಮರಣಮೇತಸ್ಮಿನ್ನರಣ್ಯೇಽತ್ಯಂತದುರ್ಲಭಂ ।
ಶ್ರವಣಂ ಹರಶಬ್ದಸ್ಯ ತತೋಽಪ್ಯತ್ಯಂತದುರ್ಲಭಂ ॥೩೨೦॥

ಉಪಕಾರಃ ಕೃತೋ ಯೇನ ಯಾದೃಶಸ್ತಾದೃಶೋಽಧುನಾ ।
ಕಾರ್ಯಃ ಪ್ರತ್ಯುಪಕಾರೋಽಸ್ಯ ತಾದೃಶಃ ಕೋಽಪಿ ನ ಧ್ರುವಂ॥೩೨೧॥

ಶಕ್ತಿಃ ಪ್ರತ್ಯುಪಕಾರಸ್ಯ ನಾವಯೋರ್ಹತಭಾಗ್ಯಯೋಃ ।
ಶಕ್ತಿಃ ಪ್ರತ್ಯುಪಕಾರಸ್ಯ ಮಹದ್ಭಾಗ್ಯವತಾಂ ಭವೇತ್ ॥೩೨೨॥

ಆಪತ್ಕಾಲದಲ್ಲಿ ಹರನನ್ನು ಸ್ಮರಣೆಮಾಡಿದ ಈ ವಿಪ್ರನನ್ನು ಬಲಾತ್ಕಾರದಿಂದ ಕೊಲ್ಲುವುದಾದರೆ, ಆಗ ನಿನಗೆ ಕ್ರೂರವಾದ ನರಕಗಳಲ್ಲಿಯೇ ಅನವರತವೂ ವಾಸವೇ ಪ್ರಡುವುದು. ಈತನ ಮೂಲಕ ಪರಮಶ್ರೇಷ್ಠನಾದ ಪರಮೇಶ್ವರನು ನಮ್ಮಿಬ್ಬರಿಂದಲೂ ಸ್ಮರಣೆಮಾಡಲ್ಪಟ್ಟವನಾದ್ದರಿಂದ ಇವನು ನಮಗೆ ಉಪಕಾರವನ್ನೇ ಮಾಡಿದಂತಾಗಿದೆ. ||೩೧೭-೩೧೮||

ಸಾಕ್ಷಾತ್ಪರಶಿವಸ್ವರೂಪವಾಗಿರುವ 'ಹರ ಹರ' ಎಂಬ ದಿವ್ಯನಾಮವು ವೇದಪ್ರಸಿದ್ಧವಾದುದು. ಕಿವಿಗಳಿಂದ ಅವಶ್ಯವಾಗಿ ಕೇಳಲು ಯೋಗ್ಯವಾದುದು. ಶ್ರವಣಮಾತ್ರದಿಂದಲೇ ಪಾಪನಾಶಕವೂ ಆಗಿರುವುದು. ಈ ಕಾಡಿನಲ್ಲಿ ಹರನ ಸ್ಮರಣೆಯೂ, ಆ ಹರಶಬ್ದಶ್ರವಣವೂ ಅತ್ಯಂತ ದುರ್ಲಭವೇ ಸರಿ. ||೩೧೯-೩೨೦||

ಇವನು ಈಗ ನಮಗೆ ಹರನಾಮಸ್ಮರಣೆ ಮಾಡಿಸಿದ ಉಪಕಾರಕ್ಕೆ ಅನುಗುಣವಾದ ಪ್ರತ್ಯುಪಕಾರವನ್ನು ಮಾಡಲು ನಿಶ್ಚಯವಾಗಿಯೂ ನಮಗೆ ಯಾವುದೂ ಇಲ್ಲವೇ ಇಲ್ಲ. ಭಾಗ್ಯಹೀನರಾದ ನಮಗೆ ಉಪಕಾರಮಾಡಿದವನಿಗೆ ಪ್ರತ್ಯುಪಕಾರ

ಹರನಾಮಾಮೃತಂ ದೈವಾದಧುನಾನೇನ ಪಾಯಿತಂ ।
ಏತತ್ಪ್ರತ್ಯುಪಕಾರಸ್ತು ನ ಪ್ರಾಣೈರಪಿ ಸರ್ವದಾ ॥೩೨೩॥

ಯದ್ಯದಗಣಿತಂ ದ್ರವ್ಯಂ ದೀಯತೇಽಸ್ಮೈ ತದಾಪ್ಯಯಂ ।
ನಾಸ್ಯ ಪ್ರತ್ಯುಪಕಾರೋಽತಃ ಕಿಂ ಕರ್ತವ್ಯಮತಃ ಪರಂ ॥೩೨೪॥

॥ ವಿಷ್ಣುರುವಾಚ ॥

ಇತಿ ತದ್ವಚನಂ ಶ್ರುತ್ವಾ ಚಂಡಾಲೋ ವಿಸ್ಮಿತಸ್ತದಾ ।
ತಂ ಪ್ರಣಮ್ಯ ಯಯೌ ಗೇಹಂ ಸ್ವಪತ್ನ್ಯಾ ಸಂಯುತೋ ವಿಧೇ ॥೩೨೫॥

ಸ ವಿಪ್ರಃ ಸರ್ಪಸಂದಷ್ಟಃ ಶಿವೇತ್ಯುಕ್ತ್ವಾ ತನುಂ ಜಹೌ ।
ತತಸ್ತತ್ರ ಸ ಮುಕ್ತೋಽಭೂದ್ವಿಶ್ವೇಶಕೃಪಯಾ ವಿಧೇ ॥೩೨೬॥

---

ಮಾಡುವ ಶಕ್ತಿಯೇ ಇಲ್ಲವಾಗಿದೆ. ಮಹಾಭಾಗ್ಯಶಾಲಿಗಳಾದವರು ಮಾತ್ರ ಇಂತಹವರಿಗೆ ಪ್ರತ್ಯುಪಕಾರಮಾಡುವ ಸಾಮರ್ಥ್ಯವನ್ನು ಹೊಂದುವರು. ||೩೨೧-೩೨೨||

ದೈವಾನುಗ್ರಹದಿಂದ ಈತನು ನಮಗೆ ಹರನಾಮರೂಪವಾದ ಅಮೃತವನ್ನು ಈಗ ಕುಡಿಸಿರುವನು. ಇದಕ್ಕೆ ಪ್ರತ್ಯುಪಕಾರವನ್ನು ಪ್ರಾಣದಾನದಿಂದಲೂ ಸಹ ಮಾಡಲು ಸಾಧ್ಯವಿಲ್ಲ. (ಅಂದರೆ ಈ ಶರೀರವನ್ನೆ ಇದಕ್ಕಾಗಿ ತ್ಯಾಗಮಾಡಿದರೂ ಸಾಟಿಯಾಗಲಾರದೆಂದು ಭಾವವು) ಲೆಕ್ಕವಿಲ್ಲದಷ್ಟು ದುಡ್ಡನ್ನು ಈತನಿಗೆ ಕೊಟ್ಟರೂ ಆಗ ಈ ಉಪಕಾರಕ್ಕೆ ಸರಿಯಾದ ಪ್ರತ್ಯುಪಕಾರವನ್ನು ಮಾಡಿದಂತಾಗುವುದಿಲ್ಲವಲ್ಲ! ಇನ್ನು ಮುಂದೆ ಈತನಿಗೆ ಮಾಡಬೇಕಾದ ಉಪಕಾರವಾವುದೆಂದು ಚಂಡಾಲಸ್ತ್ರೀಯು ತನ್ನ ಪತಿಗೆ ಹೇಳಿದಳು. ||೩೨೩-೩೨೪||

ಅಯ್ಯ ಬ್ರಹ್ಮನೇ, ತನ್ನ ಪತ್ನಿಯು ನುಡಿದ ಈ ಮಾತುಗಳನ್ನು ಕೇಳಿ ಚಂಡಾಲನೂ ಸಹ ವಿಸ್ಮಯಗೊಂಡು, ಆ ಬ್ರಾಹ್ಮಣನಿಗೆ ನಮಸ್ಕಾರಮಾಡಿ ಕಳುಹಿಸಿ ತನ್ನ ಹೆಂಡತಿಯೊಡನೆ ಮನೆಗೆ ಹಿಂದಿರುಗಿದನೆಂದು ವಿಷ್ಣುವು ಬ್ರಹ್ಮನಿಗೆ ಹೇಳುತ್ತಾ ಅದೇ ಇತಿಹಾಸವನ್ನು ಮುಂದುವರಿಸಿ ಹೀಗೆ ನುಡಿದನು. ||೩೨೫||

ಹಾಗೆ ಅವನನ್ನು ರಕ್ಷಿಸಿ ಚಂಡಾಲದಂಪತಿಗಳು ಮನೆಗೆ ಹೋದಮೇಲೆ ಆ ಬ್ರಾಹ್ಮಣನು ಅಕಸ್ಮಾತ್ತಾಗಿ ಹಾವಿನಿಂದ ಕಚ್ಚಲ್ಪಟ್ಟವನಾಗಿ ಶಿವನಾಮಸ್ಮರಣೆ ಮಾಡುತ್ತಾ ತನ್ನ ಶರೀರವನ್ನು ತ್ಯಾಗಮಾಡಿದನು. ಅಯ್ಯ ಬ್ರಹ್ಮನೇ, ಆದ

|| ಬ್ರಹ್ಮೋವಾಚ ||

ಚಂಡಾಲ್ಯಾಸ್ತಾದೃಶಂ ಜ್ಞಾನಂ ಕಥಮಾಸೀಜ್ಜನಾರ್ದನ ।
ಯಜ್ಜ್ಞಾನಂ ಮೋಕ್ಷದಂ ಸಾಕ್ಷಾದ್ಯೋಗಿನಾಮಪಿ ದುರ್ಲಭಂ ॥೩೨೭॥

ಸಾಽಭೂದೂದ್ಬ್ರಹ್ಮನ್ಪುರಾ ನಾರೀ ಬ್ರಾಹ್ಮಣೀ ಪತಿದೇವತಾ ।
ಪತಿಶುಶ್ರೂಷಣರತಾ ಸರ್ವದಾ ಪತಿಮಾಶ್ರಿತಾ ॥೩೨೮॥

ವಿಷ್ಣುರುವಾಚ

ತಯಾ ನ ಪೂಜಿತಂ ಬ್ರಹ್ಮನ್ ಶಿವಲಿಂಗಂ ಶಿವಾತ್ಮಕಂ ।
ತಯಾ ಶಿವಮನಭ್ಯರ್ಚ್ಯ ಭುಕ್ತಮೇವಾನ್ವಹಂ ಮುದಾ ॥೩೨೯॥

ತಯಾ ಕದಾಚಿದ್ಯತ್ನೇನ ಜಾಬಾಲೋಪನಿಷಚ್ಛ್ರುತಾ ।
ತತಃ ಪರಂ ದ್ವಿಜಾನಾಹ ಸೈವ ಜಾಬಾಲಪಾರಗಾನ್ ॥೩೩೦॥

---

ರಿಂದಲೇ ಆ ಬ್ರಾಹ್ಮಣನು ವಿಶ್ವೇಶ್ವರನ ದಯೆಯನ್ನು ಪಡೆದು ಮುಕ್ತಿಯನ್ನು ಗಳಿಸಿದನು. ಎಂದು ವಿಷ್ಣುವು ಹೇಳಿ ಸುಮ್ಮನಾಗಲು, ಮತ್ತೆ ಬ್ರಹ್ಮನು ಮಹಾ ವಿಷ್ಣುವನ್ನು ಕುರಿತು, ||೩೨೬||

"ಜನಾರ್ದನನೇ, (ದುಷ್ಟರಾದ ಜನಗಳನ್ನು ಶಿಕ್ಷೆಮಾಡುವ ಸ್ವಾಮಿಯೇ) ಸಾಕ್ಷಾದ್ಯೋಗಿಗಳಿಗೂ ದುರ್ಲಭವೂ ಮೋಕ್ಷಪ್ರದವೂ ಆದ ಇಂತಹ ಜ್ಞಾನವು ಆ ಚಂಡಾಲಸ್ತ್ರೀಗೆ ಹೇಗೆತಾನೆ ಉಂಟಾಯಿತು ? ಅದನ್ನು ತಿಳಿಸಬೇಕು" ಎಂದು ಪ್ರಾರ್ಥಿಸಿದನು. ಆಗ ವಿಷ್ಣುವು ಬ್ರಹ್ಮನೊಡನೆ ಮತ್ತೆ ಹೀಗೆಂದನು. ||೩೨೭||

"ಅಯ್ಯ ಬ್ರಹ್ಮನೇ, ಹಿಂದೆ ಆ ಹೆಂಗಸು ಬ್ರಾಹ್ಮಣಜಾತಿಯಲ್ಲಿ ಹುಟ್ಟಿ, ಪತಿವ್ರತೆಯೆನಿಸಿ, ಯಾವಾಗಲೂ ಪತಿಯನ್ನೇ ದೈವವೆಂದು ತಿಳಿದು ಪತಿಸೇವೆಯಲ್ಲಿಯೇ ನಿರತಳಾಗಿ ಗಂಡನನ್ನೇ ಆಶ್ರಯಿಸಿಕೊಂಡು ಬಾಳುತ್ತಿದ್ದಳು. ಹೀಗಿದ್ದರೂ ಅವಳು ಶಿವಸ್ವರೂಪವಾದ ಶಿವಲಿಂಗವನ್ನು ಮಾತ್ರ ಎಂದೂ ಪೂಜೆಮಾಡಲಿಲ್ಲ. ಪ್ರತಿದಿನವೂ ಶಿವನನ್ನು ಪೂಜೆಮಾಡದೇ ಸಂತೋಷದಿಂದ ಊಟಮಾಡುತ್ತಿದ್ದಳು. ಒಂದು ದಿನ ಇವಳು ಅಕಸ್ಮಾತ್ತಾಗಿ ಜಾಬಾಲೋಪನಿಷತ್ತಿನ ಅರ್ಥವನ್ನು ಯಾರಿಂದಲೋ ಕೇಳಿದಳು. ಅಲ್ಲಿಯೇ ಅವಳು ಜಾಬಾಲಶ್ರುತಿಪಾರಂಗತರಾದ ದ್ವಿಜರನ್ನು ಕುರಿತು ಹೀಗೆ ಪ್ರಶ್ನೆಮಾಡಿದಳು. ||೩೨೯-೩೩೦||

॥ ಬ್ರಾಹ್ಮಣ್ಯುವಾಚ ॥

ದ್ವಿಜಾ ಜಾಬಾಲತತ್ವಜ್ಞಾಃ ಶೃಣ್ವಂತು ವಚನಂ ಮಮ ।
ಅನಾದರೋ ನ ಕರ್ತವ್ಯಃ ಪ್ರಣತಾಹಂ ಕೃತಾಂಜಲಿಃ ॥೩೩೦॥

ಅನರ್ಚಿತಶಿವಾ ಯಾಂತಿ ನರಕೇಷ್ವಿತಿ ಪಠ್ಯತೇ ।
ಶ್ರುತಿರೇಷಾ ಮಯಾದ್ಯೈವ ಶ್ರುತಾ ತ್ವನ್ಮುಖಪಂಕಜಾತ್ ॥೩೩೨॥

ಬ್ರಾಹ್ಮಣ್ಯಪಿ ಮಯಾ ವಿಪ್ರ ನ ಕೃತಂ ಶಂಕರಾರ್ಚನಂ ।
ಭುಕ್ತಮೀಶಾರ್ಚನಂ ತ್ಯಕ್ತ್ವಾ ಬಹುಕಾಲಂ ಮಯಾ ಧ್ರುವಂ ॥೩೩೩॥

ರುದ್ರಾರ್ಚನವಿಹೀನಾನಾಂ ವಿಪ್ರಸ್ತ್ರೀಣಾಂ ಶ್ರುತಿಶ್ರುತಂ ।
ಪ್ರಾಯಶ್ಚಿತ್ತಂ ಕಿಮಸ್ತ್ಯದ್ಯ ವದಂತು ಶ್ರುತಿಪಾರಗಾಃ ॥೩೩೪॥

ಪ್ರಾಯಶ್ಚಿತ್ತವಿಹೀನಾನಾಂ ದ್ವಿಜಸ್ತ್ರೀಣಾಂ ತನುವ್ಯಯೇ ।
ಕಥಂ ವಾ ನರಕಾವಾಸೋ ಕಿಯತ್ಕಾಲಂ ಭವಿಷ್ಯತಿ ॥೩೩೫॥

---

'ಜಾಬಾಲೋಪನಿಷತ್ತನ್ನರಿತ ದ್ವಿಜವರರೇ, ನನ್ನ ಮಾತನ್ನು ಪ್ರೀತಿಯಿಂದ ಲಾಲಿಸಿರಿ; ಕೈಮುಗಿದು, ನಮಸ್ಕಾರಮಾಡುತ್ತಿರುವೆನು ನನ್ನ ಮಾತಿನಲ್ಲಿ ಅನಾದರವಿಡಬೇಡಿರಿ. ಶಿವನನ್ನು ಪೂಜೆಮಾಡದವರು ನರಕಕ್ಕೆ ಹೋಗುವರೆಂದಿರುವ ಈ ಶ್ರುತಿವಾಕ್ಯವನ್ನು ಈಗತಾನೇ ನಾನು ನಿಮ್ಮ ಮುಖಕಮಲದಿಂದ ಕೇಳಿದೆನು. ॥೩೩೧-೩೩೨॥

ಬ್ರಾಹ್ಮಣರೇ, ಬ್ರಾಹ್ಮಣ ಸ್ತ್ರೀಯಾದರೂ ನಾನು ಶಂಕರನನ್ನು ಇದುವರೆಗೂ ಪೂಜೆಮಾಡಲಿಲ್ಲ ಪರಶಿವನನ್ನು ಪೂಜೆಮಾಡದೇ ಅನೇಕ ದಿನಗಳು ನಿಶ್ಚಯವಾಗಿಯೂ ನಾನು ಊಟಮಾಡಿದ್ದೇನೆ. ಶ್ರುತಿಪಾರಂಗತರಾದ ಬ್ರಾಹ್ಮಣರೇ, ರುದ್ರಪೂಜೆಯನ್ನು ಮಾಡದಿರುವ ಬ್ರಾಹ್ಮಣ ಸ್ತ್ರೀಯರಿಗೆ ವಿಹಿತವಾಗಿರುವ ಪ್ರಾಯಶ್ಚಿತ್ತವೇನಾದರೂ ವೇದದಲ್ಲಿ ವಿಹಿತವಾಗಿದ್ದರೆ ಅದನ್ನು ದಯೆಯಿಟ್ಟು ತಿಳಿಸಬೇಕು ॥೩೩೩-೩೩೪॥

ಪ್ರಾಯಶ್ಚಿತ್ತಮಾಡಿಕೊಳ್ಳದಿರುವ ದ್ವಿಜ ಸ್ತ್ರೀಯರು ಮೃತರಾದರೆ ಅವರಿಗೆ ನರಕವಾಸವುಂಟಾಗುವುದೆಂತು? ಎಷ್ಟುಕಾಲ ನರಕದಲ್ಲಿ ವಾಸವೇರ್ಪಡುವುದು?

ನರಕಾಂತೇ ಪುನರ್ಜನ್ಮ ಭವಿಷ್ಯತಿ ಕಥಂ ದ್ವಿಜಾಃ ।
ಏತತ್ಸರ್ವಂ ವಿಶೇಷೇಣ ವದಂತು ಪ್ರಣಯಾನ್ಮಯಿ ॥೩೩೬॥

॥ ದ್ವಿಜಾ ಊಚುಃ ॥

ದ್ವಿಜನ್ಮನಾಂ ತು ಸರ್ವೇಷಾಂ ನಿತ್ಯಂ ಶಂಕರಪೂಜನಂ ।
ಕರ್ತವ್ಯಮತಿಯತ್ನೇನ ನ ತ್ಯಾಜ್ಯಂ ಸರ್ವಥಾ ಶುಭೇ ॥೩೩೭॥

ದ್ವಿಜಾನಾಂ ದ್ವಿಜನಾರೀಣಾಮುಭಯಂ ಧರ್ಮಃ ಸನಾತನಃ ।
ದ್ವಿಜೈರಿವ ಸದಾ ಕಾರ್ಯಂ ದ್ವಿಜಸ್ತ್ರೀಭಿಃ ಶಿವಾರ್ಚನಂ ॥೩೩೮॥

ಪರಂ ತ್ವತ್ರ ವಿಶೇಷೋಽಸ್ತಿ ಪುಂಸಾಂ ಶಂಕರಪೂಜನೇ ।
ನ ವಿಶೇಷಾಧಿಕಾರೋಽಸ್ತಿ ದ್ವಿಜಸ್ತ್ರೀಣಾಂ ತು ಸರ್ವಥಾ ॥೩೩೯॥

ರುದ್ರಾಧ್ಯಾಯೇನ ಸೂಕ್ತೈಶ್ಚ ನಿತ್ಯಂ ಶ್ರೀರುದ್ರಲಿಂಗಕೈಃ ।
ಅಭಿಷೇಕೋಽನ್ವಹಂ ಕಾರ್ಯಃ ಶಿವಲಿಂಗೇ ದ್ವಿಜೈಃ ಶುಭೇ ॥೩೪೦॥

---

ನರಕವಾಸ ಮುಗಿದ ಮೇಲೆ ಯಾವರೀತಿಯ ಪುನರ್ಜನ್ಮವುಂಟಾಗುವುದು? ಬ್ರಾಹ್ಮಣರೇ, ಇವೆಲ್ಲವನ್ನೂ ವಿಸ್ತಾರವಾಗಿ ನನ್ನಲ್ಲಿ ತಿಳಿಸಬೇಕೆ'ಂದು ಆ ಬ್ರಾಹ್ಮಣ ಸ್ತ್ರೀಯು ಬ್ರಾಹ್ಮಣರನ್ನು ಮತ್ತೆಮತ್ತೆ ಪ್ರಾರ್ಥಿಸಿದಳು. ॥೩೩೫-೩೩೬॥

ಈ ಪ್ರಾರ್ಥನೆಯನ್ನು ಮನ್ನಿಸಿ ಅಲ್ಲಿದ್ದ ದ್ವಿಜರು ಅವಳಿಗೆ ಈ ರೀತಿ ನಿರೂಪಿಸಿದರು. "ಶೋಭನಾಂಗಿಯೇ, ದ್ವಿಜರೆನಿಸಿದವರಿಗೆ ನಿತ್ಯವೂ ಶಂಕರಪೂಜೆಯು ವಿಹಿತವೇ ಆಗಿರುವುದು. ಅವರೆಲ್ಲರೂ ವಿಶೇಷ ನಿಯಮದಿಂದ ಖಂಡಿತವಾಗಿಯೂ ತಪ್ಪದೇ ಶಿವಪೂಜೆಯನ್ನು ಮಾಡಲೇಬೇಕು. ಎಂದೂ ಬಿಡಬಾರದು. ದ್ವಿಜರಿಗೂ ಅವರ ಸ್ತ್ರೀಯರಿಗೂ ಈ ಧರ್ಮವು ಅನಾದಿಕಾಲದಿಂದಲೂ ಬಂದಿದೆ. ಆದ್ದರಿಂದ ದ್ವಿಜರೂ ದ್ವಿಜಸ್ತ್ರೀಯರೂ ಯಾವಾಗಲೂ ಶಿವನನ್ನು ಪೂಜೆಮಾಡಲೇಬೇಕು. ॥೩೩೭-೩೩೮॥

ಆದರೆ ಪುರುಷರಿಗೆ ಮಾತ್ರ ಶಂಕರನ ಪೂಜಾವಿಷಯದಲ್ಲಿ ವಿಶೇಷಾಧಿಕಾರ ವಿದೆ. ಬ್ರಾಹ್ಮಣಸ್ತ್ರೀಯರಿಗೆ ಆ ವಿಶೇಷಾಧಿಕಾರವು ಖಂಡಿತವಾಗಿಯೂ ಇಲ್ಲ ಶೋಭನೆಯೇ, ರುದ್ರಾಧ್ಯಾಯ, ರುದ್ರಸೂಕ್ತ ಮಂತ್ರಗಳಿಂದ, ನಿತ್ಯವೂ ಆ ರುದ್ರನ ಲಾಂಛನವನ್ನು ಧರಿಸಿರುವ ದ್ವಿಜರು ಶಿವಲಿಂಗಕ್ಕೆ ತಪ್ಪದೆ ಅಭಿಷೇಕವಮಾಡಬೇಕು. ॥೩೩೯-೩೪೦॥

ರೌದ್ರೈರ್ನಾನಾವಿಧೈರ್ಮಂತ್ರೈಃ ಕರ್ತವ್ಯಂ ಶಿವಪೂಜನಂ।
ದ್ವಿಜಾನಾಂ ಬ್ರಾಹ್ಮಣಾದೀನಾಮಯಂ ಧರ್ಮಃ ಸನಾತನಃ ॥೩೪೧॥

ಸ್ತ್ರೀಭಿಃ ಪಂಚಾಕ್ಷರೇಣೈವ ಕರ್ತವ್ಯಂ ಶಿವಪೂಜನಂ।
ದ್ವಿಜಸ್ತ್ರೀಣಾಮಯಂ ಧರ್ಮಃ ಸರ್ವಾಸಾಂ ಚ ಸನಾತನಃ ॥೩೪೨॥

ದ್ವಿಜೈರ್ದ್ವಿಜಾಂಗನಾಭಿರ್ವಾ ತ್ಯಕ್ತ್ವಾ ಶಂಕರಪೂಜನಂ।
ನ ಪೇಯಂ ಜಲಮಪ್ಯಲ್ಪಂ ಪ್ರಮಾದೇನಾಪಿ ಸರ್ವಥಾ ॥೩೪೩॥

ದ್ವಿಜೋ ವಾ ದ್ವಿಜನಾರೀ ವಾ ತ್ಯಕ್ತ್ವಾ ಶಂಕರಪೂಜನಂ।
ಯದಿ ಭುಂಕ್ತೇ ತದಾ ಯೋನಿಶ್ಚಾಂಡಾಲೀ ಪ್ರಾಪ್ಯತೇ ಧ್ರುವಂ॥೩೪೪॥

ಶಾವಾಶೌಚೇಽಪಿ ಕರ್ತವ್ಯಂ ವಿನಾಸ್ಪರ್ಶಂ ಶಿವಾರ್ಚನಂ।
ಜನ್ಮಾಶೌಚೇಽಪ್ಯೇವಮೇವ ಕರ್ತವ್ಯಂ ಶಂಕರಾರ್ಚನಂ ॥೩೪೫॥

ರುದ್ರನ ಸಂಬಂಧವಾದ ಸಕಲ ಮಂತ್ರಗಳಿಂದಲೂ ದ್ವಿಜರಾದವರು ಶಿವನನ್ನು ಪೂಜೆಮಾಡಲೇಬೇಕು. ಇದು ಬ್ರಾಹ್ಮಣಾದಿಗಳೆಲ್ಲರಿಗೂ ಪುರಾತನಕಾಲದಿಂದ ಬಂದಿರುವ ಧರ್ಮವು. ಹೆಂಗಸರು ಶಿವಪಂಚಾಕ್ಷರಮಂತ್ರದಿಂದಲೇ ಶಿವನನ್ನು ಪೂಜೆಮಾಡಬೇಕು. ದ್ವಿಜ ಸ್ತ್ರೀಯರಿಗೆಲ್ಲಾ ಇದು ಸನಾತನ ಧರ್ಮವೆಂದು ಹೇಳಲ್ಪಟ್ಟಿದೆ. ॥೩೪೧-೩೪೨॥

ದ್ವಿಜರಾಗಲಿ, ದ್ವಿಜಸ್ತ್ರೀಯರಾಗಲೀ ಶಂಕರನನ್ನು ಆರಾಧಿಸದೆ ಪ್ರಮಾದದಿಂದಲಾದರೂ ಅತ್ಯಲ್ಪವಾದ ನೀರನ್ನೂ ಸಹ ಕುಡಿಯಬಾರದು. ಹಾಗೆ ಅವರು ಶಂಕರನನ್ನು ಪೂಜೆಮಾಡದೇ ಊಟಮಾಡಿದ್ದಾದರೆ ಖಂಡಿತವಾಗಿಯೂ ಅವರಿಗೆ ಚಂಡಾಲಜನ್ಮ ಪ್ರಾಪ್ತಿಯಾಗುವುದು. ॥೩೪೩-೩೪೪॥

ಮೃತಾಶೌಚ (ಸತ್ತಸೂತಕ) ಮತ್ತು ಜಾತಾಶೌಚ (ಜನನದಿಂದ ಉಂಟಾಗುವ ಆಶೌಚ) ಗಳಲ್ಲಿಯೂ ಕೂಡ ಶಿವಲಿಂಗವನ್ನು ಮುಟ್ಟದೇ ಶಂಕರನನ್ನು ಪೂಜೆಮಾಡಬಹುದು ಆದರೆ ಈ ಎರಡು ಸೂತಕಗಳಲ್ಲಿಯೂ ಶಿವಲಿಂಗವನ್ನು ಮಾತ್ರ ಮುಟ್ಟಬಾರದು. ದೂರದಲ್ಲಿಯೇ ಇದ್ದುಕೊಂಡು ಯೋಗ್ಯತಾನುಸಾರವಾಗಿ ಪೂಜೆಯನ್ನು ನಡೆಸಬೇಕು. ಶಂಕರನ ಪೂಜಾಕಾಲದಲ್ಲಿ ದ್ವಿಜನಿಗೆ ಯಾವ

ಶಿವಲಿಂಗಸ್ಪರ್ಶಮಾತ್ರಂ ನ ಕಾರ್ಯಂ ಸೂತಕೆದ್ವಯೋಃ ।
ದೂರೇ ಸ್ಥಿತ್ವಾ ಯಥಾಯೋಗಂ ಪೂಜಾ ಕಾರ್ಯೈವ ಶಂಕರೇ ॥೩೪೬॥

ಶಂಕರಾರ್ಚನಕಾಲೇಷು ದ್ವಿಜೋ ನಾಶೌಚದೋಷಭಾಕ್ ।
ಏವಂ ಶ್ರೌತಾಗ್ನಿಹೋಮೇಽಪಿ ದ್ವಿಜೋ ನಾಶೌಚದೋಷಭಾಕ್ ॥೩೪೭॥

ತಥಾಪ್ಯತ್ರ ವಿಶೇಷೋಽಸ್ತಿ ಶಿವಲಿಂಗಾರ್ಚನೇ ಶುಭೇ ।
ಅಗ್ನೌ ಸ್ಪರ್ಶಸ್ತದಾ ಕಾರ್ಯಃ ಶಿವಲಿಂಗೇ ತು ನ ಧ್ರುವಂ ॥೩೪೮॥

ಅಸ್ಪರ್ಶದೋಷನಾಶಾರ್ಥಂ ಸೂತಕಾಂತೇ ಪ್ರಯತ್ನತಃ ।
ರೌದ್ರೇಣ ಚರುಣಾ ಕಾರ್ಯೋ ಹೋಮೋ ರೌದ್ರಃ ಸಹಸ್ರಕಂ ॥೩೪೯॥

ಪ್ರಸವೋ ಜಾಯತೇ ಯಸ್ಯಾಸ್ತಯಾ ತು ಶಿವಪೂಜನಂ ।
ಕರ್ತವ್ಯಂ ಮಾನಸಂ ನಿತ್ಯಂ ದಶಾಹಾಂತಂ ಯಥಾಕ್ರಮಂ ॥೩೫೦॥

ದಶಾಹೇ ಸಮತೀತೇ ತು ಕೃತ್ವಾ ಸ್ನಾನಂ ಯಥಾವಿಧಿ ।
ಶಿವಲಿಂಗಾರ್ಚನಂ ಕಾರ್ಯಂ ದ್ವಿಜಸ್ತ್ರೀಭಿರ್ದ್ವಿಜೈರಿವ ॥೩೫೧॥

ಆಶೌಚವೂ ಉಂಟಾಗುವುದೇ ಇಲ್ಲ. ಹೀಗೆಯೇ ಶ್ರೌತಸಂಬಂಧವಾಗಿ ಅಗ್ನಿಯಲ್ಲಿ ಹೋಮಮಾಡುವಾಗಲೂ ಅವನಿಗೆ ಯಾವ ಆಶೌಚವೂ ಸಂಬಂಧಿಸುವುದಿಲ್ಲ. ||೩೪೫-೩೪೬-೩೪೭||

ಆದರೆ ಶುಭಕರವಾದ ಆ ಶಿವಲಿಂಗಪೂಜೆಯಲ್ಲಿ ಮತ್ತೊಂದು ವಿಶೇಷವಿರುವುದು. ಆಶೌಚಕಾಲದಲ್ಲಿ ಹೋಮಮಾಡುವಾಗ ಅಗ್ನಿಯನ್ನು ಸ್ಪರ್ಶಮಾಡಬಹುದು. ಶಿವಲಿಂಗವನ್ನು ಮಾತ್ರ ಖಂಡಿತವಾಗಿಯೂ ಮುಟ್ಟಬಾರದು. ಈ ಕಾಲದಲ್ಲಿ ಶಿವಲಿಂಗಸ್ಪರ್ಶಮಾಡದೆ ಪೂಜೆಮಾಡಿದ ದೋಷಪರಿಹಾರಕ್ಕಾಗಿ ಸೂತಕ ನಿವೃತ್ತಿಯಾದ ದಿವಸ ರುದ್ರಸಂಬಂಧವಾದ ಮಂತ್ರಗಳಿಂದ ಅಗ್ನಿಯಲ್ಲಿ ಸಾವಿರಚರು ಹೋಮಮಾಡಬೇಕು. ||೩೪೮-೩೪೯||

ಮಕ್ಕಳನ್ನು ಪ್ರಸುವಿಸಿದ ಹೆಂಗಸು ಹತ್ತು ದಿವಸಗಳು ಕಳೆಯುವವರೆಗೂ ಕ್ರಮವಾಗಿ ಮನಸ್ಸಿನಲ್ಲಿಯೇ ಆ ಶಿವನನ್ನು ಪೂಜೆಮಾಡಬೇಕು. ಹತ್ತು ದಿವಸ ಕಳೆದ ಮೇಲೆ, ವಿಧಿಪ್ರಕಾರ ಮಂಗಳಸ್ನಾನ ಮಾಡಿದಮೇಲೆ ದ್ವಿಜರಂತೆಯೇ ದ್ವಿಜ

ದಶಾಹೇ ಸಮತೀತೇ ತು ದ್ವಿಜೈಸ್ತ್ರ್ಯಯಂಬಕೇಶ್ವರಃ ।
ಕರ್ತವ್ಯೋತಿಪ್ರಯತ್ನೇನ ಸತಿಲೋ ಗೋಘೃತಾನ್ವಿತಃ ॥೩೫೨॥

ಹೋಮಃ ಕಾರ್ಯಃ ಪ್ರಯತ್ನೇನ ಸಹಸ್ರಂ ಹವಿಷಾ ದ್ವಿಜೈಃ ।
ಸ್ವಸ್ವಶಾಖೋಕ್ತಮಾರ್ಗೇಣ ಪ್ರತಿಷ್ಠಾಪ್ಯ ಹುತಾಶನಂ ॥೩೫೩॥

ಸೂತಕೇ ಶಿವಲಿಂಗಸ್ಯ ಜಾತಮುಸ್ಪರ್ಶನಂ ಯತಃ ।
ತತಸ್ತದ್ದೋಷಶಾಂತಿಸ್ತು ತೇನ ಹೋಮೇನ ಜಾಯತೇ ॥೩೫೪॥

ಹೋಮೋಽಯಂ ಪುರುಷಾಣಾಂ ತು ಸ್ತ್ರೀಣಾಂ ತು ನ ಕದಾಚನ ।
ಹೋಮೇನ ತು ಯತಸ್ತಾಸಾಮಧಿಕಾರಃ ಶ್ರುತಿಶ್ರುತಃ ॥೩೫೫॥

ಸೂತಕಾಂತೇ ತು ಕರ್ತವ್ಯಂ ಸ್ತ್ರೀಭಿರ್ದಶದಿನಾರ್ಚನಂ ।
ಯಾವದ್ಯಸ್ಮಿನ್ದಿನೇ ತಾವತ್ತದಾ ಸರ್ವಂ ಚ ವಸ್ತುತಃ ॥೩೫೬॥

ಸ್ತ್ರೀಯರಿಂದಲೂ ಅವಶ್ಯವಾಗಿ ಶಿವಲಿಂಗಾರ್ಚನೆಯು ನಡೆಸಲ್ಪಡಬೇಕು. ॥೩೫೦-೩೫೧॥

ಹತ್ತು ದಿವಸಗಳು ಕಳೆದ ಮೇಲೆ ಬ್ರಾಹ್ಮಣರು ಹಸುವಿನ ತುಪ್ಪದಿಂದ ಯುಕ್ತವಾದ ಎಳ್ಳನ್ನು ನಿಯಮದಿಂದ ಆ ತ್ರಿಯಂಬಕನಿಗೆ ಚರುವನ್ನಾಗಿ ಮಾಡಿಕೊಂಡು, ತಮ್ಮ ತಮ್ಮ ಶಾಖೆಗನುಗುಣವಾಗಿ ಗೃಹ್ಯಸೂತ್ರಮಾರ್ಗದಿಂದ ಅಗ್ನಿ ಪ್ರತಿಷ್ಠೆಮಾಡಿ ಅದರಲ್ಲಿ ಸಾವಿರಬಾರಿ ಹೋಮಮಾಡಬೇಕು. ಸೂತಕಕಾಲದಲ್ಲಿ ಆ ಶಿವಲಿಂಗವನ್ನು ಮುಟ್ಟದೇ ಹೋದ ದೋಷವು ಆ ಹೋಮದಿಂದ ಖಂಡಿತವಾಗಿಯೂ ನಿವೃತ್ತಿಯಾಗುತ್ತದೆ. ॥೩೫೨-೩೫೩-೩೫೪॥

ಈ ಹೋಮವು ಪುರುಷರಿಗೆ ಮಾತ್ರ ವಿಹಿತವಾಗಿರುವುದು. ಸ್ತ್ರೀಯರಿಗೆ ಹೋಮಾಧಿಕಾರವಿಲ್ಲ. ವೇದಗಳಲ್ಲಿ ಪುರುಷರಿಗೇ ಹೋಮಾಧಿಕಾರವೆಂದು ವೈಧವಾಗಿ ಉಕ್ತವಾಗಿದೆ. ಜಾತಾಶೌಚದ ಹತ್ತು ದಿವಸಗಳು ಕಳೆದ ಮೇಲೆ ಹೆಂಗಸರು ಹತ್ತು ದಿವಸದ ಪೂಜೆಯನ್ನೂ ಹನ್ನೊಂದನೆಯ ದಿವಸ ಮಾಡಿ ಅನಂತರ ವಾಸ್ತವಿಕವಾದ ನಿತ್ಯಪೂಜೆಯನ್ನು ನಡೆಸಬೇಕು. ॥೩೫೫-೩೫೬॥

ಕಾರ್ಯಂ ರಜಸ್ವಲಾಸ್ತ್ರೀಭಿರ್ಮಾನಸಂ ಶಿವಪೂಜನಂ ।
ಸ್ನಾತ್ವಾ ಕಾರ್ಯಂ ಚತುರ್ಥೇಽಹ್ನಿ ಯಥಾಪೂರ್ವಂ ಶಿವಾರ್ಚನಂ॥೩೫೭॥

ಯದ್ಯೇಕಸ್ಮಿನ್ದಿನೇ ತ್ಯಕ್ತಂ ಶಿವಲಿಂಗಾರ್ಚನಂ ತದಾ ।
ಪಂಚವತ್ಸರ ಪರ್ಯಂತಂ ತಪ್ತಶೈಲೇ ಸ್ಥಿತಿರ್ಭವೇತ್ ॥೩೫೮॥

ದಿನದ್ವಯೇ ಚೇದ್ದ್ವಿಗುಣಂ ತ್ರಿಗುಣಂ ಚ ದಿನತ್ರಯೇ ।
ಏವಮೇವ ಯಥಾಕಾಲಂ ಗುಣವೃದ್ಧಿಃ ಪ್ರಜಾಯತೇ ॥೩೫೯॥

ಸಂತ್ಯಕ್ತೇಶಾರ್ಚನಾನಾಂ ತು ಭವಂತ್ಯನ್ಯಾಶ್ಚ ಯಾತನಾಃ ।
ಯಾತನಾಂತೇ ತತಃ ಪ್ರಾಪ್ಯಂ ದುಃಖಂ ಚಂಡಾಲಜನ್ಮ ಚ ॥೩೬೦॥

ತತಶ್ಚಂಡಾಲಜನ್ಮಾನಿ ಪ್ರಾಪ್ಸ್ಯಾನ್ಯೇವ ಪುನಃ ಪುನಃ ।
ಚಂಡಾಲಜನ್ಮವಿಚ್ಛಿತ್ತಿಸ್ತಾದೃಶಾನಾಂ ನ ಸರ್ವಥಾ ॥೩೬೧॥

ರಜಸ್ವಲೆಯರಾದ ಹೆಂಗಸರು ಕೂಡ ಮಾನಸಿಕವಾಗಿ ಶಿವಪೂಜೆಯನ್ನು ಮಾಡಬೇಕು. ನಾಲ್ಕನೆಯ ದಿವಸ ಋತುಸ್ನಾನವಾದ ಮೇಲೆ ಹಿಂದಿನಂತೆಯೇ ಕ್ರಮವಾಗಿ ಶಿವಪೂಜೆಯನ್ನು ನಡೆಸಬಹುದು. ಒಂದುದಿನ ಶಿವಲಿಂಗಪೂಜೆಮಾಡುವುದನ್ನು ಬಿಟ್ಟರೂ ಐದು ವರುಷಗಳವರೆಗೆ ಕಾದಕಲ್ಲಮೇಲೆ ನರಕದಲ್ಲಿರಬೇಕಾಗುವುದು. ಎರಡುದಿನಬಿಟ್ಟರೆ ಇದಕ್ಕೆರಡರಷ್ಟು ಎಂದರೆ ಹತ್ತು ವರುಷ ; ಮೂರು ದಿನಗಳು ಶಿವಪೂಜೆಯು ನಿಂತರೆ ಮೂರರಷ್ಟು ಅಂದರೆ ಹದಿನೈದು ವರ್ಷಕಾಲ, ಈ ದುಃಖವನ್ನು ಅನುಭವಿಸಬೇಕಾಗಿ ಬರುವುದು. ಹೀಗೆಯೇ ಎಷ್ಟೆಷ್ಟು ದಿನಗಳು ಬಿಟ್ಟರೂ ಅಷ್ಟಷ್ಟು ವರ್ಷಗಳಂತೆ ಫಲವು ಅಭಿವೃದ್ಧಿಯಾಗುತ್ತಲೇ ಹೋಗುವುದು. ॥೩೫೭-೩೫೮-೩೫೯॥

ಈಶ್ವರನನ್ನು ಪೂಜೆಮಾಡದೇ ಬಿಟ್ಟವರಿಗೆ ಇಷ್ಟಲ್ಲದೆ ಇನ್ನೂ ಇತರ ಯಾತನೆಗಳೂ ಸಹ ಉಂಟಾಗುವುವು. ಈ ಯಾತನೆಗಳನ್ನನುಭವಿಸಿದ ಮೇಲೆ ಪುನಃಪುನಃ ದುಃಖವೂ ಚಂಡಾಲಜನ್ಮವೂ ಲಭಿಸುವುದು. ಪ್ರತಿ ಜನ್ಮದಲ್ಲಿಯೂ ಚಂಡಾಲಜನ್ಮವು ಅವರಿಗೆ ತಪ್ಪಲಾರದು. ಶಿವಪೂಜೆ ಮಾಡದವರಿಗೆ ಚಂಡಾಲ ಜನ್ಮವು ಖಂಡಿತವಾಗಿಯೂ ತಪ್ಪುವುದಿಲ್ಲವೆಂದೇ ತಿಳಿಯಬೇಕು. ॥೩೬೦-೩೬೧॥

ದ್ವಿಜಜನ್ಮಾಪಿ ಸಂಪ್ರಾಪ್ಯ ಯೇನ ನಾಭ್ಯರ್ಚ್ಯತೇ ಶಿವಃ ।
ತೇನ ಸಂಪ್ರಾಪ್ಯ ನರಕಂ ಚಂಡಾಲಂ ಜನ್ಮ ಲಭ್ಯತೇ ॥೩೬೨॥

ಯಾವಂತಃ ಸಂತಿ ಚಂಡಾಲಾಸ್ತಾವಂತಃ ಪೂರ್ವಜನ್ಮನಿ ।
ಮೋಹಸಂತ್ಯಕ್ತವಿಧ್ಯುಕ್ತಶಿವಲಿಂಗಾರ್ಚನಾ ಧ್ರುವಂ ॥೩೬೩॥

ಶಿವಲಿಂಗಾನರ್ಚಕಾನಾಂ ಪ್ರಾಯಶ್ಚಿತ್ತಶತೈರಪಿ ।
ಚಂಡಾಲಜನ್ಮವಿಚ್ಛಿತ್ತಿರ್ನ ಭವಿಷ್ಯತಿ ಸರ್ವಥಾ ॥೩೬೪॥

ಕೃತ್ವಾ ವ್ರತಾನ್ಯನೇಕಾನಿ ದಾನಾನ್ಯಪಿ ಸಹಸ್ರಶಃ ।
ಶಿವಲಿಂಗಾರ್ಚನತ್ಯಾಗಾಚ್ಚಂಡಾಲಂ ಜನ್ಮ ಲಭ್ಯತೇ ॥೩೬೫॥

ಪಾತಿವ್ರತ್ಯಂ ತ್ವಯಾ ಸಮ್ಯಗ್ರಕ್ಷಿತಂ ನಾತ್ರ ಸಂಶಯಃ ।
ತಥಾಪಿ ಯೋನಿಂ ಚಾಂಡಾಲೀಂ ಯಾಸಿ ತ್ಯಕ್ತಶಿವಾರ್ಚನಾ ॥೩೬೬॥

ದ್ವಿಜ ಜನ್ಮವನ್ನು ಹೊಂದಿಯೂ ಶಿವನನ್ನು ಪೂಜೆಮಾಡದವನು ನರಕವನ್ನು ಹೊಂದಿ ಅನೇಕ ದುಃಖಗಳನ್ನು ಅನುಭವಿಸಿ ಚಂಡಾಲನಾಗಿ ಹುಟ್ಟುವನು. ಚಂಡಾಲರಿರುವಷ್ಟು ಮಂದಿಯೂ, ಹಿಂದಿನ ಜನ್ಮದಲ್ಲಿ ಅಜ್ಞಾನದಿಂದ ವಿಧಿಪೂರ್ವಕವಾದ ಶಿವಲಿಂಗಾರ್ಚನೆಯನ್ನು ಮಾಡದವರೇ, ಎಂಬುದರಲ್ಲಿ ಖಂಡಿತವಾಗಿಯೂ ಸಂದೇಹವಿಲ್ಲ. ಶಿವಲಿಂಗವನ್ನು ಪೂಜೆಮಾಡದವರಿಗೆ ನೂರಾರು ಪ್ರಾಯಶ್ಚಿತ್ತ ಮಾಡಿದರೂ ಖಂಡಿತವಾಗಿಯೂ ಅವರಿಗೆ ಆ ಚಂಡಾಲಜನ್ಮವು ಬಿಡುಗಡೆಯಾಗುವುದಿಲ್ಲ. ||೩೬೨-೩೬೩-೩೬೪||

ಅನೇಕವ್ರತಗಳು, ಸಾವಿರಾರು ದಾನಗಳು ಇವುಗಳನ್ನು ಮಾಡಿದರೂ ಶಿವಲಿಂಗಪೂಜೆಯನ್ನು ಬಿಡುವುದರಿಂದ ಚಂಡಾಲಜನ್ಮವುಂಟಾಗುತ್ತದೆ. ಬ್ರಾಹ್ಮಣಿಯಾಗಿದ್ದು ನೀನು ಪಾತಿವ್ರತ್ಯವನ್ನು ಚೆನ್ನಾಗಿ ಕಾಪಾಡಿಕೊಂಡು ಬಂದಿರುವೆಯೆಂಬುದರಲ್ಲಿ ಸಂದೇಹವಿಲ್ಲ. ಆದರೂ ನೀನು ಶಿವಪೂಜೆ ಮಾಡದಿರುವುದರಿಂದ ಚಂಡಾಲಜನ್ಮವನ್ನು ಹೊಂದುವುದು ನಿಶ್ಚಯ ' ಎಂದು ಆಕೆಗೆ ಆ ಬ್ರಾಹ್ಮಣರು ಹೇಳಿದರು. ||೩೬೫-೩೬೬||

॥ ವಿಷ್ಣುರುವಾಚ ॥

ಇತಿ ತದ್ವಚನಂ ಶ್ರುತ್ವಾ ಸಂತಪ್ತಾ ಬ್ರಾಹ್ಮಣೀ ತದಾ ।
ಹಾ ಹಾ ಹತಾಸ್ಮಿ ದುಃಖಾರ್ತಾ ಪಪಾತ ಪೃಥಿವೀತಲೇ ॥೩೬೭॥

ತದಾ ಸರ್ಪತನುಂ ಧೃತ್ವಾ ಕಾಲಮೃತ್ಯುಃ ಸಮಾಗತಃ ।
ತದ್ದಷ್ಟ್ವಾ ಸಾ ಮೃತಾ ನಾರೀ ನೀತಾ ಚ ಯಮಕಿಂಕರೈಃ ॥೩೬೮॥

ತತಃ ಪರಮಘೋರೇಷು ನರಕೇಷು ಸ್ಥಿತಾ ತತಃ ।
ಚಂಡಾಲಜನ್ಮ ಸಂಪ್ರಾಪ ಶಂಕರಾನರ್ಚನಾದ್ವಿಧೇ ॥೩೬೯॥

ದ್ವಿಜವಾಕ್ಯೈರ್ಯದಾ ಜಾತಾ ಸಂತಪ್ತಹೃದಯಾ ಪುರಾ ।
ತತೋ ಜಾತಿಸ್ಮರಾ ಸಾಽಭೂಚ್ಛೈವಸಂಭಾಷಣಾದಪಿ ॥೩೭೦॥

ಪ್ರಾಪ್ಯ ಚಂಡಾಲಜನ್ಮಾಪಿ ಸಾ ನಿತ್ಯಂ ಮೋಹವರ್ಜಿತಾ ।
ಶಂಕರಸ್ಮರಣಂ ಕೃತ್ವಾ ಸರ್ವದೇವಾಧಿಸಂಸ್ಥಿತಾ ॥೩೭೧॥

---

ಆ ಬ್ರಾಹ್ಮಣಸ್ತ್ರೀಯು ಆ ಮಾತನ್ನು ಕೇಳಿ ಸಂತಾಪಗೊಂಡು, ಅಯ್ಯೋ, ನಾನು ಶಿವಾರ್ಚನೆ ಮಾಡದೆಹೋದೆನಲ್ಲಾ ಎಂದು ದುಃಖಿತಳಾಗಿ ನೆಲದಮೇಲೆ ಬಿದ್ದಳು. ಆಗ ಕಾಲಮೃತ್ಯುವು ಹಾವಿನ ಶರೀರವನ್ನು ಧರಿಸಿ ಬಂದು ಅವಳನ್ನು ಕಚ್ಚಲು ಆ ನಾರಿಯು ಕೂಡಲೇ ಮೃತಳಾದಳು. ಅನಂತರ ಅವಳನ್ನು ಯಮ ಭಟರು ಯಮಲೋಕಕ್ಕೆ ಕರೆದುಕೊಂಡುಹೋದರು. ॥೩೬೭-೩೬೮॥

ಬ್ರಹ್ಮದೇವನೇ ಕೇಳು, ಆಮೇಲೆ ಆ ನಾರಿಯು ಘೋರತರವಾದ ನರಕಗಳಲ್ಲಿ ಬಹುಕಾಲವಿದ್ದು ದುಃಖವನ್ನನುಭವಿಸಿ ಶಂಕರನನ್ನು ಪೂಜೆಮಾಡದಿದ್ದುದರಿಂದ ಮತ್ತೆ ಚಂಡಾಲಜನ್ಮವನ್ನೇ ಪಡೆದಳು. ಆದರೆ ದ್ವಿಜರ ಮಾತನ್ನು ಕೇಳಿ ಪಶ್ಚಾತ್ತಾಪ ಗೊಂಡ ಮನಸ್ಸುಳ್ಳವಳಾದುದರಿಂದಲೂ ಶಿವಧರ್ಮನಿರತರಾಗಿದ್ದವರೊಡನೆ ಸಂಭಾ ಷಣೆ ನಡೆಸಿದುದರಿಂದಲೂ ಅವಳಿಗೆ ಆ ಜನ್ಮದಲ್ಲಿ ತನ್ನ ಹಿಂದಿನ ಜನ್ಮದ ಸ್ಮೃತಿ ಯುಂಟಾಗಿತ್ತು. ॥೩೬೯-೩೭೦॥

ಆಕೆಯು ಆಗ ಚಂಡಾಲಜನ್ಮವನ್ನು ಪಡೆದಿದ್ದರೂ ಅವಳು ಅಜ್ಞಾನವಿಲ್ಲದ ವಳಾಗಿ ನಿತ್ಯವೂ ಶಂಕರನನ್ನು ಸ್ಮರಣೆಮಾಡುತ್ತಾ, ಯಾವಾಗಲೂ ಮನೋವ್ಯಥೆ

ಕೃತ್ವಾ ಮೃನ್ಮಯಲಿಂಗಾನಿ ಪ್ರತ್ಯಹಂ ಪ್ರೀತಿಪೂರ್ವಕಂ ।
ಪೂಜಯಾಮಾಸ ಸಾ ಪುಷ್ಪೈಃ ಕರವೀರಾದಿಭಿಃ ಶಿವಂ ॥೩೭೨॥

ಶಿವೇತ್ಯುಕ್ತ್ವಾ ಮಹಾದೇವಂ ಶಿವಲಿಂಗಸ್ವರೂಪಿಣಂ ।
ಪೂಜಯಿತ್ವಾ ಸ್ಥಿತಾ ನಿತ್ಯಂ ತತಃ ಸಾ ವಿಜಹೌ ತನುಂ ॥೩೭೩॥

ತತಃ ಸಂಪ್ರಾಪ ಸಾ ಸ್ವರ್ಗಂ ಸ್ವರ್ಗೇ ಶಚ್ಯಾ ಸಹ ಸ್ಥಿತಾ ।
ತತೋ ವಿದರ್ಭರಾಜಸ್ಯ ತನಯಾ ಸಾ ಬಭೂವ ಚ ॥೩೭೪॥

ಸೈವ ಬಾಲ್ಯಂ ಸಮಾರಭ್ಯ ನಿತ್ಯಂ ಜಾತಿಸ್ಮರಾ ಮುದಾ ।
ಚಕಾರ ವಿಧಿವದ್ಬ್ರಹ್ಮನ್ ಶಿವಲಿಂಗಸ್ಯ ಪೂಜನಂ ॥೩೭೫॥

ಉದ್ಧೂಳ್ಯ ಭಸ್ಮನಾಂಗಾನಿ ಕೃತ್ವಾ ರುದ್ರಾಕ್ಷಧಾರಣಂ ।
ಚಕಾರ ಬಾಲಿಕಾಪ್ಯಾರ್ಯಾ ಸಾನಂದಂ ಶಿವಪೂಜನಂ ॥೩೭೬॥

ರುದ್ರಾಕ್ಷಾಲಂಕೃತಾ ನಿತ್ಯಂ ಭಸ್ಮಸಂವೀತವಿಗ್ರಹಾ ।
ಸಾ ರತ್ನಾಭರಣಾದೀನಿ ಜಹೌ ಶಿವಪರಾಯಣಾ ॥೩೭೭॥

ಯುಳ್ಳವಳಾಗಿದ್ದಳು. ಪ್ರತಿನಿತ್ಯವೂ ಮಣ್ಣಿನ ಲಿಂಗಗಳನ್ನು ಮಾಡಿಕೊಂಡು ಕಣಿಗಲೆ ಮುಂತಾದ ಹೂಗಳಿಂದ ಪ್ರೀತಿಪುರಸ್ಸರವಾಗಿ ಶಿವನನ್ನು ಪೂಜೆಮಾಡಲಾರಂಭಿಸಿದಳು. 'ಶಿವ' ಎಂಬುದಾಗಿ ನಾಮಸ್ಮರಣೆ ಮಾಡುತ್ತಾ ಶಿವಲಿಂಗರೂಪಿಯಾಗಿರುವ ಮಹಾದೇವನನ್ನು ನಿತ್ಯವೂ ಪೂಜೆಮಾಡಿ ಅನಂತರ ಕೆಲವುದಿನ ಹಾಗೆಯೇ ಕಳೆದು ಮೃತಳಾದಳು. ॥೩೭೧-೩೭೨-೩೭೩॥

ಶಿವಪೂಜಾಮಹಿಮೆಯಿಂದ ಅವಳು ಸ್ವರ್ಗಲೋಕವನ್ನೈದಿ, ಅಲ್ಲಿ ಶಚಿಯೊಡನೆ ಕೆಲಕಾಲವಿದ್ದು ಆಮೇಲೆ ವಿದರ್ಭರಾಜನ ಮಗಳಾಗಿ ಹುಟ್ಟಿದಳು. ಆಗಲೂ ಬಾಲ್ಯದಿಂದಲೂ ಜಾತಿಸ್ಮರಣೆಯುಳ್ಳವಳಾಗಿ ಪ್ರೀತಿಯಿಂದ ವಿಧಿಪೂರ್ವಕವಾಗಿ ಶಿವಲಿಂಗಪೂಜೆಮಾಡಿದಳು. ॥೩೭೪-೩೭೫॥

ಮೈಗೆಲ್ಲಾ ಭಸ್ಮಲೇಪನ ಮಾಡಿಕೊಂಡು ರುದ್ರಾಕ್ಷಗಳನ್ನು ಧರಿಸಿ, ಬಾಲಿಕೆಯಾದರೂ ಪೂಜ್ಯಳಾದ ಆ ಹುಡುಗಿಯು ಆನಂದದಿಂದ ಶಿವನನ್ನು ಪೂಜೆಮಾಡಿ

ಸುರತ್ನಪಟ್ಟಯೋಗ್ಯೇಽಪಿ ಫಾಲಪಟ್ಟೇ ಮನೋಹರೇ ।
ಫಾಲಪಟ್ಟಂ ವಿಹಾಯ್ಯೈವ ಸಾ ಚಕಾರ ತ್ರಿಪುಂಡ್ರಕಂ ॥೩೭೮॥

ಕಂಠಾಭರಣಯೋಗ್ಯಾಪಿ ಕಂಬುಕಂಠೀ ಮನೋರಮಾ ।
ರೇಜೇ ರುದ್ರಾಕ್ಷಕಂಠಾ ಸಾ ಹೇಮಾಭರಣವರ್ಜನಾತ್ ॥೩೭೯॥

ಚಂದನಾಗರುಕಸ್ತೂರೀ ವಿಲೇಪನರತಾಪಿ ಸಾ ।
ಜಹೌ ಸಾ ಚಂದನಾದೀನಿ ಭಸ್ಮೋದ್ಧೂಳನತತ್ಪರಾ ॥೩೮೦॥

ಶಿವೇತಿ ಶಬ್ದಮನಿಶಮುಚ್ಚಾರ್ಯ ಜನನೀಂ ಪ್ರತಿ ।
ಕಿಂಚಿದ್ವದತಿ ಸಾನಂದಂ ಸ್ಮೇಸ್ಮಿತಂ ಮುದಿತಾನನಾ ॥೩೮೧॥

ಹರ ಶಂಕರ ಗೌರೀಶ ಪಾರ್ವತೀರಮಣೇತಿ ಚ ।
ನಿತ್ಯಮುಕ್ತ್ವಾ ಸ್ಥಿತಾ ಬ್ರಹ್ಮನ್ನತ್ಯುತ್ಸಾಹಪುರಸ್ಸರಂ ॥೩೮೨॥

---

ದಳು. ನಿತ್ಯವೂ ಅವಳು ಶಿವತತ್ಪರಳಾಗಿ ರತ್ನಖಚಿತವಾದ ಆಭರಣಗಳನ್ನು ಬಿಟ್ಟು ರುದ್ರಾಕ್ಷ ಮತ್ತು ವಿಭೂತಿಗಳನ್ನೇ ಅಲಂಕಾರಮಾಡಿಕೊಳ್ಳುತ್ತಿದ್ದಳು. ॥೩೭೬-೩೭೭॥

ರತ್ನಮಯವಾದ ಪಟ್ಟಿಯನ್ನು ಧರಿಸಲು ಯೋಗ್ಯವೂ ಮನೋಹರವೂ ಆದ ತನ್ನ ಹಣೆಯಲ್ಲಿ ರತ್ನಪಟ್ಟಿವನ್ನು ಧರಿಸದೇ ಭಸ್ಮತ್ರಿಪುಂಡ್ರವನ್ನೇ ಅಲಂಕರಿಸಿಕೊಳ್ಳುತ್ತಿದ್ದಳು ಶಂಖದಂತೆ ದುಂಡಾದ ಕಂಠವುಳ್ಳವಳೂ, ಮನೋಹರಳೂ, ಆಗಿ ದಿವ್ಯವಾದ ಕಂಠಾಭರಣವನ್ನು ಧರಿಸಲು ಯೋಗ್ಯಳಾಗಿದ್ದರೂ, ಅಮೂಲ್ಯವಾದ ಸುವರ್ಣಾಭರಣಗಳನ್ನು ತೊಡದೆ, ಕೇವಲ ರುದ್ರಾಕ್ಷಮಾಲೆಯನ್ನೇ ಕಂಠದಲ್ಲಿ ಧರಿಸಿ ಶೋಭಿಸುತ್ತಿದ್ದಳು. ಚಂದನ, ಅಗುರು ಮತ್ತು ಕಸ್ತೂರಿ ಮುಂತಾದವುಗಳನ್ನು ಲೇಪನಮಾಡಿಕೊಳ್ಳುವುದರಲ್ಲಿ ಆಸಕ್ತಳಾಗಿದ್ದರೂ ಅವಳು ಅವುಗಳನ್ನು ಬಿಟ್ಟು ಯಾವಾಗಲೂ ವಿಭೂತಿಲೇಪನದಲ್ಲಿಯೇ ನಿರತಳಾಗಿದ್ದಳು. ॥೩೭೮-೩೭೯.೩೮೦॥

ಮೊದಲು 'ಶಿವ' ಎಂಬ ಶಬ್ದವನ್ನು ಅನವರತವೂ ಉಚ್ಚಾರಣೆಮಾಡುತ್ತಾ ಅನಂತರ ತನ್ನ ತಾಯಿಯೊಡನೆ ಹಸನ್ಮುಖಳಾಗಿ ಆದರದಿಂದ ತನಗೆ ಬೇಕಾದಂತೆ ಮಾತನಾಡುತ್ತಿದ್ದಳು. ಅಯ್ಯ ಬ್ರಹ್ಮನೇ, ಆಕೆಯು ಸರ್ವದಾ 'ಹರ, ಶಂಕರ, ಗೌರೀಶ, ಪಾರ್ವತೀರಮಣ,' ಎಂಬುದಾಗಿ ನಿತ್ಯವೂ ಉತ್ಸಾಹಪೂರ್ವಕವಾಗಿ ಶಿವನಾಮಸ್ಮರಣೆಯನ್ನು ತಪ್ಪದೆ ಮಾಡುತ್ತಿದ್ದಳು. ॥೩೮೧-೩೮೨॥

ಈದೃಶೀ ಬಾಲಿಕಾ ಪೃಷ್ಟಾ ಕದಾಚಿಜ್ಜನಕೇನ ಸಾ ।
ಕಥಮೇತಾದೃಶೀ ಬುದ್ಧಿಸ್ತವ ಜಾತೇತಿ ಸಾದರಂ ॥೩೮೩॥

ಪಿತ್ರಾ ಪೃಷ್ಟಾ ಯಥಾಪೂರ್ವಂ ವೃತ್ತಾಂತಮಖಿಲಂ ತದಾ ।
ಜಗಾದಾದಿಪ್ರಯತ್ನೇನ ಜನಕಾನಂದವರ್ಧಿನೀ ॥೩೮೪॥

ತದುಕ್ತಮಖಿಲಂ ಶ್ರುತ್ವಾ ವಿದರ್ಭಾಧಿಪತಿಸ್ತದಾ ।
ಪುಲಕಾಂಕಿತಸರ್ವಾಂಗಃ ಸಾನಂದಾಶ್ರೂಣ್ಯಮುಂಚತ ॥೩೮೫॥

ತದಾ ಪ್ರಭೃತಿ ಯತ್ನೇನ ಸ ವಿದರ್ಭಮಹೀಪತಿಃ ।
ಸಾದರಂ ಪೂಜಯಾಮಾಸ ಶಂಕರಂ ಲೋಕಶಂಕರಂ ॥೩೮೬॥

ಸರ್ವೇ ತಾಂಬೂಲಿಕಾಂ ದೃಷ್ಟ್ವಾ ವಿದರ್ಭಾಧಿಪತೇಃ ಸುತಾಂ ।
ಸುಭಗೇತಿ ಚ ತಾಂ ಪ್ರಾಹುರ್ನಿತ್ಯಂ ಜಯಪುರಃಸರಂ ॥೩೮೭॥

ಸರ್ವೇ ಶಿವಾರ್ಚಕಾ ಜಾತಾ ದೃಷ್ಟ್ವಾ ತಾಂ ಶಿವಪೂಜಕಾಂ ।
ಉದ್ಧೂಳನತ್ರಿಪುಂಡ್ರಾಂಕಾ ರುದ್ರಾಕ್ಷಾಂಕಾಶ್ಚ ಸರ್ವದಾ ॥೩೮೮॥

ಇಂತಹ ಬಾಲಿಕೆಯನ್ನು ನೋಡಿ ಒಂದುದಿವಸ ಅವಳ ತಂದೆಯು, ಮಗಳೇ, ನಿನಗೆ ಇಂತಹ ಬುದ್ಧಿಯು ಹೇಗೆ ಉಂಟಾಯಿತೆಂದು ಆದರದಿಂದ ಪ್ರಶ್ನೆಮಾಡಲು, ಆಗ ಬಾಲಿಕೆಯು ತನ್ನ ತಂದೆಗೆ ಆನಂದವುಂಟಾಗುವಂತೆ, ತನ್ನ ಸಮಾಚಾರವನ್ನೆಲ್ಲಾ ಪ್ರಯತ್ನಪೂರ್ವಕವಾಗಿ ತಿಳಿಸಿದಳು. ॥೩೮೩-೩೮೪॥

ಆ ಮಾತನ್ನೆಲ್ಲಾ ಕೇಳಿ ಆಗ ವಿದರ್ಭರಾಜನು ರೋಮಾಂಚವುಳ್ಳವನಾಗಿ ಆನಂದದಿಂದ ಕಣ್ಣೀರನ್ನು ಸುರಿಸಿದನು. ಅದು ಮೊದಲುಗೊಂಡು ಆ ವಿದರ್ಭರಾಜನೂ ಕೂಡ ಜಗನ್ಮಂಗಳಕರನಾದ ಶಂಕರನನ್ನು ಆದರದಿಂದ ಪೂಜಿಸಲಾರಂಭಿಸಿದನು. ॥೩೮೫-೩೮೬॥

ಎಲ್ಲರೂ ವಿದರ್ಭಾಧಿಪತಿಯ ಮಗಳಾದ ಆ ತಾಂಬೂಲಿಕೆಯ ಶಿವಭಕ್ತಿಯನ್ನು ನೋಡಿ ನಿತ್ಯವೂ ಜಯಶಬ್ದಪೂರ್ವಕವಾಗಿ ಅವಳೇ ಸೌಭಾಗ್ಯವತಿಯೆಂದು ಹೇಳುತ್ತಿದ್ದರು. ಶಿವಪೂಜಕಳಾದ ಅವಳನ್ನು ನೋಡಿ ಎಲ್ಲರೂ ಭಸ್ಮಲೇಪನ, ಭಸ್ಮ

ಶಿವಸ್ಥಾನಾನಿ ಜಾತಾನಿ ವಿದರ್ಭಾಧಿಪಪತ್ತನೇ ।
ಶಿವನಾಮಾಂಕಿತಾ ಏವ ಸರ್ವೇಽಪ್ಯಾಸನ್ನನಾ ವಿಧೇ ॥೩೮೯॥

ಶಿವಸ್ಥಾನೇಷು ಸರ್ವೇಷು ಶೈವಾ ಏವ ಸ್ಥಿತಾ ಸ್ಸದಾ ।
ಶ್ರುತಾಃ ಶಿವಕಥಾ ಏವ ವಿದರ್ಭಾಧಿಪಪಟ್ಟಣೇ ॥೩೯೦॥

ಯತ್ರ ಗಚ್ಛಂತಿ ತತ್ರೈವ ಶಿವಸ್ಥಾನಂ ಮನೋಹರಂ ।
ತತ್ರಸ್ಥೈರ್ದೃಶ್ಯತೇ ಲೋಕೈಃ ಶಿವಾಲಾಪಸಮನ್ವಿತಂ ॥೩೯೧॥

ದಿನೇ ದಿನೇ ವಿದರ್ಭೇಶೋ ಮಹದೈಶ್ವರ್ಯಸಂಯುತಃ ।
ವವೃಧೇ ಶ್ರೀಮಹಾದೇವಪೂಜಯಾ ಚತುರಾನನ ॥೩೯೨॥

ಏವಂ ಸ್ಥಿತಃ ಸ ಭೂಪಾಲಸ್ತತ್ಸುತಾಪಿ ಪ್ರಯತ್ನತಃ ।
ಪೂಜಯಂತೀ ಮಹಾದೇವಂ ವವೃಧೇ ನವಯೌವನಾ ॥೩೯೩॥

ತ್ರಿಪುಂಡ್ರ, ರುದ್ರಾಕ್ಷಗಳನ್ನು ಧರಿಸಿ ಯಾವಾಗಲೂ ಶಿವಪೂಜಾನಿರತರಾದರು. ||೩೮೭-೩೮೮||

ಅಯ್ಯಾ ಬ್ರಹ್ಮನೇ, ಆದರಪರಿಣಾಮವಾಗಿ ಆ ವಿದರ್ಭರಾಜನ ಪಟ್ಟಣದಲ್ಲಿ ಎಲ್ಲೆಲ್ಲೂ ಶಿವದೇವಸ್ಥಾನಗಳೇ ಆದವು. ಎಲ್ಲರೂ ಶಿವನಾಮಗಳಿಂದಲೇ ವ್ಯವಹರಿಸಲ್ಪಡುತ್ತಿದ್ದರು. ಶಿವದೇವಾಲಯಗಳಲ್ಲೆಲ್ಲಾ ಯಾವಾಗಲೂ ಶೈವರೇ ನೆಲಸುತ್ತಿದ್ದರು. ಆ ವಿದರ್ಭರಾಜನ ಪಟ್ಟಣದಲ್ಲೆಲ್ಲಾ ಎಲ್ಲೆಲ್ಲೂ ಶಿವಕಥೆಗಳ ಶ್ರವಣವೇ ಆಗುತ್ತಿದ್ದಿತು. ||೩೮೯-೩೯೦||

ಆ ದೇಶದಲ್ಲಿ ಜನಗಳು ಎಲ್ಲೆಲ್ಲಿ ಹೋದರೂ ಶಿವದೇವಾಲಯಗಳೇ ಕಾಣಲಾರಂಭಿಸಿದುವು. ಅವುಗಳಲ್ಲಿಯೂ ಶಿವನ ಸಂಬಂಧವಾದ ಆಲಾಪಗಳೇ ನಡೆಯುತ್ತಿದ್ದವು. ವಿದರ್ಭರಾಜನು ದಿನದಿನಕ್ಕೆ ತುಂಬಾ ಐಶ್ವರ್ಯಸಂಪನ್ನನಾಗುತ್ತಾ ಆ ಮಹಾದೇವನ ಪೂಜೆಯಿಂದ ಅಭಿವೃದ್ಧಿ ಹೊಂದುತ್ತಿದ್ದನು. ||೩೯೧-೩೯೨||

ಹೀಗೆಯೇ ಆ ವಿದರ್ಭರಾಜನೂ ಮತ್ತು ನವಯೌವನಭರಿತಳಾದ ಅವನ ಮಗಳೂ ನಿಯಮದಿಂದ ಆ ಮಹಾದೇವನನ್ನು ಪೂಜೆಮಾಡುತ್ತಾ ಅಭಿವೃದ್ಧಿ

ಸಾ ದತ್ತಾ ಕುಲನಾಥಾಯ ವಿದರ್ಭೇಣ ಮಹೀಭುಜಾ ।
ಸೋಽಪಿ ತಾಂ ಸುಂದರೀಂ ಪ್ರಾಪ್ಯ ಬಭೂವಾನಂದಸಂಯುತಃ॥೩೯೪॥

ಕುಲನಾಥೋ ಮಹಾದೇವಂ ಲಿಂಗರೂಪಿಣಮವ್ಯಯಂ ।
ಪೂಜಯಾಮಾಸ ಯತ್ನೇನ ರತ್ನಾದ್ಯೈರನ್ವಹಂ ಮುದಾ ॥೩೯೫॥

ಸಾ ವೈದರ್ಭೀ ಪತಿಂ ದೃಷ್ಟ್ವಾ ಕುಲನಾಥಂ ಶಿವಾರ್ಚಕಂ ।
ಅತ್ಯಂತಮುದಿತಾ ನಿತ್ಯಂ ಚಕಾರ ಶಿವಪೂಜನಂ ॥೩೯೬॥

ಸಾ ಚಕಾರಾನ್ವಹಂ ಭಕ್ತ್ಯಾ ಶ್ರೀಬಿಲ್ವೈರಮಿತೈರ್ನವೈಃ ।
ಶಿವಲಿಂಗಾರ್ಚನಂ ಹೇಮ್ನೈಸ್ತಾವದ್ಭಿಃ ಕಮಲೈರಪಿ ॥೩೯೭॥

ಸಾ ಚಕಾರಾನ್ವಹಂ ಶುದ್ಧೈಃ ಕರವೀರೈಃ ಸಿತಾಽಸಿತೈಃ ।
ಶಿವಲಿಂಗಸ್ವರೂಪಸ್ಯ ಮಹಾದೇವಸ್ಯ ಪೂಜನಂ ॥೩೯೮॥

ಹೊಂದುತ್ತಿದ್ದರು ಕಾಲಕ್ರಮದಲ್ಲಿ ವಿದರ್ಭರಾಜನು ಕುಲನಾಥನೆಂಬುವನಿಗೆ ತನ್ನ ಸುಂದರಿಯಾದ ಮಗಳನ್ನು ಕೊಟ್ಟು ವಿವಾಹಮಾಡಿದನು. ಆ ಕುಲನಾಥನೂ ಭಕ್ತಿಸಂಪನ್ನಳಾದ ಸುಂದರಿಯೊಡಗೂಡಿ ಆನಂದಭರಿತನಾಗಿದ್ದನು ||೩೯೩-೩೯೪||

ಆ ಕುಲನಾಥನೂ ಶಿವಲಿಂಗಸ್ವರೂಪಿಯೂ, ನಾಶರಹಿತನೂ ಆದ ಮಹಾದೇವವನ್ನು ನಿತ್ಯವೂ ಸಂತೋಷದಿಂದ ರತ್ನವೇ ಮುಂತಾದುವುಗಳಿಂದ ನಿಯಮಬದ್ಧನಾಗಿ ಪೂಜೆಮಾಡುತ್ತಿದ್ದನು. ಆತನ ಪತ್ನಿಯಾದ ತಾಂಬೂಲಿಕೆಯೂ ವಿದರ್ಭರಾಜನಾದ ಕುಲನಾಥನು ಶಿವಪೂಜಾನಿರತನಾಗಿರುವುದನ್ನು ನೋಡಿ ಅತ್ಯಂತ ಸಂತೋಷಭರಿತಳಾಗಿ ನಿತ್ಯವೂ ತಾನೂ ಶಿವಪೂಜೆಯನ್ನು ತಪ್ಪದೆ ಮಾಡುತ್ತಿದ್ದಳು. ||೩೯೫-೩೯೬||

ಅವಳು ಪ್ರತಿದಿನವೂ ಶುದ್ಧವಾದ ಹೊಸಬಿಲ್ವದಳಗಳಿಂದಲೂ, ಚಿನ್ನದಿಂದ ನಿರ್ಮಿತಗಳಾದ ಕಮಲಗಳಿಂದಲೂ, ಪರಿಶುದ್ಧವಾದ ಬಿಳುಪು ಮತ್ತು ಕೆಂಪು ಕಣಿಗಲೆ ಹೂಗಳಿಂದಲೂ, ಶಿವಲಿಂಗಸ್ವರೂಪಿಯಾಗಿರುವ ಮಹಾದೇವನನ್ನು ಭಕ್ತಿಯಿಂದ ಅರ್ಚಿಸಿದಳು. ||೩೯೭-೩೯೮||

ವೈದರ್ಭೀ ಕಾರಯಾಮಾಸ ನವಬಿಲ್ವವನಾನಿ ಸಾ ।
ಸರಾಂಸಿ ಕಾರಯಾಮಾಸ ಕಮಲಾನಾಂ ಚ ಸಾ ಮುದಾ ॥೯೯॥

ಕಾರಯಾಮಾಸ ಯತ್ನೇನ ಕರವೀರವನಾನ್ಯಪಿ ।
ವನಾನಿ ತಾನಿ ಜಾತಾನಿ ಶತಲಕ್ಷಂ ಚತುರ್ಮುಖ ॥೪೦೦॥

ವನಾನಿ ತಾನಿ ಜಾತಾನಿ ಸರ್ವಾಣ್ಯಪ್ಯೇಕದಾ ವಿಧೇ ।
ಪುಷ್ಪಿತಾನ್ಯತಿರಮ್ಯಾಣಿ ದೃಷ್ಟಿಭವ್ಯಾನಿ ಸರ್ವದಾ ॥೪೦೧॥

ಏಕೈಕಸ್ಮಿನ್ವನೇ ಜಾತಾ ಶತಲಕ್ಷಮನೋಕಹಾಃ ।
ಪ್ರತಿಸ್ಕಂಧಂ ಪ್ರಸೂನಾನಿ ತೇಷು ಜಾತಾನಿ ಕೋಟಿಶಃ ॥೪೦೨॥

ಯತ್ನೇನಾನೀಯ್ಯ ಸಾ ನಿತ್ಯಂ ಹೇಮಪದ್ಮಾನಿ ಸಂತತಂ ।
ಪೂಜಯಾಮಾಸ ಯತ್ನೇನ ಬಿಲ್ವಾನಿ ಚ ಸದಾಶಿವಂ ॥೪೦೩॥

ಕರವೀರವನೇಭ್ಯಃ ಸಾ ಸರ್ವೇಭ್ಯೋಽಪ್ಯತಿಯತ್ನತಃ ।
ಪುಷ್ಪಾಣ್ಯಾನಾಯ್ಯ ಸರ್ವಾಣಿ ಪೂಜಯಾಮಾಸ ಶಂಕರಂ ॥೪೦೪॥

---

ಅಯ್ಯ ಚತುರ್ಮುಖಬ್ರಹ್ಮನೇ, ಆ ವಿದರ್ಭರಾಜಕುಮಾರಿಯು ಶಿವಪೂಜಾರ್ಥವಾಗಿ ಹೊಸ ಬಿಲ್ವವನ, ಕಮಲಸರೋವರ ಮತ್ತು ಕಣಿಗಲೆಹೂವಿನ ತೋಟಗಳನ್ನು ಅತ್ಯಂತಾಸಕ್ತಿಯುಳ್ಳವಳಾಗಿ ಸ್ಥಾಪನೆಮಾಡಿಸಿದಳು. ಅಯ್ಯ ಬ್ರಹ್ಮದೇವನೇ, ಆ ವನಗಳು ಈಗ ನೂರುಲಕ್ಷ ಸಂಖ್ಯೆಯುಳ್ಳವುಗಳಾಗಿವೆ. ॥೯೯-೪೦೦॥

ಬ್ರಹ್ಮನೇ, ಆ ಹೂಗಿಡಗಳ ಕಾಡೆಲ್ಲವೂ ಒಂದೇಕಾಲದಲ್ಲಿ ಹೂವುಗಳಿಂದ ಅರಳಿ, ಮನೋಹರವಾಗಿ ನೋಡುವುದಕ್ಕೆ ಆನಂದವನ್ನುಂಟುಮಾಡುತ್ತಿದ್ದವು. ಒಂದೊಂದು ವನದಲ್ಲಿ ಕೋಟ್ಯಂತರ ಮರಗಳಾದವು. ಒಂದೊಂದು ಮರದ ಕೊಂಬೆಯಲ್ಲಿಯೂ ಕೋಟ್ಯಂತರ ಹೂವುಗಳಾದವು. ॥೪೦೧-೪೦೨॥

ಇವಳು ಪ್ರತಿದಿನವೂ ಬಲಾತ್ಕಾರವಾಗಿ ಸುವರ್ಣದಂತೆ ಶೋಭಿಸುವ ಕಮಲಗಳನ್ನೂ, ಬಿಲ್ವದಳಗಳನ್ನೂ ಎಲ್ಲಾ ಕರವೀರವನದಿಂದಲೂ ಅರಳಿರುವ ಬಗೆಬಗೆಯ

ಏವಂ ಪ್ರತಿದಿನಂ ಪುಷ್ಪೈಃ ಕರವೀರೈಃ ಸಿತಾಸಿತೈಃ ।
ಹೇಮಪದ್ಮೈರ್ಬಿಲ್ವಪತ್ರೈಃ ಶಿವಮಭ್ಯರ್ಚ್ಯ ಸಂಸ್ಥಿತಾ ॥೪೦೫॥

ಪುರಾ ಕಶ್ಚಿದ್ದ್ವಿಜೋ ದೃಷ್ಟಃ ಕರವೀರವನೇ ತಯಾ ।
ಕರವೀರೈಃ ಪೂಜಯಂತಂ ಮಹಾದೇವಂ ಸಿತಾಸಿತೈಃ ॥೪೦೬॥

ಸಾ ನತ್ವಾ ದ್ವಿಜವರ್ಯಂ ತಂ ಶಿವಪೂಜಾಪರಾಯಣಂ ।
ಬಭಾಷೇ ಭಕ್ತಿಭಾವೇನ ಕೃತಾಂಜಲಿಪುಟಾ ವಿಧೇ ॥೪೦೭॥

॥ ವೈದರ್ಭ್ಯುವಾಚ ॥

ಪೂಜ್ಯತೇ ಗಿರಿಜಾನಾಥಃ ಕರವೀರೈಃ ಸಿತಾಸಿತೈಃ ।
ಜಲಾಪ್ಲುತೈರ್ನವೈಃ ಶುದ್ಧೈಸ್ತ್ವಯಾ ಮಂತ್ರಪುರಸ್ಸರಂ ॥೪೦೮॥

ಬಿಲ್ವಪತ್ರೈಶ್ಚ ವಿಮಲೈಸ್ತ್ವಯಾ ಸಂಪೂಜ್ಯತೇ ಶಿವಃ ।
ಪೂಜ್ಯತೇ ಶಂಕರೋ ನಿತ್ಯಂ ಸುವರ್ಣಕಮಲೈರಪಿ ॥೪೦೯॥

ಕರವೀರಪುಷ್ಪಗಳನ್ನೂ ತರಿಸಿ ನಿಯಮದಿಂದ ಆ ಜಗನ್ಮಂಗಳಪ್ರದನಾದ ಸದಾಶಿವನನ್ನು ಪೂಜೆಮಾಡುತ್ತಿದ್ದಳು. ॥೪೦೩-೪೦೪॥

ಹೀಗೆಯೇ ಅವಳು ಪ್ರತಿದಿನವೂ ಬಿಳುಪಾದ ಮತ್ತು ಕೆಂಪು ಕಣಿಗಲೇಹೂಗಳಿಂದಲೂ, ಸುವರ್ಣಕಮಲ ಮತ್ತು ಬಿಲ್ವದಳಗಳಿಂದಲೂ ಪರಶಿವನನ್ನು ಪೂಜೆಮಾಡುತ್ತಾ ಇದ್ದಳು. ಹೀಗಿರಲೊಂದುದಿನ ಆಕೆಯು ಕರವೀರವನದಲ್ಲಿ ಬಿಳುಪಾದ ಮತ್ತು ಕೆಂಪಾದ ಕಣಿಗಲೇ ಹೂಗಳಿಂದ ಮಹಾದೇವನನ್ನು ಪೂಜೆಮಾಡುತ್ತಿದ್ದ ದ್ವಿಜನೊಬ್ಬನನ್ನು ನೋಡಿದಳು. ॥೪೦೫-೪೦೬॥

ಕೂಡಲೇ ಅವಳು ಶಿವಪೂಜಾನಿರತನಾದ ಆ ದ್ವಿಜವರ್ಯನಿಗೆ ಕೈಮುಗಿದು ನಮಸ್ಕಾರಮಾಡಿ ಭಕ್ತಿಯಿಂದ ಅವನೊಡನಿಂತೆಂದಳು. ॥೪೦೭॥

"ಅಯ್ಯ ಬ್ರಾಹ್ಮಣನೇ, ನೀರಿನಲ್ಲಿ ತೋಯ್ದು ಹೊಸದೂ, ಶುದ್ಧವೂ ಆಗಿರುವ ಬಿಳುಪು ಮತ್ತು ಕೆಂಪುಬಣ್ಣದ ಕಣಿಗಲಹೂಗಳಿಂದ ನೀನು ಮಂತ್ರಪೂರ್ವಕವಾಗಿ ಆ ಗಿರಿಜಾರಮಣನನ್ನು ಪೂಜೆಮಾಡುತ್ತಿರುವೆ; ಮತ್ತು ನಿರ್ಮಲವಾದ ಬಿಲ್ವದಳ

ಕರವೀರೈರ್ಬಿಲ್ವಪತ್ರೈಃ ಸುವರ್ಣಕಮಲೈರಪಿ ।
ಪೂಜಿತೇ ಶಂಕರೇ ನಿತ್ಯಂ ಪುಣ್ಯಂ ಸ್ಯಾತ್ಕೀದೃಶಂ ವದ ॥೪೧೦॥

ಇತಿ ತದ್ವಚನಂ ಶ್ರುತ್ವಾ ಪೂಜಾಂತೇ ಬ್ರಾಹ್ಮಣೋ ಪಿಧೇ ।
ವಿನಯಾವನತೋ ಭೂತ್ವಾ ಬಭಾಷೇ ವಚನಂ ಮುದಾ ॥೪೧೧॥

॥ ದ್ವಿಜ ಉವಾಚ ॥

ಬಿಲ್ವಪತ್ರಾಂತರಾಲೈಸ್ತು ಸಂಛಾದ್ಯ ಶಿವಮಸ್ತಕಂ ।
ಶಿವಲೋಕಮವಾಪ್ನೋತಿ ಶಿವೇನ ಸಹ ಮೋದತೇ ॥೪೧೨॥

ಭಸ್ಮೋದ್ಧೂಳಿತಸರ್ವಾಂಗಃ ಶುದ್ಧರುದ್ರಾಕ್ಷಭೂಷಣಃ ।
ಬಿಲ್ವಪತ್ರೈಃ ಸಮಭ್ಯರ್ಚ್ಯ ಶಂಕರಂ ಯಾತಿ ಶಂಕರಂ ॥೪೧೩॥

ಮತ್ತು ಸುವರ್ಣಕಮಲಗಳನ್ನೂ ಪರಶಿವನಿಗೆ ನೀನು ನಿತ್ಯವೂ ಅರ್ಪಿಸುತ್ತಿರುವೆ. ದ್ವಿಜಶ್ರೇಷ್ಠನೇ, ಕಣಿಗಲೆಹೂ, ಬಿಲ್ವದಳ ಮತ್ತು ಸುವರ್ಣಕಮಲಗಳಿಂದ ನಿತ್ಯವೂ ಆ ಶಂಕರನನ್ನು ಪೂಜೆಮಾಡಿದರೆ ಎಂತಹ ಪುಣ್ಯವುಂಟಾಗುವುದೆಂಬುದನ್ನು ನನಗೆ ತಿಳಿಸು." ॥೪೦೮-೪೦೯-೪೧೦॥

ಎಂಬುದಾಗಿ ಪ್ರಶ್ನೆಮಾಡಿದ ಆ ವೈದರ್ಭಿಯ ಮಾತುಗಳನ್ನು ಕೇಳಿ ಆ ಬ್ರಾಹ್ಮಣನು ತನ್ನ ಪೂಜೆಯು ಮುಗಿದಮೇಲೆ ವಿನಯದಿಂದ ತಲೆಬಾಗಿ ಸಂತೋಷದಿಂದ ಹೀಗೆಂದನು. ॥೪೧೧॥

ತಾಯೆ, ಬಿಲ್ವಪತ್ರೆಗಳನ್ನು ಮಧ್ಯೆ ಕೊಂಚವೂ ಅವಕಾಶವಿಲ್ಲದಂತೆ ಶಿವಲಿಂಗದಮೇಲೆ ಪೂಜೆಮಾಡಿದವನು ಶಿವಲೋಕವನ್ನೈದಿ ಪರಶಿವನೊಡನೆ ಆನಂದದಿಂದ ವಾಸಿಸುತ್ತಾನೆ. ಸಕಲ ಅವಯವಗಳಿಗೂ ಭಸ್ಮವನ್ನು ಲೇಪನಮಾಡಿಕೊಂಡು, ಶುದ್ಧವಾದ ರುದ್ರಾಕ್ಷಾಭರಣದಿಂದ ಅಲಂಕೃತನಾಗಿ ಬಿಲ್ವದಳಗಳಿಂದ ಶಂಕರನನ್ನು ಪೂಜೆಮಾಡುವವನು ಜಗನ್ಮಂಗಳಕರನಾದ ಆ ಶಂಕರನಲ್ಲಿಯೇ ಲೀನನಾಗುತ್ತಾನೆ. ॥೪೧೨-೪೧೩॥

ಬಿಲ್ವಪತ್ರೈರ್ಮಹಾದೇವಂ ಯೋಽರ್ಚಯಿಷ್ಯತಿ ಭಕ್ತಿತಃ ।
ಸ ಮಹಾಪಾಪಕೋಟಿಭ್ಯೋ ಮುಕ್ತೋ ಮುಕ್ತಿಂ ಪ್ರಯಾಸ್ಯತಿ॥೪೧೪॥

ತ್ರಿದಳಂ ತ್ರಿಗುಣಾಕಾರಂ ತ್ರಿನೇತ್ರಂ ಚ ತ್ರಿಧಾಯುಷಂ ।
ತ್ರಿಜನ್ಮಪಾಪಸಂಹಾರಮೇಕಬಿಲ್ವಂ ಶಿವಾರ್ಪಿತಂ ॥೪೧೫॥

ತ್ರಿಶೂಲಸಂನಿಭೈರೀಶೇ ಬಿಲ್ವಪತ್ರೈಃ ಸಮರ್ಚಿತೇ ।
ಸದ್ಯ ಏವ ವಿನಶ್ಯಂತಿ ಮಹಾಪಾತಕಕೋಟಯಃ ॥೪೧೬॥

ಬಿಲ್ವಪತ್ರೇಣ ಶುಷ್ಕೇಣಾಪ್ಯರ್ಚಿತಃ ಪಾರ್ವತೀಪತಿಃ ।
ದದಾತಿ ಪರಮಾಮೃದ್ಧಿಂ ಸಾಯುಜ್ಯಂ ಚ ತನುವ್ಯಯೇ ॥೪೧೭॥

ಸಚ್ಛಿದ್ರಮಸ್ತು ಶುಷ್ಕಂ ವಾ ಶಕಲಿತಂ ವಾ ಜಲಾಪ್ಲುತಂ ।
ಬಿಲ್ವಪತ್ರಂ ಸ್ವತಃ ಶುದ್ಧಂ ಶಿವಪ್ರಿಯಕರಂ ಧ್ರುವಂ ॥೪೧೮॥

ಬಿಲ್ವದಳಗಳಿಂದ ಭಕ್ತಿಪೂರ್ವಕವಾಗಿ ಮಹಾದೇವನನ್ನು ಪೂಜೆಮಾಡುವವನು ಸಕಲ ಮಹಾಪಾಪಗಳಿಂದಲೂ ಬಿಡುಗಡೆ ಹೊಂದಿ ಕೊನೆಗೆ ಮೋಕ್ಷವನ್ನು ಪಡೆಯುವನು. ಮೂರು ದಳವುಳ್ಳದ್ದೂ, ಸತ್ವರಜಸ್ತಮೋರೂಪವಾದ ಮೂರು ಗುಣಗಳ ಸ್ವರೂಪವಾದುದೂ, ಪರಶಿವನ ನೇತ್ರತ್ರಯಗಳಂತೆ ವಿರಾಜಿಸುವುದೂ, ಭೂತ, ಭವಿಷ್ಯದ್ವರ್ತಮಾನರೂಪವಾದ ಮೂರುಕಾಲಗಳಲ್ಲಿಯೂ ಕಂಡುಬರುವುದೂ ಆದ ಒಂದೇಒಂದು ಬಿಲ್ವದಳವನ್ನು ಶಿವನಿಗೆ ಸಮರ್ಪಣೆಮಾಡಿದರೆ ಮೂರುಜನ್ಮದ ಪಾಪಗಳನ್ನೂ ಸಂಹಾರಮಾಡಿದಂತಾಗುವುದು. ॥೪೧೪-೪೧೫॥

ತ್ರಿಶೂಲಕ್ಕೆ ಸಮಾನವಾದ ಬಿಲ್ವಪತ್ರೆಗಳಿಂದ ಈಶ್ವರನನ್ನು ಪೂಜೆಮಾಡಿದರೆ ಮಹಾಪಾಪಗಳ ರಾಶಿಯು ಕೂಡಲೇ ನಾಶವಾಗುವುದು. ಒಣಗಿದ ಬಿಲ್ವದಳಗಳಿಂದ ಪೂಜಿಸಲ್ಪಟ್ಟರೂ ಪಾರ್ವತೀರಮಣನು ತೃಪ್ತನಾಗಿ ತನ್ನ ಭಕ್ತನಿಗೆ ಸಕಲೈಶ್ವರ್ಯವನ್ನೂ, ತನ್ನ ಸಾಯುಜ್ಯವನ್ನೂ ಕರುಣಿಸಿ ಕೊಡುತ್ತಾನೆ. ॥೪೧೬-೪೧೭॥

ರಂಧ್ರವುಳ್ಳದ್ದಾಗಿರಲಿ, ಒಣಗಿರಲಿ, ಒರಟಾಗಿರಲಿ, ನೀರಿನಲ್ಲಿ ನೆನೆಸಿದ ಬಿಲ್ವದಳವು ಪವಿತ್ರವಾದುದು. ಸ್ವತಃ ಶುದ್ಧವಾದ ಆ ಬಿಲ್ವದಳಗಳು ಶಿವನಿಗೆ ಖಂಡಿತವಾಗಿಯೂ ಪ್ರೀತಿಯನ್ನುಂಟುಮಾಡುವುವು ಶೋಭನಾಂಗಿಯೇ, ಬಿಲ್ವದಳಗಳಲ್ಲಿ

ಶುಭೇ ಪರ್ಯುಷಿತತ್ವಂ ಚ ಬಿಲ್ವಪತ್ರೇಷು ನ ಧ್ರುವಂ ।
ಬಿಲ್ವಪತ್ರಸ್ಯ ಚೂರ್ಣೇನಾಪ್ಯರ್ಚನೀಯಃ ಸದಾಶಿವಃ ॥೪೧೯॥

ರತ್ನವದ್ರಕ್ಷಣೀಯಾನಿ ಬಿಲ್ವಪತ್ರಾಣಿ ಸಂತತಂ ।
ಬಿಲ್ವಪತ್ರಾರ್ಜನೇನೈವ ತುಷ್ಟೋ ಭವತಿ ಶಂಕರಃ ॥೪೨೦॥

ಮಹಾದೇವಸ್ಯ ಸಾಂಬಸ್ಯ ಬಿಲ್ವಪತ್ರಮತಿಪ್ರಿಯಂ ।
ಯಥಾ ಪ್ರಿಯಾ ಹೈಮವತೀ ಬಿಲ್ವಪತ್ರಂ ತಥಾ ಪ್ರಿಯಂ ॥೪೨೧॥

ಅಖಂಡೈರ್ನೂತನೈಶ್ಶುದ್ಧೈರ್ಬಿಲ್ವಪತ್ರೈಃ ಪ್ರಯತ್ನತಃ ।
ಯಃ ಪೂಜಯತಿ ಗೌರೀಶಂ ಸ ಗೌರೀಶಂ ಪ್ರಯಾಸ್ಯತಿ ॥೪೨೨॥

ಶ್ರೀಬಿಲ್ವಪತ್ರಮಹಿಮಾ ಶಿವೇನ ಜ್ಞಾಯತೇ ಶುಭೇ ।
ಶ್ರೀಬಿಲ್ವಪತ್ರಮಹಿಮಾ ವೇದೈರಪಿ ನ ಬುಧ್ಯತೇ ॥೪೨೩॥

ಕರವೀರಸ್ಯ ಪುಷ್ಪೇಣ ರಕ್ತೇನ ಧವಲೇನ ವಾ ।
ಯಃ ಪೂಜಯತಿ ಗೌರೀಶಂ ಸ ಪಾಪೇಭ್ಯೋ ವಿಮುಚ್ಯತೇ ॥೪೨೪॥

---

ಹಳೆಯದಾಗಿ ದೂಷಿತವಾದವುಗಳೇ ಇಲ್ಲ. ಬಿಲ್ವಪತ್ರೆಯ ಚೂರಿನಿಂದಲಾದರೂ ಸದಾಶಿವನನ್ನು ಪೂಜೆಮಾಡಬೇಕು ಅನವರತವೂ ಬಿಲ್ವದಳಗಳನ್ನು ರತ್ನಗಳಂತೆ ಕಾಪಾಡಬೇಕು. ಆ ಬಿಲ್ವದಳಗಳನ್ನು ಸಂಪಾದಿಸುವುದರಿಂದಲೇ ಶಂಕರನು ಸಂತುಷ್ಟನಾಗುತ್ತಾನೆ. ಅಂದಮೇಲೆ ಪೂಜಿಸುವುದರಿಂದ ಶಂಕರನು ತೃಪ್ತನಾಗಲಾರನೇ? ॥೪೧೮-೪೧೯-೪೨೦॥

ಅಂಬಿಕಾರಮಣನಾದ ಮಹಾದೇವನಿಗೆ ಸುವರ್ಣಾಲಂಕಾರಶೋಭಿತೆಯಾದ ಪಾರ್ವತಿಯಂತೆ ಬಿಲ್ವಪತ್ರೆಯೂ ಸಹ ಪ್ರೀತಿಕರವಾದದ್ದು. ತುಂಡಾಗದ ಹೊಸದೂ ಶುದ್ಧವೂ ಆದ ಬಿಲ್ವದಳಗಳಿಂದ ನಿಯಮಬದ್ಧನಾಗಿ ಆ ಗೌರೀರಮಣನನ್ನು ಪೂಜೆಮಾಡುವವನು ಕೊನೆಯಲ್ಲಿ ಪಾರ್ವತೀಕಾಂತನನ್ನೇ ಹೊಂದುವನು. ॥೪೨೧-೪೨೨॥

ಎಲೌ ಶುಭಕರಳೇ, ಸಂಪತ್ಕರವಾದ ಬಿಲ್ವದಳದ ಮಹಿಮೆಯು ಶಿವನಿಗೊಬ್ಬನಿಗೆ ಮಾತ್ರ ಗೊತ್ತು. ವೇದಗಳಿಗೂ ಆ ಬಿಲ್ವಪತ್ರೆಯ ಪ್ರಭಾವವು ತಿಳಿಯದು. ಕೆಂಪು ಅಥವ ಬಿಳಿಯ ಕಣಿಗಲಹೂವಿನಿಂದ ಆ ಗೌರೀರಮಣನನ್ನು ಪೂಜೆಮಾಡು

ಯತ್ಪುಣ್ಯಂ ಲಭತೇ ಮರ್ತ್ಯೋ ಮಹೇಶೇ ಮಣಿಪೂಜಯಾ ।
ತತ್ಪುಣ್ಯಂ ಲಭತೇ ಮರ್ತ್ಯಃ ಕರವೀರಸ್ಯ ಪೂಜಯಾ ॥೪೨೫॥

ಸುವರ್ಣಕಮಲಾನಾಂ ಚ ಪೂಜಯಾ ಗಿರಿಜಾಪತಿಃ ।
ಹೃಷ್ಟೋ ದದಾತಿ ಸಾಮ್ರಾಜ್ಯಮರ್ಚಕಾಯ ನ ಸಂಶಯಃ ॥೪೨೬॥

॥ ವಿಷ್ಣುರುವಾಚ ॥

ಇತ್ಯುಕ್ತಂ ತದ್ವಚಃ ಶ್ರುತ್ವಾ ಪ್ರಣಿಪತ್ಯ ಚ ತಂ ದ್ವಿಜಂ ।
ತತೋ ಬಿಲ್ವವನಾದೀನಿ ಕಾರಯಾಮಾಸ ಸಾ ಪುನಃ ॥೪೨೭॥

ಸಾ ರತ್ನೈಃ ಕಾರಯಾಮಾಸ ಶಿವಾಲಯಮನುತ್ತಮಂ ।
ತತ್ರ ಸಾ ಕಾರಯಾಮಾಸ ಮುಕ್ತಾಪ್ರಾಕಾರಮುತ್ತಮಂ ॥೪೨೮॥

ತಸ್ಮಿನ್ ಶಿವಾಲಯೇ ಸೈವ ರತ್ನಲಿಂಗಮನುತ್ತಮಂ ।
ಸ್ಥಾಪಯಾಮಾಸ ಯತ್ನೇನ ಕುಲನಾಥಾನುಮೋದಿತಾ ॥೪೨೯॥

ವವನಿಗೆ ಎಂತಹ ಮಹಾಪಾಪಗಳೇ ಇದ್ದರೂ ಅವು ಬಿಡುಗಡೆಯಾಗುವುವು. ॥೪೨೩-೪೨೪॥

ಆ ಮಹಾದೇವನನ್ನು ರತ್ನದಿಂದ ಪೂಜೆಮಾಡಿದರೆ ಲಭಿಸುವಷ್ಟು ಪುಣ್ಯವು ಕಣಿಗಲಹೂವಿನ ಪೂಜೆಯಿಂದಲೇ ಮಾನವನಿಗೆ ಉಂಟಾಗುವುದು. ಸುವರ್ಣ ಕಮಲಗಳ ಪೂಜೆಯಿಂದಲೂ ಆ ಗಿರಿಜಾರಮಣನು ಸಂತುಷ್ಟನಾಗಿ ತನ್ನನ್ನು ಪೂಜಿಸುವವನಿಗೆ ಸಂದೇಹವಿಲ್ಲದೇ ಸಾಮ್ರಾಜ್ಯವನ್ನು ಕೊಡುವನು. ॥೪೨೫-೪೨೬॥

ಹೀಗೆ ನುಡಿದ ಆ ಬ್ರಾಹ್ಮಣನ ಮಾತುಗಳನ್ನು ಕೇಳಿ ವೈದರ್ಭಿಯು ಪುನಃ ಬಿಲ್ವಪತ್ರೆಯ ಅನೇಕ ತೋಟಗಳನ್ನೇರ್ಪಡಿಸಿದಳು. ಗುಂಪುಗುಂಪಾಗಿ ಬಿಲ್ವಪತ್ರೆಯ ಗಿಡಗಳನ್ನು ಹಾಕಿಸಿದಳು. ಅಲ್ಲದೇ ಅವಳು ರತ್ನಗಳಿಂದ ಅತ್ಯುತ್ತಮವಾದ ಒಂದು ಶಿವದೇವಾಲಯವನ್ನು ಕಟ್ಟಿಸಿ ಅದಕ್ಕೆ ಶ್ರೇಷ್ಠವಾದ ಮುತ್ತಿನ ಪ್ರಾಕಾರವನ್ನೇ ಮಾಡಿಸಿದಳು. ॥೪೨೭-೪೨೮॥

ಆ ಶಿವದೇವಾಲಯದಲ್ಲಿ ಅವಳು ತನ್ನ ಪತಿಯಾದ ಕುಲನಾಥನ ಅನುಮತಿಯನ್ನು ಪಡೆದು ಶ್ರೇಷ್ಠವಾದ ರತ್ನಲಿಂಗವನ್ನು ನಿಯಮದಿಂದ ಪ್ರತಿಷ್ಠೆ ಮಾಡಿಸಿ

ತಸ್ಮಿನ್ ಶಿವಾಲಯೇ ಭಕ್ತ್ಯಾ ಘೃತದೀಪಾ ಮನೋಹರಾಃ ।
ತಯಾ ದತ್ತಾಃ ಪ್ರಯತ್ನೇನ ಹೇಮಪಾತ್ರೇಷು ಕೋಟಿಶಃ ॥೪೩೦॥

ಧೂಪಯಾಮಾಸ ಸಾ ಶಂಭುಂ ನಿತ್ಯಂ ಗುಗ್ಗುಲುಪರ್ವತೈಃ ।
ನೈವೇದ್ಯಂ ಕಾರಯಾಮಾಸ ದಿವ್ಯಾನ್ನೈರಾಜ್ಯಸಂಯುತೈಃ ॥೪೩೧॥

ಶಿವಸ್ಥಾನಮಭೂನ್ನಿತ್ಯಂ ಸರ್ವತಃ ಪುಷ್ಪಸಂಕುಲಂ ।
ಪುಷ್ಪಮಾಲಾಪರಿವೃತಂ ಪುಷ್ಪಗಂಧಸಮನ್ವಿತಂ ॥೪೩೨॥

ನೃತ್ಯಂ ಚಕಾರ ಸಾ ನಿತ್ಯಂ ತಸ್ಮಿನ್ನೇವ ಶಿವಾಲಯೇ ।
ಗಾನಂ ಚಕಾರ ಸಾ ನಿತ್ಯಂ ತತ್ರೈವ ಶಿವಮಂದಿರೇ ॥೪೩೩॥

ಆರ್ದ್ರಾದಿಪುಣ್ಯಋಕ್ಷೇಷು ವೇದೋಕ್ತಾನ್ ಸಾ ಶಿವೋತ್ಸವಾನ್ ।
ಕಾರಯಾಮಾಸ ಯತ್ನೇನ ತತ್ತತ್ಕಾಲೇಷು ಸಾದರಂ ॥೪೩೪॥

ತಸ್ಯೈವ ಕಾರಿತಾಃ ಶೈವಾಃ ಸುವರ್ಣೋತ್ಸವವಿಗ್ರಹಾಃ ।
ಅಲಂಕೃತಾ ವಿಗ್ರಹಾಸ್ತೇ ರತ್ನಮಾಲಾದಿಭಿಃ ಸದಾ ॥೪೩೫॥

---

ದಳು. ಆ ಶಿವದೇವಾಲಯದಲ್ಲಿ ಭಕ್ತಿಯಿಂದ ಆವಳು ಮನೋಹರವಾದ ಅನೇಕ ತುಪ್ಪದ ದೀಪಗಳನ್ನು ಚಿನ್ನದ ಪಾತ್ರೆಗಳಲ್ಲಿ ಹೊತ್ತಿಸಿಟ್ಟು ಶಿವಾರಾಧನೆ ನಡೆಸುತ್ತಿದ್ದಳು. ||೪೨೯-೪೩೦||

ಆಕೆಯು ಪರ್ವತದಷ್ಟು ಅಪಾರವಾದ ಗುಗ್ಗುಲಗಳಿಂದ ನಿತ್ಯವೂ ಆ ಶಂಭುವಿಗೆ ಧೂಪಹಾಕುತ್ತಾ, ಘೃತಮಿಶ್ರಿತವಾದ ದಿವ್ಯಾನ್ನಗಳನ್ನು ಸ್ವಾಮಿಗೆ ನಿವೇದನಮಾಡುತ್ತಿದ್ದಳು. ಆ ಶಿವಸ್ಥಾನವು ನಿತ್ಯವೂ ಹೂವು, ಹೂಮಾಲೆ ಮತ್ತು ದಿವ್ಯಗಂಧಗಳಿಂದ ಪರಿಪೂರ್ಣವಾಗಿಯೇ ಇರುತ್ತಿದ್ದಿತು. ||೪೩೧-೪೩೨||

ನಿತ್ಯವೂ ಆಕೆಯು ಶಿವದೇವಾಲಯದಲ್ಲಿ ನಾಟ್ಯವನ್ನಾಡುತ್ತಾ ದೇವರನಾಮಗಳನ್ನು ಹಾಡುತ್ತಿದ್ದಳು. ಆರ್ದ್ರಾ ಮುಂತಾದ ಶೈವನಕ್ಷತ್ರಗಳು ಸೇರಿದ ದಿವಸ ವೇದೋಕ್ತವಾದ ಶಿವೋತ್ಸವಗಳನ್ನು ಅವಳು ಆಯಾ ಕಾಲಗಳಲ್ಲಿ ಆದರದಿಂದ ಮಾಡಿಸುತ್ತಿದ್ದಳು. ||೪೩೩-೪೩೪||

ಆ ಸಾಧ್ವಿಯೇ, ಚಿನ್ನದಿಂದ ಶಿವನ ಉತ್ಸವಮೂರ್ತಿಗಳನ್ನು ಮಾಡಿಸಿದಳು. ಶಿವವಿಗ್ರಹವನ್ನು ಯಾವಾಗಲೂ ರತ್ನಮಾಲೆಯೇ ಮೊದಲಾದವುಗಳಿಂದ

ಸಾ ಹೈಮಂ ಕಾರಯಾಮಾಸ ಲಕ್ಷಚಕ್ರಾನ್ವಿತಂ ರಥಂ ।
ಹೇಮಧ್ವಜಪತಾಕಾಢ್ಯಂ ಮುಕ್ತಾಮಾಲೋಪಶೋಭಿತಂ ॥೪೩೬॥

ತದ್ಧೇಮರಥಶೃಂಗಾಣಿ ಸತ್ಯಲೋಕಮಿಮಂ ಸ್ಫುಟಂ ।
ಜಾನ್ಯತೀತ್ಯ ಚ ರಮ್ಯಾಣಿ ಸ ರತ್ನಾನಿ ಚತುರ್ಮುಖ ॥೪೩೭॥

ತಸ್ಮಿನ್ರಥೇ ಮಹಾದೇವಮುಮಾದೇಹಾರ್ಧವಿಗ್ರಹಂ ।
ಸಂಸ್ಥಾಪ್ಯ ಪೂಜಯಾಮಾಸ ಸಾ ವಿದರ್ಭೇಶಪುತ್ರಿಕಾ ॥೪೩೮॥

ರಥಾರೂಢಂ ಶಿವಂ ದೃಷ್ಟ್ವಾ ಸಂತುಷ್ಟಹೃದಯಾ ಸತೀ ।
ನೃತ್ಯಂ ಚಕಾರ ಬಹುಧಾ ಕುಲನಾಥೇ ಚ ಪಶ್ಯತಿ ॥೪೩೯॥

ಶಾಂಕರೇಭ್ಯೋ ದದೌ ಸೈವ ರತ್ನಾನಿ ವಿವಿಧಾನಿ ಚ ।
ಶಾಂಕರೇಭ್ಯೋ ದದೌ ಸೈವ ಪೃಥ್ವೀಂ ರತ್ನಸಮನ್ವಿತಾಂ ॥೪೪೦॥

ಅಲಂಕರಿಸುತ್ತಿದ್ದಳು. ಅವಳು ಲಕ್ಷಚಕ್ರದಿಂದ ಕೂಡಿದ ಚಿನ್ನದ ರಥವನ್ನು ಮಾಡಿಸಿದಳು. ಆ ರಥವು ಚಿನ್ನದ ಧ್ವಜ ಮತ್ತು ಪತಾಕೆಗಳಿಂದ ಯುಕ್ತವಾಗಿ ಮುತ್ತಿನಮಾಲೆಯಿಂದ ಶೋಭಿಸುತ್ತಿದ್ದಿತು. ||೪೩೫-೪೩೬||

ಚತುರ್ಮುಖಬ್ರಹ್ಮನೇ, ಕೇಳು ಆ ಚಿನ್ನದ ತೇರಿನ ಕಲಶಗಳು ರತ್ನಖಚಿತಗಳಾಗಿ ಮನೋಹರವಾಗಿಯೂ, ಸ್ಪಷ್ಟವಾಗಿಯೂ ತೋರುತ್ತ ನಿನ್ನ ಸತ್ಯಲೋಕವನ್ನು ದಾಟಿಹೋಗಿದ್ದುವು. ಆ ರಥದಲ್ಲಿ ಉಮಾಲಿಂಗಿತ ದೇಹಾರ್ಧವುಳ್ಳ ಆ ಮಹಾದೇವನನ್ನು ಬಿಜಯಮಾಡಿಸಿ ವಿದರ್ಭರಾಜಕುಮಾರಿಯು ಭಕ್ತಿಯಿಂದ ಪೂಜೆಮಾಡುತ್ತಿದ್ದಳು. ||೪೩೭-೪೩೮||

ರಥವನ್ನೇರಿರುವ ಶಿವನನ್ನು ನೋಡಿ ಸಂತೋಷಭರಿತವಾದ ಮನಸ್ಸಿನಿಂದ ಆ ವೈದರ್ಭಿಯು ತನ್ನ ಗಂಡನೂ ನೋಡುತ್ತಿರುವಂತೆಯೇ ವಿಶೇಷವಾಗಿ ನಾಟ್ಯ ಮಾಡುತ್ತಿದ್ದಳು. ಅವಳು ಶಂಕರನ ಭಕ್ತರಿಗೆ ಬಗೆಬಗೆಯಾದ ರತ್ನಗಳನ್ನೂ ರತ್ನ ಸಮೇತವಾದ ಭೂಮಿಯನ್ನೂ ಆಗಾಗ ದಾನಮಾಡುತ್ತಿದ್ದಳು. ||೪೩೯-೪೪೦||

ಬ್ರಾಹ್ಮಣಾನ್ ಶಾಂಕರಾನ್ದೃಷ್ಟ್ವಾ ದಂಡವತ್ಪ್ರಣಿಪತ್ಯ ಸಾ ।
ರತ್ನೈಃ ಸಂಪೂಜಯಾಮಾಸ ಸಾ ಶೈವಾನತಿಯತ್ನತಃ ॥೪೪೧॥

ರತ್ನಾಸನೇಷೂಪವೇಶ್ಯ ಸಾ ಶಂಕರಪರಾಯಣಾನ್ ।
ಪಾದಪ್ರಕ್ಷಾಳನಂ ಕೃತ್ವಾ ಪಪೌ ತಚ್ಚರಣೋದಕಂ ॥೪೪೨॥

ಧೂಪದೀಪಾದಿದಾನೈಶ್ಚ ತೋಷಯಾಮಾಸ ಶಾಂಕರಾನ್ ।
ಶಾಂಕರಾನ್ರತ್ನಮಾಲಾಭಿಸ್ತೋಷಯಾಮಾಸ ಸಾ ತದಾ ॥೪೪೩॥

ಯಸ್ಯ ಯಾವದಭಿಪ್ರೇತಂ ಶಾಂಕರಸ್ಯ ಧನಂ ತದಾ ।
ದದೌ ದಾನೋತ್ಸುಕಾ ತಸ್ಮೈ ಸಾ ತತೋಽಪ್ಯಧಿಕಂ ಧನಂ ॥೪೪೪॥

ಏವಮೇವಾನ್ವಹಂ ಪ್ರೀತ್ಯಾ ತೋಷಿತಾಃ ಶಾಂಕರಾಸ್ತಯಾ ।
ಶಂಕರಶ್ಚಾಪಿ ಯತ್ನೇನ ಪೂಜಿತೋಽಭೂತ್ತಯಾ ಸದಾ ॥೪೪೫॥

ಕಾರ್ತಿಕೇ ಮಾಸಿ ಸಾ ನಿತ್ಯಂ ರಥೋತ್ಸವಮನಿಂದಿತಾ ।
ಕಾರಯಾಮಾಸ ಯತ್ನೇನ ಸಾಂಬಸ್ಯ ಪರಮಾತ್ಮನಃ ॥೪೪೬॥

---

ಶಂಕರನ ಭಕ್ತರೆನಿಸಿದ ಶೈವಧರ್ಮನಿರತರಾದ ಬ್ರಾಹ್ಮಣರನ್ನು ಕಂಡ ಕೂಡಲೇ ದಂಡಪ್ರಣಾಮಮಾಡಿ ಆಕೆಯು ಅವರನ್ನು ನಿಯಮಬದ್ಧಳಾಗಿ ರತ್ನಗಳಿಂದಲೇ ತೃಪ್ತಿಪಡಿಸುತ್ತಿದ್ದಳು. ಶಂಕರನ ಪೂಜಾ ಧ್ಯಾನಾದಿಗಳಲ್ಲಿ ನಿರತರಾದವರನ್ನು ರತ್ನಾಸನಗಳಲ್ಲಿ ಕೂರಿಸಿ ಅವರ ಕಾಲುಗಳನ್ನು ತೊಳೆದು ಆ ಪಾದೋದಕವನ್ನು ಪಾನಮಾಡುತ್ತಿದ್ದಳು. ॥೪೪೧-೪೪೨॥

ಶೈವಭಕ್ತಿಯುತಳಾದ ಅವಳು ಧೂಪ, ದೀಪಗಳಿಂದಲೂ, ರತ್ನಮಾಲೆಗಳಿಂದಲೂ ಈಶ್ವರಭಕ್ತರನ್ನು ಸಂತೋಷಪಡಿಸಿದಳು. ಶಂಕರನ ಭಕ್ತನಾದವನು ಅಪೇಕ್ಷಿಸುವ ದುಡ್ಡಿಗಿಂತಲೂ ಹೆಚ್ಚಾಗಿಯೇ ತಾನು ಅವರಿಗೆ ದಾನಮಾಡುವುದರಲ್ಲಿ ಉತ್ಸಾಹಯುತಳಾಗಿರುತ್ತಿದ್ದಳು. ಹೀಗೆ ಶೈವರಿಗೆ ತನ್ನ ಶಕ್ತಿಮೀರಿ ದಾನಾದಿಗಳನ್ನಿತ್ತು ಅವರನ್ನು ತೃಪ್ತಿಪಡಿಸುತ್ತಿದ್ದಳು. ॥೪೪೩-೪೪೪॥

ಹೀಗೆಯೇ ಅವಳು ಪ್ರತಿನಿತ್ಯವೂ ಪ್ರೀತಿಯಿಂದ ಶಂಕರನ ಭಕ್ತರನ್ನು ಸಂತೋಷಪಡಿಸುತ್ತಿದ್ದಂತೆಯೇ ಶಂಕರನನ್ನೂ ನಿಯಮದಿಂದ ಪೂಜೆಮಾಡುತ್ತಿ

ಸಾ ಕೋಟಿಘಟಸಂಪೂರ್ಣೈರ್ಗೋಕ್ಷೀರಾಜ್ಯಾದಿಭಿರ್ಮುದಾ ।
ಸೇವಯಾಮಾಸ ಗೌರೀಶಂ ಕಾರ್ತಿಕೀಸೋಮವಾಸರೇ ॥೪೪೭॥

ಚಂದನಾದೀನಿ ದತ್ವೇಶೇ ಸಾ ಬಿಲ್ವನವಪಲ್ಲವೈಃ ।
ಧತ್ತೂರೈಃ ಕರವೀರೈಶ್ಚ ಪೂಜಯಾಮಾಸ ಶಂಕರಂ ॥೪೪೮॥

ದ್ರೋಣಪುಷ್ಪೈರತಿಶ್ವೇತೈಃ ಕಾರ್ತಿಕೀಸೋಮವಾಸರೇ ।
ಶಿವಂ ಸಾ ಪೂಜಯಾಮಾಸ ರಾತ್ರೌ ಯಾಮಚತುಷ್ಟಯೇ ॥೪೪೯॥

ಪರಮಾನ್ನೇನ ನೈವೇದ್ಯಂ ಕಾರಯಾಮಾಸ ಸಾ ಬಹು ।
ಕರ್ಪೂರರಾಶಯೋಽಪ್ಯುಚ್ಚಾಃ ದೀಪಾರ್ಥಂ ಜ್ವಾಲಿತಾಸ್ತಯಾ॥೪೫೦॥

ಧೂಪಾರ್ಥಂ ಜ್ವಾಲಿತಾತ್ಯುಚ್ಚಾಸ್ತಥೈವಾಗರುರಾಶಯಃ ।
ಪ್ರತಿಯಾಮೇಷ್ವೇವಮೇವ ಚಕಾರಾಭ್ಯರ್ಚನಂ ವಿಧೇ ॥೪೫೧॥

ದ್ದಳು. ಕಾರ್ತಿಕಮಾಸದಲ್ಲಿ ಆಕೆಯು ನಿತ್ಯವೂ ಸಂಕೋಚವಿಲ್ಲದೇ ಅಂಬಿಕಾರಮಣನಾದ ಆ ಪರಮಾತ್ಮನಿಗೆ ನಿಯಮದಿಂದ ರಥೋತ್ಸವಾದಿಗಳನ್ನು ನಡೆಸುತ್ತಿದ್ದಳು. ಕಾರ್ತೀಕ ಸೋಮವಾರದ ದಿವಸ ಆ ಗೌರೀರಮಣನಿಗೆ (ಶಿವಲಿಂಗಕ್ಕೆ) ಕೋಟ್ಯಂತರ ಗಡಿಗೆಗಳಲ್ಲಿ ತುಂಬಿದ ಹಸುವಿನ ಹಾಲು, ತುಪ್ಪ ಮುಂತಾದವುಗಳಿಂದ ಅಭಿಷೇಕಾದಿಗಳನ್ನು ನಡೆಸಿ ಪರಮೇಶ್ವರನನ್ನು ತೃಪ್ತಿಪಡಿಸುತ್ತಿದ್ದಳು. ॥೪೪೫-೪೪೬-೪೪೭॥

ಪರಶಿವನಿಗೆ ಚಂದನ, ಗಂಧ ಮುಂತಾದವುಗಳನ್ನು ಸಮರ್ಪಿಸಿ, ಚಿಗುರಾದ ಹೊಸ ಬಿಲ್ವದಳ, ಧತ್ತೂರಿ, ಕಣಿಗಲೆ ಮುಂತಾದ ಹೂಗಳಿಂದ ಆ ಶಂಕರನನ್ನು ಮನಃಪೂರ್ವಕವಾಗಿ ಅರ್ಚನೆಮಾಡುತ್ತಿದ್ದಳು. ಕಾರ್ತೀಕ ಸೋಮವಾರದ ರಾತ್ರಿ ನಾಲ್ಕುಜಾವಗಳಲ್ಲಿಯೂ ಅತಿಶುಭ್ರವಾದ ಕಂಚುವಾಳಪುಷ್ಪದಿಂದ ಅವಳು ಶಿವನನ್ನು ಪೂಜಿಸುತ್ತಿದ್ದಳು. ಅಲ್ಲದೇ ಅವಳು ವಿಶೇಷವಾಗಿ ಪರಮಾನ್ನವನ್ನು ಪರಮೇಶ್ವರನಿಗೆ ನಿವೇದನಮಾಡುತ್ತಿದ್ದಳು. ದೀಪಕ್ಕೋಸ್ಕರ ಕರ್ಪೂರದ ಗೆಡ್ಡೆಗಳ ರಾಶಿಯನ್ನು ಎತ್ತರವಾಗಿರಿಸಿ ಅದನ್ನು ಹೊತ್ತಿಸುತ್ತಿದ್ದಳು. ॥೪೪೮-೪೪೯-೪೫೦॥

ಧೂಪಹಾಕುವುದಕ್ಕೋಸ್ಕರ ಅಗರುಚಕ್ಕೆಗಳನ್ನು ರಾಶಿಹಾಕಿಸಿ, ಅವುಗಳನ್ನು ಉರಿಸುತ್ತಿದ್ದಳು. ಅಯ್ಯ ಬ್ರಹ್ಮನೇ, ಹೀಗೆ ಈಕೆಯು ಕಾರ್ತಿಕಸೋಮವಾರದ

ಏವಂ ಸಂತೋಷಸಂಯುಕ್ತಾ ಕಾರ್ತಿಕೀಸೋಮವಾಸರೇ ।
ಪೂಜಯಂತೀ ಮಹಾದೇವಂ ಸಾಕ್ಷಾತ್ಸೋಮಂ ದದರ್ಶ ಸಾ॥೪೫೨॥

ಅನಂತಸೋಮಸೂರ್ಯಾಗ್ನಿಪ್ರತಿಮಂ ವೃಷಭಧ್ವಜಂ ।
ಕರ್ಪೂರಗೌರಂ ಸಾನಂದಂ ಉಮಾಸಂಶ್ಲಿಷ್ಟವಿಗ್ರಹಂ ॥೪೫೩॥

ಚಂದ್ರಾರ್ಕವಹ್ನಿನಯನಂ ಚಂದ್ರಶೇಖರಮೀಶ್ವರಂ ।
ಮುಕ್ತಾದಾಮಪರೀತಾಂಗಂ ದುಕೂಲವಸನಾನ್ವಿತಂ ॥೪೫೪॥

ಭ್ರಾಜದ್ಭಾಲಲಸದ್ಭಾಗಭ್ರಾಜಿಭೂತಿವಿಭೂಷಣಂ ।
ರುದ್ರಾಕ್ಷಮಾಲಾಸಂವೀತಂ ಮುಕ್ತಾಮಾಲಾಸಮಾವೃತಂ ॥೪೫೫॥

ರತ್ನಕೇಯೂರಕಟಕರತ್ನಪಟ್ಟವಿರಾಜಿತಂ ।
ನಾನಾರತ್ನಪರಿಭ್ರಾಜನ್ಮಕುಟೋತ್ತಮಪಂಡಿತಂ ॥೪೫೬॥

---

ಪ್ರತಿಯೊಂದು ಜಾವದಲ್ಲಿಯೂ ಪೂಜೆನಡೆಸುತ್ತಿದ್ದಳು. ಒಂದು ಕಾರ್ತಿಕಸೋಮವಾರದ ದಿವಸ ಆ ಮಹಾದೇವನನ್ನು ಹೀಗೆ ಪೂಜೆಮಾಡುತ್ತಾ, ಉಮಾರಮಣನಾದ ಶಂಕರನನ್ನು ಪ್ರತ್ಯಕ್ಷವಾಗಿ ಕಂಡಳು. ॥೪೫೧-೪೫೨॥

ಆಗ ಮಹಾದೇವನು ಅನೇಕ ಚಂದ್ರ, ಸೂರ್ಯ ಮತ್ತು ಅಗ್ನಿಗಳಿಗೆ ಸಮಾನವಾದ ತೇಜಸ್ಸುಳ್ಳವನಾಗಿ, ವೃಷಭಧ್ವಜದಿಂದ ಕರ್ಪೂರದಂತೆ ಶುಭ್ರವರ್ಣವುಳ್ಳವನೆನಿಸಿ, ಆನಂದಭರಿತನೂ, ಉಮಾದೇವಿಯಿಂದ ಆಲಿಂಗಿತವಾದ ದೇಹವುಳ್ಳವನೂ, ಚಂದ್ರ, ಸೂರ್ಯ ಮತ್ತು ಅಗ್ನಿ ಇವರನ್ನೇ ಕಣ್ಣುಗಳನ್ನಾಗಿ ಧರಿಸಿರುವವನೂ, ಚಂದ್ರಮೌಳಿಯೂ, ಐಶ್ವರ್ಯಭರಿತನೂ, ಮುತ್ತಿನ ಹಾರದಿಂದ ಶೋಭಿಸುತ್ತಿರುವ ಅವಯವವುಳ್ಳವನೂ, ರೇಷ್ಮೆಯವಸ್ತ್ರಗಳನ್ನು ಧರಿಸಿರುವವನೂ ಆಗಿ ಆಕೆಗೆ ಕಂಡುಬಂದನು. ॥೪೫೩-೪೫೪॥

ಪರಶಿವನು ಪ್ರಜ್ವಲಿಸುತ್ತಿರುವ ತನ್ನ ಹಣೆಯ ಪ್ರದೇಶದಲ್ಲಿ ಭಸ್ಮವನ್ನು ಅಲಂಕರಿಸಿಕೊಂಡಿದ್ದನು. ರುದ್ರಾಕ್ಷಮಾಲೆ ಮತ್ತು ಮುತ್ತಿನಹಾರಗಳಿಂದ ಯುಕ್ತನಾಗಿ ರತ್ನಮಯವಾದ ಭುಜಕೀರ್ತಿ, ಕಡಗ ಮತ್ತು ಹಣೆಯಲ್ಲಿ ಕಟ್ಟಿಕೊಳ್ಳುವ ರತ್ನಪಟ್ಟಗಳಿಂದ ಶೋಭಿಸುತ್ತಾ, ನಾನಾವಿಧವಾದ ರತ್ನಗಳಿಂದ ಶೋಭಿಸುತ್ತಿರುವ ಉತ್ತಮ

ವೀಜ್ಯಮಾನಮನಂತೈಶ್ಚ ಸ ಚಾಮೀಕರಚಾಮರೈಃ ।
ಅನಂತರತ್ನಛತ್ರೌಘಛಾಯಾಸಂವೇಷ್ಟಿತಂ ಪ್ರಭುಂ ॥೪೫೭॥

ಮಂದಹಾಸಸಮಾಕ್ರಾಂತಂ ಪೂರ್ಣೇಂದುವದನಂ ಶಿವಂ ।
ಅನಂತಪ್ರಮಥೈಃ ಸೇವ್ಯಂ ಬ್ರಹ್ಮವಿಷ್ಣ್ವಾದಿಪೂಜಿತಂ ॥೪೫೮॥

ದೃಷ್ಟ್ವಾ ಪ್ರಸನ್ನವದನಾ ನತ್ವಾ ಸಂಪೂಜ್ಯ ಸಾದರಂ ।
ಅಂಜಲಿಂ ಮೂರ್ಧ್ನಿ ವಿನ್ಯಸ್ಯ ತುಷ್ಟಾವ ಪರಯಾ ಮುದಾ ॥೪೫೯॥

॥ ವೈದರ್ಭ್ಯುವಾಚ ॥

ನಮೋ ನಮಃ ಕಾರಣಕಾರಣಾಯ
ನಾರಾಯಣಾರಾಧಿತಪಾದುಕಾಯ ।
ನಮೋ ನಮೋ ಭೂತಿವಿಭೂಷಣಾಯ
ವಿಶ್ವೇಶ ಶಂಭೋ ಭಗವನ್ನಮಸ್ತೇ ॥೪೬೦॥

ವಾದ ಕಿರೀಟದಿಂದ ವಿರಾಜಿಸುತ್ತಾ ಆಕೆಯ ಕಣ್ಣುಗಳಿಗೆ ಗೋಚರಿಸಿದನು. ॥೪೫೫-೪೫೬॥

ಅನೇಕ ಮಂದಿ ದೇವತೆಗಳು ಚಿನ್ನದ ಚಾಮರಗಳನ್ನು ಕೈಯಲ್ಲಿ ಹಿಡಿದು ಪರಶಿವನಿಗೆ ಬೀಸುತ್ತಿದ್ದರು. ಆ ಪ್ರಭುವು ಅನೇಕ ರತ್ನಗಳಿಂದ ಖಚಿತವಾದ ಛತ್ರಿಗಳ ಸಮೂಹದ ನೆರಳಿನಲ್ಲಿ ಹೊಳೆಯುತ್ತಿದ್ದನು. ಮಂದಹಾಸಯುಕ್ತನೂ, ಪೂರ್ಣಚಂದ್ರನಂತೆ ಮುಖವುಳ್ಳವನೂ, ಅನೇಕ ಪ್ರಮಥಗಣಗಳಿಂದ ಸೇವಿಸಲ್ಪಡುತ್ತಿರುವವನೂ, ಬ್ರಹ್ಮ, ವಿಷ್ಣು ಮುಂತಾದ ದೇವತೆಗಳಿಂದ ಪೂಜೆಮಾಡಲ್ಪಟ್ಟವನೂ, ಆದ ಆ ಶಿವನನ್ನು ನೋಡಿ ವೈದರ್ಭಿಯು ಪ್ರಸನ್ನವಾದ ಮುಖವುಳ್ಳವಳಾಗಿ ನಮಸ್ಕರಿಸಿ ಪೂಜೆಮಾಡಿದ ನಂತರ ಆದರದಿಂದ ಕೈಜೋಡಿಸಿಕೊಂಡು ಸಂತೋಷದಿಂದ ಈ ರೀತಿ ಸ್ತೋತ್ರಮಾಡಿದಳು. ॥೪೫೭-೪೫೮-೪೫೯॥

ಕಾರಣಭೂತವಾಗಿರುವ ವಸ್ತುಗಳಿಗೆಲ್ಲಾ ಕಾರಣಭೂತನೂ, ನಾರಾಯಣನಿಂದ ಪೂಜೆಮಾಡಲ್ಪಟ್ಟ ಪಾದಗಳುಳ್ಳವನೂ, ವಿಭೂತಿಯನ್ನಲಂಕರಿಸಿಕೊಂಡಿರುವನೂ, ಭಗವಂತನೂ, ಜಗದೊಡೆಯನೂ ಆದ ಶಂಭುವೇ, ನಿನಗೆ ನಮಸ್ಕಾರವು

ನಮೋ ನಮಶ್ಚಂದ್ರಕಲಾಧರಾಯ
ನಮೋ ನಮೋ ಮಂಗಳವಿಗ್ರಹಾಯ ।
ನಮೋ ನಮೋಽನಂತಗುಣಾರ್ಣವಾಯ
ವಿಶ್ವೇಶಶಂಭೋ ಭಗವನ್ನಮಸ್ತೇ ॥೪೬೧॥

ನಮೋ ನಮೋಽನಂಗಮದಾಪಹಾಯ
ನಮೋ ನಮೋ ಮಂಗಲಮಂಗಲಾಯ ।
ನಮೋ ನಮೋ ಮಂಗಳದಾಯಕಾಯ
ವಿಶ್ವೇಶ ಶಂಭೋ ಭಗವನ್ನಮಸ್ತೇ ॥೪೬೨॥

ನಮೋ ನಮೋ ಭಕ್ತವರಪ್ರದಾಯ
ನಮೋ ನಮಃ ಕೇಶವಪೂಜಿತಾಯ ।
ನಮೋ ನಮಃ ಸರ್ವಸುರಾರ್ಚಿತಾಯ
ವಿಶ್ವೇಶ ಶಂಭೋ ಭಗವನ್ನಮಸ್ತೇ ॥೪೬೩॥

ನಮೋ ನಮಃ ಸರ್ವಸುರಾಧಿಪಾಯ
ನಮೋ ನಮಃ ಸರ್ವಗಣಾಧಿಪಾಯ ।

---

ಚಂದ್ರಕಲೆಗಳನ್ನು ಧರಿಸಿರುವವನೂ, ಮಂಗಳವಿಗ್ರಹನೂ, ಅಪರಿಮಿತ ಗುಣಗಳಿಗೆ ಸಮುದ್ರದಂತಿರುವನೂ, ವಿಶ್ವೇಶ್ವರನೂ, ಜಗನ್ಮಂಗಳಕರನೂ ಆದ ಭಗವಂತನೇ, ನಿನಗೆ ಪ್ರಣಾಮಮಾಡುವೆನು. ॥೪೬೦-೪೬೧॥

ಮನ್ಮಥನ ಗರ್ವವನ್ನಿಳಿಸಿದವನೂ, ಮಂಗಳಪ್ರದವಾದ ವಸ್ತುಗಳಿಗೆಲ್ಲಾ ಮಂಗಳವನ್ನುಂಟುಮಾಡುವವನೂ, ಜಗತ್ತಿಗೆ ಮಂಗಳಪ್ರದನೂ, ಜಗದೊಡೆಯನೂ ಆದ ಶಂಭುವೇ, ಭಗವಂತನಾದ ನಿನಗೆ ನಮಸ್ಕಾರ ಮಾಡುವೆನು. ಭಕ್ತರಿಗೆ ವರವನ್ನು ನೀಡುವವನೂ, ಕೇಶವನಿಂದ ಪೂಜಿಸಲ್ಪಟ್ಟವನೂ, ಸಕಲ ದೇವತೆಗಳಿಂದಲೂ ಪೂಜೆಗೊಂಡವನೂ, ವಿಶ್ವೇಶ್ವರನೂ, ಶಂಭುವೂ ಆಗಿರುವ ಭಗವಂತನೇ, ನಿನಗೆ ಅನಂತನಮಸ್ಕಾರಗಳು. ॥೪೬೨-೪೬೩॥

ಸಕಲ ದೇವತೆಗಳಿಗೂ, ಪ್ರಮಥಗಣಗಳಿಗೂ ಮತ್ತು ಜನಸಮೂಹಕ್ಕೆ ಒಡೆಯನೂ, ವಿಶ್ವೇಶ್ವರನೂ, ಶಂಭುವೂ, ಷಡ್ಗುಣೈಶ್ವರ್ಯಸಂಪನ್ನನೂ, ಅನೇಕ

ನಮೋ ನಮಃ ಸರ್ವಜನಾಧಿಪಾಯ
ವಿಶ್ವೇಶ ಶಂಭೋ ಭಗವನ್ನಮಸ್ತೇ ॥೪೬೪॥

ನಮೋ ನಮೋಽನಂತವಿಲೋಚನಾಯ
ನಮೋ ನಮೋಽನಂತಲಸತ್ಕರಾಯ ।
ನಮೋ ನಮೋಽನಂತಶಿರೋಧರಾಯ
ವಿಶ್ವೇಶ ಶಂಭೋ ಭಗವನ್ನಮಸ್ತೇ ॥೪೬೫॥

ನಮೋ ನಮೋ ಹೇಮವಿಭೂಷಣಾಯ
ನಮೋ ನಮಃ ಶೈಲಸುತಾನ್ವಿತಾಯ ।
ನಮೋ ನಮೋ ಬಿಲ್ವದಲಪ್ರಿಯಾಯ
ವಿಶ್ವೇಶ ಶಂಭೋ ಭಗವನ್ನಮಸ್ತೇ ॥೪೬೬॥

ನಮೋ ನಮೋ ನಿರ್ಮಿತಪಾರದಾಯ
ನಮೋ ನಮೋ ನಿರ್ಮಿತಭೂಧರಾಯ ।
ನಮೋ ನಮೋ ನಿರ್ಮಿತಕೇಶವಾಯ
ವಿಶ್ವೇಶ ಶಂಭೋ ಭಗವನ್ನಮಸ್ತೇ ॥೪೬೭॥

ನಮೋ ನಮಶ್ಚಂದ್ರಗಣಪ್ರಭಾಯ
ನಮೋ ನಮೋ ವಹ್ನಿಗಣಪ್ರಭಾಯ ।

ಕಣ್ಣು, ಕೈಗಳು, ತಲೆ ಮುಂತಾದವುಗಳನ್ನುಳ್ಳವನೂ, ಚರಾಚರಾತ್ಮಕವಾದ ಪ್ರಪಂಚಕ್ಕೆ ಸ್ವಾಮಿಯೂ, ಜಗತ್ತಿಗೆ ಸುಖಪ್ರದನೂ ಆದ ಭಗವಂತನೇ, ನಿನಗೆ ನಮಸ್ಕಾರಮಾಡುವೆನು. ॥೪೬೪-೪೬೫॥

ಸುವರ್ಣವನ್ನು ಅಲಂಕರಿಸಿಕೊಂಡಿರುವವನೂ, ಗಿರಿರಾಜಕುಮಾರಿಯೊಡನಾಡಿಯೂ, ಬಿಲ್ವಪತ್ರೆಗಳಲ್ಲಿ ಪ್ರೀತಿಯುಳ್ಳವನೂ, ವಿಶ್ವೇಶ್ವರನೂ, ಶಂಭುವೂ, ಷಡ್ಗುಣೈಶ್ವರ್ಯಭರಿತನೂ, ಪಾದರಸ, ಪರ್ವತಗಳು, ವಿಷ್ಣು ಇವರನ್ನು ನಿರ್ಮಿಸಿದವನೂ, ಸ್ಥಾವರ ಜಂಗಮಾತ್ಮಕವಾದ ಪ್ರಪಂಚಕ್ಕೆಲ್ಲಾ ಒಡೆಯನೂ, ಜಗತ್ಸುಖಪ್ರದನೂ ಆದ ಭಗವಂತನೇ, ನಿನಗೆ ಪ್ರಣಾಮಮಾಡುತ್ತೇನೆ. ॥೪೬೬-೪೬೭॥

ಚಂದ್ರ, ಅಗ್ನಿ ಮತ್ತು ಸೂರ್ಯ ಇವರ ಗಣಗಳಂತೆ ಕಾಂತಿಯುಳ್ಳವನೂ,

ನಮೋ ನಮೋ ಭಾನುಗಣಪ್ರಭಾಯ
ವಿಶ್ವೇಶ ಶಂಭೋ ಭಗವನ್ನಮಸ್ತೇ ॥೪೬೮॥

ನಮೋ ನಮೋ ಮನ್ಮಥಸೂದನಾಯ
ನಮೋ ನಮಃ ಪದ್ಮಜಸೂದನಾಯ ।
ನಮೋ ನಮೋ ಮಾಧವಸೂದನಾಯ
ವಿಶ್ವೇಶ ಶಂಭೋ ಭಗವನ್ನಮಸ್ತೇ ॥೪೬೯॥

ನಮೋ ನಮಃ ಸರ್ವವಿಧಾಯಕಾಯ
ನಮೋ ನಮಃ ಸರ್ಜಿತರಕ್ಷಕಾಯ ।
ನಮೋ ನಮಃ ಸರ್ಜಿತನಾಶಕಾಯ
ವಿಶ್ವೇಶ ಶಂಭೋ ಭಗವನ್ನಮಸ್ತೇ ॥೪೭೦॥

॥ ವಿಷ್ಣುರುವಾಚ ॥

ಇತಿ ಸ್ತುತ್ವಾ ಮಹಾದೇವಂ ವೈದರ್ಭೀ ವಿನಯಾನ್ವಿತಾ ।
ಪೂಜಯಾಮಾಸ ರತ್ನಾದ್ಯೈಃ ಸೋಮಂ ಸಗಣಮಾದರಾತ್ ॥೪೭೧॥

ತತಃ ಪ್ರಸನ್ನೋ ಭಗವಾಂಸ್ತುಷ್ಟಸ್ತತ್ಕೃತಪೂಜಯಾ ।
ವರಂ ವೃಣು ವರಂ ಮತ್ತಃ ಸುವ್ರತೇತ್ಯಾಹ ತಾಂ ಶಿವಃ ॥೪೭೨॥

ಮನ್ಮಥ, ಬ್ರಹ್ಮ ಮತ್ತು ವಿಷ್ಣು ಇವರನ್ನು ನಿಗ್ರಹಿಸಿದವನೂ, ಜಗದೊಡೆಯನೂ, ಶಂಭುವೂ ಆದ ಭಗವಂತನೇ, ನಿನಗೆ ಅನಂತ ಪ್ರಣಾಮಗಳು. ॥೪೬೮-೪೬೯॥

ಸಕಲ ಪ್ರಪಂಚವನ್ನೂ ಸೃಷ್ಟಿಮಾಡುವವನೂ, ಸೃಷ್ಟಿಸಿದ ಜಗತ್ತನ್ನು ಪಾಲಿಸುವವನೂ ಮತ್ತು ಪ್ರಳಯಕಾಲದಲ್ಲಿ ಪ್ರಪಂಚವನ್ನೆಲ್ಲಾ ನಾಶಮಾಡುವವನೂ ಆದ ವಿಶ್ವೇಶ್ವರನೇ, ಜಗನ್ಮಂಗಳಪ್ರದನೂ, ಷಡ್ಗುಣೈಶ್ವರ್ಯಸಂಪನ್ನನೂ ಆದ ನಿನಗೆ ನಮಸ್ಕಾರಮಾಡುವೆನು. ॥೪೭೦॥

ಆ ವಿದರ್ಭರಾಜಕುಮಾರಿಯು ಹೀಗೆ ವಿನಯದಿಂದ ಆ ಮಹಾದೇವನನ್ನು ಸ್ತೋತ್ರಮಾಡಿ, ರತ್ನವೇ ಮೊದಲಾದವುಗಳಿಂದ ಗಣಸಮೇತನಾಗಿರುವ ಆ ಉಮಾರಮಣನನ್ನು ಆದರದಿಂದ ಪೂಜೆಮಾಡಿದಳು. ಅವಳು ಮಾಡಿದ ಪೂಜೆಯಿಂದ

ಕೃತಾರ್ಥಾಸ್ಮಿ ಮಹಾದೇವ ದರ್ಶನಾದಧುನಾ ತವ ।
ದರ್ಶನಾತ್ತವ ಗೌರೀಶ ಜನ್ಮ ಧನ್ಯಮಭೂನ್ಮಮ ॥೪೭೩॥

ಯದಿದಂ ಪಾದಕಮಲಂ ತವ ಶ್ರುತಿಶಿರಃಶ್ರುತಂ ।
ದೃಷ್ಟಂ ಭಾಗ್ಯವಶಾಚ್ಛಂಭೋ ವಿಷ್ಣುನೇತ್ರಾರ್ಚಿತಂ ಮಯಾ ॥೪೭೪॥

ಹಿರಣ್ಯಬಾಹೂ ದೃಷ್ಟೌ ತೇ ರೂಪಂ ದೃಷ್ಟಂ ಹಿರಣ್ಮಯಂ ।
ಹಿರಣ್ಯವರ್ಣೋ ದೃಷ್ಟೋಽದ್ಯ ತವ ಮಂಗಲವಿಗ್ರಹಃ ॥೪೭೫॥

ತ್ವಂ ಹಿರಣ್ಯಪತಿರ್ದೃಷ್ಟಸ್ತೇ ದೃಷ್ಟೋಽಸ್ಯಂಬಿಕಾಪತಿಃ ।
ದೃಷ್ಟೋಽಸ್ಯುಮಾಪತಿಃ ಸಾಕ್ಷಾದ್ದೃಷ್ಟಃ ಪಶುಪತಿರ್ಮಯಾ ॥೪೭೬॥

ಋತಂ ಸತ್ಯಂ ಪರಂ ಬ್ರಹ್ಮ ಪುರುಷಂ ಕೃಷ್ಣಪಿಂಗಲಂ ।
ಊರ್ಧ್ವರೇತಂ ವಿರೂಪಾಕ್ಷಂ ದೃಷ್ಟ್ವಾ ತ್ವಾಂ ಮುದಿತಾಸ್ಮ್ಯಹಂ॥೪೭೭॥

ಸಂತುಷ್ಟವಾದ ಭಗವಂತನು ಪ್ರಸನ್ನನಾಗಿ, ಆಚಾರಶೀಲಳೇ, ನನ್ನಿಂದ ನಿನಗೆ ಬೇಕಾದ ಉತ್ತಮವಾದ ವರವನ್ನು ಬೇಡು ಎಂದು ಹೇಳಿದನು. ||೪೭೧-೪೭೨||

ಮಹಾದೇವ, ನಿನ್ನ ದರ್ಶನದಿಂದ ನಾನೀಗ ಕೃತಕೃತ್ಯನಾದೆನು. ಗೌರೀರಮಣನೇ, ನಿನ್ನ ಈ ದಿವ್ಯಸಂದರ್ಶನದಿಂದ ನನ್ನ ಜನ್ಮವು ಧನ್ಯವಾಯಿತು. ವೇದಾಂತಪ್ರಸಿದ್ಧವಾದ ನಿನ್ನ ಈ ಪಾದಕಮಲವು ವಿಷ್ಣುವಿನ ಕಣ್ಣಿನಿಂದ ಪೂಜಿಸಲ್ಪಟ್ಟದು ಶಂಭುವೇ, ಇಂತಹ ದಿವ್ಯಪಾದಕಮಲವು ಭಾಗ್ಯವಶದಿಂದ ನನಗೆ ಗೋಚರವಾಯಿತು. ದೇವ, ಸುವರ್ಣವರ್ಣದ ನಿನ್ನ ತೋಳುಗಳು, ಹಿರಣ್ಮಯವಾದ ನಿನ್ನ ದಿವ್ಯರೂಪು, ಸುವರ್ಣದಂತೆ ಮನೋಹರವಾದ ಬಣ್ಣದಿಂದ ಶೋಭಿಸುವ ಮಂಗಳವಿಗ್ರಹವೂ (ದೇಹವೂ) ಇಂದು ನನಗೆ ಗೋಚರವಾಯಿತು. ||೪೭೩-೪೭೪-೪೭೫||

ಹಿರಣ್ಯಕ್ಕೆ ಸ್ವಾಮಿಯೂ, ಅಂಬಿಕಾರಮಣನೂ, ಉಮಾರಮಣನೂ ಮತ್ತು ಪಶುಪತಿಯೂ ಎನಿಸಿದ ನೀನು ನನಗೆ ಪ್ರತ್ಯಕ್ಷವಾಗಿಯೇ ಈಗ ಗೋಚರವಾಗಿರುವೆ. ಕಾಯಿಕ ಮಾನಸಿಕ ಸತ್ಯಸ್ವರೂಪಿಯೂ, ಪರಬ್ರಹ್ಮನೆನಿಸಿದವನೂ, ಪುರುಷನೆನಿಸಿದವನೂ, ಕಪ್ಪು ಮತ್ತು ಪಿಂಗಳವಾದ ಬಣ್ಣವುಳ್ಳವನೂ, ಮೇಲ್ಮುಖವಾದ ರೇತಸ್ಸು

ಪ್ರತ್ಯಕ್ಷೋಽಸಿ ಯತಸ್ತ್ರ್ಯಕ್ಷ ತತೋಽಹಂ ಮುದಿತಾ ಪ್ರಭೋ ।
ಭಾಗ್ಯಸ್ಯ ಮಮ ನಾಂತೋಽಸ್ತಿ ಸತ್ಯಂ ಸತ್ಯಂ ನ ಸಂಶಯಃ ॥೪೭೮॥

ವೇದೈರಪಿ ನ ವಿಜ್ಞಾತಂ ತವೇದಂ ರೂಪಮುತ್ತಮಂ ।
ತದೇವೇದಂ ಮಯಾ ದೃಷ್ಟಂ ತ್ವತ್ಪ್ರಸಾದಾನ್ಮಹೇಶ್ವರ ॥೪೭೯॥

ಮಹೇಶ ತ್ವತ್ಪ್ರಸಾದೇನ ಭುಕ್ತಮೈಶ್ವರ್ಯಮುತ್ಕಟಂ ।
ಯಾವದ್ಭುಕ್ತಂ ಮಯೈಶ್ವರ್ಯಂ ತಾವದ್ಭುಕ್ತಂ ನ ಕೇನಚಿತ್ ॥೪೮೦॥

ಮಯಾ ನ ಜ್ಞಾತಮಾಜನ್ಮ ಶರೀರಂ ದುಃಖಮಣ್ವಪಿ ।
ಸುಖೇನೈವ ಸ್ಥಿತಂ ಶಂಭೋ ಸರ್ವದಾ ತ್ವತ್ಪ್ರಸಾದತಃ ॥೪೮೧॥

ಕೋಟಿಶೋ ರತ್ನದಾನಾನಿ ಸ್ವರ್ಣದಾನಾನ್ಯಪಿ ಪ್ರಭೋ ।
ಕೃತಾನಿ ತ್ವತ್ಪ್ರಸಾದೇನ ಪಾರ್ವತೀವಲ್ಲಭಾನ್ವಹಂ ॥೪೮೨॥

ಉಮೇಶ ಭುಕ್ತಭೋಗಾಯಾಃ ನ ಭೋಗೇಚ್ಛಾ ಮಮ ಪ್ರಭೋ ।
ಸತ್ಯಂ ಸತ್ಯಂ ಪುನಃ ಸತ್ಯಂ ದೇಹಿ ಮುಕ್ತಿಮತಃ ಪರಂ ॥೪೮೩॥

ಳ್ಳವನೂ, ವಿಕಾರವಾದ ಕಣ್ಣುಗಳುಳ್ಳವನೂ ಆದ ನಿನ್ನನ್ನು ನೋಡಿ ನನಗೆ ತುಂಬಾ ಸಂತೋಷವುಂಟಾಗಿದೆ. ॥೪೭೬-೪೭೭॥

ಮುಕ್ಕಣ್ಣನಾದ ಪ್ರಭುವೇ, ನೀನು ನನಗೆ ಪ್ರತ್ಯಕ್ಷನಾದುದರಿಂದ ನನಗೆ ವಿಶೇಷ ಸಂತೋಷವುಂಟಾಗಿದೆ. ನನ್ನ ಭಾಗ್ಯಕ್ಕೆ ಎಣೆಯೇ ಇಲ್ಲವೆಂಬುದರಲ್ಲಿ ಸತ್ಯವಾಗಿಯೂ ಸಂದೇಹವೇ ಇಲ್ಲ. ಮಹೇಶ್ವರ, ನಿನ್ನ ಅನುಗ್ರಹದಿಂದ ಅತಿಶಯವಾದ ಐಶ್ವರ್ಯವನ್ನು ನಾನು ಅನುಭವಿಸಿದೆನು. ನಾನು ಅನುಭವಿಸಿದಷ್ಟು ಆನಂದವನ್ನು ಮತ್ತಾರೂ ಖಂಡಿತವಾಗಿಯೂ ಅನುಭವಿಸಿಲ್ಲ. ॥೪೭೮-೪೭೯-೪೮೦॥

ಶಂಭುವೇ, ಹುಟ್ಟಿದಾರಭ್ಯ ನನಗೆ ಕೊಂಚವೂ ದುಃಖವೇ ತೋರಲಿಲ್ಲ. ಯಾವಾಗಲೂ ನಿನ್ನ ಅನುಗ್ರಹದಿಂದ ಸುಖದಿಂದಲೇ ಇರುತ್ತೇನೆ. ಪಾರ್ವತೀರಮಣನಾದ ಸ್ವಾಮಿಯೇ, ನಿನ್ನ ಅನುಗ್ರಹದಿಂದ ಪ್ರತಿದಿನವೂ ಕೋಟ್ಯಂತರ ರತ್ನದಾನ ಮತ್ತು ಸುವರ್ಣದಾನಗಳನ್ನು ಮಾಡಿದ್ದೇನೆ. ಓ ಉಮಾಕಾಂತನಾದ ಪ್ರಭುವೇ, ಸಕಲ ಭೋಗಗಳನ್ನೂ ಅನುಭವಿಸಿರುವ ನನಗೆ ಇನ್ನು ಯಾವ

|| ವಿಷ್ಣುರುವಾಚ ||

ಇತಿ ತದ್ವಚನಂ ಶ್ರುತ್ವಾ ಶಿವಃ ಸಂತುಷ್ಟಮಾನಸಃ ।
ತಾಮುವಾಚ ಕರಂ ಧೃತ್ವಾ ಸುಪ್ರೀತಃ ಪರಯಾ ಮುದಾ ॥೪೮೪॥

|| ಸದಾಶಿವ ಉವಾಚ ||

ಇತೋ ನವತಮೇ ಮಾಸಿ ತವ ಪುತ್ರೋ ಭವಿಷ್ಯತಿ ।
ಸ ಭವಿಷ್ಯತಿ ಸರ್ವಜ್ಞೋ ಮಯಿ ಭಕ್ತಿಂ ಕರಿಷ್ಯತಿ ॥೪೮೫॥

ಸ ಸಂಚರಿಷ್ಯತಿ ಸ್ವೇಚ್ಛಂ ಸ್ವರ್ಗಲೋಕೇಽಪಿ ಸಾದರಂ ।
ಸರ್ವಭೂಮಂಡಲಸ್ಯಾಪಿ ರಕ್ಷಕಃ ಸ ಭವಿಷ್ಯತಿ ॥೪೮೬॥

ನಿತ್ಯಂ ಮೃನ್ಮಯಲಿಂಗಾನಾಂ ಸಹಸ್ರಂ ಪೂಜಯಿಷ್ಯತಿ ।
ಸ ಕಾರಯಿಷ್ಯತಿ ಪ್ರೀತ್ಯಾ ಮಹ್ಯಂ ಮಣಿಶಿವಾಲಯಂ ॥೪೮೭॥

ಭೋಗಾಪೇಕ್ಷೆಯೂ ಇಲ್ಲ. ಸ್ವಾಮಿ, ಇದು ಸತ್ಯವು. ಬಾರಿಬಾರಿಗೂ ನನ್ನ ನುಡಿಯನ್ನು ಸತ್ಯವೆಂದು ತಿಳಿದು ಮುಂದೆ ನನಗೆ ಮೋಕ್ಷವನ್ನು ಕರುಣಿಸು ಸ್ವಾಮಿ. ||೪೮೧-೪೮೨-೪೮೩||

ಎಂದು ನುಡಿದ ಆ ವಿದರ್ಭರಾಜಕುಮಾರಿಯ ಮಾತನ್ನು ಕೇಳಿ ಶಿವನು ಸಂತುಷ್ಟಾಂತರಂಗನಾಗಿ, ಅವಳ ಕೈಯನ್ನು ಹಿಡಿದುಕೊಂಡು ಪ್ರೀತ್ಯಾನಂದಗಳಿಂದ ಇಂತೆಂದನು. ||೪೮೪||

"ಮಂಗಳಾಂಗಿಯೇ, ಇಲ್ಲಿಂದ ಒಂಬತ್ತನೆಯ ತಿಂಗಳಿನಲ್ಲಿ ನಿನಗೆ ಒಬ್ಬ ಮಗನು ಹುಟ್ಟುವನು. ಅವನು ಸರ್ವಜ್ಞನೆನಿಸಿ ನನ್ನಲ್ಲಿ ಭಕ್ತಿಯನ್ನು ತೋರಿಸುತ್ತಾನೆ. ಅವನು ಸ್ವೇಚ್ಛೆಯಾಗಿ ಸ್ವರ್ಗಲೋಕದಲ್ಲಿಯೂ ಸಹ ಸಂಚಾರಮಾಡುತ್ತಾನೆ. ಅಲ್ಲದೇ ಸಕಲ ಭೂಮಂಡಲಕ್ಕೂ ಅವನು ಚಕ್ರವರ್ತಿಯಾಗುತ್ತಾನೆ. ||೪೮೫-೪೮೬||

ನಿತ್ಯವೂ ಅವನು ಸಾವಿರ ಮಣ್ಣಿನಲಿಂಗವನ್ನು ಮಾಡಿಕೊಂಡು ಪೂಜೆಮಾಡುತ್ತಾನೆ. ಆವನು ಪ್ರೀತಿಯಿಂದ ನನಗೋಸ್ಕರ ರತ್ನಗಳಿಂದ ಶಿವದೇವಾಲಯುವನ್ನು

ಕಾರಯಿಷ್ಯತಿ ಮಾಣೇಯಂ ಲಕ್ಷಚಕ್ರಾಯುತಂ ರಥಂ ।
ಸ ಜೀವಿಷ್ಯತಿ ನೀರೋಗಃ ಪೂರ್ಣಂ ಕಲ್ಪಶತತ್ರಯಂ ॥೪೮೮॥

ತಸ್ಯ ಪತ್ನ್ಯೋ ಭವಿಷ್ಯಂತಿ ಪುತ್ರಾಸ್ತತ್ತುಲ್ಯವಿಕ್ರಮಾಃ ।
ಏವಮಗ್ರೇಽಪಿ ಸುಭಗೇ ವಂಶವೃದ್ಧಿರ್ಭವಿಷ್ಯತಿ ॥೪೮೯॥

ತತಃ ಸರ್ವೇಽಪಿ ಮುಕ್ತಾಶ್ಚ ಭವಿಷ್ಯಂತಿ ನ ಸಂಶಯಃ ।
ಮದರ್ಚನಂ ಕೃತಂ ಯಸ್ಮಾತ್ತ್ವಯಾ ಸಂತತಮಾದರಾತ್ ॥೪೯೦॥

ತೇನೈತಾದೃಶಸೌಭಾಗ್ಯಂ ತವ ಬಾಲೇ ಭವಿಷ್ಯತಿ ।
ಜೀವಕಲ್ಪಶತಂ ಬಾಲೇ ತ್ವಂ ಚ ಸೌಭಾಗ್ಯಪೂರ್ವಕಂ ॥೪೯೧॥

ನೀರೋಗಾ ನಿತ್ಯಸಂತುಷ್ಟಾ ಪುಷ್ಟಾಂಗಾ ನಿತ್ಯಯೌವನಾ ।
ಮಯಿ ಭಕ್ತಿಂ ಕುರು ಪ್ರೀತ್ಯಾ ಮಾಮಭ್ಯರ್ಚಯ ಸಂತತಂ ॥೪೯೨॥

---

ಕಟ್ಟಿಸುತ್ತಾನೆ. ಅಲ್ಲದೇ ಲಕ್ಷಚಕ್ರಗಳಿಂದ ಕೂಡಿದ ಹತ್ತುಸಾವಿರ ರಥಗಳನ್ನು ಅವನುರತ್ನಗಳಿಂದಲೇ ಮಾಡಿಸುತ್ತಾನೆ. ಆ ನಿನ್ನ ಮಗನು ರೋಗರುಜಿನಾದಿಗಳಿಲ್ಲದೇ ಮುನ್ನೂರು ಕಲ್ಪಗಳು ಕಳೆಯುವವರೆಗೂ ಸುಖವಾಗಿ ಬದುಕುತ್ತಾನೆ. ||೪೮೭-೪೮೮||

ಅವನಿಗೆ ಅನೇಕ ಮಂದಿ ಪತ್ನಿಯರೂ, ಅಲ್ಲದೇ ತನ್ನಂತೆಯೇ ಸಮಾನ ಪರಾಕ್ರಮಿಗಳಾದ ಅನೇಕ ಮಕ್ಕಳೂ ಆಗುವರು. ಸೌಭಾಗ್ಯಶೀಲಳೇ! ಹೀಗೆಯೇ ನಿನ್ನ ವಂಶವು ಮುಂದೆಯೂ ಅಭಿವೃದ್ಧಿಹೊಂದುತ್ತದೆ. ಅನಂತರ ಎಲ್ಲರೂ ಸಂದೇಹವಿಲ್ಲದೇ ಮೋಕ್ಷವನ್ನೈದುವರು. ಬಾಲಿಕೆ, ನೀನು ನನ್ನನ್ನು ಆದರದಿಂದ ಅನವರತವೂ ಪೂಜೆಮಾಡಿದುದರಿಂದ ನಿನಗೆ ಇಂತಹ ಫಲವುಂಟಾಗುವುದು. ||೪೮೯-೪೯೦||

ಬಾಲಿಕೇ, ಆ ನಿನ್ನ ಕುಮಾರನಿಂದ ನಿನಗೆ ಸಕಲ ಸೌಭಾಗ್ಯವುಂಟಾಗುವುದು. ಬಾಲೇ, ನೀನೂ ನೂರು ಕಲ್ಪಗಳ ವರೆಗೆ ಸೌಭಾಗ್ಯವತಿಯಾಗಿ ಬಾಳುವೆ. ರೋಗರಹಿತಳೂ, ನಿತ್ಯಸಂತೋಷಭರಿತಳೂ, ಪುಷ್ಟಿಹೊಂದಿದ ಅವಯವವುಳ್ಳವಳೂ ನಿತ್ಯ ಯುವ್ವನಭರಿತಳೂ ಆಗಿ ನೀನು ಅನವರತವೂ ನನ್ನನ್ನು ಭಕ್ತಿಪೂರ್ವಕವಾಗಿ ಪ್ರೀತಿಯಿಂದ ಪೂಜೆಮಾಡು. ||೪೯೧-೪೯೨||

ಕುರು ದಾನಾನಿ ಯತ್ನೇನ ಪ್ರತ್ಯಹಂ ಪ್ರೀತಿಪೂರ್ವಕಂ ।
ತತಃ ಕಲ್ಪಶತಾಂತೇ ತ್ವಂ ಮದಾರಾಧನಪೂರ್ವಕಂ ॥೪೯೩॥

ತ್ಯಕ್ತ್ವಾ ಸ್ವಕಾಂ ತನುಂ ಶುದ್ಧಾಂ ಮಾಮುಪೇಷ್ಯಸಿ ಬಾಲಿಕೇ ।
ಮದಾರಾಧನಜಾದ್ಧರ್ಮಾದ್ಭಾಗ್ಯಮೇತಾದೃಶಂ ತ್ವಯಾ ॥೪೯೪॥

ಪ್ರಾಪ್ತವ್ಯಂ ನಾತ್ರ ಸಂದೇಹಃ ಸತ್ಯಂ ಸತ್ಯಂ ವರಾನನೇ ॥೪೯೫॥

ಯಸ್ತು ವಿಶ್ವಸ್ಯ ಮಾಂ ಭಕ್ತ್ಯಾ ಪೂಜಯಿಷ್ಯತಿ ಸಂತತಂ ।
ಸ ಸಮಾಪ್ನೋತಿ ದೇವೇಶಾನ್ಮತ್ತಃ ಸೌಭಾಗ್ಯಮೀದೃಶಂ ॥೪೯೬॥

ವೇದೇಷು ಯಸ್ಯ ವಿಶ್ವಾಸೋ ಭವಿಷ್ಯತಿ ದೃಢಃ ಸದಾ ।
ತಸ್ಯೈವ ಮಯಿ ವಿಶ್ವಾಸೋ ಮತ್ಪೂಜಾಯಾಂ ಚ ಶೋಭನೇ ॥೪೯೭॥

॥ ವಿಷ್ಣುರುವಾಚ ॥

ಇತ್ಯುಕ್ತ್ವಾ ಪೂಜಿತಃ ಸಮ್ಯಕ್ತಯಾ ರತ್ನಾದಿಭಿಃ ಶಿವಃ ।
ಶಿವಾತ್ಮಕೇ ರತ್ನಲಿಂಗೇ ಸಗಣೋಂತರ್ದಧೇ ವಿಧೇ ॥೪೯೮॥

ಪ್ರತಿದಿನವೂ ಪ್ರೀತಿಯಿಂದ ನನ್ನ ಪೂಜಾಪುರಸ್ಸರವಾಗಿ ನಿಯಮದಿಂದ ನಾನಾವಿಧವಾದ ದಾನಗಳನ್ನು ಮಾಡು. ಅನಂತರ ನೂರು ಕಲ್ಪಗಳಾದಮೇಲೆ ನನ್ನ ಪೂಜೆಮಾಡಿದ ತರುವಾಯ ಈ ಶುದ್ಧವಾದ ಶರೀರವನ್ನು ಬಿಟ್ಟು ನನ್ನ ಸಮೀಪವನ್ನು ಹೊಂದುವೆ. ಸುಂದರಮುಖಿಯಾದ ಬಾಲೆಯೇ, ನನ್ನ ಪೂಜೆಮಾಡಿದ ಧರ್ಮದಿಂದ ನಿನಗೆ ಇಂತಹ ಭಾಗ್ಯವುಂಟಾಗುವುದರಲ್ಲಿ ಸತ್ಯವಾಗಿಯೂ ಯಾವ ಸಂದೇಹವೂ ಇಲ್ಲ ॥೪೯೩-೪೯೪-೪೯೫॥

ವಿಶ್ವಾಸವಿಟ್ಟು ನನ್ನನ್ನು ಭಕ್ತಿಯಿಂದ ಅನವರತವೂ ಪೂಜೆಮಾಡುವವನು ದೇವತಾಧಿಪತಿಯಾದ ನನ್ನ ದೆಸೆಯಿಂದ ಇಂತಹ ಸೌಭಾಗ್ಯವನ್ನು ಪಡೆಯುತ್ತಾನೆ. ಶೋಭನಾಂಗಿಯೇ, ವೇದಗಳಲ್ಲಿ ದೃಢವಾದ ನಂಬಿಕೆಯುಳ್ಳವನಿಗೆ ನನ್ನಲ್ಲಿಯೂ ನನ್ನ ಪೂಜೆಯಲ್ಲಿಯೂ ನಂಬಿಕೆಯುಂಟಾಗುತ್ತದೆ" ಎಂದು ಸದಾಶಿವನು ವಿದರ್ಭ ರಾಜಕುಮಾರಿಯಾದ ತಾಂಬೂಲಿಕೆಗೆ ಹೇಳಿದನು. ॥೪೯೬-೪೯೭॥

ವಿಷ್ಣುವು ಬ್ರಹ್ಮನನ್ನು ಕುರಿತು ಅದೇ ಕಥೆಯನ್ನು ಹೀಗೆ ಮುಂದುವರಿಸಿದನು.—

ತತಃ ಸಂತುಷ್ಟಹೃದಯಾ ಸಾ ದಧೌ ದೌಹೃದಂ ವಿಧೇ ।
ಚಂದ್ರರೇಖೇವ ವವೃಧೇ ಸುಭಗಾ ಸಾ ದಿನೇ ದಿನೇ ॥೪೯೯॥

ತತಃ ಸಾ ಜನಯಾಮಾಸ ಪುತ್ರಂ ಶಾಂಕರಪೂಜಕಂ ।
ಶುಭಲಕ್ಷಣಸಂಪನ್ನಂ ಸರ್ವಾವಯವಶೋಭಿನಂ ॥೫೦೦॥

ಸ ತು ಜಾತಿಸ್ಮರೋ ಜಾತೋ ಜಾತಮಾತ್ರಶ್ಚತುರ್ಮುಖ ।
ಉತ್ಪತ್ತಿದಿನಮಾರಭ್ಯ ಕೃತಂ ತೇನ ಶಿವಾರ್ಚನಂ ॥೫೦೧॥

॥ ಬ್ರಹ್ಮೋವಾಚ ॥

ಕಥಂ ಜಾತಿಸ್ಮರೋ ಜಾತೋ ಜಾತಮಾತ್ರಃ ಸ ಬಾಲಕಃ ।
ಕಿಂ ವಾ ಪುಣ್ಯಂ ಕೃತಂ ತೇನ ಪೂರ್ವಜನ್ಮನಿ ಮಾಧವ ॥೫೦೨॥

---

ಆ ಶಿವನು ಹೀಗೆ ವರವಿತ್ತು, ಪುನಃ ಆ ವಿದರ್ಭರಾಜಕುಮಾರಿಯಿಂದ ರತ್ನವೇ ಮುಂತಾದವುಗಳಿಂದ ಪೂಜೆಗೊಂಡವನಾಗಿ ಶಿವಸ್ವರೂಪವಾಗಿರುವ ಆ ರತ್ನಲಿಂಗದಲ್ಲಿ ತನ್ನ ಪ್ರಮಥಗಣಗಳೊಡನೆ ಕಣ್ಮರೆಯಾದನು. ಅಯ್ಯ ಬ್ರಹ್ಮನೆ, ಅನಂತರ ಸಂತುಷ್ಟಾಂತರಂಗವುಳ್ಳ ಆ ವಿದರ್ಭರಾಜಕುಮಾರಿಯು ಗರ್ಭವನ್ನು ಧರಿಸಿ, ದಿನದಿನಕ್ಕೂ ಆ ಸೌಭಾಗ್ಯವತಿಯು ಚಂದ್ರನ ರೇಖೆಯಂತೆ ಅಭಿವೃದ್ಧಿ ಹೊಂದುತ್ತಿದ್ದಳು. ಹಾಗೆ ಅವಳಿಗೆ ಕ್ರಮವಾಗಿ ಒಂಭತ್ತುತಿಂಗಳು ಕಳೆಯಲು ಶಂಕರನ ಪೂಜಕನೂ, ಶುಭಲಕ್ಷಣಗಳಿಂದ ಕೂಡಿದವನೂ, ಸಕಲ ಅವಯುವಗಳಿಂದ ಶೋಭಿಸುತ್ತಿರುವವನೂ ಆದ ಸುಪುತ್ರನೊಬ್ಬನನ್ನು ಪಡೆದಳು. ॥೪೯೮-೪೯೯-೫೦೦॥

ಎಲೈ ಚತುರ್ಮುಖಬ್ರಹ್ಮನೇ, ಆ ಮಗನು ಹುಟ್ಟಿದಕೂಡಲೇ ಹಿಂದಿನ ಜನ್ಮಸ್ಮರಣೆಯುಳ್ಳವನಾಗಿ, ಹುಟ್ಟಿದಾರಭ್ಯ ಶಿವಪೂಜೆಮಾಡಲು ಪ್ರಾರಂಭಿಸಿದನು. ಇದನ್ನು ಕೇಳಿ ಆಶ್ಚರಿಗೊಂಡ ಬ್ರಹ್ಮನು, ॥೫೦೧॥

ಲಕ್ಷ್ಮೀಕಾಂತನಾದ ವಿಷ್ಣುವೇ, ಹುಟ್ಟಿದಕೂಡಲೇ ಆ ಮಗುವು ಹೇಗೆ ಹಿಂದಿನ ಜನ್ಮಸ್ಮರಣೆಯನ್ನು ಹೊಂದಿತು? ಹಿಂದಿನ ಜನ್ಮದಲ್ಲಿ ಆತನು ಮಾಡಿದ ಪುಣ್ಯವೇನೆಂದು ಮತ್ತೆ ವಿಷ್ಣುವನ್ನು ಪ್ರಶ್ನೆಮಾಡಿದನು ॥೫೦೨॥

ತತಃ ಸಂತುಷ್ಟಹೃದಯಾ ಸಾ ದಧೌ ದೌಹೃದಂ ವಿಧೇ ।
ಚಂದ್ರರೇಖೇವ ವವೃಧೇ ಸುಭಗಾ ಸಾ ದಿನೇ ದಿನೇ ॥೪೯೯॥

ತತಃ ಸಾ ಜನಯಾಮಾಸ ಪುತ್ರಂ ಶಾಂಕರಪೂಜಕಂ ।
ಶುಭಲಕ್ಷಣಸಂಪನ್ನಂ ಸರ್ವಾವಯವಶೋಭಿನಂ ॥೫೦೦॥

ಸ ತು ಜಾತಿಸ್ಮರೋ ಜಾತೋ ಜಾತಮಾತ್ರಶ್ಚತುರ್ಮುಖ
ಉತ್ಪತ್ತಿದಿನಮಾರಭ್ಯ ಕೃತಂ ತೇನ ಶಿವಾರ್ಚನಂ ॥೫೦೧॥

॥ ಬ್ರಹ್ಮೋವಾಚ ॥

ಕಥಂ ಜಾತಿಸ್ಮರೋ ಜಾತೋ ಜಾತಮಾತ್ರಃ ಸ ಬಾಲಕಃ ।
ಕಿಂ ವಾ ಪುಣ್ಯಂ ಕೃತಂ ತೇನ ಪೂರ್ವಜನ್ಮನಿ ಮಾಧವ ॥೫೦೨॥

---

ಆ ಶಿವನು ಹೀಗೆ ವರವಿತ್ತು, ಪುನಃ ಆ ವಿದರ್ಭರಾಜಕುಮಾರಿಯಿಂದ ರತ್ನವೇ ಮುಂತಾದವುಗಳಿಂದ ಪೂಜೆಗೊಂಡವನಾಗಿ ಶಿವಸ್ವರೂಪವಾಗಿರುವ ಆ ರತ್ನಲಿಂಗದಲ್ಲಿ ತನ್ನ ಪ್ರಮಥಗಣಗಳೊಡನೆ ಕಣ್ಮರೆಯಾದನು. ಅಯ್ಯ ಬ್ರಹ್ಮನೆ, ಅನಂತರ ಸಂತುಷ್ಟಾಂತರಂಗವುಳ್ಳ ಆ ವಿದರ್ಭರಾಜಕುಮಾರಿಯು ಗರ್ಭವನ್ನು ಧರಿಸಿ, ದಿನದಿನಕ್ಕೂ ಆ ಸೌಭಾಗ್ಯವತಿಯು ಚಂದ್ರನ ರೇಖೆಯಂತೆ ಅಭಿವೃದ್ಧಿ ಹೊಂದುತ್ತಿದ್ದಳು. ಹಾಗೆ ಅವಳಿಗೆ ಕ್ರಮವಾಗಿ ಒಂಭತ್ತುತಿಂಗಳು ಕಳೆಯಲು ಶಂಕರನ ಪೂಜಕನೂ, ಶುಭಲಕ್ಷಣಗಳಿಂದ ಕೂಡಿದವನೂ, ಸಕಲ ಅವಯವಗಳಿಂದ ಶೋಭಿಸುತ್ತಿರುವವನೂ ಆದ ಸುಪುತ್ರನೊಬ್ಬನನ್ನು ಪಡೆದಳು. ॥೪೯೮-೪೯೯-೫೦೦॥

ಎಲೈ ಚತುರ್ಮುಖಬ್ರಹ್ಮನೇ, ಆ ಮಗನು ಹುಟ್ಟಿದಕೂಡಲೇ ಹಿಂದಿನ ಜನ್ಮಸ್ಮರಣೆಯುಳ್ಳವನಾಗಿ, ಹುಟ್ಟಿದಾರಭ್ಯ ಶಿವಪೂಜೆಮಾಡಲು ಪ್ರಾರಂಭಿಸಿದನು. ಇದನ್ನು ಕೇಳಿ ಆಶ್ಚರ್ಯಗೊಂಡ ಬ್ರಹ್ಮನು, ॥೫೦೧॥

ಲಕ್ಷ್ಮೀಕಾಂತನಾದ ವಿಷ್ಣುವೇ, ಹುಟ್ಟಿದಕೂಡಲೇ ಆ ಮಗುವು ಹೇಗೆ ಹಿಂದಿನ ಜನ್ಮಸ್ಮರಣೆಯನ್ನು ಹೊಂದಿತು? ಹಿಂದಿನ ಜನ್ಮದಲ್ಲಿ ಆತನು ಮಾಡಿದ ಪುಣ್ಯವೇನೆಂದು ಮತ್ತೆ ವಿಷ್ಣುವನ್ನು ಪ್ರಶ್ನೆಮಾಡಿದನು ॥೫೦೨॥

|| ವಿಷ್ಣುರುವಾಚ ||

ಸ ಬಾಲಕಃ ಪುರಾ ವಿಪ್ರೋ ದರಿದ್ರೋ ವ್ಯಾಧಿಪೀಡಿತಃ ।
ಬಲಿಸಂಕೀರ್ಣಸರ್ವಾಂಗಃ ಪುಂಡರೀಕಪುರೇ ಸ್ಥಿತಃ ||೫೦೩||

ಶ್ರೀಮಚ್ಚಿದಂಬರೇಶಸ್ಯ ದ್ವಾರಿ ಭಸ್ಮಾವಗುಂಠಿತಃ ।
ಸರ್ವದೈವ ಸ್ಥಿತಃ ಪೂರ್ವಂ ಬಿಲ್ವಭಕ್ಷಣತತ್ಪರಃ ||೫೦೪||

ತತ್ರೈವ ಶಿವಗಂಗಾಯಾಂ ಸ್ನಾತ್ವಾ ಭಸ್ಮವಿಭೂಷಣಃ ।
ರುದ್ರಾಕ್ಷಭೂಷಣೋ ನಿತ್ಯಂ ಸ್ಥಿತಃ ಪಂಚಾಕ್ಷರಂ ಜಪನ್ ||೫೦೫||

ಏವಮೇವ ಸ್ಥಿತೋ ನಿತ್ಯಂ ಬಹುಕಾಲಂ ತತಃ ಪರಂ ।
ನಿತ್ಯಂ ಪಾರ್ಥಿವಲಿಂಗಾನಿ ಪೂಜಯಾಮಾಸ ಸಾದರಂ ||೫೦೬||

ತತಶ್ಚಿದಂಬರಂ ತ್ಯಕ್ತ್ವಾ ವೃದ್ಧಾಚಲದಿದೃಕ್ಷಯಾ ।
ಚಲಿತೋಽಧ್ವನಿ ಮಧ್ಯಾಹ್ನೇ ಜಹೌ ಪ್ರಾಣಾನ್ತೃಷಾರ್ದಿತಃ ||೫೦೭||

ತತಃ ಸ ಪುಷ್ಪಕಾರೂಢಃ ಸ್ವರ್ಗಲೋಕಂ ಯಯೌ ವಿಧೇ ।
ಸ್ವರ್ಗಲೋಕೇ ಸ್ಥಿತಃ ಪ್ರೀತ್ಯಾ ಬಹುಕಾಲಂ ದ್ವಿಜೋತ್ತಮಃ ||೫೦೮||

ಅಯ್ಯ ಬ್ರಹ್ಮನೇ, ಆ ಬಾಲಕನು ಹಿಂದೆ ಬಡವನೂ, ರೋಗಪೀಡಿತನೂ, ಶಿವಪ್ರಸಾದದಿಂದ ವ್ಯಾಪ್ತವಾದ ದೇಹವುಳ್ಳವನೂ ಆದ ಬ್ರಾಹ್ಮಣನಾಗಿ ಪುಂಡರೀಕ ಪುರದಲ್ಲಿದ್ದನು ಅವನು ಕಾಂತಿಯುಕ್ತನಾಗಿ ಚಿದಂಬರೇಶ್ವರನ ದೇವಾಲಯದ ಬಾಗಿಲಿನಲ್ಲಿ ವಿಭೂತಿಯನ್ನು ಲೇಪನಮಾಡಿಕೊಂಡು, ಯಾವಾಗಲೂ ಬಿಲ್ವದಳಗಳನ್ನು ತಿನ್ನುವುದರಲ್ಲಿಯೇ ನಿರತನಾಗಿದ್ದನು. |೫೦೩-೫೦೪||

ಅಲ್ಲಿಯೇ ಇರುವ ಶಿವಗಂಗಾತೀರ್ಥದಲ್ಲಿ ಸ್ನಾನಮಾಡಿ, ಭಸ್ಮವನ್ನು ಅಲಂಕರಿಸಿಕೊಂಡು, ರುದ್ರಾಕ್ಷಗಳನ್ನು ಧರಿಸಿ ನಿತ್ಯವೂ ಶಿವಪಂಚಾಕ್ಷರಮಂತ್ರವನ್ನು ಜಪಮಾಡುತ್ತಿದ್ದನು. ಹೀಗೆಯೇ ಆ ಬ್ರಾಹ್ಮಣನು ಬಹಳಕಾಲವಿದ್ದು ಅನಂತರ ನಿತ್ಯವೂ ಪಾರ್ಥಿವಲಿಂಗಗಳನ್ನು ಆದರದಿಂದ ಪೂಜೆಮಾಡಿದನು. ||೫೦೫-೫೦೬||

ಕಾರ್ಯಕ್ರಮದಲ್ಲಿ ಚಿದಂಬರಕ್ಷೇತ್ರವನ್ನು ಬಿಟ್ಟು ವೃದ್ಧಾಚಲಕ್ಷೇತ್ರವನ್ನು ನೋಡುವ ಅಪೇಕ್ಷೆಯಿಂದ ಹೊರಟು ದಾರಿಯಲ್ಲಿ, ಒಳ್ಳೆಯ ಮಧ್ಯಾಹ್ನಕಾಲದಲ್ಲಿ

ವೈದರ್ಭೀ ಗರ್ಭಮಾಪನ್ನಸ್ತತೋ ಭಾಗ್ಯವಶಾದ್ವಿಧೇ ।
ಸ್ಥಿತೋ ಗರ್ಭೇಽಪಿ ದುಃಖಾನಿ ನಾಪಾಪ ಶಿವಪೂಜಕಃ ॥೫೯॥

ಬಲಿಭೋಜನಪುಣ್ಯೇನ ಸೋಽಭೂಜ್ಜಾತಿಸ್ಮರೋ ದ್ವಿಜಃ ।
ಲಿಂಗಪೂಜನಪುಣ್ಯೇನ ಭೂಪತಿಃ ಸಮಜಾಯತ ॥೫೧೦॥

ಏವಂ ಜಾತಿಸ್ಮರೋ ಬಾಲಃ ಪಿತೃಸಂತೋಷವರ್ಧಕಃ ।
ಪೂಜಯಾಮಾಸ ಗೌರೀಶಮುತ್ಪತ್ತ್ಯವಧಿ ಸಾದರಂ ॥೫೧೧॥

ಯಥಾಭಕ್ತಿಃ ಕೃತಾ ತೇನ ದೇವದೇವೇ ಮಹೇಶ್ವರೇ ।
ತಥಾ ಭಕ್ತಿರ್ನ ಕೇನಾಪಿ ಶಕ್ಯತೇ ಕರ್ತುಮನ್ವಹಂ ॥೫೧೨॥

ಯಥೋಕ್ತಂ ಶ್ರೀಮಹೇಶೇನ ವೈದರ್ಭೀಂ ಪ್ರತಿ ಸಾದರಂ ।
ತಥೈವ ಜಾತಸ್ತತ್ಪುತ್ರಃ ಶಿವಪೂಜಾಪರಾಯಣಃ ॥೫೧೩॥

---

ಬಾಯಾರಿ ಬಳಲಿ ಮೃತನಾದನು. ಎಲೈ ಬ್ರಹ್ಮನೇ, ಅನಂತರ ಇವನು ಪುಷ್ಪಕ ವಿಮಾನವನ್ನೇರಿ ಸ್ವರ್ಗಲೋಕಕ್ಕೆ ತೆರಳಿ ಅಲ್ಲಿ ಬಹಳಕಾಲ ಪ್ರೀತಿಯಿಂದ ವಾಸ ಮಾಡಿದನು. ॥೫೦೭-೫೦೮॥

ಬ್ರಹ್ಮದೇವನೇ, ಆಮೇಲೆ ಭಾಗ್ಯವಶದಿಂದ ಈ ಬ್ರಾಹ್ಮಣನು ವಿದರ್ಭರಾಜ ಕುಮಾರಿಯ ಗರ್ಭದಲ್ಲಿ ಸೇರಿದನು. ಶಿವಪೂಜಕನಾದ್ದರಿಂದ ಗರ್ಭದಲ್ಲಿದ್ದಾಗಲೂ ಕೊಂಚವೂ ದುಃಖವನ್ನೇ ಹೊಂದಲಿಲ್ಲ. ಈ ಬ್ರಾಹ್ಮಣನು ಹಿಂದಿನ ಜನ್ಮದಲ್ಲಿ ಶಿವನಿಗೆ ನಿವೇದನಮಾಡಿದ ಬಲಿಯನ್ನು ತಿಂದ ಪುಣ್ಯದಿಂದ ಅವನಿಗೆ ಪೂರ್ವಜಾತಿ ಸ್ಮರಣೆಯುಂಟಾಯಿತು. ಶಿವಲಿಂಗಪೂಜಾಮಹಿಮೆಯಿಂದ ಇವನು ಮತ್ತೆ ರಾಜನಾಗಿ ಹುಟ್ಟಿದನು. ॥೫೦೯-೫೧೦॥

ಹೀಗೆ ಜಾತಿಸ್ಮರಣೆಯುಳ್ಳ ಆ ಬಾಲಕನು ತನ್ನ ತಂದೆಯಾದ ಕುಲನಾಥನ ಸಂತೋಷವನ್ನು ಅಭಿವೃದ್ಧಿಪಡಿಸುತ್ತಾ ಹುಟ್ಟಿದಾರಭ್ಯ ಆದರದಿಂದ ಆ ಗೌರೀ ರಮಣನನ್ನು ಪೂಜೆಮಾಡಿದನು. ದೇವದೇವನೆನಿಸಿದ ಆ ಮಹೇಶ್ವರನಲ್ಲಿ ಅವನು ಅನವರತವೂ ತೋರಿಸಿದ ಭಕ್ತಿಯನ್ನು ಮತ್ತಾರಿಂದಲೂ ತಿಳಿಯಲು ಸಾಧ್ಯವಿಲ್ಲ ವಾಯಿತು. ॥೫೧೧-೫೧೨॥

ಹಿಂದೆ ಆ ಮಹೇಶ್ವರನು ವಿದರ್ಭರಾಜಕುಮಾರಿಯನ್ನು ಕುರಿತು ಹೇಳಿ

ವೈದರ್ಭೀ ತನಯಂ ದೃಷ್ಟ್ವಾ ಶ್ರೀಮಹಾದೇವಪೂಜಕಂ ।
ಸಂತುಷ್ಟಹೃದಯಾ ಜಾತಾ ಸೌಭಾಗ್ಯನಿಲಯಾ ಸದಾ ।೫೧೪॥

ವೈದರ್ಭೀ ತನಯೋ ಬ್ರಹ್ಮನ್ನುಪಯೇಮೇ ತತಃ ಪರಂ ।
ತಸ್ಯ ಲಕ್ಷಮಭೂತ್ಸೌಮ್ಯಂ ನಾರೀಣಾಮತಿಸುಂದರಂ ।೫೧೫॥

ನವಲಕ್ಷಂ ಸುತಾ ಜಾತಾಸ್ತಸ್ಯ ತಾಸು ಶಿವಾರ್ಚಕಾಃ ।
ಪೌತ್ರಾನ್ ಶಿವಾರ್ಚಕಾನ್ದೃಷ್ಟ್ವಾ ವೈದರ್ಭೀ ಮುದಿತಾ ಸ್ಥಿತಾ॥೫೧೬॥

ಲಕ್ಷಚಕ್ರರಥಸ್ತೇನ ಕಾರಿತೋ ಮಣಿರಂಜಿತಃ ।
ಶಿವಾಲಯಃ ಕೃತಸ್ತೇನ ನಾನಾರತ್ನಮಯಃ ಶುಭಃ ॥೫೧೭॥

ವೈದರ್ಭ್ಯಪ್ಯನಿಶಂ ಶಂಭುಂ ಪೂಜಯಾಮಾಸ ಸಾದರಂ ।
ಹೇಮಪದ್ಮೈರ್ಬಿಲ್ವಪತ್ರೈಃ ಪ್ರಸೂನೈರ್ವಿವಿಧೈರಪಿ ॥೫೧೮॥

ದಂತೆಯೇ ಅವಳಿಗೆ ಶಿವಪೂಜಾನಿರತನಾದ ಮಗನು ಹುಟ್ಟಿದನು. ಆ ವೈದರ್ಭಿಯು ಶ್ರೀ ಮಹಾದೇವನನ್ನು ಪೂಜಿಸುವುದರಲ್ಲಿ ತುಂಬಾ ಆಸಕ್ತಿಯುಳ್ಳ ತನ್ನ ಮಗನನ್ನು ನೋಡಿ ನಿತ್ಯಸೌಭಾಗ್ಯವತಿಯಾದ ಆಕೆಯು ಅನವರತವೂ ಸಂತೋಷಭರಿತವಾದ ಮನಸ್ಸಿನಿಂದ ಕೂಡಿರುತ್ತಿದ್ದಳು ॥೫೧೩-೫೧೪॥

ಅಯ್ಯ ಬ್ರಹ್ಮನೇ, ಆಮೇಲೆ ಪ್ರಾಪ್ತವಯಸ್ಕನಾಗಲು ಆ ವೈದರ್ಭೀ ಕುಮಾರನು ಗೃಹಸ್ಥನಾದನು. ಅವನಿಗೆ ಅತ್ಯಂತ ಸುಂದರಿಯರೂ ಸೌಮ್ಯಸ್ವಭಾವ ದವರೂ ಆದ ಲಕ್ಷ ಮಂದಿ ಪತ್ನಿಯರಿದ್ದರು ಆ ಲಕ್ಷಮಂದಿ ಹೆಂಡಿರಲ್ಲಿ ಶಿವಪೂಜಾ ನಿರತರಾದ ಒಂಬತ್ತುಲಕ್ಷಮಂದಿ ಗಂಡುಮಕ್ಕಳಾದರು. ಆಗ ವಿದರ್ಭರಾಜಕುವರಿಯು ತನ್ನ ಮೊಮ್ಮಕ್ಕಳೂ ಸಹ ಶಿವಪೂಜಾನಿರತರಾದುದನ್ನು ಕಂಡು ಸಂತೋಷದಿಂದ ಇದ್ದಳು. ॥೫೧೫-೫೧೬॥

ರತ್ನಖಚಿತವಾಗಿ ಶೋಭಿಸುತ್ತಿರುವ ಲಕ್ಷ ಚಕ್ರಗಳಿಂದ ಕೂಡಿದ ರಥವು ಅವನಿಂದ ನಿರ್ಮಿಸಲ್ಪಟ್ಟಿತು. ಬಗೆಬಗೆಯ ಅನೇಕ ರತ್ನಗಳಿಂದ ಭರಿತವಾದ ಶಿವದೇವಾಲಯವನ್ನೂ ಅವನು ಚೆನ್ನಾಗಿ ಕಟ್ಟಿಸಿದನು. ಆ ವಿದರ್ಭರಾಜಕುಮಾರಿಯೂ ಕೂಡ ಅನವರತವೂ ಆ ಶಂಭುವನ್ನು ಆದರದಿಂದ ಸುವರ್ಣಕಮಲ, ಬಿಲ್ವ ದಳ ಮತ್ತು ವಿಧವಿಧವಾದ ಇತರ ಹೂಗಳಿಂದ ಪೂಜೆಮಾಡುತ್ತಿದ್ದಳು.॥೫೧೭-೫೧೮॥

ಸಾ ಸರ್ವದಾ ಮಹಾದೇವಂ ಸ್ಮರಂತೀ ಶಿವತತ್ಪರಾ ।
ನಿತ್ಯಂ ಶಿವಕಥಾಮೇವ ಶುಶ್ರಾವ ಶ್ರುತಿಸಂಮತಾ ॥೫೧೯॥

ಶಿವಾಲಯೇ ಸಂನಿವಿಶ್ಯ ಶಿವಲಿಂಗಸ್ಯ ಸಂನಿಧೌ ।
ಪ್ರತಿಕ್ಷಣಂ ಶಿವಂ ಬಿಲ್ವೈಃ ಪೂಜಯಿತ್ವೈವ ಸಾ ಸ್ಥಿತಾ ॥೫೨೦॥

ತತ್ಪುತ್ರೋ ಮಾತರಂ ದೃಷ್ಟ್ವಾ ಶಿವಪೂಜಾಪರಾಂ ಸದಾ ।
ಶಿವಪೂಜಾಸಾಧನಾನಿ ತಸ್ಯೈ ದತ್ವಾ ಸ್ಥಿತೋ ವಿಧೇ ॥೫೨೧॥

ಏವಂ ಸ್ಥಿತ್ವಾ ಕದಾಚಿತ್ಸಾ ಪೂಜಯಂತೀ ಮಹೇಶ್ವರಂ ।
ಶಿವೇಶ ಶಂಕರೇತ್ಯುಕ್ತ್ವಾ ವಿಜಹೌ ಮುದಿತಾ ತನುಂ ॥೫೨೨॥

ತತಃ ಪ್ರೇಷಿತವಿಮಾನೇನ ಪುಷ್ಪಕಂ ಪುಷ್ಪಸಂಕುಲಂ ।
ಪುಷ್ಪಕಂ ಸಾ ಸಮಾರುಹ್ಯ ಯಯೌ ಶಂಕರಸಂನಿಧಿಃ ॥೫೨೩॥

---

ಅವಳು ನಿತ್ಯವೂ ಶಿವನಲ್ಲಿಯೇ ತತ್ಪರಳಾಗಿ, ಮಹಾದೇವನನ್ನು ಸ್ಮರಣೆ ಮಾಡುತ್ತಾ ನಿತ್ಯವೂ ವೇದಸಮ್ಮತವಾದ ಶಿವಕಥೆಗಳನ್ನೇ ಕೇಳುತ್ತಿದ್ದಳು. ಶಿವದೇವಾಲಯಗಳಿಗೆ ಹೋಗಿ ಶಿವಲಿಂಗಗಳ ಸಮೀಪದಲ್ಲಿಯೇ ಕುಳಿತುಕೊಂಡು ಪ್ರತಿಕ್ಷಣದಲ್ಲಿಯೂ ಬಿಲ್ವದಳಗಳಿಂದ ಶಿವನನ್ನು ಪೂಜೆಮಾಡುತ್ತಲೇ ಇರುತ್ತಿದ್ದಳು. ||೫೧೯-೫೨೦||

ಎಲೈ ಬ್ರಹ್ಮನೇ, ಅವಳ ಮಗನು ಶಿವಪೂಜೆಯಲ್ಲಿಯೇ ಯಾವಾಗಲೂ ನಿರತಳಾಗಿರುವ ತನ್ನ ತಾಯಿಯನ್ನು ನೋಡಿ, ಅವಳಿಗೆ ಬೇಕಾದ ಶಿವಪೂಜಾ ಸಾಮಗ್ರಿಗಳನ್ನು ಒದಗಿಸಿಕೊಡುತ್ತಿದ್ದನು. ಹೀಗೆಯೇ ಅನೇಕ ದಿನಗಳು ಕಳೆಯಲು ಒಂದು ದಿವಸ ಆ ವೈದರ್ಭಿಯು ಮಹೇಶ್ವರನನ್ನು ಪೂಜೆಮಾಡುತ್ತಾ, 'ಶಿವ, ಶಂಕರ, ಈಶ' ಎಂಬುದಾಗಿ ದಿವ್ಯನಾಮಗಳನ್ನು ನುಡಿದು ಸಂತೋಷದಿಂದ ಈ ಶರೀರವನ್ನು ತ್ಯಾಗಮಾಡಿದಳು. ||೫೨೧-೫೨೨||

ಹೀಗೆ ವೈದರ್ಭಿಯು ಮೃತಳಾದಮೇಲೆ ಅವಳನ್ನು ಕರೆತರಲು ಈಶ್ವರನು ಹೂಗಳಿಂದ ವ್ಯಾಪ್ತವಾದ ಪುಷ್ಪಕವಿಮಾನವನ್ನು ಕಳುಹಿಸಿದನು. ಆಗ ಅವಳು ಆ ಪುಷ್ಪಕವಿಮಾನವನ್ನೇರಿ ಶಂಕರನ ಸಂನಿಧಿಗೈದಿದಳು. ಆಗ ದೇವದುಂದುಭಿ

ತದಾ ದುಂದುಭಯೋ ನೇದುಃ ಪುಷ್ಪವೃಷ್ಟಿರಭೂತ್ತದಾ ।
ಗಂಧರ್ವಾಶ್ಚ ಜಗುಃ ಸರ್ವೇ ನನೃತುಶ್ಚಾಪ್ಸರೋಗಣಾಃ ॥೫೨೪॥

ಶಿವಸ್ತಾಮಾಗತಾಂ ದೃಷ್ಟ್ವಾ ದೃಷ್ಟ್ವಾ ಚ ಜಗದಂಬಿಕಾಂ ।
ಬಭಾಷೇ ವಚನಂ ಪ್ರೀತ್ಯಾ ವೈದರ್ಭೀಮಪಿ ತೋಷಯನ್ ॥೫೨೫॥

॥ ಮಹಾದೇವ ಉವಾಚ ॥

ಇಯಂ ಮದೇಕನಿರತಾ ಮದಾರಾಧನತತ್ಪರಾ ।
ಮಾಮೇವ ಸರ್ವದಾ ಧ್ಯಾತ್ವಾ ಸಂಸ್ಥಿತಾ ಭುವಿ ಸಂಶ್ರುತಾ ॥೫೨೬॥

ಕಿಯತ್ಕಾಲಂ ತ್ವಯಾ ಸಾಕಮತ್ರ ಕ್ರೀಡಾಂ ಕರೋತ್ವಿಯಂ ।
ತತಃ ಪರಮಿಯಂ ದೇವಿ ಮಯಿ ಲೀನಾ ಭವಿಷ್ಯತಿ ॥೫೨೭॥

ಮನ್ನಾಮೋಚ್ಚಾರಣಂ ಕೃತ್ವಾ ತನುಸ್ತ್ಯಕ್ತಾನಯಾ ಪ್ರಿಯೇ ।
ತತೋ ಮಯ್ಯಧುನೈವೇಯಂ ಲೀನಾ ಭವಿತುಮರ್ಹತಿ ॥೫೨೮॥

ತಥಾಪ್ಯೇಷಾ ಸಖೀಭೂತ್ವಾ ತವ ಕಲ್ಪಶತತ್ರಯಂ ।
ತಿಷ್ಠಂತ್ವತ್ಯಂತಸಂತುಷ್ಟಾ ತತೋ ಲೀನಾ ಭವಿಷ್ಯತಿ ॥೫೨೯॥

---

ವಾದ್ಯಗಳು ಮೊಳಗಿದವು. ಹೂಮಳೆಗರೆಯಿತು. ಗಂಧರ್ವರು ಸಂತೋಷದಿಂದ ಗಾನಮಾಡಿದರು. ಅಪ್ಸರೆಯರ ಸಮೂಹವೆಲ್ಲವೂ ಆನಂದದಿಂದ ನರ್ತನಮಾಡಿತು. ಆಗ ಶಿವನು ತನ್ನ ಸಂನಿಧಿಗೆ ಬಂದಿರುವ ಆ ವೈದರ್ಭಿಯನ್ನೂ, ಜಗದಂಬಿಕೆಯಾದ ಪಾರ್ವತಿಯನ್ನೂ ನೋಡುತ್ತಾ ಪ್ರೀತಿಯಿಂದ ಆ ವೈದರ್ಭಿಯನ್ನು ಸಂತೋಷ ಪಡಿಸುವಂತೆ ಹೀಗೆ ನುಡಿದನು. ॥೫೨೩-೫೨೪-೫೨೫॥

ದೇವಿ, ಇವಳು ನನ್ನೊಬ್ಬನಲ್ಲಿಯೇ ತತ್ಪರಳಾಗಿ ನನ್ನ ಪೂಜೆ ಮತ್ತು ಧ್ಯಾನ ಗಳನ್ನೇ ಯಾವಾಗಲೂ ಮಾಡುತ್ತಾ ಈ ಭೂಮಿಯಲ್ಲಿ ಪ್ರಸಿದ್ಧಳಾಗಿದ್ದಳು. ಈ ಸಾಧ್ವಿಯು ಕೆಲವುಕಾಲ ನಿನ್ನೊಡನೆ ವಿಹರಿಸುತ್ತಾ ಕಾಲ ಕಳೆಯಲಿ ಆಮೇಲೆ ಇವಳು ನನ್ನಲ್ಲಿಯೇ ಐಕ್ಯವಾಗುತ್ತಾಳೆ. ॥೫೨೬-೫೨೭॥

ಪ್ರಿಯೇ, ನನ್ನ ನಾಮವನ್ನುಚ್ಚರಿಸಿ ಇವಳು ಪ್ರಾಣತ್ಯಾಗಮಾಡಿದ್ದಾಳೆ. ಆದ್ದರಿಂದ ಇವಳು ಈಗಲೇ ನನ್ನಲ್ಲಿ ಐಕ್ಯವಾಗಲು ಯೋಗ್ಯಳಾಗಿರುವಳು. ಆದರೂ

|| ಪಾರ್ವತ್ಯುವಾಚ ||

ಆಲಸ್ಯಂ ಕಥಮೇತಸ್ಯಾಸ್ತ್ವಯಿ ಶಂಭೌ ಪ್ರಸೀದತಿ ।
ತ್ವತ್ಪ್ರಸಾದೇ ವಿಲಂಬೋऽಪಿ ಕಥಂ ವಾ ಜಾಯತೇ ವದ ॥೫೩೦॥

|| ಶ್ರೀ ಶಿವ ಉವಾಚ ||

ಶಿವೇ ದೇಯಾ ಮುಕ್ತಿರಸ್ಯೈ ಸಂದೇಹೋ ನಾತ್ರ ಸರ್ವಥಾ ।
ಕಿಯತ್ಕಾಲವಿಲಂಬೇನ ಮುಕ್ತಿರಸ್ಯಾ ಭವಿಷ್ಯತಿ ॥೫೩೧॥

|| ವಿಷ್ಣುರುವಾಚ ||

ಇತೀಶವಚನಂ ಶ್ರುತ್ವಾ ಪುನಃ ಸಂಶಯಸಂಯುತಾ ।
ತದಾ ಸಂಶಯನಾಶಾರ್ಥಮುವಾಚ ಪ್ರೀತಿಪೂರ್ವಕಂ ॥೫೩೨॥

---

ಇವಳು ಮುನ್ನೂರು ಕಲ್ಪಗಳವರೆಗೆ ನಿನ್ನ ಸಖಿಯಾಗಿ ಅತ್ಯಂತ ಸಂತೋಷದಿಂದ ಕಾಲಕಳೆಯಲಿ. ಅನಂತರ ಇವಳು ನನ್ನಲ್ಲಿಯೇ ಲೀನಳಾಗುವಳೆಂದು ಮಹಾದೇವನು ಪಾರ್ವತಿಗೆ ಹೇಳಿದನು. ||೫೨೮-೫೨೯||

ಪ್ರಭೋ, ಜಗನ್ಮಂಗಳಕರನಾದ ನೀನು ಪ್ರಸನ್ನನಾಗಿರುವಾಗ ಇವಳಿಗೆ ಹೇಗೆತಾನೆ ಸಖೀತ್ವವುಂಟಾದೀತು? ನಿನ್ನ ಅನುಗ್ರಹದಲ್ಲಿ ವಿಲಂಬವಾದರೂ ಉಂಟಾಗುವುದೆಂದರೇನು? ನೀನೇ ಹೇಳು. ದೇವ! ನಿನ್ನಪ್ಪಣೆಯಂತೆ ನಡೆಯಲು ಸಿದ್ಧಳಾಗಿರುವೆನೆಂದು ಪಾರ್ವತಿಯು ಮಹಾದೇವನಲ್ಲಿ ಬಿನ್ನೈಸಿದಳು. ||೫೩೦||

ಮಂಗಳಾಂಗಿಯೇ, ಇವಳಿಗೆ ಮೋಕ್ಷವನ್ನು ಕೊಡುವುದರಲ್ಲಿ ಖಂಡಿತವಾಗಿಯೂ ಸಂದೇಹವೇ ಇಲ್ಲ. ಸ್ವಲ್ಪಕಾಲ ವಿಲಂಬದಿಂದ ಇವಳಿಗೆ ಮೋಕ್ಷವು ದೊರೆಯುವುದು, ಎಂದು ಶಿವನು ದೇವಿಗೆ ಭರವಸೆ ನೀಡಿದನು. ||೫೩೧||

ಹೀಗೆ ನುಡಿದ ಈಶ್ವರನ ಮಾತನ್ನು ಕೇಳಿ ಪುನಃ ಪಾರ್ವತಿಯು ಸಂದೇಹಗೊಂಡು ತನ್ನ ಸಂದೇಹವನ್ನು ಹೋಗಲಾಡಿಸಿಕೊಳ್ಳುವುದಕ್ಕೋಸ್ಕರ ಪ್ರೀತಿಪೂರ್ವಕವಾಗಿ ಮಹಾದೇವನನ್ನು ಕುರಿತು ಹೀಗೆ ಕೇಳಿದಳು. ||೫೩೨||

ಶಿವ ಮುಕ್ತ್ಯೈವ ಜಾತೇಯಂ ದೇಯೋಽನ್ಯಾ ಮುಕ್ತಿರಸ್ತಿ ಕಾ ।
ಕೌತುಕಂ ಕ್ರಿಯತೇ ಶಂಭೋ ಕಿಮೇತದ್ವದ ಸಾದರಂ ॥೫೩॥

॥ ಶ್ರೀ ಸದಾಶಿವ ಉವಾಚ ॥

ಸಾಮೀಪ್ಯರೂಪಾ ಯಾ ಮುಕ್ತಿಸ್ತಾಮಾಪೇಯಂ ವರಾನನೇ ।
ಇಯಂ ನ ಪರಮಾಂ ಮುಕ್ತಿಂ ಪ್ರಾಪಾಗ್ರೇ ಸಾ ಭವಿಷ್ಯತಿ ॥೫೪॥

ಶಿವೇತಿ ಶಿವಮುನ್ನಾಮ ಸಮುಗುಚ್ಚಾರ್ಯ ಯಸ್ತನುಂ ।
ತ್ಯಜೇತ್ಸ ಮನ್ಮಯೋ ಭೂತ್ವಾ ಮಯಿ ಸಂವಿಶತಿ ಧ್ರುವಂ ॥೫೫॥

ಶಿವೇತಿ ಸರ್ವವೇದಾಂತ್ಯೈಃ ಸಂಸ್ತುತಂ ನಾಮ ಯನ್ಮಮ ।
ತದ್ದದಾತಿ ಪರಾಂ ಮುಕ್ತಿಮಂತಕಾಲೇ ಸ್ಮೃತಂ ಶಿವೇ ॥೫೬॥

---

ಪರಶಿವನೇ: ಇವಳು ಮುಕ್ತಳೇ ಆಗಿದ್ದಾಳೆ. ಇವಳಿಗೆ ಕೊಡಬೇಕೆಂದಿರುವ ಮುಕ್ತಿಯು ಬೇರೆ ಯಾವುದಿರುವುದು? ಶಂಭುವೇ, ನನಗೆ ಈ ವಿಷಯದಲ್ಲಿ ತುಂಬಾ ಕುತೂಹಲವುಂಟಾಗಿರುವುದು. ಆದ್ದರಿಂದ ನನ್ನಲ್ಲಿ ದಯೆಯಿಟ್ಟು ಆದರದಿಂದ ಆ ವಿಷಯುವನ್ನು ತಿಳಿಸಬೇಕೆಂದು ಪುನಃ ಪಾರ್ವತಿಯು ಮಹಾದೇವನನ್ನು ಬೇಡಿದಳು. ॥೫೩॥

ಎಲೌ ಸುಂದರಮುಖಿಯೇ, ಇವಳು ಸಾಮೀಪ್ಯಪ್ರಾಪ್ತಿರೂಪವಾದ (ಅಂದರೆ ನನ್ನ ಸಂನಿಧಾನವನ್ನು ಪಡೆಯುವುದೆಂಬ) ಮುಕ್ತಿಯನ್ನು ಮಾತ್ರ ಈಗ ಪಡೆದಿರುವಳು. ಈಗ ಇವಳು ಹೊಂದಿರುವುದು ಅತ್ಯುತ್ತಮವಾದ ಮೋಕ್ಷವಲ್ಲ. ಪರಮ ಶ್ರೇಷ್ಠವಾದ ಸಾರೂಪ್ಯ ಮೋಕ್ಷವು ಇವಳಿಗೆ ಮುಂದೆ ಉಂಟಾಗುವುದು. 'ಶಿವ' ಎಂಬ ಮಂಗಳಯುಕ್ತವಾದ ನನ್ನ ನಾಮವನ್ನು ಚೆನ್ನಾಗಿ ಉಚ್ಚರಿಸಿ ಪ್ರಾಣತ್ಯಾಗ ಮಾಡುವವನು ನನ್ನ ಸ್ವರೂಪವನ್ನೇ ಹೊಂದಿ ನನ್ನಲ್ಲಿ ಐಕ್ಯವಾಗುತ್ತಾನೆ. ಇದು ಸತ್ಯವು. ॥೫೪-೫೫॥

ಶಿವೆ, ಸಕಲ ವೇದಾಂತಗಳಲ್ಲಿಯೂ ಸ್ತೋತ್ರಮಾಡಲ್ಪಟ್ಟಿರುವ 'ಶಿವ' ಎಂಬ ನನ್ನ ದಿವ್ಯನಾಮವನ್ನು ಮರಣಕಾಲದಲ್ಲಿ ಸ್ಮರಣೆಮಾಡಿದರೆ ಅದು ಪರಮ

|| ವಿಷ್ಣುರುವಾಚ ||

ಇತಿ ತದ್ವಚನಂ ಶ್ರುತ್ವಾ ಭವಾನೀ ಶಿವವಲ್ಲಭಾ ।
ಸಂತುಷ್ಟಾ ಪ್ರೀತಿಮಾಪನ್ನಾ ಜಾತಾ ವಿಚ್ಛಿನ್ನಸಂಶಯಾ ||೫೩೭||

ವೈದರ್ಭ್ಯಪಿ ಸುಖಂ ಪ್ರಾಪ ಸಂಸ್ಥಿತಾ ಶಿವಯಾ ಸಹ ।
ಶಿವಪೂಜಾಪ್ರಭಾವೇನ ಕ್ರೀಡಾಮಪಿ ಚಕಾರ ಸಾ ||೫೩೮||

ತತಃ ಸಾ ಪರಮಾಂ ಮುಕ್ತಿಂ ಸಂಪ್ರಾಪ ಚ ಶಿವಾಜ್ಞಯಾ ।
ಶಿವರೂಪೈವ ಸಾ ಜಾತಾ ಶಿವಪೂಜಾಪ್ರಭಾವತಃ ||೫೩೯||

ಇಮಂ ವೃತ್ತಾಂತಮಖಿಲಂ ನಂದಿಕೇಶೇನ ಸಾದರಂ ।
ಮಹ್ಯಮುಕ್ತಂ ಪುರಾ ಬ್ರಹ್ಮನ್ ತತ್ತುಭ್ಯಂ ಚ ನಿವೇದಿತಂ ||೫೪೦||

ಅತಃ ಶಿವೇತಿ ಮಂತ್ರೋಽಯಂ ಸರ್ವಮಂತ್ರೋತ್ತಮೋ ಮತಃ ।
ತೇನ ಮಂತ್ರೇಣ ಸತತಂ ಪೂಜನೀಯಃ ಸದಾಶಿವಃ ||೫೪೧||

---

ಶ್ರೇಷ್ಠವಾದ ಮೋಕ್ಷವನ್ನು ಕೊಡುವುದು ಎಂದು ಸದಾಶಿವನು ಗಿರಿಜೆಗೆ ತಿಳಿಸಿದನು. ||೫೩೬||

ಆ ಮಾತುಗಳನ್ನು ಕೇಳಿ ಶಿವನ ಪ್ರೇಯಸಿಯಾದ ಭವಾನೀದೇವಿಯು ಸಂತೋಷಭರಿತಳಾಗಿ ಪ್ರೀತಿಯನ್ನು ಹೊಂದಿ ತನಗುಂಟಾಗಿದ್ದ ಸಂದೇಹವನ್ನು ಕಳೆದುಕೊಂಡಳು. ಆ ವಿದರ್ಭರಾಜಕುಮಾರಿಯೂ ಸಹ ಜಗದಂಬಿಕೆಯೊಡನೆ ವಿಹರಿಸುತ್ತಾ ನಾನಾಸುಖಗಳನ್ನು ಪಡೆದಳು. ಆ ವೈದರ್ಭಿಯು ಶಿವಪೂಜಾ ಮಹಿಮೆಯಿಂದ ದೇವಿಯೊಡನೆ ಸಖಿಯಂತೆ ಆಟವಾಡಿದಳು. ||೫೩೭-೫೩೮||

ಅನಂತರ ಆ ವೈದರ್ಭಿಯು ಉತ್ತಮವಾದ ಮೋಕ್ಷವನ್ನು ಶಿವನ ಅಪ್ಪಣೆ ಯಿಂದ ಪಡೆದು ಆ ಶಿವಪೂಜಾಮಹಿಮೆಯಿಂದ ಶಿವಸ್ವರೂಪಳೇ ಆದಳು. (ಅಂದರೆ ಸಾರೂಪ್ಯರೂಪವಾದ ಮೋಕ್ಷವನ್ನು ಪಡೆದಳೆಂದು ಭಾವವು) ಅಯ್ಯ ಬ್ರಹ್ಮನೇ, ಈ ವೃತ್ತಾಂತವನ್ನೆಲ್ಲಾ ನಾನು ಹಿಂದೆ ನಂದಿಕೇಶ್ವರನಿಂದ ತಿಳಿದೆನು. ಈಗ ಅದೇ ವೃತ್ತಾಂತವನ್ನು ನಿನಗೆ ಉಪದೇಶಮಾಡಿರುವೆನು. ಅಯ್ಯ ಚತುರ್ಮುಖನೆ, ಒಟ್ಟಿನಲ್ಲಿ 'ಶಿವ' ಎಂಬ ಮಂತ್ರವೇ ಸಕಲ ಮಂತ್ರಗಳಲ್ಲಿಯೂ ಅತ್ಯುತ್ತಮ

ಮಯಾನೇನೈವ ಮಂತ್ರೇಣ ಪೂಜ್ಯತೇ ಗಿರಿಜಾಪತಿಃ ।
ಏತನ್ಮಂತ್ರಸಮೋ ಮಂತ್ರೋ ನ ವೇದೇಷ್ವಖಿಲೇಷ್ವಪಿ ॥೫೪೨॥

ಸದಾಶಿವೋ ವೇದವೇದ್ಯಃ ಸರ್ವದೇವೋತ್ತಮೋ ಯಥಾ ।
ತಥೈವ ಸರ್ವಮಂತ್ರೇಭ್ಯಃ ಶಿವೇತಿಮನುರುತ್ತಮಃ ॥೫೪೩॥

ವಿಧೇ ಶಿವೇತಿ ಮಂತ್ರೇಣ ಶಿವಲಿಂಗೇ ಸಮರ್ಚಿತೇ ।
ದುಃಖಾನಿ ನಿಲಯಂ ಯಾಂತಿ ಸದ್ಯ ಏವ ನ ಸಂಶಯಃ ॥೫೪೪॥

ಹೇಮಾದ್ರಿಶಿಖರೇ ಸಂತಿ ಶಿವಲಿಂಗಾನಿ ಭೂರಿಶಃ ।
ಗತ್ವಾ ತತ್ರೇಂದ್ರಸಂಯುಕ್ತಃ ಪೂಜಯಸ್ವ ವಿಧೇ ಸ್ವಯಂ ॥೫೪೫॥

॥ ಅಗಸ್ತ್ಯ ಉವಾಚ ॥

ಇತ್ಯುಕ್ತೋ ವಿಷ್ಣುನಾ ಬ್ರಹ್ಮಾ ಸದೇವೇಂದ್ರಃ ಪ್ರಣಮ್ಯ ತಂ ।
ಜಗಾಮ ಮೇರುಶೃಂಗಾಗ್ರಂ ಶಿವಲಿಂಗಾರ್ಚನೇಚ್ಛಯಾ ।೫೪೬॥

ವಾಗಿದೆ. ಆ ಶಿವಮಂತ್ರದಿಂದಲೇ ಅನವರತವೂ ಸದಾಶಿವನನ್ನು ಪೂಜೆಮಾಡಬೇಕು. ||೫೩೯-೫೪೦-೫೪೧||

ನಾನೂ ಆ ಗಿರಿಜಾರಮಣನನ್ನು ಈ 'ಶಿವ' ಎಂಬ ನಾಮಮಂತ್ರದಿಂದಲೇ ಪೂಜೆಮಾಡುತ್ತಿರುವೆನು. ಈ 'ಶಿವ' ಮಂತ್ರಕ್ಕೆ ಸಮಾನವಾದ ಮಂತ್ರವು ಸಕಲ ವೇದಗಳಲ್ಲಿಯೂ ದೊರೆಯಲಾರದು. ವೇದಗೋಚರನಾದ ಆ ಸದಾಶಿವನು ಸಕಲ ದೇವತೆಗಳಲ್ಲಿಯೂ ಉತ್ತಮನಾಗಿರುವಂತೆ ಎಲ್ಲಾ ಮಂತ್ರಗಳಲ್ಲಿಯೂ ಆ 'ಶಿವ' ಎಂಬ ಮಂತ್ರವು ಶ್ರೇಷ್ಠವೆನಿಸಿಕೊಂಡಿದೆ. ||೫೪೨-೫೪೩||

ಬ್ರಹ್ಮನೇ, 'ಶಿವ' ಎಂಬ ಮಂತ್ರದಿಂದ ಶಿವಲಿಂಗವನ್ನು ಪೂಜೆಮಾಡಿದರೆ ಸಕಲ ದುಃಖಗಳೂ ಕೂಡಲೇ ನಾಶವಾಗುವುದರಲ್ಲಿ ಸಂದೇಹವೇ ಇಲ್ಲ. ವಿಧಿಯೇ, ಸುವರ್ಣಪರ್ವತವಾದ ಮೇರುವಿನ ಶಿಖರದಲ್ಲಿ ಅನೇಕ ಶಿವಲಿಂಗಗಳಿರುವುವು. ನೀನು ಇಂದ್ರನೊಡನೆ ಅಲ್ಲಿಗೆ ಹೋಗಿ ಆ ಶಿವಲಿಂಗಗಳನ್ನು ಪೂಜೆಮಾಡುವನಾಗೆಂದು ವಿಷ್ಣುವು ಬ್ರಹ್ಮನಿಗೆ ತಿಳಿಸಿದನು ||೫೪೪-೫೪೫||

ಹೀಗೆ ವಿಷ್ಣುವಿನ ಮಾತುಗಳನ್ನು ಕೇಳಿ ಬ್ರಹ್ಮನು ಇಂದ್ರನೊಡನೆ ವಿಷ್ಣುವಿಗೆ ಪ್ರಣಾಮಮಾಡಿ, ಶಿವಲಿಂಗವನ್ನು ಪೂಜೆಮಾಡಬೇಕೆಂಬ ಇಚ್ಛೆಯಿಂದ

ಹೇಮಾದ್ರಿಶೃಂಗೇ ಸರ್ವತ್ರ ಸ ಚಚಾರ ವಿಧಿಸ್ತತಃ ।
ಅದೃಷ್ಟ್ವಾ ಶಿವಲಿಂಗಾನಿ ಪುನಃ ಸಂಪ್ರಾಪ ಕೇಶವಂ ॥೫೪೭॥

ತಮಾಗತಂ ವಿಧಿಂ ಪ್ರಾಹ ಕಿಮಾಸೀದಿತಿ ಕೇಶವಃ ।
ಶಿವಲಿಂಗಾನ್ಯದೃಷ್ಟಾನಿ ಮಯೇತ್ಯಾಹ ತತೋ ವಿಧಿಃ ॥೫೪೮॥

ಇತಿ ತದ್ವಚನಂ ಶ್ರುತ್ವಾ ವಿಷ್ಣುರ್ವಿಸ್ಮಿತಮಾನಸಃ ।
ಉವಾಚ ವಚನಂ ವಿಪ್ರಾ ವಿಧಿಂ ವಿಸ್ಮಾಪಯಂಸ್ತದಾ ॥೫೪೯॥

ವಿಷ್ಣುರುವಾಚ

ಹೇಮಾದ್ರಿಶಿವಲಿಂಗಾನಿ ದೃಶ್ಯಂತೇ ಖಲು ಶಾಂಭವೈಃ ।
ತಲ್ಲಿಂಗದರ್ಶನಂ ಯೇಷಾಂ ಶಾಂಭವಾಸ್ತೇ ನ ಸಂಶಯಃ ॥೫೫೦॥

ಕಥಂ ಮಲಿನಚಿತ್ತಾನಾಂ ಶಿವಲಿಂಗಸ್ಯ ದರ್ಶನಂ ।
ಯತೋ ವಿಶುದ್ಧಚಿತ್ತಾನಾಂ ಜಾಯತೇ ಲಿಂಗದರ್ಶನಂ ॥೫೫೧॥

ಮೇರುಪರ್ವತದ ಶಿಖರಕ್ಕೆ ಹೋದನು. ಅಲ್ಲಿ ಬ್ರಹ್ಮನು ಆ ಶಿಖರದಲ್ಲೆಲ್ಲಾ ಸಂಚರಿಸಿ ಶಿವಲಿಂಗವನ್ನು ಕಾಣದೇ ಪುನಃ ಕೇಶವನ ಬಳಿಗೆ ಬಂದನು. ||೫೪೬-೫೪೭||

ವಿಪ್ರರೇ, ಈರೀತಿ ತನ್ನ ಬಳಿಗೆ ಬಂದ ಬ್ರಹ್ಮನನ್ನು ನೋಡಿ ವಿಷ್ಣುವು ನಡೆದ ವೃತ್ತಾಂತವೇನೆಂದು ಕೇಳಲು, ಆಗ ವಿಧಿಯು ನನಗೆ ಅಲ್ಲಿ ಶಿವಲಿಂಗಗಳು ಗೋಚರವಾಗಲಿಲ್ಲವೆಂದು ನುಡಿದನು. ವಿಷ್ಣುವು ಆ ಮಾತುಗಳನ್ನು ಕೇಳಿ ತುಂಬಾ ಆಶ್ಚರ್ಯಗೊಂಡು, ಬ್ರಹ್ಮನಿಗೂ ಆಶ್ಚರ್ಯವನ್ನುಂಟುಮಾಡುತ್ತಾ ಇಂತೆಂದನು. ||೫೪೮-೫೪೯||

ಅಯ್ಯಾ ಬ್ರಹ್ಮನೇ, ಮೇರುಪರ್ವತದ ಶಿವಲಿಂಗಗಳು ಶಂಭುವಿನ ಭಕ್ತರಿಗೆ ಮಾತ್ರ ಗೋಚರವಾಗುತ್ತವೆ. ಆ ಲಿಂಗವನ್ನು ಗೋಚರಮಾಡಿಕೊಳ್ಳುವವರು ಶಿವನ ಭಕ್ತರೇ ಆಗುವುದರಲ್ಲಿ ಸಂಶಯವೇ ಇಲ್ಲ. ಪರಿಶುದ್ಧವಾದ ಮನಸ್ಸುಳ್ಳವರಿಗೆ ಗೋಚರವಾಗುವ ಆ ಶಿವಲಿಂಗಗಳು ಕಲ್ಮಷಾಂತರಂಗವುಳ್ಳವರಿಗೆ ಹೇಗೆ ತಾನೇ ಪ್ರತ್ಯಕ್ಷವಾದಾವು? ||೫೫೦-೫೫೧||

ಸರ್ವದಾ ಶಿವಭಕ್ತಾನಾಂ ಶಿವಸಂಸಕ್ತಚೇತಸಾಂ ।
ಜಾಯತೇ ನೋಕ್ಷದಂ ಶ್ರೌತಂ ಶಿವಲಿಂಗಸ್ಯ ದರ್ಶನಂ ॥೫೫೨॥

ಪ್ರಾಯಶೋ ನಾಸ್ತಿ ವಿಶ್ವಾಸಸ್ತವ ವೇದೇಷ್ವತಸ್ತ್ವಯಾ ।
ಹೇಮಾದ್ರೌ ಶಿವಲಿಂಗಾನಿ ನ ದೃಷ್ಟಾನಿ ಸ್ಥಿತಾನ್ಯಪಿ ॥೫೫೩॥

ಅತೋಽಧುನಾ ಸಹೇಂದ್ರೇಣ ಕೃತ್ವೋದ್ಧೂಳನಮಾದರಾತ್ ।
ರುದ್ರಾಕ್ಷಧಾರಣಂ ಕೃತ್ವಾ ಜಪ ಶೈವಂ ಷಡಕ್ಷರಂ ॥೫೫೪॥

ಚತುರ್ವಿಂಶತಿಲಕ್ಷಂ ಚೇಜ್ಜಾಯತೇ ಶಾಂಭವೋ ಮನುಃ ।
ತದಾ ವೇದೇಷು ವಿಶ್ವಾಸಸ್ತವ ಬ್ರಹ್ಮನ್ಭವಿಷ್ಯತಿ ॥೫೫೫॥

ಜಪೋಽಪ್ಯಯಂ ಚ ವಿಧಿವತ್ಕರ್ತವ್ಯೋ ಭಕ್ತಿಪೂರ್ವಕಂ ।
ಅನ್ಯಥಾ ತವ ವಿಶ್ವಾಸೋ ವೇದೇಷು ನ ಭವಿಷ್ಯತಿ ॥೫೫೬॥

ಜಾತೇ ವೇದೇಷು ವಿಶ್ವಾಸೇ ವಿಶ್ವಾಸಸ್ತೇ ಶಿವೇ ಭವೇತ್ ।
ಶಿವೇ ಜಾತೇ ಚ ವಿಶ್ವಾಸೇ ದುಃಖನಾಶೋ ಭವಿಷ್ಯತಿ ॥೫೫೭॥

ಶಿವಭಕ್ತರೆನಿಸಿ ಯಾವಾಗಲೂ ಆ ಶಿವನಲ್ಲಿಯೇ ನೆಲಸಿದ ಮನವುಳ್ಳವರಿಗೆ ಮಾತ್ರ ಶ್ರುತಿಪ್ರಸಿದ್ಧವಾದ ಆ ಶಿವಲಿಂಗದ ದರ್ಶನವುಂಟಾಗುತ್ತದೆ. ಓ ಬ್ರಹ್ಮನೇ, ಸಾಮಾನ್ಯವಾಗಿ ನೋಡಿದರೆ ನಿನಗೆ ವೇದಗಳಲ್ಲಿ ನಂಬಿಕೆಯಿಲ್ಲವೆಂದು ತೋರುತ್ತದೆ. ಆದ್ದರಿಂದಲೇ ಮೇರುಪರ್ವತದಲ್ಲಿ ಶಿವಲಿಂಗಗಳಿದ್ದರೂ ನಿನಗೆ ಕಾಣಿಸಲಿಲ್ಲ.

ಬ್ರಹ್ಮನೇ, ಆದ್ದರಿಂದ ಈಗ ನೀನು ಇಂದ್ರನೊಡನೆ ಆದರದಿಂದ ಭಸ್ಮಲೇಪನ ಮತ್ತು ರುದ್ರಾಕ್ಷಧಾರಣೆಗಳನ್ನು ಮಾಡಿಕೊಂಡು ಶಿವನ ಸಂಬಂಧಿಯಾದ 'ಓಂ ನಮಃ ಶಿವಾಯ' ಎಂಬ ಷಡಕ್ಷರ ಮಂತ್ರವನ್ನು ಜಪಮಾಡು ಆ ಷಡಕ್ಷರ ಜಪವು ಇಪ್ಪತ್ತನಾಲ್ಕುಲಕ್ಷಬಾರಿಯಾದಮೇಲೆ ನಿನಗೆ ವೇದಗಳಲ್ಲಿ ವಿಶ್ವಾಸ ವುಂಟಾಗುತ್ತದೆ. ॥೫೫೪-೫೫೫॥

ಈ ಜಪವನ್ನೂ ವಿಧಿಪೂರ್ವಕವಾಗಿ ಮಾಡಬೇಕು. ಇಲ್ಲದಿದ್ದರೆ ನಿನಗೆ ವೇದಗಳಲ್ಲಿ ವಿಶ್ವಾಸವುಂಟಾಗುವುದಿಲ್ಲ. ವೇದಗಳಲ್ಲಿ ವಿಶ್ವಾಸವುಂಟಾದಮೇಲೆ,

ಶಿವೇ ಯೇಷಾಂ ನ ವಿಶ್ವಾಸಸ್ತೇ ಸರ್ವೇ ದುಃಖಿತಾಃ ಸದಾ ।
ಶಿವವಿಶ್ವಾಸಹೀನಾನಾಂ ತದ್ದುಃಖಂ ನ ವಿನಶ್ಯತಿ ॥೫೫೮॥

ನ ಭವಿಷ್ಯತಿ ವಿಶ್ವಾಸಃ ಸಹಸಾ ಶಂಕರೇ ವಿಧೇ ।
ವಿಶ್ವಾಸಃ ಶಂಕರೇ ಯಸ್ಯ ಸ ಧನ್ಯ ಇತಿ ಗೀಯತೇ ॥೫೫೯॥

ಸಂತನ್ಯಮಾನೋ ವಿಶ್ವಾಸಃ ಶಂಕರೇ ಯದಿ ಜಾಯತೇ ।
ತದಾ ದುಃಖಾನಿ ನಶ್ಯಂತಿ ಸರ್ವಾಣ್ಯಪಿ ನ ಸಂಶಯಃ ॥೫೬೦॥

ತಾವದ್ದುಃಖಾನಿ ಯಾವನ್ನ ವಿಶ್ವಾಸಃ ಪಾರ್ವತೀಶ್ವರೇ ।
ಅತೋ ಜಪ ಮನುಂ ಶೈವಂ ಶಿವವಿಶ್ವಾಸಕಾರಣಂ ॥೫೬೧॥

ಕುರು ಶೈವಸ್ಯ ಮಂತ್ರಸ್ಯ ವಿಧಿವಜ್ಜಪಮಾದರಾತ್ ।
ಜಪೇಽಪಿ ಕುರು ವಿಶ್ವಾಸಂ ಶುಚಿಃ ಶೈವಮನೌ ವಿಧೇ ॥೫೬೨॥

---

ಶಿವನಲ್ಲಿ ನಂಬಿಕೆ ಹುಟ್ಟುವುದು. ಆ ಶಿವನಲ್ಲಿ ವಿಶ್ವಾಸವುಂಟಾದ ಮೇಲೆ ನಿನಗೆ ದುಃಖನಿವೃತ್ತಿಯಾಗುವುದು. ಪರಶಿವನಲ್ಲಿ ವಿಶ್ವಾಸವಿಡದವರೆಲ್ಲಾ ದುಃಖವನ್ನು ಯಾವಾಗಲೂ ಹೊಂದುತ್ತಲೇ ಇರುವರು. ಅಂತಹವರಿಗೆ ಆ ದುಃಖವು ಎಂದಿಗೂ ನಾಶವಾಗಲಾರದು. ||೫೫೬-೫೫೭-೫೫೮||

ಬ್ರಹ್ಮನೇ, ಜಾಗ್ರತೆಯಾಗಿ ಯಾರಿಗೂ ಶಂಕರನಲ್ಲಿ ವಿಶ್ವಾಸವುಂಟಾಗುವುದಿಲ್ಲ. ಆ ಶಂಕರನಲ್ಲಿ ವಿಶ್ವಾಸವುಳ್ಳವನೇ ಧನ್ಯನೆಂದು ಹೇಳಿಸಿಕೊಳ್ಳುತ್ತಾನೆ. ವಿಶೇಷವಾಗಿ ದಿನದಿನಕ್ಕೂ ಅಭಿವೃದ್ಧಿಯಾಗುವ ವಿಶ್ವಾಸವು ಆ ಶಂಕರನಲ್ಲಿ ಉಂಟಾದರೆ ಆಗ ಎಲ್ಲಾ ದುಃಖಗಳೂ ಸಂದೇಹವೇ ಇಲ್ಲದೇ ನಾಶವಾಗುವುವು. ಆ ಪಾರ್ವತೀ ರಮಣನಲ್ಲಿ ವಿಶ್ವಾಸವುಂಟಾಗುವ ವರೆಗೆ ಮಾತ್ರ ದುಃಖಗಳೆಲ್ಲವೂ ಮೇಲ್ಮೇಲೆ ಬರುವುವು. ಆ ಪರಶಿವನ ವಿಶ್ವಾಸಕ್ಕೆ ಕಾರಣಭೂತವಾದ ಶಿವಮಂತ್ರವನ್ನು ಮೊದಲು ಜಪಮಾಡು. ||೫೫೯-೫೬೦-೫೬೧||

ವಿಧಿಪೂರ್ವಕವಾಗಿ ಆ ಶಿವಮಂತ್ರವನ್ನು ಆದರದಿಂದ ಜಪಮಾಡುವನಾಗು. ಬ್ರಹ್ಮನೇ, ಆ ಶಿವಮಂತ್ರವನ್ನು ಜಪಮಾಡುವಾಗಲೂ ಶುಚಿಯಾಗಿ ವಿಶ್ವಾಸವ ನ್ನಿಟ್ಟು ಜಪಿಸು. ನಂಬಿಕೆಯಿಲ್ಲದೇ ಎಲ್ಲಿಯೂ ಕೆಲಸಗಳು ಸಿದ್ಧಿಹೊಂದಲಾರ

ವಿಶ್ವಾಸೇನ ವಿನಾ ಕ್ವಾಪಿ ನ ಕಾರ್ಯಂ ಸಿದ್ಧಿಮೇಷ್ಯತಿ ।
ಅತೋ ಜಪ ಮನುಂ ಶೈವಂ ಸೇಂದ್ರೋ ವಿಶ್ವಾಸಪೂರ್ವಕಂ॥೫೬೩॥

॥ ಅಗಸ್ತ್ಯ ಉವಾಚ ॥

ಇತಿ ತದ್ವಚನಂ ಶ್ರುತ್ವಾ ವಿಶ್ವಸ್ಯ ವಚನಂ ದ್ವಿಜಾಃ ।
ಜಜಾಪ ವಿಧಿವದ್ಬ್ರಹ್ಮಾ ಸೇಂದ್ರಃ ಶೈವಂ ಷಡಕ್ಷರಂ ॥೫೬೪॥

ಚತುರ್ವಿಂಶತಿಲಕ್ಷಾಣಾಂ ಜಾತೇ ಶೈವಮನೋರ್ಜಪೇ ।
ಸರ್ವೇಷ್ವಪಿ ಚ ವೇದೇಷು ವಿಶ್ವಾಸೋಽಭೂತ್ತಯೋರ್ದೃಢಃ॥೫೬೫॥

ತತಃ ಪರಂ ಮಹೇಶೇಽಪಿ ವಿಶ್ವಾಸೋಽಭೂತ್ತಯೋರ್ದೃಢಃ ।
ಪ್ರಾಯಶ್ಚಿತ್ತವಿಶುದ್ಧಂ ತಂ ಪ್ರಾಹ ವಿಷ್ಣುಂ ವಿಧಿಸ್ತತಃ ॥೫೬೬॥

॥ ವಿಷ್ಣುರುವಾಚ ॥

ಅತಃ ಪರಂ ವಿಧೇ ಗಚ್ಛ ಹೇಮಾದ್ರಿಶಿಖರಂ ಪ್ರತಿ ।
ತತ್ರ ಶಂಕರಲಿಂಗಾನಿ ಪೂಜಯುಸ್ವ ಯಥಾವಿಧಿ ॥೫೬೭॥

ವಾದ್ದರಿಂದ ವಿಶ್ವಾಸಪೂರ್ವಕವಾಗಿ ಇಂದ್ರನೊಡನೆ ನೀನು ಆ ಶಿವಷಡಕ್ಷರ ಮಂತ್ರವನ್ನು ಜಪಮಾಡು ಎಂಬುದಾಗಿ ವಿಷ್ಣುವು ಬ್ರಹ್ಮನಿಗೆ ಹೇಳಿದನು. ||೫೬೨-೫೬೩||

ಬ್ರಾಹ್ಮಣರೇ, ವಿಷ್ಣುವಿನ ಮಾತುಗಳನ್ನು ಕೇಳಿ ಬ್ರಹ್ಮನು ವಿಶ್ವಾಸ ವಿಟ್ಟು ಇಂದ್ರನೊಡನೆ ವಿಧಿಪೂರ್ವಕವಾಗಿ ಶಿವಷಡಕ್ಷರ ಮಂತ್ರವನ್ನು ಜಪಮಾಡಿದನು. ಈ ಶಿವಮಂತ್ರಜಪವು ಇಪ್ಪತ್ತುನಾಲ್ಕುಲಕ್ಷಬಾರಿಯಾದಮೇಲೆ ಬ್ರಹ್ಮ ಮತ್ತು ಇಂದ್ರರಿಬ್ಬರಿಗೂ ಎಲ್ಲಾ ವೇದಗಳಲ್ಲಿಯೂ ದೃಢವಾದ ನಂಬಿಕೆ ಹುಟ್ಟಿತು. ಆಮೇಲೆ ಮಹೇಶ್ವರನಲ್ಲಿಯೂ ಅವರು ದೃಢವಾದ ವಿಶ್ವಾಸವನ್ನಿಟ್ಟರು. ಈರೀತಿ ಪ್ರಾಯಶ್ಚಿತ್ತಾಚರಣೆಯಿಂದ ಶುದ್ಧನಾಗಿರುವ ಬ್ರಹ್ಮನನ್ನು ಕುರಿತು ವಿಷ್ಣುವು ಇಂತೆಂದನು ಎಂಬುದಾಗಿ ಅಗಸ್ತ್ಯರು ಮುನಿಗಳಿಗೆ ಹೇಳಿದರು.||೫೬೪-೫೬೫-೫೬೬||

ಅಯ್ಯ ಬ್ರಹ್ಮನೇ, ಇನ್ನು ಮುಂದೆ ನೀನು ಮೇರುಪರ್ವತದ ಶಿಖರಕ್ಕೆ ಹೋಗಿ ಅಲ್ಲಿ ವಿಧಿಪೂರ್ವಕವಾಗಿ ಶಿವಲಿಂಗಗಳನ್ನು ಪೂಜೆಮಾಡುಹೋಗು, ಎಂಬುದಾಗಿ ಮತ್ತೆ ವಿಷ್ಣುವು ಬ್ರಹ್ಮನಿಗೆ ಹೇಳಿದನು. ||೫೬೭||

॥ ಅಗಸ್ತ್ಯ ಉವಾಚ ॥

ಇತಿ ತದ್ವಚನಂ ಶ್ರುತ್ವಾ ವಿಷ್ಣುಂ ನತ್ವಾ ಕೃತಾಂಜಲಿಃ ।
ಬಭಾಷೇ ವಿನಯಾದ್ಬ್ರಹ್ಮಾ ಕೃತಾಂಜಲಿಪುಟೋ ದ್ವಿಜಾಃ ॥೫೬೮॥

॥ ಬ್ರಹ್ಮೋವಾಚ ॥

ಶಿವಲಿಂಗಂ ತ್ವಯಾ ವಿಷ್ಣೋ ಕಥಂ ಸಂಪೂಜ್ಯತೇಽನ್ವಹಂ ।
ಸಂಸ್ಥಾಪ್ಯತೇ ತ್ವಯಾ ಕುತ್ರ ಶಿವಲಿಂಗಂ ಸಮರ್ಚಿತಂ ॥೫೬೯॥

॥ ವಿಷ್ಣುರುವಾಚ ॥

ವಿಧೇ ಮನ್ಯೈವ ಹೃತ್ಪದ್ಮೇ ಶಿವಲಿಂಗಂ ಶಿವಾತ್ಮಕಂ ।
ತಿಷ್ಠತ್ಯೇಕಂ ಮಯಾ ತಸ್ಯ ಕ್ರಿಯತೇ ಪೂಜನಂ ಸದಾ ॥೫೭೦॥

ಮಯಾ ನ ಸ್ಥಾಪ್ಯತೇಽನ್ಯತ್ರ ಶಿವಲಿಂಗಂ ಸಮರ್ಚಿತಂ ।
ಪ್ರತಿಕ್ಷಣಂ ಮಯಾ ತಸ್ಯ ಪೂಜನಂ ಕ್ರಿಯತೇ ವಿಧೇ ॥೫೭೧॥

ವಿಷ್ಣುವಿನ ಉಪದೇಶಪಡೆದು ಬ್ರಹ್ಮನು ಕೈಜೋಡಿಸಿ ವಿಷ್ಣುವಿಗೆ ನಮಸ್ಕಾರ ಮಾಡಿ ಕೈಮುಗಿದುಕೊಂಡು ವಿನಯದಿಂದ ವಿಷ್ಣುವಿನೊಡನೆ ಹೀಗೆಂದನು. ॥೫೬೮॥

ವಿಷ್ಣುದೇವನೇ, ನೀನು ಪ್ರತಿದಿನವೂ ಶಿವಲಿಂಗವನ್ನು ಹೇಗೆ ಪೂಜೆಮಾಡುತ್ತಿರುವೆ? ಹಾಗೆ ಪೂಜಿಸಿದ ಶಿವಲಿಂಗವನ್ನು ಮತ್ತು ಎಲ್ಲಿರಿಸುತ್ತಿರುವೆ? ತಿಳಿಸಬೇಕೆಂದು ಬ್ರಹ್ಮನು ವಿಷ್ಣುವನ್ನು ಪ್ರಾರ್ಥಿಸಿದನು ॥೫೬೯॥

ಬ್ರಹ್ಮನೇ, ನನ್ನ ಹೃದಯಕಮಲದಲ್ಲಿ ಶಿವಸ್ವರೂಪವೇ ಆಗಿರುವ ಒಂದು ಶಿವಲಿಂಗವಿರುವುದು. ನಾನು ಅದನ್ನೇ ಯಾವಾಗಲೂ ಪೂಜೆಮಾಡುತ್ತಿರುವೆನು. ನಾನು ಪೂಜೆಮಾಡಿದ ಶಿವಲಿಂಗವನ್ನು ಬೇರೆಲ್ಲಿಯೂ ನಾನಿಡುವುದೇ ಇಲ್ಲ. ಪ್ರತಿಕ್ಷಣದಲ್ಲಿಯೂ ನಾನು ಪೂಜೆಮಾಡುತ್ತಲೇ ಇರುತ್ತೇನೆಂದು ವಿಷ್ಣುವು ಬ್ರಹ್ಮನಿಗೆ ತಿಳಿಸಿದನು. ॥೫೭೦-೫೭೧॥

॥ ಅಗಸ್ತ್ಯ ಉವಾಚ ॥

ಇತಿ ತದ್ವಚನಂ ಶ್ರುತ್ವಾ ವಿಧಿರ್ವಿಸ್ಮಿತಮಾನಸಃ ।
ವಿಷ್ಣೋ ದರ್ಶಯ ತಲ್ಲಿಂಗಮಿತಿ ಪ್ರಾಹ ದ್ವಿಜೋತ್ತಮಾಃ ॥೫೭೨॥

॥ ವಿಷ್ಣುರುವಾಚ ॥

ದಿವ್ಯಂ ಚಕ್ಷುರ್ದದಾಮ್ಯದ್ಯ ತುಭ್ಯಮಿಂದ್ರಾಯ ಚಾಧುನಾ ।
ಮದ್ಧೃತ್ಕಮಲಮಧ್ಯಸ್ಥಂ ಶಿವಲಿಂಗಂ ವಿಲೋಕಯ ॥೫೭೩॥

ಹೃತ್ಪದ್ಮಸಂನಿವಿಷ್ಟಂ ಯಚ್ಛಿವಲಿಂಗಂ ಶಿವಾತ್ಮಕಂ ।
ದ್ರಷ್ಟುಂ ನ ಶಕ್ಯತೇ ತತ್ತು ಸರ್ವಥಾ ಚರ್ಮಚಕ್ಷುಷಾ ॥೫೭೪॥

॥ ಅಗಸ್ತ್ಯ ಉವಾಚ ॥

ಇತ್ಯುಕ್ತ್ವಾ ಸ ದದೌ ವಿಷ್ಣುರ್ದಿವ್ಯಂ ಚಕ್ಷುಸ್ತಯೋಸ್ತದಾ ।
ದಿವ್ಯಚಕ್ಷುಃ ಪ್ರದಾತೃತ್ವಂ ತಸ್ಯಾಸೀಚ್ಛಿವಪೂಜಯಾ ॥೫೭೫॥

ವಿಷ್ಣುಹೃತ್ಪದ್ಮಸಂವಿಷ್ಟಂ ಶಿವಲಿಂಗಂ ಶಿವಾತ್ಮಕಂ ।
ತಾಭ್ಯಾಂ ದೃಷ್ಟಂ ತದಾ ವಿಪ್ರಾ ನವಬಿಲ್ವದಲಾರ್ಚಿತಂ ॥೫೭೬॥

ಬ್ರಾಹ್ಮಣೋತ್ತಮರೇ, ಆ ಮಾತುಗಳನ್ನು ಕೇಳಿ ಬ್ರಹ್ಮನು ಆಶ್ಚರ್ಯಗೊಂಡ ಮನಸ್ಸುಳ್ಳವನಾಗಿ, ವಿಷ್ಣುದೇವನೇ, ಆ ಲಿಂಗವನ್ನು ನನಗೆ ತೋರಿಸಬೇಕೆಂದು ಪ್ರಾರ್ಥಿಸಿದನೆಂದು ಅಗಸ್ತ್ಯರು ಮುನಿಗಳಿಗೆ ಹೇಳಿದರು. ॥೫೭೨॥

ಬ್ರಹ್ಮನೇ, ನಿನಗೂ ಇಂದ್ರನಿಗೂ ಸಹ ಈಗ ದಿವ್ಯನೇತ್ರವನ್ನು ಕೊಡುತ್ತೇನೆ. ನನ್ನ ಹೃದಯಕಮಲದ ಮಧ್ಯದಲ್ಲಿರುವ ಶಿವಲಿಂಗವನ್ನು ದರ್ಶನಮಾಡಿರಿ. ನನ್ನ ಹೃದಯಕಮಲದಲ್ಲಿರುವ ಶಿವಾತ್ಮಕವಾದ ಆ ಶಿವಲಿಂಗವನ್ನು ಈ ಚರ್ಮಮಯವಾದ ಕಣ್ಣಿನಿಂದ ಖಂಡಿತವಾಗಿಯೂ ನೋಡಲು ಯಾರಿಗೂ ಸಾಧ್ಯವಾಗುವುದಿಲ್ಲವೆಂದು ವಿಷ್ಣುವು ಬ್ರಹ್ಮನಿಗೆ ತಿಳಿಸಿದನು. ॥೫೭೩-೫೭೪॥

ಹೀಗೆ ಹೇಳಿ ಆ ವಿಷ್ಣುವು ಅವರಿಬ್ಬರಿಗೂ ಆಗ ದಿವ್ಯನೇತ್ರವನ್ನು ಕೊಟ್ಟನು. ಬ್ರಾಹ್ಮಣರೇ, ಆ ವಿಷ್ಣುವಿಗೆ ದಿವ್ಯಚಕ್ಷುಸ್ಸನ್ನು ಕೊಡುವ ಶಕ್ತಿಯೂ ಆ

ತಾಭ್ಯಾಂ ದೃಷ್ಟಂ ಯದಾ ವಿಷ್ಣೋಃ ಶಿವಲಿಂಗಂ ಶಿವಾತ್ಮಕಂ ।
ತದೈವ ಸರ್ವದುಃಖಾನಿ ನಿವೃತ್ತಾನಿ ತಯೋರ್ದ್ವಯೋಃ ॥೫೭॥

ಸೇಂದ್ರಶ್ಚತುರ್ಮುಖಸ್ತತ್ರ ಚಕಾರ ಶಿವಪೂಜನಂ ।
ಪಂಚಾಮೃತೈರ್ಬಿಲ್ವಪತ್ರೈರ್ಹೇಮಪದ್ಮೈಸ್ತದಾ ದ್ವಿಜಾಃ ॥೫೮॥

ಇಂದ್ರಃ ಪ್ರಾಪ ಸುಖಂ ಸದ್ಯಸ್ತತ್ರ ಶಂಕರಪೂಜಯಾ ।
ತತೋ ವಿಧಿರ್ಯಯೌ ಸೇಂದ್ರೋ ಹೇಮಾದ್ರಿಶಿಖರಂ ಪ್ರತಿ ॥೫೯॥

ಶಿವಲಿಂಗಾನಿ ದೃಷ್ಟಾನಿ ತತ್ರ ತೇನ ತತಃ ಪರಂ ।
ಸೇಂದ್ರಃ ಸಂಪೂಜಯಾಮಾಸ ಶಿವಲಿಂಗಾನಿ ಸಾದರಂ ॥೬೦॥

ಶಿವಲಿಂಗಾನಿ ಸಂಪೂಜ್ಯ ಸ ಪುನಃ ಪ್ರಾಪ ಕೇಶವಂ ।
ಲಿಂಗಾನಿ ಪೂಜಿತಾನೀತಿ ಹರಿಂ ಪ್ರಾಹ ವಿಧಿರ್ಮುದಾ ॥೬೧॥

---

ಶಿವಪೂಜೆಯಿಂದಲೇ ಉಂಟಾಯಿತು ಬ್ರಾಹ್ಮಣಪುಂಗವರೇ, ಶಿವಾತ್ಮಕವಾದ ಶಿವಲಿಂಗವು ವಿಷ್ಣುವಿನ ಹೃದಯಕಮಲದಲ್ಲಿ ಹೊಸ ಬಿಲ್ವದಳಗಳಿಂದ ಪೂಜೆಮಾಡಲ್ಪಟ್ಟಿರುವುದನ್ನು ಆ ಬ್ರಹ್ಮ ಮತ್ತು ಇಂದ್ರರಿಬ್ಬರೂ ನೋಡಿದರು. ॥೫೫-೫೬॥

ವಿಷ್ಣುವಿನ ಶಿವಾತ್ಮಕವಾದ ಶಿವಲಿಂಗವನ್ನು ಆ ಬ್ರಹ್ಮ ಮತ್ತು ದೇವೇಂದ್ರರಿಬ್ಬರೂ ನೋಡಿದಾಗಲೇ ಅವರ ಎಲ್ಲಾ ದುಃಖಗಳೂ ಪೂರ್ಣವಾಗಿ ನಾಶವಾದವು. ಚತುರ್ಮುಖ ಬ್ರಹ್ಮನು ಇಂದ್ರನೊಡನೆ ಕೂಡಿ ಅಲ್ಲಿ ಹಾಲು, ಮೊಸರು, ತುಪ್ಪ, ಸಕ್ಕರೆ ಮತ್ತು ಜೇನು ಈ ಪಂಚಾಮೃತ ದ್ರವ್ಯಗಳಿಂದಲೂ ಬಿಲ್ವಪತ್ರೆ ಮತ್ತು ಸುವರ್ಣಕಮಲಗಳಿಂದಲೂ ಶಿವನನ್ನು ಪೂಜೆಮಾಡಿದನು. ॥೫೭-೫೮॥

ಇಂದ್ರನು ಶಂಕರನ ಪೂಜೆಯಿಂದ ಆ ಕೂಡಲೇ ಸಕಲ ಸುಖವನ್ನು ಪಡೆದನು. ಅನಂತರ ಬ್ರಹ್ಮನು ದೇವೇಂದ್ರನೊಡನೆ ಹೇಮಾಚಲದ ಶಿಖರಕ್ಕೆ ಹೋದನು. ಆಗ ಅವನಿಗೆ ಅಲ್ಲಿ ಶಿವಲಿಂಗಗಳು ಗೋಚರವಾಗಲು ಆದರದಿಂದ ಇಂದ್ರನೊಡನೆ ಅಲ್ಲಿದ್ದ ಶಿವಲಿಂಗಗಳನ್ನು ಮತ್ತೆ ಪೂಜೆಮಾಡಿದನು ॥೫೯-೬೦॥

ಹಾಗೆ ಶಿವಲಿಂಗಗಳನ್ನು ಪೂಜಿಸಿ ಪುನಃ ಕೇಶವನ ಬಳಿಗೆ ಬಂದು ಬ್ರಹ್ಮನು ವಿಷ್ಣುದೇವನೇ, ಶಿವಲಿಂಗಗಳನ್ನು ಪೂಜೆಮಾಡಿಕೊಂಡು ಬಂದೆನೆಂದು ಸಂತೋಷ

ಹರಿಃ ಪ್ರೂಜಿತಲಿಂಗಸ್ಯ ಸಂತುಷ್ಟಸ್ಯ ವಿಧೇರ್ವಚಃ ।
ಶ್ರುತ್ವಾ ಸ್ವಯಂ ಚ ಸಂತುಷ್ಟಃ ಪ್ರಾಹ ವಾಕ್ಯಂ ಚತುರ್ಮುಖಂ ॥೫೮೨॥

॥ ವಿಷ್ಣುರುವಾಚ ॥

ವಿಶ್ವಸ್ಯ ದೇವದೇವೇಶಂ ಮಹೇಶಮನಿಶಂ ವಿಧೇ ।
ಅದ್ಯ ಪ್ರಭೃತಿ ಯತ್ನೇನ ಪ್ರೂಜಯಸ್ವ ಯಥಾವಿಧಿ ॥೫೮೩॥

ಆಪಾದಮಸ್ತಕಂ ಸಮ್ಯಗ್ಭಸ್ಮನೋದ್ಧೂಲ್ಯ ಸಾದರಂ ।
ಸರ್ವಶ್ರುತಿಶ್ರುತಂ ಶೈವಂ ಜಪ ಮಂತ್ರಂ ಷಡಕ್ಷರಂ ॥೫೮೪॥

ಶೃಣು ಶೈವೀಂ ಕಥಾಂ ನಿತ್ಯಂ ವದ ಶೈವೀಂ ಕಥಾಂ ಸದಾ
ಪೂಜಯಸ್ವಾತಿಯತ್ನೇನ ಶಿವಭಕ್ತಾನ್ಪುನಃ ಪುನಃ ॥೫೮೫॥

ಅಪ್ರಮಾದೇನ ಸತತಂ ಶಿವೈಕಶರಣೋ ಭವ ।
ಶಿವಾರ್ಚನೇನ ಸತತಮಾನಂದಂ ಪ್ರಾಪ್ಸ್ಯತೇ ಯತಃ ॥೫೮೬॥

ದಿಂದ ನುಡಿದನು. ಆಗ ವಿಷ್ಣುವು ಶಿವಲಿಂಗಗಳನ್ನು ಪೂಜೆಮಾಡಿ ಸಂತೋಷ ಭರಿತನಾಗಿರುವ ಬ್ರಹ್ಮನ ಮಾತುಗಳನ್ನು ಕೇಳಿ ತಾನೂ ಸಂತುಷ್ಟನಾಗಿ ಆ ಚತುರ್ಮುಖ ಬ್ರಹ್ಮನನ್ನು ಕುರಿತು ಇಂತೆಂದನು. ॥೫೮೧-೫೮೨॥

ಓ ಬ್ರಹ್ಮನೇ, ಇದು ಮೊದಲು ನಿಯಮದಿಂದ ವಿಧಿಪೂರ್ವಕವಾಗಿ ಸಕಲ ದೇವತಾಧಿಪತಿಯಾದ ಶ್ರೀ ಮಹೇಶ್ವರನಲ್ಲಿ ವಿಶ್ವಾಸವಿಟ್ಟು ಅನವರತವೂ ಪೂಜೆಮಾಡು. ಕಾಲಿನಿಂದ ತಲೆಯವರೆಗೂ ಚೆನ್ನಾಗಿ ಆದರದಿಂದ ವಿಭೂತಿಯನ್ನು ಲೇಪನಮಾಡಿಕೊಂಡು, ಸಕಲ ವೇದಗಳಲ್ಲಿಯೂ ಪ್ರಸಿದ್ಧವಾದ ಷಡಕ್ಷರರೂಪವಾದ ಶಿವಮಂತ್ರವನ್ನು ಜಪಿಸು. ॥೫೮೩-೫೮೪॥

ನಿತ್ಯವೂ ಶಿವನ ಕಥೆಗಳನ್ನೇ ಕೇಳುತ್ತಲೂ ಹೇಳುತ್ತಲೂ ಇರು ಈಶ್ವರಭಕ್ತರನ್ನು ಪದೇ ಪದೇ ವಿಶೇಷ ನಿಯಮದಿಂದ ಪೂಜೆಮಾಡು. ಶಿವಪೂಜೆಯಿಂದ ಅನವರತವೂ ಶಾಶ್ವತವಾದ ಸುಖವುಂಟಾಗುವುದರಿಂದ ಯಾವಾಗಲೂ ಅಸಡ್ಡೆ ಮಾಡದೇ ಆ ಶಿವನೊಬ್ಬನನ್ನೇ ಮರೆಹೊಕ್ಕು ಭಜಿಸುವನಾಗು. ॥೫೮೫-೫೮೬॥

ಇಂದ್ರಂ ತ್ವಮಪಿ ಯತ್ನೇನ ಪೂಜಯಸ್ವ ಮಹೇಶ್ವರಂ ।
ಮಹೇಶಪೂಜಯಾ ಸದ್ಯಃ ಸುಖಂ ಪ್ರಾಪ್ತಂ ಯತಸ್ತ್ವಯಾ ॥೫೮೭॥

ಗುರೋ ತ್ವಮಪಿ ಯತ್ನೇನ ಪೂಜಯಸ್ವ ಸದಾಶಿವಂ ।
ಯತ್ಪೂಜಯಾ ಮುಕ್ತಿಕಾಂತಾ ಕರಸ್ಥೈವ ಭವಿಷ್ಯತಿ ॥೫೮೮॥

ಶಿವಾರ್ಚನಂ ಪರೋ ಧರ್ಮಃ ಸರ್ವೇಷಾಂ ಶ್ರುತಿಚೋದಿತಃ ।
ಯದ್ಧರ್ಮಾಚರಣೇ ಭುಕ್ತಿರ್ಮುಕ್ತಿಶ್ಚಾವಿಘ್ನಿತಾ ಭವೇತ್ ॥೫೮೯॥

॥ ಅಗಸ್ತ್ಯ ಉವಾಚ ॥

ಇತಿ ವಿಷ್ಣುವಚಃ ಶ್ರುತ್ವಾ ನತ್ವಾ ವಿಷ್ಣುಂ ತತೋ ವಿಧಿಃ ।
ಸೇಂದ್ರೋ ಯಯೌ ಸ್ವಲೋಕಾಯ ಪ್ರಹೃಷ್ಟವದನೋ ದ್ವಿಜಾಃ ॥೫೯೦॥

ಇಂದ್ರೋಽಪಿ ಗುರುಣಾ ಸಾಕಂ ಬ್ರಹ್ಮಣಾ ಪ್ರೇಷಿತಸ್ತತಃ ।
ಹೃಷ್ಟೋ ಯಯೌ ಸ್ವಲೋಕಾಯ ಗತದುಃಖೋ ದ್ವಿಜೋತ್ತಮಾಃ॥೫೯೧॥

ಇಂದ್ರನೇ, ಸದ್ಯದಲ್ಲಿ ಆ ಮಹೇಶ್ವರನನ್ನು ಪೂಜೆಮಾಡಿದುದರಿಂದ ನಿನಗೆ ಸುಖವುಂಟಾಗಿರುವುದು ಆದರೂ ಸದಾ ನಿಯಮದಿಂದ ಆ ಮಹೇಶ್ವರನನ್ನು ಪೂಜೆಮಾಡು. ಬೃಹಸ್ಪತಿಯೇ, ಪೂಜಾಮಹಿಮೆಯಿಂದ ಮೋಕ್ಷಾಂಗನೆಯನ್ನು ಹಸ್ತಗತಳನ್ನಾಗಿ ಮಾಡುವ ಆ ಸದಾಶಿವನ ಪೂಜೆಯನ್ನು ತಪ್ಪದೇ ನಿಯಮಬದ್ಧನಾಗಿ ಆಚರಿಸು ಎಲ್ಲರಿಗೂ ಶಿವಪೂಜೆಯೆಂಬುದು ಉತ್ತಮವಾದ ಧರ್ಮವೆಂದು ವೇದಪ್ರತಿಪಾದಿತವಾಗಿದೆ. ಆ ಧರ್ಮಾಚರಣೆಯಿಂದ ಇಹದಲ್ಲಿ ಸಕಲ ಭೋಗಗಳೂ ಪರದಲ್ಲಿ ಮೋಕ್ಷವೂ ತಡೆಯಿಲ್ಲದೇ ಉಂಟಾಗುವುವು ಎಂದು ವಿಷ್ಣುವು ಬ್ರಹ್ಮಾದಿದೇವತೆಗಳಿಗೆ ಹೇಳಿದನು. ॥೫೮೭-೫೮೮-೫೮೯॥

ಓ ಬ್ರಾಹ್ಮಣರೇ, ಈ ಮಾತುಗಳನ್ನು ಕೇಳಿ ಬ್ರಹ್ಮನು ಇಂದ್ರನೊಡನೆ ವಿಷ್ಣುವಿಗೆ ನಮಸ್ಕಾರಮಾಡಿ, ಸಂತುಷ್ಟಮುಖನಾಗಿ ತನ್ನ ಲೋಕಕ್ಕೆ ಹಿಂತಿರುಗಿದನು. ಇಂದ್ರನೂ ಸಹ ಬೃಹಸ್ಪತ್ಯಾಚಾರ್ಯನೊಡನೆ ಬ್ರಹ್ಮನ ಅನುಮತಿಯನ್ನು ಪಡೆದು ಸಂತೋಷದಿಂದ ತನ್ನ ದುಃಖಗಳೆಲ್ಲವನ್ನೂ ಕಳೆದುಕೊಂಡು ತನ್ನ ಲೋಕಕ್ಕೆ ಹೊರಟುಹೋದನು. ॥೫೯೦-೫೯೧॥

ಅತಃ ಶಿವಾರ್ಚನೇನೈವ ದುಃಖನಾಶೋಽಭಿಜಾಯತೇ ।
ಶಿವಾರ್ಚನಂ ವಿನಾ ವಿಪ್ರಾ ದುಃಖನಾಶೋ ನ ಜಾಯತೇ ॥೫೨॥

ಸಂಸಾರಬಂಧವಿಚ್ಛೇದೋ ಜಾಯತೇ ಶಿವಪೂಜಯಾ ।
ಸಂಸಾರಬಂಧವಿಚ್ಛೇದೋ ನ ಶಿವಾರಾಧನಂ ವಿನಾ ॥೫೩॥

ಯಸ್ಯ ಲೀಲಾವಿಹಾರೋಽಯಂ ಪ್ರಪಂಚವಿವಿಧೋ ದ್ವಿಜಾಃ ।
ತಸ್ಯ ಶ್ರೀವಿಶ್ವನಾಥಸ್ಯ ಪೂಜಾ ದುಃಖಾಪಹಾರಿಣೀ ॥೫೪॥

ವಿಶ್ವಸ್ಯ ಪಾರ್ವತೀನಾಥೋ ಯಷ್ಟವ್ಯಶ್ಚ ಮುಮುಕ್ಷುಭಿಃ ।
ಸ್ಮರ್ತವ್ಯಶ್ಚ ಪ್ರಯತ್ನೇನ ಧ್ಯಾತವ್ಯಶ್ಚ ಮಹೇಶ್ವರಃ ॥೫೫॥

ಧ್ಯಾನೇನ ತಪಸಾ ಯಜ್ಞೈಃ ಪೂಜಯಾ ಚ ಮುಹುರ್ಮುಹುಃ ।
ಪ್ರೀಣನೀಯೋ ಮಹಾದೇವಃ ಸರ್ವದಾ ಮುಕ್ತಿಕಾಂಕ್ಷಿಭಿಃ ॥೫೬॥

ಉದ್ಧೂಳಯಧ್ವಮಂಗಾನಿ ಭಸ್ಮನಾ ಪ್ರತಿವಾಸರಂ ।
ಭೂಷಯಧ್ವಂ ಶರೀರಾಣಿ ರುದ್ರಾಕ್ಷೈಃ ಶ್ರುತಿಚೋದಿತೈಃ ॥೫೭॥

ಬ್ರಾಹ್ಮಣರೇ, ಆದ್ದರಿಂದ ಶಿವಪೂಜೆಯಿಂದಲೇ ದುಃಖವು ನಾಶವಾಗಬೇಕು. ಶಿವಪೂಜೆಮಾಡದಿದ್ದರೆ ಎಂದಿಗೂ ದುಃಖವು ನಾಶವಾಗುವುದೇ ಇಲ್ಲವೆಂದು ತಿಳಿಯಿರಿ. ಈ ಸಂಸಾರಬಂಧನವು ಬಿಡುಗಡೆಯಾಗುವುದು ಆ ಶಿವಪೂಜೆಯಿಂದಲೇ. ಅದನ್ನು ದೂರಮಾಡಿದ ಪ್ರಾಣಿಯು ಈ ಸಂಸಾರಬಂಧನದಿಂದ ಉದ್ಧಾರವಾಗಲು ಸಾಧ್ಯವೇ ಇಲ್ಲವೆಂದು ತಿಳಿಯಿರಿ ॥೫೨-೫೩॥

ವಿಪ್ರರೇ. ಬಗೆಬಗೆಯಾಗಿ ತೋರುತ್ತಿರುವ ಈ ಪ್ರಪಂಚವೆಲ್ಲವೂ ಆ ಮಹೇಶ್ವರನ ಲೀಲೆಗೆ ವಿನೋದಸ್ಥಾನವಾಗಿರುವುದು. ಇಂತಹ ವಿಶ್ವನಾಥನ ಪೂಜೆಯು, ಎಲ್ಲಾ ದುಃಖಗಳನ್ನೂ ನಾಶಮಾಡುವುದು. ಆ ಪಾರ್ವತೀರಮಣನನ್ನು ನಂಬಿ ಮೋಕ್ಷವನ್ನು ಬಯಸುವವರು ಪೂಜೆ, ಸ್ಮರಣೆ ಮತ್ತು ಆ ಮಹೇಶ್ವರನ ಧ್ಯಾನಾದಿಗಳನ್ನು ನಿಯಮದಿಂದ ಮಾಡಬೇಕು. ॥೫೪-೫೫॥

ಮೋಕ್ಷವನ್ನು ಬಯಸುವವರು ಯಾವಾಗಲೂ ಆ ಮಹಾದೇವನ ಧ್ಯಾನ, ತಪಸ್ಸು, ಯಜ್ಞ ಮತ್ತು ಪೂಜೆಗಳಿಂದ ಪದೇಪದೇ ಆ ಶಿವನಿಗೆ ಸಂತೋಷವುಂಟಾ

ಶಿರೋಲಲಾಟಸ್ಥಾನಾನಿ ಸಿತಭಸ್ಮತ್ರಿಪುಂಡ್ರಕೈಃ ।
ಪಾವಯಿತ್ವಾ ಪ್ರಯತ್ನೇನ ಪೂಜಯಧ್ವಂ ಮಹೇಶ್ವರಂ ॥೯೮॥

ಜಪಧ್ವಮತಿಯತ್ನೇನ ರುದ್ರಾಧ್ಯಾಯಂ ಮುಹುರ್ಮುಹುಃ ।
ಶ್ರೀರುದ್ರಾಧ್ಯಾಯಮಧ್ಯಸ್ಥಂ ಧ್ಯಾತಂ ವೇದೈಃಸ್ತುತಂ ಸದಾ ॥೯೯॥

ಮಂತ್ರಂ ನಮಃ ಶಿವಾಯೇತಿ ಜಪಧ್ವಂ ವಿಧಿಪೂರ್ವಕಂ ।
ಸ ಮಂತ್ರರಾಜಃ ಸರ್ವೇಷಾಂ ಮಂತ್ರಾಣಾಮಧಿಪೋ ದ್ವಿಜಾಃ॥೬೦೦॥

ನಾಸ್ತಿ ತತ್ಸದೃಶೋ ಮಂತ್ರೋ ಮಂತ್ರೇಷು ವಿವಿಧೇಷ್ವಪಿ ।
ವೇದವೇದಾಂತಸಂವೇದ್ಯಃ ಸರ್ವಮಂತ್ರೋತ್ತಮೋತ್ತಮಃ ॥೬೦೧॥

ಪಂಚಾಕ್ಷರಃ ಸ ವೇದೇಡ್ಯಃ ಸ ತು ಮಂತ್ರಶಿರೋಮಣಿಃ ।
ಮೋಕ್ಷೋ ಭವತಿ ವಿಪ್ರೇಂದ್ರಾಸ್ತಜ್ಜಪೇನೈವ ನಾನ್ಯಥಾ ॥೬೦೨॥

---

ಗುವಂತೆ ಮಾಡಬೇಕು. ಪ್ರತಿದಿನವೂ ಅಂಗಾಂಗಗಳಿಗೆಲ್ಲಾ ವಿಭೂತಿಯನ್ನು ಲೇಪನ ಮಾಡಿಕೊಂಡು ಈ ಶರೀರಕ್ಕೆ ವೇದೋಕ್ತವಾಗಿ ರುದ್ರಾಕ್ಷಗಳನ್ನು ಅಲಂಕರಿಸಿಕೊಳ್ಳಬೇಕು. ||೯೬-೯೭||

ತಲೆ, ಹಣೆ ಮುಂತಾದ ಜಾಗಗಳಲ್ಲಿ ಶುಭ್ರವಾದ ಭಸ್ಮತ್ರಿಪುಂಡ್ರವನ್ನು ಧರಿಸಿ, ಈ ದೇಹಶುದ್ಧಿಮಾಡಿಕೊಂಡು ಅನಂತರ ಮಹೇಶ್ವರನನ್ನು ನಿಯಮದಿಂದ ಪೂಜೆಮಾಡಬೇಕು. ಭಕ್ತಿ ನಿಯಮದಿಂದ ರುದ್ರಾಧ್ಯಾಯವನ್ನು ಪದೇಪದೇ ಜಪಮಾಡುತ್ತಾ, ಶ್ರೀ ರುದ್ರಾಧ್ಯಾಯದ ಮಧ್ಯದಲ್ಲಡಗಿರುವುದೂ, ವೇದಗಳಿಂದ ಯಾವಾಗಲೂ ಸ್ತೋತ್ರಮಾಡಲ್ಪಡುತ್ತಿರುವುದೂ ಆದ 'ನಮಃ ಶಿವಾಯ' ಎಂಬ ಮಂತ್ರವನ್ನು ವಿಧಿಪೂರ್ವಕವಾಗಿ ಜಪಮಾಡಬೇಕು. ಓ ಬ್ರಾಹ್ಮಣೋತ್ತಮರೇ, ಈ ಶಿವಪಂಚಾಕ್ಷರಮಂತ್ರವು ಎಲ್ಲಾ ಮಂತ್ರಗಳಿಗೂ ಸ್ವಾಮಿಯಾಗಿ ಮಂತ್ರರಾಜನೆಂದು ಪ್ರಸಿದ್ಧವಾಗಿರುವುದೆಂದು ಭಾವಿಸಿರಿ. ||೯೮-೯೯-೬೦೦||

ವಿವಿಧವಾದ ಇತರ ಎಲ್ಲಾ ಮಂತ್ರಗಳಲ್ಲಿಯೂ ಆ ಶಿವಪಂಚಾಕ್ಷರಕ್ಕೆ ಸಮಾನವಾದ ಮಂತ್ರವೇ ಇಲ್ಲ. ಇದು ವೇದ ಮತ್ತು ವೇದಾಂತಗಳಿಂದ ತಿಳಿಯು

ಪಂಚಾಕ್ಷರಂ ಮಂತ್ರರಾಜಂ ಮಹಾದೇವಾತ್ಮಕಂ ದ್ವಿಜಾಃ ।
ಯೋ ಜಪೇದತಿಯತ್ನೇನ ಮುಕ್ತಿಸ್ತಸ್ಯೈವ ಜಾಯತೇ ॥೬೦॥

ಪಂಚಾಕ್ಷರಜಪಾಸಕ್ತಃ ಪಂಚಾಸ್ಯಧ್ಯಾನತತ್ಪರಃ ।
ಸರ್ವಪ್ರಪಂಚನಿರ್ಮುಕ್ತಃ ಪ್ರಪಂಚಂ ನೈವ ಪಶ್ಯತಿ ॥೬೦॥

ಪಂಚಾಕ್ಷರವಿಹೀನಾನಾಂ ಮುಕ್ತಿರ್ನಾಸ್ತ್ಯೇವ ಸರ್ವಥಾ ।
ಅತಃ ಪಂಚಾಕ್ಷರಂ ಶ್ರೌತಂ ಜಪಧ್ವಂ ಸತತಂ ದ್ವಿಜಾಃ ॥೬೫॥

ಪಂಚಾಕ್ಷರಸ್ಯ ಮಾಹಾತ್ಮ್ಯಂ ನ ವಕ್ತುಂ ಶಕ್ನುಯಾಮ್ಯಹಂ ।
ಪಂಚಾಕ್ಷರಸ್ಯ ಮಾಹಾತ್ಮ್ಯಂ ವೇದೈರಪಿ ನ ಬುಧ್ಯತೇ ॥೬೬॥

ಲ್ಪಡತಕ್ಕುದೂ, ಸಕಲ ಮಂತ್ರಗಳಲ್ಲಿಯೂ ಉತ್ತಮೋತ್ತಮವೂ ಆಗಿರುವುದು ವೇದಸ್ತುತವಾದ ಆ ಪಂಚಾಕ್ಷರವು ಮಂತ್ರಶಿರೋಮಣಿಯೆನಿಸುವುದು. ಓ ಬ್ರಾಹ್ಮಣೋತ್ತಮರೇ, ಆ ಶಿವಪಂಚಾಕ್ಷರಮಂತ್ರ ಜಪದಿಂದಲೇ ಮೋಕ್ಷವಾಗಬೇಕೇ ಹೊರತು ಇತರ ಯಾವ ಮಂತ್ರಗಳಿಂದಲೂ ಆಗಲಾರದು. ॥೬೧-೬೨॥

ಎಲೈ ವಿಪ್ರರೇ, ಮಹಾದೇವನ ಸ್ವರೂಪವೂ, ಮಂತ್ರರಾಜನೂ ಎನಿಸಿರುವ ಶಿವಪಂಚಾಕ್ಷರವನ್ನು ತುಂಬಾ ನಿಯಮದಿಂದ ಜಪಮಾಡುವವನಿಗೇ ಮೋಕ್ಷವು ತಪ್ಪದೇ ಉಂಟಾಗುತ್ತದೆ. ಶಿವಪಂಚಾಕ್ಷರಮಂತ್ರಜಪದಲ್ಲಿ ಆಸಕ್ತನೂ, ಐದು ಮುಖವುಳ್ಳ ಮಹೇಶ್ವರನನ್ನು ಎಡಬಿಡದೇ ಧ್ಯಾನಮಾಡುವವನೂ ಆದ ವ್ಯಕ್ತಿಯು ಈ ಸಕಲಪ್ರಪಂಚಬಂಧನಗಳಿಂದಲೂ ಬಿಡುಗಡೆಹೊಂದಿ ತಿರುಗಿ ಈ ಪ್ರಪಂಚವನ್ನು ನೋಡುವುದಿಲ್ಲ. ॥೬೩-೬೪॥

ಬ್ರಾಹ್ಮಣರಿರಾ, ಪಂಚಾಕ್ಷರಮಂತ್ರವನ್ನು ಜಪಮಾಡದವರಿಗೆ ಖಂಡಿತವಾಗಿ ಮೋಕ್ಷವುಂಟಾಗುವುದಿಲ್ಲವಾದ್ದರಿಂದ ಶ್ರುತಿಪ್ರಸಿದ್ಧವಾದ ಆ ಶಿವಪಂಚಾಕ್ಷರಮಂತ್ರವನ್ನು ನೀವು ಅನವರತವೂ ಜಪಮಾಡಿರಿ. ಆ ಪಂಚಾಕ್ಷರಮಂತ್ರದ ಮಹಿಮೆಯನ್ನು ಹೇಳಲು ನನಗೆ ಶಕ್ತಿಸಾಲದು ವೇದಗಳಿಗೂ ಆ ಪಂಚಾಕ್ಷರಮಂತ್ರ ಮಹಿಮೆಯು ಸರಿಯಾಗಿ ತಿಳಿಯದು. ॥೬೫-೬೬॥

ಪಂಚಾಕ್ಷರಸ್ಯ ಮಹಿಮಾ ಬ್ರಹ್ಮಾದ್ಯೈರ್ನೈವ ಬುಧ್ಯತೇ ।
ಅಸ್ಮದಾದ್ಯೈಸ್ತು ತನ್ಮಂತ್ರಮಹಿಮಾ ಜ್ಞಾಯತೇ ಕಥಂ ॥೬೦೭॥

ಮಹೇಶಃ ಸರ್ವದೇವೇಶಃ ಸರ್ವಜ್ಞಃ ಪರಮೇಶ್ವರಃ ।
ಜಾನಾತಿ ಶಿವಮಂತ್ರಸ್ಯ ಮಾಹಾತ್ಮ್ಯಂ ನೇತರೋ ಧ್ರುವಂ ॥೬೦೮॥

ವೇದಾಃ ಸ್ತುವಂತಿ ಯಂ ಮಂತ್ರಂ ವೇದಾಂತಾಶ್ಚ ಪ್ರಯತ್ನತಃ ।
ತಸ್ಯ ಮಂತ್ರಸ್ಯ ಮಾಹಾತ್ಮ್ಯಂ ಕೋ ವಾ ವೇದ ಶಿವಂ ವಿನಾ॥೬೦೯॥

॥ ವಿಷ್ಣುರುವಾಚ ॥

ಇತ್ಯಗಸ್ತ್ಯವಚಃ ಶ್ರುತ್ವಾ ವಸಿಷ್ಠಾದ್ಯಾ ಮುನೀಶ್ವರಾಃ ।
ಶಿವಾರ್ಚನಪರಾ ಜಾತಾ ಭಸ್ಮೋದ್ಧೂಳಿತವಿಗ್ರಹಾಃ ॥೬೧೦॥

ಅತಃ ಶಿವಾರ್ಚನಂ ಕಾರ್ಯಂ ಸರ್ವದಾ ಶೈವಪುಂಗವೈಃ ।
ಮುಕ್ತಾಃ ಶಿವಾರ್ಚನೇನೈವ ಬಹವಃ ಪೂರ್ವಮಾಸ್ತಿಕಾಃ ॥೬೧೧॥

ಬ್ರಹ್ಮನೇ ಮುಂತಾದ ದೇವತೆಗಳಿಗೇ ತಿಳಿಯದಿರುವ ಆ ಶಿವಪಂಚಾಕ್ಷರ ಮಂತ್ರಮಹಿಮೆಯು ನಮ್ಮಂತಹವರಿಗೆ ಹೇಗೆ ತಿಳಿದೀತು? ಸಕಲ ದೇವತೆಗಳಿಗೂ ಒಡೆಯನೂ, ಸರ್ವವನ್ನೂ ಅರಿತವನೂ, ಪರಮೈಶ್ವರ್ಯಭರಿತನೂ ಆದ ಆ ಮಹೇಶ್ವರನೊಬ್ಬನಿಗೇ ಆ ಶಿವಮಂತ್ರಮಹಿಮೆಯು ತಿಳಿದಿದೆಯೇ ಹೊರತು ಬೇರೆಯುವರಿಗೆ ತಿಳಿಯದು. ವೇದಗಳೂ, ವೇದಾಂತಗಳೂ ನಿಯಮದಿಂದ ಸ್ತೋತ್ರಮಾಡುತ್ತಿರುವ ಆ ಶಿವಪಂಚಾಕ್ಷರಮಂತ್ರದ ಮಹಿಮೆಯನ್ನು ಶಿವನನ್ನು ಬಿಟ್ಟು ಬೇರೆ ಯಾರುತಾನೇ ತಿಳಿಯಬಲ್ಲರು? ಎಂಬುದಾಗಿ ಅಗಸ್ತ್ಯಮಹರ್ಷಿಗಳು ಮುನಿಗಳಿಗೆ ಹೇಳಿದರು. ॥೬೦೭-೬೦೮-೬೦೯॥

ಈರೀತಿಯಾದ ಅಗಸ್ತ್ಯಮುನಿಯ ಮಾತುಗಳನ್ನು ಕೇಳಿ ವಸಿಷ್ಠನೇ ಮೊದಲಾದ ಮುನಿಪುಂಗವರೆಲ್ಲರೂ ಭಸ್ಮಲೇಪನಮಾಡಿಕೊಂಡು ಶಿವಪೂಜಾನಿರತರಾದರು. ಆದ್ದರಿಂದ ಶಿವಭಕ್ತಾಗ್ರೇಸರರೆಲ್ಲರೂ ಯಾವಾಗಲೂ ಶಿವನನ್ನು ಪೂಜೆ ಮಾಡಲೇಬೇಕು. ಹಿಂದೆ ಈ ಶಿವಪೂಜೆಯನ್ನು ಮಾಡಿ ಅನೇಕಮಂದಿ ಮೋಕ್ಷ ಪಡೆದಿದ್ದಾರೆ. ॥೬೧೦-೬೧೧॥

ಶಿವಾರ್ಚನಾತ್ಪರೋ ಧರ್ಮೋ ನಾಸ್ತಿ ನಾಸ್ತೀತಿ ಮೇ ಮತಿಃ ।
ಸತ್ಯಮೇತತ್ಪುನಃ ಸತ್ಯಮುದ್ಧೃತ್ಯ ಭುಜಮುಚ್ಯತೇ ॥೬೧೨॥

ಶಿವಾರ್ಚನಂ ಪರೋ ಧರ್ಮಃ ಸ್ತಪಶ್ಚ ಶಿವಪೂಜನಂ ।
ಯಜ್ಞಾಃ ಶಿವಾರ್ಚನಂ ವಿಪ್ರಾಃ ಸತ್ಯಂ ಸತ್ಯಂ ನ ಸಂಶಯಃ ॥೬೧೩॥

ಶಿವಾರ್ಚನಂ ಕೃತಂ ಯೇನ ಭಕ್ತಿಪೂರ್ವಕಮಾದರಾತ್ ।
ಕೃತಾನಿ ತೇನ ಸರ್ವಾಣಿ ಮಹಾದಾನಾನಿ ಸಂತತಂ ॥೬೧೪॥

ಶಿವಾರ್ಚನಂ ಕೃತಂ ಯೇನ ಭಕ್ತಿಪೂರ್ವಕಮಾದರಾತ್ ।
ತೇನ ಯಾಗಾಃ ಕೃತಾಃ ಸರ್ವೇ ಸಾಂಗಾಃ ಸರ್ವಸ್ವದಕ್ಷಿಣಾಃ ॥೬೧೫॥

ಶಿವಾರ್ಚನಂ ಕೃತಂ ಯೇನ ಭಕ್ತಿಪೂರ್ವಕಮಾದರಾತ್ ।
ತೇನ ತೀರ್ಥಾನಿ ಸರ್ವಾಣಿ ಸೇವಿತಾನಿ ನ ಸಂಶಯಃ ॥೬೧೬॥

ಶಿವಾರ್ಚನಂ ಕೃತಂ ಯೇನ ಭಕ್ತಿಪೂರ್ವಕಮಾದರಾತ್ ।
ತೇನಾಧೀತೋಽನಂತಶಾಖೋ ವೇದಃ ಸಾಂಗೋ ದ್ವಿಜೋತ್ತಮಾಃ ॥೬೧೭॥

ಶಿವಾರ್ಚನಂ ಕೃತಂ ಯೇನ ಭಕ್ತಿಪೂರ್ವಕಮಾದರಾತ್ ।
ತೇನ ಧರ್ಮಾಃ ಸಮಸ್ತಾಶ್ಚ ಕೃತಾ ಏವ ದ್ವಿಜೋತ್ತಮಾಃ ॥೬೧೮॥

ಶಿವಪೂಜೆಗಿಂತಲೂ ಉತ್ಕೃಷ್ಟವಾದ ಬೇರೊಂದು ಧರ್ಮವಿಲ್ಲವೆಂದು ನನ್ನ ಅಭಿಪ್ರಾಯ. ಇದು ಸತ್ಯವು. ಪುನಃಪುನಃ ಇದು ಸತ್ಯವೆಂದು ಭುಜವನ್ನೆತ್ತಿ ನಾನು ಹೇಳುವೆನು. ಶಿವಪೂಜೆ, ತಪಸ್ಸು, ಯಜ್ಞಗಳು ಇವೆಲ್ಲವೂ ಶಿವಪೂಜಾತ್ಮಕವೇ ಆದ ಧರ್ಮವೆಂಬುದರಲ್ಲಿ ಸತ್ಯವಾಗಿಯೂ ಸಂದೇಹವಿಲ್ಲ ॥೬೧೨-೬೧೩॥

ಬ್ರಾಹ್ಮಣೋತ್ತಮರೇ, ಭಕ್ತಿ ಮತ್ತು ಆದರಗಳಿಂದ ಶಿವಪೂಜೆಮಾಡಿದವನು, ಸಕಲ ಮಹಾದಾನಗಳೂ, ಅಂಗಸಹಿತವೂ ದಕ್ಷಿಣಾಯುಕ್ತವೂ ಆದ ಸಕಲ ಯಾಗ, ಸಕಲ ತೀರ್ಥಯಾತ್ರೆ, ಅನೇಕ ಶಾಖೆಗಳಿಂದ ಕೂಡಿದ ಸಾಂಗವಾದ ಎಲ್ಲಾ ವೇದಗಳ ಅಧ್ಯಯನ, ಮತ್ತು ಎಲ್ಲಾ ಧರ್ಮಾಚರಣೆ, ಇವುಗಳನ್ನು ಮಾಡಿದಂತೆಯೇ ಸರಿ. ॥೬೧೪-೬೧೫-೬೧೬-೬೧೭-೬೧೮॥

ಸರ್ವೇಷಾಮಪಿ ಧರ್ಮಾಣಾಂ ವಿಶ್ವಾಸಃ ಫಲಮೀಶ್ವರೇ ।
ತಸ್ಯಾಪಿ ಫಲಮುತ್ಕೃಷ್ಟಂ ಶ್ರೀಮಹಾದೇವಪೂಜನಂ ॥೬೧೯॥

ಸರ್ವೇಪ್ಸಿತಾರ್ಥಫಲದಂ ಶ್ರೀಮಹಾದೇವಪೂಜನಂ ।
ಸರ್ವೇಪ್ಸಿತಾರ್ಥಾಃ ಸಿಧ್ಯಂತಿ ಶ್ರೀಮಹಾದೇವಪೂಜಯಾ ॥೬೨೦॥

ತಿರಸ್ಕೃತಾಃ ಕಲ್ಪವೃಕ್ಷಾಃ ಶ್ರೀಮಹಾದೇವಪೂಜಕೈಃ ।
ತೃಣೀಕೃತಾ ಕಾಮಧೇನುಃ ಶಿವಪೂಜಾಪರಾಯಣೈಃ ॥೬೨೧॥

ಕಲ್ಪವೃಕ್ಷಾಸ್ತು ವಿಪ್ರೇಂದ್ರಾ ವಿನಶ್ವರಫಲಪ್ರದಾಃ ।
ಫಲಂ ಶಿವಾರ್ಚನಾದ್ವಿಪ್ರಾಃ ಪ್ರಾಪ್ತವ್ಯಮವಿನಶ್ವರಂ ॥೬೨೨॥

ಪ್ರಾಪ್ಯತೇ ಕಲ್ಪವೃಕ್ಷೇಭ್ಯಃ ಫಲಮಲ್ಪಂ ವಿನಶ್ವರಂ ।
ಫಲಂ ಶಿವಾರ್ಚನಾತ್ಪ್ರಾಪ್ಯಮನಲ್ಪಮವಿನಶ್ವರಂ ॥೬೨೩॥

ಶಿವಾರ್ಚನಪರೋ ಮರ್ತ್ಯೋ ಭಕ್ತಿಪೂರ್ವಕಮನ್ವಹಂ ।
ಯಂ ಯಂ ಕಾಮಯತೇ ಕಾಮಂ ತಂ ತಮಾಪ್ನೋತಿ ಸರ್ವದಾ ॥೬೨೪॥

ಎಲ್ಲಾ ಧರ್ಮಗಳಿಗೂ ಆ ಈಶ್ವರವಿಷಯಕವಾದ ಭಕ್ತಿಯೇ ಫಲವಾಗಿರುವುದು. ಅದಕ್ಕೂ ಆ ಮಹಾದೇವನ ಪೂಜೆಯು ಉತ್ಕೃಷ್ಟವಾದ ಫಲವೆನಿಸಿರುವುದು ಶ್ರೀ ಮಹಾದೇವನ ಪೂಜೆಯು ಸಕಲ ಇಷ್ಟಾರ್ಥಗಳ ಫಲವನ್ನೂ ಕೊಡುವುದು. ಇದರಿಂದ ಎಲ್ಲಾ ಮನೋರಥಗಳೂ ಸಿದ್ಧಿಸುವುವು. ॥೬೧೯-೬೨೦॥

ಶ್ರೀ ಮಹಾದೇವನನ್ನು ಪೂಜೆಮಾಡಿದವರು ಕಲ್ಪವೃಕ್ಷವನ್ನು ತಿರಸ್ಕಾರ ಮಾಡುತ್ತಿರುವರು. ಶಿವಪೂಜಾನಿರತರಾಗಿರುವುದರಿಂದ ಕಾಮಧೇನುವೂ ಅವರಿಗೆ ಹುಲ್ಲಿನಂತೆ ಕಾಣಿಸುತ್ತಿದೆ. ಓ ವಿಪ್ರೇಂದ್ರರೇ, ಕಲ್ಪವೃಕ್ಷಗಳಾದರೋ ನಾಶವಾಗುವ ಫಲವನ್ನು ಮಾತ್ರ ಕೊಡಬಲ್ಲವು. ಶಿವಪೂಜೆಯಿಂದ ಭಕ್ತರಿಗೆ ಎಂದಿಗೂ ನಾಶವಾಗದಿರುವ ಶಾಶ್ವತಫಲವೇ ದೊರೆಯುವುದು. ॥೬೨೧-೬೨೨॥

ಕಲ್ಪವೃಕ್ಷಗಳಿಂದ ಅಲ್ಪವೂ ಅಶಾಶ್ವತವೂ ಆದ ಫಲವುಂಟಾಗುವುದು. ಶಿವಪೂಜೆಯಿಂದಲಾದರೋ ಅಪರಿಮಿತವೂ, ಶಾಶ್ವತವೂ ಆದ ಫಲ ದೊರಕುವುದು.

ಶಿವಾರ್ಚಕಸ್ಯ ಕುತ್ರಾಪಿ ನ ಕಿಮಪ್ಯಸ್ತಿ ದುರ್ಲಭಂ ।
ಇಚ್ಛಾಮಾತ್ರೇಣ ಸಿದ್ಧ್ಯಂತಿ ತಸ್ಯಾರ್ಥಾಃ ಸಕಲಾ ಅಪಿ ॥೬೫॥

ಗಾಣಪತ್ಯಂ ಪುರಾ ಪ್ರಾಪ್ತಂ ಬಹುಭಿಃ ಶಿವಪೂಜಯಾ ।
ಮುಕ್ತಾಶ್ಚ ಬಹವಃ ಪೂರ್ವಂ ಮಹೇಶಸ್ಯೈವ ಪೂಜಯಾ ॥೬೬॥

ಅತ್ರೈವ ನಾಟ್ಯಸದನೇ ಪುಂಡರೀಕಪುರೇ ಪುರಾ
ತ್ರಿಪುರಾರಿಂ ಸಮಭ್ಯರ್ಚ್ಯ ಮುಕ್ತಾ ಜಾತಾಶ್ಚ ಕೋಟಿಶಃ ॥೬೭॥

ಶ್ರೀಮಚ್ಚಿದಂಬರಾಧೀಶೋ ಯೇನ ದೃಷ್ಟಃ ಕದಾಚನ ।
ಸೋಽಪಿ ಮುಕ್ತೋ ಭವತ್ಯೇವ ಮಹೇಶಕೃಪಯಾ ದ್ವಿಜಾಃ ॥೬೮॥

ಧನ್ಯಾ ಯೂಯಂ ಶಿವಾಸಕ್ತಾಃ ಶ್ರೀಚಿದಂಬರವಾಸಿನಃ ।
ಭಸ್ಮರುದ್ರಾಕ್ಷಸಂಶೋಭಿತಾಂಗಾಃ ನಿಃಸಂಗಾಃ ಪರಮಾರ್ಥಿನಃ ॥೬೯॥

ಪ್ರತಿದಿನವೂ ಭಕ್ತಿಪೂರ್ವಕವಾಗಿ ಶಿವಪೂಜಾನಿರತನಾಗಿರುವ ಮಾನವನಿಗೆ ಬಯಸಿದ ಇಷ್ಟಾರ್ಥಗಳೆಲ್ಲಾ ಯಾವಾಗಲೂ ಲಭಿಸುತ್ತವೆ. ||೬೩-೬೪||

ಶಿವಪೂಜಾಸಕ್ತನಾದವನಿಗೆ ಎಲ್ಲಿಯೂ ಯಾವುದೂ ದುರ್ಲಭವೆನಿಸಲಾರದು. ಇಚ್ಛಾಮಾತ್ರದಿಂದ ಆವನ ಸಮಸ್ತ ಇಷ್ಟಾರ್ಥಗಳೂ ಸಿದ್ಧಿಸುವುವು. ಹಿಂದೆ ಅನೇಕರು ಶಿವಪೂಜೆಯಿಂದ ಗಣಾಧಿಪತಿಪದವಿಯನ್ನು ಪಡೆದಿರುವರು. ಆ ಮಹೇಶ್ವರನನ್ನು ಪೂಜೆಮಾಡಿ ಬಹಳಮಂದಿ ಮೋಕ್ಷವನ್ನು ಹೊಂದಿರುವರು. ||೬೫-೬೬||

ಶಿವನಿಗೆ ನರ್ತನಾಲಯವೆನಿಸಿರುವ ಈ ಪುಂಡರೀಕಪುರದಲ್ಲಿಯೇ ಹಿಂದೆ ತ್ರಿಪುರಾಂತಕನಾದ ಮಹೇಶನನ್ನು ಪೂಜೆಮಾಡಿ ಕೋಟ್ಯಂತರ ಜನಗಳು ಮುಕ್ತಿ ಪಡೆದಿರುವರು. ಓ ಬ್ರಾಹ್ಮಣರೇ, ಯಾವಾಗಲಾದರೂ ಒಂದು ಸಲ ಕಾಂತಿಯುಕ್ತನಾದ ಚಿದಂಬರೇಶ್ವರನನ್ನು ದರ್ಶನಮಾಡಿದವನು ಆ ಮಹೇಶನ ದಯೆಯಿಂದ ನಿಶ್ಚಯವಾಗಿಯೂ ಮೋಕ್ಷವನ್ನು ಹೊಂದಿಯೇ ಹೊಂದುವನು. ||೬೭-೬೮||

ಶ್ರೀ ಚಿದಂಬರಕ್ಷೇತ್ರದಲ್ಲಿ ವಾಸಮಾಡುತ್ತಾ, ಭಸ್ಮರುದ್ರಾಕ್ಷಿಗಳನ್ನಲಂಕರಿಸಿಕೊಂಡು ಬಾಹ್ಯಪ್ರಪಂಚಸಂಬಂಧವಿಲ್ಲದೆ ಪರಮಪ್ರಯೋಜನವನ್ನು ಬಯಸುತ್ತಾ

|| ಶ್ರೀಮಹಾದೇವ ಉವಾಚ ||

ಇತಿ ವಿಷ್ಣುವಚಃ ಶ್ರುತ್ವಾ ಶೈವಾ ವಿಷ್ಣುಂ ಮದರ್ಚಕಂ ।
ಧನ್ಯೋऽಸೀತ್ಯಭಿನಂದ್ಯಾಥ ಜಗ್ಮುಃ ಸ್ವಸ್ವಾಶ್ರಮಂ ಪ್ರತಿ ||೬೩೦||

ವಿಷ್ಣುರ್ದರ್ಭ್ರಸಭಾನಾಥಂ ತತಃ ಸಂಪೂಜ್ಯ ಮಾಂ ಶಿವೇ ।
ಪರಮಾನಂದದಾಂ ಧನ್ಯಾಂ ಪ್ರಾಪ ಮೇ ಕಾಶಿಕಾಪುರೀಂ ||೬೩೧||

ತತಃ ಸ್ನಾತ್ವಾ ಜ್ಞಾನವಾಪ್ಯಾಂ ಕೃತ್ವಾ ಜ್ಞಾನೇಶದರ್ಶನಂ ।
ದಂಡಪಾಣಿಂ ತತೋ ನತ್ವಾ ಢುಂಢೀಶಮಭಿಪೂಜ್ಯ ಚ ||೬೩೨||

ಮೋಕ್ಷಲಕ್ಷ್ಮೀವಿಲಾಸಾಖ್ಯಂ ಮಂಡಪಂ ಪ್ರಾಪ ಸತ್ವರಂ ।
ತತೋ ದದರ್ಶ ಮಾಂ ಶಂಭುಂ ಸರ್ವದೇವಶಿಖಾಮಣಿಂ ||೬೩೩||

ತತಃ ಪ್ರಾಪ ಮಹಾಲಕ್ಷ್ಮೀಂ ಮತ್ಪೂಜನಪರಾಂ ಶಿವೇ ।
ವಿಲೋಕಯಸ್ಪ್ರಿಯಸ್ತ್ರೀನ ಮಾಮಾನಂದಪರಿಪ್ಲುತಃ ||೬೩೪||

ಆ ಪರಶಿವನಲ್ಲಿ ಆಸಕ್ತರಾಗಿರುವ ನೀವೇ ಧನ್ಯರೆಂದು ವಿಷ್ಣುವು ಆ ಕ್ಷೇತ್ರವಾಸಿಗಳಿಗೆ ಹೇಳಿದನು. ||೬೨೯||

ದೇವಿ, ಹೀಗೆ ವಿಷ್ಣುವಿನ ಮಾತುಗಳನ್ನು ಕೇಳಿ ಪರಶಿವಭಕ್ತರೆಲ್ಲರೂ ನನ್ನ ಪೂಜಾನಿರತನಾದ ವಿಷ್ಣುವನ್ನು ನೀನೇ ಧನ್ಯನೆಂದು ಹೊಗಳಿ ಅವರವರ ಆಶ್ರಮಕ್ಕೆ ತೆರಳಿದರು. ಅನಂತರ ವಿಷ್ಣುವು ದಭ್ರಸಭಾನಾಥನೆನಿಸಿದ ನನ್ನನ್ನು ಪೂಜಿಸಿ ಆ ಮೇಲೆ ಪರಮಾನಂದವನ್ನುಂಟುಮಾಡುವುದೂ, ಪವಿತ್ರವೂ ಆಗಿರುವ ನನ್ನ ಕಾಶೀಕ್ಷೇತ್ರಕ್ಕೆ ಬಂದನು. ||೬೩೦-೬೩೧||

ಅಲ್ಲಿ ಜ್ಞಾನವಾಪಿಯಲ್ಲಿ ಸ್ನಾನಮಾಡಿ, ಜ್ಞಾನೇಶ್ವರನನ್ನು ದರ್ಶನ ಮಾಡಿದನಂತರ ದಂಡಪಾಣೀಶನಿಗೆ ನಮಸ್ಕರಿಸಿ ಹಾಗೆಯೇ ಢುಂಢೀಶ್ವರನನ್ನು ಪೂಜೆಮಾಡಿದನು. ಆ ಮೇಲೆ 'ಮೋಕ್ಷಲಕ್ಷ್ಮೀವಿಲಾಸ'ವೆಂಬ ಹೆಸರಿನ ಮಂಟಪಕ್ಕೆ ಬಂದು, ಅಲ್ಲಿ ಸಕಲ ದೇವತೆಗಳಿಗೂ ಚೂಡಾಮಣಿಪ್ರಾಯನಾಗಿರುವ ಶಂಭುವನ್ನು ದರ್ಶನಮಾಡಿದನು. ಅದೇ ಸ್ಥಳದಲ್ಲಿ ನನ್ನನ್ನು ಪೂಜೆಮಾಡುವುದರಲ್ಲಿ ನಿರತಳಾಗಿದ್ದ ಲಕ್ಷ್ಮಿಯನ್ನು ನೋಡಿ ಆನಂದಪರಿಪೂರ್ಣನಾಗಿ ಅವಳೊಡನೆ

|| ವಿಷ್ಣುರುವಾಚ ||

ವಿಶ್ವೇಶ್ವರೋಽಯಂ ಮದನಾಂತಕೋಽಯಂ
ಮೃತ್ಯುಂಜಯೋಽಯಂ ತ್ರಿಪುರಾಂತಕೋಽಯಂ ।
ಸರ್ವೇಶ್ವರೋಽಯಂ ಸುರವಂದಿತೋಽಯಂ
ಗೌರೀಶ್ವರೋಽಯಂ ಚ ಯಮಸ್ಯಾಂತಕೋಽಯಂ ||೬೩೫||

ವಿಜ್ಞಾನಮಾನಂದಮನಂತಮೀಡ್ಯಂ
ವಿಶ್ವೇಶ್ವರಂ ಲಿಂಗಮಿದಂ ಮನೋಜ್ಞಂ ।
ಪಶ್ಯೈತದಾದ್ಯಂತವಿಹೀನಮಾರ್ಯೇ
ಸಮರ್ಚಯಾತ್ರೇಶ್ವರಮಾದಿದೇವಂ ||೬೩೬||

ಇತ್ಯುಕ್ತ್ವಾ ಮಾಮುಮಾಕಾಂತಂ ಲಕ್ಷ್ಮೀಕಾಂತೋ ಜನಾರ್ದನಃ ।
ಪೂಜಯಿತ್ವಾ ಪ್ರಯತ್ನೇನ ಕಾಶ್ಯಾಮಸ್ಯಾಂ ಸ್ಥಿತಃ ಶಿವೇ ||೬೩೭||

ಹೀಗೆ ಮಾತನಾಡಿದನೆಂದು ಮಹಾದೇವನು ಗಿರಿಜೆಗೆ ತಿಳಿಸಿದನು. ||೬೩೨-೬೩೩-೬೩೪||

ದೇವಿ, ಈತನು ಜಗದೊಡೆಯನು, ಮನ್ಮಥನನ್ನು ಧ್ವಂಸಮಾಡಿದವನು, ಮೃತ್ಯುವನ್ನು ಜಯಿಸಿರುವವನು. ಮತ್ತು ತ್ರಿಪುರರನ್ನು ನಿಗ್ರಹಿಸಿದವನೂ ಇವನೇ ಆಗಿರುವನು. ಸರ್ವರಿಗೂ ಒಡೆಯನೂ, ದೇವತೆಗಳಿಂದ ನಮಸ್ಕೃತನೂ, ಗೌರೀರಮಣನೂ ಆದ ಈ ದೇವದೇವನೇ ಯಮನಿಗೂ ಮೃತ್ಯುಪ್ರದನೆನಿಸಿರುವನು. ||೬೩೫||

ಆರ್ಯಳೇ, ವಿಜ್ಞಾನಸ್ವರೂಪನೂ, ಆನಂದಮಯನೂ, ಅಂತವಿಲ್ಲದವನೂ, ಸ್ತೋತ್ರಾರ್ಹನೂ, ಜಗದೊಡೆಯನೂ ಆದ ಈ ವಿಶ್ವೇಶ್ವರನ ಮನೋಹರವಾದ ಶಿವಲಿಂಗವನ್ನು ನೋಡು. ದೇವಿ, ಆದ್ಯಂತರಹಿತನಾದವನೂ (ಜನನಮರಣಾದಿಗಳಿಲ್ಲದವನು) ಆದಿದೇವನೂ ಆದ ಈಶ್ವರನನ್ನು ಈ ಶಿವಲಿಂಗದಲ್ಲಿ ಪೂಜೆ ಮಾಡೆಂದು ವಿಷ್ಣುವು ತನ್ನ ಪತ್ನಿಯಾದ ಲಕ್ಷ್ಮಿಗೆ ತಿಳಿಯಹೇಳಿದನು ||೬೩೬||

ಗಿರಿಜೇ, ಲಕ್ಷ್ಮೀರಮಣನಾದ ಜನಾರ್ದನನು ಹೀಗೆ ತನ್ನ ಪತ್ನಿಗೆ ಉಪದೇಶಿಸಿ ಉಮಾರಮಣನಾದ ನನ್ನನ್ನು ಪೂಜೆಮಾಡಿ ಈ ಕಾಶಿಯಲ್ಲಿಯೇ ನೆಲಸಿದನು ದೇವಿ,

ವಿಷ್ಣುರ್ದಭ್ರಸಭಾನಾಥಂ ನೃತ್ಯಂತಂ ಮಾಂ ವಿಲೋಕಯನ್ ।
ತೇನ ಪುಣ್ಯಪ್ರಭಾವೇನ ಕಾಶೀಂ ಪ್ರಾಪ ಮದಾತ್ಮಿಕಾಂ ॥೬೩೮॥

ಯತ್ಪುಂಡರೀಕಂ ಪುರಮಧ್ಯಸಂಸ್ಥಂ
ತತ್ರಾಪಿ ದಹ್ರಂ ಗಗನಂ ವಿಶೋಕಂ ।
ತಸ್ಮಿನ್ಯದಂತಸ್ತದುಪಾಸಿತವ್ಯಂ
ಮುಕ್ತ್ಯೈ ಕಾಶೀಂ ಪ್ರಾಪ್ತುಕಾಮೈರನನ್ಯೈಃ ॥೬೩೯॥

ಇತಿ ಶ್ರೀಶಿವರಹಸ್ಯೇ ಸಪ್ತಮಾಂಶೇ ಪೂರ್ವಾರ್ಧೇ ಚಿದಂಬರಕ್ಷೇತ್ರ
ಮಹಿಮಾವರ್ಣನಂ ನಾಮ ಪಂಚವಿಂಶೋಽಧ್ಯಾಯಃ.

ನರ್ತನಮಾಡುತ್ತಿದ್ದ ದಭ್ರಸಭಾನಾಥನಾದ ನನ್ನನ್ನು ನೋಡಿದಪುಣ್ಯಪ್ರಭಾವದಿಂದಲೇ ವಿಷ್ಣುವು ನನ್ನ ಸ್ವರೂಪಾತ್ಮಕವಾದ ಕಾಶಿಯನ್ನು ಹೊಂದಿದನು, ಎಂದು ಶಿವನು ಪಾರ್ವತಿಯನ್ನು ಕುರಿತು ಹೇಳಿದನು. ॥೬೩೭-೬೩೮॥

ಶಿವಶರೀರವೆಂಬ ಕಾಶೀಪಟ್ಟಣದ ಮಧ್ಯದಲ್ಲಿ ಹೃದಯಸ್ಥಾನವೆಂಬ ಕಮಲವಿರುವುದು. ಆ ಹೃದಯಪದ್ಮದಲ್ಲಿ ಶೋಕಾದಿಗಳಿಗೆ ಎಡೆಯಾಗದಂತಿರುವ ದಹರಾಕಾಶವು ಬೆಳಗುತ್ತಿರುವುದು. ಆ ದಹರಾಕಾಶದ (ಶಿವಾಲಯ) ಒಳಗೆ ನೆಲಸಿರುವ ಚೈತನ್ಯಸ್ವರೂಪವಾದ ಪರಬ್ರಹ್ಮಸ್ವರೂಪವೆನಿಸಿದ ಪರಶಿವನನ್ನು, ಮೋಕ್ಷವನ್ನು ಪಡೆಯುವುದಕ್ಕೋಸ್ಕರ, ಅನನ್ಯಮನಸ್ಕರಾಗಿ ಕಾಶಿಕ್ಷೇತ್ರಕ್ಕೆ ಹೋಗಬೇಕೆಂದು ಬಯಸುವವರು ಯಾವಾಗಲೂ ಉಪಾಸನೆಮಾಡಬೇಕು. ಈ ವಿಧದ ಉಪಾಸನೆಯಿಂದಲೇ ಮಾನವರಿಗೆ ಪವಿತ್ರ ಕಾಶೀಕ್ಷೇತ್ರವು ಅನಾಯಾಸವಾಗಿ ಲಭಿಸುವುದು. ಎಂದು ವಿಷ್ಣುವು ಚಿದಂಬರಕ್ಷೇತ್ರದ ಮಹಿಮೆಯನ್ನು ಮುನಿಗಳಿಗೆ ವಿವರಿಸಿದನು. ॥೬೩೯॥

ಇಲ್ಲಿಗೆ ಶ್ರೀಶಿವರಹಸ್ಯದ ಏಳನೆಯ ಅಂಶದ ಪೂರ್ವಾರ್ಧದಲ್ಲಿ
ಚಿದಂಬರಕ್ಷೇತ್ರಮಹಿಮೆಯ ವರ್ಣನೆಯೆಂಬ
ಇಪ್ಪತ್ತೈದನೆಯ ಅಧ್ಯಾಯವು
ಮುಗಿದುದು.

॥ ಶ್ರೀ. ॥

॥ ಶ್ರೀ ಶಿವಾಯನಮಃ ॥

# ಅಥ ಶ್ರೀ ಶಿವರಹಸ್ಯೇ

## ಉಗ್ರಾಖ್ಯೇ

## ಸಪ್ತಮಾಂಶೇ ಪೂರ್ವಾರ್ಧೇ

## ಷಡ್ವಿಂಶೋಽಧ್ಯಾಯಃ

॥ ಶ್ರೀಸದಾಶಿವ ಉವಾಚ ॥

ಕುಂಭಘೋಣಾಭಿಧಂ ಕ್ಷೇತ್ರಮಸ್ತಿ ವರಾನನೇ ।
ತಸ್ಮಿನ್ ಕ್ಷೇತ್ರೇ ಜನ್ಮಮಾತ್ರೇಣ ಮುಕ್ತಿರ್ಭವತಿ ಸರ್ವಥಾ ॥೧॥

ತತ್ರ ಸಂತಿ ಮಹಾತ್ಮಾನಃ ಕೋಟಿಶಃ ಕಮಲಾನನೇ ।
ತೇ ಸರ್ವೇ ಸರ್ವಭಾವೇನ ಸರ್ವದಾ ಮದುಪಾಸಕಾಃ ॥೨॥

ಉದ್ಧೂಳ್ಯ ಭಸ್ಮನಾ ತೇ ತು ಸರ್ವೇಽಪ್ಯಾಪಾದಮಸ್ತಕಂ ।
ರುದ್ರಾಕ್ಷಧಾರಣಂ ಕೃತ್ವಾ ಪೂಜಯಂತ್ಯನಿಶಂ ಶಿವೇ ॥೩॥

## ಇಪ್ಪತ್ತಾರನೆಯ ಅಧ್ಯಾಯ

ಸದಾಶಿವನು ದೇವಿಯನ್ನು ಕುರಿತು ಶಿವಕ್ಷೇತ್ರಗಳ ಮಹಿಮೆಯನ್ನು ವಿವರಿಸುತ್ತಾ, ಪ್ರಾಸಂಗಿಕವಾಗಿ ಕುಂಭಕೋಣವೆಂದು ಈಗ ಪ್ರಸಿದ್ಧವಾಗಿರುವ ಕ್ಷೇತ್ರ ಪರಿಚಯಮಾಡಿಕೊಡುವನು. “ಸುಂದರಾಂಗಿಯೇ, ಕುಂಭಘೋಣಸಂಜ್ಞಕವಾದ ಒಂದು ಶಿವಕ್ಷೇತ್ರವಿರುವುದು. ಆ ಕ್ಷೇತ್ರದಲ್ಲಿ ಜನಿಸಿದ ಮಾತ್ರದಿಂದಲೇ ಪ್ರಾಣಿಗಳಿಗೆ ಮುಕ್ತಿಯುಂಟಾಗುವುದು. ಎಲೌ ಕಮಲಮುಖಿಯೇ, ಆ ಕುಂಭಘೋಣ ಕ್ಷೇತ್ರದಲ್ಲಿ ಕೋಟ್ಯಂತರ ಶ್ರೇಷ್ಠೋತ್ತಮರಿರುವರು. ಅವರೆಲ್ಲರೂ ಸಕಲರೀತಿಯಿಂದಲೂ ನನ್ನನ್ನೇ ಯಾವಾಗಲೂ ಉಪಾಸನೆಮಾಡುತ್ತಿರುವರು ॥೧-೨॥

ಅವರೆಲ್ಲರೂ ಕಾಲಿನಿಂದ ತಲೆಯವರೆಗೂ ಭಸ್ಮವನ್ನು ಲೇಪನಮಾಡಿಕೊಂಡು ರುದ್ರಾಕ್ಷಗಳನ್ನು ಧರಿಸಿ ಅನವರತವೂ ನನ್ನನ್ನೇ ಪೂಜೆಮಾಡುತ್ತಿರುವರು.

ಸದಾಶಿವೇಶ ಶರ್ವೇತಿ ಶಂಕರೇತಿ ವದಂತಿ ತೇ ।
ಮನ್ನಾಮಚಿಹ್ನಿತಾಃ ಸರ್ವೇ ಸರ್ವೇ ಮದ್ರೂಪಚಿಂತಕಾಃ ॥೪॥

ಅನನ್ಯಶರಣಾಸ್ತೇ ತು ಮದೇಕಶರಣಾಃ ಶಿವೇ ।
ಮನ್ನಾಮಜಪಸಂಸಕ್ತಾ ಮಚ್ಚಿತ್ತಾ ಮದ್ಗತಾಸವಃ ॥೫॥

ಕುಂಭಘೋಣಾಭಿಧಂ ಲಿಂಗಂ ತತ್ರ ತಿಷ್ಠತಿ ಶೋಭನೇ ।
ತತ್ಪೂಜಾಮತಿಯತ್ನೇನ ತೇ ಕುರ್ವಂತಿ ಮದರ್ಚಕಾಃ ॥೬॥

ಸಾಽದ್ರಾರ್ಸಾತಾನ್ವಿತಾ ಭೂತಾ ಯದಾ ಭವತಿ ಶೋಭನೇ ।
ತದಾ ತಲ್ಲಿಂಗಪೂಜಾ ಯಾ ಸಾ ಮುಕ್ತಿಂ ಸಂಪ್ರಯಚ್ಛತಿ ॥೭॥

ತದಾ ಸಂಪೂಜಿತೇ ಲಿಂಗೇ ಕುಂಭಘೋಣೇಶ್ವರಾಭಿಧೇ ।
ಸರ್ವಾನ್ಕಾಮಾನೇಕದೈವ ಪ್ರಾಪ್ನುವಂತಿ ಶುಭಾನನೇ ॥೮॥

ಅವರು ಸದಾಶಿವ, ಈಶ, ಶರ್ವ, ಶಂಕರ ಎಂಬುದಾಗಿ ನನ್ನ ನಾಮಗಳನ್ನು ಸದಾ ಜಪಿಸುತ್ತಿರುವವರು. ಎಲ್ಲರೂ ನನ್ನ ನಾಮಗಳಿಂದಲೇ ವ್ಯವಹೃತರಾಗಿಯೂ ನನ್ನ ರೂಪವನ್ನೇ ಯಾವಾಗಲೂ ಧ್ಯಾನಿಸುತ್ತಿರುವವರಾಗಿಯೂ ಇರುವರು. ॥೩-೪॥

ಮಂಗಳಸ್ವರೂಪಳೇ, ನನ್ನನ್ನೇ ಮೊರೆಹೊಕ್ಕಿರುವ ಅವರು ಇನ್ನಾವ ದೇವತೆಗಳನ್ನೂ ಆಶ್ರಯಿಸದೆ, ನನ್ನ ನಾಮಜಪದಲ್ಲಿಯೇ ಆಸಕ್ತರಾಗಿ ನನ್ನಲ್ಲಿಯೇ ಮನಸ್ಸಿಟ್ಟು ನನ್ನ ಮೇಲೆಯೇ ತಮ್ಮ ಪ್ರಾಣರಕ್ಷಣೆಯ ಭಾರವನ್ನು ವಹಿಸಿರುವರು. ಅಲ್ಲಿ ಕುಂಭಘೋಣಸಂಜ್ಞಕವಾದ ಶಿವಲಿಂಗವಿರುವುದು. ನನ್ನ ಭಕ್ತರಾದವರೆಲ್ಲರೂ ನನ್ನ ಪೂಜೆಯನ್ನು ಆ ಲಿಂಗದಲ್ಲಿ ವಿಶೇಷ ನಿಯಮದಿಂದ ಎಸಗುತ್ತಿರುವರು.॥೫-೬॥

ಮಂಗಳಸ್ವರೂಪಳೇ, ಆದ್ರಾನಕ್ಷತ್ರ, ವ್ಯತೀಪಾತಗಳಿಂದ ಸೇರಿದ ಚತುರ್ದಶೀ ತಿಥಿಯಲ್ಲಿ ಆ ಶಿವಲಿಂಗಪೂಜೆಯನ್ನು ಮಾಡಿದರೆ ಮೋಕ್ಷವುಂಟಾಗುತ್ತದೆ. ಆ ಸಂದರ್ಭದಲ್ಲಿ ಕುಂಭಘೋಣೇಶ್ವರಸಂಜ್ಞಕವಾದ ಶಿವಲಿಂಗವನ್ನು ಪೂಜೆಮಾಡುವುದರಿಂದ ಮಾನವರು ಒಂದೇಬಾರಿ ಸಕಲ ಐಹಿಕ ಇಷ್ಟಾರ್ಥಗಳನ್ನೂ ಹೊಂದುತ್ತಾರೆ. ॥೭-೮॥

ತತ್ರ ಪೂರ್ವಂ ತಪಸ್ತಪ್ತಂ ವಿಷ್ಣುನಾ ಪಾಪಜಿಷ್ಣುನಾ ।
ಮಲ್ಲಿಂಗಪೂಜಕೇನಾರ್ಯೇ ಜ್ವಲತ್ಪಾವಕತೇಜಸಾ ॥೯॥

ತಪಸ್ಯಂತಂ ಮಹಾವಿಷ್ಣುಂ ಕುಂಭಘೋಣನಿವಾಸಿನಂ ।
ಪ್ರಣಿಪತ್ಯ ವಿಧಿಃ ಪ್ರಾಹ ಮುಕ್ತ್ಯುಪಾಯಂ ವದೇತಿ ತಂ ॥೧೦॥

॥ ವಿಷ್ಣುರುವಾಚ ॥

ಸರ್ವವೇದಶ್ರುತಂ ಪುಣ್ಯಂ ವೇದಾಂತೇಷ್ವಪಿ ಸಂಶ್ರುತಂ ।
ಶಿವಲಿಂಗಾರ್ಚನಂ ಕಾರ್ಯಂ ಮುಕ್ತ್ಯರ್ಥಂ ಭಸ್ಮಭೂಷಣೈಃ ॥೧೧॥

ಮಹಾದೇವಾರ್ಚನಂ ಬ್ರಹ್ಮನ್ಚತುರ್ವರ್ಗಫಲಪ್ರದಂ ।
ತತ್ಫಲಂ ಪ್ರಾಪ್ಯತೇ ಸರ್ವೈಃ ಶಂಕರಸ್ಯೈವ ಪೂಜಯಾ ॥೧೨॥

ಶಂಕರಾರಾಧನಂ ಯೇನ ನ ಕೃತಂ ಸಾವಧಾನತಃ ।
ಸ ದುರ್ಭಗೋ ದುರಾಚಾರೋ ದುರ್ಬುದ್ಧಿಶ್ಚ ನ ಸಂಶಯಃ ॥೧೩॥

ಪೂಜ್ಯಳೇ, ಸದಾಶಿವಲಿಂಗಪೂಜೆಮಾಡುವವನೂ, ಉರಿಯುತ್ತಿರುವ ಬೆಂಕಿಯಂತೆ ತೇಜಸ್ಸುಳ್ಳವನೂ, ಪಾಪವನ್ನು ಜಯಿಸಿದವನೂ ಆದ ವಿಷ್ಣುವು ಅಲ್ಲಿ ಹಿಂದೆ ತಪಸ್ಸುಮಾಡಿದನು. ಹೀಗೆ ತಪಸ್ಸುಮಾಡುತ್ತಿರುವ ಮಹಾವಿಷ್ಣುವನ್ನು ಕುಂಭಘೋಣಕ್ಷೇತ್ರದಲ್ಲಿ ಕಂಡು, ಬ್ರಹ್ಮನು ಅವನಿಗೆ ನಮಸ್ಕಾರಮಾಡಿ ಮೋಕ್ಷೋಪಾಯವನ್ನು ತಿಳಿಸಬೇಕೆಂದು ಪ್ರಾರ್ಥಿಸಿದನು. ॥೯-೧೦॥

ಸಕಲ ವೇದ ಮತ್ತು ವೇದಾಂತಗಳಲ್ಲಿ ಪ್ರಸಿದ್ಧಿಪಡೆದು ಪುಣ್ಯಕರವೆನಿಸಿರುವ ಶಿವಲಿಂಗಪೂಜೆಯನ್ನು, ಮೋಕ್ಷವನ್ನು ಬಯಸುವವರು ವಿಭೂತಿಯನ್ನಲಂಕರಿಸಿಕೊಂಡು ಮಾಡಬೇಕು. ಅಯ್ಯ ಬ್ರಹ್ಮನೇ, ಆ ಮಹಾದೇವನ ಪೂಜೆಯು ಧರ್ಮ, ಅರ್ಥ, ಕಾಮ ಮತ್ತು ಮೋಕ್ಷರೂಪವಾದ ನಾಲ್ಕು ಪುರುಷಾರ್ಥಗಳ ಫಲಗಳನ್ನು ಕೊಡುವುದು. ಆ ಶಂಕರನ ಪೂಜೆಯಿಂದ ಎಲ್ಲರೂ ಆ ಫಲಗಳನ್ನು ಪಡೆಯಬಹುದು. ॥೧೧-೧೨॥

ಸಾವಧಾನಮನಸ್ಸಿನಿಂದ ಶಂಕರನ ಪೂಜೆಯನ್ನು ಮಾಡದಿರುವವನೇ ಭಾಗ್ಯಹೀನನೂ, ಆಚಾರಭ್ರಷ್ಟನೂ, ದುರ್ಬುದ್ಧಿಯೂ ಎನಿಸುವುದರಲ್ಲಿ ಸಂದೇಹ

ಯಾವಂತೋ ದುರ್ಭಗಾಃ ಸಂತಿ ತಾವಂತೋ ನಸ್ತು ತೋ ವಿಧೇ ।
ಸಂತ್ಯಕ್ತ ಶಂಕರಾಚಾರಾಃ ಸಂತ್ಯಕ್ತ ಶಿವಪೂಜಕಾಃ ॥೧೪॥

ಸ ಯೇನ ಶಂಕರಃ ಸಮ್ಯಕ್ಪೂಜ್ಯತೇ ಪ್ರತ್ಯಹಂ ಮುದಾ ।
ತೇನ ಸಂಪ್ರಾಪ್ಯತೇ ದುಃಖಂ ಯಾತನಾಪಿ ತನುವ್ಯಯೇ ॥೧೫॥

ಸರ್ವಶ್ರುತಿಪ್ರತಂ ನಿತ್ಯಂ ಶ್ರೀಮಹಾದೇವಪೂಜನಂ ।
ತ್ಯಕ್ತ್ವಾ ಮೋಹಾಪ್ಪ್ರಮೋಣಾಪಿ ದುಃಖಂ ಪ್ರಾಪ್ನೋತಿ ದುಃಸಹಂ ॥೧೬॥

ಮಹಾದೇವಾರ್ಚನಂ ತ್ಯಕ್ತ್ವಾ ಯೋ ಮೋಹಾದ್ಭೋಕ್ತುಮಿಚ್ಛತಿ ।
ಸ ಪಿಷ್ಠಾಮೇವ ದುರ್ಬುದ್ಧಿಃ ಸತತಂ ಭೋಕ್ತುಮಿಚ್ಛತಿ ॥೧೭॥

ಮಹಾದೇವಾರ್ಚನಂ ತ್ಯಕ್ತ್ವಾ ಜಲಂ ಯಃ ಪಾತುಮಿಚ್ಛತಿ ।
ಸ ಮೂತ್ರಮೇವ ಸತತಂ ದುರ್ಬುದ್ಧಿಃ ಪಾತುಮಿಚ್ಛತಿ ॥೧೮॥

ವಿಷ್ಣು ಪ್ರತ್ಯಕ್ಷದೇವನೇ, ವಸ್ತುತಃ ಭಾಗ್ಯಹೀನರಿರುವಷ್ಟು ಮಂದಿಯೂ ಆ ಶಂಕರನ ಸಂಬಂಧವಾದ ಆಚಾರಗಳನ್ನು ಅನುಷ್ಠಾನಮಾಡದವರೂ ಮತ್ತು ಶಿವಪೂಜೆಯನ್ನು ಬಿಟ್ಟವರೂ ಆಗಿರುವರೆಂದು ಭಾವಿಸು. ॥೧೩-೧೪॥

ಪ್ರತಿದಿನವೂ ಶಂಕರನನ್ನು ಸಂತೋಷದಿಂದ ಪೂಜೆಮಾಡದವನಿಗೆ ಇಹದಲ್ಲಿ ನಾನಾ ದುಃಖಗಳೂ ಈ ಶರೀರನಾಶವಾದ ಮೇಲೆ ನರಕಯಾತನೆಗಳೂ ಉಂಟಾಗುವುವು. ಸಕಲವೇದಪ್ರತಿಪಾದ್ಯವಾಗಿರುವ ಆ ಮಹಾದೇವನ ಪೂಜೆಯು ನಿತ್ಯವೂ ಅನುಷ್ಠೇಯವಾಗಿದ್ದರೂ, ಅದನ್ನು ಅಜ್ಞಾನದಿಂದ ಬಿಟ್ಟು ಮಾನವನು ಸಹಿಸಲಸಾಧ್ಯವಾದ ದುಃಖವನ್ನೈದುವನು. ॥೧೫-೧೬॥

ಸಕಲ ಜಗತ್ಪತಿಯಾದ ಮಹಾದೇವನನ್ನು ಪೂಜೆಮಾಡದೇ ಅಜ್ಞಾನದಿಂದ ಊಟಮಾಡಲು ಬಯಸುವವನೂ, ಮತ್ತು ನೀರು ಕುಡಿಯಲಪೇಕ್ಷಿಸುವವನೂ ಕ್ರಮವಾಗಿ ಅಮೇಧ್ಯಭಕ್ಷಣೆ ಮತ್ತು ಮೂತ್ರಪಾನಗಳನ್ನು ಬಯಸುವಂತಾಗು

ಯಃ ಶಂಕರಂ ಪ್ರಯತ್ನೇನ ಪೂಜಯಿಷ್ಯತಿ ಸರ್ವದಾ ।
ಸ ತಪಸ್ವೀ ಸ ಧರ್ಮಿಷ್ಠಃ ಸ ಸರ್ವಗುಣಸಂಶ್ರಯಃ ॥೧೯॥

ಭೂತಂ ಭವ್ಯಂ ಭವಿಷ್ಯಚ್ಚ ಭಾಗ್ಯಂ ಯಸ್ಯ ಭವಿಷ್ಯತಿ ।
ತಸ್ಯೈವ ಭಕ್ತಿರ್ಭವತಿ ಭವಾನೀಪ್ರಾಣವಲ್ಲಭೇ ॥೨೦॥

ಭಗವಾನ್ಭಗವಿಧ್ವಂಸೀ ಭವಾನೀವಲ್ಲಭಃ ಪ್ರಭುಃ ।
ಭೂರಿಭಾಗ್ಯಪ್ರಭಾವೇನ ಭಾವ್ಯತೇ ಭುವಿ ಭಾವುಕೈಃ ॥೨೧॥

ಭಕ್ತಿಮವ್ಯಭಿಚಾರೇಣ ನ ಕರಿಷ್ಯತಿ ಯಃ ಶಿವೇ ।
ಸ ನಿತ್ಯಸೂತಕೀ ಜ್ಞೇಯೋ ಜಾರಜಶ್ಚ ಚತುರ್ಮುಖ ॥೨೨॥

ಅಶೈವಕೃತಕರ್ಮಾಣಿ ವೇದೋಕ್ತಾನ್ಯಪಿ ಪದ್ಮಜ ।
ವೃಥಾ ಭವಂತಿ ಸರ್ವಾಣಿ ಪಾತಕಂ ಪ್ರತ್ಯುತಾಧಿಕಂ ॥೨೩॥

ಶಂಕರನನ್ನು ಪ್ರಯತ್ನಪೂರ್ವಕವಾಗಿ ಯಾವಾಗಲೂ ಪೂಜಿಸುವವನು, ತಪಸ್ವಿಯೂ, ಧರ್ಮಿಷ್ಠನೂ ಮತ್ತು ಸಕಲ ಗುಣಗಳಿಗೂ ಆಶ್ರಯನೂ ಆಗುವನು. ಭೂತ ಭವಿಷ್ಯ ದ್ವರ್ತಮಾನಕಾಲಗಳಲ್ಲಿಯೂ ಯಾರಿಗೆ ಭಾಗ್ಯವು ಲಭಿಸುವುದೋ ಅಂತಹವರಿಗೆ ಆ ಭವಾನೀ ಪ್ರಾಣಕಾಂತನೆನಿಸಿದ ಮಹಾದೇವನಲ್ಲಿ ಭಕ್ತಿ ಹುಟ್ಟುವುದು.॥೧೯-೨೦॥

ಷಡ್ಗುಣೈಶ್ವರ್ಯಸಂಪನ್ನನೂ (ಭೂತಗಳ ಉತ್ಪತ್ತಿ, ನಿಧನ, ಭೂತಭವಿಷ್ಯ ದ್ವರ್ತಮಾನರೂಪವಾದ ಪ್ರಾಣಿಗಳ ಗತಿಗಳನ್ನು ತಿಳಿಯುವಿಕೆ, ವಿದ್ಯಾ ಮತ್ತು ಅವಿದ್ಯಾಸ್ವರೂಪವನ್ನರಿತವನೂ ಭಗವಂತನೆನಿಸುವನು.) ನಶ್ವರವಾದ ಈ ಪ್ರಪಂಚ ದಲ್ಲಿ ಪ್ರಾಣಿಗಳಿಗೆ ವಿಷಯಾಸಕ್ತಿಯುಂಟಾಗುವಂತೆ ಪ್ರೇರಿಸುತ್ತಿದ್ದ ಕಾಮನನ್ನು (ಮನ್ಮಥನನ್ನು) ನಿಗ್ರಹಿಸಿದವನೂ, ಭವಾನಿಯೆನಿಸಿದ ಪಾರ್ವತಿಯ ರಮಣನೂ ಆದ ಶಿವನನ್ನು ಈ ಭೂಮಿಯಲ್ಲಿ ಅತಿಶಯವಾದ ಭಾಗ್ಯಮಹಿಮೆಯಿಂದ ಭಕ್ತರು ಧ್ಯಾನಮಾಡುವರು. ಚತುರ್ಮುಖಬ್ರಹ್ಮನೇ, ನಿತ್ಯವೂ ತಪ್ಪದೇ ಶಿವನಲ್ಲಿ ಭಕ್ತಿ ಯನ್ನಿಡದವನು, ನಿತ್ಯಾಶೌಚವುಳ್ಳವನೂ ಮತ್ತು ವ್ಯಭಿಚಾರದಿಂದ ಹುಟ್ಟಿದವನೂ ಎನಿಸುತ್ತಾನೆ. ॥೨೧-೨೨॥

ಬ್ರಹ್ಮನೇ, ಶಿವಧರ್ಮವನ್ನತಿಕ್ರಮಿಸಿದವರು ವೇದವಿಹಿತವಾದ ಕರ್ಮ ಗಳನ್ನು ಮಾಡಿದರೂ ಅದು ವ್ಯರ್ಥವೇ. ಅಲ್ಲದೇ ಅದು ವಿಶೇಷಪಾಪಪ್ರದವೂ

ಅಶೈವೈರ್ವೈದಿಕಂ ಕರ್ಮ ನ ಕರ್ತವ್ಯಂ ಕದಾಚನ ।
ಅಶೈವಾನಾಂ ವೈದಿಕೇಷು ನ ಕರ್ಮಸ್ವಧಿಕಾರತಾ ॥೨೪॥

ಅಶೈವೋ ಯತ್ಕುಲೇ ಜಾತಸ್ತತ್ಕುಲಂ ಪುಲ್ಕಸಂ ವಿಧೇ ।
ಸತ್ಯಮೇತತ್ಸತ್ಯಮೇತದುದ್ಧೃತ್ಯ ಭುಜಮುಚ್ಯತೇ ॥೨೫॥

ಅಶೈವಾದ್ಬ್ರಾಹ್ಮಣಾಚ್ಛ್ರೇಷ್ಠಃ ಸ್ವತಃ ಪುಲ್ಕಸವಂಶಜಃ ।
ಸತ್ಯಮೇತತ್ಸತ್ಯಮೇತದುದ್ಧೃತ್ಯ ಭುಜಮುಚ್ಯತೇ ॥೨೬॥

ಅಶೈವಜನನಂ ವ್ಯರ್ಥಂ ಜೀವನಂ ಚ ವೃಥಾ ವಿಧೇ ।
ಸತ್ಯಮೇತತ್ಸತ್ಯಮೇತದುದ್ಧೃತ್ಯ ಭುಜಮುಚ್ಯತೇ ॥೨೭॥

ಅಶೈವಭಾವಾದ್ವಿಷ್ಠಾಯಾಂ ಕ್ರಿಮಿಭಾವೋ ವರಂ ವಿಧೇ ।
ಸತ್ಯಮೇತತ್ಸತ್ಯಮೇತದುದ್ಧೃತ್ಯ ಭುಜಮುಚ್ಯತೇ ॥೨೮॥

ಪ್ರಾಪ್ತವ್ಯಂ ಯಾತನಾದುಃಖಮಶೈವೇನ ತನುವ್ಯಯೇ ।
ಕ್ರಿಮಿಭಿರ್ಯಾತನಾದುಃಖಂ ತಥಾ ನ ಪ್ರಾಪ್ಯತೇ ವಿಧೇ ॥೨೯॥

---

ಆಗುತ್ತದೆ. ಶಿವದ್ರೋಹಿಗಳಾದವರು ವೈದಿಕವಾದ ಕರ್ಮಗಳನ್ನು ಎಂದಿಗೂ ಮಾಡಲೇ ಬಾರದು. ಅವರಿಗೆ ವೈದಿಕಕರ್ಮಗಳಲ್ಲಿ ಅಧಿಕಾರವೇ ಇಲ್ಲ. ಅಯ್ಯ ವಿಧಿಯೇ, ಶಿವಭಕ್ತಿರಹಿತನಾದವನು ಹುಟ್ಟಿದ ವಂಶವು ಚಂಡಾಲವಂಶವೆಂಬುದು ಸತ್ಯವು. ನಾನು ಭುಜವನ್ನೆತ್ತಿ ಇದನ್ನು ಸತ್ಯವೆಂದು ಸಾಧಿಸುವೆನು ||೨೩-೨೪-೨೫||

ಎಲೈ ಬ್ರಹ್ಮನೇ, ಶಿವಭಕ್ತಿರಹಿತನಾದ ಬ್ರಾಹ್ಮಣನಿಗಿಂತಲೂ ಚಂಡಾಲ ವಂಶದಲ್ಲಿ ಹುಟ್ಟಿದವನೇ ಶ್ರೇಷ್ಠನು. ಶಿವದ್ರೋಹಿಯ ಜನ್ಮವೇ ವ್ಯರ್ಥವು. ಅವನ ಬಾಳಂತೂ ನಿಷ್ಪ್ರಯೋಜನವಾದದ್ದು. ಆ ಶಿವದ್ರೋಹಿಯ ಜೀವನಕ್ಕಿಂತಲೂ ಅಮೇಧ್ಯದಲ್ಲಿನ ಕ್ರಿಮಿಜನ್ಮವು ಉತ್ತಮವಾದುದು. ಇದು ಸತ್ಯ. ಧೈರ್ಯದಿಂದ ಭುಜವೆತ್ತಿ ಇದನ್ನು ಸತ್ಯವೆಂದು ಸಾರುತ್ತೇನೆ. ||೨೬-೨೭-೨೮||

ಬ್ರಹ್ಮದೇವನೇ, ಶಿವಭಕ್ತಿವಿರಹಿತನಾದವನು ಈ ಶರೀರನಾಶವಾದ ಮೇಲೆ ಅವಶ್ಯವಾಗಿ ಯಾತನಾರೂಪವಾದ ದುಃಖವನ್ನು ಅನುಭವಿಸಲೇಬೇಕು. ಅವರಿ ಗುಂಟಾಗುವ ನರಕಯಾತನೆಗಳ ದುಃಖವು ಕ್ರಿಮಿಗಳಿಗೂ ಅಷ್ಟು ಭಯಂಕರವಾಗಿ

ಅಶ್ವೈರ್ವೈಯಾರ್ತನಾ ಪ್ರಾಪ್ತಾ ಬಹುಭಿರ್ಯಮಮಂದಿರೇ ।
ನ ತೇಷಾಂ ಗಣನಾ ಕರ್ತುಂ ಶಕ್ಯತೇ ನಾತ್ರ ಸಂಶಯಃ ॥೩೦॥

ಬ್ರಾಹ್ಮಣಃ ಕ್ಷತ್ರಿಯೋ ವೈಶ್ಯಃ ಶೂದ್ರಶ್ಚಂಡಾಲ ಏವ ವಾ ।
ಶೈವೋ ಯದಿ ಭವೇದ್ಭಾಗ್ಯಾತ್ಸ ಪೂಜ್ಯಃ ಸರ್ವದಾ ವಿಧೇ ॥೩೧॥

ಸಂಪಾದನೀಯಾ ಯತ್ನೇನ ಶಿವಭಕ್ತಿಸ್ತಪೋಬಲಾತ್ ।
ಸೈವ ಭಕ್ತಿರ್ಮುಕ್ತಿದಾತ್ರೀ ಯಾ ಭಕ್ತಿಃ ಸ್ಯಾದನನ್ಯಗಾ ॥೩೨॥

ಕಿಮಶ್ವಮೇಧಯಾಗಾಂತ್ಯೈರ್ಯಾಗೈಃ ಸರ್ವಸ್ವದಕ್ಷಿಣೈಃ ।
ಯದಿ ನ ಸ್ಯಾನ್ಮಹಾದೇವೇ ಭಕ್ತಿರವ್ಯಭಿಚಾರಿಣೀ ॥೩೩॥

ಕಿಮುತ್ಕೃಷ್ಟಮಗೋದಾನೈರ್ಬಹುಭಿಃ ಸಾಂಗದಕ್ಷಿಣೈಃ ।
ಯದಿ ನ ಸ್ಯಾನ್ಮಹಾದೇವೇ ಭಕ್ತಿರವ್ಯಭಿಚಾರಿಣೀ ॥೩೪॥

ಕಿಮಶ್ವದಾನೈರಮಿತೈರ್ವಿಧೇ ಸರ್ವಸ್ವದಕ್ಷಿಣೈಃ ।
ಯದಿ ನ ಸ್ಯಾನ್ಮಹಾದೇವೇ ಭಕ್ತಿರವ್ಯಭಿಚಾರಿಣೀ

ದೊರೆಯಲಾರದು. ಯಮಪಟ್ಟಣದಲ್ಲಿ ಶಿವದ್ರೋಹಿಗಳೇಕರು ಹೊಂದಿದ ನರಕ ಯಾತನೆಗಳನ್ನು ಗಣನೆಮಾಡುವುದಕ್ಕೇ ಸಾಧ್ಯವಿಲ್ಲ. ಇದರಲ್ಲಿ ಸಂದೇಹಪಡಬೇಡ. ॥೨೯-೩೦॥



ಬ್ರಹ್ಮನೇ, ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಅಥವಾ ಚಂಡಾಲ ಇವರಾರೇ ಆಗಲಿ, ಭಾಗ್ಯವಶದಿಂದ ಅವರಿಗೆ ಶಿವಭಕ್ತಿಯೊದಗಿದರೆ ಅವರು ಪೂಜ್ಯರೇ ಸರಿ. ಆ ಶಿವಭಕ್ತಿಯನ್ನು ತಪಸ್ಸುಮಾಡಿಯೇ ಸಂಪಾದಿಸಬೇಕು. ಆ ಪರಶಿವನ ಭಕ್ತಿಯೇ ಅನ್ಯಾಸಕ್ತವಾಗದಿದ್ದಲ್ಲಿ ಅಂದರೆ ಇತರ ದೇವತೆಗಳಲ್ಲಿ ವಿನಿಯೋಗವಾಗ ದಿದ್ದರೆ ಅದು ಮೋಕ್ಷವನ್ನುಂಟುಮಾಡುವುದು. ॥೩೧-೩೨॥

ಅಯ್ಯಾ ಬ್ರಹ್ಮನೇ, ಮಹಾದೇವನಲ್ಲಿ ನಿಶ್ಚಲವಾದ ಭಕ್ತಿಯಿಲ್ಲದೇ ಸಕಲ ದಕ್ಷಿಣೆಗಳಿಂದಲೂ ಕೂಡಿರುವ ಅಶ್ವಮೇಧಯಾಗ, ಉತ್ತಮವಾದ ಅನೇಕ ಗೋದಾನ, ಕುದುರೇ ದಾನ, ಸುವರ್ಣದಾನ, ಉತ್ತಮಳಾದ ಕನ್ಯಾರತ್ನದಾನ,

ಕಿಮಶ್ವದಾನೈರಮಿತೈರ್ವಿಧೇ ಸರ್ವಸ್ವದಕ್ಷಿಣೈಃ ।
ಯದಿ ನ ಸ್ಯಾನ್ಮಹಾದೇವೇ ಭಕ್ತಿರವ್ಯಭಿಚಾರಿಣೀ

ಕಿಂ ಹೇಮದಾನೈರಮಿತೈರ್ವಿಧೇ ಸರ್ವಸ್ವದಕ್ಷಿಣೈಃ ।
ಯದಿ ನಸ್ಯಾನ್ಮಹಾದೇವೇ ಭಕ್ತಿರವ್ಯಭಿಚಾರಿಣೀ ॥೩೬॥

ಕಿಂ ಕನ್ಯಾರತ್ನದಾನೈಶ್ಚ ವಿಧೇ ಸರ್ವಸ್ವದಕ್ಷಿಣೈಃ ।
ಯದಿ ನ ಸ್ಯಾನ್ಮಹಾದೇವೇ ಭಕ್ತಿರವ್ಯಭಿಚಾರಿಣೀ ॥೩೭॥

ಕಿಂ ದಂತಿರತ್ನದಾನೈಶ್ಚ ವಿಧೇ ಸರ್ವಸ್ವದಕ್ಷಿಣೈಃ ।
ಯದಿ ನ ಸ್ಯಾನ್ಮಹಾದೇವೇ ಭಕ್ತಿರವ್ಯಭಿಚಾರಿಣೀ ॥೩೮॥

ಕಿಂ ಭೂಮಿರತ್ನದಾನೈಶ್ಚ ವಿಧೇ ಸರ್ವಸ್ವದಕ್ಷಿಣೈಃ ।
ಯದಿ ನ ಸ್ಯಾನ್ಮಹಾದೇವೇ ಭಕ್ತಿರವ್ಯಭಿಚಾರಿಣೀ ॥೩೯॥

ಕಿಮನ್ನದಾನೈಃ ಕಿಂ ತೀರ್ಥೈಃ ಕಿಂ ತಪೋಭಿರನುತ್ತಮೈಃ
ಯದಿ ನ ಸ್ಯಾನ್ಮಹಾದೇವೇ ಭಕ್ತಿರವ್ಯಭಿಚಾರಿಣೀ ॥೪೦॥

ಕಿಂ ಧರ್ಮೈರಮಿತೈರನ್ಯೈರ್ಬಹುಭಿಃ ಕಿಂ ಮದಾದಿಭಿಃ
ಯದಿ ನ ಸ್ಯಾನ್ಮಹಾದೇವೇ ಭಕ್ತಿರವ್ಯಭಿಚಾರಿಣೀ ॥೪೧॥

ಯೇನ ದತ್ತಂ ಬಿಲ್ವಪತ್ರಂ ಭಕ್ತ್ಯಾನನ್ಯಗಯಾ ಶಿವೇ ।
ಕೃತಾನಿ ತೇನ ವಿಧಿವನ್ಮಹಾದಾನಾನಿ ಕೋಟಿಶಃ ॥೪೨॥

ಯೇನ ಜಪ್ತಃ ಪ್ರಯತ್ನೇನ ಶಿವಪಂಚಾಕ್ಷರಃ ಪರಃ ।
ತೇನ ಯಾಗಾಃ ಕೃತಾಃ ಸಾಂಗಾಃ ಸರ್ವೇ ಸರ್ವಸ್ವದಕ್ಷಿಣಾಃ ॥೪೩॥

---

ಶ್ರೇಷ್ಠವಾದ ಗಜದಾನ, ಫಲವತ್ತಾದ ಭೂದಾನ, ಅನ್ನದಾನ ಇವುಗಳನ್ನು ಮಾಡುವುದರಿಂದ ಏನುತಾನೇ ಪ್ರಯೋಜನ! ಅಲ್ಲದೇ ಉತ್ತಮವಾದ ತಪಸ್ಸು, ತೀರ್ಥಯಾತ್ರೆ, ಇನ್ನೂ ಅನೇಕ ಧರ್ಮಗಳು ಮತ್ತು ನಮ್ಮಂತಹ ಜ್ಞಾನಿಗಳು ಇವೆಲ್ಲದರಿಂದಲೂ ಏನೂ ಪ್ರಯೋಜನವಿಲ್ಲ. ॥೩೩-೩೪-೩೫-೩೬-೩೭-೩೮-೩೯-೪೦-೪೧॥

ಮಂಗಳಾಂಗಿಯೇ, ಶಾಶ್ವತವಾದ ಭಕ್ತಿಯಿಂದ ನನಗೆ ಒಂದು ಬಿಲ್ವಪತ್ರೆಯನ್ನು ಪೂಜೆಮಾಡುವದೂ ಕೂಡ ವಿಧಿಪೂರ್ವಕವಾಗಿ ಕೋಟ್ಯಂತರ ಮಹಾದಾನ

ಯೇನ ಧ್ಯಾತೋ ಮಹಾದೇವಃ ಕ್ಷಣಂ ವಾ ಸಾವಧಾನತಃ ।
ತೇನ ತಪ್ತಾನಿ ಸರ್ವಾಣಿ ತಪಾಂಸಿ ವಿವಿಧಾನ್ಯಪಿ ॥೪೪॥

ಯೇನ ಮಸ್ತಕಮಾಪಾದಂ ಕೃತಮುದ್ಧೂಳನಂ ಮುದಾ ।
ತೇನ ಧರ್ಮಾಃ ಕೃತಾಃ ಸರ್ವೇ ಸರ್ವದಾ ಸಾವಧಾನತಃ ॥೪೫॥

ಸ ಭಾಗ್ಯವಾನ್ಸ ಪುಣ್ಯಾತ್ಮಾ ಸ ತಪೋನಿಧಿರುತ್ತಮಃ ।
ಯೋಽನನ್ಯಶರಣೋ ನಿತ್ಯಮರ್ಚಯೇತ್ಪಾರ್ವತೀಪತಿಂ ॥೪೬॥

ಸ ಕುಲೀನಃ ಸ ಪುಣ್ಯಾತ್ಮಾ ವಿದ್ಯಾವಾನ್ಗುಣಸಂಶ್ರಯಃ ।
ಯೋಽನನ್ಯಶರಣೋ ನಿತ್ಯಮರ್ಚಯೇತ್ಪಾರ್ವತೀಪತಿಂ ॥೪೭॥

ಸ ಸರ್ವಯೋಗನಿರತಃ ಸ ಸಮಾಧಿಯುತಃ ಸದಾ ।
ಯೋಽನನ್ಯಶರಣೋ ನಿತ್ಯಮರ್ಚಯೇತ್ಪಾರ್ವತೀಪತಿಂ ॥೪೮॥

ಸ ಸರ್ವಜ್ಞಃ ಸ ಪೂತಾತ್ಮಾ ಸ ತತ್ತ್ವಜ್ಞಃ ಸ ಧರ್ಮವಿತ್ ।
ಯೋಽನನ್ಯಶರಣೋ ನಿತ್ಯಮರ್ಚಯೇತ್ಪಾರ್ವತೀಪತಿಂ ॥೪೯॥

ಗಳನ್ನೇ ಮಾಡಿದಂತಾಗುವುದು. ಉತ್ತಮವಾದ ಶಿವಪಂಚಾಕ್ಷರ ಮಂತ್ರವನ್ನು ನಿಯಮಪೂರ್ವಕವಾಗಿ ಜಪಮಾಡುವವನು ದಕ್ಷಿಣಾಸಮೇತವಾದ ಎಲ್ಲಾ ಯಾಗಗಳನ್ನೂ ಸಾಂಗವಾಗಿ ಮಾಡಿದಂತೆಯೇ ಆಗುವುದು. ||೪೨-೪೩||

ಕ್ಷಣಕಾಲವಾದರೂ ಆ ಮಹಾದೇವನನ್ನು ಸಾವಧಾನಚಿತ್ತದಿಂದ ಧ್ಯಾನ ಮಾಡಿದವನು ವಿವಿಧವಾದ ಎಲ್ಲಾ ತಪಸ್ಸುಗಳನ್ನೂ ಮಾಡಿದಂತಾಗುವುದು. ಕಾಲಿನಿಂದ ತಲೆಯವರೆಗೆ ಭಸ್ಮವನ್ನು ಪ್ರೀತಿಯಿಂದ ಲೇಪನಮಾಡಿಕೊಂಡವನು ಯಾವಾಗಲೂ ಸಾವಧಾನನಾಗಿದ್ದು ಎಲ್ಲಾ ಧರ್ಮಗಳನ್ನೂ ಆಚರಿಸಿದಂತೆಯೇ ಸರಿ. ||೪೪-೪೫||

ಇನ್ನಾವ ದೇವತೆಗಳನ್ನೂ ಆಶ್ರಯಿಸದೇ, ನಿತ್ಯವೂ ಆ ಪಾರ್ವತೀರಮಣನನ್ನು ಭಕ್ತಿಯಿಂದ ಪೂಜೆಮಾಡುವವನೇ ಭಾಗ್ಯವಂತನೂ ಪುಣ್ಯಾತ್ಮನೂ, ತಪೋನಿಧಿಯೂ, ಉತ್ತಮನೂ, ಸತ್ಕುಲಪ್ರಸೂತನೂ, ವಿದ್ಯಾವಂತನೂ, ಗುಣಗಳಿಗೆ ಆಶ್ರಯನೂ, ಎಲ್ಲಾ ಯೋಗಗಳಲ್ಲಿಯೂ ನಿರತನೂ, ಸಮಾಧಿಸಂಪನ್ನನೂ,

ಸ ಬುದ್ಧಿಮಾನ್ಸ ನೀತಿಜ್ಞಃ ಸ ವಿದ್ವಾನ್ಪಂಡಿತೋತ್ತಮಃ ।
ಯೋಽನನ್ಯಶರಣೋ ನಿತ್ಯಮರ್ಚಯೇತ್ಪಾರ್ವತೀಪತಿಂ ॥೫೦॥

ಕೃತಾನಿ ಯೇನ ದಾನಾನಿ ಗ್ರಹಣೇ ಚಂದ್ರಸೂರ್ಯಯೋಃ ।
ತಸ್ಯೈವಾನನ್ಯಗಾ ಭಕ್ತಿರ್ಭವತಿ ಶ್ರೀಮಹೇಶ್ವರೇ ॥೫೧॥

ಕೃತಾ ಯೇನಾತಿಯತ್ನೇನ ಯಾಗಾಃ ಸರ್ವಸ್ವದಕ್ಷಿಣಾಃ ।
ತಸ್ಯೈವಾನನ್ಯಗಾ ಭಕ್ತಿರ್ಭವತಿ ಶ್ರೀಮಹೇಶ್ವರೇ ॥೫೨॥

ಯೇ ಸಂತತಂ ಭವಿಷ್ಯಂತಿ ದಗ್ಧಸಂಸಾರವಾಸನಾಃ ।
ತೇಷಾಮನನ್ಯಗಾ ಶುದ್ಧಾ ಶಿವೇ ಭಕ್ತಿಃ ಪ್ರಜಾಯತೇ ॥೫೩॥

ಪುರಾ ಗೋಕರ್ಣಮಾಶ್ರಿತ್ಯ ಕುಂಭಯೋನಿಸ್ತಪೋನಿಧಿಃ ।
ಶಿವಧ್ಯಾನರತೋ ಭೂತ್ವಾ ತಪಸ್ತೇಪೇಽತಿದುಷ್ಕರಂ ॥೫೪॥

ಭಸ್ಮೋದ್ಧೂಳಿತಸರ್ವಾಂಗಸ್ತ್ರಿಪುಂಡ್ರಾಂಕಿತಮಸ್ತಕಃ ।
ರುದ್ರಾಕ್ಷಮಾಲಾಭರಣೋ ಜಟಾಮಂಡಲಮಂಡಿತಃ ॥೫೫॥

---

ಸರ್ವಜ್ಞನೂ, ಪವಿತ್ರಾಂತರಂಗವುಳ್ಳವನೂ, ತತ್ತ್ವವನ್ನರಿತವನೂ, ಧರ್ಮಜ್ಞನೂ, ಬುದ್ಧಿವಂತನೂ, ನೀತಿಯನ್ನು ತಿಳಿದವನೂ, ವಿದ್ವಾಂಸನೂ ಮತ್ತು ಪಂಡಿತೋತ್ತಮನೂ ಎನಿಸುವನು. ॥೪೬-೪೭-೪೮-೪೯-೫೦॥

ಚಂದ್ರ ಮತ್ತು ಸೂರ್ಯರ ಗ್ರಹಣಕಾಲದಲ್ಲಿ ಮಹಾದಾನಮಾಡಿದವನೂ, ವಿಶೇಷ ನಿಯಮದಿಂದ ದಕ್ಷಿಣಾಯುಕ್ತವಾದ ಯಾಗಗಳನ್ನೆಲ್ಲಾ ನಡೆಸಿದವನೂ, ಆದ ವ್ಯಕ್ತಿಗೇ ಆ ಶ್ರೀಮಹೇಶ್ವರನಲ್ಲಿ ಶಾಶ್ವತವಾದ ಭಕ್ತಿಯುಂಟಾಗುವುದು. ॥೫೧-೫೨॥

ಈ ಸಂಸಾರ ಸಂಬಂಧವಾದ ವಾಸನೆಯನ್ನು ದೂರಮಾಡಿಕೊಂಡವರಿಗೇ ಪರಶಿವನಲ್ಲಿ ಶಾಶ್ವತವೂ ಶುದ್ಧವೂ ಆದ ಭಕ್ತಿಯುಂಟಾಗುತ್ತದೆ. ಹಿಂದೆ ಒಂದು ಕಾಲದಲ್ಲಿ ತಪೋನಿಧಿಯಾದ ಅಗಸ್ತ್ಯಮುನಿಯು ಗೋಕರ್ಣಕ್ಷೇತ್ರದಲ್ಲಿ ಶಿವಧ್ಯಾನ ತತ್ಪರನಾಗಿ ಘೋರವಾದ ತಪಸ್ಸಿಗೆ ಆರಂಭಿಸಿದನು. ॥೫೩-೫೪॥

ಸಮಸ್ತ ಅಂಗಾಂಗಗಳಿಗೆಲ್ಲಾ ವಿಭೂತಿಯನ್ನು ಲೇಪನಮಾಡಿಕೊಂಡು ಹಣೆಯಲ್ಲಿ ಭಸ್ಮತ್ರಿಪುಂಡ್ರವನ್ನು ಧರಿಸಿ, ರುದ್ರಾಕ್ಷಮಾಲೆಗಳಿಂದಲೂ ಜಡೆಗಳ

ಸ ದದರ್ಶ ದ್ವಿಜಂ ತತ್ರ ಭಸ್ಮೋದ್ಧೂಳಿತವಿಗ್ರಹಂ ।
ರುದ್ರಾಕ್ಷಮಾಲಾಭರಣಂ ಶಿವಪೂಜಾಪರಾಯಣಂ ॥೫೬॥

ತಂ ದೃಷ್ಟ್ವಾಽತೀವ ಸಂತುಷ್ಟಃ ಸ ವಿನಿರ್ದಿಷ್ಟವಿಷ್ಟರಃ ।
ಕುಶವಿಷ್ಟರಸಂವಿಷ್ಟಂ ವಿಶಿಷ್ಟಂ ಪ್ರಣನಾಮ ಚ ॥೫೭॥

ಅಗಸ್ತ್ಯಂ ಪ್ರಣತಂ ದೃಷ್ಟ್ವಾ ಸ ವಿಪ್ರಃ ಸತ್ವರಂ ವಿಧೇ ।
ಸಮ್ಯಕ್ಪ್ರದಕ್ಷಿಣೀಕೃತ್ಯ ಪ್ರಣನಾಮ ಪುನಃ ಪುನಃ ॥೫೮॥

ತತಃ ಸಮುಪವಿಷ್ಟಂ ತಂ ಕುಂಭಯೋನಿಂ ಮಹಾಮುನಿಂ ।
ಸಂಪೂಜ್ಯಾರ್ಘ್ಯಾದಿಭಿಃ ಸಮ್ಯಗುವಾಚ ಸ ಕೃತಾಂಜಲಿಃ ॥೫೯॥

॥ ದ್ವಿಜ ಉವಾಚ ॥

ಕುಂಭಯೋನೇ ಕೃತಾರ್ಥೋಽಸ್ಮಿ ತವ ಪಾದಾಬ್ಜದರ್ಶನಾತ್ ।
ಭವತಃ ಶಿವಭಕ್ತಸ್ಯ ದರ್ಶನಂ ದುರ್ಲಭಂ ಮಮ ॥೬೦॥

ಸಮೂಹದಿಂದಲೂ ಅಲಂಕೃತನಾಗಿದ್ದ ಅಗಸ್ತ್ಯಮಹರ್ಷಿಯು ತನ್ನಂತೆಯೇ ಭಸ್ಮರುದ್ರಾಕ್ಷಗಳಿಂದಲಂಕೃತನಾಗಿ ಶಿವಪೂಜಾನಿರತನಾಗಿದ್ದ ಒಬ್ಬ ಬ್ರಾಹ್ಮಣನನ್ನು ಕಂಡನು ॥೫೫-೫೬॥

ಹಾಗೆ ಶೈವಧರ್ಮದಲ್ಲಿದ್ದ ಬ್ರಾಹ್ಮಣನನ್ನು ನೋಡಿ ಅತ್ಯಂತ ಸಂತುಷ್ಟನಾಗಿ ಗೊತ್ತಾದ ಒಂದು ದರ್ಭೆಯ ಆಸನದಲ್ಲಿ ಕುಳಿತಿರುವ ಶ್ರೇಷ್ಠನಾದ ಆತನಿಗೆ ನಮಸ್ಕಾರಮಾಡಿದನು. ಅಯ್ಯ ಬ್ರಹ್ಮನೇ, ಹೀಗೆ ಅಗಸ್ತ್ಯಮುನಿಯು ತನಗೆ ನಮಸ್ಕಾರಮಾಡಿದ್ದನ್ನು ನೋಡಿ, ಆ ಬ್ರಾಹ್ಮಣನು ಕೂಡಲೇ ಎದ್ದು ಭಕ್ತಿಯಿಂದ ಪ್ರದಕ್ಷಿಣೆಮಾಡಿ ಅವನಿಗೆ (ಅಗಸ್ತ್ಯಮುನಿಗೆ) ತಾನೂ ನಮಸ್ಕಾರ ಮಾಡಿದನು. ॥೫೭-೫೮॥

ಹೀಗೆ ನಮಸ್ಕರಿಸಿ ಕುಳಿತುಕೊಂಡು ಅಗಸ್ತ್ಯಮಹಾಮುನಿಯನ್ನು ಅರ್ಘ್ಯ, ಪಾದ್ಯ, ಆಚಮನಾದಿಗಳಿಂದ ಸತ್ಕರಿಸಿ ಕೈಮುಗಿದುಕೊಂಡು ಹೀಗೆ ವಿಜ್ಞಾಪಿಸಿ ಕೊಂಡನು. ॥೫೯॥

"ಓ ಅಗಸ್ತ್ಯಮುನಿಯೇ! ನಿಮ್ಮ ಪಾದಕಮಲಸಂದರ್ಶನದಿಂದ ಈಗ ನಾನು ಕೃತಕೃತ್ಯನಾಗಿರುವೆನು ಶಿವಧರ್ಮಾನುಯಾಯಿಗಳಲ್ಲಿ ಅಗ್ರೇಸರರಾದ ನಿಮ್ಮ

ಸೂರ್ಯಗ್ರಹಣಕಾಲೋಽಯಂ ಶ್ರಾದ್ಧಕಾಲೋಽಯಮೇವ ಹಿ
ಯತೋಽದ್ಯ ಶಿವಭಕ್ತಸ್ಯ ಸಂಗಮೋಽಭೂನ್ಮದಾಶ್ರಮೇ ॥೬೧॥

॥ ವಿಷ್ಣುರುವಾಚ ॥

ಇತ್ಯುಕ್ತ್ವಾ ಪಿತೃತೃಪ್ತ್ಯರ್ಥಂ ಚಕಾರ ಶ್ರಾದ್ಧಮಾದರಾತ್ ।
ತತಃ ಪರಮುವಾಚಾಯಂ ವದ ಧರ್ಮಾನಿತಿ ದ್ವಿಜಃ ॥೬೨॥

॥ ಅಗಸ್ತ್ಯ ಉವಾಚ ॥

ಶಿವಭಕ್ತೋಽಸಿ ಧರ್ಮಜ್ಞಃ ಕೃತಾರ್ಥೋಽಸಿ ಶಿವವ್ರತ ।
ಧರ್ಮಾಃ ಸರ್ವೇಽಪಿ ವಿಜ್ಞಾತಾಸ್ತ್ವಯಾ ನಾತ್ರ ತು ಸಂಶಯಃ ॥೬೩॥

ತ್ವದಾಜ್ಞಯಾ ಶಾಸ್ತ್ರದೃಷ್ಟಾಂಸ್ತಥಾಪಿ ಮುನಿಸತ್ತಮ ।
ದ್ವಿಜಧರ್ಮಾನಹಂ ವಕ್ಷ್ಯೇ ಶೃಣು ಯತ್ನೇನ ಸಾದರಂ ॥೬೪॥

---

ಸಂದರ್ಶನವು ನನಗೆ ನಿಜವಾಗಿ ದುರ್ಲಭವು. ತಮ್ಮಂತಹ ಶೈವಶ್ರೇಷ್ಠರ ಸಂದರ್ಶನವು ಈಗತಾನೇ ನನ್ನ ಆಶ್ರಮದಲ್ಲಾದುದರಿಂದ ಇದೇ ಸೂರ್ಯಗ್ರಹಣಕಾಲ. ಮತ್ತು ಶ್ರಾದ್ಧಕಾಲವೂ ಆಗಿರುವುದು. ನಿಮ್ಮ ದರ್ಶನವಾದ ಈ ಕಾಲವೇ ಪರಮ ಪವಿತ್ರವಾದುದು.'' ॥೬೦-೬೧॥

ಆ ಬ್ರಾಹ್ಮಣನು ಹೀಗೆ ನುಡಿದು ತನ್ನ ಪಿತೃದೇವತೆಗಳ ತೃಪ್ತಿಗೋಸ್ಕರ ಆದರದಿಂದ ಅಲ್ಲಿಯೇ ಶ್ರಾದ್ಧವನ್ನು ಮಾಡಿ ಅನಂತರ ಶೈವಧರ್ಮಗಳನ್ನು ತಿಳಿಸಬೇಕೆಂದು ಅಗಸ್ತ್ಯಮುನಿಯನ್ನು ಮತ್ತೆ ಪ್ರಾರ್ಥಿಸಿದನು. ಆಗ ಅಗಸ್ತ್ಯಮಹಾಮುನಿಯು ಜಿಜ್ಞಾಸುವಾದ ಆ ವಿಪ್ರನಿಗೆ ಈ ರೀತಿ ಶಿವಧರ್ಮಗಳನ್ನು ನಿರೂಪಿಸತೊಡಗಿದನು. ॥೬೨॥

ಸಾಧುವಾದ ಸದಾಶಿವಭಕ್ತನೇ! ನೀನು ಸರ್ವಜ್ಞನೂ ಕೃತಾರ್ಥನೂ ಆಗಿರುವೆ. ಶಿವಸಂಬಂಧವಾದ ವ್ರತಗಳಲ್ಲೇ ನಿರತನಾಗಿರುವ ಮಹಾತ್ಮನೇ, ನಿನಗೆ ವಸ್ತುತಃ ಎಲ್ಲಾ ಧರ್ಮಗಳೂ ತಿಳಿದಿರುವುದರಲ್ಲಿ ಸಂದೇಹವಿಲ್ಲ. ಆದರೂ ನಿನ್ನ ಅಪ್ಪಣೆಯಿಂದ ಶಾಸ್ತ್ರಗಳಲ್ಲಿ ಮಾತ್ರ ಗೋಚರವಾದ ದ್ವಿಜನ ಧರ್ಮಗಳನ್ನು ಈಗ ನಾನು ಬೋಧಿಸುವೆನು. ಆದರದಿಂದ ಲಾಲಿಸುವನಾಗು. ದ್ವಿಜನಾದವನು ಬೆಳಗಿನ

ಉತ್ಥಾಯ ಪಶ್ಚಿಮೇ ಯಾಮೇ ಕೃತ್ವಾ ಶೌಚಾದಿಕಂ ತತಃ ।
ಸ್ನಾನಂ ಕಾರ್ಯಂ ಪ್ರಯತ್ನೇನ ಶಿವಲಿಂಗಸ್ಯ ಸಂನಿಧೌ ॥೬೫॥

ಪರಿಧಾಯ ತತೋ ವಸ್ತ್ರಮುದ್ಧೂಲ್ಯಾಂಗಾನಿ ಭಸ್ಮನಾ ।
ತ್ರಿಪುಂಡ್ರಧಾರಣಂ ಕಾರ್ಯಂ ತತೋ ರುದ್ರಾಕ್ಷಧಾರಣಂ ॥೬೬॥

ಸಂಧ್ಯಾ ಕಾರ್ಯಾ ತತೋ ಯತ್ನಾದ್ದೇವೀ ಜಪ್ಯಾ ತತಃ ಪರಂ ।
ಶಿವಲಿಂಗಾರ್ಚನಂ ಕಾರ್ಯಂ ತತೋ ಬಿಲ್ವಾದಿಸಾಧನೈಃ ॥೬೭॥

ಜಪನೀಯಸ್ತತಃ ಸಮ್ಯಕ್ ಶ್ರೌತಃ ಶಿವಷಡಕ್ಷರಃ ।
ತತೋ ರುದ್ರಜಪಃ ಕಾರ್ಯಃ ಶಿವಧ್ಯಾನಪುರಃಸರಂ ॥೬೮॥

ಪ್ರದಕ್ಷಿಣ ನಮಸ್ಕಾರಾನ್ತತಃ ಕಾರ್ಯಾ ಪ್ರಯತ್ನತಃ ।
ಪೂಜಾನಿವೇದನಂ ಕಾರ್ಯಂ ಶಂಕರಾಯ ತತಃ ಪರಂ ॥೬೯॥

ಹಿಂದಿನ ಜಾವದಲ್ಲಿ ಅಂದರೆ ಉಷಃಕಾಲದಲ್ಲಿ ಎದ್ದು ಶೌಚಾದಿಕರ್ಮಗಳನ್ನು ಮುಗಿಸಿಕೊಂಡು ಶಿವಲಿಂಗದ ಸನ್ನಿಧಿಯಲ್ಲಿ ನಿಯಮದಿಂದ ಸ್ನಾನಮಾಡಬೇಕು. ॥೬೩-೬೪-೬೫॥

ಆಮೇಲೆ ಶುಭ್ರವಸ್ತ್ರಗಳನ್ನು ಧರಿಸಿಕೊಂಡು, ಮೈಗೆಲ್ಲಾ ವಿಭೂತಿಲೇಪನ ಮಾಡಿಕೊಳ್ಳಬೇಕು. ಅನಂತರ ಭಸ್ಮತ್ರಿಪುಂಡ್ರಧಾರಣ ಮತ್ತು ರುದ್ರಾಕ್ಷಧಾರಣಗಳನ್ನು ನೆರವೇರಿಸಿ ನಿಯಮದಿಂದ ಸಂಧ್ಯಾವಂದನೆಯನ್ನು ಮಾಡಿ ಗಾಯತ್ರೀ ಮಂತ್ರವನ್ನು ಜಪಿಸಬೇಕು. ಆಮೇಲೆ ಭಕ್ತಿಯಿಂದ ಬಿಲ್ವದಳ ಮುಂತಾದ ಸಾಮಗ್ರಿಗಳಿಂದ ಶಿವಲಿಂಗವನ್ನು ಪೂಜಿಸಬೇಕು. ಅನಂತರ ಶ್ರುತಿಪ್ರಸಿದ್ಧವಾದ ಮತ್ತು ಪವಿತ್ರವಾದ ಶಿವಷಡಕ್ಷರಮಂತ್ರ ಪುರಶ್ಚರಣೆ ಮಾಡಬೇಕು. ಆದಾದಮೇಲೆ ಶಿವಧ್ಯಾನಪುರಸ್ಸರವಾಗಿ ರುದ್ರಮಂತ್ರವನ್ನು ಪಾರಾಯಣಮಾಡಬೇಕು. ಹಾಗೆಯೇ ಪರಶಿವನಿಗೆ ಪ್ರದಕ್ಷಿಣ ನಮಸ್ಕಾರಗಳನ್ನು ನಿಯಮದಿಂದ ನೆರವೇರಿಸಬೇಕು. ತಾನು ಪೂಜೆಮಾಡಿದ್ದನ್ನು ಕೊನೆಯಲ್ಲಿ ಭಗವಂತನಿಗೆ ನಿವೇದನಮಾಡಬೇಕು,'' ಎಂಬುದಾಗಿ ಅಗಸ್ತ್ಯರು ಉಪದೇಶಮಾಡಿದರು. ॥೬೬-೬೭-೬೮-೬೯॥

|| ವಿಷ್ಣುರುವಾಚ ||

ಇತ್ಯಗಸ್ತ್ಯವಚಃ ಶ್ರುತ್ವಾ ಪ್ರಣಿಪತ್ಯ ಮುನಿಂ ದ್ವಿಜಃ ।
ಪ್ರದಕ್ಷಿಣನಮಸ್ಕಾರವಿಧಿಂ ಬ್ರೂಹೀತಿ ಚಾಬ್ರವೀತ್ ॥೨೦॥

|| ಅಗಸ್ತ್ಯ ಉವಾಚ ||

ಪ್ರದಕ್ಷಿಣವಿಧಿಂ ವಕ್ಷ್ಯೇ ಶೃಣು ಸಮ್ಯಗ್ದ್ವಿಜೋತ್ತಮ ।
ನಮಸ್ಕಾರವಿಧಿಂ ಚಾತ್ರ ವಕ್ಷ್ಯೇ ವೈದಿಕಮಾರ್ಗತಃ ॥೨೧॥

ಪ್ರದಕ್ಷಿಣಪ್ರಕಾರಸ್ತು ದ್ವಿವಿಧೋ ವೇದಸಂಮತಃ ।
ಸವ್ಯಾಪಸವ್ಯಃ ಸವ್ಯಶ್ಚ ತತ್ರಾದ್ಯ ವಿಧಿರುಚ್ಯತೇ ॥೨೨॥

ವೃಷಂ ಚಂಡಂ ವೃಷಂ ಚೈವ ಸೋಮಸೂತ್ರಂ ಪುನರ್ವೃಷಂ ।
ಚಂಡಂ ಚ ಸೋಮಸೂತ್ರಂ ಚ ಪುನಶ್ಚಂಡಂ ಪುನರ್ವೃಷಂ ॥೨೩॥

ಏತತ್ಪ್ರದಕ್ಷಿಣೋಕ್ತಾನಿ ಸ್ಥಾನಾನಿ ನವ ಸತ್ತಮ ।
ನ ತಾನ್ಯುಲ್ಲಂಘನೀಯಾನಿ ವೇದಮಾರ್ಗರತೈರ್ದ್ವಿಜೈಃ ॥೨೪॥

ಆ ಬ್ರಾಹ್ಮಣನು ಅಗಸ್ತ್ಯಮುನಿಯ ಮಾತುಗಳನ್ನು ಕೇಳಿ, ಮತ್ತೆ ಅವನಿಗೆ ನಮಸ್ಕಾರಮಾಡಿ, ಪರಮೇಶ್ವರನಿಗೆ ಪ್ರದಕ್ಷಿಣೆ ಮತ್ತು ನಮಸ್ಕಾರ ಇವುಗಳನ್ನಾಚರಿಸುವ ವಿಧಿಯನ್ನು ಹೇಳಬೇಕೆಂದು ಪುನಃ ಪ್ರಾರ್ಥಿಸಲಾಗಿ ಅಗಸ್ತ್ಯರು ಮತ್ತೆ ಹೀಗೆ ನುಡಿದರು ॥೨೦॥

“ದ್ವಿಜಶ್ರೇಷ್ಠನೇ, ಪ್ರದಕ್ಷಿಣೆ ಮತ್ತು ನಮಸ್ಕಾರಮಾಡುವ ವಿಧಿಯನ್ನು ನಾನು ವೈದಿಕಮಾರ್ಗವನ್ನನುಸರಿಸಿ ಹೇಳುವೆನು ಕೇಳು. ವೇದಸಂಮತವಾದ ಪ್ರದಕ್ಷಿಣವಿಧಿಯು ಸವ್ಯ (ಬಲ) ಅಪಸವ್ಯ (ಎಡಮುಖವಾಗಿ) ಎಂದು ಎರಡು ಬಗೆಯಲ್ಲಿದೆ. ಅದರಲ್ಲಿ ಮೊದಲು ಸವ್ಯ ವಿಧಿಯನ್ನು ಹೇಳುತ್ತೇನೆ, ಕೇಳು.” ॥೨೧-೨೨॥

ವೃಷ, ಚಂಡ, ವೃಷ, ಸೋಮಸೂತ್ರ, ಪುನಃ ವೃಷ, ಚಂಡ, ಸೋಮಸೂತ್ರ, ಪುನಃ ಚಂಡ ಮತ್ತು ವೃಷ ಈ ಒಂಬತ್ತು ಸ್ಥಾನಗಳನ್ನನುಸರಿಸಿ ಪ್ರದಕ್ಷಿಣೆ ಮಾಡುವುದು ಉಚಿತವಾದುದೆಂದು ಹೇಳಲ್ಪಟ್ಟಿದೆ. ವೇದಮಾರ್ಗದಲ್ಲಿ ನಿರತರಾ

ಪ್ರಾಗ್ದ್ವಾರಂ ದೇವದೇವಸ್ಯ ವೃಷಸ್ಥಾನಂ ಪ್ರಕೀರ್ತಿತಂ ।
ವೃಷಸ್ಯ ತು ಮುಖಂ ಜ್ಞೇಯಂ ಶಿವಾಭಿಮುಖಮುತ್ತಮಂ ॥೭೫॥

ದೇವಸ್ಯ ನೈಋತಂ ಸ್ಥಾನಂ ಚಂಡಸ್ಥಾನಂ ಪ್ರಕೀರ್ತಿತಂ ।
ಪಶ್ಚಿಮಾಭಿಮುಖೇ ಲಿಂಗೇ ಸ್ಥಾನಮೇತದುದೀರಿತಂ ॥೭೬॥

ಪ್ರಾಙ್ಮುಖೇ ಶಿವಲಿಂಗೇ ತು ಚಂಡಸ್ಥಾನಂ ದ್ವಿಜೋತ್ತಮ ।
ಈಶಾನಭಾಗೇ ವಿಜ್ಞೇಯಮನ್ಯತ್ರತು ನ ಸರ್ವಥಾ ॥೭೭॥

ಮಹೇಶಸ್ಯೋತ್ತರಂ ಸ್ಥಾನಂ ಸೋಮಸೂತ್ರಸ್ಥಲಂ ಸ್ಮೃತಂ ।
ಪೂರ್ವಾಭಿಮುಖಲಿಂಗೇ ತು ನಿಯಮೋಽಯಂ ಪ್ರಕೀರ್ತಿತಃ ॥೭೮॥

ಪಶ್ಚಿಮಾಭಿಮುಖೇ ಲಿಂಗೇ ಸೋಮಸೂತ್ರಂ ಶಿವಸ್ಯ ತು ।
ಪೂರ್ವಸ್ಥಾನಂ ತು ವಿಜ್ಞೇಯಮನ್ಯತ್ರ ತು ನ ಸರ್ವಥಾ ॥೭೯॥

ದವರು ಅದನ್ನು ಎಂದಿಗೂ ಮರೆಯಬಾರದು. ಇದನ್ನು ವಿವರಿಸಿ ಹೇಳುವೆನು ಕೇಳು. ॥೭೩-೭೪॥

ದೇವದೇವನಾದ ಆ ಮಹಾದೇವನ ದೇವಾಲಯದ ಪವಿತ್ರವಾದ ಪೂರ್ವ ದ್ವಾರವು ವೃಷಸ್ಥಾನವೆನಿಸುವುದು. ವೃಷಭದ ಮುಖವು ಶಿವನಿಗೆ ಅಭಿಮುಖ ವಾಗಿದ್ದರೆ ಅದು ಉತ್ತಮವೆನಿಸುವುದು. ದೇವನಿರುವ ಪ್ರದೇಶದಿಂದ ನೈರುತ್ಯದಿಕ್ಕು ಚಂಡಸ್ಥಾನವೆಂದು ಹೇಳಲ್ಪಡುವುದು. ಶಿವಲಿಂಗವು ಪಶ್ಚಿಮದಿಕ್ಕಿಗೆ ಅಭಿಮುಖ ವಾಗಿದ್ದಾಗ ಈ ದಿಕ್ಕು ಚಂಡಸ್ಥಾನವೆಂದು ಹೇಳಲ್ಪಟ್ಟಿದೆ. ॥೭೫-೭೬॥

ಶಿವಲಿಂಗವು ಪೂರ್ವದಿಕ್ಕಿಗೆ ಅಭಿಮುಖವಾಗಿದ್ದರೆ, ಆಗ ಈಶಾನ್ಯಭಾಗವು ಚಂಡಸ್ಥಾನವೆಂದು ಹೇಳಲ್ಪಡುವುದು. ನೈಋತ್ಯ ಮತ್ತು ಈಶಾನ್ಯ ಇವುಗಳನ್ನು ಬಿಟ್ಟರೆ ಮತ್ತಾವುದೂ ಚಂಡಸ್ಥಾನವೆಂದು ಹೇಳಲ್ಪಟ್ಟಿಲ್ಲ. ಮಹೇಶ್ವರನ ಉತ್ತರ ಭಾಗವು ಸೋಮಸೂತ್ರಸ್ಥಳವೆಂದು ಉಕ್ತವಾಗಿದೆ. ಶಿವಲಿಂಗವು ಪೂರ್ವದಿಕ್ಕಿಗೆ ಅಭಿಮುಖವಾಗಿದ್ದಾಗ ಈ ನಿಯಮವು ಹೇಳಲ್ಪಟ್ಟಿದೆ. ॥೭೭-೭೮॥

ಶಿವಲಿಂಗವು ಪಶ್ಚಿಮದಿಕ್ಕಿಗೆ ಅಭಿಮುಖವಾಗಿದ್ದಾಗ ಶಿವನಿಗೆ ಪೂರ್ವಸ್ಥಾನವು ಸೋಮಸೂತ್ರಸ್ಥಳವೆಂದು ತಿಳಿಯಬೇಕು. ಇತರ ಕಡೆ ಆ ಸೋಮಸೂತ್ರಪ್ರದೇಶ

ತ್ರೀಣ್ಯೇತಾನಿ ಸ್ಥಲಾನ್ಯೇವ ನವಸ್ಥಾನಾನಿ ಸತ್ತಮ ।
ಏತೇಷ್ವೇವ ತ್ರಿರಾವೃತ್ತ್ಯಾ ನವಸ್ಥಾನಪ್ರಕಲ್ಪನಂ ॥೮೦॥

ತೇಷ್ವೇಕೈಕಮಾವೃತ್ತ್ಯಾ ತಾನ್ಯೇವಾತ್ರ ಪುನಃ ಪುನಃ ।
ಯಸ್ಮಾದಾವರ್ತನೀಯಾನಿ ನವತಾಂ ಯಾಂತಿ ನಾನ್ಯತಃ ॥೮೧॥

ಉಪವಿಶ್ಯ ವೃಷಸ್ಥಾನೇ ಸಂಕಲ್ಪ್ಯ ವಿಧಿಪೂರ್ವಕಂ ।
ಕೃತಾಂಜಲಿಪುಟೋ ಮೌನೀ ಚಂಡಸ್ಥಾನಂ ವ್ರಜೇತ್ತತಃ ॥೮೨॥

ಪುನರ್ವೃಷೇಶಮಾಗತ್ಯ ಸೋಮಸೂತ್ರಂ ವ್ರಜೇತ್ತತಃ ।
ಪುನರ್ವೃಷೇಶಮಾಗತ್ಯ ಚಂಡಸ್ಥಾನಂ ವ್ರಜೇತ್ತತಃ ॥೮೩॥

ತತೋ ವೃಷೇಶಮಾಸಾದ್ಯ ಸೋಮಸೂತ್ರಂ ವ್ರಜೇದ್ದ್ವಿಜಃ ।
ಸೋಮಸೂತ್ರಮನುಲ್ಲಂಘ್ಯ ಚಂಡಸ್ಥಾನಾದ್ವೃಷಂ ವ್ರಜೇತ್ ॥೮೪॥

ಸ್ಥಾನಾನ್ಯೇವಂ ಸಮಾವೃತ್ಯ ವೃಷಭೇಶಂ ಪುನರ್ಯದಾ ।
ಪ್ರಾಪ್ನುಯಾನ್ನಿಯತೋ ಭೂತ್ವಾ ತದೇಕಃ ಸ್ಯಾತ್ಪ್ರದಕ್ಷಿಣಂ ॥೮೫॥

ವಿದ್ವಾಂಸರಲ್ಲಿ ಶ್ರೇಷ್ಠನೇ! ಈ ಮೂರು ಪ್ರದೇಶಗಳೇ ಕ್ರಮವಾಗಿ ಮೂರುಬಾರಿ ಆವೃತ್ತಿಯಾಗುವುದರಿಂದ ಒಂಬತ್ತುಸ್ಥಾನಗಳೆಂದು ಹೇಳಲ್ಪಟ್ಟಿವೆ. ||೭೯-೮೦||

ಅವುಗಳಲ್ಲಿ ಒಂದೊಂದು ಸ್ಥಳದಲ್ಲಿ ಕುಳಿತು ಆವೃತ್ತಿಮಾಡುವುದರಿಂದ ಪುನಃ ಪುನಃ ಆ ಆವೃತ್ತಿಯು ಒಂಬತ್ತಾಗುವುದು. ಅದರ ಕ್ರಮವೇನೆಂದರೆ ಮೊದಲು ವಿಧಿಪೂರ್ವಕವಾಗಿ ವೃಷಸ್ಥಾನದಲ್ಲಿ ಸಂಕಲ್ಪಮಾಡಿ, ಕೈಮುಗಿದುಕೊಂಡು ಅನಂತರ ಮೌನವಿದ್ದು ಚಂಡಸ್ಥಾನಕ್ಕೆ ಹೋಗಬೇಕು. ||೮೧-೮೨||

ಅಲ್ಲಿಂದ ಪುನಃ ವೃಷಭೇಶ್ವರನ ಸ್ಥಾನಕ್ಕೆ ಬಂದು ಸೋಮಸೂತ್ರಸ್ಥಾನಕ್ಕೆ ಹೋಗಬೇಕು. ಆಮೇಲೆ ವೃಷಸ್ಥಾನಕ್ಕೆ ಬಂದು ಅನಂತರ ಚಂಡಸ್ಥಾನಕ್ಕೆ ಹೋಗಬೇಕು. ಆದಾದಮೇಲೆ ವೃಷೇಶನನು ಹೊಂದವೇ ಬ್ರಾಹ್ಮಣನಾದವನು ಸೋಮಸೂತ್ರಕ್ಕೆ ಹೋಗಬೇಕು. ಸೋಮಸೂತ್ರ ಪ್ರದಕ್ಷಿಣೆಯನ್ನು ಮೀರದೇ ಚಂಡಸ್ಥಾನಕ್ಕೆ ಹೋಗಿ ಅಲ್ಲಿಂದ ವೃಷಸ್ಥಾನಕ್ಕೆ ಹೋಗಬೇಕು. ||೮೩-೮೪||

ಹೀಗೆ ಎಲ್ಲಾ ಸ್ಥಾನಗಳನ್ನೂ ಸುತ್ತಿಕೊಂಡು ತಿರುಗಿ ವೃಷಭೇಶ್ವರನ ಸ್ಥಾನಕ್ಕೆ ಬಂದನಾದರೆ ಆಗ ನಿಯಮದಿಂದ ಒಂದು ಪ್ರದಕ್ಷಿಣೆಮಾಡಿದ ಹಾಗಾ

ಸವ್ಯಾಪಸವ್ಯರೂಪೇಽಸ್ಮಿನ್ವೈದಿಕೇ ತು ಪ್ರದಕ್ಷಿಣೇ ।
ಪ್ರದಕ್ಷಿಣವಿಧಿಃ ಪ್ರೋಕ್ತೋ ಜಾಬಾಲ್ಯೆರಯಮೇವ ಹಿ ॥೮೬॥

ಏವ ಪ್ರದಕ್ಷಿಣಂ ಕಾರ್ಯಂ ಪ್ರತ್ಯಹಂ ಶಂಕರಾಲಯೇ ।
ಯದ್ಯತ್ರ ಮೋಹಾದ್ವ್ಯತ್ಯಾಸಸ್ತದಾ ಸ್ಯಾದನ್ಯಥಾ ಧ್ರುವಂ ॥೮೭॥

ದಿವಾಸಂಧ್ಯಾಸು ಕರ್ತವ್ಯಮೇವಮೇವ ಪ್ರದಕ್ಷಿಣಂ ।
ಇದಂ ಪ್ರದಕ್ಷಿಣಂ ನಿತ್ಯಂ ದ್ವಿಜಮಾತ್ರಸ್ಯ ಸತ್ತಮ ॥೮೮॥

ಪ್ರದಕ್ಷಿಣತ್ರಯಂ ಕಾರ್ಯಮೇವಂ ಪಂಚದಶಾಥವಾ ।
ಅಷ್ಟೌ ದ್ವಾದಶ ವಾ ಕಾರ್ಯಾಣ್ಯಧಿಕಾನ್ಯಪಿ ಶಕ್ತಿತಃ ॥೮೯॥

ಸವ್ಯಂ ಸವ್ಯೇನ ಕರ್ತವ್ಯಂ ತದಪಿ ಶ್ರುತಿಚೋದಿತಂ ।
ತದಪಿ ದ್ವಿಜಮಾತ್ರಸ್ಯ ನಿತ್ಯಮೇವ ನ ಸಂಶಯಃ ॥೯೦॥

ಶಕ್ತೈಸ್ತು ಸರ್ವದಾ ಕಾರ್ಯಂ ಸವ್ಯಾಸವ್ಯಪ್ರದಕ್ಷಿಣಂ ।
ಇದಂ ಕಾರ್ಯಂ ಪ್ರದೋಷೇಷು ಶಕ್ತಿಹೀನೈರಪಿ ದ್ವಿಜ ॥೯೧॥

ಯಿತು ಸವ್ಯ ಮತ್ತು ಅಪಸವ್ಯರೂಪವಾದ ಈ ಒಂದು ಪ್ರದಕ್ಷಿಣೆಯೇ ವೈದಿಕವಾದ ಪ್ರದಕ್ಷಿಣೆಯೆಂದು ಜಾಬಾಲಮುನಿಗಳು ಸ್ಪಷ್ಟವಾಗಿ ಹೇಳಿರುವರು. ಹೀಗೆ ಪ್ರತಿ ನಿತ್ಯವೂ ಶಂಕರನ ದೇವಾಲಯದಲ್ಲಿ ತಪ್ಪದೆ ಪ್ರದಕ್ಷಿಣೆ ಮಾಡಬೇಕು. ಒಂದುವೇಳೆ ಈ ವಿಧಿಯು ಅಜ್ಞಾನದಿಂದ ವ್ಯತ್ಯಾಸವಾದರೆ ಅದರಿಂದ ವಿಪರೀತವಾದ (ವಿರುದ್ಧ ವಾದ) ಫಲವುಂಟಾಗುವುದು. ॥೮೫-೮೬-೮೭॥

ಹಗಲು ಮತ್ತು ಸಾಯಂಕಾಲಗಳಲ್ಲಿ ಹೀಗೆಯೇ ಪ್ರದಕ್ಷಿಣೆ ಮಾಡಬೇಕು. ಹೀಗೆ ಮಾಡುವ ಶಾಸ್ತ್ರೀಯ ಪ್ರದಕ್ಷಿಣೆಯು ಬ್ರಾಹ್ಮಣನಿಗೆ ಮಾತ್ರ ಹೇಳಲ್ಪಟ್ಟಿದೆ. ಈ ಕ್ರಮದಿಂದ ಬ್ರಾಹ್ಮಣನು ಪ್ರತಿದಿನವೂ ಮೂರು, ಐದು, ಎಂಟು, ಹತ್ತು, ಹನ್ನೆರಡು, ಅಥವಾ ಅದಕ್ಕೆ ಹೆಚ್ಚು ಈರೀತಿ ಅವನ ಶಕ್ತ್ಯನುಸಾರವಾಗಿ ಪ್ರದಕ್ಷಿಣೆ ಮಾಡಬಹುದು. ಸವ್ಯಪ್ರದಕ್ಷಿಣೆಯನ್ನು ಬಲಭಾಗದಿಂದಲೇ ಮಾಡಬೇಕು. ವೇದ ವಿಹಿತವಾದ ಈ ಪ್ರದಕ್ಷಿಣೆಯು ಬ್ರಾಹ್ಮಣನಿಗೆ ಮಾತ್ರ ಉಕ್ತವಾಗಿರುವುದು. ಇದರಲ್ಲಿ ಸಂಶಯವಿಲ್ಲ. ॥೮೮-೮೯-೯೦॥

ಶಕ್ತಿಯುಳ್ಳವರು ಯಾವಾಗಲೂ ಸವ್ಯಾಸವ್ಯ ಪ್ರದಕ್ಷಿಣೆಯನ್ನು ಮಾಡಬೇಕು ಶಕ್ತಿಹೀನರಾಗಿದ್ದರೂ ಇದನ್ನು ಪ್ರದೋಷಕಾಲದಲ್ಲಿ ಹೇಗಾದರೂ ಮಾಡಲೇಬೇಕು.

ಸವ್ಯಾಸವ್ಯವಿಧಾನೇನ ಪ್ರದೋಷೇ ಶಂಕರಾಲಯೇ ।
ಪ್ರದಕ್ಷಿಣತ್ರಯಂ ವಾಪಿ ಕರ್ತವ್ಯಂ ನಿಯಮಾದ್ದ್ವಿಜೈಃ ॥೯೩॥

ಶಿವಾಲಯೇಷು ಯಃ ಕುರ್ಯಾತ್ಸವ್ಯಾಸವ್ಯಪ್ರದಕ್ಷಿಣಂ ।
ಸ ಫಲಂ ವಾಜಪೇಯಸ್ಯ ಸಂಪ್ರಾಪ್ನೋತಿ ಪದೇ ಪದೇ ॥೯೪॥

ಕೃತಾಂಜಲಿಪುಟೈರೇವ ಶಿವಧ್ಯಾನಪುರಸ್ಸರಂ ।
ಪ್ರದಕ್ಷಿಣಂ ಸದಾ ಕಾರ್ಯಂ ಮಹಾದೇವಾಲಯೇ ದ್ವಿಜ ॥೯೪॥

ಅಷ್ಟಾಂಗಸಹಿತಃ ಕಾರ್ಯಃ ಪ್ರಣಾಮಃ ಪಾರ್ವತೀಪತೇಃ ।
ಸರ್ವಕಾಲೇಷು ಯತ್ನೇನ ಶಿವಧ್ಯಾನಪುರಃಸರಂ ॥೯೫॥

ಜಾನುಬಾಹುಶಿರೋವಕ್ಷ ಗಂಡಾನಾಮಷ್ಟಕಂ ಯದಾ ।
ದಂಡವತ್ಪ್ರಣತಾಸಕ್ತಂ ತದಷ್ಟಾಂಗನತಿರ್ಭವೇತ್ ॥೯೬॥

ಏತದಷ್ಟಾಂಗಸಂಯುಕ್ತಾಃ ಪ್ರಣಾಮಾಃ ಪಾರ್ವತೀಪತೇಃ ।
ಏಕಾದಶಾಥವಾಷ್ಟೌ ವಾ ನಾತೋ ನ್ಯೂನಾಃ ಕದಾಚನ ॥೯೭॥

---

ದ್ವಿಜರೆನಿಸಿದವರು ನಿಯಮದಿಂದ ಪ್ರದೋಷವೇಳೆಯಲ್ಲಿ ದಿನವೂ ಶಂಕರನ ದೇವಾಲಯಗಳಲ್ಲಿ ಮೂರು ಪ್ರದಕ್ಷಿಣೆಯನ್ನಾದರೂ ತಪ್ಪದೇ ಮಾಡಬೇಕು. ॥೯೧-೯೩॥

ಶಿವದೇವಾಲಯಗಳಲ್ಲಿ ಶಿವಲಿಂಗಕ್ಕೆ ಸವ್ಯಾಸವ್ಯರೂಪವಾದ ಪ್ರದಕ್ಷಿಣೆ ಮಾಡುವವನು ಪದೇ ಪದೇ ವಾಜಪೇಯಯಾಗ ಮಾಡಿದ ಫಲವನ್ನು ಹೊಂದುತ್ತಾನೆ. ಪ್ರದಕ್ಷಿಣೆ ಮಾಡುವಾಗ ಶಿವಧ್ಯಾನಪೂರ್ವಕವಾಗಿ ಕೈಮುಗಿದುಕೊಂಡು ಮಹಾದೇವನ ಮಂದಿರದಲ್ಲಿ ಯಾವಾಗಲೂ ಪ್ರದಕ್ಷಿಣೆಮಾಡಬೇಕು. ॥೯೩-೯೪॥

ಯಾವಾಗಲೂ ಶಿವಧ್ಯಾನಪೂರ್ವಕವಾಗಿ ನಿಯಮದಿಂದ ಆ ಪಾರ್ವತೀರಮಣನಿಗೆ ಸಾಷ್ಟಾಂಗಪ್ರಣಾಮಮಾಡಬೇಕು ಎರಡು ಮಂಡಿಗಳು, ಎರಡು ತೋಳುಗಳು, ತಲೆ, ಎದೆ ಮತ್ತು ಎರಡು ಗಂಡಸ್ಥಳಗಳು ಈ ಎಂಟು ಅಂಗಗಳು ದಂಡದಂತೆ ನೆಲದಮೇಲೆ ನಮಸ್ಕಾರಮಾಡುವಾಗ ಭೂಸ್ಪರ್ಶಮಾಡುತ್ತಿದ್ದರೆ ಅದು ಸಾಷ್ಟಾಂಗ ನಮಸ್ಕಾರವೆನಿಸುವುದು ॥೯೫-೯೬॥

ಈ ಅಷ್ಟಾಂಗಗಳಿಂದ ಕೂಡಿದ ಪ್ರಣಾಮಗಳನ್ನು ಆ ಪಾರ್ವತೀರಮಣನಿಗೆ ಎಂಟು ಅಥವಾ ಹನ್ನೊಂದು ಬಾರಿಯಾದರೂ ಮಾಡಬೇಕು. ಅದಕ್ಕೆ ಕಡಿಮೆ

ಏಕವಿಂಶತಿ ಕರ್ತವ್ಯಾಃ ಪ್ರಣಾಮಾಃ ಪಾರ್ವತೀಪತೇಃ ।
ಪ್ರಯತ್ನೇನಾನ್ವಹಂ ಕಾರ್ಯಂ ಸಾವಧಾನೇನ ಬ್ರಾಹ್ಮಣೈಃ ॥೯೮॥

ಯಃ ಸಾಷ್ಟಾಂಗಂ ಮಹಾದೇವಂ ನ ನಮೇತ್ಸಾವಧಾನತಃ ।
ಸ ದಗ್ಧಾಂಗ ಇತಿ ಜ್ಞೇಯಃ ಸತ್ಯಂ ಸತ್ಯಂ ನ ಸಂಶಯಃ ॥೯೯॥

ಪ್ರಾತಃ ಶಿವಾರ್ಚನಂ ಕೃತ್ವಾ ದಶ ಕಾರ್ಯಾಃ ಪ್ರದಕ್ಷಿಣಾಃ ।
ಮಧ್ಯಾಹ್ನೇ ತು ದ್ವಾದಶೈಕಾದಶ ಸಾಯಾಹ್ನೇ ಸಾದರಂ ॥೧೦೦॥

ಅನುದ್ಧೂಳಿತದೇಹೇನ ಮಹಾದೇವಪ್ರದಕ್ಷಿಣಂ ।
ನ ಕರ್ತವ್ಯಂ ನ ಕರ್ತವ್ಯಂ ನ ಕರ್ತವ್ಯಂ ಕದಾಚನ ॥೧೦೧॥

ಸೋಮಸೂತ್ರಮನುಲ್ಲಂಘ್ಯ ಗರ್ಭೇ ಕಾರ್ಯಾಃ ಪ್ರದಕ್ಷಿಣಾಃ ।
ವೃಷೋ ಯದಿ ಭವೇದ್ಗರ್ಭೇ ನೋ ಚೇತ್ತತ್ರ ನ ಸರ್ವಥಾ ॥೧೦೨॥

ಎಂದಿಗೂ ಮಾಡಲೇಬಾರದು. ಬ್ರಾಹ್ಮಣರು ನಿತ್ಯವೂ ಸಾವಧಾನಚಿತ್ತದಿಂದ ಪಾರ್ವತೀರಮಣನಿಗೆ ಇಪ್ಪತ್ತೊಂದು ನಮಸ್ಕಾರಗಳನ್ನು ಅವಶ್ಯವಾಗಿ ಮಾಡಲೇಬೇಕು. ॥೯೭-೯೮॥

ಮಹಾದೇವನಿಗೆ ಸಾಷ್ಟಾಂಗ ನಮಸ್ಕಾರಗಳನ್ನು ಸಾವಧಾನಚಿತ್ತದಿಂದ ಮಾಡದಿರುವವನು ಬದುಕಿದ್ದರೂ ಸುಟ್ಟ ಶರೀರವುಳ್ಳವನೆಂತಲೇ ತಿಳಿಯಬೇಕು. ಇದರಲ್ಲಿ ಸಂಶಯವಿಲ್ಲ. ಪ್ರಾತಃಕಾಲದಲ್ಲಿ ಶಿವನನ್ನು ಪೂಜಿಸಿ ಹತ್ತು ಪ್ರದಕ್ಷಿಣೆ ಮಾಡಬೇಕು. ಮಧ್ಯಾಹ್ನ ಮತ್ತು ಸಾಯಂಕಾಲಗಳಲ್ಲಿ ಕ್ರಮವಾಗಿ ಹನ್ನೆರಡು ಮತ್ತು ಹನ್ನೊಂದು ಪ್ರದಕ್ಷಿಣೆಗಳನ್ನು ಮಹಾದೇವನಿಗೆ ಆದರದಿಂದ ಮಾಡಲೇಬೇಕು. ॥೯೯-೧೦೦॥

ಮೈಗೆ ಭಸ್ಮವನ್ನು ಲೇಪನಮಾಡಿಕೊಳ್ಳದೇ ಎಂದೆಂದಿಗೂ ಆ ಮಹಾದೇವನ ಪ್ರದಕ್ಷಿಣೆಯನ್ನೂ ಮಾಡಲೇಬಾರದು. ಗರ್ಭಗೃಹದಲ್ಲಿ ವೃಷಸ್ಥಾನವಿದ್ದರೆ ಸೋಮಸೂತ್ರಸ್ಥಾನವನ್ನು ದಾಟದೇ ಅಲ್ಲಿ ಪ್ರದಕ್ಷಿಣೆಮಾಡಬೇಕು. ಸೋಮಸೂತ್ರವನ್ನು ಖಂಡಿತವಾಗಿಯೂ ದಾಟಬಾರದು. ॥೧೦೧-೧೦೨॥

ಸೋಮಸೂತ್ರಮನುಲ್ಲಂಘ್ಯ ಗರ್ಭೇ ಸ ವೃಷಭೇಪಿ ಚ ।
ವಿಹಿತಂ ವಾಪ್ಯವಿಹಿತಂ ಸೋಮಸೂತ್ರಂ ನ ಲಂಘಯೇತ್ ॥೧೦೩॥

ಬಹಿಶ್ಚಾಪಿ ಹಿತಂ ಸೂತ್ರಮುಲ್ಲಂಘ್ಯಂ ನೈವ ಸರ್ವಥಾ ।
ಮೋಹಾದಪಿ ಹಿ ತಂ ಸೂತ್ರಂ ಉಲ್ಲಂಘ್ಯಾಪ್ನೋತಿ ಯಾತನಾಃ ॥೧೦೪॥

ಉತ್ತರಾಭಿಮುಖೈಃ ಕಾರ್ಯಂ ಶ್ರೀಮಹಾದೇವಪೂಜನಂ ।
ಪ್ರಾಙ್ಮುಖೇನಾಥವಾ ಕಾರ್ಯಂ ಶ್ರೀಮಹಾದೇವಪೂಜನಂ ॥೧೦೫॥

ಪಶ್ಚಿಮಾಭಿಮುಖೈರ್ವಾಪಿ ಕರ್ತವ್ಯಂ ಶಿವಪೂಜನಂ ।
ದಕ್ಷಿಣಾಭಿಮುಖೈರ್ಮರ್ತ್ಯೈರ್ನ ಕರ್ತವ್ಯಂ ಶಿವಾರ್ಚನಂ ॥೧೦೬॥

ಇತ್ಯುಕ್ತಂ ತದ್ವಚಃ ಶ್ರುತ್ವಾ ಪ್ರಣಮ್ಯ ಮುನಿಪುಂಗವಂ ।
ಶಿವಪೂಜಾಸಾಧನಾನಿ ವದೇತ್ಯಾಹ ದ್ವಿಜೋತ್ತಮಃ ॥೧೦೭॥

---

ಗರ್ಭಗೃಹವು ವೃಷಭಸ್ಥಾನಯುಕ್ತವಾಗಿದ್ದರೂ ಸೋಮಸೂತ್ರವನ್ನು ದಾಟದೆ ನಮಸ್ಕರಿಸಬೇಕು. ವಿಹಿತವಾಗಿರಲಿ ಅಥವಾ ಅವಿಹಿತವಾಗಿರಲಿ ಸೋಮ ಸೂತ್ರವನ್ನಂತೂ ಮೀರಿ ಹೋಗಬಾರದು. ಹೊರಗಡೆಯಲ್ಲೂ ಆ ಸೋಮ ಸೂತ್ರವನ್ನು ದಾಟಿ ಪ್ರದಕ್ಷಿಣೆಯನ್ನು ಮಾಡಬಾರದು. ಅಜ್ಞಾನದಿಂದ ಆ ಸೋಮ ಸೂತ್ರವನ್ನು ದಾಟಿ ಪ್ರದಕ್ಷಿಣೆಮಾಡಿದರೆ ಅವನು ಅನೇಕ ನರಕಯಾತನೆಗಳನ್ನು ಹೊಂದುತ್ತಾನೆ. ॥೧೦೩-೧೦೪॥

ಆ ಮಹಾದೇವನ ಪೂಜೆಯನ್ನು ಉತ್ತರ, ಪೂರ್ವ ಅಥವಾ ಪಶ್ಚಿಮ ದಿಕ್ಕುಗಳಿಗೆದುರಾಗಿ ಕುಳಿತುಕೊಂಡು ಮಾಡಬೇಕು. ದಕ್ಷಿಣದಿಕ್ಕಿಗೆ ಅಭಿಮುಖವಾಗಿ ಕುಳಿತು ಎಂದಿಗೂ ಮಹಾದೇವನನ್ನು ಪೂಜೆಮಾಡಲೇಬಾರದು" ಎಂದು ಅಗಸ್ತ್ಯರು ಶಿವಪೂಜಾವಿಧಿಯನ್ನು ಬ್ರಾಹ್ಮಣನಿಗೆ ತಿಳಿಸಿದರು. ॥೧೦೫-೧೦೬॥

ಅಗಸ್ತ್ಯಮುನಿಯ ಮಾತನ್ನು ಕೇಳಿ, ಆ ಮುನಿಪುಂಗವನಿಗೆ ಮತ್ತೆ ನಮಸ್ಕಾರಮಾಡಿ ಆ ಬ್ರಾಹ್ಮಣೋತ್ತಮನು ಶಿವಪೂಜಾಸಾಧನಗಳನ್ನು ತಿಳಿಸ ಬೇಕೆಂದು ಮತ್ತೆ ಪ್ರಾರ್ಥಿಸಿಕೊಂಡನು. ಆಗ ಅಗಸ್ತ್ಯಮುನಿಯು ಹೀಗೆಂದು ನುಡಿದನು. ॥೧೦೬-೧೦೭॥

|| ಅಗಸ್ತ್ಯ ಉವಾಚ ||

ಶಿವಪೂಜಾಸಾಧನಾನಿ ಸಮಾಸೇನ ವದಾಮ್ಯಹಂ ।
ಶೃಣುಷ್ವೈತಾನಿ ವಿಪ್ರೇಂದ್ರ ಜಾಬಾಲೋಕ್ತಾನಿ ಯತ್ನತಃ ||೧೦೮||

ವಕ್ಷ್ಯೇಽಧಿಕಾರಿಣಂ ಚಾತ್ರ ಶ್ರೀಮಹಾದೇವಪೂಜನೇ ।
ಯತ್ಪೂಜಯಾ ಮಹಾದೇವಸ್ತುಷ್ಟೋ ಮುಕ್ತಿಂ ಪ್ರಯಚ್ಛತಿ||೧೦೯||

ಅನುದ್ಧೂಳಿತದೇಹೇನ ನ ಕರ್ತವ್ಯಂ ಶಿವಾರ್ಚನಂ ।
ಅನುದ್ಧೂಳಿತದೇಹಸ್ಯ ನಾಧಿಕಾರಃ ಶಿವಾರ್ಚನೇ ||೧೧೦||

ರುದ್ರಾಕ್ಷರಹಿತಾಂಗೇನ ನ ಕರ್ತವ್ಯಂ ಶಿವಾರ್ಚನಂ ।
ರುದ್ರಾಕ್ಷರಹಿತಾನಾಂ ಹಿ ನಾಧಿಕಾರಃ ಶಿವಾರ್ಚನೇ ||೧೧೧||

ಭಸ್ಮೋದ್ಧೂಳಿತಸರ್ವಾಂಗೈಸ್ತ್ರಿಪುಂಡ್ರಾಂಕಿತಮಸ್ತಕೈಃ
ರುದ್ರಾಕ್ಷಮಾಲಾಭರಣೈಃ ಕರ್ತವ್ಯಂ ಶಂಕರಾರ್ಚನಂ ||೧೧೨||

ಅಯ್ಯಾ ವಿಪ್ರೋತ್ತಮನೇ, ಶಿವಪೂಜಾಸಲಕರಣೆಗಳನ್ನು ನಾನು ನಿನಗೆ ಸಂಗ್ರಹವಾಗಿ ಹೇಳುವೆನು. ಜಾಬಾಲಮುನಿಯಿಂದ ಹೇಳಲ್ಪಟ್ಟಿರುವ ಆ ಪೂಜಾ ಸಾಧನಗಳನ್ನು ನಿಯಮದಿಂದ ಕೇಳುವನಾಗು. ಅಲ್ಲದೇ ಶ್ರೀಮಹಾದೇವನ ಪೂಜೆಮಾಡುವುದರಲ್ಲಿ ನಿಜವಾದ ಅಧಿಕಾರಿಯಾರೆಂಬುದನ್ನೂ, ಯಾರ ಪೂಜಾ ಮಾತ್ರದಿಂದಲೇ ಶಿವನು ಸಂತುಷ್ಟನಾಗಿ ಮೋಕ್ಷವನ್ನು ಕೊಡುವನೋ ಅಂತಹವನ ಸ್ವರೂಪವನ್ನೂ ಹೇಳುತ್ತೇನೆ ; ಲಾಲಿಸು. ||೧೦೮-೧೦೯||

ಭಸ್ಮಲೇಪನ ಮತ್ತು ರುದ್ರಾಕ್ಷಧಾರಣಗಳನ್ನು ಮಾಡಿಕೊಳ್ಳದವನಿಗೆ ಶಿವನನ್ನು ಪೂಜಿಸಲು ಅಧಿಕಾರವೇ ಇಲ್ಲವಾದ್ದರಿಂದ ಭಸ್ಮರುದ್ರಾಕ್ಷರಹಿತರಾದವರು ಪರಶಿವನನ್ನು ಪೂಜೆಮಾಡಬಾರದು. ||೧೧೦-೧೧೧||

ಸಕಲ ಅವಯವಗಳಿಗೂ ಭಸ್ಮಲೇಪನ, ಹಣೆಗೆ ಭಸ್ಮತ್ರಿಪುಂಡ್ರಧಾರಣ, ಕೊರಳಿಗೆ ರುದ್ರಾಕ್ಷಮಾಲಾಭರಣಗಳನ್ನು ಧರಿಸಿದವರೇ ಶಂಕರನನ್ನು ಪೂಜೆಮಾಡ ಬೇಕು. ಶೋಧಿಸಿದ ಶುದ್ಧವಾದ ನೀರಿನಿಂದ ರುದ್ರಮಂತ್ರಪೂರ್ವಕವಾಗಿ ಶಂಕರನಿಗೆ

ಅಭಿಷೇಕೋ ರುದ್ರಮಂತ್ರೈಃ ಕರ್ತವ್ಯಃ ಶೋಧಿತೋದಕೈಃ ।
ತತೋ ದೇಯಂ ವಸ್ತ್ರಯುಗ್ಮಮುಪವೀತದ್ವಯಂ ತಥಾ ॥೧೧೩॥

ವಸ್ತ್ರೋಪವೀತಾಭಾವೇ ತು ಬಿಲ್ವಪತ್ರದ್ವಯದ್ವಯಂ ।
ತತಃ ಪರಂ ಪೂಜನೀಯೋ ವಿಭೂತ್ಯಾ ಪರಮೇಶ್ವರಃ ॥೧೧೪॥

ತತೋ ಬಿಲ್ವದಲೈಃ ಶುದ್ಧೈರಚ್ಛಿದ್ರೈಃ ಕೋಮಲೈರ್ನವೈಃ ।
ಪೂಜನೀಯಃ ಪ್ರಯತ್ನೇನ ಲಿಂಗರೂಪೀ ಸದಾಶಿವಃ ॥೧೧೫॥

ಶುಷ್ಕೈಃ ಪರ್ಯುಷಿತೈಶ್ಛಿದ್ರೈರ್ಯಾದೃಶೈಸ್ತಾದೃಶೈರಪಿ ।
ಬಿಲ್ವಪತ್ರೈರ್ಮಹಾದೇವಃ ಪೂಜನೀಯಃ ಪ್ರಯತ್ನತಃ ॥೧೧೬॥

ರತ್ನವದ್ಬಿಲ್ವಪತ್ರಾಣಿ ಸಂಗೃಹ್ಯ ದ್ವಿಜಪುಂಗವಾಃ ।
ಪೂಜಯಂತಿ ಮಹಾದೇವಂ ವೇದಮಾರ್ಗಪ್ರವರ್ತಕಾಃ ॥೧೧೭॥

ಜೀರ್ಣೀಕೃತಾನ್ಯಪಿ ಪ್ರಾಜ್ಞಾಃ ಬಿಲ್ವಪತ್ರಾಣಿ ವೈದಿಕಾಃ ।
ಸಂಪಾದ್ಯ ಪೂಜಯಂತೀಶಂ ನವಾಲಾಭೇ ವಿಚಕ್ಷಣಾಃ ॥೧೧೮॥

---

ಅಭಿಷೇಕ ಮಾಡಬೇಕು. ಅಭಿಷೇಕವಾದನಂತರ ಒಂದುಜೊತೆ ವಸ್ತ್ರವನ್ನೂ ಯಜ್ಞೋಪವೀತಗಳನ್ನೂ ಶಿವನಿಗೆ ಸಮರ್ಪಿಸಬೇಕು. ||೧೧೨-೧೧೩||

ವಸ್ತ್ರ ಮತ್ತು ಯಜ್ಞೋಪವೀತಗಳು ದೊರೆಯದಿದ್ದಲ್ಲಿ ಎರಡೆರಡು ಬಿಲ್ವ ಪತ್ರೆಗಳನ್ನು ಅವುಗಳ ಬದಲು ಪೂಜೆಮಾಡಬಹುದು. ಅನಂತರ ವಿಭೂತಿಯನ್ನು ಆ ಪರಮೇಶ್ವರನಿಗೆ ಲೇಪಮಾಡಬೇಕು. ಆಮೇಲೆ ತುಂಡಾಗದೇ ಮೃದುವಾಗಿಯೂ ಹೊಸದಾಗಿಯೂ ಇರುವ ಪರಿಶುದ್ಧವಾದ ಬಿಲ್ವದಳಗಳಿಂದ ಲಿಂಗಸ್ವರೂಪಿಯಾಗಿರುವ ಸದಾಶಿವನನ್ನು ನಿಯಮದಿಂದ ಪೂಜೆಮಾಡಬೇಕು. ||೧೧೪-೧೧೫||

ಒಣಗಿರಲಿ, ದೂಷಿತವಾಗಿರಲಿ. ಚೂರಾಗಿರಲಿ, ಹೇಗಾದರೂ ಇರಲಿ, ಅಂತಹ ಬಿಲ್ವಪತ್ರೆಗಳಿಂದ ಮಹಾದೇವನನ್ನು ನಿಯಮದಿಂದ ಪೂಜೆಮಾಡಬಹುದು. ವೈದಿಕ ಮಾರ್ಗನಿರತರಾದ ಬ್ರಾಹ್ಮಣಶ್ರೇಷ್ಠರು ರತ್ನದಂತೆ ಎಚ್ಚರಿಕೆಯಿಂದ ಬಿಲ್ವದಳಗಳನ್ನು ಸಂಪಾದಿಸಿ ಅವುಗಳಿಂದ ಮಹಾದೇವನನ್ನು ಪೂಜೆಮಾಡುತ್ತಾರೆ. ||೧೧೬-೧೧೭||

ವಿವೇಕಿಗಳಾದ ವೈದಿಕರು ಹೊಸ ಬಿಲ್ವದಳಗಳು ದೊರೆಯದಿದ್ದಾಗ ಪುಡಿಯಾಗಿರುವ ಬಿಲ್ವಪತ್ರೆಗಳನ್ನೇ ಸಂಪಾದಿಸಿಕೊಂಡು ಅದರಿಂದ ಈಶ್ವರನನ್ನು ಪೂಜೆ

ಬಿಲ್ವಪತ್ರಾರ್ಚನೇನೈವ ಸಾಂಗಂ ಶಂಕರಪೂಜನಂ ।
ಬಿಲ್ವಪತ್ರಂ ವಿನಾ ಪೂಜಾ ನ ಸಾಂಗಾ ಪಾರ್ವತೀಪತೇಃ ॥೧೧೯॥

ಧೂಪದೀಪೋಪಹಾರಾದೇರಭಾವೇಽಪಿ ದ್ವಿಜೋತ್ತಮ ।
ಸಾಂಗಂ ಬಿಲ್ವದಲೈರೇವ ಭವಿಷ್ಯತಿ ಶಿವಾರ್ಚನಂ ॥೧೨೦॥

ವಸ್ತ್ರಾದ್ಯರ್ಥೇ ಬಿಲ್ವಪತ್ರಂ ಪ್ರದೇಯಂ ಶ್ರೀಮಹೇಶಿತುಃ ।
ವಸ್ತ್ರಾದಿದಾನತೋಽಪ್ಯೇತದ್ಭವತ್ಯೇವ ಹಿ ಪುಣ್ಯದಂ ॥೧೨೧॥

ಸರ್ವಾರ್ಥೇ ಬಿಲ್ವಪತ್ರಾಣಿ ಭವಿಷ್ಯಂತಿ ನ ಸಂಶಯಃ ।
ಬಿಲ್ವಪತ್ರಾರ್ಥಮನ್ಯತ್ತು ನ ಭವತ್ಯೇವ ಸರ್ವಥಾ ॥೧೨೨॥

ರತ್ನಂ ಚ ಬಿಲ್ವಪತ್ರಾರ್ಥಂ ನ ಯತಸ್ತತೋಽಧಮಂ ।
ಬಿಲ್ವಪತ್ರಸಮಂ ವಸ್ತು ನ ಭೂತಂ ನ ಭವಿಷ್ಯತಿ ॥೧೨೩॥

ಯೇನ ಕೇನಾಪಿ ಶುಷ್ಕೇಣ ಬಿಲ್ವಪತ್ರೇಣ ಯಃ ಶಿವಂ
ಸಮರ್ಚಯತಿ ಯತ್ನೇನ ಸ ಶಿವಂ ಪ್ರತಿಪದ್ಯತೇ ॥೧೨೪॥

ಮಾಡುತ್ತಾರೆ. ಬಿಲ್ವಪತ್ರೆಗಳ ಪೂಜೆಯಿಂದಲೇ ಆ ಶಂಕರನ ಪೂಜೆಯು ಸಾಂಗವಾಗುವುದು. ಬಿಲ್ವಪತ್ರೆಗಳಿಲ್ಲದೇ ಆ ಪಾರ್ವತೀರಮಣನ ಪೂಜೆಯು ಎಂದಿಗೂ ಸಾಂಗವಾಗುವುದಿಲ್ಲ. ಆಯ್ಯ ಬ್ರಾಹ್ಮಣೋತ್ತಮನೆ, ಧೂಪ, ದೀಪ, ನೈವೇದ್ಯಾದಿಗಳಿಲ್ಲದಿದ್ದರೂ ಬಿಲ್ವದಳಗಳಿಂದಲೇ ಶಂಕರನ ಪೂಜೆಯು ಸಾಂಗಗೊಳ್ಳುವುದೆಂದು ತಿಳಿ. ||೧೧೮-೧೧೯-೧೨೦||

ವಸ್ತ್ರ ಮುಂತಾದವುಗಳ ಬದಲು ಆ ಮಹೇಶ್ವರನಿಗೆ ಬಿಲ್ವಪತ್ರೆಯನ್ನೇ ಸಮರ್ಪಣೆ ಮಾಡಬಹುದು. ಇದು ವಸ್ತ್ರ ಮುಂತಾದ ಪದಾರ್ಥಗಳ ದಾನಕ್ಕಿಂತಲೂ ಹೆಚ್ಚಿನ ಪುಣ್ಯವನ್ನೇ ಉಂಟುಮಾಡಬಲ್ಲುದು. ಇತರ ಎಲ್ಲಾ ಪದಾರ್ಥಗಳ ಪ್ರತಿಯಾಗಿಯೂ ಬಿಲ್ವದಳಗಳನ್ನು ಸಂದೇಹವಿಲ್ಲದೆ ಉಪಯೋಗಿಸಬಹುದು. ಆದರೆ ಆ ಬಿಲ್ವದಳದ ಸ್ಥಾನದಲ್ಲಿ ಬೇರೆ ಯಾವ ಪದಾರ್ಥವನ್ನೂ ಉಪಯೋಗಿಸುವಂತಿಲ್ಲ. ||೧೨೧-೧೨೨||

ರತ್ನವೂ ಬಿಲ್ವಪತ್ರೆಯ ಸ್ಥಾನದಲ್ಲಿ ನಿಲ್ಲಲಾರದು. ಬಿಲ್ವಪತ್ರೆಗಿಂತಲೂ ರತ್ನವು ಅಧಮವೆನಿಸುವುದರಿಂದ ಆ ಬಿಲ್ವಪತ್ರೆಗೆ ಸಮಾನವಾದ ವಸ್ತುವು ಹಿಂದೆಯೂ

ಪಾತಾದ್ರ್ರಾಸೋಮಸಂಯುಕ್ತಭೂತಾಯಾಂ ನಿಶಿ ಶಂಕರಂ ।
ಬಿಲ್ವಪತ್ರೈಃ ಸಮಭ್ಯರ್ಚ್ಯ ಬ್ರಹ್ಮಹಾಪಿ ವಿಮುಚ್ಯತೇ ॥೧೨೫॥

ಬಿಲ್ವಪತ್ರೈರ್ಮಹಾದೇವಂ ಪೂಜಯಿತ್ವಾ ಪುರಾ ದ್ವಿಜಾಃ ।
ಬಹವೋ ಮೋಕ್ಷಮಾಪನ್ನಾಃ ಸಂಖ್ಯಾ ತೇಷಾಂ ನ ವಿದ್ಯತೇ॥೧೨೬॥

ಸಹಸ್ರಾರ್ಬುದಪುಷ್ಪಾಣಾಂ ಪೂಜಯಾ ಯತ್ಫಲಂ ಭವೇತ್ ।
ತತೋಽಪಿ ಕೋಟಿಗುಣಿತಮೇಕಬಿಲ್ವಾರ್ಚನಾತ್ಫಲಂ ॥೧೨೭॥

ಸಹಸ್ರಾರ್ಬುದರತ್ನಾನಾಂ ಪೂಜಯಾ ಯತ್ಫಲಂ ಭವೇತ್ ।
ತತೋಽಪಿ ಕೋಟಿಗುಣಿತಮೇಕಬಿಲ್ವದಳಾರ್ಚನಂ ॥೧೨೮॥

ಯತ್ಪುಣ್ಯಂ ಲಭತೇ ಮರ್ತ್ಯಸ್ತಿಲರಾಶಿಭಿರರ್ಚನೇ ।
ತತೋಽಪಿ ಕೋಟಿಗುಣಿತಮೇಕಬಿಲ್ವಾರ್ಚನಾತ್ಫಲಂ ॥೧೨೯॥

ಯತ್ಪುಣ್ಯಂ ಲಭತೇ ಮರ್ತ್ಯೋ ಯವರಾಶಿಭಿರರ್ಚನೇ ।
ತತೋಽಪಿ ಕೋಟಿಗುಣಿತಮೇಕಬಿಲ್ವಾರ್ಚನಾತ್ಫಲಂ ॥೧೩೦॥

---

ಇರಲಿಲ್ಲ. ಮುಂದೆ ಉಂಟಾಗುವುದೂ ಇಲ್ಲ. ಒಂದು ಒಣಗಿದ ಬಿಲ್ವದಳದಿಂದ ಲಾಗಲಿ, ಶಿವನನ್ನು ನಿಯಮವಾಗಿ ಪೂಜಿಸುವವನು ಕೊನೆಗೆ ಶಿವಸಾರೂಪ್ಯವನ್ನು ಹೊಂದುತ್ತಾನೆ. ॥೧೨೩-೧೨೪॥

ವ್ಯತೀಪಾತ, ಆದ್ರ್ರಾನಕ್ಷತ್ರ, ಸೋಮವಾರ ಇವೆಲ್ಲವೂ ಸೇರಿದ ಚತುರ್ದಶೀ ತಿಥಿಯ ರಾತ್ರಿಯಲ್ಲಿ ಬಿಲ್ವದಳಗಳಿಂದ ಶಂಕರನನ್ನು ಪೂಜೆಮಾಡಿದವರಿಗೆ ಬ್ರಹ್ಮ ಹತ್ಯವೇ ಮೊದಲಾದ ಮಹಾಪಾಪಗಳೂ ಸಹ ನಾಶವಾಗುವುವು. ಹಿಂದೆ ಅನೇಕ ಮಂದಿ ಬ್ರಾಹ್ಮಣರು ಬಿಲ್ವದಳಗಳಿಂದ ಮಹಾದೇವನನ್ನು ಪೂಜೆಮಾಡಿ ಮೋಕ್ಷವ ನ್ನೈದಿರುವರು. ಅವರ ಸಂಖ್ಯೆಯು ಇಷ್ಟೇ ಎಂದು ಹೇಳಲು ಸಾಧ್ಯವೇ ಇಲ್ಲ. ॥೧೨೫-೧೨೬॥

ಸಾವಿರ ಅರ್ಬುದ ಸಂಖ್ಯೆಯ ಹೂ ಮತ್ತು ರತ್ನಗಳ ಪೂಜೆಯಿಂದ ಉಂಟಾಗುವ ಫಲಕ್ಕಿಂತಲೂ ಕೋಟಿಪಾಲು ಹೆಚ್ಚಿನಫಲವು ಒಂದೇಒಂದು ಬಿಲ್ವದಳದ ಪೂಜೆಯಿಂದ ಲಭಿಸುತ್ತದೆ. ॥೧೨೭-೧೨೮॥

ಎಳ್ಳಿನರಾಶಿ, ಅಕ್ಕಿ ಮತ್ತು ಉದ್ದಿನಕಾಳಿನ ರಾಶಿಗಳಿಂದ ಪರಶಿವನಿಗೆ ಪೂಜೆ

ಯತ್ಪುಣ್ಯಂ ಲಭತೇ ಮರ್ತ್ಯೋ ಮಾಷರಾಶಿಭಿರರ್ಚನೇ ।
ತತೋಽಪಿ ಕೋಟಿಗುಣಿತಮೇಕಬಿಲ್ವಾರ್ಚನಾತ್ಫಲಂ ॥೧೩೧॥

ಕೃತ್ವಾ ಯತ್ನೇನ ಸತತಂ ಬ್ರಹ್ಮಹತ್ಯಾರ್ಬುದಾನ್ಯಪಿ ।
ಬಿಲ್ವೈಃ ಶಿವಂ ಸಮಭ್ಯರ್ಚ್ಯ ತತ್ಪಾಪೇಭ್ಯೋ ವಿಮುಚ್ಯತೇ ॥೧೩೨॥

ಅನಂತಬ್ರಹ್ಮಹತ್ಯಾದಿ ಪಾಪಾನಿ ವಿವಿಧಾನ್ಯಪಿ ।
ಸದ್ಯೋ ನಶ್ಯಂತಿ ಬಿಲ್ವೇನ ಪೂಜಿತೇನ ಮಹೇಶ್ವರೇ ॥೧೩೩॥

ಭೂತಿಪೂಜೋತ್ತರಂ ಬಿಲ್ವೈಃ ಪೂಜನೀಯೋ ಮಹೇಶ್ವರಃ ।
ಪ್ರತ್ಯಹಂ ನಿಯಮೇನೇತಿ ಪ್ರಾಹುರ್ಜಾಬಾಲವಾದಿನಃ ॥೧೩೪॥

ಬಿಲ್ವಪತ್ರೈಃ ಪ್ರಸೂನೈಶ್ಚ ಕರವೀರಾದಿಭಿರ್ದ್ವಿಜ ।
ಪೂಜನೀಯಃ ಪ್ರಯತ್ನೇನ ದೇವದೇವೋ ಮಹೇಶ್ವರಃ ॥೧೩೫॥

ಮಾಡಿದುದಕ್ಕಿಂತಲೂ ಕೋಟಿಪಾಲು ಹೆಚ್ಚಿನಪುಣ್ಯವು ಮಾನವನಿಗೆ ಒಂದೇಒಂದು ಬಿಲ್ವಪತ್ರೆಯ ಪೂಜೆಯಿಂದುಂಟಾಗುತ್ತದೆ. ॥೧೨೯-೧೩೦-೧೩೧॥

ಅನವರತವೂ ಅಸಂಖ್ಯಾತವಾದ ಬ್ರಹ್ಮಹತ್ಯೆಯನ್ನು ಮಾಡಿದ್ದರೂ ನಿಯಮದಿಂದ ಪರಶಿವನನ್ನು ಬಿಲ್ವದಳಗಳಿಂದ ಪೂಜೆಮಾಡಿದರೆ ಆ ಪಾಪಗಳೆಲ್ಲದರಿಂದಲೂ ಮಾನವನು ಬಿಡುಗಡೆ ಹೊಂದುವನು. ಅನೇಕ ಬ್ರಹ್ಮಹತ್ಯೆ ಮೊದಲಾದ ವಿಧವಿಧವಾದ ಮಹಾಪಾಪಗಳೂ ಸಹ ಮಹೇಶ್ವರನನ್ನು ಬಿಲ್ವದಳದಿಂದ ಪೂಜಿಸುವುದರಿಂದ ಕೂಡಲೇ ನಾಶವಾಗುವುವು ॥೧೩೨-೧೩೩॥

ವಿಭೂತಿಯನ್ನು ಸಮರ್ಪಿಸಿದಮೇಲೆ ಆ ಮಹೇಶ್ವರನಿಗೆ ಬಿಲ್ವದಳಗಳಿಂದ ನಿಯಮಬದ್ಧನಾಗಿ ಪೂಜೆಮಾಡಬೇಕೆಂದು ಜಾಬಾಲಶ್ರುತಿಯನ್ನು ತಿಳಿದವರು ಹೇಳುವರು. ಅಯ್ಯಾ ಬ್ರಾಹ್ಮಣನೇ, ಒಟ್ಟಿನಲ್ಲಿ ಬಿಲ್ವದಳ, ಕಣಿಗಲೆಹೂವು ಮುಂತಾದ ಪುಷ್ಪಗಳಿಂದ ದೇವದೇವನಾದ ಮಹೇಶ್ವರನನ್ನು ನಿಯಮದಿಂದ ಪೂಜೆ ಮಾಡಬೇಕು. ॥೧೩೪-೧೩೫॥

ಹಸ್ತೇ ಗೃಹೀತ್ವಾ ಯತ್ನೇನ ಶಿವನಿರ್ಣೇಜನೋದಕಂ ।
ಅಮುಂ ಮಂತ್ರಂ ಪಠಿತ್ವಾದೌ ತದ್ಗ್ರಾಹ್ಯಂ ತದನಂತರಂ ॥೧೪೭॥

ಕಾಲಮೃತ್ಯುಹರಂ ಪುಣ್ಯಂ ಬ್ರಹ್ಮಹತ್ಯಾದಿನಾಶಕಂ ।
ವ್ಯಾಧಿಘ್ನಂ ಪುಣ್ಯದಂ ಪಾಸ್ಯೇ ಶಿವನಿರ್ಣೇಜನೋದಕಂ ॥೧೪೮॥

ಇತಿ ಮಂತ್ರಂ ಸಮುಚ್ಚಾರ್ಯ ಶಿವತೀರ್ಥಂ ಪ್ರಯತ್ನತಃ ।
ಪಾತವ್ಯಂ ಪ್ರತ್ಯಹಂ ವಿಪ್ರ ತ್ರಿಕಾಲಮಪಿ ಸಾದರಂ ॥೧೪೯॥

ತತಃ ಪರಂ ಪುನರ್ನತ್ವಾ ದೇವದೇವಮುಮಾಪತಿಂ ।
ಭೋಜನೀಯಃ ಪ್ರಯತ್ನೇನ ಶೈವೋ ಭಕ್ತಿಪುರಸ್ಸರಂ ॥೧೫೦॥

ಶೈವಂ ಯೋ ಭೋಜಯೇನ್ನಿತ್ಯಂ ಪ್ರೀತ್ಯಾ ಯತ್ನಪುರಃಸರಂ ।
ಸ ಭೋಜಯತಿ ಗೌರೀಶಂ ಸಾಕ್ಷಾದೇವ ದ್ವಿಜೋತ್ತಮ ॥೧೫೧॥

ನೀರನ್ನು ಕೈಲಿಟ್ಟುಕೊಂಡು ಮುಂದೆ ಹೇಳುವ ಮಂತ್ರವನ್ನು ಪಠಿಸಿ ಅನಂತರ ಭಕ್ತಿಯಿಂದ ಕುಡಿಯಬೇಕು. ॥೧೪೬-೧೪೭॥

'ಕಾಲಮೃತ್ಯುಭಯವನ್ನು ಹೋಗಲಾಡಿಸುವುದೂ, ಪುಣ್ಯಕರವೂ, ಬ್ರಹ್ಮಹತ್ಯೆ, ಸುರಾಪಾನಾದಿ ಸಕಲ ಮಹಾಪಾತಕಗಳನ್ನೂ ನಾಶಗೊಳಿಸುವುದೂ, ಸಕಲ ವ್ಯಾಧಿಗಳನ್ನೂ ನಿವಾರಣೆಮಾಡುವುದೂ, ಪುಣ್ಯಪ್ರದವೂ ಆಗಿರುವ ಶಿವನಿಗೆ ಅಭಿಷೇಕಮಾಡಿದ ನೀರನ್ನು ಪಾನಮಾಡುತ್ತೇನೆ' ಎಂಬ ಮಂತ್ರವನ್ನು ಉಚ್ಚಾರಣೆ ಮಾಡಿ ಅನಂತರ ನಿಯಮದಿಂದ ಶಿವತೀರ್ಥವನ್ನು ಪಾನಮಾಡಬೇಕು. ಅಯ್ಯ ಬ್ರಾಹ್ಮಣನೇ, ಈರೀತಿ ಪ್ರಾತಃ, ಮಧ್ಯಾಹ್ನ ಮತ್ತು ಸಾಯಂಕಾಲ ಈ ಮೂರು ವೇಳೆಗಳಲ್ಲಿಯೂ ತೀರ್ಥವನ್ನು ಪ್ರಾಶನಮಾಡಬೇಕು. ಆಮೇಲೆ ದೇವದೇವನೆನಿಸಿದ ಆ ಉಮಾರಮಣನಿಗೆ ಪುನಃ ನಮಸ್ಕಾರಮಾಡಿ ಶಾಂಭವನೊಬ್ಬನಿಗೆ ಭಕ್ತಿಪೂರ್ವಕವಾಗಿ ಭೋಜನಮಾಡಿಸಬೇಕು. ॥೧೪೮।೧೪೯-೧೫೦॥

ಎಲೈ ದ್ವಿಜಶ್ರೇಷ್ಠನೇ, ನಿತ್ಯವೂ ನಿಯಮಪುರಸ್ಸರವಾಗಿ ಒಬ್ಬ ಶೈವನಿಗೆ ಭೋಜನಮಾಡಿಸುವವನು ಸಾಕ್ಷಾತ್ ಗೌರೀರಮಣನನ್ನೇ ಭೋಜನಮಾಡಿಸಿದಂತಾಗುತ್ತದೆ. ಈಶ್ವರಭಕ್ತನಿಗೆ ಭೋಜನಮಾಡಿಸಿ ಶಿವಧ್ಯಾನಪುರಸ್ಸರವಾಗಿ

ಭೋಜಯಿತ್ವಾ ಸ್ವಯಂ ಶೈವಂ ಶೈವೇನ ಸಹ ವಾ ದ್ವಿಜ ।
ಭೋಕ್ತವ್ಯಮತಿಯತ್ನೇನ ಶಿವಧ್ಯಾನಪುರಃಸರಂ ॥೧೫೨॥

ಪ್ರಾಣಾನಾಂ ಕಿರಿಕೇತ್ಯಾದಿ ಪಠಿತ್ವೈವ ಮನುಂ ತತಃ ।
ಭೋಕ್ತವ್ಯಮನ್ಯಥಾ ವಿಪ್ರೈರ್ನ ಭೋಕ್ತವ್ಯಂ ದ್ವಿಜೋತ್ತಮ ॥೧೫೩॥

ಭುಕ್ತ್ವಾ ಪುನಃ ಪ್ರಯತ್ನೇನ ಜಪನೀಯಃ ಷಡಕ್ಷರಃ ।
ತತಃ ಶಿವಕಥಾ ವಿಪ್ರ ಶ್ರೋತವ್ಯಾ ಯತ್ನಪೂರ್ವಕಂ ॥೧೫೪॥

ತತಃ ಸಾಯಂ ಮಹಾದೇವಃ ಪೂಜನೀಯಃ ಪ್ರಯತ್ನತಃ ।
ರಾತ್ರಾವಪಿ ಯಥಾಶಕ್ತಿ ಪೂಜಾ ಕಾರ್ಯಾ ಮಹೇಶ್ವರೇ ॥೧೫೫॥

ಯಾಮಿನ್ಯಾಃ ಪಶ್ಚಿಮೇ ಯಾಮೇ ಕೃತ್ವಾ ಶೌಚಾದಿಕಂ ತತಃ ।
ಉದ್ಧೂಲ್ಯ ಭಸ್ಮನಾಂಗಾನಿ ಕರ್ತವ್ಯಂ ಶಿವಚಿಂತನಂ ॥೧೫೬॥

ಸ್ಮರ್ತವ್ಯೋ ಪಾರ್ವತೀನಾಥೋ ರತ್ನಸಿಂಹಾಸನಸ್ಥಿತಃ ।
ಉಮಾಲಿಂಗಿತವಾಮಾಂಗೋ ದಿವ್ಯಮಂಗಲವಿಗ್ರಹಃ ॥೧೫೭॥

ತಾನೂ ನಿಯಮದಿಂದ ಆನಂತರ ಊಟಮಾಡಬೇಕು. ಅಥವಾ ತಾನೂ ಆ ಶೈವ ನೊಡನೆಯೇ ಭೋಜನಮಾಡಬೇಕು. ||೧೫೧-೧೫೨||

ದ್ವಿಜೋತ್ತಮನೇ, 'ಪ್ರಾಣಾನಾಂ ಕಿರಿಕಿ' ಎಂಬ ಮಂತ್ರವನ್ನು ಹೇಳಿಯೇ ಬ್ರಾಹ್ಮಣರು ಭೋಜನಮಾಡಬೇಕೇ ಹೊರತು ಅನ್ಯಥಾ ಮಾಡಬಾರದು ಭೋಜ ನವಾದಮೇಲೆ ಪುನಃ ನಿಯಮದಿಂದ ಶಿವಷಡಕ್ಷರಮಂತ್ರವನ್ನು ಜಪಮಾಡಬೇಕು. ಆದಾದಮೇಲೆ ನಿಯಮಪೂರ್ವಕವಾಗಿ ಶಿವಕಥೆಗಳನ್ನು ಕೇಳಬೇಕು. ||೧೫೩-೧೫೪||

ಆನಂತರ ಸಾಯಂಕಾಲದಲ್ಲಿಯೂ, ರಾತ್ರಿಯಲ್ಲಿಯೂ ಶಕ್ತ್ಯನುಸಾರವಾಗಿ ಆ ಮಹೇಶ್ವರನನ್ನು ಮೇಲೆ ಹೇಳಿದ ನಿಯಮದಿಂದ ಪೂಜೆಮಾಡಬೇಕು. ರಾತ್ರಿಯ ಕೊನೆಯ ಜಾವದಲ್ಲೆದ್ದು ಶೌಚವೇ ಮೊದಲಾದ ಕೃತ್ಯಗಳನ್ನು ನೆರವೇರಿಸಿಕೊಂಡು, ವಿಭೂತಿಯನ್ನು ಮೈಗೆಲ್ಲಾ ಲೇಪನಮಾಡಿಕೊಂಡಮೇಲೆ ಆ ಪರಶಿವನನ್ನು ಈ ರೀತಿ ಧ್ಯಾನಮಾಡಬೇಕು. ||೧೫೫-೧೫೬||

ರತ್ನಸಿಂಹಾಸನದಲ್ಲಿ ಕುಳಿತಿರುವವನೂ, ಉಮಾಲಿಂಗನ ಮಾಡಲ್ಪಟ್ಟ

ಸ್ಮೇರಾನನಃ ಸ್ಮರಹರಃ ಸರ್ವದೇವಶಿಖಾಮಣಿಃ ।
ವಿಷ್ಣುಬ್ರಹ್ಮಾದಿವಂದ್ಯಾಂಘ್ರಿಃ ಕಲ್ಯಾಣಗುಣಸಂಶ್ರಯಃ ॥೧೫೮॥

ವಿಷ್ಣ್ವಾದಿಮೌಲಿರತ್ನೌಘಸಮಾಲಿಂಗಿತಪಾದುಕಃ ।
ಅನಂತೈಶ್ವರ್ಯಸಂಪನ್ನೋ ನಾನಾಗಣನಿಷೇವಿತಃ ॥೧೫೯॥

ಏವಂ ಸ್ಮೃತ್ವಾ ಮಹಾದೇವಂ ನತ್ವಾ ಸ್ನಾತ್ವಾ ತತಃ ಪರಂ ।
ಉದ್ಧೂಳನಾದಿಕಂ ಕೃತ್ವಾ ಕರ್ತವ್ಯಂ ಶಿವಪೂಜನಂ ॥೧೬೦॥

ಸ್ನಾನಂ ಕಾರ್ಯಂ ಸದಾ ವಿಪ್ರ ಶಿವತೀರ್ಥೇ ದ್ವಿಜಾತಿಭಿಃ ।
ಶಿವತೀರ್ಥಾನ್ಯತೀರ್ಥೇಷು ನ ಸ್ನಾತವ್ಯಂ ಕದಾಚನ ॥೧೬೧॥

ದೇಹದ ಎಡಭಾಗವುಳ್ಳವನೂ, ದಿವ್ಯಮಂಗಳಸ್ವರೂಪನೂ, ಮುಗುಳುನಗೆಯಿಂದ ಕೂಡಿದ ಮುಖವುಳ್ಳವನೂ, ಮನ್ಮಥನನ್ನು ಧ್ವಂಸಮಾಡಿದವನೂ, ಸಕಲದೇವತಾ ಶಿಖಾಮಣಿಯೂ, ವಿಷ್ಣು, ಬ್ರಹ್ಮ, ಮುಂತಾದ ದೇವತೆಗಳಿಂದ ನಮಸ್ಕರಿಸಲ್ಪಡುತ್ತಿರುವ ಪಾದವುಳ್ಳವನೂ, ಮತ್ತು ಮಂಗಳಗುಣಗಳಿಗೆಲ್ಲಾ ಆಶ್ರಯನೂ ಆದ ಆ ಪಾರ್ವತೀರಮಣನನ್ನು ಸ್ಮರಣೆಮಾಡಬೇಕು. ॥೧೫೭-೧೫೮॥

ವಿಷ್ಣುವೇ ಮೊದಲಾದ ದೇವತೆಗಳ ತಲೆಯಮೇಲಿನ ಕಿರೀಟಗಳಲ್ಲಿ ಖಚಿತವಾಗಿರುವ ರತ್ನಸಮೂಹಗಳಿಂದ ಪ್ರಕಾಶಿಸಲ್ಪಡುವ ಪಾದಗಳುಳ್ಳವನೂ, (ಅಂದರೆ ವಿಷ್ಣ್ವಾದಿದೇವತೆಗಳು ಆ ದೇವದೇವನ ಪಾದಕಮಲಗಳಿಗೆ ನಮಸ್ಕಾರಮಾಡುತ್ತಿರುವುದರಿಂದ ಅವರ ತಲೆಯಮೇಲೆ ಅಲಂಕರಿಸಿಕೊಂಡಿದ್ದ ಕಿರೀಟರತ್ನಗಳ ಕಾಂತಿಯು ಆ ದೇವನ ಕಾಲಮೇಲೆಲ್ಲಾ ಬಿದ್ದು ಶೋಭಿಸುತ್ತಿದ್ದಿತು.) ಅಪರಿಮಿತವಾದ ಐಶ್ವರ್ಯಗಳಿಂದ ಕೂಡಿದವನೂ, ನಾನಾ ರುದ್ರಗಣಗಳಿಂದ ಪರಿವೃತನೂ ಆದ ಶಿವನನ್ನು ಹೀಗೆ ಸ್ಮರಣೆಮಾಡಿ, ಮಹಾದೇವನಿಗೆ ನಮಸ್ಕಾರಮಾಡಿದನಂತರ ಭಸ್ಮಲೇಪನ, ಮೊದಲಾದವುಗಳನ್ನು ನಡೆಸಿಕೊಂಡು ಆಮೇಲೆ ಶಿವನನ್ನು ಪೂಜೆಮಾಡಬೇಕು. ॥೧೫೯-೧೬೦॥

ಎಲೈ ಬ್ರಾಹ್ಮಣನೇ! ಯಾವಾಗಲೂ ದ್ವಿಜರೆನಿಸಿದವರು ಶಿವತೀರ್ಥಗಳಲ್ಲೇ ಸ್ನಾನಮಾಡಬೇಕು ಬೇರೆಡೆಗಳಲ್ಲಿ ಸ್ನಾನವನ್ನೆಂದಿಗೂ ಮಾಡಲೇಬಾರದು. ಶಿವ

ಶಿವಲಿಂಗಸಮೀಪಸ್ಥಂ ಯದ್ಯತ್ತೀರ್ಥಂ ಭವಿಷ್ಯತಿ ।
ತತ್ತತ್ಸರ್ವಂ ದ್ವಿಜಶ್ರೇಷ್ಠ ಶಿವತೀರ್ಥಂ ವಿದುರ್ಬುಧಾಃ ॥೧೬೨॥

ಯೇನ ಯತ್ರ ತಪಸ್ತಪ್ತಂ ಶಿವಮುದ್ದಿಶ್ಯ ಸಾದರಂ ।
ತಚ್ಚ ತೀರ್ಥಂ ಮಹಾಪುಣ್ಯಂ ಶಿವತೀರ್ಥಂ ನ ಸಂಶಯಃ ॥೧೬೩॥

ವಿಷ್ಣ್ವಾದ್ಯೈಃ ಶಿವಮುದ್ದಿಶ್ಯ ಯತ್ರ ತಪ್ತಂ ತಪಃ ಪುರಾ।
ತಚ್ಚ ತೀರ್ಥಂ ಮಹಾಪುಣ್ಯಂ ಶಿವತೀರ್ಥಂ ನ ಸಂಶಯಃ ॥೧೬೪॥

ಕಶ್ಯಪಾತ್ರಿವಸಿಷ್ಠಾದ್ಯೈರ್ಯತ್ರ ತಪ್ತಂ ತಪಃ ಪುರಾ ।
ತಚ್ಚ ತೀರ್ಥಂ ಮಹಾಪುಣ್ಯಂ ಶಿವತೀರ್ಥಂ ನ ಸಂಶಯಃ ॥೧೬೫॥

ಗಂಧರ್ವಕಿನ್ನರಾದ್ಯೈಶ್ಚ ಯತ್ರ ತಪ್ತಂ ತಪಃ ಪುರಾ ।
ತಚ್ಚ ತೀರ್ಥಂ ಮಹಾಪುಣ್ಯಂ ಶಿವತೀರ್ಥಂ ನ ಸಂಶಯಃ ॥೧೬೬॥

ಯತ್ರೈವ ಶಿವಮುದ್ದಿಶ್ಯ ಸರ್ವೈಸ್ತಪ್ತಂ ತಪಃ ಪುರಾ ।
ಸ್ಥಾಸ್ಯತ್ಯೇವ ಹಿ ತತ್ರೈಕಂ ಶಿವಲಿಂಗಂ ಶಿವಾತ್ಮಕಂ ॥೧೬೭॥

ಲಿಂಗದ ಸಮೀಪದಲ್ಲಿರುವ ತೀರ್ಥಗಳನ್ನೆಲ್ಲಾ ಶಿವತೀರ್ಥಗಳೆಂಬುದಾಗಿಯೇ ತಿಳಿದವರು ಹೇಳುವರು. ॥೧೬೧-೧೬೨॥

ಯಾರು ಎಲ್ಲಿ ಶಿವನನ್ನು ದ್ದೇಶಿಸಿ ಆದರದಿಂದ ತಪಸ್ಸು ಮಾಡಿದರೋ ಅಂತಹ ಸ್ಥಳದಲ್ಲಿರುವ ತೀರ್ಥಗಳೆಲ್ಲಾ ಮಹಾಪುಣ್ಯಕರವಾದ ಶಿವತೀರ್ಥಗಳೇ ಎನ್ನುವುದರಲ್ಲಿ ಸಂದೇಹವಿಲ್ಲ ವಿಷ್ಣು ಮುಂತಾದ ದೇವತೆಗಳೂ, ಕಶ್ಯಪ, ಅತ್ರಿ, ವಸಿಷ್ಠ, ಮುಂತಾದ ಋಷಿಗಳೂ, ಗಂಧರ್ವ, ಕಿನ್ನರ, ಮುಂತಾದ ದೇವಯೋನಿಗಳೂ ಹಿಂದೆ ತಪಸ್ಸು ಮಾಡಿರುವ ಸ್ಥಳಗಳು ಮಹಾಪುಣ್ಯಪ್ರದವಾದ ಶಿವತೀರ್ಥಗಳೆನಿಸುವುದರಲ್ಲಿ ಸಂದೇಹವಿಲ್ಲ. ॥೧೬೩-೧೬೪-೧೬೫-೧೬೬॥

ಎಲ್ಲೆಲ್ಲಿ ಯಾರು ಯಾರು ಹಿಂದೆ ಶಿವನನ್ನು ಉದ್ದೇಶಿಸಿ ತಪಸ್ಸು ಮಾಡಿದರೋ ಅಲ್ಲೆಲ್ಲಾ ಶಿವಸ್ವರೂಪವಾದ ಒಂದೊಂದು ಶಿವಲಿಂಗವಿದ್ದೇ ಇರುವುದು. ಬ್ರಾಹ್ಮಣೋತ್ತಮನೇ! ಶಿವಲಿಂಗವನ್ನು ಪ್ರತಿಷ್ಠೆಮಾಡಿಕೊಂಡೇ ಶೈವರಾದವರು

ಶಿವಲಿಂಗಂ ಪ್ರತಿಷ್ಠಾಪ್ಯ ಶಿವಮುದ್ದಿಶ್ಯ ಶಾಂಭವಾಃ ।
ತಪಃ ಕುರ್ವಂತಿ ಯತ್ನೇನ ನಾನ್ಯಥಾ ದ್ವಿಜಪುಂಗವ ॥೧೬೮॥

ವಿಷ್ಣುಪ್ರಭೃತಯಃ ಸರ್ವೇ ಶಾಂಭವಾ ಏವ ತೈಸ್ತತಃ ।
ಶಿವಲಿಂಗಂ ಪ್ರತಿಷ್ಠಾಪ್ಯ ತಪಸ್ತಪ್ತಂ ಯಥಾವಿಧಿ ॥೧೬೯॥

ಶಿವ ಶಂಭೋ ಮಹೇಶೇತಿ ತ್ರಿಃ ಪೀತ್ವೈವ ಜಲಂ ತತಃ ।
ಸ್ನಾತ್ವಾ ಪುನಃ ಪಿಬೇದಾಪೋ ಮಂತ್ರೈಸ್ತೈರೇವ ಪೂರ್ವವತ್ ॥೧೭೦॥

ತತಃ ಕಾಲಾದ್ಯನೂದ್ಯೈವ ಪ್ರಾಣಾಯಾಮಪುರಃಸರಂ ।
ದೇಯಮರ್ಘ್ಯಂ ಭೈರವಾಯ ಜಪ್ತ್ವಾಮುಂ ಮಂತ್ರಮಾದರಾತ್ ॥೧೭೧॥

ಅತಿತೀಕ್ಷ್ಣ ಮಹಾಕಾಯ ಕಲ್ಪಾಂತದಹನೋಪಮ ।
ಭೈರವಾಯ ನಮಸ್ತುಭ್ಯಮನುಜ್ಞಾಂ ದಾತುಮರ್ಹಸಿ ॥೧೭೨॥

ಅಲ್ಲಿ ಹಿಂದೆ ನಿಯಮದಿಂದ ತಪಸ್ಸುಮಾಡುತ್ತಿದ್ದರು. ಶಿವಲಿಂಗವಿಲ್ಲದೇ ಎಂದಿಗೂ ತಪಸ್ಸನ್ನು ಮಾಡುತ್ತಲೇ ಇರಲಿಲ್ಲ. ||೧೬೭-೧೬೮||

ವಿಷ್ಣು ಮುಂತಾದವರೆಲ್ಲರೂ ಶಂಭುವಿನ ಭಕ್ತರೇ ಅಂದರೆ ಶಾಂಭವರೇ ಆಗಿರುವರು. ಆದ್ದರಿಂದ ಅವರೆಲ್ಲರೂ ಶಿವಲಿಂಗವನ್ನು ಪ್ರತಿಷ್ಠೆಮಾಡಿಕೊಂಡೇ ವಿಧಿಪ್ರಕಾರ ತಪಸ್ಸು ಮಾಡುತ್ತಿದ್ದರು 'ಶಿವ, ಶಂಭೋ, ಮಹೇಶ,' ಎಂಬುದಾಗಿ ಮೂರುಸಲ ನೀರನ್ನು ಆಚಮನಮಾಡಿ, ಅನಂತರ ಸ್ನಾನಮಾಡಿ, ಪುನಃ ಅದೇ ಮಂತ್ರದಿಂದ ಆಚಮನಮಾಡಬೇಕು. ||೧೬೯-೧೭೦||

ಅನಂತರ ಕಾಲ, ದೇಶ ಮುಂತಾದವುಗಳನ್ನು ಹೇಳಿಕೊಂಡು ಪ್ರಾಣಾಯಾಮ ಪೂರ್ವಕವಾಗಿ ಸಂಕಲ್ಪಮಾಡಿ, ಮುಂದೆಹೇಳುವ ಮಂತ್ರವನ್ನು ಉಚ್ಚರಿಸುತ್ತಾ ಭೈರವನೆನಿಸಿದ ಮಾಹೇಶ್ವರನಿಗೆ ಅರ್ಘ್ಯಕೊಡಬೇಕು. ತೀಕ್ಷ್ಣಸ್ವಭಾವದವನೂ, ದೊಡ್ಡ ದೇಹವುಳ್ಳವನೂ, ಕಲ್ಪಕಾಲದ ಕೊನೆಯಲ್ಲುಂಟಾಗುವ ಪ್ರಳಯಾಗ್ನಿ ಸದೃಶನೂ, ಆದ ಭೈರವನೇ, ನಿನಗೆ ನಮಸ್ಕಾರವು. ನನಗೆ ಶಿವಾರ್ಚನೆಗೆ ಅನುಮತಿಯನ್ನು ಕೊಡಲು ನೀನು ಅರ್ಹನಾಗಿರುವೆ ||೧೭೧-೧೭೨||

ಅರ್ಘ್ಯಂ ದತ್ವಾ ಭೈರವಾಯ ಮಂತ್ರೇಣಾನೇನ ಸಾದರಂ ।
ಸ್ನಾತವ್ಯಮತಿಯತ್ನೇನ ಭಸ್ಮಧಾರಣಪೂರ್ವಕಂ ॥೧೭೩॥

ಜಲೇ ನಿಮಜ್ಜ್ಯ ಸ್ಮರ್ತವ್ಯಃ ಪಾರ್ವತೀರಮಣಃ ಪ್ರಭುಃ ।
ಶಿವನಾಮಾನುಸಂಧಾನಂ ಕರ್ತವ್ಯಂ ಚ ಸ್ವಶಕ್ತಿತಃ ॥೧೭೪॥

ಜಲೇ ನಿಮಜ್ಜ್ಯಾಷ್ಟವಾರಂ ಮಹಾದೇವಮನುಂ ಜಪೇತ್ ।
ಸ ಜಪಃ ಸರ್ವಧರ್ಮಾಣಾಂ ಹೇತುರಿತ್ಯುಚ್ಯತೇ ಬುಧೈಃ ॥೧೭೫॥

ಮಾರ್ಜನಾದಿ ತತಃ ಕೃತ್ವಾ ಧೃತ್ವಾ ವಸ್ತ್ರಂ ಚ ಪಾವನಂ ।
ಪುನರಾಚಮನಂ ಕಾರ್ಯಂ ಮಂತ್ರೈಸ್ತೈರೇವ ಸಾದರಂ ॥೧೭೬॥

ಉದ್ಧೂಳ್ಯ ಭಸ್ಮನಾಂಗಾನಿ ಧೃತ್ವಾ ತಿರ್ಯಕ್ತ್ರಿಪುಂಡ್ರಕಂ ।
ರುದ್ರಾಕ್ಷಧಾರಣಂ ಕೃತ್ವಾ ಸಂಧ್ಯಾ ಕಾರ್ಯಾ ತತಃ ಪರಂ ॥೧೭೭॥

ತತಃ ಶಿವಾರ್ಚನಂ ಕಾರ್ಯಂ ಬಿಲ್ವಪತ್ರಾದಿಸಾಧನೈಃ ।
ತತೋ ಹೋಮಾದಿಕಂ ಕಾರ್ಯಂ ಪುನಶ್ಚ ಶಿವಪೂಜನಂ ॥೧೭೮॥

ಈ ಮಂತ್ರೋಚ್ಚಾರಣೆಯಿಂದ ಆದರಪೂರ್ವಕವಾಗಿ ಭೈರವನಿಗೆ ಅರ್ಘ್ಯವನ್ನು ಕೊಟ್ಟು ಭಸ್ಮಧಾರಣೆಮಾಡಿಕೊಂಡು ವಿಶೇಷ ಶ್ರದ್ಧೆಯಿಂದ ಸ್ನಾನಮಾಡಬೇಕು. ಪಾರ್ವತೀರಮಣನೆನಿಸಿದ ಆ ಪ್ರಭುವನ್ನು ನೀರಿನಲ್ಲಿ ಮುಳುಗುವಾಗ ಸ್ಮರಣೆಮಾಡಬೇಕು ಆಗ ತನ್ನ ಶಕ್ತಿಗನುಗುಣವಾಗಿ ಶಿವನಾಮಗಳನ್ನು ಅನುಸಂಧಾನಮಾಡಬೇಕು. ||೧೭೩-೧೭೪||

ನೀರಿನಲ್ಲಿ ಮುಳುಗಿದ ಮೇಲೆ ಎಂಟುಬಾರಿ ಆ ಮಹಾದೇವನ ಮಂತ್ರವನ್ನು (ಶಿವಪಂಚಾಕ್ಷರವನ್ನು) ಜಪಿಸಬೇಕು. ಪಂಡಿತರು ಆ ಜಪವನ್ನು ಎಲ್ಲಾ ಧರ್ಮಗಳಿಗೂ ಕಾರಣಭೂತವಾದದ್ದೆಂದು ಹೇಳುತ್ತಾರೆ. ಆಮೇಲೆ ಮಾರ್ಜನೆ, ಮೊದಲಾದವುಗಳನ್ನು ಮಾಡಿಕೊಂಡು ಪರಿಶುದ್ಧವಾದ ಬಟ್ಟೆಯನ್ನು ಧರಿಸಿ, ಪುನಃ ಅದೇ 'ಶಿವ, ಶಂಭೊ, ಮಹೇಶ'ನೆಂಬ ಮಂತ್ರಗಳಿಂದ ಆದರಪೂರ್ವಕವಾಗಿ ಆಚಮನ ಮಾಡಬೇಕು. ||೧೭೫-೧೭೬||

ವಿಭೂತಿಯಿಂದ ಅಂಗಾಂಗಗಳಿಗೆಲ್ಲಾ ಲೇಪನಮಾಡಿಕೊಂಡು ಭಸ್ಮತ್ರಿಪುಂಡ್ರವನ್ನು ಧರಿಸಿ, ರುದ್ರಾಕ್ಷಗಳನ್ನು ಅಲಂಕರಿಸಿಕೊಂಡನಂತರ ಸಂಧ್ಯಾವಂದನೆಯನ್ನು

ಸ್ನಾನಂ ಚೈತ್ರಾದಿಮಾಸೇಷು ಸರ್ವೇಷ್ವಪ್ಯತಿಯತ್ನತಃ ।
ಶಿವಪ್ರೀತ್ಯರ್ಥಮೇವೇತಿ ಕರ್ತವ್ಯಂ ಬ್ರಾಹ್ಮಣಾದಿಭಿಃ ॥೧೭೯॥

ಸತ್ಕರ್ಮ ಯದ್ಯತ್ತತ್ಸರ್ವಂ ಶಿವಪ್ರೀತ್ಯರ್ಥಮೇವ ಹಿ ।
ಕ್ರಿಯತೇ ವೈದಿಕೈಃ ಸರ್ವೈರ್ವೇದಮಾರ್ಗಪ್ರವರ್ತಕೈಃ ॥೧೮೦॥

ಸ್ನಾನದಾನಾದಿಕಂ ಸರ್ವಂ ಶಿವಪ್ರೀತ್ಯರ್ಥಮಿತ್ಯತಃ ।
ಕರ್ತವ್ಯಮತಿಯತ್ನೇನ ವೇದಮಾರ್ಗರತೈರ್ದ್ವಿಜೈಃ ॥೧೮೧॥

ಫಲಂ ಭವತಿ ತದ್ವಿಪ್ರ ಸ್ನಾನದಾನಾದಿಕರ್ಮಣಾಂ ।
ತತ್ಫಲಸ್ಯ ಶಿವೋ ದಾತಾ ಶಿವಾನ್ಯಸ್ತು ನ ಸರ್ವಥಾ ॥೧೮೨॥

ಸರ್ವಂ ಶಿವಾರ್ಪಣಂ ಕೃತ್ವಾ ಸ್ವಕೃತಂ ಕರ್ಮ ವೈದಿಕಂ ।
ತಿಷ್ಠಂತಿ ವೇದಮಾರ್ಗಸ್ಥಾ ಋಷಯೋ ಬ್ರಹ್ಮವಾದಿನಃ ॥೧೮೩॥

ಆಚರಿಸಬೇಕು. ಆಮೇಲೆ ಬಿಲ್ವಪತ್ರೆ ಮೊದಲಾದ ಸಲಕರಣೆಗಳಿಂದ ಶಿವಪೂಜೆ ನಡೆಸಿ, ಆಮೇಲೆ ಹೋಮವೇ ಮೊದಲಾದವುಗಳನ್ನು ಮುಗಿಸಿ ಪುನಃ ಶಿವನನ್ನು ಪೂಜಿಸಬೇಕು. ॥೧೭೭-೧೭೮॥

ಬ್ರಾಹ್ಮಣರೇ ಮೊದಲಾದ ಸಕಲ ವರ್ಣದವರೂ, ಚೈತ್ರವೇ ಮುಂತಾದ ಎಲ್ಲಾ ತಿಂಗಳಲ್ಲಿಯೂ ಶಿವನ ಪ್ರೀತಿಯನ್ನು ಸಂಪಾದಿಸುವುದಕ್ಕೋಸ್ಕರವೇ ತೀರ್ಥಸ್ನಾನಮಾಡಬೇಕು. ವೇದಮಾರ್ಗವನ್ನನುಸರಿಸಿ ನಡೆಯುವ ವೈದಿಕರೆಲ್ಲರೂ ತಾವು ಮಾಡುವ ಎಲ್ಲಾ ಸತ್ಕರ್ಮಗಳನ್ನೂ ಆ ಶಿವನ ಪ್ರೀತಿಗೋಸ್ಕರವಾಗಿಯೇ ನಡೆಸುತ್ತಿರುವರು. ॥೧೭೯-೧೮೦॥

ವೇದಮಾರ್ಗನಿರತರಾದ ದ್ವಿಜರು ಸ್ನಾನ, ಪಾನ, ಮುಂತಾದ ಕರ್ಮಗಳನ್ನೆಲ್ಲಾ ಶಿವನ ಪ್ರೀತಿಗಾಗಿಯೇ ಎಂದು ಸಂಕಲ್ಪಿಸಿ ನಿಯಮಬದ್ಧರಾಗಿ ಮಾಡಬೇಕು ಆರೀತಿ ಆಚರಿಸಿದ ಸ್ನಾನ ಮತ್ತು ದಾನ ಮುಂತಾದ ಕರ್ಮಗಳಿಗೆ ಅನುಗುಣವಾದ ಫಲವು ಶಿವಾನುಗ್ರಹದಿಂದಲೇ ಉಂಟಾಗುವುದು ಅದರ ಫಲವನ್ನು ಕೊಡುವವನೂ ಶಿವನೇ ಅಲ್ಲದೇ ಮತ್ತಾರೂ ಆಗಲಾರರು. ॥೧೮೧-೧೮೨॥

ವೇದಮಾರ್ಗತತ್ಪರರೂ ಬ್ರಹ್ಮಜ್ಞಾನಿಗಳೂ ಆದ ಋಷಿಗಳು ತಾವು ಮಾಡಿದ ವೈದಿಕಕರ್ಮಗಳನ್ನೆಲ್ಲಾ ಶಿವನಿಗೆ ಮೊದಲು ಸಮರ್ಪಣೆಮಾಡುವರು.

ನ ಕರಿಷ್ಯತಿ ಸತ್ಕರ್ಮ ವೈದಿಕಂ ಯಃ ಶಿವಾರ್ಪಣಂ ।
ಸ ನ ತತ್ಕರ್ಮಫಲಭಾಕ್ಪ್ರೇತ್ಯೇತ ಪ್ರತ್ಯವೈತಿ ಚ ॥೧೮೪॥

ಸತ್ಕರ್ಮ ವೈದಿಕಂ ಶುದ್ಧಂ ಶಿವಾರ್ಥಂ ಯಃ ಕರಿಷ್ಯತಿ ।
ಸ ತತ್ಕರ್ಮಫಲಂ ಪೂರ್ಣಂ ಪ್ರಾಪ್ನೋತ್ಯೇವ ನ ಸಂಶಯಃ ॥೧೮೫॥

ಏಕ ಏವ ಮಹಾರುದ್ರೋ ವಿಶ್ವಾತ್ಮಾ ವಿಶ್ವಸಂಶ್ರಯಃ ।
ವಿಶ್ವಂ ವ್ಯಾಪ್ಯಾಖಿಲಂ ಭುಂಕ್ತೇ ವಿಶ್ವಭುಗ್ಭೂತಭಾವನಃ ॥೧೮೬॥

ಈಶಃ ಸರ್ವಸ್ಯ ಜಗತಃ ಪ್ರಭುರನ್ಯೋ ನ ತಾದೃಶಃ ।
ಈಶ ಇತ್ಯಾದಿವೇದೋಽಪಿ ಶಿವ ಏವ ಪ್ರವರ್ತತೇ ॥೧೮೭॥

ಈಶಸ್ತು ಶಿವನಾಮಾನ್ಯೋ ನೇಶಃ ಸರ್ವಾತ್ಮನಾ ದ್ವಿಜಃ ।
ಏವಮೀಶಾನ ಇತ್ಯಾದ್ಯೈರ್ನಿರ್ಣೀತೋಽರ್ಥೋ ನ ಸಂಶಯಃ ॥೧೮೮॥

ವೇದೋಕ್ತವಾದ ಕರ್ಮವನ್ನು ಪರಶಿವನಿಗೆ ಸಮರ್ಪಣೆಮಾಡದವನು ಆ ಕರ್ಮದ ಫಲವನ್ನು ಎಂದಿಗೂ ಹೊಂದುವುದಿಲ್ಲ. ಅಲ್ಲದೇ ಅವನು ಸಮಸ್ತ ಪಾಪಕ್ಕೂ ಗುರಿಯಾಗುತ್ತಾನೆ. ॥೧೮೩-೧೮೪॥

ಶುದ್ಧವಾದ ವೈದಿಕವೆನಿಸಿದ ಸತ್ಕರ್ಮಗಳನ್ನು ಶಿವನನ್ನುದ್ದೇಶಿಸಿ ಮಾಡುವವನು ಆ ಕರ್ಮದ ಫಲವನ್ನು ಸಂಶಯವಿಲ್ಲದೆ ಪೂರ್ಣವಾಗಿ ಪಡೆಯುತ್ತಾನೆ. ಮಹಾರುದ್ರನೆನಿಸಿದ ಶಿವನೊಬ್ಬನೇ ಜಗತ್ಸ್ವರೂಪನೂ ಜಗತ್ತಿಗೆಲ್ಲಾ ಆಶ್ರಯನೂ ಪ್ರಪಂಚದ ಸ್ಥಾವರಜಂಗಮಾತ್ಮಕವಾದ ಪ್ರಾಣಿಗಳನ್ನೆಲ್ಲಾ ಮೊದಲು ಸೃಷ್ಟಿಮಾಡಿ, ಪ್ರಳಯಕಾಲದಲ್ಲಿ ನಾಶಮಾಡುತ್ತಾ, ಮಧ್ಯಕಾಲದಲ್ಲಿ ರಕ್ಷಣೆಯನ್ನೆಸಗಿ ಪ್ರಪಂಚವನ್ನೆಲ್ಲಾ ವ್ಯಾಪಿಸಿ ಎಲ್ಲವನ್ನೂ ಅನುಭವಿಸುತ್ತಿರುವನು. ॥೧೮೫-೧೮೬॥

ಸಕಲ ಜಗತ್ತಿಗೂ ಈಶ್ವರನೇ ಸ್ವಾಮಿಯು, ಬೇರೆಯವರು ಅಂತಹವರಲ್ಲ ಎಂಬ ' ಈಶಃ ಸರ್ವಸ್ಯ ಜಗತಃ ' ಎಂಬ ವೇದವೂ ಶಿವನಲ್ಲಿಯೇ ರೂಢವಾಗಿರುವುದು. ಅಯ್ಯ ಬ್ರಾಹ್ಮಣನೆ, ಈಶನೆನಿಸಿರುವ ದೇವನು ಆ ಶಿವನಾಮಾಂಕಿತವಾದ ಮಹಾದೇವನೇ ವಿನಾ ಬೇರೆಯವನಲ್ಲ. ಹೀಗೆಯೇ "ಈಶಾನಃ ಸರ್ವವಿದ್ಯಾನಾಂ" ಮುಂತಾದ ಶ್ರುತಿವಾಕ್ಯಗಳಿಂದಲೂ ಇದೇ ಅರ್ಥವೇ ನಿರ್ಣಯಿಸಲ್ಪಟ್ಟಿರುವುದು. ಇದರಲ್ಲಿ ಸಂದೇಹಪಡಬೇಡ. ॥೧೮೭-೧೮೮॥

ಜಪಹೋಮತಪೋದಾನಯಾಗಧರ್ಮಾದಿಭಿಃ ಶಿವಃ ।
ತುಷ್ಟಸ್ತತ್ಕರ್ಮಫಲದೋ ಭವತ್ಯೇವ ನ ಸಂಶಯಃ ॥೧೮೯॥

ದತ್ತಂ ಜಪ್ತಂ ಹುತಂ ತಪ್ತಂ ವಿನಿವೇದ್ಯ ಸದಾಶಿವೇ ।
ತಿಷ್ಠಂತ್ಯನಾಕುಲಾಃ ಪ್ರಾಜ್ಞಾಃ ವೇದಾಂತಾರ್ಥವಿಚಾರಕಾಃ ॥೧೯೦॥

ಕ್ರಿಯಂತೇ ಶ್ರೌತಕರ್ಮಾಣಿ ಶಂಕರಾರ್ಥಂ ತತಸ್ತತಃ ।
ಶಿವೇ ನಿವೇದನೀಯಾನಿ ಸ್ನಾನಾದೀನ್ಯಪಿ ಸಾದರಂ ॥೧೯೧॥

ಕೃತ್ವಾ ಚೈತ್ರಾದಿಮಾಸೇಷು ಸ್ನಾನಂ ನಿತ್ಯಂ ದ್ವಿಜಾತಿಭಿಃ ।
ಮಂತ್ರೈರೇತೈಃ ಸ್ನಾನಕರ್ಮ ನಿವೇದ್ಯಂ ಗಿರಿಜಾಪತೌ ॥೧೯೨॥

ಚೈತ್ರಸ್ನಾನೇನ ಭಗವಾನ್ಮಹಾರುದ್ರೋ ವಿರಾಟ್ಪತಿಃ ।
ಪ್ರೀಣಾತು ಪಾರ್ವತೀನಾಥಶ್ಚಿತ್ರಸೃಷ್ಟಿವಿಶಾರದಃ ॥೧೯೩॥

ಜಪ, ಹೋಮ, ತಪಸ್ಸು, ದಾನ, ಯಾಗ ಮತ್ತು ಧರ್ಮ ಮುಂತಾದುವು ಗಳಿಂದ ಸಂತುಷ್ಟನಾಗಿ ಪರಶಿವನು ಆ ಕರ್ಮಗಳ ಫಲವನ್ನು ಸಂದೇಹವೇ ಇಲ್ಲದೇ ಕೊಡುತ್ತಾನೆ. . ತಾವು ಮಾಡಿದ ದಾನ, ಜಪ, ಹೋಮ ಮತ್ತು ತಪಸ್ಸುಗಳನ್ನೆಲ್ಲಾ ಸದಾಶಿವನಲ್ಲಿಯೇ ಸಮರ್ಪಣೆ ಮಾಡಿ, ವೇದಾಂತಗಳ ಅರ್ಥವನ್ನೆಲ್ಲಾ ಚೆನ್ನಾಗಿ ಪರಿಶೀಲಿಸಿರುವ ಪ್ರಾಜ್ಞರು ಯಾವ ತೊಂದರೆಯೂ ಇಲ್ಲದೇ ಸುಖವಾಗಿರುವರು. ॥೧೮೯-೧೯೦॥

ಪ್ರಾಜ್ಞರೆಲ್ಲರೂ ವೇದೋಕ್ತವಾದ ಕರ್ಮಗಳನ್ನೆಲ್ಲಾ ಶಂಕರನನ್ನುದ್ದೇಶ ಮಾಡಿಯೇ ನಡೆಸುತ್ತಿರುವುದರಿಂದ ಸ್ನಾನವೇ ಮೊದಲಾದ ಸಕಲ ಸರ್ಮಗಳನ್ನೂ ಆದರದಿಂದ ಶಿವನಿಗೇ ಸಮರ್ಪಣೆಮಾಡಬೇಕು. ನಿತ್ಯವೂ ಬ್ರಾಹ್ಮಣರೇ ಮುಂತಾದ ನಾಲ್ಕು ವರ್ಣದವರೂ ಚೈತ್ರ, ವೈಶಾಖ, ಜ್ಯೇಷ್ಠ, ಆಷಾಢ, ಶ್ರಾವಣ, ಭಾದ್ರಪದ, ಆಶ್ವಯುಜ, ಕಾರ್ತಿಕ, ಮಾರ್ಗಶಿರ, ಪುಷ್ಯ, ಮಾಘ ಮತ್ತು ಫಾಲ್ಗುಣ ಮಾಸ ಗಳಲ್ಲಿ ಸ್ನಾನಮಾಡಿ, ಮುಂದೆ ಹೇಳುವ ಈ ಮಂತ್ರಗಳಿಂದ ತಾನು ಮಾಡಿದ ಸ್ನಾನ ಕರ್ಮವನ್ನು ಆ ಗಿರಿಜಾರಮಣನಿಗೆ ಸಮರ್ಪಣೆಮಾಡಬೇಕು. ॥೧೯೧-೧೯೨॥

'ಚೈತ್ರಮಾಸದಲ್ಲಿ ಮಾಡಿದ ಸ್ನಾನದಿಂದ, ವಿರಾಟ್‌ಸ್ವರೂಪನೆನಿಸಿದ ಆ ಶ್ರೀಮನ್ನಾರಾಯಣನಿಗೂ ಒಡೆಯನೂ, ಪಾರ್ವತೀದೇವಿಯ ರಮಣನೂ, ನಾನಾ

ವೈಶಾಖಮಾಸಸ್ನಾನೇನ ಭಗವಾನ್ಗಿರಿಜಾಪತಿಃ ।
ಪ್ರೀಣಾತು ಶ್ರೀಮಹಾದೇವೋ ವಿಷ್ಣುಬ್ರಹ್ಮಾದಿವಂದಿತಃ ॥೧೯೪॥

ಜ್ಯೇಷ್ಠಸ್ನಾನೇನ ಭಗವಾನ್ದೇವಶ್ರೇಷ್ಠೋ ಮಹೇಶ್ವರಃ ।
ಪ್ರೀಣಾತು ಶಾಂಕರೀಯುಕ್ತೋ ನಾನಾಗಣನಿಷೇವಿತಃ ॥೧೯೫॥

ಆಷಾಢಮಾಸಸ್ನಾನೇನ ಭಗವಾನ್ಭಕ್ತವತ್ಸಲಃ ।
ಪ್ರೀಣಾತು ಸರ್ವಭೂತಾತ್ಮಾ ಸತ್ಯೋ ದಾಕ್ಷಾಯಣೀಯುತಃ ॥೧೯೬॥

ನಭಃ ಸ್ನಾನೇನ ಭಗವಾನ್ಭಗನೇತ್ರಭಿದೀಶ್ವರಃ ।
ಪ್ರೀಣಾತ್ವಾರ್ಯಾಯುತೋ ದೇವೋ ದೇವವರ್ಯಃ ಸನಾತನಃ ॥೧೯೭॥

ನಭಸ್ಯಮಾಸಸ್ನಾನೇನ ಭಗವಾನ್ವಿಶ್ವಲೋಚನಃ ।
ಪ್ರೀಣಾತು ಸೋಮಃ ಸೋಮಾತ್ಮಾ ವಿಭುರ್ಹೈಮವತೀಯುತಃ ॥೧೯೮॥

ವಿಧವಾದ ಚಿತ್ರಸೃಷ್ಟಿಯನ್ನೆಸಗುವುದರಲ್ಲಿ ಚತುರನೂ ಆದ ಭಗವಂತನೆನಿಸಿದ ಮಹಾರುದ್ರದೇವನು ಸಂತೋಷಹೊಂದಲಿ.' 'ವೈಶಾಖಮಾಸಸ್ನಾನದಿಂದ ದೇವತೋತ್ತಮನೂ, ವಿಷ್ಣು, ಬ್ರಹ್ಮ, ಮುಂತಾದ ದೇವತೆಗಳಿಂದ ನಮಸ್ಕೃತನೂ ಆದ ಭಗವಂತನೆನಿಸಿರುವ ಆ ಗಿರಿಜಾಕಾಂತನು ಪ್ರೀತಿಹೊಂದಲಿ.' ॥೧೯೩-೧೯೪॥

'ಜ್ಯೇಷ್ಠಮಾಸಸ್ನಾನದಿಂದ ದೇವತೆಗಳಲ್ಲಿ ಶ್ರೇಷ್ಠನೂ, ಮಂಗಳಸ್ವರೂಪಿಣಿಯಾದ ದೇವಿಯಿಂದೊಡಗೂಡಿದವನೂ, ನಾನಾವಿಧವಾದ ರುದ್ರಗಣಗಳಿಂದ ಸೇವಿಸಲ್ಪಡುವವನೂ ಆದ ಭಗವಾನ್ಮಹೇಶ್ವರನು ಸುಪ್ರೀತನಾಗಲಿ' 'ಭಕ್ತರಲ್ಲಿ ತುಂಬಾ ಪ್ರೀತಿಯುಳ್ಳವನೂ, ಸಕಲ ಭೂತಸ್ವರೂಪನೂ, ಸತ್ಯಮೂರ್ತಿಯೂ, ದಕ್ಷಬ್ರಹ್ಮನ ಮಗಳಾದ ದಾಕ್ಷಾಯಣಿಯೊಡನಾಡಿಯೂ ಆದ ಭಗವಂತನು ಈ ಆಷಾಢಮಾಸದ ಸ್ನಾನದಿಂದ ಸಂತುಷ್ಟನಾಗಲಿ.' ॥೧೯೫-೧೯೬॥

'ಭಗಸಂಜ್ಞಕವಾದ ದೇವತೆಯ ಕಣ್ಣನ್ನು ಕಿತ್ತವನೂ, ಐಶ್ವರ್ಯಭರಿತನೂ ಪೂಜ್ಯಳಾದ ಅಂಬಿಕಾದೇವಿಯ ರಮಣನೂ, ದೇವಶ್ರೇಷ್ಠನೂ, ಸನಾತನನೂ ಆದ ಭಗವಂತನು ಶ್ರಾವಣಮಾಸಸ್ನಾನದಿಂದ ತೃಪ್ತಿಹೊಂದಲಿ' 'ಭಾದ್ರಪದಮಾಸದ ಸ್ನಾನದಿಂದ ಜಗಚ್ಚಕ್ಷುವೂ, (ಸಕಲ ಪ್ರಪಂಚಸ್ವರೂಪವೇ ತಾನಾಗಿರುವುದರಿಂದ ಅವುಗಳ ನೇತ್ರವೇ ಶಿವನ ನೇತ್ರವೆಂದು ಹೀಗೆ ವ್ಯವಹೃತವಾಗಿದೆ) ಉಮಾ ಸಹ

ಆಶ್ವಿನಮಾಸಸ್ನಾನೇನ ಭಗವಾನ್ವಿಶ್ವಹೃದ್ಗತಃ ।
ಪ್ರೀಣಾತು ತ್ರಿಪುರಾರಾತಿರೀಶಾನೀಪ್ರಾಣನಾಯಕಃ ॥೧೯೯॥

ಭಗವಾನ್ಕಾರ್ತಿಕಸ್ನಾನಾತ್ಸೋಮಸೂರ್ಯಾಗ್ನಿಲೋಚನಃ ।
ಪ್ರೀಣಾತು ದುರ್ಗಾಸಂಸಕ್ತೋ ದುರ್ಗಪಾತಕನಾಶಕಃ ॥೨೦೦॥

ಮಾರ್ಗಶೀರ್ಷಸ್ಯ ಮಾಸೀಯಸ್ನಾನೇನ ಭಗವಾನ್ಭವಃ ।
ಪ್ರೀಣಾತು ಸಚ್ಚಿದಾನಂದೋ ಭವಾನೀಪ್ರಾಣನಾಯಕಃ ॥೨೦೧॥

ಪುಷ್ಯಸ್ನಾನೇನ ಭಗವಾನ್ಪುಷ್ಟಿದಃ ಪುಷ್ಟಿನಾಯಕಃ ।
ಪ್ರೀಣಾತು ಮನ್ಮಥಾರಾತಿರಂಬಿಕಾಪ್ರಾಣವಲ್ಲಭಃ ॥೨೦೨॥

ಮಾಘಸ್ನಾನೇನ ಭಗವಾನುಮಾಕಾಂತೋ ಜಗತ್ಪಿತಾ ।
ಪ್ರೀಣಾತು ಶಿವಯಾ ಯುಕ್ತಃ ಸರ್ವಮಂಗಲಸಂಶ್ರಯಃ ॥೨೦೩॥

ಚಾರಿಯೂ, ಸೋಮಸ್ವರೂಪನೂ, ವಿಭುವೂ, ಹಿಮವತ್ಕನ್ಯಕಾರಮಣನೂ ಆದ ಭಗವಂತನು ಪ್ರೀತನಾಗಲಿ.' ॥೧೯೭-೧೯೮॥

'ಅಶ್ವಯುಜಮಾಸಸ್ನಾನದಿಂದ, ಸಕಲಪ್ರಪಂಚದ ಹೃದಯದಲ್ಲಿಯೂ ನೆಲಸಿರುವವನೂ, ತ್ರಿಪುರಾಸುರರ ಶತ್ರುವೂ, ಜಗದಂಬಿಕೆಯ ಪ್ರಾಣಕಾಂತನೂ ಆದ ಭಗವಂತನು ಸುಪ್ರೀತನಾಗಲಿ.' 'ಚಂದ್ರ, ಸೂರ್ಯ ಮತ್ತು ಅಗ್ನಿ ಇವರನ್ನೇ ಮೂರು ಕಣ್ಣುಗಳನ್ನಾಗಿ ಮಾಡಿಕೊಂಡಿರುವವನೂ, ದುರ್ಗಾದೇವಿಯೊಡಗೂಡಿದವನೂ, ಘೋರವಾದ ಪಾಪವನ್ನು ನಾಶಮಾಡುವವನೂ ಆದ ಭಗವಂತನು ಕಾರ್ತೀಕಮಾಸಸ್ನಾನದಿಂದ ಪ್ರೀತಿಯನ್ನು ಹೊಂದಲಿ.' ॥೧೯೯-೨೦೦॥

'ಮಾರ್ಗಶಿರಮಾಸದ ಸ್ನಾನದಿಂದ ಸಕಲ ಜಗದುತ್ಪತ್ತಿಸ್ಥಿತಿಲಯಕರ್ತನೂ, ಸಚ್ಚಿದಾನಂದಸ್ವರೂಪನೂ, ಭವಾನೀದೇವಿಯ ಪ್ರಾಣಕಾಂತನೂ ಆದ ಭಗವಂತನು ಪ್ರೀತಿಹೊಂದಲಿ.' 'ಪುಷ್ಯಮಾಸದ ಸ್ನಾನದಿಂದ ಪುಷ್ಟಿಯನ್ನುಂಟುಮಾಡುವವನೂ ಪುಷ್ಟಿಪ್ರದವಾದ ವಸ್ತುಗಳಿಗೆಲ್ಲಾ ನಾಯಕನೂ, ಮನ್ಮಥನ ಶತ್ರುವೂ, ಅಂಬಿಕಾದೇವಿಯ ರಮಣನೂ ಆದ ಭಗವಂತನು ಸಂತುಷ್ಟನಾಗಲಿ.' ॥೨೦೧-೨೦೨॥

'ಮಾಘಮಾಸದ ಸ್ನಾನದಿಂದ ಉಮಾರಮಣನೂ, ಜಗತ್ತಿಗೆಲ್ಲಾ ತಂದೆಯೂ, ಮಂಗಳವಿಗ್ರಹಳಾದ ದೇವಿಯೊಡಗೂಡಿದವನೂ, ಸಕಲ ಮಂಗಳ

ಭಗವಾನ್ಫಾಲ್ಗುಣಸ್ನಾನಾನ್ನೀಲಕಂಠೋ ಜಗತ್ಪತಿಃ ।
ಪ್ರೀಣಾತು ಮಂಗಲಾಯುಕ್ತಃ ಸರ್ವಮಂಗಲದಾಯಕಃ ॥೨೦೪॥

ಸ್ನಾನೇನಾಧಿಕಮಾಸಸ್ಯ ನಿರ್ಮಲಜ್ಞಾನದಾಯಕಃ ।
ಮೃಡಾನೀಚಿತ್ತಪದ್ಮಾರ್ಕಃ ಪ್ರೀಣಾತು ಭಗವಾನ್ಮೃಡಃ ॥೨೦೫॥

ಮಂತ್ರಾನೇವಂ ಸಮುಚ್ಚಾರ್ಯ ಪ್ರತಿಮಾಸಂ ಪ್ರಯತ್ನತಃ ।
ಸ್ನಾನಂ ಯಃ ಕುರುತೇ ನಿತ್ಯಂ ಸಸ್ನಾನಫಲಭಾಗ್ಭವೇತ್ ॥೨೦೬॥

ಪಲಾಶಪುಷ್ಪೈರ್ಯಃ ಕುರ್ಯಾದ್ವಸಂತೇ ಶಂಕರಾರ್ಚನಂ ।
ದೇವೇಂದ್ರತ್ವಮವಾಪ್ನೋತಿ ಸ್ವರ್ಗೇಶತ್ವಾಭಿಲಾಷಕಃ ॥೨೦೭॥

ಗ್ರೀಷ್ಮೇ ತು ಮಲ್ಲಿಕಾಪುಷ್ಪೈರ್ಯಃ ಕುರ್ಯಾಚ್ಛಂಕರಾರ್ಚನಂ ।
ಬ್ರಹ್ಮತ್ವಂ ಸಮವಾಪ್ನೋತಿ ಬ್ರಹ್ಮತ್ವಂ ಯದಿ ವಾಂಛತಿ ॥೨೦೮॥

ಗಳಿಗೂ ಆಶ್ರಯನೂ ಆದ ಭಗವಂತನು ಪ್ರೀತನಾಗಲಿ.' 'ಫಾಲ್ಗುಣಮಾಸ ಸ್ನಾನದಿಂದ ನೀಲಕಂಠನೂ, (ವಿಷಪಾನದಿಂದ ಕಪ್ಪಾದ ಕೊರಲುಳ್ಳವನೂ) ಜಗದೊಡೆಯನೂ, ಮಂಗಲಾದೇವಿಯೊಡನಾಡಿಯೂ, ಸಕಲ ಮಂಗಳಗಳನ್ನೂ ಉಂಟುಮಾಡುವವನೂ ಆದ ಭಗವಂತನು ತೃಪ್ತನಾಗಲಿ. ॥೨೦೩-೨೦೪॥

'ಅಧಿಕಮಾಸದ ಸ್ನಾನದಿಂದ, ನಿರ್ಮಲವಾದ ಜ್ಞಾನವನ್ನು ಉಂಟುಮಾಡುವವನೂ, ಪಾರ್ವತೀದೇವಿಯ ಮನಸ್ಸೆಂಬ ಕಮಲಕ್ಕೆ ಸೂರ್ಯನಂತೆ ಇರುವವನೂ ಭಗವಂತನೂ ಆದ ಮೃಡನು ಪ್ರೀತಿಹೊಂದಲಿ.' 'ಈರೀತಿ ಪ್ರತಿಯೊಂದು ಮಾಸದಲ್ಲಿಯೂ ಆಯಾ ಮಾಸಗಳಿಗೆ ಹೇಳಿರುವ ಮಂತ್ರಗಳನ್ನುಚ್ಚಾರಮಾಡಿಕೊಂಡು ನಿತ್ಯವೂ ನಿಯಮದಿಂದ ಸ್ನಾನಮಾಡುವವನು ಅವಶ್ಯವಾಗಿಯೂ ಆ ಸ್ನಾನಫಲವನ್ನು ಹೊಂದುತ್ತಾನೆ. ॥೨೦೫-೨೦೬॥

ವಸಂತಋತುವಿನಲ್ಲಿ (ಅಂದರೆ ಚೈತ್ರ-ವೈಶಾಖಮಾಸಗಳಲ್ಲಿ) ಮುತ್ತುಗದ ಹೂಗಳಿಂದ ಶಂಕರನನ್ನು ಅರ್ಚಿಸುವವನು ಸ್ವರ್ಗಾಧಿಪತಿಯಾದ ಇಂದ್ರಪದವಿಯನ್ನೇ ಬಯಸಿದರೂ ಸುಲಭವಾಗಿ ಹೊಂದುತ್ತಾನೆ. ಗ್ರೀಷ್ಮಋತುವಿನಲ್ಲಿ (ಅಂದರೆ ಜ್ಯೇಷ್ಠ ಆಷಾಢಮಾಸಗಳಲ್ಲಿ) ಶಂಕರನನ್ನು ಮಲ್ಲಿಗೆ ಹೂಗಳಿಂದ ಪೂಜೆಮಾಡುವವನು ಬ್ರಹ್ಮಪಟ್ಟವನ್ನೇ ಅಪೇಕ್ಷಿಸಿದರೂ ಪಡೆಯಬಹುದು. ॥೨೦೭-೨೦೮॥

ವರ್ಷರ್ತೌ ಕುಶಪುಷ್ಪೈರ್ಯಃ ಪೂಜಯಿಷ್ಯತಿ ಶಂಕರಂ ।
ಸ ವಿಷ್ಣುತ್ವಮವಾಪ್ನೋತಿ ಯದಿ ವಿಷ್ಣುತ್ವಮಿಚ್ಛತಿ ॥೨೦೯॥

ಶರತ್ಕಾಲೇ ಮಹಾದೇವಂ ಯಃ ಪದ್ಮೈಃ ಪೂಜಯಿಷ್ಯತಿ ।
ಸ ಸೂರ್ಯತ್ವಮವಾಪ್ನೋತಿ ಯದಿ ಸೂರ್ಯತ್ವಮಿಚ್ಛತಿ ॥೨೧೦॥

ಅರ್ಕಪುಷ್ಪೈರ್ಮಹಾದೇವಂ ಹೇಮಂತೇ ಯೋಽರ್ಚಯಿಷ್ಯತಿ ।
ಸ ಚಂದ್ರತ್ವಮವಾಪ್ನೋತಿ ಯದಿ ಚಂದ್ರತ್ವಮಿಚ್ಛತಿ ॥೨೧೧॥

ಶೈಶಿರೇ ಕರವೀರೈರ್ಯಃ ಪೂಜಯಿಷ್ಯತಿ ಶಂಕರಂ ।
ಗಾಣಾಪತ್ಯಮವಾಪ್ನೋತಿ ಗಾಣಾಪತ್ಯಾಭಿಲಾಷಕಃ ॥೨೧೨॥

ಉಕ್ತರ್ತೂಷೂಕ್ತಕುಸುಮೈಃ ಶಂಕರಂ ಯೋಽರ್ಚಯಿಷ್ಯತಿ ।
ತ್ರಿಕಾಲಮೇಕಕಾಲಂ ವಾ ಸ ತದುಕ್ತಫಲಂ ಲಭೇತ್ ॥೨೧೩॥

ಪ್ರತಿಕಾಲೇಪಿ ಪುಷ್ಪಾಣಾಮಯುತೇನ ಸದಾಶಿವಂ ।
ಪೂಜನೀಯಂ ಪ್ರಯತ್ನೇನ ಪೂರ್ವೋಕ್ತಫಲಕಾಂಕ್ಷಿಭಿಃ ॥೨೧೪॥

---

ವರ್ಷರ್ತುವಿನಲ್ಲಿ ಅಂದರೆ ಶ್ರಾವಣ, ಭಾದ್ರಪದಮಾಸಗಳಲ್ಲಿ ಕುಶಪುಷ್ಪಗಳಿಂದ ಪರಶಿವನನ್ನು ಪೂಜೆಮಾಡುವವನು ವಿಷ್ಣುಪದವಿಯನ್ನಪೇಕ್ಷಿಸಿದರೂ ತಪ್ಪದೇ ಹೊಂದುವನು. ಶರತ್ಕಾಲದಲ್ಲಿ ಅಂದರೆ ಆಶ್ವಯುಜ ಮತ್ತು ಕಾರ್ತೀಕ ಮಾಸಗಳಲ್ಲಿ ಕಮಲಗಳಿಂದ ಮಹಾದೇವನನ್ನು ಪೂಜೆಮಾಡುವವನು ಸೂರ್ಯಪದವಿಯನ್ನು ಬಯಸಿದರೂ ಹೊಂದುವನು. ॥೨೦೯-೨೧೦॥

ಚಂದ್ರಪದವಿಯನ್ನು ಬಯಸಿ, ಹೇಮಂತಋತುವಿನಲ್ಲಿ ಅಂದರೆ ಮಾರ್ಗಶಿರ ಮತ್ತು ಪುಷ್ಯಮಾಸಗಳಲ್ಲಿ ಮಹಾದೇವನನ್ನು ಎಕ್ಕದ ಹೂಗಳಿಂದ ಪೂಜಿಸಿದವನು ತಪ್ಪದೇ ಚಂದ್ರಪಟ್ಟವನ್ನು ಹೊಂದುವನು. ಶಿಶಿರರ್ತುವಿನಲ್ಲಿ ಗಣಾಧಿಪತಿ ಪದವಿಯನ್ನು ಬಯಸಿ ಕಣಿಗಲ ಹೂಗಳಿಂದ ಆ ಶಂಕರನನ್ನು ಪೂಜಿಸಿದವನು ಆ ಗಣಾಧಿಪತಿ ಪದವಿಯನ್ನೇ ಹೊಂದುತ್ತಾನೆ. ॥೨೧೧-೨೧೨॥

ಹಿಂದೆ ಹೇಳಿದ ಋತುಗಳಲ್ಲಿ ಆಯಾ ಹೂಗಳಿಂದ ಪ್ರಾತಃ, ಮಧ್ಯಾಹ್ನ, ಸಾಯಂಕಾಲರೂಪವಾದ ಮೂರುಕಾಲಗಳಲ್ಲಾಗಲೀ ಅಥವಾ ಒಂದೇ ಕಾಲದಲ್ಲಾಗಲೀ ಶಂಕರನನ್ನು ಪೂಜೆಮಾಡುವವನು, ಅವುಗಳಿಗೆ ಹೇಳಿರುವ ಫಲಗಳನ್ನು

ಬಿಲ್ವಪತ್ರೈಃ ಸಮಭ್ಯರ್ಚ್ಯ ಸರ್ವರ್ತುಷ್ವಪಿ ಸರ್ವದಾ ।
ಸ್ವಾಭೀಷ್ಟಂ ಫಲಮಾಪ್ನೋತಿ ಮಹಾದೇವಪ್ರಸಾದತಃ ॥೨೧೫॥

ದ್ರೋಣಪುಷ್ಪೈಃ ಪೂಜನೀಯಃ ಕಾರ್ತಿಕೇ ಮಾಸಿ ಶಂಕರಃ ।
ಅರ್ಕಪುಷ್ಪೈಃ ಪೂಜನೀಯೋ ಮಾರ್ಗಶೀರ್ಷೇ ಪ್ರಯತ್ನತಃ ॥೨೧೬॥

ಪುಷ್ಯೇ ಪುನರ್ವಸೂಪುಷ್ಪೈಃ ಪೂಜನೀಯಃ ಸದಾಶಿವಃ ।
ಮಾಘೇ ಧತ್ತೂರಕುಸುಮೈಃ ಪೂಜನೀಯೋ ವೃಷಃ ಪ್ರಭುಃ ॥೨೧೭॥

ಶಮೀಪುಷ್ಪೈಃ ಪೂಜನೀಯಃ ಫಾಲ್ಗುಣೇ ಮಾಸಿ ಶಂಕರಃ ।
ಚೈತ್ರೇ ಪಲಾಶಕುಸುಮೈಃ ಪೂಜನೀಯೋ ಮಹೇಶ್ವರಃ ॥೨೧೮॥

ವೈಶಾಖೇ ಮಲ್ಲಿಕಾಪುಷ್ಪೈಃ ಪೂಜನೀಯಸ್ತ್ರಿಶೂಲಭೃತ್ ।
ಜ್ಯೇಷ್ಠೇ ಕುಂದೈಃ ಪೂಜನೀಯಃ ಪಾರ್ವತೀರಮಣಃ ಪ್ರಭುಃ ॥೨೧೯॥

ಆಷಾಢೇ ವಿರಜಾಪುಷ್ಪೈಃ ಪೂಜನೀಯಃ ಪಿನಾಕಭೃತ್ ।
ಶ್ರಾವಣೇ ಕುಟಜೈಃ ಶಂಭುಃ ಪೂಜನೀಯಃ ಪ್ರಯತ್ನತಃ ॥೨೨೦॥

---

ತಪ್ಪದೆ ಹೊಂದುತ್ತಾನೆ. ಹಿಂದೆ ಹೇಳಿದ ಫಲವನ್ನು ಅಪೇಕ್ಷಿಸುವವರು ಪ್ರತಿಯೊಂದು ಕಾಲದಲ್ಲಿಯೂ ಹತ್ತುಸಾವಿರ ಹೂಗಳಿಂದ ನಿಯಮಬದ್ಧರಾಗಿ ಆ ಸದಾಶಿವನನ್ನು ಪೂಜೆಮಾಡಬೇಕು. ||೨೧೩-೨೧೪||

ಎಲ್ಲಾ ಋತುಗಳಲ್ಲಿಯೂ ಬಿಲ್ವದಳಗಳಿಂದ ಪೂಜೆಮಾಡಬಹುದು. ಅದರಿಂದ ಆ ಮಹಾದೇವನ ಅನುಗ್ರಹವು ಒದಗಿ ತನಗೆ ಇಷ್ಟವಾದ ಸಕಲ ಫಲವನ್ನೂ ಮಾನವನು ಪಡೆಯುತ್ತಾನೆ. ಕಾರ್ತೀಕಮಾಸದಲ್ಲಿ ಶಂಕರನನ್ನು ವಿಶೇಷವಾಗಿ ತುಂಬೇ ಹೂಗಳಿಂದ ಪೂಜೆಮಾಡಬೇಕು. ಮಾರ್ಗಶಿರ ಮಾಸದಲ್ಲಿ ಎಕ್ಕದ ಹೂಗಳಿಂದ ಅರ್ಚಿಸಬೇಕು. ಪುಷ್ಯಮಾಸದಲ್ಲಿ ಸದಾಶಿವನನ್ನು ಪುನರ್ವಸೂ ಪುಷ್ಪಗಳಿಂದಲೂ ಮಾಘಮಾಸದಲ್ಲಿ ವೃಷನೆನಿಸಿದ ಆ ಪ್ರಭುವನ್ನು ದತ್ತೂರೀ ಹೂಗಳಿಂದಲೂ ಅರ್ಚಿಸಬೇಕು. ||೨೧೫-೨೧೬-೨೧೭||

ಫಾಲ್ಗುಣಮಾಸದಲ್ಲಿ ಶಂಕರನನ್ನು ಬನ್ನೀಹೂಗಳಿಂದಲೂ, ಚೈತ್ರಮಾಸದಲ್ಲಿ ಮುತ್ತುಗದಹೂಗಳಿಂದಲೂ, ವೈಶಾಖಮಾಸದಲ್ಲಿ ಆ ತ್ರಿಶೂಲಪಾಣಿಯನ್ನು ಮಲ್ಲಿಗೇಹೂಗಳಿಂದಲೂ, ಜ್ಯೇಷ್ಠಮಾಸದಲ್ಲಿ ಪಾರ್ವತೀಕಾಂತನಾದ ಪ್ರಭುವನ್ನು

ವರ್ಷರ್ತೌ ಕುಶಪುಷ್ಪೈರ್ಯಃ ಪೂಜಯಿಷ್ಯತಿ ಶಂಕರಂ ।
ಸ ವಿಷ್ಣುತ್ವಮವಾಪ್ನೋತಿ ಯದಿ ವಿಷ್ಣುತ್ವಮಿಚ್ಛತಿ ॥೨೦೯॥

ಶರತ್ಕಾಲೇ ಮಹಾದೇವಂ ಯಃ ಪದ್ಮೈಃ ಪೂಜಯಿಷ್ಯತಿ ।
ಸ ಸೂರ್ಯತ್ವಮವಾಪ್ನೋತಿ ಯದಿ ಸೂರ್ಯತ್ವಮಿಚ್ಛತಿ ॥೨೧೦॥

ಅರ್ಕಪುಷ್ಪೈರ್ಮಹಾದೇವಂ ಹೇಮಂತೇ ಯೋಽರ್ಚಯಿಷ್ಯತಿ ।
ಸ ಚಂದ್ರತ್ವಮವಾಪ್ನೋತಿ ಯದಿ ಚಂದ್ರತ್ವಮಿಚ್ಛತಿ ॥೨೧೧॥

ಶೈಶಿರೇ ಕರವೀರೈರ್ಯಃ ಪೂಜಯಿಷ್ಯತಿ ಶಂಕರಂ ।
ಗಾಣಾಪತ್ಯಮವಾಪ್ನೋತಿ ಗಾಣಾಪತ್ಯಾಭಿಲಾಷಕಃ ॥೨೧೨॥

ಉಕ್ತರ್ತೂಕ್ತಕುಸುಮೈಃ ಶಂಕರಂ ಯೋಽರ್ಚಯಿಷ್ಯತಿ ।
ತ್ರಿಕಾಲಮೇಕಕಾಲಂ ವಾ ಸ ತದುಕ್ತಫಲಂ ಲಭೇತ್ ॥೨೧೩॥

ಪ್ರತಿಕಾಲೇಽಪಿ ಪುಷ್ಪಾಣಾಮಯುತೇನ ಸದಾಶಿವಂ ।
ಪೂಜನೀಯಂ ಪ್ರಯತ್ನೇನ ಪೂರ್ವೋಕ್ತಫಲಕಾಂಕ್ಷಿಭಿಃ ॥೨೧೪॥

ವರ್ಷರ್ತುವಿನಲ್ಲಿ ಅಂದರೆ ಶ್ರಾವಣ, ಭಾದ್ರಪದಮಾಸಗಳಲ್ಲಿ ಕುಶಪುಷ್ಪಗಳಿಂದ ಪರಶಿವನನ್ನು ಪೂಜೆಮಾಡುವವನು ವಿಷ್ಣುಪದವಿಯನ್ನಪೇಕ್ಷಿಸಿದರೂ ತಪ್ಪದೇ ಹೊಂದುವನು. ಶರತ್ಕಾಲದಲ್ಲಿ ಅಂದರೆ ಆಶ್ವಯುಜ ಮತ್ತು ಕಾರ್ತೀಕ ಮಾಸಗಳಲ್ಲಿ ಕಮಲಗಳಿಂದ ಮಹಾದೇವನನ್ನು ಪೂಜೆಮಾಡುವವನು ಸೂರ್ಯ ಪದವಿಯನ್ನು ಬಯಸಿದರೂ ಹೊಂದುವನು. ॥೨೦೯-೨೧೦॥

ಚಂದ್ರಪದವಿಯನ್ನು ಬಯಸಿ, ಹೇಮಂತಋತುವಿನಲ್ಲಿ ಅಂದರೆ ಮಾರ್ಗಶಿರ ಮತ್ತು ಪುಷ್ಯಮಾಸಗಳಲ್ಲಿ ಮಹಾದೇವನನ್ನು ಎಕ್ಕದ ಹೂಗಳಿಂದ ಪೂಜಿಸಿದವನು ತಪ್ಪದೇ ಚಂದ್ರಪಟ್ಟವನ್ನು ಹೊಂದುವನು. ಶಿಶಿರರ್ತುವಿನಲ್ಲಿ ಗಣಾಧಿಪತಿ ಪದವಿಯನ್ನು ಬಯಸಿ ಕಣಿಗಲ ಹೂಗಳಿಂದ ಆ ಶಂಕರನನ್ನು ಪೂಜಿಸಿದವನು ಆ ಗಣಾಧಿಪತಿ ಪದವಿಯನ್ನೇ ಹೊಂದುತ್ತಾನೆ. ॥೨೧೧-೨೧೨॥

ಹಿಂದೆ ಹೇಳಿದ ಋತುಗಳಲ್ಲಿ ಆಯಾ ಹೂಗಳಿಂದ ಪ್ರಾತಃ, ಮಧ್ಯಾಹ್ನ, ಸಾಯಂಕಾಲರೂಪವಾದ ಮೂರುಕಾಲಗಳಲ್ಲಾಗಲೀ ಅಥವಾ ಒಂದೇ ಕಾಲದಲ್ಲಾಗಲೀ ಶಂಕರನನ್ನು ಪೂಜೆಮಾಡುವವನು, ಅವುಗಳಿಗೆ ಹೇಳಿರುವ ಫಲಗಳನ್ನು

ಬಿಲ್ವಪತ್ರೈಃ ಸಮಭ್ಯರ್ಚ್ಯ ಸರ್ವರ್ತುಷ್ವಪಿ ಸರ್ವದಾ ।
ಸ್ವಾಭೀಷ್ಟಂ ಫಲಮಾಪ್ನೋತಿ ಮಹಾದೇವಪ್ರಸಾದತಃ ॥೨೧೫॥

ದ್ರೋಣಪುಷ್ಪೈಃ ಪೂಜನೀಯಃ ಕಾರ್ತಿಕೇ ಮಾಸಿ ಶಂಕರಃ ।
ಅರ್ಕಪುಷ್ಪೈಃ ಪೂಜನೀಯೋ ಮಾರ್ಗಶೀರ್ಷೇ ಪ್ರಯತ್ನತಃ ॥೨೧೬॥

ಪುಷ್ಯೇ ಪುನರ್ವಸೂಪುಷ್ಪೈಃ ಪೂಜನೀಯಃ ಸದಾಶಿವಃ ।
ಮಾಘೇ ಧತ್ತೂರಕುಸುಮೈಃ ಪೂಜನೀಯೋ ಮೃಡಃ ಪ್ರಭುಃ ॥೨೧೭॥

ಶಮೀಪುಷ್ಪೈಃ ಪೂಜನೀಯಃ ಫಾಲ್ಗುಣೇ ಮಾಸಿ ಶಂಕರಃ ।
ಚೈತ್ರೇ ಪಲಾಶಕುಸುಮೈಃ ಪೂಜನೀಯೋ ಮಹೇಶ್ವರಃ ॥೨೧೮॥

ವೈಶಾಖೇ ಮಲ್ಲಿಕಾಪುಷ್ಪೈಃ ಪೂಜನೀಯಸ್ತ್ರಿಶೂಲಭೃತ್ ।
ಜ್ಯೇಷ್ಠೇ ಕುಂದೈಃ ಪೂಜನೀಯಃ ಪಾರ್ವತೀರಮಣಃ ಪ್ರಭುಃ ॥೨೧೯॥

ಆಷಾಢೇ ವಿರಜಾಪುಷ್ಪೈಃ ಪೂಜನೀಯಃ ಪಿನಾಕಭೃತ್ ।
ಶ್ರಾವಣೇ ಕುಟಜೈಃ ಶಂಭುಃ ಪೂಜನೀಯಃ ಪ್ರಯತ್ನತಃ ॥೨೨೦॥

---

ತಪ್ಪದೆ ಹೊಂದುತ್ತಾನೆ. ಹಿಂದೆ ಹೇಳಿದ ಫಲವನ್ನು ಅಪೇಕ್ಷಿಸುವವರು ಪ್ರತಿಯೊಂದು ಕಾಲದಲ್ಲಿಯೂ ಹತ್ತುಸಾವಿರ ಹೂಗಳಿಂದ ನಿಯಮಬದ್ಧರಾಗಿ ಆ ಸದಾಶಿವನನ್ನು ಪೂಜೆಮಾಡಬೇಕು. ||೨೧೩-೨೧೪||

ಎಲ್ಲಾ ಋತುಗಳಲ್ಲಿಯೂ ಬಿಲ್ವದಳಗಳಿಂದ ಪೂಜೆಮಾಡಬಹುದು ಅದರಿಂದ ಆ ಮಹಾದೇವನ ಅನುಗ್ರಹವು ಒದಗಿ ತನಗೆ ಇಷ್ಟವಾದ ಸಕಲ ಫಲವನ್ನೂ ಮಾನವನು ಪಡೆಯುತ್ತಾನೆ. ಕಾರ್ತೀಕಮಾಸದಲ್ಲಿ ಶಂಕರನನ್ನು ವಿಶೇಷವಾಗಿ ತುಂಬೇ ಹೂಗಳಿಂದ ಪೂಜೆಮಾಡಬೇಕು. ಮಾರ್ಗಶಿರ ಮಾಸದಲ್ಲಿ ಎಕ್ಕದ ಹೂಗಳಿಂದ ಅರ್ಚಿಸಬೇಕು. ಪುಷ್ಯಮಾಸದಲ್ಲಿ ಸದಾಶಿವನನ್ನು ಪುನರ್ವಸೂ ಪುಷ್ಪಗಳಿಂದಲೂ ಮಾಘಮಾಸದಲ್ಲಿ ಮೃಡನೆನಿಸಿದ ಆ ಪ್ರಭುವನ್ನು ದತ್ತೂರೀ ಹೂಗಳಿಂದಲೂ ಅರ್ಚಿಸಬೇಕು. ||೨೧೫-೨೧೬-೨೧೭||

ಫಾಲ್ಗುಣಮಾಸದಲ್ಲಿ ಶಂಕರನನ್ನು ಬನ್ನೀಹೂಗಳಿಂದಲೂ, ಚೈತ್ರಮಾಸದಲ್ಲಿ ಮುತ್ತುಗದಹೂಗಳಿಂದಲೂ, ವೈಶಾಖಮಾಸದಲ್ಲಿ ಆ ತ್ರಿಶೂಲಪಾಣಿಯನ್ನು ಮಲ್ಲಿಗೇಹೂಗಳಿಂದಲೂ, ಜ್ಯೇಷ್ಠಮಾಸದಲ್ಲಿ ಪಾರ್ವತೀಕಾಂತನಾದ ಪ್ರಭುವನ್ನು

ಪೂಜ್ಯೋ ಭಾದ್ರಪದೇ ಮಾಸಿ ಕುಶಪುಷ್ಪೈಸ್ತ್ರಿಲೋಚನಃ ।
ಆಶ್ವಿನೇ ಮಾಸಿ ಸಂಪೂಜ್ಯಃ ಪಾರಿಜಾತೈರುಮಾಪತಿಃ ॥೨೨೦॥

ಚೈತ್ರೇ ದಮನಕೈಃ ಪುಷ್ಪೈಃ ಪೂಜನೀಯೋ ಯಮಾಂತಕಃ ।
ತತ್ತತ್ಸಮಯಜೈಃ ಪೂಜ್ಯೋ ವೈಶಾಖಾದಿಷು ಪಲ್ಲವೈಃ ॥೨೨೨॥

ಭೂತಾಯಾಂ ಭೃಂಗರಾಜೇನ ಯಃ ಪೂಜಯತಿ ಶಂಕರಂ ।
ಸರ್ವಪಾಪವಿನಿರ್ಮುಕ್ತಃ ಶಿವಲೋಕಂ ಗಮಿಷ್ಯತಿ ॥೨೨೩॥

ಭೂತಾಯಾಂ ಸೋಮಯುಕ್ತಾಯಾಂ ಕರವೀರೈರ್ಮಹೇಶ್ವರಂ ।
ಯಃ ಪೂಜಯತಿ ಯತ್ನೇನ ಸ ಮೋಕ್ಷಮಧಿಗಚ್ಛತಿ ॥೨೨೪॥

ಸೋಮಾರ್ದ್ರಪಾತಯುಕ್ತಾಯಾಂ ಭೂತಾಯಾಂ ಕಮಲೈಃ ಶಿವಂ ।
ಯಃ ಪೂಜಯತಿ ಯತ್ನೇನ ಸ ಮೋಕ್ಷಮಧಿಗಚ್ಛತಿ ॥೨೨೫॥

---

ಗಿಡಮಲ್ಲಿಗೆಹೂಗಳಿಂದಲೂ, ಆಷಾಢದಲ್ಲಿ ಆ ಪಿನಾಕಪಾಣಿಯನ್ನು ವಿರಜಾಹೂಗಳಿಂದಲೂ (ತಾಳೆಹೂಗಳಿಂದಲೂ) ಶ್ರಾವಣದಲ್ಲಿ ಶಂಭುವನ್ನು ಗಿರಿಮಲ್ಲಿಗೆ ಪುಷ್ಪಗಳಿಂದಲೂ ನಿಯಮದಿಂದ ಪೂಜೆಮಾಡಬೇಕು. ||೨೧೮-೨೧೯-೨೨೦||

ಮುಕ್ಕಣ್ಣನೂ, ಉಮಾರಮಣನೂ, ಯಮನನ್ನು ನಿಗ್ರಹಿಸಿದವನೂ ಆದ ಆ ಮಹೇಶ್ವರನನ್ನು ಭಾದ್ರಪದಮಾಸದಲ್ಲಿ ಕುಶಪುಷ್ಪಗಳಿಂದಲೂ, ಆಶ್ವಯುಜ ಮಾಸದಲ್ಲಿ ಪಾರಿಜಾತಪುಷ್ಪಗಳಿಂದಲೂ, ಚೈತ್ರಮಾಸದಲ್ಲಿ ದಮನಕಪುಷ್ಪಗಳಿಂದಲೂ (ದವನದಹೂಗಳು) ಪೂಜೆಮಾಡಬೇಕು. ಅಲ್ಲದೇ ಆಯಾ ಸಮಯಗಳಲ್ಲಿ ಸೊಂಪಾಗಿ ಬೆಳೆದ ಎಲ್ಲಾ ಚಿಗುರುಗಳಿಂದಲೂ ವೈಶಾಖವೇ ಮೊದಲಾದ ತಿಂಗಳುಗಳಲ್ಲಿ ಆ ಮಹೇಶ್ವರನನ್ನು ಪೂಜೆಮಾಡಬಹುದು. ||೨೨೧,೨೨೨||

ಚತುರ್ದಶಿಯದಿನ ಗರುಗದ ಹೂಗಳಿಂದ ಶಂಕರನನ್ನು ಪೂಜೆಮಾಡುವವನು ಸಕಲಪಾಪಗಳಿಂದಲೂ ಬಿಡುಗಡೆಹೊಂದಿ ಕೊನೆಗೆ ಶಿವಲೋಕವನ್ನೈದುವನು. ಸೋಮವಾರವು ಸೇರಿದ ಚತುರ್ದಶಿಯದಿನ ಕಣಿಗಲೇಹೂಗಳಿಂದ ಮಹೇಶ್ವರನನ್ನು ನಿಯಮದಿಂದ ಪೂಜಿಸುವವನು ಮೋಕ್ಷವನ್ನು ಹೊಂದುವನು. ಸೋಮವಾರ, ಆರ್ದ್ರಾನಕ್ಷತ್ರ ಮತ್ತು ವ್ಯತೀಪಾತಗಳಿಂದ ಯುಕ್ತವಾದ ಚತುರ್ದಶಿಯಲ್ಲಿ

ಸೋಮಾರ್ದ್ರವ್ಯತೀಪಾತಯುಕ್ತಾಯಾಮಷ್ಟಮ್ಯಾಂ ಕನಕಾಹ್ವಯೈಃ ।
ಯಃ ಪೂಜಯತಿ ಗೌರೀಶಂ ಸ ಮೋಕ್ಷಮಧಿಗಚ್ಛತಿ ॥೨೨೬॥

ಸಾರ್ದ್ರಾಯಾಂ ಪಾತಯುಕ್ತಾಯಾಮಷ್ಟಮ್ಯಾಮರ್ಜುನೈಃ ಶಿವಂ ।
ಯಃ ಪೂಜಯತಿ ಯತ್ನೇನ ಸ ಮೋಕ್ಷಮಧಿಗಚ್ಛತಿ ॥೨೨೭॥

ಸೋಮಾರ್ದ್ರವ್ಯತೀಪಾತಯುಕ್ತಾಯಾಂ ಪೌರ್ಣಮಾಸ್ಯಾಂ ಸದಾಶಿವಂ ।
ಯಃ ಪೂಜಯತಿ ಧತ್ತೂರೈಃ ಸ ಮೋಕ್ಷಮಧಿಗಚ್ಛತಿ ॥೨೨೮॥

ಸೋಮಾರ್ದ್ರವ್ಯತೀಪಾತಯುಕ್ತಾಯಾಮಮಾಯಾಂ ಗಿರಿಜಾಪತಿಂ ।
ಕರವೀರೈಸ್ಸಮಭ್ಯರ್ಚ್ಯ ಸ್ಸಾಪ್ನುವಂತಿ ಶಿವಂ ಜನಾಃ ॥೨೨೯॥

ದುಕೂಲತಂತುಭಿರ್ಯಸ್ತು ಶ್ರಾವಣ್ಯಾಂ ಪೂಜಯೇಚ್ಛಿವಂ ।
ಸರ್ವಪಾಪವಿನಿರ್ಮುಕ್ತಃ ಶಿವಲೋಕಂ ಪ್ರಯಾಸ್ಯತಿ ॥೨೩೦॥

ತಾವರೆಹೂಗಳಿಂದ ನಿಯಮಪೂರ್ವಕವಾಗಿ ಶಿವನನ್ನಾರಾಧಿಸುವವರಿಗೆ ಮೋಕ್ಷ ಪ್ರಾಪ್ತಿಯಾಗುವುದು. ||೨೨೩-೨೨೪-೨೨೫||

ಸೋಮವಾರ, ಆರ್ದ್ರಾನಕ್ಷತ್ರ, ವ್ಯತೀಪಾತಸಮೇತವಾದ ಅಷ್ಟಮಿಯದಿನ ಕನಕಸಂಜ್ಞಕವಾದ ಸಂಪಿಗೆಹೂಗಳಿಂದ ಗೌರೀರಮಣನನ್ನರ್ಚಿಸುವವನೂ, ಆರ್ದ್ರಾ ನಕ್ಷತ್ರ, ವ್ಯತೀಪಾತಗಳಿಂದ ಕೂಡಿದ ಅಷ್ಟಮಿಯದಿನ ಅರ್ಜುನಪುಷ್ಪಗಳಿಂದ ಶಿವನನ್ನು ನಿಯಮದಿಂದ ಪೂಜಿಸುವವನೂ ಮತ್ತು ಸೋಮವಾರ, ಆರ್ದ್ರಾನಕ್ಷತ್ರ, ವ್ಯತೀಪಾತಗಳಿಂದ ಸೇರಿದ ಪೂರ್ಣಿಮೆಯದಿನ ಸದಾಶಿವನನ್ನು ಧತ್ತೂರೀಹೂ ಗಳಿಂದ ಪೂಜೆಮಾಡುವವನೂ ತಪ್ಪದೆ ಮೋಕ್ಷವನ್ನು ಹೊಂದುವನು ||೨೨೬-೨೨೭-೨೨೮||

ಸೋಮವಾರ ಆರ್ದ್ರಾನಕ್ಷತ್ರ, ವ್ಯತೀಪಾತಗಳಿಂದ ಕೂಡಿದ ಅಮಾವಾಸ್ಯೆಯ ದಿನ ಗಿರಿಜಾರಮಣನನ್ನು ಕಣಿಗಲೆ ಹೂಗಳಿಂದ ಪೂಜಿಸಿದವರು ಶಿವಸಾರೂಪ್ಯ ವನ್ನು ಹೊಂದುತ್ತಾರೆ. ಶ್ರವಣನಕ್ಷತ್ರಯುಕ್ತವಾದ ಪೂರ್ಣಿಮೆಯಲ್ಲಿ ರೇಷ್ಮೆಯ ದಾರಗಳಿಂದ ಶಿವನನ್ನು ಪೂಜೆಮಾಡುವವನು, ಸಕಲ ಪಾಪಗಳಿಂದಲೂ ಬಿಡುಗಡೆ ಹೊಂದಿ ಕೊನೆಗೆ ಶಿವಲೋಕವನ್ನೇ ಸೇರುತ್ತಾನೆ. ||೨೨೯-೨೩೦||

ದುಕೂಲತಂತವಃ ಶುದ್ಧಾಃ ಸ್ವಮಾನೇನ ಶತತ್ರಯಂ ।
ಸಾರ್ಧಂ ಶಿವೇ ಲಿಂಗರೂಪೇ ದೇಯಾ ಮುಕ್ತ್ಯರ್ಥಿಭಿರ್ದ್ವಿಜ ॥೨೩೧॥

ಶ್ರಾವಣ್ಯಾಂ ಪೌರ್ಣಮಾಸ್ಯಾಂ ತು ಪೂಜೇಯಂ ಶ್ರುತಿಷು ಶ್ರುತಾ ।
ಇಯಂ ನೈಮಿತ್ತಿಕೀ ಪೂಜಾ ಕರ್ತವ್ಯಾತಿಪ್ರಯತ್ನತಃ ॥೨೩೨॥

ತಂಡುಲೈಃ ಪ್ರತಿಭೂತಾಯಾಂ ಶತಾಂಜಲಿಮಿತೈಃ ಶಿವಂ ।
ಯಃ ಪೂಜಯತಿ ಯತ್ನೇನ ಸ ಮೋಕ್ಷಮಧಿಗಚ್ಛತಿ ॥೨೩೩॥

ಚಣಕೈಃ ಪ್ರತಿಭೂತಾಯಾಂ ಶತಾಂಜಲಿಮಿತೈಃ ಶಿವಂ ।
ಯಃ ಪೂಜಯತಿ ಯತ್ನೇನ ಸ ಮೋಕ್ಷಮಧಿಗಚ್ಛತಿ ॥೨೩೪॥

ಗೋಧೂಮೈಃ ಪ್ರತಿಭೂತಾಯಾಂ ಶತಾಂಜಲಿಮಿತೈಃ ಶಿವಂ ।
ಯಃ ಪೂಜಯತಿ ಯತ್ನೇನ ಸ ಮೋಕ್ಷಮಧಿಗಚ್ಛತಿ ॥೨೩೫॥

ತಿಲೈಶ್ಚ ಪ್ರತಿಭೂತಾಯಾಂ ಶತಾಂಜಲಿಮಿತೈಃ ಶಿವಂ ।
ಯಃ ಪೂಜಯತಿ ಯತ್ನೇನ ಸ ಮೋಕ್ಷಮಧಿಗಚ್ಛತಿ ॥೨೩೬॥

ಯವೈಶ್ಚ ಪ್ರತಿಭೂತಾಯಾಂ ಶತಾಂಜಲಿಮಿತೈಃ ಶಿವಂ ।
ಯಃ ಪೂಜಯತಿ ಯತ್ನೇನ ಸ ಮೋಕ್ಷಮಧಿಗಚ್ಛತಿ ॥೨೩೭॥

ಮಾಷೈಶ್ಚ ಪ್ರತಿಭೂತಾಯಾಂ ಶತಾಂಜಲಿಮಿತೈಃ ಶಿವಂ ।
ಯಃ ಪೂಜಯತಿ ಯತ್ನೇನ ಸ ಮೋಕ್ಷಮಧಿಗಚ್ಛತಿ ॥೨೩೮॥

---

ತನ್ನುದ್ದ ಅಳತೆಯ ಪ್ರಮಾಣವನ್ನನುಸರಿಸಿ ಮುನ್ನೂರೈವತ್ತು ಶುದ್ಧವಾದ ರೇಷ್ಮೆಯದಾರಗಳನ್ನು, ಮೋಕ್ಷಾಪೇಕ್ಷಿಗಳಾದವರು, ಲಿಂಗರೂಪಿಯಾದ ಪರಶಿವನಿಗೆ ಸಮರ್ಪಿಸಬೇಕು ಶ್ರಾವಣಮಾಸದ ಪೂರ್ಣಿಮಾದಿನ ಈ ಪೂಜೆಯು ವೇದಗಳಲ್ಲಿ ವಿಶೇಷ ಪ್ರಸಿದ್ಧವಾಗಿದೆ. ಇದು ನೈಮಿತ್ತಿಕವಾದ ಪೂಜೆಯಾದುದರಿಂದ ನಿಯಮದಿಂದ ಇದನ್ನಾಚರಿಸಬೇಕು. ॥೨೩೧-೨೩೨॥

ಪ್ರತಿಯೊಂದು ಚತುರ್ದಶೀ ತಿಥಿಯ ದಿವಸವೂ ನೂರು ಬೊಗಸೆ ಪರಿಮಾಣದ ಅಕ್ಕಿ, ಕಡಲೆ, ಗೋದುವೆ, ಎಳ್ಳು, ಯವಧಾನ್ಯ, ಉದ್ದು, ಸಾಸುವೆ ಮತ್ತು ಹೆಸರು

ಸರ್ಷಪೈಃ ಪ್ರತಿಭೂತಾಯಾಂ ಶತಾಂಜಲಿಮಿತೈಃ ಶಿವಂ ।
ಯಃ ಪೂಜಯತಿ ಯತ್ನೇನ ಸ ಮೋಕ್ಷಮಧಿಗಚ್ಛತಿ ॥೨೩೯॥

ಮುದ್ಗೈಶ್ಚ ಪ್ರತಿಭೂತಾಯಾಂ ಶತಾಂಜಲಿಮಿತೈಃ ಶಿವಂ ।
ಯಃ ಪೂಜಯತಿ ಯತ್ನೇನ ಸ ಮೋಕ್ಷಮಧಿಗಚ್ಛತಿ ॥೨೪೦॥

ಸುಗಂಧಾಮ್ರರಸೇನೇಶಂ ಸಾದ್ರಾರ್ಷ್ಟಮ್ಯಾಂ ಪ್ರಯತ್ನತಃ ।
ಯೋಽಭಿಷಿಂಚತಿ ರುದ್ರೇಣ ಸ ಮೋಕ್ಷಮಧಿಗಚ್ಛತಿ ॥೨೪೧॥

ಕ್ಷೀರೇಣ ಪ್ರತಿಭೂತಾಯಾಂ ಪ್ರಸ್ಥೇನೇಶಂ ಪ್ರಯತ್ನತಃ ।
ಯೋಽಭಿಷಿಂಚತಿ ರುದ್ರೇಣ ಸ ಮೋಕ್ಷಮಧಿಗಚ್ಛತಿ ॥೨೪೨॥

ಆಜ್ಯೇನ ಪ್ರತಿಭೂತಾಯಾಂ ಪ್ರಸ್ಥೇನೇಶಂ ಪ್ರಯತ್ನತಃ ।
ಯೋಽಭಿಷಿಂಚತಿ ರುದ್ರೇಣ ಸ ಮೋಕ್ಷಮಧಿಗಚ್ಛತಿ ॥೨೪೩॥

ಸಿತಯಾ ಪ್ರತಿಭೂತಾಯಾಂ ಪ್ರಸ್ಥಮಾನೇನ ಶಂಕರಂ ।
ಯೋಽಭಿಷಿಂಚತಿ ರುದ್ರೇಣ ಸ ಮೋಕ್ಷಮಧಿಗಚ್ಛತಿ ॥೨೪೪॥

ನಾರಿಕೇಲಜಲೇನೇಶಂ ಪ್ರತ್ಯಷ್ಟಮ್ಯಾಂ ಪ್ರಯತ್ನತಃ ।
ಯೋಽಭಿಷಿಂಚತಿ ರುದ್ರೇಣ ಸ ಮೋಕ್ಷಮಧಿಗಚ್ಛತಿ ॥೨೪೫॥

ಕಾಳುಗಳಿಂದ ನಿಯಮಪೂರ್ವಕವಾಗಿ ಶಿವನನ್ನು ಪೂಜಿಸುವವರು ಮೋಕ್ಷವನ್ನೈದುತ್ತಾರೆ. ॥೨೩೩-೨೩೪-೨೩೫-೨೩೬-೨೩೭-೨೩೮-೨೩೯-೨೪೦॥

ಆರ್ದ್ರಾನಕ್ಷತ್ರದಿಂದ ಕೂಡಿದ ಅಷ್ಟಮಿಯದಿನ ನಿಯಮಬದ್ಧನಾಗಿ, ರುದ್ರ ಮಂತ್ರೋಚ್ಚಾರಣೆಮಾಡುತ್ತಾ ಸುಗಂಧಭರಿತವಾದ ಮಾವಿನಹಣ್ಣಿನರಸದಿಂದ ಈಶ್ವರನಿಗೆ ಅಭಿಷೇಕಮಾಡುವವನು ಮೋಕ್ಷವನ್ನೈದುತ್ತಾನೆ. ಹಾಲು, ತುಪ್ಪ ಮತ್ತು ಕಲ್ಲುಸಕ್ಕರೆ ಇವುಗಳನ್ನು ಒಂದುಬಳ್ಳ ಪರಿಮಾಣದಿಂದ ಪ್ರತಿಯೊಂದು ಚತುರ್ದಶಿಯ ದಿನದಲ್ಲೂ ಶಂಕರನಿಗೆ ರುದ್ರಾಭಿಷೇಕಮಾಡುವವನು ಮೋಕ್ಷವನ್ನೈದುವನು. ॥೨೪೧-೨೪೨-೨೪೩-೨೪೪॥

ಪ್ರತಿ ಅಷ್ಟಮಿಯ ತಿಥಿಯಲ್ಲಿಯೂ ಎಳನೀರಿನಿಂದ ನಿಯಮಬದ್ಧನಾಗಿ ಈಶ್ವರನಿಗೆ ರುದ್ರಾಭಿಷೇಕ ಮಾಡುವವನು ಮೋಕ್ಷವನ್ನೈದುತ್ತಾನೆ. ಒಳ್ಳೆಯ ರಸ

ಯಃ ಪೂಜಯತಿ ಯತ್ನೇನ ಸುರಸಾಮ್ರಫಲೈಃ ಶಿವಂ ।
ಸ ಸರ್ವಪಾಪನಿರ್ಮುಕ್ತಃ ಶಿವಲೋಕಂ ಪ್ರಯಾಸ್ಯತಿ ॥೨೪೬॥

ಯೋಽರ್ಚಯೇತ್ಪ್ರತಿಭೂತಾಯಾಂ ಪಕ್ವಪೂಗರಸೈಃ ಶಿವಂ ।
ಸ ಸರ್ವಪಾಪನಿರ್ಮುಕ್ತಃ ಶಿವಲೋಕಂ ಪ್ರಯಾಸ್ಯತಿ ॥೨೪೭॥

ಯಃ ಪೂಜಯತಿ ಗೌರೀಶಂ ಸುಗಂಧಕದಲೀಫಲೈಃ ।
ಸ ಸರ್ವಪಾಪನಿರ್ಮುಕ್ತಃ ಶಿವಲೋಕಂ ಪ್ರಯಾಸ್ಯತಿ ॥೨೪೮॥

ಶಿವಂ ಸುಗಂಧಜಂಬೀರೈರ್ಯಃ ಪೂಜಯತಿ ಸಾದರಂ ।
ಸ ಸರ್ವಪಾಪನಿರ್ಮುಕ್ತಃ ಶಿವಲೋಕಂ ಪ್ರಯಾಸ್ಯತಿ ॥೨೪೯॥

ಶಿವಂ ಜಂಬೂಫಲೈಃ ಪಕ್ವೈರ್ಯಃ ಪೂಜಯತಿ ಸಾದರಂ ।
ಸ ಸರ್ವಪಾಪನಿರ್ಮುಕ್ತಃ ಶಿವಲೋಕಂ ಪ್ರಯಾಸ್ಯತಿ ॥೨೫೦॥

ಯಃ ಪೂಜಯತಿ ಗೌರೀಶಂ ಸುಗಂಧಬದರೀಫಲೈಃ ।
ಸ ಸರ್ವಪಾಪನಿರ್ಮುಕ್ತಃ ಶಿವಲೋಕಂ ಪ್ರಯಾಸ್ಯತಿ ॥೨೫೧॥

ದಧ್ಯನ್ನೇನಾಜ್ಯಯುಕ್ತೇನ ಯಃ ಪೂಜಯತಿ ಶಂಕರಂ ।
ಸ ಸರ್ವಪಾಪನಿರ್ಮುಕ್ತಃ ಶಿವಲೋಕಂ ಪ್ರಯಾಸ್ಯತಿ ॥೨೫೨॥

ಕ್ಷೀರಾನ್ನೇನಾಜ್ಯಯುಕ್ತೇನ ಯಃ ಪೂಜಯತಿ ಶಂಕರಂ ।
ಸ ಸರ್ವಪಾಪನಿರ್ಮುಕ್ತಃ ಶಿವಲೋಕಂ ಪ್ರಯಾಸ್ಯತಿ. ॥೨೫೩॥

ಭರಿತವಾದ ಮಾವಿನಹಣ್ಣುಗಳಿಂದ ಶಿವನನ್ನು ನಿಯಮಪೂರ್ವಕವಾಗಿ ಪೂಜಿಸುವವನು ಸಕಲಪಾಪಗಳಿಂದಲೂ ಬಿಡುಗಡೆಹೊಂದಿ ಕೊನೆಗೆ ಶಿವಲೋಕವಾದ ಕೈಲಾಸವನ್ನೇ ಸೇರುತ್ತಾನೆ. ॥೨೪೫-೨೪೬॥

ಪ್ರತಿ ಚತುರ್ದಶಿಯದಿನವೂ ಪಕ್ವವಾದ ಅಡಿಕೆಹಣ್ಣಿನಿಂದ ಶಿವನಿಗೆ ಪೂಜೆ ಸಲ್ಲಿಸುವವನು ಎಲ್ಲಾ ಪಾಪಗಳಿಂದಲೂ ಮುಕ್ತನಾಗಿ ಕೊನೆಗೆ ಶಿವಲೋಕವನ್ನೈದುವನು. ಹಾಗೆಯೇ ಸುಗಂಧಭರಿತವಾದ ಬಾಳೆಹಣ್ಣು, ನಿಂಬೆ, ನೇರಳೆ, ಎಗಚಿಹಣ್ಣುಗಳು, ತುಪ್ಪದಿಂದಬೆರೆತ ಮೊಸರನ್ನ, ಪಾಲನ್ನ, ಶಾಲ್ಯಾನ್ನ, ಮಾವಿನ

ಸಾಜ್ಯೇನ ಶರ್ಕರಾನ್ನೇನ ಯಃ ಪೂಜಯತಿ ಶಂಕರಂ ।
ಸ ಸರ್ವಪಾಪನಿರ್ಮುಕ್ತಃ ಶಿವಲೋಕಂ ಪ್ರಯಾಸ್ಯತಿ ॥೨೫೪॥

ಸಾಜ್ಯೇನಾಮ್ರರಸಾನ್ನೇನ ಯಃ ಪೂಜಯತಿ ಶಂಕರಂ ।
ಸ ಸರ್ವಪಾಪನಿರ್ಮುಕ್ತಃ ಶಿವಲೋಕಂ ಪ್ರಯಾಸ್ಯತಿ ॥೨೫೫॥

ಶತಗ್ರಾಸಮಿತೈರನ್ನೈರುಕ್ತೈಃ ಪೂಜ್ಯೋ ಮಹೇಶ್ವರಃ ।
ಫಲೈರುಕ್ತೈಃ ಶತಮಿತೈಃ ಪೂಜನೀಯೋ ಮಹೇಶ್ವರಃ ॥೨೫೬॥

ದೀಪಮಾಲಾಂ ಗೋಘೃತೇನ ಯಃ ಕರೋತಿ ಶಿವಾಲಯೇ ।
ಸ ಸರ್ವಪಾಪನಿರ್ಮುಕ್ತಃ ಶಿವಲೋಕಂ ಪ್ರಯಾಸ್ಯತಿ ॥೨೫೭॥

ಧೂಪಯಿಷ್ಯತಿ ಯೋ ಧೂಪೈರುತ್ತಮೈಃ ಶಂಕರಾಲಯಂ ।
ಸ ಸರ್ವಪಾಪನಿರ್ಮುಕ್ತಃ ಶಿವಲೋಕಂ ಪ್ರಯಾಸ್ಯತಿ ॥೨೫೮॥

ಯಃ ಶಿವಪ್ರತಿಮಾಂ ಕುರ್ಯಾದ್ವಿಚಿತ್ರಾಃ ಶಿವಮಂದಿರೇ ।
ಸ ಸರ್ವಪಾಪನಿರ್ಮುಕ್ತಃ ಶಿವಲೋಕಂ ಪ್ರಯಾಸ್ಯತಿ ॥೨೫೯॥

ರಸದ ಅನ್ನಗಳು ಇವುಗಳಿಂದ ಆದರಪೂರ್ವಕವಾಗಿ ಶಂಕರನನ್ನು ಪೂಜೆಮಾಡುವವರಿಗೆ ಸಕಲಪಾಪಗಳೂ ತೊಲಗಿ ಕೊನೆಗೆ ಶಿವಲೋಕಪ್ರಾಪ್ತಿಯಾಗುವುದು. ॥೨೪೭-೨೪೮-೨೪೯-೨೫೦-೨೫೧-೨೫೨-೨೫೩-೨೫೪-೨೫೫॥

ಹಿಂದೆ ಹೇಳಿದ ಮೊಸರನ್ನವೇ ಮೊದಲಾದವುಗಳನ್ನು ನೂರುತುತ್ತುಗಳ ಪ್ರಮಾಣದಿಂದಲೂ, ಹಣ್ಣುಗಳನ್ನು ನೂರುಸಂಖ್ಯೆಯಿಂದಲೂ, ಮಹೇಶ್ವರನಿಗೆ ಅರ್ಪಿಸಬೇಕು. ಶಿವದೇವಾಲಯಗಳಲ್ಲಿ ಹಸುವಿನ ತುಪ್ಪದಿಂದ ದೀಪಪಂಕ್ತಿಗಳನ್ನಿಡುವವನೂ, ಉತ್ತಮವಾದ ಧೂಪಗಳಿಂದ ಶಂಕರನ ಮಂದಿರದಲ್ಲಿ ಧೂಪಹಾಕುವವನೂ, ಎಲ್ಲಾ ಪಾಪಗಳನ್ನೂ ಕಳೆದುಕೊಂಡು ಕಡೆಗೆ ಶಿವಲೋಕವನ್ನು ಪಡೆಯುತ್ತಾನೆ ॥೨೫೬-೨೫೭-೨೫೮॥

ಶಿವದೇವಾಲಯಗಳಲ್ಲಿ ವಿಚಿತ್ರವಾದ ಶಿವಪ್ರತಿಮೆಗಳನ್ನು ರಚಿಸುವವನೂ ನಿತ್ಯವೂ ಶಂಕರನ ಮಂದಿರಗಳಲ್ಲಿ ಸ್ವಸ್ತಿಕವೇ ಮುಂತಾದ ರಂಗವಲ್ಲಿಯ ಚಿನ್ಹೆ

ಸ್ವಸ್ತಿಕಾದ್ಯೈರಲಂಕುರ್ಯಾದ್ಯೋ ನಿತ್ಯಂ ಶಂಕರಾಲಯಂ ।
ಸ ಸರ್ವಪಾಪನಿರ್ಮುಕ್ತಃ ಶಿವಲೋಕಂ ಪ್ರಯಾಸ್ಯತಿ ॥೨೬೦॥

ಪುಷ್ಪಮಾಲಾದಿಭಿರ್ನಿತ್ಯಂ ಯೋಽಲಂಕುರ್ಯಾಚ್ಛಿವಾಲಯಂ ।
ಸ ಸರ್ವಪಾಪನಿರ್ಮುಕ್ತಃ ಶಿವಲೋಕಂ ಪ್ರಯಾಸ್ಯತಿ ॥೨೬೧॥

ಸುಧಾಗೈರಿಕದಾನಾದ್ಯೈರ್ಯೋಽಲಂಕುರ್ಯಾಚ್ಛಿವಾಲಯಂ ।
ಸ ಸರ್ವಪಾಪನಿರ್ಮುಕ್ತಃ ಶಿವಲೋಕಂ ಪ್ರಯಾಸ್ಯತಿ ॥೨೬೨॥

ಭೇರೀಮರ್ದಲವಾದ್ಯಾದ್ಯೈರ್ಘೋಷಯೇದ್ಯಃ ಶಿವಾಲಯಂ ।
ಸ ಸರ್ವಪಾಪನಿರ್ಮುಕ್ತಃ ಶಿವಲೋಕಂ ಪ್ರಯಾಸ್ಯತಿ ॥೨೬೩॥

ವೀಣಾದಿಧ್ವನಿಭಿರ್ಯಸ್ತು ಧ್ವನಯೇಚ್ಛಿವಮಂದಿರಂ ।
ಸ ಸರ್ವಪಾಪನಿರ್ಮುಕ್ತಃ ಶಿವಲೋಕಂ ಪ್ರಯಾಸ್ಯತಿ ॥೨೬೪॥

ಶಿವಾಲಯೇ ತೋರಣಾನಿ ಯಃ ಕುರ್ಯಾನ್ಮೌಕ್ತಿಕಾದಿಭಿಃ ।
ಸ ಸರ್ವಪಾಪನಿರ್ಮುಕ್ತಃ ಶಿವಲೋಕಂ ಪ್ರಯಾಸ್ಯತಿ ॥೨೬೫॥

ನೃತ್ಯಂ ಕರೋತಿ ಯೋ ನಿತ್ಯಂ ಮುದಾ ಶಂಕರಮಂದಿರೇ ।
ಸ ಸರ್ವಪಾಪನಿರ್ಮುಕ್ತಃ ಶಿವಲೋಕಂ ಪ್ರಯಾಸ್ಯತಿ ॥೨೬೬॥

ಜಲಾದಿಸಾಧನೈರ್ನಿತ್ಯಂ ಶೋಧಯೇದ್ಯಃ ಶಿವಾಲಯಂ ।
ಸ ಸರ್ವಪಾಪನಿರ್ಮುಕ್ತಃ ಶಿವಲೋಕಂ ಪ್ರಯಾಸ್ಯತಿ ॥೨೬೭॥

ಮಾಘೇ ಮಾಸಿ ಮಹೇಶಾಯ ಯಃ ಕುರ್ಯಾದ್ಘೃತಕಂಬಲಂ ।
ಸ ಸರ್ವಪಾಪನಿರ್ಮುಕ್ತಃ ಶಿವಲೋಕಂ ಪ್ರಯಾಸ್ಯತಿ ॥೨೬೮॥

ಗಳಿಂದ ಅಲಂಕಾರಮಾಡುವವನೂ, ಹೂಮಾಲೆ, ಸುಣ್ಣ, ಗೈರಿಕಾದಿ ಧಾತುಗಳು ಇವೇ ಮುಂತಾದುವುಗಳಿಂದ ಶೃಂಗಾರಮಾಡುವವನೂ, ಭೇರಿ, ಮದ್ದಲೆ ಮುಂತಾದ ವಾದ್ಯಗಳಿಂದಲೂ, ವೀಣಾಧ್ವನಿಗಳಿಂದಲೂ ಶಿವಮಂದಿರದಲ್ಲಿ ಧ್ವನಿಗೊಳಿಸುವವನೂ, ಮುತ್ತು, ರತ್ನ ಮುಂತಾದವುಗಳಿಂದ ಶಿವದೇವಾಲಯಗಳಿಗೆ ತೋರಣ ಕಟ್ಟಿಸುವವನೂ, ಸಂತೋಷದಿಂದ ನಿತ್ಯವೂ ಶಂಕರನ ಮಂದಿರದಲ್ಲಿ ನಾಟ್ಯವಾಡುವವನೂ, ನೀರು ಮೊದಲಾದ ಸಲಕರಣೆಗಳಿಂದ ಶಿವಮಂದಿರವನ್ನು ಗುಡಿಸುವ

॥ ವಿಷ್ಣುರುವಾಚ ॥

ಇತ್ಯಗಸ್ತ್ಯವಚಃ ಶ್ರುತ್ವಾ ಸ ವಿಪ್ರೋ ಹೃಷ್ಟಮಾನಸಃ ।
ಅಗಸ್ತ್ಯಂ ಪ್ರಾಹ ವಿನಯಾತ್ಕೃತಾಂಜಲಿಪುಟೋ ವಿಧೇ ॥೨೬೯॥

॥ ವಿಪ್ರ ಉವಾಚ ॥

ಕಥಂ ಕುಂಭಜ ಕರ್ತವ್ಯಂ ಶಿವಾಯ ಘೃತಕಂಬಲಂ ।
ತತ್ಸರ್ವಂ ವದ ಸರ್ವಜ್ಞ ವೇದಶಾಸ್ತ್ರವಿಶಾರದ ॥೨೭೦॥

॥ ಅಗಸ್ತ್ಯ ಉವಾಚ ॥

ಸಿತಾನಾಮಸಿತಾನಾಂ ವಾ ಗವಾಮೇವ ಘೃತಂ ನವಂ ।
ವಸ್ತ್ರಸಂಶೋಧಿತಂ ಗ್ರಾಹ್ಯಂ ಪ್ರಸ್ಥಸಾರ್ಧಶತತ್ರಯಂ ॥೨೭೦॥

ಶೋಧಿತೇಷ್ವೇವ ಪಾತ್ರೇಷು ತತ್ಪ್ರಕ್ಷಿಪ್ಯ ಘೃತಂ ನವಂ ।
ರಕ್ಷಣೀಯಂ ಪ್ರಯತ್ನೇನ ಘನೀಭಾವಾವಧಿ ದ್ವಿಜ ॥೨೭೧॥

ವನೂ, ಸಾರಿಸುವವನೂ, ಅಲ್ಲದೇ ಮಾಘಮಾಸದಲ್ಲಿ ಶಂಕರನಿಗೆ ತುಪ್ಪದ ಕಂಬಲವನ್ನು ಮಾಡಿಸುವವನೂ ಸಹ ಸಕಲಪಾಪಗಳಿಂದಲೂ ಬಿಡುಗಡೆ ಹೊಂದಿ ಶಿವಲೋಕವನ್ನು ಪಡೆಯುವರು. ॥೨೫೯-೨೬೦-೨೬೧-೨೬೨-೨೬೩-೨೬೪-೨೬೫-೨೬೬-೨೬೭-೨೬೮

ಅಯ್ಯಾ ಬ್ರಹ್ಮನೇ, ಹೀಗೆ ನುಡಿದ ಅಗಸ್ತ್ಯಮುನಿಯ ಮಾತನ್ನು ಕೇಳಿ ಆ ವಿಪ್ರನು, ಸಂತುಷ್ಟಮನಸ್ಸುಳ್ಳವನಾಗಿ ವಿನಯದಿಂದ ಕೈಮುಗಿದುಕೊಂಡು, ಅಗಸ್ತ್ಯರೊಡನೆ ಮತ್ತೆ ಹೀಗೆ ಕೇಳಿಕೊಂಡನು

"ಕುಂಭದಲ್ಲಿ ಜನಿಸಿದ ಅಗಸ್ತ್ಯಮಹಾಮುನಿಯೇ, ಶಿವನಿಗೆ ತುಪ್ಪದಿಂದ ಕಂಬಲವನ್ನು ಮಾಡಿಸುವ ಬಗೆ ಹೇಗೆ? ಸರ್ವಜ್ಞನೂ, ವೇದಶಾಸ್ತ್ರಪಾರಂಗತನೂ ಆದ ನೀನು ಆ ವಿಚಾರವನ್ನು ನನಗೆ ತಿಳಿಸಬೇಕು" ಎಂದು ಬ್ರಾಹ್ಮಣನು ಅಗಸ್ತ್ಯಮುನಿಯನ್ನು ಮತ್ತೆ ಪ್ರಾರ್ಥಿಸಿದನು. ಆಗ ಅಗಸ್ತ್ಯಮಹಾಮುನಿಯು ಘೃತಕಂಬಲವಿಧಿಯನ್ನು ವಿವರಿಸಿ ಹೀಗೆ ನುಡಿದನು. ॥೨೭೦॥

ವಿಪ್ರನೇ, ಬಿಳಿಯ ಅಥವಾ ಕಪ್ಪುಬಣ್ಣದ ಹಸುಗಳ ಹೊಸ ತುಪ್ಪವನ್ನೇ ಸಂಪಾದಿಸಿಕೊಂಡು ಬಟ್ಟೆಯಲ್ಲಿ ಅದನ್ನು ಶೋಧಿಸಿ ಅದರಲ್ಲಿ ಮುನ್ನೂರೈವತ್ತು

ಮಾಘೇ ಮಾಸಿ ತತಃ ಸಾಯಂ ಪೌರ್ಣಮಾಸ್ಯಾಂ ಪ್ರಯತ್ನತಃ ।
ಅಭಿಷಿಚ್ಯ ತತೋ ದೇಯಂ ಘನೀಭೂತಂ ಘೃತಂ ಶಿವೇ ॥೨೭೩॥

ತತೋ ಧೂಪಾದಿಕಂ ದತ್ವಾ ನೈವೇದ್ಯಂಚ ಪ್ರಯತ್ನತಃ ।
ಪುನರ್ಧೂಪಾದಿಕಂ ದೇಯಂ ಪುನಃ ಪೂಜಾಂ ಪ್ರಕಲ್ಪಯೇತ್ ॥೨೭೪॥

ಪುರಾಣವಚನೈಃ ಕಾರ್ಯಂ ತತೋ ಜಾಗರಣಂ ನಿಶಿ ।
ಭೋಜನೀಯಾಸ್ತತಃ ಪ್ರಾತಃ ಶೈವಾಃ ಸ್ವಾದುರಸಾಯನೈಃ ॥೨೭೫॥

ಮಹಾಕಂಬಲನೇತತ್ತು ಘೃತಸ್ಯ ಪರಿಕೀರ್ತಿತಂ ।
ಏತತ್ಪೂಜಾಪರಾ ಪೂಜಾ ನಾಸ್ತಿ ಗೌರೀಪತೇರ್ದ್ವಿಜ ॥೨೭೬॥

ಘೃತಕಂಬಲಪೂಜಾ ತು ಸ್ವಸ್ವಶಕ್ತ್ಯಾಪಿ ಭಕ್ತಿತಃ ।
ಮಾಘೇ ಮಾಸಿ ಪ್ರಯತ್ನೇನ ಕರ್ತವ್ಯಂ ಮುಕ್ತಿಕಾಂಕ್ಷಿಭಿಃ ॥೨೭೭॥

---

ಸೇರು ತುಪ್ಪವನ್ನು ಅಳೆದುಕೊಂಡು ಆ ತುಪ್ಪವನ್ನು ಶುಚಿಯಾದ ಹೊಸ ಪಾತ್ರೆಗಳಲ್ಲಿ ಗಟ್ಟಿಯಾಗುವವರೆಗೂ ಕಾಪಾಡಬೇಕು ॥೨೭೧-೨೭೨॥

ಮಾಘಮಾಸದ ಪೂರ್ಣಿಮಾ ಸಾಯಂಕಾಲ ನಿಯಮದಿಂದ ಶಿವಲಿಂಗಕ್ಕೆ ರುದ್ರಾಭಿಷೇಕಮಾಡಿದನಂತರ ಗಟ್ಟಿಯಾಗಿರುವ ಆ ತುಪ್ಪವನ್ನು ಲೇಪನಮಾಡಬೇಕು. ಆಮೇಲೆ ಧೂಪವೇ ಮುಂತಾದವುಗಳನ್ನೂ ನೈವೇದ್ಯವನ್ನೂ ಸಮರ್ಪಿಸಿ ಪುನಃ ಧೂಪದೀಪ ನೈವೇದ್ಯಾದಿಗಳಿಂದ ತಿರುಗಿ ಪೂಜೆಯನ್ನು ಮಾಡಬೇಕು. ॥೨೭೩-೨೭೪॥

ಆ ರಾತ್ರಿಯಲ್ಲೆಲ್ಲಾ ಪುರಾಣವಚನಗಳನ್ನು ಕೇಳುತ್ತಾ ಜಾಗರಣೆಮಾಡಿ, ಬೆಳಗಾಗುತ್ತಲೇ ಶೈವಶ್ರೇಷ್ಠರಿಗೆ ರುಚಿಕರವಾಗಿ ಭೋಜನಮಾಡಿಸಬೇಕು. ಅಯ್ಯಾ ಬ್ರಾಹ್ಮಣನೇ, ಇದೇ ತುಪ್ಪದಲ್ಲಿ ಮಾಡುವ ಮಹಾಕಂಬಲವಿಧಾನವೆಂದು ತಿಳಿ. ಗೌರೀರಮಣನಾದ ಶಿವನಿಗೆ ಇದಕ್ಕಿಂತ ಉತ್ತಮವಾದ ಬೇರೊಂದು ಪೂಜೆಯೇ ಇಲ್ಲ. ॥೨೭೫-೨೭೬॥

ಈ ಘೃತಕಂಬಲಪೂಜೆಯನ್ನು ತಮ್ಮ ತಮ್ಮ ಶಕ್ತ್ಯನುಸಾರವಾಗಿ ಮಾಘಮಾಸದಲ್ಲಿ ಮೋಕ್ಷಾಪೇಕ್ಷೆಯುಳ್ಳವರು ಮಾಡಬಹುದು. ಬ್ರಾಹ್ಮಣನಾದವನು

ಕಂಬಲಾರ್ಧಂ ತದರ್ಧಂ ವಾ ತದರ್ಧಂ ವಾ ಪ್ರಯತ್ನತಃ ।
ಕರ್ತವ್ಯಂ ಶ್ರೀಮಹೇಶಾಯ ತನುಂ ಪ್ರಾಪ್ಯ ದ್ವಿಜೈರ್ದ್ವಿಜ ॥೨೭೮॥

ಏವಂ ಯಃ ಕುರುತೇ ಮರ್ತ್ಯೋ ಮಹೇಶಘೃತಕಂಬಲಂ ।
ಸ ಸರ್ವಪಾಪನಿರ್ಮುಕ್ತಃ ಶಿವಲೋಕಂ ಗಮಿಷ್ಯತಿ ॥೨೭೯॥

ಯಂ ಯಂ ಕಾಮಯತೇ ಕಾಮಂ ಯಃ ಕೃತ್ವಾ ಘೃತಕಂಬಲಂ ।
ತಂ ತಂ ಕಾಮಮವಾಪ್ನೋತಿ ಸ ಮೋಕ್ಷಮಪಿ ಗಚ್ಛತಿ ॥೨೮೦॥

ಪುರಾ ರೇವಾನದೀತೀರೇ ಗೌತಮಂ ಮುನಿಪುಂಗವಂ ।
ದೃಷ್ಟ್ವಾ ಸುಮೇಧಾಃ ಪಪ್ರಚ್ಛ ಪ್ರಣಮ್ಯ ವಿನಯಾನ್ವಿತಃ ॥೨೮೧॥

॥ ಸುಮೇಧಾ ಉವಾಚ ॥

ಗೌತಮ ಶ್ರುತಿತತ್ವಜ್ಞ ವೇದಶಾಸ್ತ್ರವಿಶಾರದ ।
ಐಶ್ವರ್ಯಮೋಕ್ಷದಂ ಚೈವ ವದ ಧರ್ಮಂ ವಿಶೇಷತಃ ॥೨೮೨॥

ಹಿಂದೆ ಹೇಳಿದ ತುಪ್ಪದ ಪ್ರಮಾಣದಲ್ಲಿ ಅರ್ಧ ಅಥವಾ ಅದರರ್ಧವಾದ ಕಾಲುಭಾಗ ದಿಂದಲಾದರೂ ಘೃತಕಂಬಲವನ್ನು ಮಾಡಬೇಕು ಈ ರೀತಿ ಮಹೇಶ್ವರನಿಗೆ ಮಾಘ ಮಾಸದಲ್ಲಿ ಘೃತಕಂಬಲ ಪೂಜೆಯನ್ನು ನಡೆಸುವವನು ಸಕಲ ಪಾಪಗಳಿಂದಲೂ ಬಿಡುಗಡೆ ಹೊಂದಿ ಶಿವಲೋಕವನ್ನೈದುವನು ॥೨೭೭-೨೭೮-೨೭೯॥

ಈ ಘೃತಕಂಬಲಪೂಜೆಯನ್ನು ಮಾಡಿದವನು ಏನೇನು ವರವನ್ನು ಬಯಸಿ ದರೂ ಅವೆಲ್ಲವನ್ನೂ ಪಡೆಯುವನಲ್ಲದೇ ಕೊನೆಗೆ ಮೋಕ್ಷವನ್ನೂ ಹೊಂದುತ್ತಾನೆ. ಹಿಂದೆ ರೇವಾನದಿಯ ದಡದಲ್ಲಿ ಮುನಿಶ್ರೇಷ್ಠನಾದ ಗೌತಮನನ್ನು ಕಂಡು ಸುಮೇಧ ಸ್ಸನು ವಿನಯದಿಂದ ನಮಸ್ಕಾರ ಮಾಡಿ ಅವನನ್ನು ಕುರಿತು ಹೀಗೆ ಅರಿಕೆಮಾ ಡಿದನು ॥೨೮೦-೨೮೧॥

ವೇದದ ರಹಸ್ಯವನ್ನರಿತವನೂ ವೇದಶಾಸ್ತ್ರಪಾರಂಗತನೂ ಆದ ಗೌತಮ ಮುನಿಯೇ, ಐಶ್ವರ್ಯ ಮತ್ತು ಮೋಕ್ಷಗಳನ್ನು ಕೊಡುವ ಧರ್ಮವನ್ನು ವಿಶೇಷ ವಾಗಿ ನನಗೆ ವಿವರಿಸೆಂದು ಸುಮೇಧಸನು ಗೌತಮನನ್ನು ಪ್ರಾರ್ಥಿಸಿದನು. ॥೨೮೨॥

|| ಗೌತಮ ಉವಾಚ ||

ಶಿವಾರ್ಚನಾತ್ಪರೋ ಧರ್ಮೋ ನಾಸ್ತಿ ವೇದೇಷು ಸರ್ವಥಾ ।
ಐಶ್ವರ್ಯಮೋಕ್ಷದಂ ಚೈವ ಮಹೇಶಸ್ಯೈವ ಪೂಜನಂ ॥೨೮೩॥

ಮಹೇಶಪೂಜನಾದನ್ಯನ್ನಾಸ್ತ್ಯೈಶ್ವರ್ಯಮುಕ್ತಿದಂ ।
ಸತ್ಯಮೇತತ್ಪುನಃ ಸತ್ಯಂ ಸತ್ಯಮಿತ್ಯಸ್ತಿ ಹಿ ಶ್ರುತಿಃ ॥೨೮೪॥

ಯಮರ್ಥಂ ಹೃದಿ ಸಂಕಲ್ಪ್ಯ ಯಃ ಪೂಜಯತಿ ಶಂಕರಂ ।
ಸ ತಮರ್ಥಮವಾಪ್ನೋತಿ ಸತ್ಯಂ ಸತ್ಯಮಿತಿ ಶ್ರುತಿಃ ॥೨೮೫॥

ಶಿವಲಿಂಗಾರ್ಚನೇನೈವ ಭುಕ್ತ್ವಾ ಭೋಗಾನನೇಕಧಾ ।
ಮುಕ್ತಿಂ ಚ ಪ್ರಾಪ್ನುವಂತ್ಯೇವ ಶಿವಾರ್ಚನಪರಾಯಣಾಃ ॥೨೮೬॥

ಅಖಂಡಮತುಲೈಶ್ವರ್ಯಂ ಯಸ್ಯ ಯಾವದಪೇಕ್ಷಿತಂ ।
ತತೋಽಪ್ಯಧಿಕಮೈಶ್ವರ್ಯಂ ಪ್ರಾಪ್ತವ್ಯಂ ಶಿವಪೂಜಯಾ ॥೨೮೭॥

ಶಿವಚಿಂತನಶೀಲಂ ಚೇದುತ್ತಮಂ ಚಿತ್ತಮನ್ವಹಂ ।
ವಿತ್ತೇಶೋ ಯಾತಿ ಸ್ವಾಮಿತ್ವಂ ಪತಿಪತ್ತೇರಪಿ ಸ್ವಯಂ ॥೨೮೮॥

---

ವೇದಗಳಲ್ಲಿ ಶಿವಪೂಜೆಗಿಂತಲೂ ಉತ್ತಮವಾದ ಧರ್ಮವೇ ಪ್ರತಿಪಾದಿತವಾಗಿಲ್ಲ. ಮಹೇಶ್ವರನ ಪೂಜೆಯೇ ಐಶ್ವರ್ಯ ಮತ್ತು ಮೋಕ್ಷಗಳನ್ನುಂಟುಮಾಡುವುದು. ಮಹೇಶ್ವರನ ಪೂಜೆಗಿಂತಲೂ ಬೇರೆಯಾವುದೂ ಐಶ್ವರ್ಯ ಮತ್ತು ಮುಕ್ತಿಗಳನ್ನು ಸತ್ಯವಾಗಿಯೂ ಕೊಡಲಾರದು. ಇದು ಸತ್ಯವೆಂದು ವೇದವು ಹೇಳುತ್ತಿರುವುದು. ||೨೮೩-೨೮೪||

ಮನಸ್ಸಿನಲ್ಲಿ ಯಾವ ಇಷ್ಟಾರ್ಥವನ್ನು ನಿಶ್ಚಯಿಸಿಕೊಂಡು, ಶಂಕರನನ್ನು ಪೂಜಿಸುತ್ತಾನೆಯೋ ಅದನ್ನು ಸತ್ಯವಾಗಿಯೂ ಆತನು ಹೊಂದುವನೆಂದು ಶ್ರುತಿಯಿರುವುದು. ಶಿವಪೂಜಾಪರಾಯಣರಾದವರು ಶಿವಲಿಂಗಪೂಜೆಯಿಂದಲೇ ಇಹದಲ್ಲಿ ಅನೇಕ ಭೋಗಗಳನ್ನನುಭವಿಸಿ ಕೊನೆಗೆ ಮೋಕ್ಷವನ್ನು ಹೊಂದಿಯೇ ಹೊಂದುತ್ತಾರೆ. ||೨೮೫-೨೮೬||

ಶಿವಪೂಜೆಯಿಂದ ಪರಿಪೂರ್ಣವೂ, ಅಸದೃಶವೂ ಆದ, ತಾನು ಅಪೇಕ್ಷಿಸಿದಷ್ಟಕ್ಕಿಂತ ಹೆಚ್ಚಾದ ಐಶ್ವರ್ಯವನ್ನೇ ಹೊಂದಬಹುದು. ಅನವರತವೂ ಉತ್ತಮವಾದ

ಮಾಘೇ ಮಾಸಿ ಮಹಾದೇವೇ ಯಃ ಕುರ್ಯಾದ್ಘೃತಕಂಬಲಂ ।
ಸ ಭುಕ್ತ್ವಾ ಸಕಲಾನ್ಭೋಗಾನಂತೇ ಮೋಕ್ಷಂ ಚ ವಿಂದತಿ ॥೨೮೯॥

ನರಾ ಭೂಪತಯೋ ಜಾತಾ ಘೃತಕಂಬಲದಾನತಃ ।
ಜಾತಿಸ್ಮರಾಶ್ಚ ತೇ ಜಾತಾ ಮುಕ್ತಾಶ್ಚಾಂತೇ ಶಿವಾರ್ಚನಾತ್ ॥೨೯೦॥

ಪುರಾ ಸುನಾಗಸಂ ವಿಪ್ರಂ ಜಾಬಾಲಶ್ರುತಿಪಾರಗಂ ।
ಪಪ್ರಚ್ಛ ಗೂಢಕರ್ಣಾಂಗೋ ಧರ್ಮಂ ದಾರಿದ್ರ್ಯನಾಶಕಂ ॥೨೯೧॥

॥ ಸುನಾಗಸ ಉವಾಚ ॥

ಮಾಘೇ ಮಕರಗೇ ಭಾನೌ ಕರ್ತವ್ಯಂ ಘೃತಕಂಬಲಂ ।
ಅಸಿತಾಯಾಃ ಸಿತಾಯಾಶ್ಚ ಧೇನೋರ್ಘೃತಮನುತ್ತಮಂ ॥೨೯೨॥

ಸಂಪಾದನೀಯಂ ಯತ್ನೇನ ಘನೀಭೂತಂ ಚ ಶೋಧಿತಂ ।
ತದ್ಘೃತಂ ತುಲಯೋತ್ತೀರ್ಣಂ ಪ್ರಸ್ಥಸಾರ್ಧಂ ಶತತ್ರಯಂ ॥೨೯೩॥

---

ಈ ಮನಸ್ಸು ಶಿವನಾಮಧ್ಯಾನನಿರತವಾದರೆ ಆತನು ಕುಬೇರನಿಗೆ ಸಮನೆನಿಸಿ ಸಕಲ ಜೀವರಾಶಿಗೂ ಸ್ವಾಮಿಯಾಗುವಷ್ಟು ಶಕ್ತಿಯುಂಟಾಗುವುದು. ॥೨೮೭-೨೮೮॥

ಮಾಘಮಾಸದಲ್ಲಿ ಮಹಾದೇವನಿಗೆ ಘೃತಕಂಬಲವನ್ನು ಮಾಡುವವನು ಇಹದಲ್ಲಿ ಸಕಲ ಭೋಗಗಳನ್ನೂ ಅನುಭವಿಸಿ ಕೊನೆಗೆ ಮೋಕ್ಷವನ್ನು ಹೊಂದುತ್ತಾನೆ. ಆ ಘೃತಕಂಬಲವನ್ನು ಶಿವನಿಗೆ ದಾನಮಾಡಿ ಮಾನವರು ರಾಜರಾಗಿ, ತಮ್ಮ ಪೂರ್ವಜನ್ಮದ ಸ್ಮರಣೆಯುಳ್ಳವರಾಗಿದ್ದಾರೆ. ಅಲ್ಲದೇ ಅವರೆಲ್ಲರೂ ಕೊನೆಗೆ ಶಿವಪೂಜಾಮಹಿಮೆಯಿಂದ ಮುಕ್ತರೂ ಆಗಿದ್ದಾರೆ. ಇದಕ್ಕೆ ಹಿಂದಿನ ಒಂದು ಇತಿಹಾಸವುಂಟು. ॥೨೮೯-೨೯೦॥

ಹಿಂದೆ ಒಂದುಸಾರಿ ಜಾಬಾಲಶ್ರುತಿಯನ್ನು ಚೆನ್ನಾಗಿ ಅರಿತಿರುವ ಸುನಾಗಸನೆಂಬ ಬ್ರಾಹ್ಮಣನನ್ನು ಗೂಢಕರ್ಣಾಂಗನೆಂಬುವನು ದಾರಿದ್ರ್ಯವನ್ನು ಹೋಗಲಾಡಿಸುವ ಧರ್ಮವನ್ನು ತಿಳಿಸಬೇಕೆಂದು ಪ್ರಶ್ನೆಮಾಡಿದನು. ॥೨೯೧॥

ಆಗ ಸುನಾಗಸನು ಹೀಗೆ ಹೇಳಿದನು – ಸೂರ್ಯನು ಮಕರರಾಶಿಯಲ್ಲಿರುವಾಗ ಅಂದರೆ ಮಕರಮಾಸದ ಮಾಘಮಾಸದಲ್ಲಿ ಬಿಳಿಯ ಅಥವಾ ಇತರ ಬಣ್ಣಗಳ ಹಸುವಿನ ತುಪ್ಪದಿಂದ ಶಿವನಿಗೆ ಉತ್ತಮವಾದ ಘೃತಕಂಬಲವನ್ನು ಮಾಡು. ಅದ

ತದರ್ಧಂ ವಾ ತದರ್ಧಂ ವಾ ಸಾಯಂ ನೇಯಂ ಶಿವಾಲಯೇ ।
ಘೃತೇನಾನ್ಯೇನ ದೇವೇಶಮಭಿಷಿಚ್ಯ ಮಹೇಶ್ವರಂ ॥೨೯೪॥

ಘನೀಭೂತಂ ಘೃತಂ ದೇಯಂ ತತಃ ಶಂಕರಮಸ್ತಕೇ ।
ತತಸ್ತಿಲೈಃ ಸರ್ಷಪೈಶ್ಚ ಬಿಲ್ವಪತ್ರೈಶ್ಚ ಕೋಮಲೈಃ ॥೨೯೫॥

ಹೇಮಪದ್ಮೈಶ್ಚ ದೇವೇಶಃ ಪೂಜನೀಯೋ ಮಹೇಶ್ವರಃ ॥೨೯೬॥

ಧೂಪದೀಪಾದಿಕಂ ದೇಯಂ ತತೋ ನೈವೇದ್ಯಮಾದರಾತ್ ।
ತತೋ ನೀರಾಜನಂ ದತ್ವಾ ದೇಯಾ ಪುಷ್ಪಾಂಜಲಿಸ್ತತಃ ॥೨೯೭॥

ಪ್ರದಕ್ಷಿಣನಮಸ್ಕಾರಾನ್ಕೃತ್ವಾ ಚ ತದನಂತರಂ ।
ಶೈವಂ ಪಂಚಾಕ್ಷರಂ ಜಪ್ತ್ವಾ ಶಿವಾಯೈತನ್ನಿವೇದಯೇತ್ ॥೨೯೮॥

ತತೋ ಜಾಗರಣಂ ಕಾರ್ಯಂ ಶಿವಸ್ಮರಣಪೂರ್ವಕಂ ।
ರಾತ್ರಿರ್ನೇಯಾ ಪ್ರಯತ್ನೇನ ಮಹಾದೇವಕಥಾದಿಭಿಃ ॥೨೯೯॥

ಕೋಸ್ಕರ ಕಷ್ಟಪಟ್ಟು ಶೋಧಿಸಿ, ಗಟ್ಟಿಯಾಗಿರುವ ತುಪ್ಪವನ್ನು ಸಂಪಾದಿಸಿಕೊ. ಆ ತುಪ್ಪವು ತಕ್ಕಡಿಯ ತೂಕದಲ್ಲಿ ಮುನ್ನೂರೈವತ್ತುಬಳ್ಳ ಪ್ರಮಾಣವುಳ್ಳದ್ದಾಗಿರಬೇಕು. ಅದರರ್ಧ ಅಥವಾ ಕಾಲುಭಾಗವಾದರೂ ಇರಬಹುದು. ಈ ರೀತಿಯಾಗಿರುವ ತುಪ್ಪವನ್ನು ಆ ಸಾಯಂಕಾಲದಲ್ಲಿ ಶಿವದೇವಾಲಯಕ್ಕೆ ತರಬೇಕು. ಇದಲ್ಲದೆ ಬೇರೆಯಾಗಿ ತಂದಿರುವ ತುಪ್ಪದಿಂದ ಮೊದಲು ಆ ದೇವತೋತ್ತಮನಾದ ಮಹೇಶ್ವರನಿಗೆ ಅಭಿಷೇಕ ಮಾಡಬೇಕು. ॥೨೯೨-೨೯೩-೨೯೪॥

ಆಮೇಲೆ ಗಟ್ಟಿಯಾದ ಆ ತುಪ್ಪವನ್ನು ಶಂಕರನ ತಲೆಯಮೇಲೆ ಲೇಪಿಸಬೇಕು. ಅನಂತರ, ಎಳ್ಳು, ಸಾಸುವೆ, ಕೋಮಲವಾದ ಬಿಲ್ವದಳ, ಸುವರ್ಣಕಮಲ ಮುಂತಾದವುಗಳಿಂದ ಮಹೇಶ್ವರನನ್ನು ಪೂಜೆಮಾಡಬೇಕು. ಹಾಗೆಯೇ ಧೂಪ ದೀಪ ಮುಂತಾದವುಗಳನ್ನೂ ನೈವೇದ್ಯವನ್ನೂ ಆದರದಿಂದ ಸಮರ್ಪಣೆ ಮಾಡಬೇಕು ಆಮೇಲೆ ಆರತಿಯನ್ನು ಬೆಳಗಿಸಿ ತರುವಾಯ ಪುಷ್ಪಾಂಜಲಿಯನ್ನು ಸಮರ್ಪಣೆ ಮಾಡಬೇಕು. ॥೨೯೫-೨೯೬-೨೯೭॥

ಹಾಗೆಯೇ ಪ್ರದಕ್ಷಿಣ ನಮಸ್ಕಾರಗಳನ್ನು ಮಾಡಿ ಅನಂತರ ಶಿವಪಂಚಾಕ್ಷರವನ್ನು ಜಪಿಸಿ, ಅದೆಲ್ಲವನ್ನು ಶಿವನಿಗೆ ಸಮರ್ಪಣೆ ಮಾಡಬೇಕು. ಅನಂತರ ಆ

ತತಃ ಪ್ರಾತಃ ಸಮುತ್ಥಾಯ ಕೃತ್ವಾ ಸ್ನಾನಾದಿಕಂ ಪುನಃ ।
ಪೂಜನೀಯೋ ಮಹಾದೇವೋ ಘೃತಸೇಚನಪೂರ್ವಕಂ ॥೩೦೦॥

ಭೋಜನೀಯಾಸ್ತತಃ ಶೈವಾಃ ಭಕ್ಷ್ಯೈರ್ಭೋಜ್ಯೈಶ್ಚ ಯತ್ನತಃ ।
ತತಃ ಸ್ವಯಂ ಚ ಭೋಕ್ತವ್ಯಂ ಬಂಧುಭಿಃ ಸಹ ಸಾದರಂ ॥೩೦೧॥

ಅನೇನ ತವ ದಾರಿದ್ರ್ಯಂ ನಾಶಮೇಷ್ಯತಿ ಸರ್ವಥಾ ।
ಭೋಗಾಂಶ್ಚ ವಿಪುಲಾನ್ಭುಕ್ತ್ವಾ ಶಿವಲೋಕಂ ಗಮಿಷ್ಯಸಿ ॥೩೦೨॥

|| ಗೌತಮ ಉವಾಚ ||

ಇತ್ಯುಕ್ತಸ್ತೇನ ಸ ಶಿವೇ ಚಕಾರ ಘೃತಕಂಬಲಂ ।
ತತಃ ಪ್ರಾಪ ಸಚ್ಚೈಶ್ವರ್ಯಮಕ್ಷೀಣಂ ವೃದ್ಧಿಸಂಯುತಂ ॥೩೦೩॥

ರತ್ನಪ್ರಾಸಾದಸಂಯುಕ್ತಾಃ ಗೃಹಾಸ್ತೇನ ವಿನಿರ್ಮಿತಾಃ ।
ವೇದಿಕಾಃ ಕಾರಿತಾಸ್ತೇನ ನವರತ್ನಸಮನ್ವಿತಾಃ ॥೩೦೪॥

ರಾತ್ರಿಯೆಲ್ಲಾ ಶಿವಸ್ಮರಣಪೂರ್ವಕವಾಗಿ ಜಾಗರಣೆಮಾಡುತ್ತಾ ಮಹಾದೇವನ ಕಥೆ ಮೊದಲಾದವುಗಳಿಂದಲೇ ಕಾಲವನ್ನು ಕಳೆಯಬೇಕು. ||೨೯೮-೨೯೯||

ಮರುದಿನ ಬೆಳಗ್ಗೆ ಎದ್ದು ಸ್ನಾನಸಂಧ್ಯಾದಿಗಳನ್ನು ತೀರಿಸಿಕೊಂಡು, ಪುನಃ ಘೃತಾಭಿಷೇಕಪೂರ್ವಕವಾಗಿ ಮಹಾದೇವನಿಗೆ ಪೂಜೆಸಲ್ಲಿಸಬೇಕು. ಇಷ್ಟಾದ ಮೇಲೆ ಶೈವರನ್ನು ಕರೆದು ಅವರನ್ನು ನಾನಾವಿಧವಾದ ಭಕ್ಷ್ಯಭೋಜ್ಯಾದಿಗಳಿಂದ ಭೋಜನ ಮಾಡಿಸಿ, ಆಮೇಲೆ ತಾನೂ ತನ್ನ ನೆಂಟರಿಷ್ಟರೊಡನೆ ಆದರದಿಂದ ಊಟಮಾಡಬೇಕು ||೩೦೦-೩೦೧||

ಈ ಪೂಜಾವಿಧಾನದಿಂದ ನಿನ್ನ ಬಡತನವೆಲ್ಲವೂ ಖಂಡಿತವಾಗಿಯೂ ತೊಲಗುತ್ತದೆ. ಈ ಲೋಕದಲ್ಲಿ ಅಪಾರವಾದ ಭೋಗಗಳನ್ನನುಭವಿಸಿ, ಕೊನೆಗೆ ನೀನು ಶಿವಲೋಕವನ್ನೈದುವೆಯೆಂದು ಸುನಾಗಸನು ಉಪದೇಶಿಸಿದನು. ||೩೦೨||

ಸುನಾಗಸನ ಮಾತುಗಳನ್ನು ಕೇಳಿ ಗೂಢ ಕರ್ಣಾಂಗನು ಆದರಂತೆಯೇ ಪರಶಿವನಿಗೆ ಘೃತಕಂಬಲಪೂಜೆಯನ್ನು ನೆರವೇರಿಸಲು ಅವನು ಎಂದಿಗೂ ನಾಶವಾಗದ ಮತ್ತು ಯಾವಾಗಲೂ ಅಭಿವೃದ್ಧಿಹೊಂದುತ್ತಿರುವ ಪೂರ್ಣ ಐಶ್ವರ್ಯವನ್ನು ಪಡೆ

ನಿಕ್ಷೇಪಾ ಬಹವೋ ಲಬ್ಧಾಸ್ತೇನ ಸಂಖ್ಯಾವಿವರ್ಜಿತಾಃ ।
ತಸ್ಯ ಸಾರ್ಧಶತಂ ಪುತ್ರಾ ಬಭೂವುಃ ಶಿವತತ್ಪರಾಃ ॥೩೦೫॥

ಇದಂ ಸರ್ವಂ ಸಮಾಲೋಕ್ಯ ಮಹದೈಶ್ವರ್ಯಮುತ್ಕಟಂ ।
ಸಮಸ್ತಭೋಗಸಂಪನ್ನೋ ಹೃಷ್ಟಚಿತ್ತೋ ಬಭೂವ ಸಃ ॥೩೦೬॥

ಸ ಮಾಘಮಾಸಿ ಯತ್ನೇನ ಸಕುಟುಂಬೋ ಮಹೇಶ್ವರಂ ।
ನಿತ್ಯಂ ಸಮರ್ಚಯಾಮಾಸ ರತ್ನಾದ್ಯೈರತಿಭಕ್ತಿತಃ ॥೩೦೭॥

ಸದ್ವೈವ ಪೂಜಯಾಮಾಸ ಸ ಬಿಲ್ವದಲಕೋಟಿಭಿಃ ।
ಕರವೀರಾದಿಭಿಃ ಪುಷ್ಪೈರಪಿ ತೈರಪಿ ಸಾದರಂ ॥೩೦೮॥

ತೇನೈಶ್ವರ್ಯೇಣ ಧನದಮಧಃ ಕೃತ್ವಾ ಸ ಸಂಸ್ಥಿತಃ ।
ತೇನೈಶ್ವರ್ಯೇಣ ಸಂತುಷ್ಟೋ ಬಭೂವ ಶಿವತತ್ಪರಃ ॥೩೦೯॥

ಸ ಮಾಘಮಾಸಿ ಯತ್ನೇನ ತತಃ ಪುತ್ರಾದಿಸಂಯುತಃ ।
ಚಕಾರೋಕ್ತಪ್ರಕಾರೇಣ ಮಹೇಶೇ ಘೃತಕಂಬಲಂ ॥೩೧೦॥

ದನು. ರತ್ನಪ್ರಾಸಾದಗಳಿಂದ ಕೂಡಿದ ಅನೇಕ ಮನೆಗಳನ್ನು ಕಟ್ಟಿಸಿದನು. ನವ ರತ್ನಗಳಿಂದ ಕೆತ್ತಿದ ಜಗಲಿಗಳೂ ಅವನಿಂದ ಮಾಡಿಸಲ್ಪಟ್ಟವು. ||೩೦೩-೩೦೪||

ಅವನಿಗೆ ಸಂಖ್ಯೆಯಿಲ್ಲದಷ್ಟು ನಿಕ್ಷೇಪಗಳು ದೊರೆತವು. ಆತನಿಗೆ ನೂರೈವತ್ತು ಮಂದಿ ಶೈವಾಗ್ರೇಸರರಾದ ಮಕ್ಕಳು ಹುಟ್ಟಿದರು. ಹೀಗೆ ಪುತ್ರರಿಂದಲೂ, ಧನ ಧಾನ್ಯಗಳಿಂದಲೂ ಭರಿತವಾದ ಮಹದೈಶ್ವರ್ಯವನ್ನು ನೋಡಿ ಆ ಗೂಢಕರ್ಣಾಂಗನು ಸಕಲ ಭೋಗಗಳನ್ನೂ ಪಡೆದವನಾಗಿ ಸಂತುಷ್ಟಾಂತರಂಗನಾದನು. ||೩೦೫-೩೦೬||

ಆತನು ಮಾಘಮಾಸದಲ್ಲಿ ತನ್ನ ಪತ್ನೀಸಮೇತನಾಗಿ ನಿತ್ಯವೂ ಭಯಭಕ್ತಿಯಿಂದ ನಿಯಮಬದ್ಧನಾಗಿ ರತ್ನವೇ ಮುಂತಾದ ಸಾಧನಗಳಿಂದ ಮಹೇಶ್ವರನನ್ನು ಪೂಜೆಮಾಡಿದನು. ಕೋಟ್ಯಂತರ ಬಿಲ್ವಪತ್ರೆಗಳಿಂದಲೂ ಕಣಿಗಲೆ ಮುಂತಾದ ಹೂಗಳಿಂದಲೂ ಆದರದಿಂದ ಪೂಜಿಸಿದನು. ||೩೦೭-೩೦೮||

ಐಶ್ವರ್ಯದಿಂದ ಅವನು ಕುಬೇರನನ್ನೂ ಧಿಕ್ಕರಿಸುತ್ತಿದ್ದನು. ಶಿವಪೂಜಾ ತತ್ಪರನಾದ ಆತನು ಐಶ್ವರ್ಯದಿಂದ ಸಂತೋಷಭರಿತನಾಗಿ ಕಾಲಕಳೆಯುತ್ತಿದ್ದನು.

ತತಃ ಪ್ರವೃದ್ಧಮಭವತ್ತತೋಽಪ್ಯೈಶ್ವರ್ಯಮುತ್ಕಟಂ ।
ತೇನೈಶ್ವರ್ವೇಣ ಸಂತುಷ್ಟಃ ಪೂಜಯಾಮಾಸ ಶಂಕರಂ ॥೩೧೧॥

ಕಾರಿತಂ ಚ ತತಸ್ತೇನ ರಮ್ಯಂ ರತ್ನಶಿವಾಲಯಂ ।
ಪ್ರಾಸಾದಃ ಕಾರಿತಸ್ತೇನ ನಾನಾರತ್ನವಿರಾಜಿತಃ ॥೩೧೨॥

ತಸ್ಮಿನ್ ಶಿವಾಲಯೇ ತೇನ ಲಿಂಗಂ ರತ್ನಮಯಂ ಶುಭಂ ।
ಸ್ಥಾಪಿತಂ ವಿಧಿವತ್ತೇನ ತೋಷಿತಾಶ್ಯಾಂಭವಾಸ್ತದಾ ॥೩೧೩॥

ಕೃತಾನಿ ರತ್ನದಾನಾನಿ ತೇನ ತತ್ರ ಶಿವಾಲಯೇ ।
ತದಾ ಸುವರ್ಣದಾನಾನಿ ಕೃತಾನಿ ಬಹುಧಾ ಮುದಾ ॥೩೧೪॥

ಲಕ್ಷಂ ಗಾವೋ ಬಹುಕ್ಷೀರಾಃ ಶಿವಾರ್ಥಂ ತೇನ ರಕ್ಷಿತಾಃ ।
ನಿತ್ಯಂ ಸ ಲಕ್ಷಗೋಕ್ಷೀರೈರಭಿಷಿಚ್ಯ ಸ್ಥಿತಃ ಸ್ವಯಂ ॥೩೧೫॥

ಅವನೇ ಪುನಃ ಮಾಘಮಾಸದಲ್ಲಿ ಮಕ್ಕಳೇ ಮುಂತಾದವರೊಡನೆ ನಿಯಮಬದ್ಧನಾಗಿ ಹಿಂದೆ ಹೇಳಿದ ವಿಧಿಯನ್ನನುಸರಿಸಿ ಮಹೇಶ್ವರನಿಗೆ ಘೃತಕಂಬಲವನ್ನು ಮಾಡಿಸಿದನು. ||೩೦೯-೩೧೦||

ಆದರಿಂದ ಅವನ ಅತಿಶಯವಾದ ಐಶ್ವರ್ಯವು ಮತ್ತಷ್ಟು ಅಭಿವೃದ್ಧಿಯಾಯಿತು. ಅಂತಹ ಐಶ್ವರ್ಯದಿಂದ ಸಂತುಷ್ಟನಾಗಿ ಶಂಕರನನ್ನು ಮತ್ತೆ ಚೆನ್ನಾಗಿ ಪೂಜೆಮಾಡಿದನು. ಕೆಲವುದಿವಸಗಳಾದ ಮೇಲೆ ರತ್ನಗಳಿಂದ ಯುಕ್ತವಾದ ಒಂದು ಮನೋಹರವಾಗಿರುವ ಶಿವದೇವಾಲಯುವನ್ನು ಕಟ್ಟಿಸಿದನು. ಆ ದೇವಾಲಯಕ್ಕೆ ಅನೇಕ ರತ್ನಗಳಿಂದ ವಿರಾಜಿಸುತ್ತಿರುವ ಉಪ್ಪರಿಗೆಯೂ ಅವನಿಂದ ರಚಿಸಲ್ಪಟ್ಟಿತು. ||೩೧೧-೩೧೨||

ಶಿವಮಂದಿರದಲ್ಲಿ ರತ್ನಖಚಿತವಾದ ಲಕ್ಷಣಲಕ್ಷಿತವಾದ ಒಂದು ಶಿವಲಿಂಗವನ್ನು ವಿಧಿಪ್ರಕಾರವಾಗಿ ಸ್ಥಾಪನೆಮಾಡಿ, ಅಲ್ಲಿ ಶಾಂಭವರನ್ನು ಸಂತೋಷಪಡಿಸಿದನು. ಅದೇ ಶಿವಾಲಯದಲ್ಲಿ ಅವನು ಅನೇಕ ರತ್ನಗಳನ್ನೂ ಚಿನ್ನ ಮುಂತಾದವುಗಳನ್ನೂ ಯಥೇಚ್ಛವಾಗಿ ಸಂತೋಷದಿಂದ ದಾನಮಾಡಿದನು. ||೩೧೩-೩೧೪||

ಶಿವಭಕ್ತಿಯುಕ್ತನಾದ ಆತನು ಶಿವನಿಗೋಸ್ಕರವೇ ಹಾಲುಕೊಡುವ ಒಂದು ಲಕ್ಷ ಹಸುಗಳನ್ನು ಕಾಪಾಡಿದ್ದನು. ಲಕ್ಷ ಹಸುಗಳ ಹಾಲಿನಿಂದಲೂ ನಿತ್ಯವೂ ತಾನೇ

ಘೃತಾಕ್ತಪರಮಾನ್ನೇನ ಸ ಸಂಪೂಜ್ಯ ಮಹೇಶ್ವರಂ ।
ಶರ್ಕರಾಮಧುದುಗ್ಧಾನ್ನೈಃ ಪೂಜಯಾಮಾಸ ಶಂಕರಂ ॥೩೦೬॥

ತೇನಾಯುತತ್ರಯಂ ಶೈವಾಃ ಭೋಜಿತಾಃ ಪ್ರತ್ಯಹಂ ಮುದಾ ।
ತೇನ ದತ್ತಾನಿ ರತ್ನಾನಿ ಭೋಜಿತೇಭ್ಯೋ ಯದೃಚ್ಛಯಾ ॥೩೦೭॥

ಕದಾಚಿತ್ತದ್ಗೃಹಂ ಪ್ರಾಪ್ತಾಃ ಸಾರ್ಧಲಕ್ಷತ್ರಯಂ ದ್ವಿಜಾಃ ।
ದೃಷ್ಟ್ವಾ ತಾನ್ಭಸ್ಮದಿಗ್ಧಾಂಗಾನ್ಹೃಷ್ಟಚಿತ್ತೋ ಬಭೂವ ಸಃ ॥೩೦೮॥

ತತಸ್ತಾನ್ಪೂಜಯಾಮಾಸ ಭೋಜಯಾಮಾಸ ಚಾದರಾತ್ ।
ತೇಭ್ಯೋ ದದೌ ಸ ರತ್ನಾನಾಂ ಪ್ರತ್ಯೇಕಂ ಲಕ್ಷಪಂಚಕಂ ॥೩೦೯॥

ಏವಂ ಭುಕ್ತ್ವಾಖಿಲಾನ್ಭೋಗಾನ್ಕೃತ್ವಾ ಚ ಶಿವಪೂಜನಂ ।
ಸ ಶಿವಂ ಪ್ರಾಪ ದೇಹಾಂತೇ ಘೃತಕಂಬಲಪೂಜಯಾ ॥೩೧೦॥

---

ಶಿವನಿಗೆ ಅಭಿಷೇಕವನ್ನು ಮಾಡುತ್ತಿದ್ದನು. ಅವನು ತುಪ್ಪದಿಂದ ಬೆರೆದ ಪರಮಾನ್ನ ಮತ್ತು ಸಕ್ಕರೆಯ ಅನ್ನಗಳಿಂದಲೂ ಮತ್ತು ಕ್ಷೀರಾನ್ನದಿಂದಲೂ ಶಂಕರನನ್ನು ಪೂಜೆಮಾಡುತ್ತಿದ್ದನು. ॥೩೦೫-೩೦೬॥

ಅವನು ಪ್ರತಿನಿತ್ಯವೂ ಮೂವತ್ತುಸಾವಿರ ಶೈವರಿಗೆ ಸಂತೋಷದಿಂದ ಭೋಜನಮಾಡಿಸುತ್ತಾ ಊಟವಾದನಂತರ ಅವರಿಗೆ ತನ್ನ ಮನಸ್ಸಿಗೆ ತೋರಿದಷ್ಟು ರತ್ನಗಳನ್ನು ದಾನಮಾಡುತ್ತಿದ್ದನು. ಒಂದುದಿನ ಅವನ ಮನೆಗೆ ಇದ್ದಕ್ಕಿದ್ದಂತೆಯೇ ಮೂರುವರೆಲಕ್ಷ ಮಂದಿ ಬ್ರಾಹ್ಮಣರು ಬಂದರು ಭಸ್ಮಭೂಷಿತ ಶರೀರರಾಗಿ ಬಂದಿರುವ ಅಷ್ಟುಮಂದಿ ದ್ವಿಜರನ್ನೂ ಕಂಡು ಅವನು ವಿಶೇಷ ಸಂತುಷ್ಟನಾದನು. ॥೩೦೭-೩೦೮॥

ಅವನು ಬ್ರಾಹ್ಮಣರನ್ನೆಲ್ಲಾ ಯಥೋಚಿತವಾಗಿ ಸತ್ಕರಿಸಿ ಆದರದಿಂದ ಭೋಜನ ಮಾಡಿಸಿ ಅನಂತರ ಪ್ರತ್ಯೇಕವಾಗಿ ಒಬ್ಬೊಬ್ಬರಿಗೆ ಐದು ಲಕ್ಷದಂತೆ ರತ್ನಗಳನ್ನು ದಾನಮಾಡಿದನು. ಹೀಗೆ ಸಕಲ ಭೋಗಗಳನ್ನೂ ಅನುಭವಿಸಿ, ಶಿವನನ್ನು ಚೆನ್ನಾಗಿ ಪೂಜೆಮಾಡಿ ಕೊನೆಗೆ ಈತನು ಘೃತಕಂಬಲ ಮಹಿಮೆಯಿಂದ ಮರಣಾನಂತರದಲ್ಲಿ ಆ ಪರಶಿವನನ್ನೇ ಹೊಂದಿದನು ಎಂದು ಗೌತಮಮುನಿಯು ಸುಮೇಧಸ್ಸಿಗೆ ಘೃತಕಂಬಲ ಮಹಿಮೆಯನ್ನು ಸುರಿದನು. ॥೩೦೯-೩೧೦॥

|| ಅಗಸ್ತ್ಯ ಉವಾಚ ||

ಇತ್ಯುಕ್ತಃ ಸ ಸುಮೇಧೋಽಪಿ ಗೌತಮೇನ ಮಹಾತ್ಮನಾ ।
ಚಕಾರ ಮಾಘೇ ಸಂಪ್ರಾಪ್ತೇ ಶಿವಾಯ ಘೃತಕಂಬಲಂ ॥೩೨೦॥

ತತಃ ಪ್ರಾಪ ಸ ಚೈಶ್ವರ್ಯಮಮಿತಂ ಶಿವಪೂಜಯಾ ।
ಭುಕ್ತ್ವಾ ಚ ಸಕಲಾನ್ಭೋಗಾಂತ್ಸ ಶಿವಂ ಪ್ರಾಪ ಸತ್ತಮಃ ॥೩೨೨॥

ಅತೋ ಯತ್ನೇನ ಕರ್ತವ್ಯಂ ಮಹೇಶಘೃತಕಂಬಲಂ ।
ಭೋಗಮೋಕ್ಷೇಚ್ಛಯಾ ವಿಪ್ರ ಸತ್ಯಂ ಸತ್ಯಂ ನ ಸಂಶಯಃ ॥೩೨೩॥

ಮೀನಕರ್ಕಟಯೋರ್ಮಧ್ಯೇ ಜಲಧಾರಾಂ ಮಹೇಶ್ವರೇ ।
ಯಃ ಕಲ್ಪಯೇದವಿಚ್ಛಿನ್ನಾಂ ಸ ಮೋಕ್ಷಮಧಿಗಚ್ಛತಿ ॥೩೨೪॥

ಶಿವಂ ಮಕರಸಂಕ್ರಾಂತೌ ದುಗ್ಧಾದ್ಯೈಃ ಪ್ರಸ್ಥಸಂಮಿತೈಃ ।
ಅಭಿಷಿಚ್ಯ ಪ್ರಯತ್ನೇನ ಶುದ್ಧೈರಪಿ ಜಲೈರ್ನವೈಃ ॥೩೨೫॥

ಭಸ್ಮಬಿಲ್ವಾದಿಭಿಃ ಸಮ್ಯಕ್ಪೂಜಯಿತ್ವಾ ಮಹೇಶ್ವರಂ ।
ಸಂಕಲ್ಪ್ಯ ಪೂರ್ವಂ ಯತ್ನೇನ ನೈವೇದ್ಯಂತು ಪ್ರಕಲ್ಪಯೇತ್ ॥೩೨೬॥

ಮಹಾತ್ಮನಾದ ಗೌತಮನ ಉಪದೇಶ ಹೊಂದಿದ ಆ ಸುಮೇಧಸನೂ ಮಾಘಮಾಸ ಪ್ರಾರಂಭವಾಗುತ್ತಲೇ ಶಿವನಿಗೆ ಘೃತಕಂಬಲಸೇವೆಯನ್ನು ನಡೆಸಿದನು. ಅದರ ಫಲವಾಗಿ ಅವನು ಶಿವಪೂಜಾ ಮಹಿಮೆಯಿಂದ ಅಪರಿಮಿತವಾದ ಐಶ್ವರ್ಯವನ್ನೂ ಸಕಲ ಭೋಗಗಳನ್ನೂ ಇಹದಲ್ಲಿ ಪಡೆದು ಕೊನೆಗೆ ಶಿವನ ಸಾರೂಪ್ಯವನ್ನೈದಿದನು. ||೩೨೧-೩೨೨||

ಅಯ್ಯ ವಿಪ್ರನೇ, ಇಹದಲ್ಲಿ ಸಕಲ ಭೋಗಗಳನ್ನೂ ಪರದಲ್ಲಿ ಮೋಕ್ಷವನ್ನೂ ಅಪೇಕ್ಷಿಸುವವನು ನಿಯಮದಿಂದ ಮಹೇಶ್ವರನಿಗೆ ಘೃತಕಂಬಲವನ್ನು ಮಾಡಬೇಕು ಮೀನ ಮತ್ತು ಕಟಕಮಾಸಗಳ ಮಧ್ಯಕಾಲದಲ್ಲಿ ಮಹೇಶ್ವರನಿಗೆ ಅವಿಚ್ಛಿನ್ನವಾಗಿ ಜಲಧಾರೆಯನ್ನು ಏರ್ಪಡಿಸುವವನು ಮೋಕ್ಷವನ್ನೈದುತ್ತಾನೆ. ||೩೨೩-೩೨೪||

ಮಕರಸಂಕ್ರಮಣಕಾಲದಲ್ಲಿ ಸಂಕಲ್ಪಪೂರ್ವಕವಾಗಿ ಹಾಲು, ಮೊಸರು ಮುಂತಾದ ಒಳ್ಳೆಪ್ರಮಾಣದ ಪಂಚಾಮೃತದ್ರವ್ಯಗಳಿಂದಲೂ, ಶುದ್ಧವಾಗಿಯೂ

ಶತಪ್ರಸ್ಥಮಿತೈಃ ಕೃಷ್ಣೈ ಶ್ವೇತೈರ್ವಾ ಕ್ಷಾಳಿತೈಸ್ತಿಲೈಃ ।
ಪೂಜನೀಯಸ್ತತೋ ಭಕ್ತ್ಯಾ ಲಿಂಗರೂಪೀ ಸದಾಶಿವಃ ॥೩೨೭॥

ಸಿಂಹಾದಿಷ್ವಪಿ ಸಂಕ್ರಾಂತಿಷ್ವೇವಮೇವ ಸದಾಶಿವಃ ।
ಪೂಜನೀಯಃ ಪ್ರಯತ್ನೇನ ವಿಷುವೇಷ್ವಯನೇಷ್ವಪಿ ॥೩೨೮॥

ಯುಗಾದಿಷ್ವಪಿ ಸಂಪೂಜ್ಯೋ ಮನ್ವಾದಿಷ್ವಪಿ ಶಂಕರಃ ।
ಏವಮೇವ ಶಿವಃ ಪೂಜ್ಯೋ ಗ್ರಹಣೇ ಚಂದ್ರಸೂರ್ಯಯೋಃ ॥೩೨೯॥

ಏವಂ ಯಃ ಕುರುತೇ ಭಕ್ತ್ಯಾ ಲಿಂಗಪೂಜಾಂ ಮಹೇಶ್ವರೇ ।
ಸ ಮಹಾಪಾತಕೇಭ್ಯೋಽಪಿ ಮುಚ್ಯತೇ ನಾತ್ರ ಸಂಶಯಃ ॥೩೩೦॥

ತಿಲೈಃ ಪೂಜಾಂ ಪ್ರಯತ್ನೇನ ಸ್ವಸ್ವಾಂಜಲಿಮಿತೈಃ ಸದಾ ।
ಯಃ ಕರೋತಿ ಸ ಪಾಪೇಭ್ಯಃ ಸರ್ವೇಭ್ಯೋಽಪಿ ವಿಮುಚ್ಯತೇ ॥೩೩೧॥

---

ಹೊಸದಾಗಿಯೂ ಇರುವ ಜಲದಿಂದಲೂ ಶಿವನಿಗೆ ಅಭಿಷೇಕಮಾಡಿ, ವಿಭೂತಿ, ಬಿಲ್ವಪತ್ರೆ ಮೊದಲಾದವುಗಳಿಂದ ಪೂಜಿಸಿ ನಿಯಮದಿಂದ ನೈವೇದ್ಯವನ್ನು ಸಮರ್ಪಣೆಮಾಡಬೇಕು. ॥೩೨೫-೩೨೬॥

ಒಂದುನೂರುಸೇರು ಕಪ್ಪು ಅಥವ ಬಿಳಿಯ ಎಳ್ಳನ್ನು ಚೆನ್ನಾಗಿ ತೊಳೆದು ಅದರಿಂದ ಲಿಂಗಸ್ವರೂಪಿಯಾದ ಸದಾಶಿವನನ್ನು ಭಕ್ತಿಯಿಂದ ಪೂಜೆಮಾಡಬೇಕು. ಸಿಂಹಸಂಕ್ರಮಣವೇ ಮುಂತಾದ ಇತರ ಸಂಕ್ರಮಣಕಾಲಗಳಲ್ಲಿಯೂ, ವಿಷುವತ್ಪುಣ್ಯಕಾಲ ಮತ್ತು ದಕ್ಷಿಣಾಯನ, ಉತ್ತರಾಯಣಕಾಲಗಳಲ್ಲಿಯೂ ಹೀಗೆಯೇ ನಿಯಮದಿಂದ ಸದಾಶಿವನನ್ನು ಪೂಜೆಮಾಡಬೇಕು. ॥೩೨೭-೩೨೮॥

ಯುಗಾದಿ ಮತ್ತು ಮನ್ವಾದಿಕಾಲಗಳಲ್ಲಿಯೂ, ಸೂರ್ಯಚಂದ್ರರ ಗ್ರಹಣ ಸಮಯದಲ್ಲಿಯೂ ಹೀಗೆಯೇ ಶಂಕರನನ್ನು ಪೂಜಿಸಬೇಕು. ಈರೀತಿ ಭಕ್ತಿಯಿಂದ ಮಹೇಶ್ವರನಿಗೆ ಲಿಂಗಪೂಜೆಯನ್ನು ಮಾಡುವವನು ಸಕಲ ಮಹಾಪಾತಕಗಳಿಂದಲೂ (ಬ್ರಹ್ಮಹತ್ಯಾ, ಸುರಾಪಾನ, ಚಿನ್ನ ಕದಿಯುವುದು, ಗುರುಪತ್ನೀಸಮಾಗಮ ಮತ್ತು ಈ ನಾಲ್ವರ ಸಹವಾಸದಲ್ಲಿರುವುದು) ಬಿಡುಗಡೆಹೊಂದುವುದರಲ್ಲಿ ಸಂಶಯವೇ ಇಲ್ಲ. ॥೩೨೯-೩೩೦॥

ಯಾವಾಗಲೂ ತನ್ನ ತನ್ನ ಬೊಗಸೆ ತುಂಬಾ ಎಳ್ಳಿನಿಂದ ಶಿವನಿಗೆ ಪೂಜೆ ಮಾಡುವವನು ಸಕಲಪಾಪಗಳಿಂದಲೂ ಬಿಡುಗಡೆ ಹೊಂದುತ್ತಾನೆ. ಅಯ್ಯಾ ಬ್ರಾಹ್ಮ

ಏವಮೇವ ಮಹಾದೇವಂ ಯೋ ನಿತ್ಯಂ ಶ್ವೇತಸರ್ಷಪೈಃ ।
ಭಕ್ತ್ಯಾ ಸಂಪೂಜಯೇದ್ವಿಪ್ರ ಸ ಪಾಪೇಭ್ಯೋ ವಿಮುಚ್ಯತೇ ॥೩೩೨॥

ಯಸ್ತು ಬಿಲ್ವವನಾದೀನಿ ಶಿವಪೂಜಾರ್ಥಮಾದರಾತ್ ।
ಕರೋತಿ ಶ್ರದ್ಧಯಾ ಯುಕ್ತಃ ಸ ಮೋಕ್ಷಮಧಿಗಚ್ಛತಿ ॥೩೩೩॥

ಯಃ ಶಿವಾಲಯನಿರ್ಮಾಣಂ ಕಾರಯಿಷ್ಯತಿ ಭಕ್ತಿತಃ ।
ಸ ಮಹಾಪಾಪನಿಚಯಾತ್ಸದ್ಯ ಏವ ವಿಮುಚ್ಯತೇ ॥೩೩೪॥

ಪುರಾ ನಿಷಧದೇಶೇಷು ಕಶ್ಚಿದಾಸೀದ್ದ್ವಿಜಾಧಮಃ ।
ತೇನ ಪಾಪಾನ್ಯನಂತಾನಿ ಕೃತಾನಿ ದ್ವಿಜಸತ್ತಮ ॥೩೩೫॥

ತತ್ಕೃತಾನಾಂ ಮಹಾಘೋನಾಂ ಪ್ರಾಯಶ್ಚಿತ್ತಂ ನ ಸರ್ವಥಾ ।
ಬ್ರಹ್ಮಹತ್ಯಾದಿಪಾಪಾನಿ ಕೋಟಿಶಃ ಸ ಚಕಾರ ಹಿ ॥೩೩೬॥

ಏತಾದೃಶಃ ಸ ಪಾಪಿಷ್ಠಃ ಕದಾಚಿದ್ರಾಜಮಂದಿರಂ ।
ರಾಜಪತ್ನ್ಯುಪಭೋಗಾರ್ಥಂ ಪ್ರವಿವೇಶ ಧನುರ್ಧರಃ ॥೩೩೭॥

ಣನೇ, ಹೀಗೆಯೇ ನಿತ್ಯವೂ ಬಿಳಿಯಸಾಸುವೆಗಳಿಂದಲೂ ಭಕ್ತಿಪೂರ್ವಕವಾಗಿ ಶಿವನಿಗೆ ಪೂಜೆಮಾಡುವವನು ಪಾಪರಹಿತನಾಗುತ್ತಾನೆ. ||೩೩೧-೩೩೨||

ಯಾರು ಶಿವನ ಪೂಜೆಗೆ ಉಪಯೋಗವಾಗುವಂತೆ ಶ್ರದ್ಧೆ ಮತ್ತು ಆದರಗಳಿಂದ ಬಿಲ್ವವನಗಳೇ ಮುಂತಾದವುಗಳನ್ನು ನಿರ್ಮಿಸುವನೋ, ಅಂತಹವನು ಸುಲಭವಾಗಿ ಮೋಕ್ಷವನ್ನೈದುವನು. ಭಕ್ತಿಯಿಂದ ಶಿವದೇವಾಲಯವನ್ನು ಕಟ್ಟಿಸುವವನು ಮಹಾಪಾಪಗಳ ಸಮೂಹದಿಂದಲೂ ತಪ್ಪದೆ ಬಿಡುಗಡೆ ಹೊಂದುವನು. ||೩೩೩-೩೩೪||

ಹಿಂದೆ ನಿಷಧದೇಶದಲ್ಲಿ ಒಬ್ಬ ನೀಚದ್ವಿಜನಿದ್ದನು. ಅಯ್ಯ ಬ್ರಾಹ್ಮಣೋತ್ತಮನೇ, ಅವನು ಅಪರಿಮಿತವಾದ ಪಾಪಕಾರ್ಯಗಳನ್ನು ಮಾಡಿದ್ದನು. ಆತನು ಮಾಡಿದ ಮಹಾಪಾಪಗಳಿಗೆ ಪ್ರಾಯಶ್ಚಿತ್ತಗಳೇ ಇರಲಿಲ್ಲ. ಅವನು ಬ್ರಹ್ಮಹತ್ಯೆ ಮೊದಲಾದ ಮಹಾಪಾಪಗಳನ್ನು ಕೋಟ್ಯಂತರವಾಗಿ ಮಾಡಿದ್ದನು. ||೩೩೫-೩೩೬||

ಒಂದುದಿನ ಇಂತಹ ಪಾಪಿಷ್ಠನು ರಾಜಪತ್ನಿಯನ್ನು ಸಂಭೋಗಿಸುವ ಇಷ್ಟದಿಂದ ಬಿಲ್ಲನ್ನು ಹಿಡಿದು ಅರಮನೆಗೆ ಪ್ರವೇಶಮಾಡಿದನು. ಅಲ್ಲಿ ಹೊಸ ತಾರುಣ್ಯ

ತತೋ ರಾಜಸತೀಂ ದೃಷ್ಟ್ವಾ ನವಯೌವನದರ್ಪಿತಾಂ ।
ಬಲಾದ್ಗೃಹೀತುಮುದ್ಯುಕ್ತೋ ರಾಜ್ಞಾ ದೃಷ್ಟಸ್ತತಃ ಪರಂ ॥೩೩೮॥

ತತಃ ಸ ಭೀತೋ ವೇಗೇನ ಪ್ರಪಲಾಯ್ಯ ಗತೋ ಬಹಿಃ ।
ಸ ರಾಜಾಪ್ಯತಿತೀವ್ರೇಣ ಶಸ್ತ್ರಪಾಣಿರುಪಾಗತಃ ॥೩೩೯॥

ತತಃ ಪರಂ ಧೃತೋ ವಿಪ್ರೋ ರಾಜಭೃತ್ಯೈಃ ಪ್ರಯತ್ನತಃ ।
ತತೋ ಹಂತುಂ ಸಮುದ್ಯುಕ್ತಃ ಸ ರಾಜಾ ತಂ ದ್ವಿಜಾಧಮಂ ॥೩೪೦॥

ತತಸ್ತಮಬ್ರವೀದ್ವಿಪ್ರೋ ರಾಜಾನಂ ಶಸ್ತ್ರಪಾಣಿನಂ ।
ಏಕೇನೈವ ಪ್ರಹಾರೇಣ ಹರ ಮಾಮಿತಿ ಸತ್ವರಂ ॥೩೪೧॥

ಹರ ಮಾಮಿತಿ ಯಃ ಶಬ್ದಸ್ತದುಕ್ತಸ್ತನ್ನೃಪಸ್ತದಾ ।
ಶ್ರುತ್ವಾ ಬಭೂವ ತತ್ಕಾಲೇ ರೋಮಾಂಚಾಂಚಿತವಿಗ್ರಹಃ ॥೩೪೨॥

ತತಃ ಶಸ್ತ್ರಂ ನೃಪಸ್ತ್ಯಕ್ತ್ವಾ ಸ್ವಹೃದ್ಯೇವಮಚಿಂತಯತ್ ।
ಅಯಂ ಧನ್ಯೋ ನ ಹಂತವ್ಯಃ ಸರ್ವಥಾ ಪುಣ್ಯಸಂಶ್ರಯಃ ॥೩೪೩॥

---

ದಿಂದ ಶೋಭಿಸುತ್ತಿರುವ ರಾಜಪತ್ನಿಯನ್ನು ಕಂಡು ಬಲಾತ್ಕಾರದಿಂದ ಅವಳನ್ನು ಹಿಡಿದುಕೊಳ್ಳಲು ಪ್ರಯತ್ನಿಸಿದಾಗ ರಾಜನು ಅದನ್ನು ಕಂಡನು. ॥೩೩೭-೩೩೮॥

ಆಗ ದ್ವಿಜನು ಭಯದಿಂದ ವೇಗವಾಗಿ ಓಡಿಹೋದನು. ರಾಜನೂ ಕುಪಿತನಾಗಿ ಕತ್ತಿಯನ್ನು ಹಿಡಿದು ಹಿಂಬಾಲಿಸಿದನು. ಕೊಂಚಹೊತ್ತಿನಲ್ಲಿ ಆ ವಿಪ್ರನು ಪ್ರಯಾಸದಿಂದ ರಾಜಭಟರಿಂದ ಹಿಡಿಯಲ್ಪಡಲು ಆಗ ರಾಜನು ನೀಚ ದ್ವಿಜನಾದ ಆತನನ್ನು ಕೊಲ್ಲಲುಪಕ್ರಮಿಸಿದನು. ॥೩೩೯-೩೪೦॥

ಆಗ ಆ ದ್ವಿಜನು ಕತ್ತಿಯನ್ನು ಹಿಡಿದು ತನ್ನನ್ನು ಕೊಲ್ಲಲು ಸಿದ್ಧನಾಗಿರುವ ರಾಜನನ್ನು ನೋಡಿ, ಅಯ್ಯ ರಾಜನೇ, ಒಂದೇ ಏಟಿನಿಂದ ನನ್ನನ್ನು ಜಾಗ್ರತೆಯಾಗಿ ಕೊಂದುಬಿಡೆಂದು ನುಡಿದನು. ಆ ಸಮಯದಲ್ಲಿ ಬ್ರಾಹ್ಮಣನು ಉಚ್ಚರಿಸಿದ 'ಹರ ಮಾಮ್' ಎಂಬ ಶಬ್ದವನ್ನು ಕೇಳಿ ರಾಜನು ಕೂಡಲೇ ರೋಮಾಂಚವನ್ನು ಹೊಂದಿದನು. ॥೩೪೧-೩೪೨॥

ಆಗ ರಾಜನು ಕತ್ತಿಯನ್ನು ಬಿಸುಟು ತನ್ನ ಮನಸ್ಸಿನಲ್ಲಿ ಹೀಗೆ ಯೋಚಿಸಿದನು. "ಇವನು ಧನ್ಯಾತ್ಮನು. ಖಂಡಿತವಾಗಿಯೂ ಇವನು ಪುಣ್ಯಗಳಿಗೆ ಆಶ್ರಯ

ಹರ ಮಾಮಿತಿಶಬ್ದೋಽಯಂ ನಿಃಸೃತೋಽಸ್ತಿ ಮುಖಾಚ್ಛ್ರುತಃ ।
ಸರ್ವಪಾಪಹರಃ ಪುಣ್ಯೋ ಭುಕ್ತಿಮುಕ್ತಿಫಲಪ್ರದಃ ॥೩೪೪॥

ರಾತ್ರೌ ತಾಮಸಕಾಲೇಽಸ್ಮಿನ್ ಹರಶಬ್ದೋ ಹರಾತ್ಮಕಃ ।
ಶ್ರಾವಿತೋಽಹಮನೇನಾದ್ಯ ಬಲಾದಘವಿನಾಶಕಃ ॥೩೪೫॥

ಅಯಂ ಹರಪರೋ ನೂನಂ ಜನ್ಮಜನ್ಮಾಂತರೇ ನರಃ ।
ಅನ್ಯಥಾ ಹರ ಇತ್ಯೇವ ಕಥಮುಕ್ತಮಿಹಾಧುನಾ ॥೩೪೬॥

ಹರೋ ಹರತಿ ಪಾಪಾನಿ ಸಂಸಾರಾತ್ತಾರಯೇತ್ಪರಂ ।
ಕರೋತಿ ನಿರ್ಮಲಾಕಾರಂ ಹರನಾಮಪರಂ ನರಂ ॥೩೪೭॥

ನೂನಂ ಹರಹರೇತ್ಯೇತನ್ನಾಮ ಸಾರತರಂ ವರಂ ।
ನೈತದನ್ಯತರಂ ನಾಮ ಸಂಸಾರತರುದಾರಕಂ ॥೩೪೮॥

---

ನಾಗಿರುವುದರಿಂದಲೇ ಇವನನ್ನು ಕೊಲ್ಲಬಾರದು. ಇವನ ಬಾಯಿಯಿಂದ 'ಹರ ಮಾಮ್' ಎಂಬ ಶಬ್ದವು ಉಚ್ಚಾರಮಾಡಲ್ಪಟ್ಟಿರುವುದನ್ನು ನಾನು ಕೇಳಿದೆನು. ಆ ವಾಕ್ಯದಲ್ಲಿನ ಹರಶಬ್ದವು ಸಕಲ ಪಾಪಗಳನ್ನೂ ನಾಶಗೊಳಿಸಿ, ಪುಣ್ಯಕರವಾದ ಭೋಗವನ್ನೂ, ಮೋಕ್ಷವನ್ನೂ ಒದಗಿಸಬಲ್ಲುದು. ||೩೪೩-೩೪೪||

ತಮೋಗುಣಪ್ರಚುರವಾದ ಈ ರಾತ್ರೀವೇಳೆಯಲ್ಲಿ ಶಿವಸ್ವರೂಪವೇ ಆಗಿರುವ ಅನೇಕ ಪಾಪಗಳನ್ನು ನಾಶಮಾಡುವ ಹರಶಬ್ದವು ಬಲಾತ್ಕಾರದಿಂದ ಇಂದು ನನಗೆ ಶ್ರುತವಾಯಿತು ಈ ಮನುಜನು ಹಿಂದಿನ ಯಾವುದೋ ಒಂದು ಜನ್ಮದಲ್ಲಿ ಶಿವ ಪೂಜಾಪರನೇ ಆಗಿದ್ದಿರಬೇಕು. ಇಲ್ಲದಿದ್ದಲ್ಲಿ ಈ ಹರಶಬ್ದವು ಹೇಗೆತಾನೇ ಈತನಿಂದ ಉಚ್ಚರಿಸಲ್ಪಡುತ್ತಿದ್ದಿತು? ||೩೪೫-೩೪೬||

ಪರಶಿವನು ಪಾಪಗಳನ್ನು ಹೋಗಲಾಡಿಸಿ ಈ ಸಂಸಾರದಿಂದ ಸಮಸ್ತರನ್ನೂ ಉದ್ಧಾರಮಾಡುವನು. ಆ ಹರನಾಮಜಪದಲ್ಲಿ ನಿರತನಾದ ಮಾನವನನ್ನು ಅದು ಪರಿಶುದ್ಧಸ್ವರೂಪನನ್ನಾಗಿ ಮಾಡುತ್ತದೆ. ನಿಶ್ಚಯವಾಗಿಯೂ 'ಹರ, ಹರ' ಎಂಬ ನಾಮವು ಸಾರಭೂತವಾದುದೂ ಮತ್ತು ಶ್ರೇಷ್ಠವೂ ಎನಿಸಿರುವುದು. ಇವೆರಡರಲ್ಲಿ ಒಂದೇ ಹರನಾಮವು ಈ ಸಂಸಾರವೆಂಬ ವೃಕ್ಷವನ್ನು ಒಡೆದುಹಾಕಿಬಿಡುವುದು. ||೩೪೭-೩೪೮||

ಅನೇನಾಸ್ಯಾಂ ಮಹಾರಾತ್ರ್ಯಾಮುಪಕಾರಃ ಕೃತೋ ಮಹಾನ್ ।
ಏತತ್ತುಲ್ಯೋಽಪಕಾರೋಽಸ್ಮೈ ಕಃ ಕರ್ತವ್ಯೋ ಮಯಾಧುನಾ॥೩೪೯॥

ಧರ್ಮಾರ್ಥಕಾಮಮೋಕ್ಷಾಣಾಂ ದಾನೇ ಶಕ್ತಿರ್ಭವೇದ್ಯದಿ ।
ತದಾ ಪ್ರತ್ಯುಪಕಾರೋಽಸ್ಯ ಭವಿಷ್ಯತ್ಯನ್ಯಥಾ ತು ನ ॥೩೫೦॥

॥ ಅಗಸ್ತ್ಯ ಉವಾಚ ॥

ಇತಿ ಸಂಚಿಂತ್ಯ ನೃಪತಿಸ್ತಸ್ಮೈ ನತ್ವಾ ತತಃ ಪರಂ ।
ಮಾಭೈಷೀರಿತಿ ತಂ ಪ್ರಾಹ ಗೃಹೀತ್ವಾ ಹಸ್ತಮಾದರಾತ್ ॥೩೫೧॥

ತತಸ್ತಮಬ್ರವೀದ್ರಾಜಾ ತುಭ್ಯಮಿಷ್ಟಂ ಸ್ವಶಕ್ತಿತಃ ।
ದಾಸ್ಯೇ ಮಮೈವ ನಿಕಟೇ ಸಂವಸಸ್ವೇತಿ ಸಾದರಂ ॥೩೫೨॥

ರಾಜಾ ಶಿವಕಥಾಲಾಪೈರ್ನೀತ್ವಾ ರಾತ್ರಿಂ ತತಃ ಪರಂ ।
ಧನಂ ಧಾನ್ಯಂ ಚ ರತ್ನಾನಿ ದದೌ ತಸ್ಮೈ ಯಥೇಚ್ಛಯಾ ॥೩೫೩॥

ಈತನು ಈ ಘೋರರಾತ್ರಿಯಲ್ಲಿ ದೊಡ್ಡ ಉಪಕಾರವನ್ನು ಮಾಡಿರುವನು. ಇದಕ್ಕೆ ಸಾಟಿಯಾದ ಪ್ರತ್ಯುಪಕಾರವನ್ನು ನಾನೀಗ ಏನಾದರೂ ಮಾಡಲೇಬೇಕು. ಧರ್ಮ, ಅರ್ಥ, ಕಾಮ ಮತ್ತು ಮೋಕ್ಷಗಳನ್ನು ಕೊಡುವ ಶಕ್ತಿಯಿದ್ದಿದ್ದರೆ ಆಗ ಇದಕ್ಕೆ ಬದಲಾಗಿ ನಾನು ಇವನಿಗೆ ಪ್ರತ್ಯುಪಕಾರಮಾಡಲು ಸಮರ್ಥನಾಗುತ್ತಿದ್ದೆನು. ಈಗ ಅದು ಸಾಧ್ಯವಿಲ್ಲ. ॥೩೪೯-೩೫೦॥

ರಾಜನು ಈರೀತಿ ಯೋಚನೆಮಾಡಿ ಅವನಿಗೆ ನಮಸ್ಕಾರ ಮಾಡಿ, ಅವನ ಕೈಯನ್ನು ಹಿಡಿದುಕೊಂಡು ಹೆದರಬೇಡವೆಂದು ಆದರದಿಂದ ಸಂತೈಸಿದನು. ಅನಂತರ ಅವನನ್ನು ಕುರಿತು ನಿನಗೆ ಬೇಕಾದುದನ್ನು ನಾನು ಕೊಡುತ್ತೇನೆ. ನನ್ನ ಬಳಿಯಲ್ಲಿಯೇ ವಾಸಮಾಡೆಂದು ಆದರಪೂರ್ವಕವಾಗಿ ಹೇಳಿದನು. ॥೩೫೧-೩೫೨॥

ಅನಂತರ ರಾಜನು ಆ ರಾತ್ರಿಯನ್ನೆಲ್ಲಾ ಶಿವಕಥಾ ಸಂಭಾಷಣೆಗಳಿಂದಲೇ ಕಳೆದು ಬೆಳಗಾಗುತ್ತಲೂ ಆ ವಿಪ್ರನಿಗೆ ಧನ, ಧಾನ್ಯ ಮತ್ತು ರತ್ನಗಳನ್ನು ಬೇಕಾದಷ್ಟು ಕೊಟ್ಟನು. ಆದರಿಂದ ಆ ಬ್ರಾಹ್ಮಣನು ಐಶ್ವರ್ಯವಂತನಾಗಿ ಯಾವಾಗಲೂ

ತತಃ ಸ ವಿಪ್ರೋ ಲಬ್ಧಶ್ರೀಃ ಸದಾ ರಾಜ್ಞಾ ಸಹಸ್ಥಿತಃ ।
ಶುಶ್ರಾವ ಧರ್ಮಾನಖಿಲಾನ್ಸ ರಾಜ್ಞಾ ಸಹ ಸಂತತಂ ॥೩೫೪॥

ಶ್ರುತ್ವಾ ಧರ್ಮಾನಶೇಷೇಣ ಸ ವಿಪ್ರೋ ಧರ್ಮತತ್ಪರಃ ।
ತತಃ ಸರ್ವಂ ಪರಿತ್ಯಜ್ಯ ಶಿವಪೂಜಾಪರೋಽಭವತ್ ॥೩೫೫॥

ಭೂಪಾಲಸ್ತಂ ದ್ವಿಜಂ ದೃಷ್ಟ್ವಾ ಶಿವಪೂಜಾಪರಾಯಣಂ ।
ಸಂತೋಷಂ ಪರಮಂ ಪ್ರಾಪ ವಿಸ್ಮಿತಶ್ಚ ದ್ವಿಜೋತ್ತಮಃ

ಕಾರಯಾಮಾಸ ನೃಪತಿಃ ಸ ಶಿವಾಲಯಮುತ್ತಮಂ ।
ಕಾರಯಾಮಾಸ ನೃಪತಿರ್ಮುಕ್ತಾಪ್ರಾಸಾದಮುತ್ತಮಂ ॥೩೫೭॥

ತತಃ ಸ ಕಾರಯಾಮಾಸ ಹೇಮಪ್ರಾಸಾದಮುತ್ತಮಂ ।
ತತಃ ಸಂಸ್ಥಾಪಯಾಮಾಸ ತತ್ರಲಿಂಗಂ ಶಿವಾತ್ಮಕಂ ॥೩೫೮॥

ಕೋಟಿಶೋ ದೀಪದಾನಾನಿ ಸ ಚಕಾರ ಶಿವಾಲಯೇ ।
ರತ್ನನಿರ್ಮಿತಪಾತ್ರೇಷು ಗೋಘೃತೇನೈವ ಸಾದರಂ ॥೩೫೯॥

ರಾಜನ ಜೊತೆಯಲ್ಲಿಯೇ ಇರುತ್ತಾ ಆ ರಾಜನಿಂದ ಸಕಲ ಧರ್ಮಗಳನ್ನೂ ಕೇಳಿ ತಿಳಿದುಕೊಂಡನು. ||೩೫೩-೩೫೪||

ಧರ್ಮತತ್ಪರನಾದ ಆ ವಿಪ್ರನು ಸಕಲ ಶಿವಧರ್ಮಗಳನ್ನೂ ಸಂಪೂರ್ಣವಾಗಿ ಕೇಳಿ, ಅನಂತರ ಇತರ ಹವ್ಯಾಸಗಳನ್ನೆಲ್ಲಾ ಬಿಟ್ಟು ಶಿವಪೂಜಾನಿರತನಾದನು. ಆಗ ರಾಜನು ಶಿವಪೂಜಾನಿರತನಾದ ಆ ಬ್ರಾಹ್ಮಣನನ್ನು ನೋಡಿ ಸಂತೋಷಭರಿತನಾದನು. ಆ ಬ್ರಾಹ್ಮಣೋತ್ತಮನೂ ಇದರಿಂದ ಧನ್ಯನೆನಿಸಿದನು. ||೩೫೫-೩೫೬||

ಆ ರಾಜನು ಉತ್ತಮವಾದ ಶಿವ ದೇವಾಲಯವನ್ನು ಕಟ್ಟಿಸಿ, ಅದರ ಗರ್ಭಾಂಕಣಕ್ಕೆ ಮುತ್ತಿನ ಪ್ರಾಸಾದವನ್ನು ಮಾಡಿಸಿದನು. ಪೂರ್ಣ ದೇವಾಲಯಕ್ಕೆ ಉತ್ಕೃಷ್ಟವಾದ ಚಿನ್ನದ ಪ್ರಾಸಾದವನ್ನೂ ಮಾಡಿಸಿ, ಆಮೇಲೆ ಅಲ್ಲಿ ಶಿವಸ್ವರೂಪವಾದ ಶಿವಲಿಂಗವನ್ನು ಪ್ರತಿಷ್ಠೆಮಾಡಿಸಿದನು. ||೩೫೭-೩೫೮||

ಆ ಶಿವದೇವಾಲಯದಲ್ಲಿ ರತ್ನನಿರ್ಮಿತವಾದ ಪಾತ್ರೆಗಳಲ್ಲಿ ಹಸುವಿನ ತುಪ್ಪವನ್ನು ಹಾಕಿ ಕೋಟ್ಯಂತರ ದೀಪಗಳನ್ನು ಹೊತ್ತಿಸಿದನು. ಚಿನ್ನದಿಂದ ದೀಪದ

ದೀಪಸ್ತಂಭಾಂತ್ಸುವರ್ಣೇನ ಕಾರಯಾಮಾಸ ಕೋಟಿಶಃ ।
ತೇಷು ಸಂಸ್ಥಾಪಯಾಮಾಸ ದೀಪಪಾತ್ರಾಣಿ ಕೋಟಿಶಃ ॥೩೬೦॥

ಕಾರಯಾಮಾಸ ನೃಪತಿರ್ನಾನಾಪುಷ್ಪವನಂ ಮುದಾ ।
ಕಾರಯಾಮಾಸ ಯತ್ನೇನ ನೃಪೋ ಬಿಲ್ವವನಾನ್ಯಪಿ ॥೩೬೧॥

ಏತಾದೃಶಂ ನೃಪಂ ದೃಷ್ಟ್ವಾ ಸ ವಿಪ್ರೋಽಪಿ ಪ್ರಯತ್ನತಃ ।
ಶಿವಾಲಯಂ ಸುವರ್ಣೇನ ಕಾರಯಾಮಾಸ ಸಾದರಂ ॥೩೬೨॥

ತತ್ರ ಲಿಂಗಪ್ರತಿಷ್ಠಾಂ ಚ ಚಕಾರ ವಿಧಿಪೂರ್ವಕಂ ।
ತತಃ ಪರಂ ಮೃತೋ ವಿಪ್ರಃ ಶಿವರೂಪಮವಾಪ ಸಃ ॥೩೬೩॥

ಸ ರಾಜಾ ದೇವದೇವೇಶಂ ಪೂರ್ವಜನ್ಮನಿ ಶಂಕರಂ ।
ಪೂಜಯಾಮಾಸ ಯತ್ನೇನ ತೇನೈಶ್ವರ್ಯಮವಾಪ ಸಃ ॥೩೬೪॥

ಭಕ್ತಿಂ ಚ ಪರಮಾಂ ಪ್ರಾಪ ತಯೈವ ಶಿವಪೂಜಯಾ ।
ತಯೈವ ಭಕ್ತ್ಯಾ ಸತತಂ ಶಿವಪೂಜಾಪರಾಯಣಃ ॥೩೬೫॥

ಕಂಬಗಳನ್ನು ಕೋಟ್ಯಂತರ ಸಂಖ್ಯೆಯಲ್ಲಿ ಮಾಡಿಸಿ, ಅವುಗಳಲ್ಲಿ ಅನೇಕದೀಪಪಾತ್ರೆಗಳನ್ನು ಇಡಿಸಿದನು. ॥೩೫೯-೩೬೦॥

ಆ ರಾಜನು ಅನೇಕ ಹೂಗಳ ವನವನ್ನೂ ಮತ್ತು ಬಿಲ್ವವನಗಳನ್ನೂ ನಿಯಮಬದ್ಧನಾಗಿ ಸಂತೋಷದಿಂದ ಮಾಡಿಸಿದನು. ಇಂತಹ ರಾಜನನ್ನು ನೋಡಿ ಆ ಬ್ರಾಹ್ಮಣನೂ ಸಹ ನಿಯಮದಿಂದ ಚಿನ್ನದಿಂದ ಶಿವದೇವಾಲಯವನ್ನು ಆದರಪೂರ್ವಕವಾಗಿ ಮಾಡಿಸಿದನು. ॥೩೬೧-೩೬೨॥

ಆ ದೇವಾಲಯದಲ್ಲಿಯೇ ವಿಧಿಪೂರ್ವಕವಾಗಿ ಶಿವಲಿಂಗಪ್ರತಿಷ್ಠೆಮಾಡಿದ ಮೇಲೆ ಬ್ರಾಹ್ಮಣನು ಮೃತನಾಗಿ ಶಿವನ ಸ್ವರೂಪವನ್ನೇ ಪಡೆದನು. ಆ ರಾಜನಾದರೋ ಹಿಂದಿನ ಜನ್ಮದಲ್ಲಿ ದೇವತಾಸಾರ್ವಭೌಮನಾದ ಶಂಕರನನ್ನು ನಿಯಮದಿಂದ ಪೂಜೆಮಾಡಿ ಅದರಿಂದ ಈ ಜನ್ಮದಲ್ಲಿ ಐಶ್ವರ್ಯವನ್ನು ಹೊಂದಿದ್ದನು. ॥೩೬೩-೩೬೪॥

ಹಿಂದಿನ ಜನ್ಮದ ಶಿವಪೂಜಾ ಪ್ರಭಾವದಿಂದಲೇ ಆತನಿಗೆ ಉತ್ತಮವಾದ ಶಿವಭಕ್ತಿ ದೊರೆತಿದ್ದಿತು. ಆ ಭಕ್ತಿಯಿಂದ ಅನವರತವೂ ಅವನು ಶಿವಪೂಜಾನಿರತ

ಚಕಾರ ಪರಯಾ ಭಕ್ತ್ಯಾ ಸರ್ವಾನ್ ಶಿವರತಾನ್ದ್ವಿಜಾನ್ ।
ಶಿವಲಿಂಗೈಕನಿರತಾ ನನನ್ಯಶರಣಾನಪಿ ॥೩೬೬॥

ತದ್ರಾಜವಶಗೋ ದೇಶೋ ಯಾವಾನಾಸೀದ್ದ್ವಿಜೋತ್ತಮ ।
ಸ ತತ್ರ ಕಾರಯಾಮಾಸ ಪ್ರತಿಗ್ರಾಮೇ ಶಿವಾಲಯಂ ॥೩೬೭॥

ಶಿವಸ್ಥಾನವಿಹೀನೇಭ್ಯೋ ದೇಶೇಭ್ಯಃ ಕರಮಾಗತಂ ।
ಸ ನ ಜಗ್ರಾಹ ಭೂಪಾಲಃ ಶತ್ರುವೃಂದನಿಬರ್ಹಣಃ ॥೩೬೮॥

ಗೃಹೀತ್ವಾ ಪರರಾಷ್ಟ್ರಂ ಚ ಹತ್ವಾ ಶತ್ರೂನ್ನೃಪೋ ಬಲೀ ।
ತದ್ರಾಷ್ಟ್ರೇ ಕಾರಯಾಮಾಸ ಶಿವಸ್ಥಾನಾನಿ ಕೋಟಿಶಃ ॥೩೬೯॥

ಏವಂ ಧರ್ಮರತೋ ರಾಜಾ ಶಿವಪೂಜನಪೂರ್ವಕಂ ।
ಕರೋತಿ ಸತತಂ ವಿಪ್ರ ರಾಷ್ಟ್ರಸ್ಯ ಪರಿಪಾಲನಂ ॥೩೭೦॥

ತಸ್ಯ ಭೂಪಸ್ಯ ಪುತ್ರಾಸ್ತು ಜಾತಾಃ ಪಂಚಶತಂ ದ್ವಿಜ ।
ತೇಽಪಿ ಶೂರಾಃ ಸುವಿದ್ಯಾಶ್ಚ ಶಿವಪೂಜಾಪರಾಯಣಾಃ ॥೩೭೧॥

ನಾಗಿದ್ದನು. ಆ ರಾಜನು ಬ್ರಾಹ್ಮಣರನ್ನೆಲ್ಲಾ ಶಿವಪೂಜಾ ಧ್ಯಾನಾದಿಗಳಲ್ಲಿ ನಿರತರನ್ನಾಗಿಯೂ, ಶಿವಲಿಂಗಪೂಜೆಯಲ್ಲಿಯೇ ಆಸಕ್ತರನ್ನಾಗಿಯೂ ಮತ್ತಾವ ದೈವವನ್ನೂ ಆಶ್ರಯಿಸದವರನ್ನಾಗಿಯೂ ಮಾಡಿದನು. ॥೩೬೫-೩೬೬॥

ಬ್ರಾಹ್ಮಣೋತ್ತಮನೇ, ಆ ರಾಜನ ಅಧೀನದಲ್ಲಿದ್ದ ದೇಶದ ಪ್ರತಿಗ್ರಾಮಗಳಲ್ಲಿಯೂ ಶಿವದೇವಾಲಯಗಳನ್ನು ಕಟ್ಟಿಸಿದನು. ಶಿವದೇವಾಲಯಗಳಿಲ್ಲದ ದೇಶಗಳಿಂದ ಬಂದ ಕಪ್ಪವನ್ನು ಶತ್ರುಭಯಂಕರನಾದ ಆ ರಾಜನು ಎಂದೂ ಸ್ವೀಕರಿಸುತ್ತಲೇ ಇರಲಿಲ್ಲ. ॥೩೬೭-೩೬೮॥

ಶತ್ರುರಾಜ್ಯವನ್ನು ಹಿಡಿದುಕೊಂಡು ಬಲಶಾಲಿಯಾದ ಆ ರಾಜನು ಶತ್ರುಗಳನ್ನೆಲ್ಲಾ ಕೊಂದು ಅಲ್ಲಿ ಕೋಟ್ಯಂತರ ಶಿವದೇವಾಲಯಗಳನ್ನೇರ್ಪಡಿಸಿದನು. ಹೀಗೆ ಧರ್ಮನಿರತನಾದ ರಾಜನು ಶಿವಪೂಜಾಪೂರ್ವಕವಾಗಿ ಯಾವಾಗಲೂ ರಾಜ್ಯವನ್ನು ಪರಿಪಾಲನೆಮಾಡುತ್ತಿದ್ದನು. ॥೩೬೯-೩೭೦॥

ಆ ರಾಜನಿಗೆ ಐನೂರುಮಂದಿ ಮಕ್ಕಳಾದರು. ಅಯ್ಯ ವಿಪ್ರನೇ, ಅವರೆಲ್ಲರೂ ಶೂರರೂ, ಒಳ್ಳೆಯ ವಿದ್ಯಾವಂತರೂ, ಶಿವಪೂಜಾನಿರತರೂ ಆಗಿದ್ದರು. ರಾಜನು

ತೇಷು ಪುತ್ರೇಷು ಭೂಪಾಲೋ ರಾಷ್ಟ್ರಂ ವಿನ್ಯಸ್ಯ ಸಾದರಂ ।
ಸ್ವಯಂ ಶಿವಮವಾಪಾಂತೇ ಶಿವಪೂಜಾಪುರಃಸರಂ ॥೩೭೨॥

ಅತಃ ಶಿವಪರಾ ಧನ್ಯಾಃ ಪುಣ್ಯಾಃ ಪೂಜ್ಯಾಶ್ಚ ಸಾದರಂ ।
ನಿರ್ಜಿತಾಘಾ ನಿರಾತಂಕಾ ನಿಃಶಂಕಾಃ ಶಮನಾದಪಿ ॥೩೭೩॥

ಕಶ್ಚಿದ್ಭಿಲ್ಲಾಧಮಃ ಪೂರ್ವಮರಣ್ಯೇ ಸಂಸ್ಥಿತಃ ಸದಾ ।
ತೇನಾರಣ್ಯೇ ಸ್ವವಾಸಾರ್ಥಂ ಏಕಾ ಪರ್ಣಕುಟೀ ಕೃತಾ ॥೩೭೪॥

ತತ್ಪರ್ಣಶಾಲಾ ನಿಕಟೇ ನಾರ್ಮದಂ ಲಿಂಗಮುತ್ತಮಂ ।
ಸ್ಥಿತಮುಷ್ಣೇನ ಸಂತಪ್ತಂ ಪಕ್ವಜಂಬೂಫಲೋಪಮಂ ॥೩೭೫॥

ಕದಾಚಿತ್ತೇನ ತದ್ದೃಷ್ಟಂ ಶಿವಲಿಂಗಂ ಶಿವಾತ್ಮಕಂ ।
ದೃಷ್ಟ್ವಾ ಪರ್ಣಕುಟೀಮಧ್ಯೇ ಸ್ಥಾಪಿತಂ ತೇನ ತತ್ತತಃ ॥೩೭೬॥

ಸಂಸ್ಥಾಪ್ಯ ತನ್ಮಹಾಲಿಂಗಂ ಹನ್ಮನೇನ ನರಾನಿತಿ ।
ಸಂತೋಷಂ ಪರಮಂ ಪ್ರಾಪ ಭಿಲ್ಲಃ ಪಥಿಕಘಾತುಕಃ ॥೩೭೭॥

ಪ್ರವೃದ್ಧರಾದ ತನ್ನ ಮಕ್ಕಳಲ್ಲಿ ರಾಜ್ಯವನ್ನಿಟ್ಟು ತಾನು ಶಿವಪೂಜಾಪೂರ್ವಕವಾಗಿ ಕೊನೆಗೆ ಶಿವಸಾರೂಪ್ಯವನ್ನೈದಿದನು. ॥೩೭೧-೩೭೨॥

ಆದ್ದರಿಂದ ಶಿವಪೂಜಾಧ್ಯಾನಾದಿಗಳಲ್ಲಿ ನಿರತರಾದವರೇ ಧನ್ಯರೂ ಪುಣ್ಯಶಾಲಿಗಳೂ ಮತ್ತು ಆದರದಿಂದ ಪೂಜಾರ್ಹರೂ ಎನಿಸುವರು. ಪಾಪರಹಿತರೂ, ಆತಂಕವಿಲ್ಲದವರೂ ಆದ ಅವರು ಯಮನವಿಷಯದಲ್ಲಿ ಕೊಂಚವೂ ಭಯವನ್ನೇ ಹೊಂದುವುದಿಲ್ಲ. ಹಿಂದೆ ನೀಚನಾದ ಬೇಡನೊಬ್ಬನು ಕಾಡಿನಲ್ಲಿ ವಾಸಮಾಡುತ್ತಿದ್ದನು. ಅವನು ಅಲ್ಲಿ ತನ್ನ ವಾಸಕ್ಕೋಸ್ಕರ ಒಂದು ಪರ್ಣಶಾಲೆಯನ್ನು (ಎಲೆಯ ಮನೆಯನ್ನು) ಕಟ್ಟಿಕೊಂಡಿದ್ದನು. ॥೩೭೩-೩೭೪॥

ಆ ಪರ್ಣಶಾಲೆಯ ಹತ್ತಿರ ಉತ್ತಮವಾದ ಒಂದು ನರ್ಮದಾನದಿಯ ಲಿಂಗವು ಬಿಸಿಲಿನಿಂದ ಕಾದು ಪಕ್ವವಾದ ನೇರಳೇಹಣ್ಣಿನಂತಿದ್ದಿತು. ಒಂದುದಿವಸ ಆ ಶಿವಲಿಂಗವನ್ನು ಅವನು ನೋಡಿ, ಶಿವಾತ್ಮಕವಾದ ಆ ಶಿವಲಿಂಗವನ್ನು ಆಸೆಯಿಂದ ತಂದು ತನ್ನ ಪರ್ಣಶಾಲಾಮಧ್ಯದಲ್ಲಿಟ್ಟುಕೊಂಡನು. ॥೩೭೫-೩೭೬॥

ದರೋಡೆಕಾರನಾದ ಆ ಭಿಲ್ಲನು ಕಾಲಕ್ರಮದಲ್ಲಿ ಆ ಶಿವಲಿಂಗವನ್ನು

ಸ ಪಾತಯಿತ್ವಾ ಪಥಿಕಾಂಸ್ತು ಪರ್ಣಗೃಹಸಂನಿಧೌ ।
ತೇಷಾಂ ಶಿರಾಂಸಿ ಲಿಂಗೇನ ಚೂರ್ಣಯಾಮಾಸ ತೇನ ವೈ ॥೩೭೮॥

ತೇನ ಲಿಂಗೇನ ನಿಹತಾ ಯಾವಂತೋ ನಿರ್ಗತಾಸವಃ ।
ತಾವಂತೋಽಪಿ ಶಿವಂ ಪ್ರಾಪುರ್ಲಿಂಗಸ್ಪರ್ಶಗತೈನಸಃ ॥೩೭೯॥

ತತಃ ಸ ನಾರ್ಮದಂ ಲಿಂಗಂ ನರರಕ್ತಸಮಾವೃತಂ ।
ಪ್ರಕ್ಷಾಳ್ಯ ಪರ್ಣಸದನೇ ಸ್ಥಾಪಯಿತ್ವಾ ಸ್ಥಿತಃ ಸದಾ ॥೩೮೦॥

ತೇನೈಕವಾರಂ ನಿಹತೋ ನ ಜೀವತಿ ಪುನರ್ನರಃ ।
ತಾದೃಶಂ ತನ್ಮಹಾಲಿಂಗಂ ತೇನ ಸಂರಕ್ಷಿತಂ ಸದಾ ॥೩೮೧॥

ತಲ್ಲಿಂಗಂ ಕಶ್ಚಿದಾಗತ್ಯ ನೇಷ್ಯತೀತಿ ಭಿಯಾ ಸದಾ ।
ಸ ಪತ್ರಬಿಲ್ವಶಾಖಾಭಿಃ ಸ ಸಮಾಚ್ಛಾದ್ಯ ಸಂಸ್ಥಿತಃ ॥೩೮೨॥

ತೇನ ಕೃತ್ವಾ ಸ್ಥಿತಂ ತತ್ರ ನಿತ್ಯಮೇವಂ ದ್ವಿಜೋತ್ತಮ ।
ತೇನ ಲಿಂಗೇನ ಬಹವೋ ವಿಪ್ರಾಸ್ತೇನ ಹತಾಃ ಪುರಾ ॥೩೮೩॥

ಮನುಷ್ಯರನ್ನು ಕೊಲ್ಲುವ ಸಾಧನವನ್ನಾಗಿ ಮಾಡಿಕೊಂಡನು. ಅಂತಹ ಸಾಧನವು ತನಗೆ ದೊರೆತುದಕ್ಕೆ ತಾನು ಹರ್ಷಿಸಿದನು. ಅನಂತರ ಹಾಗೆಯೇ ಅವನು ತನ್ನ ಪರ್ಣಕುಟೀರದ ಹತ್ತಿರ ಬಂದ ಪಥಿಕರನ್ನು ಬೀಳಿಸಿ, ಅವರ ತಲೆಗಳನ್ನು ಆ ಶಿವ ಲಿಂಗದಿಂದ ಒಡೆದು ಚೂರುಚೂರು ಮಾಡುತ್ತಿದ್ದನು. ॥೩೭೭-೩೭೮॥

ಆ ಲಿಂಗದಿಂದ ಹೊಡೆಯಲ್ಪಟ್ಟು ಮೃತರಾದವರೆಲ್ಲರೂ ಶಿವಲಿಂಗಸ್ಪರ್ಶದಿಂದ ಪಾಪರಹಿತರಾಗಿ ಶಿವನ ಸಾರೂಪ್ಯವನ್ನೇ ಹೊಂದಿದರು. ಪಥಿಕರಾದ ಮನುಷ್ಯರ ರಕ್ತದಿಂದ ತೊಯ್ದ ನಾರ್ಮದಲಿಂಗವನ್ನು ಆ ಭಿಲ್ಲನು ಚೆನ್ನಾಗಿ ತೊಳೆದು, ತನ್ನ ಪರ್ಣಶಾಲೆಯಲ್ಲಿ ಇರಿಸುತ್ತಿದ್ದನು ಒಂದುಬಾರಿ ಆ ಲಿಂಗದಿಂದ ಹೊಡೆಯಲ್ಪಟ್ಟ ಮಾನವನು ಪುನಃ ಬದುಕುತ್ತಲೇ ಇರಲಿಲ್ಲ. ಅಂತಹ ದೊಡ್ಡ ಲಿಂಗವನ್ನು ಅವನು ಯಾವಾಗಲೂ ಪ್ರೀತಿಯಿಂದ ಕಾಪಾಡುತ್ತಿದ್ದನು. ॥೩೭೯-೩೮೦-೩೮೧॥

ಆ ಲಿಂಗವನ್ನು ಮತ್ತಾರಾದರೂ ಬಂದು ತೆಗೆದುಕೊಂಡು ಹೋದಾರೆಂಬ ಭಯದಿಂದ ಭಿಲ್ಲನು ಬಿಲ್ವಪತ್ರೆಯ ಮರದ ಕೊಂಬೆಗಳಿಂದ ಅದನ್ನು ಯಾವಾಗಲೂ

ಕದಾಚಿದಾಗತೋ ವಿಪ್ರೋ ಮಹಾಪಾತಕಸಂಶ್ರಯಃ ।
ಸೋಽಪಿ ತೇನೈವ ಲಿಂಗೇನ ನಿಹತಃ ಸ್ವತನುಂ ಜಹೌ ।೩೮೪॥

ತತೋ ನೀತಃ ಸ ಪಾಪಿಷ್ಠೋ ಯಮದೂತೈರ್ಭಯಾನಕೈಃ ।
ತಮಾನೀತಂ ದ್ವಿಜಂ ದೃಷ್ಟ್ವಾ ಚಿತ್ರಗುಪ್ತಂ ಯಮೋಽಬ್ರವೀತ್ ॥೩೮೫॥

॥ ಯಮ ಉವಾಚ ॥

ಕಿಮನೇನ ಕೃತಂ ಪಾಪಂ ಪುಣ್ಯಂ ವಾ ಕೋಽಯಮೀದೃಶಃ ।
ಸುಕೃತೀ ಪಾತಕೀ ವೇತಿ ವದ ಸತ್ವರಮಾದರಾತ್ ॥೫೮೬॥

ಚಿತ್ರಗುಪ್ತ ಉವಾಚ ॥

ಏತತ್ಕೃತಾನಿ ಪಾಪಾನಿ ಸಂಖ್ಯೇಯಾನಿ ನ ಸರ್ವಥಾ ।
ಪಾಪೈರೇವ ದಿನಾನ್ಯಸ್ಯ ಗತಾನಿ ಬಹುಧಾ ಯಮ ॥೩೮೭॥

ಬ್ರಹ್ಮಹತ್ಯಾದಿಕಂ ಕೃತ್ವಾ ಪ್ರತ್ಯಹಂ ಪ್ರೀತಿಪೂರ್ವಕಂ ।
ತತೋಽಯಮನ್ನಮಶ್ನಾತಿ ಪಾಪಿಷ್ಠಾಗ್ರೇಸರಾವೃತಃ ॥೩೮೮॥

---

ಮುಚ್ಚಿರುತ್ತಿದ್ದನು. ಅಯ್ಯ ಬ್ರಾಹ್ಮಣೋತ್ತಮನೇ, ಅವನು ನಿತ್ಯವೂ ಹೀಗೆಯೇ ಮಾಡುತ್ತಾ ಆ ಶಿವಲಿಂಗದ ಸಹಾಯದಿಂದ ಹಿಂದೆ ಅವನು ಅನೇಕಮಂದಿ ಬ್ರಾಹ್ಮಣರನ್ನು ಕೊಂದುಹಾಕಿದನು. ॥೩೮೨-೩೮೩॥

ಒಂದುಸಲ ಅನೇಕ ಮಹಾಪಾಪಗಳನ್ನು ಮಾಡಿದ್ದ ಬ್ರಾಹ್ಮಣನೊಬ್ಬನು ಅಲ್ಲಿಗೆ ಬಂದನು. ಅವನನ್ನೂ ಆ ಭಿಲ್ಲನು ಈ ಲಿಂಗದಿಂದಲೇ ಹೊಡೆಯಲು ಅವನು ಮೃತನಾದನು. ಆ ಪಾಪಿಷ್ಠನನ್ನು ಭಯಂಕರರಾದ ಯಮದೂತರು ಯಮನ ಸಮೀಪಕ್ಕೆ ಕರೆದೊಯ್ದರು. ಹೀಗೆ ಕರೆತಂದಿರುವ ಆ ಬ್ರಾಹ್ಮಣನನ್ನು ನೋಡಿ ಯಮನು ಚಿತ್ರಗುಪ್ತನೊಡನೆ ಇಂತೆಂದನು. ॥೩೮೪-೩೮೫॥

ಚಿತ್ರಗುಪ್ತನೇ, ಇವನು ಮಾಡಿರುವ ಪಾಪಪುಣ್ಯಗಳಾವುವು? ಇವನು ಸುಕೃತಿಯೇ ಅಥವಾ ಪಾಪಿಯೇ ಎಂಬುದನ್ನು ಜಾಗ್ರತೆಯಾಗಿ ತಿಳಿಸೆಂದು ಯಮನು ಚಿತ್ರಗುಪ್ತನಿಗೆ ಹೇಳಿದನು. ಆಗ ಚಿತ್ರಗುಪ್ತನು ಹೀಗೆಂದನು. ॥೩೮೬॥

"ಯಮಧರ್ಮರಾಜನೇ, ಇವನು ಮಾಡಿರುವ ಪಾಪಗಳು ಅಸಂಖ್ಯಾತವಾಗಿರುವುವು. ಕೇವಲ ಪಾಪಕಾರ್ಯಗಳನ್ನು ಮಾಡುವುದರಲ್ಲಿಯೇ ಇವನ ದಿನಗಳೆಲ್ಲಾ

ಯಮಾಸ್ಯೈತಾದೃಶಸ್ಯಾಪಿ ನರ್ಮದಾಲಿಂಗಸಂನಿಧೌ ।
ವನೇ ಬಭೂವ ಮರಣಂ ತಲ್ಲಿಂಗಸ್ಪರ್ಶಪೂರ್ವಕಂ ॥೩೮೯॥

ತಲ್ಲಿಂಗಸ್ಪರ್ಶಮಾತ್ರೇಣ ದಗ್ಧಪಾಪಾ ಭವಂತ್ಯತಃ ।
ಅಯಂ ನಿಷ್ಪಾಪ ಏವಾಸೀನ್ನಾಸ್ಯ ಯಾಮೀಯಯಾತನಾ ॥೩೯೦॥

ಯೇ ತ್ಯಜಂತಿ ತನುಂ ಧೀರಾ ನರ್ಮದಾಲಿಂಗಸಂನಿಧೌ ।
ತೇ ಸರ್ವೇಽಪಿ ಭವಂತ್ಯೇವ ಮುಕ್ತಾ ನಾಸ್ತ್ಯತ್ರ ಸಂಶಯಃ ॥೩೯೧॥

ಯಸ್ಯ ಕಸ್ಯಾಪಿ ವಾ ಕಾಲ ಶಿವಲಿಂಗಸ್ಯ ಸಂನಿಧೌ ।
ತ್ಯಕ್ತದೇಹಃ ಶಿವಂ ಯಾತಿ ಸತ್ಯಂ ಸತ್ಯಂ ನ ಸಂಶಯಃ ॥೩೯೨॥

ಲಿಂಗಸ್ಯ ಸಂನಿಧೌ ಯೇನ ಲಿಂಗಸ್ಪರ್ಶಪುರಸ್ಸರಂ ।
ತ್ಯಕ್ತಂ ಶರೀರಂ ತೇನಾಶು ಶಿವಃ ಸಂಪ್ರಾಪ್ಯತೇ ಧ್ರುವಂ ॥೩೯೩॥

ಬಹಳವಾಗಿ ಕಳೆದುಹೋಗಿರುವುವು. ಪ್ರತಿದಿನವೂ ಇವನು ಬ್ರಹ್ಮಹತ್ಯೆ ಮೊದಲಾದ ಪಾಪಗಳನ್ನು ಪ್ರೀತಿಯಿಂದ ಮಾಡಿ ಪಾಪಿಷ್ಠರಲ್ಲಿ ಅಗ್ರೇಸರನೆನಿಸಿಕೊಂಡು ಅನಂತರ ಇವನು ಅನ್ನವನ್ನು ತಿನ್ನುತ್ತಿದ್ದನು. ॥೩೮೭-೩೮೮॥

ಸ್ವಾಮಿ ಯಮನೇ, ಇಂತಹ ಪಾಪಿಷ್ಠನೆನಿಸಿದ ಇವನಿಗೆ ನರ್ಮದಾನದಿಯ ಲಿಂಗದ ಸಂನಿಧಾನದಲ್ಲಿ ಶಿವಲಿಂಗಸ್ಪರ್ಶಪೂರ್ವಕವಾಗಿ ಕಾಡಿನಲ್ಲಿ ಸಾವುಂಟಾಯಿತು. ಆ ನಾರ್ಮದಲಿಂಗಗಳ ಸ್ಪರ್ಶಮಾತ್ರದಿಂದಲೇ ಮಾನವರ ಪಾಪಗಳೆಲ್ಲವೂ ಧ್ವಂಸವಾಗುವುದರಿಂದ ಇವನು ಪಾಪರಹಿತನೇ ಆದನು. ಆದ್ದರಿಂದ ಇವನಿಗೆ ಯಮಲೋಕದ ಯಾತನೆಗಳಿರಲಾರದು. ।೩೮೯-೩೯೦॥

ನರ್ಮದಾನದಿಯ ಸಂಬಂಧವಾದ ಶಿವಲಿಂಗದ ಸಂನಿಧಿಯಲ್ಲಿ ಶರೀರವನ್ನು ಬಿಡುವವರೆಲ್ಲರೂ ಸಂಶಯವೇ ಇಲ್ಲದೇ ಮುಕ್ತಿಯನ್ನು ಪಡೆಯುವರು. ಯಮಧರ್ಮನೇ, ಯಾರಾದರೂ ಸರಿಯೇ, ಶಿವಲಿಂಗದ ಸಮೀಪದಲ್ಲಿ ದೇಹತ್ಯಾಗಮಾಡಿದವರು ಸತ್ಯವಾಗಿಯೂ ಶಿವನನ್ನೇ ಹೊಂದುವರು ಇದರಲ್ಲಿ ಸಂಶಯ ಬೇಡ. ॥೩೯೧-೩೯೨॥

ಶಿವಲಿಂಗದ ಸಂನಿಧಿಯಲ್ಲಿ ಲಿಂಗಸ್ಪರ್ಶಪೂರ್ವಕವಾಗಿ ಶರೀರತ್ಯಾಗ ಮಾಡುವವನು ಕೂಡಲೇ ಶಿವಸಾರೂಪ್ಯವನ್ನು ಖಂಡಿತವಾಗಿಯೂ ಪಡೆಯುತ್ತಾನೆ.

ನರ್ಮದಾಲಿಂಗನಿಕಟೇ ಹತಾ ಯೇ ತರವೋಽಪಿ ತೇ ।
ಪ್ರಯಾಂತಿ ಶಿವಸಾಯುಜ್ಯಂ ಕಿಮನ್ಯೈರ್ಮನುಜಾದಯಃ ॥೩೯೪॥

ಕೀಟಾದಯಸ್ತನುಂ ತ್ಯಕ್ತ್ವಾ ನರ್ಮದಾಲಿಂಗಸಂನಿಧೌ ।
ಬಹವೋ ಮೋಕ್ಷಮಾಪನ್ನಾಸ್ತೇಷಾಂ ಸಂಖ್ಯಾ ನ ವಿದ್ಯತೇ ॥೩೯೫॥

ಯೇನಾರ್ಚಿತಂ ಬಿಲ್ವಪತ್ರೈರ್ನರ್ಮದಾಲಿಂಗಮುತ್ತಮಂ ।
ತೇನಾರ್ಚಿತಾನಿ ಲಿಂಗಾನಿ ಸಾರ್ಧಕೋಟಿಶತತ್ರಯಂ ॥೩೯೬॥

ಯೇನ ಸಂಪೂಜ್ಯತೇ ನಿತ್ಯಂ ನರ್ಮದಾಲಿಂಗಮುತ್ತಮಂ ।
ನ ತತ್ಕುಲಪ್ರಸೂತಾನಾಂ ವಸತಿರ್ನರಕಾಲಯೇ ॥೩೯೭॥

ಸದ್ಯೋ ನಶ್ಯಂತಿ ಪಾಪಾನಿ ನರ್ಮದಾಲಿಂಗದರ್ಶನಾತ್ ।
ಸ್ಪರ್ಶನಾದರ್ಚನಾದ್ಯೈಸ್ತು ಮೋಕ್ಷ ಏವ ಹಿ ಲಭ್ಯತೇ ॥೩೯೮॥

ನರ್ಮದಾಲಿಂಗದ ಸಮೀಪದಲ್ಲಿ ನಷ್ಟವಾದ ಮರಗಳೂ ಸಹ ಶಿವನ ಸಾಯುಜ್ಯವನ್ನು ಹೊಂದುವುವೆಂದಮೇಲೆ ಉಳಿದ ಮಾನವರ ವಿಷಯದಲ್ಲಿ ಹೇಳತಕ್ಕದ್ದೇನು. ||೩೯೩-೩೯೪||

ಕ್ರಿಮಿಕೀಟವೇ ಮುಂತಾದವುಗಳೂ ನರ್ಮದಾಲಿಂಗದ ಸಂನಿಧಿಯಲ್ಲಿ ಪ್ರಾಣತ್ಯಾಗಮಾಡಿ ಮೋಕ್ಷವನ್ನೈದಿರುವುವು. ಅವುಗಳ ಸಂಖ್ಯೆಯನ್ನು ಎಣಿಸುವುದಕ್ಕೂ ಅಸಾಧ್ಯವಾಗಿರುವುದು. ಬಿಲ್ವದಳಗಳಿಂದ ಉತ್ತಮವಾದ ನರ್ಮದಾಲಿಂಗವನ್ನು ಪೂಜೆಮಾಡಿದವನು ಮುನ್ನೂರೈವತ್ತುಕೋಟಿ ಶಿವಲಿಂಗಗಳನ್ನು ಪೂಜೆಮಾಡಿದ ಫಲವನ್ನೈದುವನು. ||೩೯೫-೩೯೬||

ನಿತ್ಯವೂ ಉತ್ತಮವಾದ ನರ್ಮದಾಲಿಂಗವನ್ನು ಪೂಜೆಮಾಡುವವನ ವಂಶದಲ್ಲಿ ಜನಿಸಿದವರಿಗೆ ನರಕದಲ್ಲಿ ವಾಸವೇ ಇರುವುದಿಲ್ಲ. ನರ್ಮದಾಲಿಂಗದ ದರ್ಶನದಿಂದ ಕೂಡಲೇ ಸಕಲ ಪಾಪಗಳೂ ನಾಶವಾಗುವುವು. ಶಿವಲಿಂಗಸ್ಪರ್ಶ ಮತ್ತು ಅದರ ಪೂಜೆ ಮುಂತಾದವುಗಳಿಂದ ಮೋಕ್ಷವು ತಪ್ಪದೆ ಲಭಿಸುತ್ತದೆ. ||೩೯೭-೩೯೮||

ಹತ್ವಾಪಿ ಕೋಟಿಶೋ ವಿಪ್ರಾನ್ವೇದವೇದಾಂತಪಾರಗಾನ್ ।
ಯಃ ಪಶ್ಯೇನ್ನರ್ಮದಾಲಿಂಗಂ ಸ ಪಾಪೇಭ್ಯೋ ವಿಮುಚ್ಯತೇ ॥೩೯೯॥

ಯಃ ಪೂಜಯೇದ್ಬಿಲ್ವಪತ್ರೈರ್ನರ್ಮದಂ ಲಿಂಗಮುತ್ತಮಂ ।
ಸ ಸದ್ಯೋ ಮುಚ್ಯತೇ ಪಾಪೈಃ ಕೋಟಿಜನ್ಮಕೃತೈರಪಿ ॥೪೦೦॥

ಅಮಿತಾನಿ ವಿಚಿತ್ರಾಣಿ ಪಾತಕಾನಿ ನವಾನ್ಯಪಿ ।
ಸದ್ಯ ಏವ ವಿನಶ್ಯಂತಿ ನರ್ಮದಾಲಿಂಗಪೂಜಯಾ ॥೪೦೧॥

॥ ಅಗಸ್ತ್ಯ ಉವಾಚ ॥

ಇತಿ ತದ್ವಚನಂ ಶ್ರುತ್ವಾ ಯಮಃ ಸಂತುಷ್ಟಮಾನಸಃ ।
ಪೂಜಯಾಮಾಸ ತಂ ವಿಪ್ರಮುಪವೇಶ್ಯ ನಿಜಾಸನೇ ॥೪೦೨॥

ತದಾನೀಮೇವ ಸಹಸಾ ಸೋತ್ಸಾಹಂ ಶಿವಕಿಂಕರಾಃ ।
ಸಮಾಗತಾಃ ಸಾಟ್ಟಹಾಸಂ ದದರ್ಶ ಚ ಸ ತಾನ್ಯಮಃ ॥೪೦೩॥

ದೃಷ್ಟ್ವಾ ತಾನ್ಸತ್ವರಃ ಕಾಲೋ ರತ್ನಸಿಂಹಾಸನೇಷು ತಾನ್ ।
ಉಪವೇಶ್ಯ ಯಥಾಶಕ್ತಿ ಪೂಜಯಾಮಾಸ ಸಾದರಂ ॥೪೦೪॥

ವೇದವೇದಾಂತಪಾರಂಗತರಾದ ಕೋಟ್ಯಂತರ ಬ್ರಾಹ್ಮಣರನ್ನು ಕೊಂದರೂ ನಾರ್ಮದಲಿಂಗವನ್ನು ದರ್ಶನಮಾಡಿದ ಮಾತ್ರದಿಂದಲೇ ಆ ಪಾಪಗಳೆಲ್ಲವೂ ಬಿಡುಗಡೆಯಾಗುವುವು. ಉತ್ತಮವಾದ ನಾರ್ಮದಲಿಂಗವನ್ನು ಬಿಲ್ವದಳಗಳಿಂದ ಪೂಜೆ ಮಾಡುವವನು ಕೋಟಿಜನ್ಮಗಳಲ್ಲಿ ಪಾಪಮಾಡಿದ್ದರೂ ಅದರಿಂದ ಜಾಗ್ರತೆ ಬಿಡುಗಡೆ ಹೊಂದುವನು. ||೩೯೯-೪೦೦||

ಅಪರಿಮಿತವೂ, ನಾನಾಬಗೆಯೂ, ನೂತನವೂ ಆದ ಪಾಪಗಳೆಲ್ಲವೂ ಆ ನರ್ಮದಾಲಿಂಗದ ಪೂಜೆಯಿಂದ ಕೂಡಲೇ ನಾಶವಾಗುತ್ತವೆ.” ||೪೦೧||

ಆ ಚಿತ್ರಗುಪ್ತನ ಮಾತನ್ನು ಕೇಳಿ ಯಮನು ಸಂತೋಷಹೊಂದಿ ಆ ಬ್ರಾಹ್ಮಣನನ್ನು ತನ್ನ ಸಿಂಹಾಸನದಮೇಲೆ ಕುಳ್ಳಿರಿಸಿ ಪೂಜಿಸಿದನು. ಅದೇ ಸಮಯದಲ್ಲೇ ಕೂಡಲೇ ಉತ್ಸಾಹಭರಿತನಾಗಿ ಅಟ್ಟಹಾಸವನ್ನು ಬೀರುತ್ತಾ ಬಂದ ಶಿವಕಿಂಕರನನ್ನು ಯಮನು ಕಂಡನು. ||೪೦೨-೪೦೩||

ಆ ಶಿವದೂತರನ್ನು ನೋಡಿ ಕೂಡಲೇ ಯಮನು ಅವರನ್ನು ರತ್ನಸಿಂಹಾ

ತತಸ್ತೇ ಯಮಮಾಲೋಕ್ಯ ವಿನಯಾನತಕಂಧರಂ ।
ಪ್ರೋಚುರ್ಯಮಹಿತಂ ವಾಕ್ಯಮುತ್ಫುಲ್ಲವದನಾಸ್ತದಾ ॥೪೦೫॥

॥ ಶಿವಕಿಂಕರಾ ಊಚುಃ ॥

ಅನಭ್ಯರ್ಚಿತಗೌರೀಶಾನ್ಪಾತಯಸ್ವ ಮಲಹ್ರದೇ ।
ಅಸಂಸ್ಪೃಷ್ಟಮಹಾದೇವಾನ್ಪಾತಯಸ್ವ ಮಲಹ್ರದೇ ॥೪೦೬॥

ಅಸಂಕೀರ್ತಿತಗೌರೀಶಾನ್ಪಾತಯಸ್ವ ಮಲಹ್ರದೇ ।
ಅಜಪ್ತಶಿವಮಂತ್ರಾಂಶ್ಚ ಪಾತಯಸ್ವ ಮಲಹ್ರದೇ ॥೪೦೭॥

ಅಧೃತಶ್ವೇತಭಸ್ಮಾಂಗಾನ್ಪಾತಯಸ್ವ ಮಲಹ್ರದೇ ।
ಅಧೃತೋತ್ತಮರುದ್ರಾಕ್ಷಾನ್ಪಾತಯಸ್ವ ಮಲಹ್ರದೇ ॥೪೦೮॥

ಅಜಪ್ತಶ್ರೀಮಹಾರುದ್ರಾನ್ಪಾತಯಸ್ವ ಮಲಹ್ರದೇ ।
ಅನಮಸ್ಕೃತಭಾಲಾಕ್ಷಾನ್ಪಾತಯಸ್ವ ಮಲಹ್ರದೇ ॥೪೦೯॥

ಅಸಂಸ್ತುತಮಹಾದೇವಾನ್ಪಾತಯಸ್ವ ಮಲಹ್ರದೇ ।
ಅಭಾವಿತಮಹಾದೇವಾನ್ಪಾತಯಸ್ವ ಮಲಹ್ರದೇ ॥೪೧೦॥

---

ಸನಗಳಲ್ಲಿ ಕೂರಿಸಿ ತನ್ನ ಶಕ್ತ್ಯನುಸಾರವಾಗಿ ಆದರದಿಂದ ಅವರನ್ನು ಪೂಜೆಮಾಡಿದನು. ಹೀಗೆ ಪೂಜೆಯನ್ನು ಕೈಕೊಂಡನಂತರ ಆ ಶಂಕರಭಟರು ವಿನಯದಿಂದ ತಲೆಬಾಗಿ ನಿಂತಿರುವ ಯಮನನ್ನು ಕುರಿತು ಅರಳಿದ ಮುಖವುಳ್ಳವರಾಗಿ ಸಂತೋಷದಿಂದ ಯಮನನ್ನು ಕುರಿತು ಹಿತಕರವಾದ ಕೆಲವು ಮಾತುಗಳನ್ನಾಡಿದರು. ॥೪೦೪-೪೦೫॥

ಗೌರೀರಮಣನನ್ನು ಪೂಜೆಮಾಡದವರನ್ನೂ, ಮಹಾದೇವನನ್ನು ಸ್ಪರ್ಶಮಾಡದವರನ್ನೂ, ಗೌರೀರಮಣನ ನಾಮಸಂಕೀರ್ತನ ಮಾಡದವರನ್ನೂ, ಶಿವಪಂಚಾಕ್ಷರಮಂತ್ರಜಪ ಮಾಡದವರನ್ನೂ, ಶುಭ್ರವಾದ ಭಸ್ಮವನ್ನು ಧರಿಸದವರನ್ನೂ, ಉತ್ತಮವಾದ ರುದ್ರಾಕ್ಷಗಳನ್ನು ಧಾರಣಮಾಡದವರನ್ನೂ, ಮಹಾರುದ್ರಮಂತ್ರವನ್ನು ಜಪಿಸದವರನ್ನೂ, ಹಣೆಗಣ್ಣನಿಗೆ ನಮಸ್ಕಾರಮಾಡದವರನ್ನೂ, ಮಹಾದೇವನನ್ನು ಸ್ತೋತ್ರಮಾಡದವರನ್ನೂ ಮತ್ತು ಮಹಾದೇವನಲ್ಲಿ ಭಕ್ತಿಯಿಡ

|| ಗೌತಮ ಉವಾಚ ||

ಇತ್ಯಾಜ್ಞಾಪ್ಯ ಯಮಾ ನಮ್ರಂ ತೇ ಸರ್ವೇ ಶಿವಕಿಂಕರಾಃ ।
ಯಯುಃ ಕೈಲಾಸನಿಲಯಂ ತಂ ಗೃಹೀತ್ವೈವ ಸತ್ವರಂ ॥೪೧೧॥

ಗಾಣಾಪತ್ಯಂ ದದೌ ತಸ್ಮೈ ಮಹೇಶಃ ಕರುಣಾನಿಧಿಃ ।
ಸ ತಿಷ್ಠತಿ ಗಣೇಷ್ವೇವ ಶಿವಸೇವಾಪರಃ ಸದಾ ॥೪೧೨॥

ಅತಸ್ತನುಕ್ಷಯೇ ಸ್ಪೃಷ್ಟಂ ಶಿವಲಿಂಗಂ ದ್ವಿಜೇಂದ್ರಿಯೈಃ ।
ತೈರೀಶಕೃಪಯಾ ಲಭ್ಯಂ ಗಾಣಾಪತ್ಯಂ ನ ಸಂಶಯಃ ॥೪೧೩॥

ಕರ್ತವ್ಯಂ ಶಿವಲಿಂಗಸ್ಯ ಸ್ಪರ್ಶಃ ಪ್ರಾಣಾತ್ಯಯಕ್ಷಣೇ ।
ತೇನ ನಶ್ಯಂತಿ ಪಾಪಾನಿ ಗಾಣಾಪತ್ಯಂ ಚ ಲಭ್ಯತೇ ॥೪೧೪॥

ಶಿವಲಿಂಗಂ ಶಿವಾಕಾರಂ ಯಃ ಸ್ಪೃಶೇದನ್ವಹಂ ಮುದಾ ।
ತಸ್ಯ ಸದ್ಯಃ ಪ್ರಣಶ್ಯಂತಿ ಮಹಾಪಾತಕಕೋಟಯಃ ॥೪೧೫॥

ದವರನ್ನೂ ಅಮೇಧ್ಯದ ಕುಂಡದಲ್ಲಿ ಬೀಳಿಸಿ ಶಿಕ್ಷಿಸು ಎಂಬುದಾಗಿ ಶಿವದೂತರು ಯಮನಿಗೆ ಹೇಳಿದರು. ||೪೦೬-೪೦೭-೪೦೮-೪೦೯-೪೧೦||

ಶಿವಭಟರೆಲ್ಲರೂ ಈರೀತಿ ಯಮನಿಗೆ ಆಜ್ಞೆಮಾಡಿ, ಆ ಬ್ರಾಹ್ಮಣನನ್ನು ಕರೆದುಕೊಂಡು ಕೂಡಲೇ ಕೈಲಾಸಕ್ಕೆ ಹೊರಟುಹೋದರು. ಆಗ ದಯಾಸಮುದ್ರನಾದ ಮಹೇಶ್ವರನು ಆವನಿಗೆ ಗಣಾಧಿಪತಿಪದವಿಯನ್ನು ಅನುಗ್ರಹಿಸಿ ಕೊಟ್ಟನು. ಆಮೇಲೆ ಆವನು ಯಾವಾಗಲೂ ಗಣಗಳಲ್ಲೇ ಇರುತ್ತಾ ಶಿವಸೇವಾನಿರತನಾದನು. ||೪೧೧-೪೧೨||

ಆಯ್ಯ ಬ್ರಾಹ್ಮಣನೇ, ಆದ್ದರಿಂದ ಶರೀರನಾಶಕ್ಷಣದಲ್ಲಿ ಶಿವಲಿಂಗವನ್ನು ಮುಟ್ಟಿದ ಇಂದ್ರಿಯಗಳಿಂದ ಈಶ್ವರನ ದಿವ್ಯಾನುಗ್ರಹವುಂಟಾಗಿ ಗಣಾಧಿಪತಿಪದವಿಯುಂಟಾಗುವುದರಲ್ಲಿ ಸಂಶಯವೇ ಇಲ್ಲ. ಪ್ರಾಣಹೋಗುವ ಸಮಯದಲ್ಲಿ ಶಿವಲಿಂಗವನ್ನು ಸ್ಪರ್ಶಮಾಡಬೇಕು ಅದರಿಂದ ಸಕಲಪಾಪಗಳೂ ತೊಲಗಿ ಗಣಾಧಿಪತ್ಯವು ಲಭಿಸುತ್ತದೆ. ಶಿವಾತ್ಮಕವಾಗಿರುವ ಶಿವಲಿಂಗವನ್ನು ಪ್ರತಿದಿನವೂ ಪ್ರೀತಿಯಿಂದ ಸ್ಪರ್ಶಮಾಡುವವರಿಗೆ ಕೋಟ್ಯಂತರ ಮಹಾಪಾಪಗಳೂ ಕೂಡಲೇ ನಾಶವಾಗುತ್ತವೆ ||೪೧೩-೪೧೪-೪೧೫||

ದುರ್ಲಭಃ ಶಿವಲಿಂಗಸ್ಯ ಸ್ಪರ್ಶೋ ಮೋಕ್ಷಪ್ರದಾಯಕಃ ।
ಶಿವಲಿಂಗಸ್ಯ ಸಂಸ್ಪರ್ಶೋ ಭೂರಿಪುಣ್ಯತಪಃಫಲಂ ॥೪೧೬॥

ಯಸ್ಯೈವ ಶಿವಲಿಂಗಸ್ಯ ಸ್ಪರ್ಶನಂ ವೇದಸಂಮತಂ ।
ತಸ್ಯೈವ ಸ್ಪರ್ಶನಂ ಕಾರ್ಯಂ ಅಯಂ ಮೋತ್ಯಾದಿಭಿರ್ದ್ವಿಜೈಃ ॥೪೧೭॥

ಶಿವಲಿಂಗಸ್ಯ ಮಾಹಾತ್ಮ್ಯಂ ತತ್ಸ್ಪರ್ಶಸ್ಯಾಪಿ ವಸ್ತುತಃ ।
ಶಂಕರೋ ವೇದ ಸರ್ವಜ್ಞಸ್ತದನ್ಯಸ್ತು ನ ಸರ್ವಥಾ ॥೪೧೮॥

ಶಿವಲಿಂಗಂ ಶಿವಾಕಾರಂ ಸರ್ವವೇದಾಂತಸಂಸ್ತುತಂ ।
ತದೇವ ಪರಮಂ ಪೂಜ್ಯಂ ಬ್ರಾಹ್ಮಣಾದ್ಯೈರ್ಮುಮುಕ್ಷುಭಿಃ ॥೪೧೯॥

ಶಿವಲಿಂಗಂ ವೇದವೇದ್ಯಂ ಈದೃಶಂ ಶಂಕರಾತ್ಮಕಂ ।
ತೇನ ಭಿಲ್ಲೇನ ಸತತಂ ಸ್ಪೃಷ್ಟ್ವಾಸ್ಪೃಷ್ಟ್ವಾ ಸ್ಥಿತಂ ದ್ವಿಜ ॥೪೨೦॥

ಕದಾಚಿದ್ವನಿಕಾ ವಿಪ್ರಾ ವೇದವೇದಾಂಗಪಾರಗಾಃ ।
ದೃಷ್ಟಾಸ್ತೇ ತೇನ ಭಿಲ್ಲೇನ ತರುಗುಲ್ಮಾವೃತೇ ವನೇ ॥೪೨೧॥

---

ಮೋಕ್ಷವನ್ನುಂಟುಮಾಡುವ ಶಿವಲಿಂಗದ ಸ್ಪರ್ಶವು ದುರ್ಲಭವಾದದ್ದು. ವಿಶೇಷ ಪುಣ್ಯದ ತಪಸ್ಸಿನ ಫಲದಿಂದ ಆ ಶಿವಲಿಂಗಸ್ಪರ್ಶವುಂಟಾಗುವುದು. ವೇದ ಸಂಮತವಾದ ಶಿವಲಿಂಗಸ್ಪರ್ಶವು ಯಾರಿಗೆ ಹೇಳಿದೆಯೋ ಅಂತಹ ಶೈವರೇ 'ಅಯಂ ಮೇ ಹಸ್ತೋ ಭಗವಾನ್' ಮುಂತಾದ ಮಂತ್ರಪೂರ್ವಕವಾಗಿ ಶಿವಲಿಂಗವನ್ನು ಸ್ಪರ್ಶಮಾಡಬೇಕು. ಶಿವಲಿಂಗ ಮತ್ತು ಅದರ ಸ್ಪರ್ಶದ ಮಹಿಮೆಯನ್ನು ವಸ್ತುತಃ ಸರ್ವಜ್ಞನಾದ ಆ ಶಂಕರನೊಬ್ಬನೇ ಅರಿತಿರುವವನೇ ಹೊರತು ಬೇರಾರಿಗೂ ಖಂಡಿತವಾಗಿ ತಿಳಿಯದು. ॥೪೧೬-೪೧೭-೪೧೮॥

ಶಿವಾತ್ಮಕವೂ ಸಕಲ ವೇದಾಂತಗಳಿಂದ ಸ್ತೋತ್ರಮಾಡಲ್ಪಟ್ಟದ್ದೂ ಆದ ಶಿವಲಿಂಗವೇ ಮೋಕ್ಷವನ್ನು ಬಯಸುವ ಬ್ರಾಹ್ಮಣಾದಿವರ್ಣಗಳವರಿಂದ ತುಂಬಾ ಪೂಜಾರ್ಹವಾಗಿರುವುದು. ವೇದಗಳಿಂದ ತಿಳಿಯಲ್ಪಡತಕ್ಕುದೂ, ಶಂಕರಾತ್ಮಕವೂ ಆದ ಇಂತಹ ಶಿವಲಿಂಗವನ್ನೇ ಆ ಭಿಲ್ಲನು ಅನವರತವೂ ಮುಟ್ಟಿ ಮುಟ್ಟಿ ಇಡುತ್ತಿದ್ದನು. ॥೪೧೯-೪೨೦॥

ಒಂದು ದಿನ ಗಿಡಬಳ್ಳಿಗಳಿಂದ ವ್ಯಾಪಿಸಿರುವ ಆ ಕಾಡಿನಲ್ಲಿ ವನವಾಸಿಗಳಾದ ವೇದವೇದಾಂಗಗಳಲ್ಲಿ ಪಾರಂಗತರಾದ ಬ್ರಾಹ್ಮಣರು ಆ ಭಿಲ್ಲನಿಗೆ ಗೋಚರವಾದರು.

ತತಸ್ತಾನಖಿಲಾನ್ವಿಪ್ರಾನ್ಪಾತಯಿತ್ವಾಽವನೀತಲೇ ।
ತೇನೈವ ಶಿವಲಿಂಗೇನ ಚೂರ್ಣಯಾಮಾಸ ಸತ್ವರಂ ॥೪೨೨॥

ತತಃ ಸ ಬಿಲ್ವಶಾಖಾಗ್ರೈರ್ನವಪಲ್ಲವಸಂಯುತೈಃ ।
ಲಿಂಗಮಾಚ್ಛಾದಯಾಮಾಸ ಪ್ರಕ್ಷಾಳ್ಯ ವಿಮಲೈರ್ಜಲೈಃ ॥೪೨೩॥

ತದಾನೀಮಾಗತಾಃ ಕೇಚಿತ್ಪ್ರಬಲಾಃ ಶಸ್ತ್ರಪಾಣಯಃ ।
ತೇ ತದ್ಧತಾನ್ದ್ವಿಜಾನ್ಸರ್ವಾನ್ದದೃಶುರ್ಭುವಿ ಪಾತಿತಾನ್ ॥೪೨೪॥

ತತಸ್ತಂ ಭಿಲ್ಲಮಾಲೋಕ್ಯ ಭಟಾಸ್ತೇ ರೋಷಸಂಯುತಾಃ ।
ಧನೂಂಷ್ಯಾರೋಪ್ಯ ತಂ ಹಂತುಮುದ್ಯುಕ್ತಾ ಬಾಣಪಾಣಯಃ ॥೪೨೫॥

ಸನ್ನದ್ಧಾಃ ಪ್ರಬಲಾಃ ಕ್ರೂರಾ ಧನುರ್ವಿದ್ಯಾವಿಶಾರದಾಃ ।
ಧನೂಂಷ್ಯಾರೋಪ್ಯ ತಮನು ಸ್ಥಿತಾಶ್ಚಿತ್ರಾರ್ಪಿತಾ ಇವ ॥೪೨೬॥

ತತಃ ಸಮಾಗತಾ ವೀರಾ ಸಹಸ್ರಂ ಶಸ್ತ್ರಪಾಣಯಃ ।
ತೇಽಪಿ ತಂ ಹಂತುಮುದ್ಯುಕ್ತಾಃ ಸ್ಥಿತಾಶ್ಚಿತ್ರಾರ್ಪಿತಾ ಇವ ॥೪೨೭॥

ಆಗ ಆ ಭಿಲ್ಲನು ಅವರನ್ನೆಲ್ಲಾ ನೆಲದಮೇಲೆ ಬೀಳಿಸಿ ಅದೇ ಶಿವಲಿಂಗದಿಂದ ಜಾಗ್ರತೆಯಾಗಿ ಚೂರುಚೂರುಮಾಡಿದನು ॥೪೨೧-೪೨೨॥

ಅನಂತರ ಆ ಭಿಲ್ಲನು ಹೊಸ ಚಿಗುರಿನಿಂದ ಕೂಡಿದ ಬಿಲ್ವಮರದ ತುದಿಗೊಂಬೆಗಳಿಂದ, ಆ ಲಿಂಗವನ್ನು ಶುದ್ಧವಾದ ನೀರಿನಿಂದ ತೊಳೆದು ಮುಚ್ಚಿದನು. ಇದಾದಮೇಲೆ ಕೆಲವುಜನ ಕತ್ತಿಯನ್ನು ಹಿಡಿದು ಪ್ರಬಲರಾದ ಭಟರು ಅಲ್ಲಿಗೆ ಬಂದು ನೆಲದಮೇಲೆ ಆ ಭಿಲ್ಲನಿಂದ ಕೊಲ್ಲಲ್ಪಟ್ಟಿರುವ ಬ್ರಾಹ್ಮಣರನ್ನು ನೋಡಿದರು. ॥೪೨೩-೪೨೪॥

ಆಮೇಲೆ ಆ ಭಿಲ್ಲನನ್ನು ನೋಡಿ ಭಟರೆಲ್ಲರೂ ಕೋಪಾಕ್ರಾಂತರಾಗಿ ಧನುಸ್ಸಿನ ಹೆದೆಯನ್ನೇರಿಸಿ ಬಾಣಗಳನ್ನು ಕೈಯಲ್ಲಿಹಿಡಿದು ಅವನನ್ನು ಕೊಲ್ಲುವುದಕ್ಕೆ ಉದ್ಯುಕ್ತರಾದರು. ಬಲಶಾಲಿಗಳೂ, ಕ್ರೂರರೂ ಮತ್ತು ಧನುರ್ವಿದ್ಯಾಪಾರಂಗತರೂ ಆದ ಆ ಭಟರು ಬಿಲ್ಲಿನ ನಾಣೇರಿಸಿ ಹೊಡೆಯಲು ಸಿದ್ಧರಾದರೂ, ಚಿತ್ರದ ಬೊಂಬೆಯಂತೆ ಏನೂ ಮಾಡಲಾರದೇ ಸುಮ್ಮನೇ ನಿಂತರು. ॥೪೨೫-೪೨೬॥

ಇದಾದಮೇಲೆ ಮತ್ತೆ ಸಾವಿರಮಂದಿ ವೀರರು ಕತ್ತಿಗಳನ್ನು ಹಿಡಿದು ಇವನನ್ನು ಕೊಲ್ಲುವದಕ್ಕೆ ಬಂದು, ಕೊಲ್ಲಲು ಉದ್ಯುಕ್ತರಾದರು ಆದರೆ ಅವರೂ

ದೃಷ್ಟ್ವಾ ತಾನ್ಗತಭೀರ್ಭಿಲ್ಲಃ ಪರಮಾಶ್ಚರ್ಯಸಂಯುತಃ ।
ಸ್ವಾಂತರ್ವಿಚಾರಯಾಮಾಸ ಕಿಮೇತೇಷಾಮಭೂದಿತಿ ॥೪೨೮॥

ತತೋ ವಿಚಾರ್ಯ ತಾನಾಹ ಸ ದೃಢೋಚ್ಚಧನುರ್ಧರಾನ್ ।
ಕಿಮರ್ಥಂ ಸ್ಥೀಯತೇ ವೀರಾಃ ಕಿಮಾಸೀತ್ತದ್ವದಂತ್ವಿತಿ ॥೪೨೯॥

|| ಭಟಾ ಊಚುಃ ||

ಭವಂತಂ ಹಂತುಮುದ್ಯುಕ್ತಾಃ ಸರ್ವೇ ವಯಮುದಾಯುಧಾಃ ।
ಕುಂಠಿತಾದ್ಯಾ ಭವಚ್ಛಕ್ತಿಸ್ತ್ವಯ್ಯಸ್ಮಾಕಮಿಹಾಧುನಾ ॥೪೩೦॥

ತ್ವಯೈತೇ ನಿಹತಾ ವಿಪ್ರಾ ಬ್ರಹ್ಮಹಾಪಿ ತಥಾಪಿ ತೇ ।
ಕುತಃ ಸಮಾಗತಾ ಭಿಲ್ಲ*ಶಕ್ತಿರಸ್ಮನ್ನಿರೋಧನೇ ॥೪೩೧॥

ಮನುಷ್ಯಸ್ಯೇದೃಶೀ ಶಕ್ತಿರ್ನಭವಿಷ್ಯತಿ ಸರ್ವಥಾ ।
ಭವಾನತೋ ನ ಭಿಲ್ಲೋಽಸಿ ಭಗವಾನಸಿ ಕೇವಲಂ ॥೪೩೨॥

ಚಿತ್ರದಲ್ಲಿಟ್ಟ ಬೊಂಬೆಯಂತೆಯೇ ನಿಂತುಕೊಂಡರು. ಇವರನ್ನೆಲ್ಲಾ ನೋಡಿ ಆ ಭಿಲ್ಲನು ಭಯವನ್ನು ತೊರೆದು ತುಂಬಾ ಆಶ್ಚರ್ಯಯುಕ್ತನಾಗಿ ಇವರಿಗೆಲ್ಲಾ ಇದೇ ನಾಯಿತೆಂದು ತನ್ನ ಮನಸ್ಸಿನಲ್ಲಿಯೇ ಆಲೋಚಿಸಿ, ಅನಂತರ ದೃಢವೂ ದೊಡ್ಡದೂ ಆದ ಬಿಲ್ಲುಗಳನ್ನು ಹಿಡಿದಿರುವ ಅವರನ್ನು ನೋಡಿ, ಎಲೈ ವೀರರೇ! ಏಕೆ ಸುಮ್ಮನೆ ನಿಂತಿರುವಿರೆಂದು ಪ್ರಶ್ನೆಮಾಡಿದನು. ||೪೨೭-೪೨೮-೪೨೯||

ಅಯ್ಯಾ ಭಿಲ್ಲನೇ! ನಾವೆಲ್ಲರೂ ನಿನ್ನನ್ನು ಕೊಲ್ಲಲು ಆಯುಧಧಾರಿಗಳಾಗಿ ನಿಂತೆವು. ಆದರೆ ನಮ್ಮ ಸಾಮರ್ಥ್ಯವೆಲ್ಲವೂ ಈಗ ನಿನ್ನ ವಿಷಯದಲ್ಲಿ ತೊಡೆದು ಹೋಗಿದೆ. ನೀನು ಈ ಬ್ರಾಹ್ಮಣರನ್ನು ಕೊಂದು ಬ್ರಹ್ಮಹತ್ಯಾದೋಷವನ್ನು ಹೊಂದಿರುವೆ. ಅಯ್ಯಾ ಬಿಲ್ಲನೇ! ನಮ್ಮನ್ನು ತಡೆಯುವಂತಹ ಶಕ್ತಿಯು ನಿನಗೆಲ್ಲಿ ಬಂತು? ||೪೩೦-೪೩೧||

ಮನುಷ್ಯನಿಗೆ ಇಂತಹ ಶಕ್ತಿಯು ಖಂಡಿತವಾಗಿಯೂ ಉಂಟಾಗುವುದಿಲ್ಲ. ಆದ್ದರಿಂದ ನೀನು ನಿಜವಾಗಿಯೂ ಭಿಲ್ಲನಲ್ಲ, ಕೇವಲ ಭಗವಂತನೇ ಆಗಿರುತ್ತೀಯೆ. ಧನುಸ್ಸನ್ನು ಹಿಡಿದಿರುವ ನಮಗೆ ಈಗಲೇ ನಿನ್ನ ವಿಷಯದಲ್ಲಿ ಸಾಮರ್ಥ್ಯವು

ಧನುರ್ಧರಾಣಾಮಸ್ಮಾಕಂ ಶಕ್ತಿರದ್ಯೈವ ಕುಂಠಿತಾ ।
ಹೇಲಯಾ ಜಿತವೈಕುಂಠಾ ವಯಂ ನಾತ್ರಾಸ್ತಿ ಸಂಶಯಃ ॥೪೩೩॥

ಇಂದ್ರಃ ಪರಾಜಿತೋಽಸ್ಮಾಭಿರ್ಗಂಧರ್ವಾಶ್ಚ ಪರಾಜಿತಾಃ ।
ವಯಮೇವ ಧನುಃ ಶಾಸ್ತ್ರೇ ಪ್ರವೀಣಾ ನಾತ್ರ ಸಂಶಯಃ ॥೪೩೪॥

ವಯಂ ರುದ್ರಾರ್ಚಕಾ ನಿತ್ಯಂ ರುದ್ರದತ್ತಪರಾಕ್ರಮಾಃ ।
ಸತ್ಯಲೋಕಾದಿಲೋಕೇಷು ಸಂಚಾರೋಽಪ್ಯಸ್ತಿ ನೋ ಧ್ರುವಂ॥೪೩೫॥

ಭವಾನ್ಭಾಗ್ಯವಶಾದದ್ಯ ದೃಷ್ಟೋಽಸ್ಮಾಭಿರ್ಭಯಾಪಹಃ ।
ಭಗನೇತ್ರಭಿದೀಶಾನೋ ಭವಾನೇವ ನ ಸಂಶಯಃ ॥೪೩೬॥

ನಾನಾರೂಪಾಣಿ ಧೃತ್ವೈವಂ ವಿಹಾರಃ ಕ್ರಿಯತೇ ತ್ವಯಾ ।
ವೇದೈರಪಿ ನ ವಿಜ್ಞಾತಂ ತವ ರೂಪಂ ಮಹೇಶ್ವರ ॥೪೩೭॥

ಕುಂದಿದುದು. ನಾವೆಲ್ಲರೂ ಹಿಂದೆ ಅನಾಯಾಸವಾಗಿ ವೈಕುಂಠಲೋಕವನ್ನು ಸಹ ಜಯಿಸಿರುವೆವೆಂಬುದರಲ್ಲಿ ಸಂದೇಹವೇ ಇಲ್ಲ. ||೪೩೨-೪೩೩||

ನಾವು ದೇವೇಂದ್ರನನ್ನೂ ಮತ್ತು ಗಂಧರ್ವರನ್ನೂ ಸೋಲಿಸಿರುವೆವು. ನಾವೇ ಧನುರ್ವಿದ್ಯೆಯಲ್ಲಿ ಪ್ರವೀಣರೆಂಬುದರಲ್ಲಿ ಸಂದೇಹವಿಲ್ಲ. ನಾವು ರುದ್ರದೇವನನ್ನು ಪೂಜಿಸುವವರು ; ಆ ರುದ್ರನಿಂದ ಕೊಡಲ್ಪಟ್ಟ ಪರಾಕ್ರಮವುಳ್ಳವರೂ ಆಗಿರುವೆವು. ನಮಗೆ ನಿಶ್ಚಯವಾಗಿ ಸತ್ಯಲೋಕವೇ ಮುಂತಾದ ಲೋಕಗಳಲ್ಲಿಯೂ ಸಂಚಾರ ಮಾಡುವ ಸಾಮರ್ಥ್ಯವಿರುವುದು. ೪೩೪-೪೩೫||

ನಮ್ಮ ಅದೃಷ್ಟವಶದಿಂದ ಈದಿನ ಈ ಸಂಸಾರದುಃಖವನ್ನು ನಾಶಮಾಡುವವನೂ, ಭಗನೆಂಬ ರಾಕ್ಷಸನ ಕಣ್ಣನ್ನು ಕಿತ್ತವನೂ, ಐಶ್ವರ್ಯಸಂಪನ್ನನೂ ಆದ ನೀನು ಗೋಚರಿಸಿರುವೆ. ನೀನೇ ಈಶ್ವರನೆಂಬುದರಲ್ಲಿ ಸಂದೇಹವಿಲ್ಲ. ನಾನಾಬಗೆಯ ರೂಪಗಳನ್ನು ಧರಿಸಿ ಹೀಗೆ ನೀನು ವಿಹಾರವಮಾಡುತ್ತಿರುವೆ ಮಹೇಶ್ವರ! ನಿನ್ನ ಈ ರೂಪವು ವೇದಗಳಿಗೇ ತಿಳಿಯದು. ||೪೩೬-೪೩೭||

ಯುಷ್ಮೈತೇ ನಿಹತಾ ವಿಪ್ರಾಸ್ತಥೈವಾಸ್ಮಾನಪಿ ಪ್ರಭೋ ।
ಹನ ತ್ವತ್ಕರಸಂಸ್ಪರ್ಶಾನ್ಮುಕ್ತಿರದ್ಯ ಭವಿಷ್ಯತಿ ॥೪೩೮॥

ಯದ್ಯಪ್ಯದ್ಯ ಕೃತಾರ್ಥಾಸ್ಸ್ಮೋ ತವ ದರ್ಶನಮಾತ್ರತಃ ।
ತಥಾಪೀಶ ತ್ವಯಾ ಸರ್ವೇ ಹಂತವ್ಯಾ ವಯಮೀದೃಶಾಃ ॥೪೩೯॥

॥ ಅಗಸ್ತ್ಯ ಉವಾಚ

ಇತ್ಯುಕ್ತ್ವಾ ತೇ ಭಟಾಃ ಸರ್ವೇ ತ್ಯಕ್ತ್ವಾ ಶಸ್ತ್ರಾಣಿ ಸತ್ವರಂ ।
ಭಸ್ಮನೋದ್ಧೂಳನಂ ಚಕ್ರುಸ್ತದೈವಾಪಾದಮಸ್ತಕಂ ॥೪೪೦॥

ತತೋ ನವೈರ್ಬಿಲ್ವಪತ್ರೈರ್ಧೃತರುದ್ರಾಕ್ಷಭೂಷಣಾಃ ।
ಭಿಲ್ಲಮಭ್ಯರ್ಚಯಾಮಾಸುಃ ಶಿವಬುದ್ಧ್ಯಾ ತಮೇವ ತೇ ॥೪೪೧॥

ತತಃ ಪ್ರಣಮ್ಯ ತೇ ಸರ್ವೇ ಪತಿತ್ವಾ ಪೃಥಿವೀತಲೇ ।
ಶಂಭೋ ಶಿವ ಶಿವೇತ್ಯುಕ್ತ್ವಾ ಹನಸ್ವೇತಿ ತಮಬ್ರುವನ್ ॥೪೪೨॥

ಪ್ರಭುವೇ, ಈ ಬ್ರಾಹ್ಮಣರನ್ನು ಕೊಂದಂತೆಯೇ ನಮ್ಮನ್ನೂ ಸಂಹಾರ ಮಾಡು. ಸ್ವಾಮಿ, ನಿನ್ನ ಹಸ್ತಸಂಸ್ಪರ್ಶದಿಂದ ಈದಿನ ನಮಗೆ ಮುಕ್ತಿಯುಂಟಾಗುವುದು. ಈಗ ನಿನ್ನ ದರ್ಶನಮಾತ್ರದಿಂದ ನಾವು ಕೃತಕೃತ್ಯರಾಗಿದ್ದರೂ, ಎಲೈ ಈಶ್ವರನೇ, ಇಂತಹ ನಮ್ಮನ್ನು ನೀನು ಅವಶ್ಯವಾಗಿ ಕೊಲ್ಲಲೇಬೇಕು ಎಂದು ಭಟರು ಭಿಲ್ಲನನ್ನು ಶಿವನೆಂದೇ ಭಾವಿಸಿ ಸ್ತೋತ್ರಮಾಡಿದರು. ॥೪೩೮-೪೩೯॥

ಹೀಗೆ ನುಡಿದು ಆ ಭಟರೆಲ್ಲರೂ ತಮ್ಮ ಶಸ್ತ್ರಗಳನ್ನು ತೊರೆದು, ಕೂಡಲೇ ಕಾಲಿನಿಂದ ತಲೆಯವರೆಗೆ ವಿಭೂತಿಯಿಂದ ಉದ್ಧೂಲನ ಮಾಡಿಕೊಂಡರು. ಅನಂತರ ಹೊಸ ಬಿಲ್ವಪತ್ರೆಗಳಿಂದ ಕೂಡಿದ ರುದ್ರಾಕ್ಷಮಾಲೆಗಳನ್ನು ಧರಿಸಿದನಂತರ ಆ ಭಿಲ್ಲನನ್ನೇ ಶಿವನೆಂಬ ಬುದ್ಧಿಯಿಂದ ಪೂಜೆಮಾಡಿದರು. ॥೪೪೦-೪೪೧॥

ಅನಂತರ ಅವರೆಲ್ಲರೂ ನೆಲದಮೇಲೆ ನಮಸ್ಕಾರಮಾಡಿ, ಶಂಭೋ, ಶಿವ, ಶಿವ, ಎಂಬುದಾಗಿ ಉಚ್ಚರಿಸಿ ನಮ್ಮನ್ನು ಕೊಲ್ಲುವನಾಗೆಂದು ಪ್ರಾರ್ಥಿಸಿದರು. ಆಗ

ತದಾನೀಂ ಶ್ರೀಮಹಾದೇವಃ ಸಂತುಷ್ಟೋ ಗಣಸೇವಿತಃ ।
ಪ್ರಾದುರಾಸೀದ್ವೃಷಾರೂಢೋ ಭಗವಾನ್ಭಕ್ತವತ್ಸಲಃ ॥೪೪೩॥

ತತಸ್ತಂ ದೇವದೇವೇಶಮುಮಾಲಿಂಗಿತವಿಗ್ರಹಂ ।
ದೃಷ್ಟ್ವಾ ಪ್ರಹೃಷ್ಟಾಸ್ತೇ ಸರ್ವೇ ತುಷ್ಟುವುರ್ವಿನಯಾನತಾಃ ॥೪೪೪॥

॥ ಭಟಾ ಊಚುಃ ॥

ನಮಸ್ತೇ ಪಾರ್ವತೀನಾಥ ಕರುಣಾಕರ ಶಂಕರ ।
ನಮಸ್ತೇ ದೇವದೇವೇಶ ಭಗವನ್ಭಕ್ತವತ್ಸಲ ॥೪೪೫॥

ನಮಸ್ತೇ ವಿಶ್ವವಂದ್ಯೇಶ ಮಧುಸೂದನಸೂದನ ।
ನಮಸ್ತೇ ಸೋಮಸೂರ್ಯಾಗ್ನಿನಯನಾಮಿತವಿಕ್ರಮ ॥೪೪೬॥

ನಮಸ್ತೇ ವಿಮಲಾಕಾರ ನಿರಾಕಾರ ಮಹೇಶ್ವರ ।
ನಮಸ್ತೇ ನಿರ್ಗುಣಾನಂದ ಭಕ್ತಾನಂದಪ್ರವರ್ಧಕ ॥೪೪೭॥

ಶ್ರೀಮಹಾದೇವನು ಸಂತುಷ್ಟನಾಗಿ ತನ್ನ ಗಣಗಳೊಡನೆ ಭಕ್ತವತ್ಸಲನಾದುದರಿಂದ ವೃಷಭವನ್ನೇರಿ ಅಲ್ಲಿ ಪ್ರತ್ಯಕ್ಷನಾದನು. ॥೪೪೨-೪೪೩॥

ಆಗ ಉಮಾದೇವಿಯಿಂದ ಆಲಿಂಗನ ಮಾಡಲ್ಪಟ್ಟ ಶರೀರವುಳ್ಳವನಾದ ದೇವದೇವನನ್ನು ನೋಡಿ ಅವರೆಲ್ಲರೂ ಸಂತುಷ್ಟರಾಗಿ ವಿನಯದಿಂದ ತಲೆಬಾಗಿ ಹೀಗೆ ಸ್ತೋತ್ರಮಾಡಿದರು. ॥೪೪೪॥

"ಪಾರ್ವತೀರಮಣನೂ, ದಯಾಸಮುದ್ರನೂ ಆದ ಶಂಕರನೇ, ನಿನಗೆ ನಮಸ್ಕಾರ ಮಾಡುತ್ತೇನೆ. ದೇವದೇವೇಶ್ವರನೂ, ಭಕ್ತರಲ್ಲಿ ಪ್ರೀತಿಯುಳ್ಳವನೂ ಆದ ನಿನಗೆ ಪ್ರಣಾಮಗಳು. ಜಗತ್ತಿನ ಪ್ರಜೆಗಳೆಲ್ಲರಿಂದಲೂ ನಮಸ್ಕೃತನೂ, ಮಧುವೆಂಬ ರಾಕ್ಷಸನನ್ನು ಸಂಹಾರಮಾಡಿದ ವಿಷ್ಣುವನ್ನು ನಿಗ್ರಹಿಸಿದವನೂ ಆದ ಈಶ್ವರನೇ, ನಿನಗೆ ನಮಸ್ಕಾರವು. ಚಂದ್ರಸೂರ್ಯಾಗ್ನಿಗಳನ್ನೇ ಮೂರುಕಣ್ಣುಗಳನ್ನಾಗಿ ಧರಿಸಿದವನೂ, ಅಪರಿಮಿತವಾದ ಪರಾಕ್ರಮದಿಂದ ಶೋಭಿಸುವವನೂ ಆದ ಸ್ವಾಮಿಯೇ, ನಿನಗೆ ಪ್ರಣಾಮವು. ॥೪೪೫-೪೪೬॥

ನಿರ್ಮಲವಾದ ಆಕೃತಿಯುಳ್ಳವನೂ, ಆಕೃತಿಶೂನ್ಯನೂ ಆದ ಮಹೇಶ್ವರನೇ, ನಿನಗೆ ನಮಸ್ಕಾರವು. ಗುಣರಹಿತನೂ, ಆನಂದಸ್ವರೂಪನೂ, ತನ್ನ ಭಕ್ತರಿಗೆ

ನಮಸ್ತೇ ಜಗದಾಧಾರ ನಿರಾಧಾರ ಮಹೇಶ್ವರ ।
ನಮಸ್ತೇ ಬ್ರಹ್ಮವಿಷ್ಣ್ವಾದಿದೇವಾರಾಧ್ಯಾಧ್ವರಪ್ರಿಯ ॥೪೪೮॥

ನಮಸ್ತೇ ಚಂದ್ರಚೂಡೇಶ ಚಂದ್ರವರ್ಣಾಮಿತಪ್ರಭ ।
ನಮಸ್ತೇ ಮನ್ಮಥಾರಾತಿನ್ದಕ್ಷಾಧ್ವರಪಿನಾಶಕ ॥೪೪೯॥

ನಮಸ್ತೇ ವೇದವೇದಾಂತವೇದಶಾಖಾದಿಸರ್ಜಕ ।
ನಮಸ್ತೇ ಸರ್ವವೇದಾಂತಪ್ರತಿಪಾದಿತವಿಗ್ರಹ ॥೪೫೦॥

ನಮಸ್ತೇ ಗಿರಿಜಾಬಂಧೋ ದಯಾಸಿಂಧೋ ಬುಧೋತ್ತಮ ।
ನಮಸ್ತೇ ಭೂತಿಭೃದ್ಬಂಧೋ ಭೂತಿಭೂಷಣಭೂತಿದ ॥೪೫೧॥

ನಮಸ್ತೇ ಸರ್ವದೇವೇಶ ಸರ್ವದೇವನಮಸ್ಕೃತ ।
ನಮಸ್ತೇ ಸರ್ವಭೂತೇಶ ಸರ್ವಭೂತನಮಸ್ಕೃತ ॥೪೫೨॥

ಆನಂದವನ್ನು ಹೆಚ್ಚಿಸುವವನೂ ಆದ ನಿನಗೆ ಪ್ರಣಾಮವು. ಜಗತ್ತಿಗೆಲ್ಲಾ ಆಧಾರಭೂತನೂ, ಸ್ವತಃ ಆಧಾರಶೂನ್ಯನೂ ಆದ ಮಹೇಶ್ವರನೇ, ನಿನಗೆ ನಮಸ್ಕಾರವು. ಬ್ರಹ್ಮ, ವಿಷ್ಣು ಮುಂತಾದ ದೇವತೆಗಳಿಂದ ಪೂಜ್ಯನೂ, ಯಾಗದಲ್ಲಿ ಪ್ರೀತಿಯುಳ್ಳವನೂ ಆದ ನಿನಗೆ ನಮಸ್ಕಾರಮಾಡುವೆನು. ॥೪೪೭-೪೪೮॥

ಚಂದ್ರನನ್ನು ತಲೆಯಲ್ಲಿ ಧರಿಸಿರುವವನೂ, ಚಂದ್ರನ ವರ್ಣಕ್ಕಿಂತಲೂ ಅಪರಿಮಿತವಾದ ಕಾಂತಿಯುಳ್ಳವನೂ ಆದ ನಿನಗೆ ನಮಸ್ಕಾರವು. ಮನ್ಮಥಶತ್ರುವೂ, ದಕ್ಷಬ್ರಹ್ಮನ ಯಾಗವನ್ನು ನಾಶಮಾಡುವವನೂ ಆದ ನಿನಗೆ ನಮಸ್ಕಾರವು. ವೇದ, ವೇದಾಂತ ಮೊದಲಾದ ವೇದಶಾಖೆಗಳನ್ನು ಸೃಷ್ಟಿಮಾಡಿದವನೂ, ಸಕಲ ವೇದಾಂತಗಳಿಂದ ಪ್ರತಿಪಾದನೆ ಮಾಡಲ್ಪಟ್ಟ ದೇಹವುಳ್ಳವನೂ ಆದ ನಿನಗೆ ನಮಸ್ಕಾರವು. ॥೪೪೯-೪೫೦॥

ಪರ್ವತರಾಜ ಕುವರಿಯ ಸಹಚರಿಯೂ, ದಯಾಸಮುದ್ರನೂ ಆದ ಪಂಡಿತೋತ್ತಮನೇ! ನಿನಗೆ ನಮಸ್ಕಾರಮಾಡುತ್ತೇನೆ ವಿಭೂತಿಯನ್ನು ಧರಿಸಿದವರ ಬಂಧುವೂ, ವಿಭೂತಿಯನ್ನು ಅಲಂಕರಿಸಿಕೊಂಡಿರುವವನೂ, ಭಕ್ತರಿಗೆ ಅಷ್ಟೈಶ್ವರ್ಯವನ್ನು ಕರುಣಿಸುವವನೂ ಆದ ನಿನಗೆ ಪ್ರಣಾಮವು. ಸಕಲ ದೇವತೆಗಳಿಗೂ ಒಡೆಯನೇ! ಸರ್ವದೇವತೆಗಳಿಂದ ನಮಸ್ಕಾರಮಾಡಲ್ಪಟ್ಟವನೂ ಸಕಲ ಪ್ರಾಣಿ

ಅಗಸ್ತ್ಯ ಉವಾಚ

ಇತಿ ಸ್ತುತ್ವಾ ತದಾ ಸರ್ವೇ ಬಿಲ್ವಪತ್ರೈರ್ಮಹೇಶ್ವರಂ ।
ಸಂಪೂಜ್ಯ ಭಕ್ತಿಭಾವೇನ ಪ್ರಣೇಮುಸ್ತೇ ಪುನಃ ಪುನಃ ॥೪೫೩॥

ತತಸ್ತಾನಾಹ ಭಗವಾನ್ಭಕ್ತಿಭಾವನತಾನ್ಭಟಾನ್ ।
ಆನಂದಾಮೃತವರ್ಷಿಣ್ಯಾ ಮಧುರಶ್ಲಕ್ಷ್ಣಯಾ ಗಿರಾ ॥೪೫೪॥

॥ ಮಹಾದೇವ ಉವಾಚ ॥

ಭುವಿ ಭುಕ್ತ್ವೇಽಪ್ಸಿತಾನ್ಭೋಗಾನ್ಮಾಂ ಪ್ರಯಾಂತು ತತಃ ಪರಂ ।
ತಾವದ್ಯತ್ನೇನ ಮಾಂ ನಿತ್ಯಮರ್ಚಯಧ್ವಮತಂದ್ರಿತಾಃ ॥೪೫೫॥

ಭಿಲ್ಲೋಽಯಮತಿನಿಷ್ಪಾಪೋ ಮಾಮೇಷ್ಯತ್ಯೇವ ಸರ್ವಥಾ ।
ಏತೇಽಪ್ಯೇತದ್ಧತಾ ವಿಪ್ರಾ ಮಾಮೇಷ್ಯತಿ ನ ಸಂಶಯಃ ॥೪೫೬॥

ಅನೇನ ನಾರ್ಮದಂ ಲಿಂಗಂ ಬಿಲ್ವಶಾಖಾವೃತಂ ಕೃತಂ ।
ಪ್ರಕ್ಷಾಲ್ಯ ತೈರ್ಜಲೈಃ ಶುದ್ಧೈಃ ಸ್ಥಾಪಿತಂ ಚ ನಿಜಾಲಯೇ ॥೪೫೭॥

ಗಳಿಗೂ ಒಡೆಯನೂ, ಎಲ್ಲಾ ಪ್ರಾಣಿಗಳಿಂದಲೂ ನಮಸ್ಕಾರಮಾಡಿಸಿಕೊಳ್ಳುವವನೂ ಆದ ನಿನಗೆ ಪ್ರಣಾಮಮಾಡುವೆನು." ॥೪೫೧-೪೫೨॥

ಹೀಗೆ ಸ್ತೋತ್ರಮಾಡಿ ಆಗ ಎಲ್ಲರೂ ಮಹೇಶ್ವರನನ್ನು ಬಿಲ್ವದಳಗಳಿಂದ ಭಕ್ತಿಪೂರ್ವಕವಾಗಿ ಪೂಜೆಮಾಡಿ ಪುನಃಪುನಃ ಪ್ರಣಾಮಮಾಡಿದರು. ಆಮೇಲೆ ಭಕ್ತಿಯಿಂದ ವಿನೀತರಾಗಿರುವ ಆ ಭಟರನ್ನು ಕುರಿತು ಭಗವಂತನು, ಆನಂದಾಮೃತವನ್ನು ಸುರಿಸುತ್ತಾ, ಮಧುರವೂ ಗಂಭೀರವೂ ಆದ ಮಾತಿನಿಂದ ಹೀಗೆ ನುಡಿದನು. ॥೪೫೩-೪೫೪॥

ಓ ಭಟರೇ! ನೀವು ಭೂಮಿಯಲ್ಲಿ ನಿಮಗೆ ಬೇಕಾದಷ್ಟು ಭೋಗಗಳನ್ನನುಭವಿಸಿ ಅನಂತರ ನನ್ನನ್ನು ಹೊಂದಿರಿ ಅಲ್ಲಿಯವರೆಗೆ ನಿಯಮಬದ್ಧರಾಗಿ ಆಲಸರಾಗದೆ ನಿತ್ಯವೂ ನನ್ನನ್ನು ಪೂಜೆಮಾಡಿರಿ. ಪಾಪರಹಿತನಾದ ಈ ಭಿಲ್ಲನೂ ನನ್ನನ್ನೇ ಖಂಡಿತವಾಗಿಯೂ ಹೊಂದುತ್ತಾನೆ ಅಲ್ಲದೇ ಇವನಿಂದ ಕೊಲ್ಲಲ್ಪಟ್ಟ ಈ ಬ್ರಾಹ್ಮಣರೂ ನನ್ನನ್ನು ಸೇರುವುದರಲ್ಲಿ ಸಂದೇಹವಿಲ್ಲ. ॥೪೫೫-೪೫೬॥

ಈ ಭಿಲ್ಲನು ನಾರ್ಮದಲಿಂಗವನ್ನು ಶುದ್ಧವಾದ ನೀರಿನಿಂದ ತೊಳೆದು ತನ್ನ

ಅನೇನ ಘರ್ಮಸಂತಪ್ತಂ ನಾರ್ಮದಂ ಲಿಂಗಮುತ್ತಮಂ ।
ನಿಜಪರ್ಣಕುಟೀಮಧ್ಯೇ ಸ್ಥಾಪಿತಂ ಯತ್ನಪೂರ್ವಕಂ ॥೪೫೮॥

ಅಯಂ ತು ನಾರ್ಮದಂ ಲಿಂಗಂ ಸ್ಪೃಶತ್ಯನ್ವಹಮಾದರಾತ್ ।
ಪಶ್ಯತ್ಯಪಿ ಪ್ರಯತ್ನೇನ ಸರ್ವದಾ ಸ ವಿಧಾನತಃ ॥೪೫೯॥

ಶಿವಲಿಂಗಾರ್ಚನಫಲಂ ಪ್ರದರ್ಶಯಿತುಮಾದರಾತ್ ।
ಕೃತಂ ಮಯಾದ್ಯ ವೀರಾಣಾಂ ಭವತಾಂ ಶಕ್ತಿಕುಂಠನಂ ॥೪೬೦॥

ಮತ್ತಃ ಸಂಪ್ರಾಪ್ತವೀರ್ಯಾಣಾಂ ಭವತಾಮಪಿ ದುಃಸಹಃ ।
ಶಕ್ತಿರಸ್ಮಿನ್ಕುಂಠಿತೈವ ಮಲ್ಲಿಂಗಾರ್ಚನತತ್ಪರೇ ॥೪೬೧॥

ಮದರ್ಚನಪರೇ ಮರ್ತ್ಯೇ ಯಾದೃಶೇ ತಾದೃಶೇಽಪಿ ವಾ ।
ಪರಾಕ್ರಮೋ ನಾಕ್ರಮತೇ ಧ್ರುವಮೇತದ್ಧ್ರುವಂ ಧ್ರುವಂ ॥೪೬೨॥

ಮನೆಯಲ್ಲಿಟ್ಟು ಬಿಲ್ವವೃಕ್ಷದ ಕೊಂಬೆಗಳಿಂದ ಮುಚ್ಚುತ್ತಿದ್ದನು. ಬಿಸಿಲಿನಿಂದ ಚೆನ್ನಾಗಿ ಕಾದಿದ್ದ ಉತ್ತಮವಾದ ನಾರ್ಮದಲಿಂಗವನ್ನು ಈತನು ನಿಯಮದಿಂದ ತನ್ನ ಪರ್ಣಕುಟೀರದ ಮಧ್ಯದಲ್ಲಿ ಸ್ಥಾಪಿಸಿದ್ದನು. ||೪೫೭-೪೫೮||

ಇವನು ಪ್ರತಿದಿನವೂ ನಾರ್ಮದಲಿಂಗವನ್ನು ಆದರದಿಂದ ಮುಟ್ಟುತ್ತಿದ್ದನಲ್ಲದೇ ನಿಯಮದಿಂದ ವಿಧಿಪೂರ್ವಕವಾಗಿ ಯಾವಾಗಲೂ ದರ್ಶನವನ್ನೂ ಮಾಡುತ್ತಿದ್ದನು. ಶಿವಲಿಂಗಾರ್ಚನೆಯ ಫಲವನ್ನು ತೋರಿಸುವುದಕ್ಕಾಗಿಯೇ ಆದರದಿಂದ ವೀರರಾದ ನಿಮ್ಮ ಶಕ್ತಿಯು ಇವನ ವಿಷಯದಲ್ಲಿ ಕುಂದುವಂತೆ ಈದಿನ ನಾನುಮಾಡಿದೆನು. ||೪೫೯-೪೬೦||

ನನ್ನಿಂದ ಬಲವನ್ನು ಪಡೆದಿರುವ ನಿಮ್ಮಗಳ ಸಹಿಸಲಸಾಧ್ಯವಾದ ಶಕ್ತಿಯೂ ನನ್ನ ಲಿಂಗಪೂಜಾನಿರತನಾದ ಈತನಲ್ಲಿ ಇಂದು ಕುಂದಿಹೋಯಿತು. ನನ್ನ ಪೂಜಾ ನಿರತನಾದ ಮಾನವನು ಹೇಗಾದರೂ ಇರಲಿ, ಅವನಲ್ಲಿ ನಿಮ್ಮ ಪರಾಕ್ರಮವು ಖಂಡಿತವಾಗಿಯೂ ಸಾಗದು. ಇದು ನಿಶ್ಚಯ. ಸತ್ಯವಾಗಿಯೂ ಇದು ನಿಜವೆಂದು ತಿಳಿಯಿರಿ. ||೪೬೧-೪೬೨||

ಛಾಯಾಯಾಂ ಸ್ಥಾಪಯೇದ್ಯಸ್ತು ಶಿವಲಿಂಗಂ ಮದಾತ್ಮಕಂ ।
ಸ ಮಾಮೋಷ್ಯತ್ಯಸಂದಿಗ್ಧಂ ಸಂದಗ್ಧಾಖಿಲಪಾತಕಃ ॥೪೬೩॥

ತೃಣಪರ್ಣಮಯೇ ಗೇಹೇ ದಾರುಗ್ರಾವಮಯೇಽಥವಾ ।
ಶಿವಲಿಂಗಂ ಪ್ರತಿಷ್ಠಾಪ್ಯ ಮುಚ್ಯಂತೇ ಸರ್ವಕಿಲ್ಬಿಷೈಃ ॥೪೬೪॥

ಶಿವಲಿಂಗಂ ಪ್ರತಿಷ್ಠಾಪ್ಯ ಬ್ರಹ್ಮತ್ವಂ ಯೋಽಭಿವಾಂಛತಿ ।
ದಾಸ್ಯಾಮಿ ತಸ್ಮೈ ಬ್ರಹ್ಮತ್ವಂ ತಥಾ ಮೋಕ್ಷಂ ಚ ಸರ್ವಥಾ ॥೪೬೫॥

ಶಿವಲಿಂಗಂ ಪ್ರತಿಷ್ಠಾಪ್ಯ ವಿಷ್ಣುತ್ವಂ ಯೋಽಭಿವಾಂಛತಿ ।
ತಸ್ಮೈ ದಾಸ್ಯಾಮಿ ವಿಷ್ಣುತ್ವಮಂತೇ ಮೋಕ್ಷಂ ಚ ಸರ್ವಥಾ ॥೪೬೬॥

ಶಿವಲಿಂಗಂ ಪ್ರತಿಷ್ಠಾಪ್ಯ ಕಾಷ್ಠಗ್ರಾವಾದಿಮಂದಿರೇ ।
ಸರ್ವಾನ್ಕಾಮಾನವಾಪ್ಯಾಂತೇ ಮಯಿ ಸಂಪ್ರವಿಶಂತಿ ಚ ॥೪೬೭॥

ನನ್ನ ಸ್ವರೂಪವೇ ಆಗಿರುವ ಶಿವಲಿಂಗವನ್ನು ನೆಳಲಿನಲ್ಲಿಡುವವನು ಸಕಲ ಪಾಪಗಳನ್ನೂ ಕಳೆದುಕೊಂಡು ಸಂದೇಹವಿಲ್ಲದೇ ನನ್ನನ್ನೇ ಪಡೆಯುವನು ಹೊಂಡು, ಎಲೆಗಳಿಂದ ರಚಿತವಾದ ಮನೆಯಲ್ಲಾಗಲೀ, ಮರ, ಕಲ್ಲುಗಳಿಂದ ರಚಿತವಾದ ದೇವಾಲಯದಲ್ಲಾಗಲೀ ಶಿವಲಿಂಗವನ್ನು ಪ್ರತಿಷ್ಠೆಮಾಡಿದವನು ಸಕಲ ಪಾತಕಗಳಿಂದಲೂ ಬಿಡುಗಡೆ ಹೊಂದುವನು. ಶಿವಲಿಂಗವನ್ನು ಪ್ರತಿಷ್ಠೆಮಾಡಿದವನು ಬ್ರಹ್ಮಪದವಿಯನ್ನು ಬೇಡಿದರೂ ಅವನಿಗೆ ಕೊಡುವೆನಲ್ಲದೇ, ಕೊನೆಯಲ್ಲಿ ಮೋಕ್ಷವನ್ನೂ ಕೊಡುತ್ತೇನೆ. ॥೪೬೩-೪೬೪-೪೬೫॥

ಶಿವಲಿಂಗವನ್ನು ಪ್ರತಿಷ್ಠೆಮಾಡಿ ವಿಷ್ಣುಪದವಿಯನ್ನೇ ಅಪೇಕ್ಷಿಸಿದವನಿಗೂ ಅದನ್ನು ಕೊಟ್ಟು ಕೊನೆಗೆ ಮೋಕ್ಷವನ್ನೂ ಖಂಡಿತವಾಗಿ ಕೊಡುವೆನು. ಕಟ್ಟಿಗೆ, ಕಲ್ಲು ಮುಂತಾದ ಸಾಧನಗಳಿಂದ ನಿರ್ಮಿತವಾದ ಮನೆಯಲ್ಲಿ ಶಿವಲಿಂಗವನ್ನು ಪ್ರತಿಷ್ಠೆಮಾಡಿದವನು ಸಕಲ ಇಷ್ಟಾರ್ಥಗಳನ್ನೂ ಹೊಂದುವನಲ್ಲದೇ ಕೊನೆಯಲ್ಲಿ ನನ್ನಲ್ಲಿಯೇ ಐಕ್ಯನಾಗುತ್ತಾನೆ. ॥೪೬೬-೪೬೭॥

|| ಅಗಸ್ತ್ಯ ಉವಾಚ ||

ಇತ್ಯುಕ್ತ್ವಾ ಪಾರ್ವತೀನಾಥಃ ಸರ್ವದೇವಶಿಖಾಮಣಿಃ ।
ಸಗಣಃ ಸತ್ವರಂ ಸಾಂಬಸ್ತತ್ರೈವಾಂತರ್ದಧೇ ಶಿವಃ ||೪೬೮||

ಏತಾದೃಶೋ ಮುಕ್ತಿದಾತಾ ಶಂಕರಃ ಕರುಣಾಕರಃ ।
ಪೂಜನೀಯಃ ಪ್ರಯತ್ನೇನ ಧ್ಯಾತವ್ಯಶ್ಚ ಮುಮುಕ್ಷುಭಿಃ ||೪೬೯||

ಸಂಸಾರಸರ್ಪದಷ್ಟಾನಾಂ ಶಿಪಿವಿಷ್ಟಾರ್ಚನಂ ಪರಂ ।
ಸಂಜೀವನೀ ತದನ್ಯತ್ತು ನೈವ ಸಂಜೀವಿನೀ ಧ್ರುವಂ ||೪೭೦||

ಯಃ ಕುರ್ಯಾತ್ಕೃತಪಾಪೋಽಪಿ ಮಹಾದೇವಾರ್ಚನಂ ಮುದಾ ।
ಸ ಸರ್ವೇಭ್ಯೋಽಪಿ ಪಾಪೇಭ್ಯೋ ಮುಕ್ತೋ ಮುಕ್ತಿಂ ಚ ವಿಂದತಿ||೪೭೧||

ತೇಷಾಂ ನ ನರಕಾದ್ಭೀತಿಃ ಸಂಸಾರಾದಪಿ ಸರ್ವಥಾ ।
ಯೇಷಾಮಸ್ತಿ ಮಹಾದೇವೇ ಭಕ್ತಿರವ್ಯಭಿಚಾರಿಣೀ ||೪೭೨||

ಶಿವಭಕ್ತಿಃ ಸ್ವಯಂ ಸಾಕ್ಷಾದ್ಭುಕ್ತಿದಾ ಪರಮುಕ್ತಿದಾ ।
ಸಾ ಭಕ್ತಿರ್ಭೂರಿತಪಸಾ ಧನ್ಯಾನಾಂ ಭವತಿ ದ್ವಿಜ ||೪೭೩||

ಸಕಲ ದೇವತಾಶಿಖಾಮಣಿಯಾದ ಪಾರ್ವತೀರಮಣನು ಹೀಗೆ ನುಡಿದು ತನ್ನ ಗಣಗಳೊಡನೆ ಅಲ್ಲಿಯೇ ಮರೆಯಾದನು. ಮುಕ್ತಿಪ್ರದನೂ, ದಯಾಸಮುದ್ರನೂ ಆದ ಇಂತಹ ಶಂಕರನನ್ನು ನಿಯಮದಿಂದಲೂ ಪೂಜೆ ಮತ್ತು ಧ್ಯಾನಗಳಿಂದಲೂ ಮೋಕ್ಷವನ್ನು ಬಯಸುವವರು ಸಂತೋಷಪಡಿಸಬೇಕು. ||೪೬೮-೪೬೯||

ಸಂಸಾರವೆಂಬ ಹಾವಿನಿಂದ ಕಚ್ಚಲ್ಪಟ್ಟವರಿಗೆ ಶಿಪಿವಿಷ್ಟನೆನಿಸಿದ ಆ ಶಿವನ ಪೂಜೆಯೇ ಶ್ರೇಷ್ಠವಾದ ಸಂಜೀವಿನಿಯಾಗಿರುವುದು. ಅದನ್ನು ಬಿಟ್ಟು ಉಳಿದುದು ಖಂಡಿತವಾಗಿಯೂ ಸಂಜೀವಿನಿಯಾಗಲಾರದು. ಪಾಪವನ್ನು ಮಾಡಿದ್ದರೂ ಸಂತೋಷದಿಂದ ಮಹಾದೇವನ ಪೂಜೆಯನ್ನು ಮಾಡುವವನು ಸಕಲ ಪಾಪಗಳಿಂದಲೂ ಬಿಡುಗಡೆ ಹೊಂದಿ ಮುಕ್ತಿಯನ್ನೂ ಪಡೆಯುತ್ತಾನೆ. ||೪೭೦-೪೭೧||

ಆ ಮಹಾದೇವನಲ್ಲಿ ಶಾಶ್ವತವಾದ ಭಕ್ತಿಯುಳ್ಳವರಿಗೆ ನರಕದಿಂದಾಗಲೀ ಈ ಸಂಸಾರದಿಂದಾಗಲೀ ಖಂಡಿತವಾಗಿಯೂ ಭಯವೇ ಇಲ್ಲ. ಶಿವನಲ್ಲಿಟ್ಟ ಭಕ್ತಿಯು

ಶಿವಾರ್ಚನಾತ್ಪರೋ ಧರ್ಮೋ ನಾಸ್ತಿ ನ ಶ್ರೂಯತೇಽಪಿ ವಾ ।
ಸತ್ಯಮೇತತ್ಪುನಃ ಸತ್ಯಂ ಸತ್ಯಮೇತನ್ನ ಸಂಶಯಃ ॥೪೭೪॥

ಭಜನೀಯೋ ಮಹಾದೇವೋ ಜಪನೀಯಃ ಷಡಕ್ಷರಃ ।
ಸ್ಮರಣೀಯಃ ಶಿವೋ ನಾಥಃ ಪೂಜನೀಯಶ್ಚ ಶಂಕರಃ ॥೪೭೫॥

ಪುರಾ ಬ್ರಹ್ಮಾದಯೋ ದೇವಾ ಹಿಮವತ್ಪರ್ವತಾಶ್ರಯಾಃ ।
ಸಂಪೂಜ್ಯ ದೇವದೇವೇಶಂ ಕೇದಾರೇಶಮುಪಾಶ್ರಿತಾಃ ॥೪೭೬॥

ತದಾನೀಮಾಗತೋ ವಿಷ್ಣುಃ ಶಿವಯಾತ್ರಾಪರಾಯಣಃ ।
ಆಗತ್ಯ ಪೂಜಯಾಮಾಸ ಕೇದಾರೇಶಮುಮಾಪತಿಂ ॥೪೭೭॥

ತತಸ್ತುಷ್ಟಾವ ಗಿರಿಶಂ ರುದ್ರಮಂತ್ರೈರನೇಕಧಾ ।
ತತಃ ಪ್ರದಕ್ಷಿಣೀಕೃತ್ಯ ಪ್ರಣಾಮಾಂಶ್ಚ ಚಕಾರ ಸಃ ॥೪೭೮॥

ಸ್ಪಾತಃ ಇಹದಲ್ಲಿ ಭೋಗಗಳನ್ನೂ ಪರದಲ್ಲಿ ಮುಕ್ತಿಯನ್ನೂ ಕೊಡುವುದು. ಅಯ್ಯಾ ಬ್ರಾಹ್ಮಣನೇ! ಅಂತಹ ಭಕ್ತಿಯು ತುಂಬಾ ತಪಸ್ಸನ್ನು ಮಾಡಿ ಧನ್ಯರಾದವರಿಗೆ ಮಾತ್ರ ಲಭಿಸುವುದೆಂದು ತಿಳಿ. ||೨೭೨-೨೭೩||

ಶಿವಪೂಜೆಗಿಂತಲೂ ಉತ್ತಮವಾದ ಧರ್ಮವು ಇಲ್ಲವೇ ಇಲ್ಲ. ಎಲ್ಲಿಯೂ ಕೇಳಲ್ಪಡುವುದೂ ಇಲ್ಲ. ಇದು ಸತ್ಯ, ಇದು ಸತ್ಯ, ಇದರಲ್ಲಿ ಸಂದೇಹಬೇಡ. ಆ ಮಹಾದೇವನನ್ನು ಭಜನೆಮಾಡಬೇಕು. ಷಡಕ್ಷರಮಂತ್ರವನ್ನು ಜಪಿಸಬೇಕು. ಜಗದೊಡೆಯನಾದ ಆ ಶಿವನನ್ನು ಸ್ಮರಿಸಬೇಕು. ಸದಾ ಶಂಕರನನ್ನು ಪೂಜೆಮಾಡಬೇಕು. ||೪೭೪-೪೭೫||

ಹಿಮಾಲಯ ಪರ್ವತದಲ್ಲಿ ನೆಲಸಿದ್ದ ಬ್ರಹ್ಮನೇ ಮೊದಲಾದ ದೇವತೆಗಳೆಲ್ಲರೂ ದೇವದೇವೋತ್ತಮನಾದ ಕೇದಾರೇಶ್ವರನನ್ನು ಪೂಜಿಸಿ ಆಶ್ರಯಿಸಿದ್ದರು. ಅದೇ ಸಮಯದಲ್ಲಿಯೇ ಶಿವತೀರ್ಥಯಾತ್ರೆ ಮಾಡುವುದರಲ್ಲಿ ನಿರತನಾದ ವಿಷ್ಣುವೂ ಅಲ್ಲಿಗೆ ಬಂದು ಉಮಾರಮಣನಾದ ಆ ಕೇದಾರೇಶ್ವರನನ್ನು ಪೂಜೆಮಾಡಿದನು. ||೪೭೬-೪೭೭||

ಬ್ರಾಹ್ಮಣನೇ, ಅನಂತರ ರುದ್ರಮಂತ್ರಗಳಿಂದ ಆ ಗಿರಿಶನನ್ನು (ಕೈಲಾಸ ಪರ್ವತದಲ್ಲಿಯೇ ಮಲಗಿರುವವನನ್ನು) ಅನೇಕರೀತಿಯಲ್ಲಿ ಸ್ತೋತ್ರಮಾಡಿ, ಪ್ರದಕ್ಷಿಣೆ

ತತೋ ಜಜಾಪ ಹೃಷ್ಟಾತ್ಮಾ ಶೈವಂ ಪಂಚಾಕ್ಷರಂ ಮುದಾ ।
ತತಃ ಪರಂ ಮಹಾರುದ್ರಂ ಜಜಾಪ ಸ ಹರಿರ್ದ್ವಿಜ ॥೪೭೯॥

ಬ್ರಹ್ಮಾದ್ಯಾಸ್ತಂ ಹರಿಂ ದೃಷ್ಟ್ವಾ ಶಿವಪೂಜಾಪರಾಯಣಂ ।
ಪ್ರಣಮ್ಯ ದಂಡವದ್ಭೂಮೌ ಪಪ್ರಚ್ಛುರ್ಧರ್ಮಸಂಹಿತಂ ॥೪೮೦॥

॥ ದೇವಾ ಊಚುಃ ॥

ವಿಷ್ಣೋ ವೇದಾರ್ಥತತ್ವಜ್ಞ ಶಿವಪೂಜಾಪರಾಯಣ ।
ಕಿಂ ಧ್ಯೇಯಂ ಕಿಂ ಪರಂ ಬ್ರಹ್ಮ ವದ ನಿಶ್ಚಿತ್ಯ ಸಾದರಂ ॥೪೮೧॥

॥ ಅಗಸ್ತ್ಯ ಉವಾಚ ॥

ಇತಿ ತದ್ವಚನಂ ಶ್ರುತ್ವಾ ವಿಷ್ಣುರ್ಹೃಷ್ಟಃ ಕೃತಾಂಜಲಿಃ ।
ಪ್ರಣಮ್ಯ ಶಿರಸಾ ಶಂಭುಮುವಾಚ ದ್ವಿಜಸತ್ತಮ ॥೪೮೨॥

ನಮಸ್ಕಾರಗಳನ್ನು ಮಾಡಿದನು. ಆ ಮೇಲೆ ಸಂತುಷ್ಟಾಂತರಂಗನಾಗಿ ಶಿವಪಂಚಾಕ್ಷರ ಮಂತ್ರವನ್ನು ಸಂತೋಷದಿಂದ ಆ ವಿಷ್ಣುವು ಜಪಮಾಡಿದನು. ॥೪೭೮-೪೭೯॥

ಹಾಗೆ ಶಿವಪೂಜಾನಿರತನಾದ ವಿಷ್ಣುವನ್ನು ನೋಡಿ ಬ್ರಹ್ಮಾದಿಋಷಿಗಳೆಲ್ಲರೂ ಆವನಿಗೆ ದಂಡಪ್ರಣಾಮಮಾಡಿ, ಧರ್ಮಸಂಹಿತೆಯನ್ನು ತಿಳಿಸಬೇಕೆಂದು ಪ್ರಾರ್ಥಿಸಿಕೊಂಡರು. ಆಗ ದೇವತೆಗಳು ವಿಷ್ಣುವನ್ನು ಈ ರೀತಿ ಸ್ತುತಿಸಿದರು. ॥೪೮೦॥

"ವೇದಗಳ ಅರ್ಥದ ರಹಸ್ಯವನ್ನರಿತವನೂ, ಶಿವಪೂಜಾನಿರತನೂ ಆದ ವಿಷ್ಣುವೇ, ಧ್ಯಾನಾರ್ಹವಾದ ವಸ್ತುವಾವುದು ? ಉತ್ಕೃಷ್ಟವಾದ ಪರಬ್ರಹ್ಮವಸ್ತು ಸ್ವರೂಪವನ್ನು ನಿಶ್ಚಯಿಸಿ, ಆದರದಿಂದ ನಮಗೆ ತಿಳಿಸು" ಎಂದು ದೇವತೆಗಳು ವಿಷ್ಣುವನ್ನು ನಾನಾರೀತಿ ಪ್ರಾರ್ಥಿಸಿದರು. ॥೪೮೧॥

ಆ ಮಾತನ್ನುಕೇಳಿ ವಿಷ್ಣುವು ಸಂತುಷ್ಟನಾಗಿ ಕೈಮುಗಿದು ತಲೆಬಾಗಿ ಶಿವನಿಗೆ ನಮಸ್ಕಾರಮಾಡಿ ಇಂತೆಂದನೆಂದು ಅಗಸ್ತ್ಯಮುನಿಯು ಬ್ರಾಹ್ಮಣೋತ್ತಮನಿಗೆ ತಿಳಿಸಿದನು. ॥೪೮೨॥

|| ವಿಷ್ಣುರುವಾಚ ||

ಋತಂ ಸತ್ಯಂ ಪರಂ ಬ್ರಹ್ಮ ಪುರುಷಂ ಕೃಷ್ಣಪಿಂಗಳಂ ।
ಊರ್ಧ್ವರೇತಂ ವಿರೂಪಾಕ್ಷಂ ವಿಶ್ವರೂಪಂ ಭಜಾಮ್ಯಹಂ ॥೪೮೩॥

ಶಿವ ಏವ ಪರಂ ಬ್ರಹ್ಮ ಸಚ್ಚಿದಾನಂದಲಕ್ಷಣಃ ।
ತದನ್ಯಂ ನ ಪರಂ ಬ್ರಹ್ಮ ತದತೋ ಧ್ಯೇಯಮಾಸ್ತಿಕೈಃ ॥೪೮೪॥

ನಿರ್ಲಿಪ್ತೋ ನಿರ್ಗುಣೋ ನಿತ್ಯಸ್ತುರೀಯಃ ಶಿವ ಉಚ್ಯತೇ ।
ಸಚ್ಚಿದ್ಘನೋ ನಿರಾಕಾರೋ ನಿರ್ದ್ವಂದ್ವಃ ಸ ನಿರಾಮಯಃ ॥೪೮೫॥

ಸೃಜತ್ಯವತಿ ಹಂತ್ಯಸ್ಮಾನ್ ಸ ಭವತ್ವಾದ್ಯುಪಾದಿಭಿಃ ।
ಅದೃಷ್ಟೇನಾಽಸ್ಮದಾದೀನಾಂ ತಸ್ಯೇಚ್ಛೈವಂ ಪ್ರಜಾಯತೇ ॥೪೮೬॥

ವಾಚಿಕವಾದ ಮತ್ತು ಕಾಯಿಕವಾದ ಸತ್ಯಸ್ವರೂಪನೂ, ಪರಬ್ರಹ್ಮನೂ, ಪುರುಷನೆನಿಸಿ ಕೃಷ್ಣವರ್ಣದಿಂದಲೂ, ಪಾರ್ವತಿಯೆನಿಸಿ ಹೊಂಬಣ್ಣದಿಂದಲೂ ಯುಕ್ತನಾದವನೂ, ಊರ್ಧ್ವಮುಖವಾದ ವೀರ್ಯವುಳ್ಳವನೂ, ಮೂರು ಕಣ್ಣುಗಳಿಂದ ವಿಕಾರವನ್ನು ಹೊಂದಿದ ನೇತ್ರಗಳುಳ್ಳವನೂ, ಜಗತ್ಸ್ವರೂಪನೂ ಆದ ದೇವದೇವ ನನ್ನು ನಾನು ಸದಾ ಭಜಿಸುತ್ತೇನೆ. ಆ ಪರಶಿವನೇ ಸಚ್ಚಿದಾನಂದಸ್ವರೂಪನಾದ ಪರಬ್ರಹ್ಮವಸ್ತುವು. ಅವನನ್ನು ಬಿಟ್ಟು ಉಳಿದವರು ಪರಬ್ರಹ್ಮರಲ್ಲವಾದ್ದರಿಂದ ಆಸ್ತಿಕರಾದವರು ಬೇರೆಯವರನ್ನು ಧ್ಯಾನಮಾಡಬಾರದು. ||೪೮೩-೪೮೪||

ಈ ಪ್ರಪಂಚದಲ್ಲಿ ಸುಖದುಃಖರೂಪವಾದ ಸಂಬಂಧವಿಲ್ಲದವನೂ, ಗುಣ ರಹಿತನೂ, ನಿತ್ಯನೂ, ಶ್ರೇಷ್ಠನೂ ಆ ಶಿವನೇ ಎನಿಸುವನು. ಅವನು (ಸತ್) ಸ್ಥಿರರೂಪದಿಂದ ಪ್ರಕಾಶಿಸುವವನೂ (ಚಿತ್) ಜ್ಞಾನವೆಂಬ ಮೇಘರೂಪಿಯೂ, ಆಕಾರಶೂನ್ಯನೂ, ಅದ್ವಿತೀಯನೂ, ರೋಗರಹಿತನೂ, ಆಗಿ ಪರಮೇಶ್ವರನೇ ಎನಿಸಿರುವನು. ಮಹೇಶ್ವರನು ಬ್ರಹ್ಮ, ವಿಷ್ಣು, ಮಹೇಶ್ವರರೆಂಬ ಆಕೃತಿಗಳಿಂದ ಈ ಪ್ರಪಂಚದ ಸೃಷ್ಟಿ, ಸ್ಥಿತಿ, ಸಂಹಾರರೂಪವಾದ ಕಾರ್ಯಗಳನ್ನು ನಮಗೆ ಕಾಣದಂತೆ ಮಾಡುತ್ತಿರುವನು ಆ ಪರಮಾತ್ಮನ ಇಚ್ಛೆಯಿಂದಲೇ ಈ ರೀತಿ ಸೃಷ್ಟಿಯಾಗುವುದು. ||೪೮೫-೪೮೬||

ಭವತ್ವೋಽಪಾಧಿಮಾಶ್ರಿತ್ಯ ಸೃಜತ್ಯಸ್ಮಾನುಮಾಪತಿಃ ।
ಲೀಲಯೈವ ಸೃಜತ್ಯಸ್ಮಾನ್ ತಸ್ಯಾಯಾಸೋ ನ ಕಶ್ಚಿತ್ ॥೪೮೭॥

ಮೃಡತ್ವೋಽಪಾಧಿಮಾಶ್ರಿತ್ಯ ಸ ಪಾತ್ಯಸ್ಮಾನುಮಾಪತಿಃ ।
ಸ ಲೀಲಯಾಸ್ಮಾನವತಿ ತಸ್ಯಾಯಾಸೋ ನ ಕಶ್ಚಿತ್ ॥೪೮೮॥

ಹರತ್ವೋಽಪಾಧಿಮಾಶ್ರಿತ್ಯ ಸ ಹಂತ್ಯಸ್ಮಾನ್ಪಿನಾಕಧೃಕ್ ।
ಸ ಹಂತ್ಯಸ್ಮಾನ್ ಲೀಲಯೈವ ತಸ್ಯಾಯಾಸೋ ನ ಕಶ್ಚಿತ್ ॥೪೮೯॥

ಶಿವಸ್ಯ ವಸ್ತುತಃ ಕೃತ್ಯಂ ತಸ್ಯ ನಾಸ್ತ್ಯೇವ ಸರ್ವಥಾ ।
ತಥಾಪಿ ಲೀಲಯೈವಾಸ್ಮಾನ್ಸೃಜತ್ಯವತಿ ಹಂತಿ ಚ ॥೪೯೦॥

ಸ್ವತಂತ್ರಸ್ಯ ಮಹೇಶಸ್ಯ ಸರ್ವಜ್ಞಸ್ಯಾಮಿತಾತ್ಮನಃ ।
ಸೃಷ್ಟ್ಯಾದಾವಿತರಾಪೇಕ್ಷಾ ನಾಸ್ತಿ ಸರ್ವಾತ್ಮನಾ ಸುರಾಃ ॥೪೯೧॥

ಸ ತುರೀಯೋಽಸ್ಮದಾದೀನಾಂ ನ ಪ್ರತ್ಯಕ್ಷಃ ಕದಾಚನ ।
ಪರಂತು ವೇದವೇದಾಂತೈಃ ತದ್ರೂಪಮವಗಮ್ಯತೇ ॥೪೯೨॥

ಆ ಉಮಾರಮಣನು ಭವ ಎಂಬ ಉಪಾಧಿಯನ್ನು ಹೊಂದಿ ಲೀಲೆಯಿಂದ ನಮ್ಮನ್ನು ಸೃಷ್ಟಿಮಾಡುವನು. ಈ ಸೃಷ್ಟಿಕಾರ್ಯದಲ್ಲಿ ನಮಗೆ ಕೊಂಚವೂ ಆಯಾಸವೇ ತೋರುವುದಿಲ್ಲ. ಅದೇ ಉಮಾಕಾಂತನು ಮೃಡನೆಂಬ ಸಂಜ್ಞೆಯನ್ನು ಪಡೆದು ಅನಾಯಾಸವಾಗಿ ನಮ್ಮನ್ನು ಕಾಪಾಡುತ್ತಾನೆ. ||೪೮೭-೪೮೮||

ಆ ಪಿನಾಕಪಾಣಿಯಾಗಿ ಶಿವನು ಹರನೆಂಬ ಉಪಾಧಿಯನ್ನಾಶ್ರಯಿಸಿ ಲೀಲೆಯಿಂದ ಅನಾಯಾಸವಾಗಿ ನಮ್ಮನ್ನೆಲ್ಲಾ ಸಂಹಾರಮಾಡುತ್ತಾನೆ. ಈ ಪ್ರಪಂಚದ ಸೃಷ್ಟಿಸ್ಥಿತಿ ಸಂಹಾರರೂಪವಾದ ಕಾರ್ಯಗಳಿಂದ ಆ ಪರಶಿವನಿಗೆ ವಸ್ತುತಃ ಏನೂ ಪ್ರಯೋಜನವಿಲ್ಲ. ಆದರೂ ಆ ದೇವದೇವನು ಲೀಲೆಯಿಂದಲೇ ನಮ್ಮನ್ನು ಸೃಷ್ಟಿಮಾಡಿ, ಪಾಲಿಸಿ, ಕೊನೆಗೆ ಸಂಹಾರಮಾಡುತ್ತಾನೆ. ||೪೮೯-೪೯೦||

ಓ ದೇವತೆಗಳಿರಾ! ಸ್ವತಂತ್ರನೂ, ಎಲ್ಲವನ್ನೂ ತಿಳಿದವನೂ, ಅಪರಿಮಿತ ಪ್ರಭಾವವುಳ್ಳವನೂ ಆದ ಆ ಮಹೇಶ್ವರನಿಗೆ ಈ ಪ್ರಪಂಚದ ಸೃಷ್ಟಿಯೇ ಮೊದಲಾದ ಕಾರ್ಯಗಳಲ್ಲಿ ಖಂಡಿತವಾಗಿಯೂ ಬೇರೊಬ್ಬರ ಸಹಾಯವು ಬೇಕಿಲ್ಲ.

ಶ್ರುತಿಸ್ಮೃತಿಪುರಾಣಾದ್ಯೈಃ ಶಿವೋಽಸ್ತೀತ್ಯುಚ್ಯತೇ ತತಃ ।
ಶ್ರುತ್ಯಾದ್ಯುಕ್ತಪ್ರಮಾಣೇನ ಸ ಸೇವ್ಯಃ ಸರ್ವಸಾಧನೈಃ ॥೪೯೩॥

ಸತತಂ ಯೈಸ್ತಪಸ್ತಪ್ತಂ ಬಹುಧಾ ಬಹುಸಾಧನೈಃ ।
ತೇಷಾಮೇವ ಶಿವೋಽಸ್ತೀತಿ ಶ್ರುತಿಭಿರ್ಜಾಯತೇ ಮತಿಃ ॥೪೯೪॥

ಅನಂತಮವ್ಯಯಂ ಶಾಂತಂ ಶಿವಮಕ್ಷರಮದ್ವಯಂ ।
ಅವಿಜ್ಞಾಯಾನ್ಯಥಾ ಜ್ಞಾತ್ವಾ ಭವಂತ್ಯತ್ಯಂತದುಃಖಿತಾಃ ॥೪೯೫॥

ಶಿವೋಽಸ್ತಿ ನಿರ್ಗುಣೋಽನಂತಸ್ತುರೀಯ ಇತಿ ಧೀರಪಿ ।
ಸಹಸಾ ನ ಭವತ್ಯೇವ ಸಂಸಾರಾವಿಷ್ಟಚೇತಸಾಂ ॥೪೯೬॥

ನ ಯೇಷಾಂ ವಿಷಯಾಸಕ್ತಿರ್ಯೇ ಚ ನಿರ್ದಗ್ಧಕಲ್ಮಷಾಃ ।
ತೇಷಾಮೇವ ಶಿವೋಽಸ್ತೀತಿ ಬುದ್ಧಿರ್ಭವತಿ ಶಾಶ್ವತೀ ॥೪೯೭॥

ಪರಮಶ್ರೇಷ್ಠನಾದ ಆತನು ನಮಗೆ ಯಾವಾಗಲೂ ಗೋಚರಿಸುವುದಿಲ್ಲ. ಆದರೆ ವೇದಗಳು ಮತ್ತು ವೇದಾಂತಗಳಿಂದ ಅವನ ರೂಪವು ಗೋಚರವಾಗುತ್ತದೆ. ॥೪೯೧-೪೯೨॥

ಶ್ರುತಿ, ಸ್ಮೃತಿ ಮತ್ತು ಪುರಾಣವೇ ಮೊದಲಾದವುಗಳಿಂದ ಶಿವನಿರುವನೆಂದು ಹೇಳಲ್ಪಡುವುದರಿಂದ ಆ ಶ್ರುತಿಯೇ ಮೊದಲಾದವುಗಳನ್ನೇ ಪ್ರಮಾಣವಾಗಿಟ್ಟು ಕೊಂಡು ಶಿವನನ್ನು ಎಲ್ಲಾ ಸಾಧನಗಳಿಂದಲೂ ಸೇವೆಮಾಡಬೇಕು. ಅನವರತವೂ ಅನೇಕ ಸಲಕರಣೆಗಳನ್ನೊದಗಿಸಿಕೊಂಡು ಶಿವನನ್ನುದ್ದೇಶಿಸಿ ತಪಸ್ಸು ಮಾಡಿದವರಿಗೇ ಆ ಪರಶಿವನಿರುವನೆಂಬ ಶ್ರುತಿಯಲ್ಲಿ ನಂಬಿಕೆಯುಂಟಾಗುತ್ತದೆ. ॥೪೯೩-೪೯೪॥

ಅಂತವಿಲ್ಲದವನೂ, ನಾಶರಹಿತನೂ, ಶಾಂತಸ್ವರೂಪನೂ, ಚ್ಯುತಿಯಿಲ್ಲದವನೂ ಮತ್ತು ಅದ್ವಿತೀಯನೂ ಆದ ಶಿವನನ್ನು ತಿಳಿಯದೇ ವಿಪರೀತಭಾವನೆಯಿಂದ ಕೂಡಿದ ಜನಗಳು ತುಂಬಾ ದುಃಖಹೊಂದುತ್ತಾರೆ. ಈ ಸಂಸಾರದಲ್ಲಿ ತೊಡಗಿದ ಮನಸ್ಸುಳ್ಳವರಿಗೆ ಗುಣರಹಿತನೂ, ನಾಶವಿಲ್ಲದವನೂ, ಮೋಕ್ಷಸ್ವರೂಪನೂ ಆದ ಶಿವನಿರುವನೆಂಬ ಬುದ್ಧಿಯು ಜಾಗ್ರತೆಯಾಗಿ ಉಂಟಾಗುವುದೇ ಇಲ್ಲ. ॥೪೯೫-೪೯೬॥

ಪ್ರಕ್ಚಂದನ ವನಿತಾದಿ ವಿಷಯಗಳಲ್ಲಿ ಆಸಕ್ತಿಯಿಲ್ಲದೇ ಪಾಪರಹಿತರಾಗಿ ಶುದ್ಧ

ಧರ್ಮಾಸ್ತಪಾಂಸಿ ದಾನಾನಿ ಯಾಗಾಶ್ಚ ವಿವಿಧಾಃ ಸುರಾಃ
ಶಿವೋಽಸ್ತೀತ್ಯಸ್ತಿ ಯಾ ಬುದ್ಧಿಸ್ತದರ್ಥಮಿತಿ ಮನ್ಯತಾಂ ॥೪೯೮॥

ಶಿವೋಽಸ್ತೀತಿ ವಿದಿತ್ವಾದೌ ಶ್ರುತ್ಯುಕ್ತಾಃ ಶಿವವಿಗ್ರಹಾಃ ।
ಧ್ಯಾತವ್ಯಾಃ ಪೂಜನೀಯಾಶ್ಚ ಮುಮುಕ್ಷುಭಿರಹರ್ನಿಶಂ ॥೪೯೯॥

ವಿಶ್ವಂ ಭೂತಂ ಭುವನಂ ಚಿತ್ರಮೇತತ್
ಜಾತಂ ಭೂಯೋ ಜಾಯಮಾನಂ ಚ ಭೂಯಃ ।
ಏತತ್ಸರ್ವಂ ರುದ್ರ ಏವೇತಿ ಮತ್ವಾ
ಭೂಯೋಭೂಯೋ ಅರ್ಚನೀಯೋ ಮಹೇಶಃ ॥೫೦೦॥

ನೇಹೇಶಾನ್ಯತ್ಸರ್ವಥಾ ವಿಶ್ವರೂಪೋ
ವಿಶ್ವವ್ಯಾಪೀ ಸರ್ವಮೇತನ್ಮಹೇಶಃ ।
ತಸ್ಮಾದ್ಧ್ಯಾತ್ವಾ ಸರ್ವಭಾವೇನ ಸರ್ವೈಃ
ಭೂಯೋ ಭೂಯಃ ಪೂಜನೀಯೋ ಮಹೇಶಃ ॥೫೦೧॥

ಮನಸ್ಸಿನಿಂದ ಯುಕ್ತರಾಗಿರುವವರಿಗೆ ಆ ಶಿವನಿರುವನೆಂಬ ಬುದ್ಧಿಯು ಶಾಶ್ವತವಾಗಿ ಉಂಟಾಗುವುದು. ನಾನಾವಿಧವಾದ ಧರ್ಮಗಳು, ತಪಸ್ಸು, ದಾನ, ಬಗೆಬಗೆಯ ಯಾಗಗಳು ಇವುಗಳೆಲ್ಲವೂ ಆ ಶಿವನಿರುವನೆಂಬ ತಿಳಿವಳಿಕೆಯು ದೃಢವಾಗುವುದಕ್ಕೋಸ್ಕರವೇ ಎಂದು ತಿಳಿಯಿರಿ. ॥೪೯೭-೪೯೮॥

ಮೋಕ್ಷವನ್ನು ಬಯಸುವವರು ಮೊದಲು ಶಿವನಿದ್ದಾನೆಂಬುದನ್ನು ತಿಳಿದು ವೇದೋಕ್ತವಾದ ಶಿವನ ಮೂರ್ತಿಗಳನ್ನು ಹಗಲಿರುಳೂ ಧ್ಯಾನಮಾಡುತ್ತಾ ಪೂಜಿಸಬೇಕು. ಆಶ್ಚರ್ಯಕರವಾದ, ಭೂತ, ಭವಿಷ್ಯದ್ವರ್ತಮಾನರೂಪವಾದ ವಿಶೇಷದಿಂದ ತೋರುವ ಈ ಜಗತ್ತೆಲ್ಲವೂ ಆ ರುದ್ರನೇ ಎಂಬುದಾಗಿ ತಿಳಿದು, ಪದೇ ಪದೇ ಆ ಮಹೇಶ್ವರನನ್ನು ಪೂಜೆಮಾಡಬೇಕು. ೪೯೯-೫೦೦॥

ಈ ಪ್ರಪಂಚದಲ್ಲಿ ಈಶ್ವರನಿಗಿಂತಲೂ ಖಂಡಿತವಾಗಿ ಬೇರೆ ಯಾವುದೂ ಇಲ್ಲ. ಜಗತ್ಸ್ವರೂಪನೂ, ಜಗದ್ವ್ಯಾಪಿಯೂ ಆದ ಮಹೇಶ್ವರನೇ ಎಲ್ಲವೂ ಆಗಿರುತ್ತಾನೆ. ಆದ್ದರಿಂದ ಎಲ್ಲಾ ರೀತಿಯಿಂದಲೂ ಶಿವನೇ ಸರ್ವರೂಪನೆಂಬುದಾಗಿ ತಿಳಿದು, ಎಲ್ಲರೂ ಪದೇ ಪದೇ ಆ ಮಹೇಶ್ವರನನ್ನು ತಪ್ಪದೆ ಪೂಜೆಮಾಡಬೇಕು. ॥೫೦೧॥

ರುದ್ರಂ ಮತ್ವಾ ಸರ್ವಭಾವೇನ ಸರ್ವಂ
ಸರ್ವಾಶಾಸ್ಯಂ ನಿರ್ಗುಣಂ ನಿಷ್ಕಲಂ ಚ ।
ಸಂಸೇವಂತೇ ಸಾಧವಃ ಸರ್ವಥಾತೋ
ಭೂಯೋಭೂಯಃ ಪೂಜನೀಯೋ ಮಹೇಶಃ ॥೫೦೨॥

ರುದ್ರಃ ಸರ್ವಂ ರುದ್ರ ಏಕತ್ವಮಾಹುಃ
ಏಕೋ ರುದ್ರೋ ನ ದ್ವಿತೀಯಾಯ ತಸ್ಥೇ ।
ನೇಶಾದನ್ಯತ್ಕಿಂಚಿದಸ್ತೀತಿ ನಿತ್ಯಂ
ಭೂಯೋಭೂಯಃ ಪೂಜನೀಯೋ ಮಹೇಶಃ ॥೫೦೩॥

ಯಂ ವೇದಾಂತಾ ನೈವ ಜಾನಂತಿ ಸಿದ್ಧಾಃ
ಯಂ ಯೋಗೀಂದ್ರಾ ನೈವ ಜಾನಂತಿ ವಿಪ್ರಾಃ ।
ತಂ ಚಿದ್ರೂಪಂ ಜ್ಞಾತುಮಿಚ್ಛಂತ್ಯತೋಽಯಂ
ಭೂಯೋ ಭೂಯಃ ಪೂಜನೀಯೋ ಮಹೇಶಃ ॥೫೦೪॥

ಎಲ್ಲರಿಂದಲೂ ಸ್ತೋತ್ರಮಾಡಲ್ಪಡುವವನೂ, ಗುಣರಹಿತನೂ, ಕಲಂಕ ಶೂನ್ಯನೂ ಆದ ಆ ರುದ್ರನನ್ನೇ ಎಲ್ಲಾ ರೀತಿಯಿಂದಲೂ ಸಕಲಸ್ವರೂಪನೆಂಬುದಾಗಿ ತಿಳಿದು, ಸತ್ಪುರುಷರು ಆ ಶಿವನನ್ನು ಸೇವೆಮಾಡುವರು. ಆದ್ದರಿಂದ ಸರ್ವರೀತಿ ಯಿಂದಲೂ ಪದೇ ಪದೇ ಆ ಮಹೇಶನನ್ನೇ ಪೂಜೆಮಾಡಬೇಕು. ॥೫೦೨॥

ಸಕಲ ಪ್ರಪಂಚವೂ ಆ ರುದ್ರನೇ. ಆ ರುದ್ರನನ್ನೇ ಅದ್ವಿತೀಯನೆಂದು ಹೇಳುವರು. ಅದ್ವಿತೀಯನಾದ ರುದ್ರನು ಎರಡನೆಯದಾದ ಮತ್ತೊಂದು ವ್ಯಕ್ತಿ ಗೋಸ್ಕರ ಇರುವುದಿಲ್ಲ. ಆ ಈಶ್ವರನಿಗಿಂತ ಬೇರೆಯಾವುದೂ ಇಲ್ಲವೆಂದೇ ತಿಳಿದು ನಿತ್ಯವೂ ಪದೇಪದೇ ಆ ಮಹೇಶ್ವರನನ್ನು ಪೂಜೆಮಾಡಬೇಕು. ॥೫೦೩॥

ವೇದಾಂತಗಳೂ, ಸಿದ್ಧಪುರುಷರೂ, ಯೋಗಿಶ್ರೇಷ್ಠರಾದ ಬ್ರಾಹ್ಮಣರೂ ಸಹ ಯಾರನ್ನು ತಿಳಿಯಲಾರರೋ (ಯಾವ ಸ್ವರೂಪವನ್ನರಿಯಲಾರರೋ) ಅಂತಹ ಚಿತ್ಸ್ವರೂಪನಾದ ದೇವದೇವನನ್ನು ತಿಳಿಯಲು ಬ್ರಾಹ್ಮಣರು ಅಪೇಕ್ಷಿಸುವವರಾದ್ದ ರಿಂದ ಆ ಮಹೇಶ್ವರನನ್ನು ಪದೇಪದೇ ಪೂಜೆಮಾಡಬೇಕು. ॥೫೦೪॥

ಯೋಽಯಂ ಜ್ಞಾತ್ವೈನಾಮೃತತ್ವಂ ಪ್ರಯಾತಿ
ಧ್ವಸ್ತಾನಂತಾಘೋರಪಾಪಃ ಕ್ಷಣೇನ
ಸೋಽಯಂ ಸೋಮಃ ಸೋಮರೂಪೋಽಖಿಲಾತ್ಮಾ ।
ಭೂಯೋ ಭೂಯಃ ಪೂಜನೀಯೋ ಮಹೇಶಃ ॥೫೦೫॥

ಯೋ ನಿರ್ಲಿಪ್ತೋ ನಿರ್ಗುಣೋಽಪಿ ತ್ರಿನೇತ್ರೋ
ಯೋ ನಿರ್ಬಾಹುಃ ಸ್ವರ್ಣಬಾಹುಃ ಸ್ವತಂತ್ರಃ ।
ಯೋ ನೀರೂಪೋತಿಸ್ವರ್ಣರೂಪೋ ಯ ಏಷೋ
ಭೂಯೋ ಭೂಯಃ ಪೂಜನೀಯೋ ಮಹೇಶಃ ॥೫೦೬॥

ನಿರ್ವರ್ಣೋಽಪಿ ಸ್ವರ್ಣವರ್ಣೋ ಯ ಆಸೀ
ದ್ಯೋಂಬಾರೂಪೋಽಪ್ಯಂಬಿಕಾನಾಥ ಆಸೀತ್ ।
ದೇವಾಧೀಶಃ ಸೋಽಯಮಜ್ಞೇಯತತ್ವೋ
ಭೂಯೋ ಭೂಯಃ ಪೂಜನೀಯೋ ಮಹೇಶಃ ॥೫೦೭॥

ಯಾವ ಮಹಾಪುರುಷನ ಜ್ಞಾನಮಾತ್ರದಿಂದ ಮಾನವನು ದೇವಪದವಿಯನ್ನು ಹೊಂದುತ್ತಾನೆಯೋ, ಯಾರ ಸ್ಮರಣೆಯಿಂದ ಭಯಂಕರವಾದ ಪಾಪಗಳೆಲ್ಲಾ ಕ್ಷಣಕಾಲದಲ್ಲಿ ನಾಶವಾಗಿಬಿಡುವುವೋ, ಅಂತಹ ಸೋಮನೇ (ಉಮಾರಮಣನೇ) ಸಕಲ ಜಗತ್ಸ್ವರೂಪನು. ಆ ಸೋಮನೆನಿಸಿದ ಮಹೇಶ್ವರನನ್ನೇ ಪದೇ ಪದೇ ಪೂಜೆಮಾಡಬೇಕು. ॥೫೦೫॥

ನಿರ್ಲಿಪ್ತನೂ, ಗುಣರಹಿತನೂ, ಮುಕ್ಕಣ್ಣನೂ, ಬಾಹುಶೂನ್ಯನೂ, ಸುವರ್ಣವರ್ಣದ ತೋಳುಳ್ಳವನೂ, ಸ್ವತಂತ್ರನೂ, ರೂಪರಹಿತನಾದರೂ ಚಿನ್ನದವರ್ಣದಿಂದ ಶೋಭಿಸುವ ರೂಪವುಳ್ಳವನೂ ಆದ ಈ ಮಹೇಶ್ವರನನ್ನೇ ಪದೇಪದೇ ಪೂಜಿಸಬೇಕು. ॥೫೦೬॥

ವರ್ಣಶೂನ್ಯನಾದರೂ ಸುವರ್ಣವರ್ಣವುಳ್ಳವನೂ, ಅಂಬಿಕಾರೂಪನೇ ಆದರೂ ಆ ಅಂಬಿಕೆಯ ಪತಿಯೆನಿಸಿರುವವನೂ, ದೇವತೆಗಳಿಗೆಲ್ಲಾ ಸಾರ್ವಭೌಮನೂ, ಗೋಚರವಾಗದ ನಿಜಸ್ವರೂಪವುಳ್ಳವನೂ ಆದ ಮಹೇಶ್ವರನನ್ನೇ ಪದೇಪದೇ ಸರ್ವರೂ ಪೂಜೆಮಾಡಬೇಕು. ॥೫೦೭॥

ಯಸ್ಯೇಚ್ಛಾತೋಽಸ್ಯಾಕಮುತ್ಪತ್ತಿರಾಸೀ
ದ್ಯಸ್ಯೇಚ್ಛಾತೋ ಜಾಯತೇ ರಕ್ಷಣಂ ಚ ।
ಯಸ್ಯೇಚ್ಛಾತೋ ಭಾವಿನಾಶಃ ಸ ನಿತ್ಯೋ
ಭೂಯೋ ಭೂಯಃ ಪೂಜನೀಯೋ ಮಹೇಶಃ ॥೫೦೮॥

ಯಸ್ಮಾದ್ಭೀತೋ ವಾತಿ ವಾಯುಃ ಸದಾಯಂ
ಯಸ್ಮಾದ್ಭೀತೋದೇತಿ ಸೂರ್ಯೋಽಪಿ ನಿತ್ಯಂ ।
ಯಸ್ಮಾದ್ಭೀತಾ ವಹ್ನಿಮುಖ್ಯಾಃ ಸ ಶುದ್ಧಾಃ
ಭೂಯೋ ಭೂಯಃ ಪೂಜನೀಯೋ ಮಹೇಶಃ ॥೫೦೯॥

ಯಸ್ಯಾರ್ಚಾತೋ ಲಭ್ಯತೇ ಸರ್ವಪೃಥ್ವೀ
ಯಸ್ಯಾರ್ಚಾತೋ ಲಭ್ಯತೇ ಮೋಕ್ಷಲಕ್ಷ್ಮೀಃ ।
ಯಸ್ಯಾರ್ಚಾತೋಽನೇಕಧರ್ಮೌಘಸಿದ್ಧಿಃ
ಸೋಽಯಂ ಶಂಭುಃ ಪೂಜನೀಯೋಽನಿಶಂ ಚ ॥೫೧೦॥

ಪುರಾ ರೇವಾತಟೇ ಕಶ್ಚಿದ್ಬ್ರಾಹ್ಮಣೋ ಬ್ರಹ್ಮವಿತ್ತಮಃ ।
ಬಹುಕಾಲಂ ಸ್ಥಿತಃ ಶಂಭುಂ ಲಿಂಗರೂಪಿಣಮರ್ಚಯನ್ ॥೫೧೧॥

ಯಾವ ದೇವದೇವನ ಇಚ್ಛಾಮಾತ್ರದಿಂದಲೇ ನಮ್ಮ ಸೃಷ್ಟಿಯೂ, ಪಾಲನೆಯೂ ಆಗಿ ಮುಂದೆ ನಾಶವೂ ಉಂಟಾಗುವುದೋ ಅಂತಹ ನಿತ್ಯಸ್ವರೂಪನಾದ ಮಹೇಶ್ವರನನ್ನೇ ಪದೇಪದೇ ಪೂಜಿಸಬೇಕು. ॥೫೦೮॥

ಯಾರ ಭಯದಿಂದ ವಾಯುವು ಯಾವಾಗಲೂ ಬೀಸುತ್ತಿರುವನೋ, ಸೂರ್ಯನೂ ಹೆದರಿ ನಿತ್ಯವೂ ಉದಯವಾಗುತ್ತಿರುವನೋ, ಅಗ್ನಿಯನ್ನೇ ಮುಖರೂಪವಾಗಿ ಹೊಂದಿರುವ ಶುದ್ಧರಾದ ದೇವತೆಗಳೂ ಯಾರಿಗೆ ಹೆದರಿ ಭಯಪಡುತ್ತಿರುವರೋ, ಅಂತಹ ಮಹೇಶ್ವರನನ್ನು ಪದೇಪದೇ ಪೂಜೆಮಾಡಬೇಕು. ॥೫೦೯॥

ಸಕಲ ಭೂಮಂಡಲವೂ, ಮೋಕ್ಷಸಂಪತ್ತೂ ಮತ್ತು ಅನೇಕ ಧರ್ಮಸಮೂಹಗಳ ಸಿದ್ಧಿಯೂ ಯಾರಪೂಜೆಯಿಂದ ಉಂಟಾಗುವುವೋ ಅಂತಹ ಶಂಭುವನ್ನು ಅನವರತವೂ ಪೂಜೆಮಾಡಬೇಕು. ॥೫೧೦॥

ಹಿಂದೆ ಬ್ರಹ್ಮಜ್ಞಾನಿಗಳಲ್ಲಿ ಶ್ರೇಷ್ಠನಾದ ಒಬ್ಬ ಬ್ರಾಹ್ಮಣನು ಲಿಂಗರೂಪಿಯಾದ ಶಂಭುವನ್ನು ಪೂಜಿಸುತ್ತಾ ಬಹಳಕಾಲ ಇದ್ದನು. ಅದೇ ಸ್ಥಳದಲ್ಲಿ ಒಬ್ಬ

ತತ್ರ ಕಶ್ಚಿನ್ಮಹಾಪಾಪೀ ತಂ ದೃಷ್ಟ್ವಾ ದ್ವಿಜಪುಂಗವಂ ।
ಪ್ರಣಮ್ಯ ದಂಡವದ್ಭೂಮೌ ಕೃತಾಂಜಲಿರಭಾಷತ ॥೫೧೨॥

ಶಿವಾರ್ಚನಪರ ಶ್ರೀಮನ್ಕಿಂ ಮಹಾಪಾಪನಾಶಕಂ ।
ಮಯಾ ಕೃತಾನಿ ಪಾಪಾನಿ ಜ್ಞಾತ್ವಾಪಿ ಪ್ರತಿವಾಸರಂ ॥೫೧೩॥

॥ ದ್ವಿಜ ಉವಾಚ ॥

ತ್ವಯಾದ್ಯ ನರ್ಮದಾ ದೃಷ್ಟಾ ಶಿವಲಿಂಗಸಮಾಶ್ರಿತಾ ।
ತವ ಪಾಪಾನಿ ನಷ್ಟಾನಿ ರೇವಾದರ್ಶನಮಾತ್ರತಃ ॥೫೧೪॥

ಯೇನೈಕಮಪಿ ದೃಷ್ಟಂ ಸ್ಯಾಚ್ಛಿವಲಿಂಗಂ ಶಿವಾತ್ಮಕಂ ।
ತಸ್ಯಾಪ್ಯೇನಾಂಸಿ ನಶ್ಯಂತಿ ವಿವಿಧಾನ್ಯಪಿ ತತ್ಕ್ಷಣೇ ॥೫೧೫॥

ಶಿವಲಿಂಗಾನ್ಯಮೇಯಾನಿ ರೇವಾಯಾಂ ಸಂತಿ ಸರ್ವತಃ
ಏತೇಷಾಂ ದರ್ಶನೇ ಜಾತೇ ವಿನಶ್ಯಂತ್ಯಘಕೋಟಯಃ ॥೫೧೬॥

ಮಹಾಪಾಪಿಯು ಆ ಬ್ರಾಹ್ಮಣೋತ್ತಮನನ್ನು ಕಂಡು ನೆಲದಮೇಲೆ ದಂಡಪ್ರಣಾಮ ಮಾಡಿ ಕೈಮುಗಿದುಕೊಂಡು ಹೀಗೆ ಮಾತನಾಡಿದನು. ||೫೧೧-೫೧೨||

ತೇಜಸ್ವಿಯೂ ಶಿವಪೂಜಾನಿರತನೂ ಆದ ಬ್ರಾಹ್ಮಣನೇ! ಮಹಾ ಪಾಪಗಳನ್ನು ನಾಶಮಾಡುವುದಾವುದು? ನಾನು ತಿಳಿದೂ ತಿಳಿದೂ ಪ್ರತಿದಿನವೂ ಅನೇಕ ಮಹಾಪಾಪಗಳನ್ನು ಮಾಡಿರುವೆನು. ||೫೧೩||

ಅಯ್ಯ ಬ್ರಾಹ್ಮಣನೇ! ಇಂದು ನೀನು ಶಿವಲಿಂಗಗಳಿಗೆ ಆಶ್ರಯವಾಗಿರುವ ನರ್ಮದಾನದಿಯನ್ನು ದರ್ಶನಮಾಡಿರುವೆ. ಆ ರೇವಾನದಿಯ ದರ್ಶನಮಾತ್ರದಿಂದ ನಿನ್ನ ಪಾಪವೆಲ್ಲವೂ ನಾಶವಾಯಿತೆಂದು ತಿಳಿ. ಒಂದೇ ಶಿವಲಿಂಗವನ್ನು ದರ್ಶನ ಮಾಡಿದವನಿಗೂ ನಾನಾವಿಧವಾದ ಪಾಪಗಳೆಲ್ಲವೂ ಆ ಕೂಡಲೇ ನಾಶವಾಗುವುವು. ||೫೧೪-೫೧೫||

ಈ ರೇವಾನದಿಯಲ್ಲಿ ಅಪರಿಮಿತವಾದ ಅನೇಕ ಶಿವಲಿಂಗಗಳು ಎಲ್ಲಾ ಕಡೆಯಲ್ಲಿಯೂ ವಸ್ತುತಃ ಇರುವುವು. ಇವುಗಳ ದರ್ಶನವಾದರೆ ಪಾಪರಾಶಿಗಳೆಲ್ಲವೂ ಖಂಡಿತವಾಗಿಯೂ ನಾಶವಾಗುವುವು. ಸಾಮಾನ್ಯವಾಗಿ ಶಿವಲಿಂಗದ ಸ್ಮರಣೆಯಿಂದಲೇ

ವಸ್ತುತಃ ಶಿವಲಿಂಗಸ್ಯ ಸ್ಮರಣೇನಾಪಿ ಸತ್ವರಂ ।
ಪಾತಕಾನಿ ವಿನಶ್ಯಂತಿ ವಿಚಿತ್ರಾಣ್ಯಮಿತಾನಿ ಚ ॥೫೧೭॥

ಶಿವಲಿಂಗಪ್ರದೇಶೋತ್ಥವಾಯುಸ್ಪರ್ಶೋಽಪಿ ತತ್ಕ್ಷಣೇ ।
ವಿನಾಶಯತಿ ಪಾಪಾನಿ ಘೋರಾಣಿ ವಿವಿಧಾನ್ಯಪಿ ॥೫೧೮॥

ಶಿವಲಿಂಗಾಶ್ರಿತಂ ದೇಶಂ ಯಃ ಪ್ರಾಪ್ತುಂ ಯತತೇ ಯದಾ ।
ತದೈವಾಖಿಲಪಾಪಾನಿ ಪ್ರಣಶ್ಯಂತ್ಯಸ್ತಿ ಹಿ ಶ್ರುತಿಃ ॥೫೧೯॥

ಅಸ್ಮಾಕಂ ಶಿವಭಕ್ತಾನಾಂ ಶ್ರುತಿಪ್ರಾಮಾಣ್ಯವಾದಿನಾಂ ।
ಧರ್ಮಾಧರ್ಮವಿಚಾರಾರ್ಥಂ ಶ್ರುತಿರೇವಾವಲಂಬನಂ ॥೫೨೦॥

ಶಿವೋಕ್ತಾಃ ಶ್ರುತಯೋಽಸ್ಮಾಭಿಃ ಶಿವಭಕ್ತೈಃ ಸಮಾದೃತಾಃ ।
ಶಿವೋಕ್ತತ್ವೇನ ವೇದೇಷು ಪ್ರಾಮಾಣ್ಯಂ ಜ್ಞಾತಮಾಸ್ತಿಕೈಃ ॥೫೨೧॥

ಶಿವಲಿಂಗಾನಿ ದೃಷ್ಟಾನಿ ಸಾಯಮದ್ಯ ತ್ವಯಾಽಧುನಾ ।
ಅತಃ ಪರಂ ಪಾತಕಾನಿ ನ ಸ್ಥಾಸ್ಯಂತಿ ತ್ವಯಿ ಧ್ರುವಂ ॥೫೨೨॥

ವಿಚಿತ್ರವೂ ಅಪರಿಮಿತವೂ ಆದ ಪಾಪಗಳೂ ಕೂಡಲೇ ನಾಶವಾಗಿಬಿಡುವುವು. ॥೫೧೬-೫೧೭॥

ಶಿವಲಿಂಗವಿರುವ ಜಾಗದಲ್ಲಿ ಹುಟ್ಟಿದ ವಾಯುವಿನ ಸ್ಪರ್ಶವೂ ಸಹ ಆ ಕೂಡಲೇ ಭಯಂಕರವಾದ ಅನೇಕವಿಧದ ಪಾಪಗಳನ್ನೂ ಪರಿಹರಿಸುವುದು. ಶಿವಲಿಂಗವಿರುವ ಸ್ಥಳವನ್ನು ಹೊಂದಲು ಮಾನವನು ಪ್ರಯತ್ನಿಸಿದಾಗಲೇ ಎಲ್ಲಾ ಪಾಪಗಳೂ ನಾಶವಾಗುವುವೆಂದು ಶ್ರುತಿಯಿರುವುದು. ॥೫೧೮-೫೧೯॥

ವೇದಪ್ರಾಮಾಣ್ಯವನ್ನು ಹೇಳುವ ಶಿವಭಕ್ತಿಯುಳ್ಳ ನಮಗೆ, ಧರ್ಮ ಮತ್ತು ಅಧರ್ಮಗಳನ್ನು ವಿಚಾರಮಾಡುವುದಕ್ಕೆ ಆ ಶ್ರುತಿಯೇ ಆಶ್ರಯವಾಗಿದೆ. ಶಿವನಿಂದ ಉಚ್ಚರಿಸಲ್ಪಟ್ಟಿರುವ ಆ ವೇದಗಳು ಶಿವಭಕ್ತರಾದ ನಮ್ಮಿಂದ ಉದ್ಧೃತವಾಗಿವೆ. ವೇದಗಳು ಶಿವನಿಂದ ಹೇಳಲ್ಪಟ್ಟಿರುವುದರಿಂದಲೇ ಅವು ಪ್ರಾಮಾಣಿಕಗಳೆಂದು ಆಸ್ತಿಕರು ತಿಳಿದಿರುವರು. ॥೫೨೦-೫೨೧॥

ಈಗ ಸಾಯಂಕಾಲದ ವೇಳೆಯಲ್ಲಿ ನೀನು ಶಿವಲಿಂಗಗಳನ್ನು ನೋಡಿರುವೆ. ಆದ್ದರಿಂದ ಇನ್ನು ಮುಂದೆ ನಿನ್ನಲ್ಲಿ ಖಂಡಿತವಾಗಿ ಯಾವ ಪಾಪವೂ ನಿಲ್ಲುವುದಿಲ್ಲ

ಯಾನಿ ಪಾಪಾನ್ಯನಂತಾನಿ ಪ್ರತಿಜನ್ಮಾರ್ಜಿತಾನ್ಯಪಿ ।
ತಾನಿ ಸದ್ಯೋ ವಿನಶ್ಯಂತಿ ಸಾಯಂ ಶಂಕರದರ್ಶನಾತ್ ॥೫೨೩॥

ಸಾಯಂಕಾಲೇ ಮನುಷ್ಯಾಣಾಂ ದುರ್ಲಭಂ ಶಿವದರ್ಶನಂ ।
ಮಹೇಶದರ್ಶನಂ ಸಾಯಂ ದೇವಾನಾಮಪಿ ದುರ್ಲಭಂ ॥೫೨೪॥

ಯಸ್ಮಿನ್ಕೃಪಾ ಮಹೇಶಸ್ಯ ಪೂರ್ಣಾ ತಿಷ್ಠತಿ ಸರ್ವದಾ ।
ತಸ್ಯ ಸಾಯಂ ಮಹೇಶಸ್ಯ ದರ್ಶನಂ ಭವತಿ ಧ್ರುವಂ ॥೫೨೫॥

ಸರ್ವಥಾ ಹತಭಾಗ್ಯಾನಾಂ ಮಹಾಪಾಪರತಾತ್ಮನಾಂ ।
ತೇಷಾಂ ಸಾಯಂ ಮಹೇಶಸ್ಯ ದರ್ಶನಂ ನ ಭವಿಷ್ಯತಿ ॥೫೨೬॥

ಸಾಯಂ ದೃಷ್ಟ್ವಾ ಮಹಾದೇವಃ ಯಃ ಪೂಜಯತಿ ಸಾದರಂ ।
ಸ ಸರ್ವಪಾಪನಿರ್ಮುಕ್ತಃ ಶಿವಸಾಯುಜ್ಯಮೇಷ್ಯತಿ ॥೫೨೭॥

ಪ್ರಾತಃಕಾಲಾದಿಕಾಲೇಷು ಸರ್ವೇಷ್ವಪಿ ಮಹೇಶ್ವರಃ ।
ಪೂಜನೀಯೋ ವಿಶೇಷೇಣ ಪೂಜ್ಯಃ ಸಾಯಂ ಮಹೇಶ್ವರಃ ॥೫೨೮॥

ಪ್ರತಿಯೊಂದು ಜನ್ಮದಲ್ಲಿಯೂ ಸಂಪಾದಿಸಿರುವ ಅಪರಿಮಿತವಾದ ಪಾಪಗಳೂ ಸಹ ಸಾಯಂಕಾಲದಲ್ಲಿ ಆ ಶಂಕರನ ದರ್ಶನಮಾಡುವುದರಿಂದ ಕೂಡಲೇ ನಾಶವಾಗುವುವು. ॥೫೨೨-೫೨೩॥

ಸಾಯಂಕಾಲದಲ್ಲಿ ಮನುಷ್ಯರಿಗೆ ಶಿವದರ್ಶನವಾಗುವುದು ದುರ್ಲಭವು. ದೇವತೆಗಳಿಗೂ ಆ ಶಿವದರ್ಶನವು ದುರ್ಲಭವೇ ಸರಿ. ಯಾವಾಗಲೂ ಮಹೇಶ್ವರನ ದಯೆಯು ಪರಿಪೂರ್ಣವಾಗಿರುವವನಿಗೇ ಸಾಯಂಕಾಲದಲ್ಲಿ ಖಂಡಿತವಾಗಿ ಶಿವದರ್ಶನವಾಗುವುದು. ॥೫೨೪-೫೨೫॥

ಭಾಗ್ಯಹೀನರಾಗಿ ಮಹಾಪಾಪಗಳಲ್ಲಿ ನಿರತರಾದವರಿಗೆ ಸಾಯಂಕಾಲದಲ್ಲಿ ಮಹೇಶ್ವರನ ದರ್ಶನವಾಗಲಾರದು. ಪ್ರದೋಷಕಾಲದಲ್ಲಿ ಮಹೇಶ್ವರನನ್ನು ದರ್ಶನಮಾಡಿ ಆದರದಿಂದ ಪೂಜಿಸುವವನು ಸಕಲ ಪಾಪಗಳಿಂದಲೂ ಬಿಡುಗಡೆ ಹೊಂದಿ ಕೊನೆಗೆ ಶಿವನ ಸಾಯುಜ್ಯವನ್ನೈದುವನು. ॥೫೨೬-೫೨೭॥

ಪ್ರಾತಃಕಾಲವೇ ಮುಂತಾದ ಎಲ್ಲಾ ಕಾಲಗಳಲ್ಲಿಯೂ ಮಹೇಶ್ವರನನ್ನು ಪೂಜೆಮಾಡಬೇಕು. ಆದರೆ ಸಾಯಂಕಾಲಗಳಲ್ಲಿ ಮಾತ್ರ ಮಹೇಶ್ವರನು ವಿಶೇಷ

ನಿಶಿ ಯಃ ಪೂಜಯೇಲ್ಲಿಂಗಂ ಬಿಲ್ವಪತ್ರೈಃ ಪ್ರಯತ್ನತಃ ।
ಸ ಜನ್ಮಕೋಟಿಪಾಪೇಭ್ಯೋ ಮುಚ್ಯತೇ ನಾತ್ರ ಸಂಶಯಃ ॥೫೨೯॥

ಶಿವಲಿಂಗಾರ್ಚನೇನೈವ ಮಹಾಪಾತಕನಾಶನಂ ।
ಶಿವಲಿಂಗಾರ್ಚನಾನ್ನಾನ್ಯನ್ಮಹಾಪಾತಕನಾಶಕಂ ॥೫೩೦॥

ತಾವತ್ಪಾಪಾನಿ ತಿಷ್ಠಂತಿ ನ ಯಾವಚ್ಛಿವಪೂಜನಂ ।
ಅಮಿತಾನ್ಯಪಿ ಪಾಪಾನಿ ನಶ್ಯಂತಿ ಶಿವಪೂಜಯಾ ॥೫೩೧॥

ಪಾಪಕ್ಷಯೋ ಭಾಗ್ಯವೃದ್ಧಿರಾಯುರ್ವೃದ್ಧಿಃ ಕ್ಷಣೇಕ್ಷಣೇ ।
ಭವತ್ಯವಶ್ಯಂ ಮರ್ತ್ಯಾನಾಂ ಶ್ರೀಮಹಾದೇವಪೂಜಯಾ ॥೫೩೨॥

ಆಯುರಾರೋಗ್ಯಮೈಶ್ವರ್ಯಂ ತತ್ವಜ್ಞಾನಮನಾಮಯಂ ।
ಭವತಿ ಶ್ರೀಮಹಾದೇವಪೂಜಯೇತ್ಯಾಹ ಹಿ ಶ್ರುತಿಃ ॥೫೩೩॥

ವಾಗಿ ಪೂಜಾಯೋಗ್ಯನೆನಿಸುವನು. ರಾತ್ರಿಯವೇಳೆಯಲ್ಲಿ ಬಿಲ್ವದಳಗಳಿಂದ ಶಿವಲಿಂಗವನ್ನು ನಿಯಮಬದ್ಧನಾಗಿ ಪೂಜೆಮಾಡುವವನು ಕೋಟ್ಯಂತರ ಜನ್ಮಗಳ ಪಾಪಗಳಿಂದಲೂ, ಬಿಡುಗಡೆಹೊಂದುವುದರಲ್ಲಿ ಸಂದೇಹವೇ ಇಲ್ಲ. ॥೫೨೮-೫೨೯॥

ಶಿವಲಿಂಗಪೂಜೆಯಿಂದಲೇ ಮಹಾಪಾಪಗಳು ನಾಶವಾಗಬೇಕೇ ವಿನಾ ಇತರ ಯಾವುದರಿಂದಲೂ ಆ ಮಹಾಪಾಪಗಳು ನಾಶವಾಗಲಾರವು. ಶಿವನನ್ನು ಪೂಜಿಸುವವರೆಗೆ ಪಾಪಗಳೆಲ್ಲಾ ನೆಲಸಿರುವುವು. ಅಪರಿಮಿತವಾದ ಪಾಪಗಳೆಲ್ಲವೂ ಪರಶಿವಪೂಜೆಯಿಂದ ಕೂಡಲೇ ನಾಶವಾಗಿಬಿಡುವುವು ॥೫೩೦-೫೩೧॥

ಪಾಪಗಳ ನಾಶವೂ, ಐಶ್ವರ್ಯಾಭಿವೃದ್ಧಿಯೂ, ಆಯುರ್ವೃದ್ಧಿಯೂ ಕೂಡ ಪ್ರತಿಕ್ಷಣದಲ್ಲಿಯೂ ಮಾನವರಿಗೆ ಶ್ರೀ ಮಹಾದೇವನ ಪೂಜೆಯಿಂದ ಅವಶ್ಯವಾಗಿ ಉಂಟಾಗುವುದು. ಆಯುಸ್ಸು, ಆರೋಗ್ಯ, ಐಶ್ವರ್ಯ ಮತ್ತು ಸುಖಸ್ವರೂಪವಾದ ತತ್ವಜ್ಞಾನ ಇವೆಲ್ಲವೂ ಶ್ರೀ ಮಹಾದೇವನ ಪೂಜೆಯಿಂದ ಉಂಟಾಗುತ್ತದೆಂದು ಶ್ರುತಿಯು ಹೇಳುತ್ತಿರುವುದು. ॥೫೩೨-೫೩೩॥

ಶತ್ರುನಾಶೋ ದುಃಖನಾಶೋ ಮೋಹನಾಶಶ್ಚ ಸರ್ವಥಾ ।
ಭವತಿ ಶ್ರೀಮಹಾದೇವಪೂಜಯೇತ್ಯಾಹ ಹಿ ಶ್ರುತಿಃ ॥೫೩೪॥

ವಿದ್ಯಾವೃದ್ಧಿಃ ಪುತ್ರವೃದ್ಧಿರ್ವಂಶವೃದ್ಧಿಶ್ಚ ಸರ್ವದಾ ।
ಭವತಿ ಶ್ರೀಮಹಾದೇವಪೂಜಯೇತ್ಯಾಹ ಹಿ ಶ್ರುತಿಃ ॥೫೩೫॥

ಶಿವಲಿಂಗಾರ್ಚಕಾಸಾಧ್ಯಂ ನ ಕಿಂಚಿದಪಿ ಸರ್ವಥಾ ।
ಸತ್ಯಮೇತತ್ಪುನಃ ಸತ್ಯಮುದ್ಧೃತ್ಯ ಭುಜಮುಚ್ಯತೇ ॥೫೩೬॥

ಯತ್ಪ್ರಸಾದಾಂಶಲೇಶಾಂಶಲೇಶೇನಾಪಿ ಜನಾರ್ದನಃ ।
ವೈಕುಂಠಂ ಪ್ರಾಪ ಶತ್ರೂಂಶ್ಚ ಜಘಾನಾರ್ಚ್ಯ ಸ ಶಂಕರಂ ॥೫೩೭॥

ಯತಂತೇ ಯತ್ಪ್ರಸಾದಾರ್ಥಂ ವಿಷ್ಣುಬ್ರಹ್ಮಾದಯಃ ಸುರಾಃ ।
ಸ ಸರ್ವದಾ ಪೂಜನೀಯೋ ದೇವದೇವೋತ್ತಮಃ ಶಿವಃ ॥೫೩೮॥

ಯದ್ವಾಮಾಂಗಾದಭೂದ್ವಿಷ್ಣುರ್ದಕ್ಷಿಣಾಂಗಾತ್ಪ್ರಜಾಪತಿಃ ।
ಸ ಸರ್ವದಾ ಪೂಜನೀಯೋ ದೇವದೇವೋತ್ತಮಃ ಶಿವಃ ॥೫೩೯॥

ಶತ್ರು, ದುಃಖ ಮತ್ತು ಅಜ್ಞಾನಗಳೆಲ್ಲವೂ ಆ ಮಹಾದೇವನ ಪೂಜೆಯಿಂದ ಖಂಡಿತವಾಗಿ ನಾಶವಾಗುವುವೆಂದು ಶ್ರುತಿಯಿರುವುದು ವಿದ್ಯೆ, ಪುತ್ರರು ಮತ್ತು ವಂಶ ಇವುಗಳು ಯಾವಾಗಲೂ ಶ್ರೀ ಮಹಾದೇವನ ಪೂಜೆಯಿಂದಲೇ ಲಭಿಸುತ್ತವೆಂದು ವೇದವು ಹೇಳುತ್ತಿರುವುದು. ॥೫೩೪-೫೩೫॥

ವಸ್ತುತಃ ಶಿವಲಿಂಗಪೂಜಕರಿಗೆ ಅಸಾಧ್ಯವಾದುದು ಬೇರೆ ಯಾವ ಕಾರ್ಯವೂ ಇಲ್ಲ. ಇದು ಸತ್ಯವು. ಪದೇಪದೇ ಇದು ಸತ್ಯವೆಂದು ಭುಜವೆತ್ತಿ ಹೇಳುತ್ತೇನೆ. ಆ ಮಹಾದೇವನ ಅನುಗ್ರಹದ ಲೇಶಾಂಶದಲ್ಲಿ ಒಂದು ಸಣ್ಣಭಾಗವನ್ನು ಹೊಂದಿ ವಿಷ್ಣುವು ವೈಕುಂಠಲೋಕವನ್ನು ಪಡೆದು, ಶಂಕರನ ಪೂಜೆಯಿಂದ ಶತ್ರುಗಳನ್ನು ಧ್ವಂಸಮಾಡಿದನು. ॥೫೩೬-೫೩೭॥

ವಿಷ್ಣು, ಬ್ರಹ್ಮ ಮೊದಲಾದ ದೇವತೆಗಳು ಯಾರ ಅನುಗ್ರಹವನ್ನು ಪಡೆಯಲು ಪ್ರಯತ್ನಿಸುತ್ತಿರುವರೋ, ಯಾರ ಶರೀರದ ಎಡಭಾಗದಿಂದ ವಿಷ್ಣುವೂ, ಬಲಭಾಗದಿಂದ ಬ್ರಹ್ಮನೂ ಜನಿಸಿದರೋ, ಮತ್ತು ಯಮನನ್ನು ನಿಗ್ರಹಿಸಿದವನೂ,

ಯಃ ಕಾಲಕಾಲಃ ಸರ್ವಜ್ಞಃ ಸರ್ವವಂದ್ಯೋ ಮಹೇಶ್ವರಃ ।
ಸ ಸರ್ವದಾ ಪೂಜನೀಯೋ ದೇವದೇವೋತ್ತಮಃ ಶಿವಃ ॥೫೪೦॥

ಯಸ್ಯಾಂತಂ ನ ವಿದುರ್ದೇವಾ ಬ್ರಹ್ಮವಿಷ್ಣುಪುರೋಗಮಾಃ ।
ಸ ಸರ್ವದಾ ಪೂಜನೀಯೋ ದೇವದೇವೋತ್ತಮಃ ಶಿವಃ ॥೫೪೧॥

ಯಸ್ಯ ಪ್ರಸಾದಲೇಶೇನ ವಿಷ್ಣುತ್ವಂ ಪ್ರಾಪ್ಯತೇ ಜನೈಃ ।
ಸ ಸರ್ವದಾ ಪೂಜನೀಯೋ ದೇವದೇವೋತ್ತಮಃ ಶಿವಃ ॥೫೪೨॥

ಯೇನೇದಂ ಸೃಷ್ಟಮಖಿಲಂ ಜಗತ್ಸ್ಥಾವರಜಂಗಮಂ ।
ಸ ಸರ್ವದಾ ಪೂಜನೀಯೋ ದೇವದೇವೋತ್ತಮಃ ಶಿವಃ ॥೫೪೩॥

ಯೇನ ಸಂಪಾಲ್ಯತೇ ನಿತ್ಯಂ ಸರ್ವಮೇತಚ್ಚರಾಚರಂ ।
ಸ ಸರ್ವದಾ ಪೂಜನೀಯೋ ದೇವದೇವೋತ್ತಮಃ ಶಿವಃ ॥೫೪೪॥

ಯೇನೇದಂ ವಿಶ್ವಮಖಿಲಂ ಭಸ್ಮಸಾತ್ಕ್ರಿಯತೇ ಕ್ಷಣಾತ್ ।
ಸ ಸರ್ವದಾ ಪೂಜನೀಯೋ ದೇವದೇವೋತ್ತಮಃ ಶಿವಃ ॥೫೪೫॥

ಯೋ ನಿತ್ಯಂ ವೇದವೇದಾಂತೈರನಿಶಂ ಪ್ರತಿಪಾದ್ಯತೇ ।
ಸ ಸರ್ವದಾ ಪೂಜನೀಯೋ ದೇವದೇವೋತ್ತಮಃ ಶಿವಃ ॥೫೪೬॥

ಸರ್ವಜ್ಞನೂ, ಎಲ್ಲರಿಂದಲೂ ಪೂಜ್ಯನೂ, ಮಹದೈಶ್ವರ್ಯಾಭರಿತನೂ ಆದ ಶಿವನು ದೇವತೋತ್ತಮನಾದುದರಿಂದ ಆವನನ್ನು ಯಾವಾಗಲೂ ಪೂಜೆಮಾಡಬೇಕು. ॥೫೩೮-೫೩೯-೫೪೦॥

ಯಾರ ಮೂಲವನ್ನು ಬ್ರಹ್ಮ, ವಿಷ್ಣು ಮುಂತಾದ ದೇವತೆಗಳು ತಿಳಿಯಲಾರರೋ, ಯಾವ ದೇವನ ಅನುಗ್ರಹದ ಲೇಶಮಾತ್ರದಿಂದ ಜನಗಳು ವಿಷ್ಣು ಪದವಿಯನ್ನು ಪಡೆಯಬಲ್ಲರೋ, ಯಾವನು ಸ್ಥಾವರ ಜಂಗಮಾತ್ಮಕವಾದ ಈ ಪ್ರಪಂಚವೆಲ್ಲವನ್ನೂ ಸೃಷ್ಟಿಸಿ, ಪರಿಪಾಲನೆ ಮಾಡಿ ಕೊನೆಗೆ ಕ್ಷಣಕಾಲದಲ್ಲಿ ಭಸ್ಮ ಮಾಡಬಲ್ಲನೋ, ಅಂತಹ ದೇವದೇವೋತ್ತಮನೆನಿಸಿದ ಪರಶಿವನನ್ನು ಯಾವಾಗಲೂ ಪೂಜೆಮಾಡಬೇಕು. ॥೫೪೧-೫೪೨-೫೪೩-೫೪೪-೫೪೫॥

ನಿತ್ಯವೂ ವೇದ, ವೇದಾಂತಗಳಲ್ಲಿ ಪ್ರತಿಪಾದಿತನಾದವನೂ, ಪರಿಪೂರ್ಣನೂ, ಸಚ್ಚಿದಾನಂದಸ್ವರೂಪನೂ, ಸರ್ವವ್ಯಾಪಿಯೂ, ವ್ಯಾಪಕನೂ, ಸರ್ವಸಮರ್ಥನೂ,

ಯಃ ಪೂರ್ಣಃ ಸಚ್ಚಿದಾನಂದಃ ಸರ್ವವ್ಯಾಪೀ ವಿಭುಃ ಪ್ರಭುಃ ।
ಸ ಸರ್ವದಾ ಪೂಜನೀಯೋ ದೇವದೇವೋತ್ತಮಃ ಶಿವಃ ॥೫೪೭॥

ಯೋ ನಿರ್ಗುಣೋಽಪಿ ಸಗುಣಃ ಪರಮಾನಂದವಿಗ್ರಹಃ ।
ಸ ಸರ್ವದಾ ಪೂಜನೀಯೋ ದೇವದೇವೋತ್ತಮಃ ಶಿವಃ ॥೫೪೮॥

ಯನ್ನಾಮಮಾತ್ರಸ್ಮರಣಾದ್ಭುಕ್ತಿಂ ಮುಕ್ತಿಂ ಚ ವಿಂದತಿ ।
ಸ ಸರ್ವದಾ ಪೂಜನೀಯೋ ದೇವದೇವೋತ್ತಮಃ ಶಿವಃ ॥೫೪೯॥

ಯತ್ಕಥಾಶ್ರವಣಾತ್ಸದ್ಯೋ ದಗ್ಧಾಃ ಸಂಸಾರವಾಸನಾಃ ।
ಸ ಸರ್ವದಾ ಪೂಜನೀಯೋ ದೇವದೇವೋತ್ತಮಃ ಶಿವಃ ॥೫೫೦॥

ಯತ್ಪೂಜನಂ ಶ್ರುತಂ ವೇದೇ ಘೋರಸಂಸಾರಭೇಷಜಂ ।
ಸ ಸರ್ವದಾ ಪೂಜನೀಯೋ ದೇವದೇವೋತ್ತಮಃ ಶಿವಃ ॥೫೫೧॥

ಯತ್ಪೂಜಾನಿರತಾ ಧನ್ಯಾಃ ಪೂಜ್ಯಾ ವಿಷ್ಣ್ವಾದಿಭಿಃ ಸುರೈಃ ।
ಸ ಸರ್ವದಾ ಪೂಜನೀಯೋ ದೇವದೇವೋತ್ತಮಃ ಶಿವಃ ॥೫೫೨॥

ಯಂ ನತ್ವಾ ಸಕೃದಸ್ಯಾಶು ಮುಚ್ಯಂತೇ ಸರ್ವಕಿಲ್ಬಿಷೈಃ ।
ಸ ಸರ್ವದಾ ಪೂಜನೀಯೋ ದೇವದೇವೋತ್ತಮಃ ಶಿವಃ ॥೫೫೩॥

ಸ್ವತಃ ಗುಣರಹಿತನಾದರೂ ಉಪಾಸನಾಕಾಲದಲ್ಲಿ ಗುಣವಿಶಿಷ್ಟನಾಗಿ ತೋರುವವನೂ, ಪರಮಾನಂದಮೂರ್ತಿಯೂ, ನಾಮಸ್ಮೃತಿಮಾತ್ರದಿಂದ ಭಕ್ತರಿಗೆ ಸಕಲ ಭೋಗಗಳನ್ನೂ, ಕೊನೆಯಲ್ಲಿ ಮೋಕ್ಷವನ್ನೂ ಕೊಡುವವನೂ, ತನ್ನ ಕಥಾಶ್ರವಣ ಮಾಡುವವರಿಗೆ ಅವರ ಸಂಸಾರವಾಸನೆಯನ್ನು ಸುಟ್ಟು ಭಸ್ಮಮಾಡುವವನೂ, ವೇದದಲ್ಲಿ ಘೋರವಾದ ಸಂಸಾರಕ್ಕೆ ಔಷಧಪ್ರಾಯವೆನಿಸಿರುವ ತನ್ನ ಪೂಜೆಯುಳ್ಳವನೂ ಆದ ದೇವದೇವೋತ್ತಮನೆನಿಸಿದ ಶಿವನನ್ನೇ ಪೂಜೆಮಾಡಬೇಕು. ಆ ದೇವದೇವನ ಪೂಜಾನಿರತರಾದವರೇ ಧನ್ಯರು. ಅವರೇ ವಿಷ್ಣುವೇ ಮುಂತಾದ ದೇವತೆಗಳಿಗೆ ಪೂಜಾರ್ಹರು. ಯಾವ ಒಂದೇಬಾರಿ ನಮಸ್ಕಾರದಿಂದ ಮಾನವರು ಸಕಲಪಾಪಗಳಿಂದಲೂ ಬಿಡುಗಡೆ ಹೊಂದುವರೋ ಅಂತಹ ದೇವತೋತ್ತಮನಾದ ಪರಮೇಶ್ವರನನ್ನೇ ಯಾವಾಗಲೂ ಪೂಜೆಮಾಡಬೇಕು. ॥೫೪೬-೫೪೭-೫೪೮-೫೪೯-೫೫೦-೫೫೧-೫೫೨-೫೫೩॥

ಯಮರ್ಚಯಂತಿ ಮುನಯೋ ಹೃತ್ಪಂಕಜನಿವಾಸಿನಂ ।
ಸ ಸರ್ವದಾ ಪೂಜನೀಯೋ ದೇವದೇವೋತ್ತಮಃ ಶಿವಃ ॥೫೫೪॥

ಯನ್ನಾಮಾಮೃತಪಾ ಮರ್ತ್ಯಾಸ್ತಿರಸ್ಕುರ್ವಂತಿ ಮಾಧವಂ ।
ಸ ಸರ್ವದಾ ಪೂಜನೀಯೋ ದೇವದೇವೋತ್ತಮಃ ಶಿವಃ ॥೫೫೫॥

ಯದರ್ಚನೇನ ಸಂಪ್ರಾಪ್ಯಂ ಗಾಣಾಪತ್ಯಮನಾಮಯಂ ।
ಸ ಸರ್ವದಾ ಪೂಜನೀಯೋ ದೇವದೇವೋತ್ತಮಃ ಶಿವಃ ॥೫೫೬॥

ಯದ್ಭೃತ್ಯಭಾವಮಿಚ್ಛಂತಿ ವಿಷ್ಣುಬ್ರಹ್ಮಾದಯಃ ಸುರಾಃ ।
ಸ ಸರ್ವದಾ ಪೂಜನೀಯೋ ದೇವದೇವೋತ್ತಮಃ ಶಿವಃ ॥೫೫೭॥

ಯಮಾಹುರ್ನಿಷ್ಕಲಂ ಶಾಂತಂ ನಿರವದ್ಯಂ ನಿರಂಜನಂ ।
ಸ ಸರ್ವದಾ ಪೂಜನೀಯೋ ದೇವದೇವೋತ್ತಮಃ ಶಿವಃ ॥೫೫೮॥

ಯಮಾಹುಃ ಪುರುಷಂ ಶಾಂತಂ ನೀಲಗ್ರೀವಂ ಪಿನಾಕಿನಂ ।
ಸ ಸರ್ವದಾ ಪೂಜನೀಯೋ ದೇವದೇವೋತ್ತಮಃ ಶಿವಃ ॥೫೫೯॥

ಯಮಾಹುರಿತಿಹಾಸಾದ್ಯಾ ಭಗವಂತಮನೇಕಧಾ ।
ಸ ಸರ್ವದಾ ಪೂಜನೀಯೋ ದೇವದೇವೋತ್ತಮಃ ಶಿವಃ ॥೫೬೦॥

ಮನಸ್ಸೆಂಬ ಕಮಲದಲ್ಲಿ ನೆಲಸಿರುವ ಯಾವ ದೇವನನ್ನು ಮುನಿಗಳು ಸದಾ ಪೂಜೆಮಾಡುತ್ತಿರುವರೋ, ಯಾರ ನಾಮಗಳೆಂಬ ಅಮೃತಪಾನಮಾಡಿದ ಮಾನವರು ವಿಷ್ಣುವನ್ನು ಸಹ ತಿರಸ್ಕರಿಸುತ್ತಿರುವರೋ, ಸುಖಸ್ವರೂಪವಾದ ಗಣಾಧಿಪತಿ ಪದವಿಯನ್ನು ಯಾರ ಪೂಜೆಯಿಂದ ಪಡೆಯಬಹುದೋ, ವಿಷ್ಣು, ಬ್ರಹ್ಮಾದಿ ದೇವತೆಗಳೆಲ್ಲರೂ ಯಾರ ಸೇವಕತನವನ್ನಿಚ್ಛಿಸುತ್ತಿರುವರೋ, ಕಲಂಕಶೂನ್ಯನೂ, ಶಾಂತಿಗುಣಸಂಪನ್ನನೂ, ನಿರ್ದುಷ್ಟನೂ, ನಿರ್ಲಿಪ್ತನೂ, ಪುರುಷನೂ, ಶಾಂತನೂ, ಕಪ್ಪಾದ ಕೊರಳುಳ್ಳವನೂ, ಪಿನಾಕವೆಂಬ ಬಿಲ್ಲನ್ನು ಧರಿಸಿರುವವನೂ ಆದ ಪರಶಿವನು ಸರ್ವಪೂಜ್ಯನು. ಇತಿಹಾಸಪುರಾಣಾದಿಗಳೆಲ್ಲಾ ಯಾವ ಭಗವಂತನನ್ನು ಅನೇಕರೀತಿಯಿಂದ ಸ್ತೋತ್ರಮಾಡುತ್ತಿರುವುವೋ ಅಂತಹ ದೇವತೋತ್ತಮನಾದ ಶಿವನನ್ನು ಸರ್ವರೂ ಪೂಜೆಮಾಡಬೇಕು. ॥೫೫೪-೫೫೫-೫೫೬-೫೫೭-೫೫೮-೫೫೯-೫೬೦॥

ಯಮಾಹುರ್ಬ್ರಹ್ಮಹಂತಾರಂ ವಿಷ್ಣುಹಂತಾರಮೀಶ್ವರಂ ।
ಸ ಸರ್ವದಾ ಪೂಜನೀಯೋ ದೇವದೇವೋತ್ತಮಃ ಶಿವಃ ॥೫೬೧॥

ಯಮಾಹುಃ ಶ್ರೀವಿರೂಪಾಕ್ಷಮುಮಾದೇಹಾರ್ಧಧಾರಿಣಂ ।
ಸ ಸರ್ವದಾ ಪೂಜನೀಯೋ ದೇವದೇವೋತ್ತಮಃ ಶಿವಃ ॥೫೬೨॥

ಯಮಾಹುಃ ಕರುಣಾಸಿಂಧುಂ ಭಕ್ತಬಂಧುಮುಮಾಪತಿಂ ।
ಸ ಸರ್ವದಾ ಪೂಜನೀಯೋ ದೇವದೇವೋತ್ತಮಃ ಶಿವಃ ॥೫೬೩॥

ಯೋ ವೈ ರುದ್ರಃ ಸ ಭಗವಾನಿತ್ಯಾಹಾಥರ್ವಣೋಽಪಿ ಸ್ವಯಂ ।
ಸ ಸರ್ವದಾ ಪೂಜನೀಯೋ ದೇವದೇವೋತ್ತಮಃ ಶಿವಃ ॥೫೬೪॥

ಯಸ್ಯ ತತ್ತ್ವಮವಿಜ್ಞಾಯ ದೇವಾಃ ಸರ್ವೇಽಪಿ ಮೋಹಿತಾಃ ।
ಸ ಸರ್ವದಾ ಪೂಜನೀಯೋ ದೇವದೇವೋತ್ತಮಃ ಶಿವಃ ॥೫೬೫॥

ಯಂ ವಿದಿತ್ವಾಮೃತೀಭೂಯ ನ ಪುನರ್ಗರ್ಭಭಾಙ್ನರಃ ।
ಸ ಸರ್ವದಾ ಪೂಜನೀಯೋ ದೇವದೇವೋತ್ತಮಃ ಶಿವಃ ॥೫೬೬॥

॥ ವಿಷ್ಣುರುವಾಚ ॥

ಇತಿ ತದ್ವಚನಂ ಶ್ರುತ್ವಾ ಸ ತದಾ ಮುಕ್ತಪಾತಕಃ ।
ತತ್ರೈವ ನರ್ಮದಾತೀರೇ ಶಿವಾರ್ಚನಪರೋಽಭವತ್ ॥೫೬೭॥

ಬ್ರಹ್ಮ, ವಿಷ್ಣು ಇವರನ್ನು ಕೊಂದವನೂ, ಐಶ್ವರ್ಯಭರಿತನೂ, ವಿರೂಪಾಕ್ಷನೂ ಉಮಾದೇವಿಯ ಅರ್ಧದೇಹವನ್ನು ಧರಿಸಿರುವವನೂ, ಕರುಣಾಸಮುದ್ರನೂ, ಭಕ್ತರ ವಿಷಯದಲ್ಲಿ ನೆಂಟನಂತಿರುವವನೂ, ಉಮಾರಮಣನೂ, ರುದ್ರನೂ, ಭಗವಂತ ನೆಂದು ಅಥರ್ವಣವೇದದಿಂದ ಹೇಳಲ್ಪಡುವವನೂ, ಆದ ದೇವದೇವೋತ್ತಮನಾದ ಶಿವ ನನ್ನು ಯಾವಾಗಲೂ ಪೂಜೆಮಾಡಬೇಕು. ಯಾರ ತತ್ತ್ವವನ್ನರಿಯದೇ ಎಲ್ಲಾ ದೇವತೆಗಳೂ ಮೋಹಗೊಂಡಿರುವರೋ, ಯಾವ ದೇವನನ್ನರಿತು, ಅಮೃತತ್ವವನ್ನು ಹೊಂದಿ ಭಕ್ತರು ಪುನಃ ಗರ್ಭವನ್ನು ಧರಿಸುವುದಿಲ್ಲವೋ ಅಂತಹ ದೇವೋತ್ತಮ ನಾದ ಶಿವನನ್ನೇ ಯಾವಾಗಲೂ ಪೂಜೆಮಾಡಬೇಕು. ॥೫೬೧-೫೬೨-೫೬೩-೫೬೪-೫೬೫-೫೬೬॥

ಹೀಗೆ ನುಡಿದ ಆ ಮಾತುಗಳನ್ನು ಕೇಳಿ ಬ್ರಾಹ್ಮಣನು ಪಾಪರಹಿತನಾಗಿ

ತತಃ ಪರಂ ಸ ಮುಕ್ತೋಽಭೂಚ್ಛಿವಲಿಂಗಸಮರ್ಚನಾತ್ ।
ತಸ್ಮಾನ್ಮುಮುಕ್ಷುಭಿರ್ನಿತ್ಯಂ ಪೂಜನೀಯಃ ಸದಾಶಿವಃ ॥೫೬೮॥

ಅತ್ರ ಕಶ್ಚಿತ್ಪುರಾ ವಿಪ್ರಃ ಶಿವಪೂಜಾಪರಃ ಸ್ಥಿತಃ ।
ಸ ಸರ್ವದಾ ಭಸ್ಮನಿಷ್ಠಃ ಸದಾ ರುದ್ರಾಕ್ಷಭೂಷಣಃ ॥೫೬೯॥

ಪಂಚಾಕ್ಷರಪರೋ ನಿತ್ಯಂ ರುದ್ರಾಧ್ಯಾಯಪರಾಯಣಃ ।
ಶಿವಯೋಗಮಿಹ ಪ್ರಾಪ್ಯ ಹೃಷ್ಟಚಿತ್ತೋ ಬಭೂವ ಸಃ ॥೫೭೦॥

ತಸ್ಮಿನ್ಯೋಗೇ ಸ ವಿಪ್ರೇಂದ್ರಶ್ಚಕಾರೋಪೋಷಣಂ ನಿಶಿ ।
ಚಕಾರ ಪರಯಾ ಭಕ್ತ್ಯಾ ತದಾ ಜಾಗರಣಂ ದ್ವಿಜಃ ॥೫೭೧॥

ಶಿವಯೋಗಸ್ಯ ಕಿಂ ವಿಷ್ಣೋ ಲಕ್ಷಣಂ ತದ್ವದಸ್ವ ನಃ ।
ಯಂ ಪ್ರಾಪ್ಯೋಪೋಷಣಂ ಚಕ್ರೇ ತಥಾ ಜಾಗರಣಂ ದ್ವಿಜಃ ॥೫೭೨॥

ಆಗ ಅಲ್ಲಿಯೇ ನರ್ಮದಾನದಿಯ ದಡದಲ್ಲಿ ಶಿವಪೂಜಾನಿರತನಾದನು. ಆಮೇಲೆ ಅವನು ಹಾಗೆಯೇ ಶಿವಲಿಂಗಪೂಜೆಯಿಂದ ಮೋಕ್ಷಪಡೆದನು. ಆದ್ದರಿಂದ ಮೋಕ್ಷಾಪೇಕ್ಷಿಗಳು ನಿತ್ಯವೂ ಸದಾಶಿವನ್ನು ಪೂಜೆಮಾಡಲೇಬೇಕು. ॥೫೬೭-೫೬೮॥

ಇದೇ ಸ್ಥಳದಲ್ಲಿ ಹಿಂದೆ ಒಬ್ಬ ಬ್ರಾಹ್ಮಣನು ಶಿವಪೂಜಾನಿರತನಾಗಿದ್ದನು. ಅವನು ಯಾವಾಗಲೂ ಭಸ್ಮಧಾರಣನಿರತನಾಗಿ ವಿಧ್ಯುಕ್ತವಾದ ರುದ್ರಾಕ್ಷಗಳಿಂದ ಅಲಂಕೃತನಾಗಿದ್ದನು. ನಿತ್ಯವೂ ಶಿವಪಂಚಾಕ್ಷರ ಮತ್ತು ರುದ್ರಾಧ್ಯಾಯ ಮಂತ್ರಗಳನ್ನು ಜಪಿಸುವುದರಲ್ಲಿ ನಿರತನಾಗುತ್ತಿದ್ದನು. ಹೀಗೆ ಶಿವನಲ್ಲಿಯೇ ಶಿವಯೋಗದಲ್ಲಿ ಮನಸ್ಸಿಟ್ಟು ಸಂತೋಷಪಡೆದಿದ್ದನು. ॥೫೬೯-೫೭೦॥

ಆ ರೀತಿ ಚಿತ್ತನಿರೋಧದಲ್ಲಿ ಬ್ರಾಹ್ಮಣೋತ್ತಮನು ರಾತ್ರಿಯಲ್ಲಿ ಉಪವಾಸಮಾಡುತ್ತಿದ್ದನು. ಆ ಜಾಗರಣಕಾಲದಲ್ಲಿ ಬ್ರಾಹ್ಮಣನು ಪೂರ್ಣ ಶಿವಭಕ್ತಿಯಿಂದ ನಡೆಯುತ್ತಿದ್ದನು ॥೫೭೧॥

"ವಿಷ್ಣುದೇವನೇ, ಆ ಬ್ರಾಹ್ಮಣನು ಯಾವುದನ್ನು ಪಡೆದು ಉಪವಾಸವನ್ನೂ, ಜಾಗರಣವನ್ನೂ ಮಾಡಿದನೋ ಅಂತಹ ಶಿವಯೋಗದ ಲಕ್ಷಣವೇನು? ಅದನ್ನು ನಮಗೆ ತಿಳಿಸು? ಆ ಯೋಗವನ್ನಭ್ಯಸಿಸಿ ಜಾಗರಣ ಮತ್ತು ಉಪವಾಸಗಳನ್ನು

ಜಾಗರೇಣೋಪವಾಸೇನ ತಸ್ಮಿನ್ಯೋಗೇ ಚ ಕಿಂ ಫಲಂ ।
ಇದಂ ಸರ್ವಂ ವಿಶೇಷೇಣ ವದ ಕಾರುಣಿಕೋತ್ತಮ ॥೫೭೩॥

॥ ವಿಷ್ಣುರುವಾಚ ॥

ಸಪಾತಾದ್ರಾರ್ ಸೋಮಯುಕ್ತಾ ಭೂತಾ ಯಾ ಸ್ಯಾನ್ಮಹಾನಿಶಿ ।
ಶಿವಯೋಗಃ ಸ ವಿಖ್ಯಾತಃ ಸರ್ವಕರ್ಮಫಲಪ್ರದಃ ॥೫೭೪॥

ತಸ್ಮಿನ್ಯೋಗೇ ನರಃ ಸ್ನಾತ್ವಾ ಪೂಜಯಿತ್ವಾ ಮಹೇಶ್ವರಂ ।
ಸರ್ವಪಾಪವಿನಿರ್ಮುಕ್ತಃ ಸದ್ಯೋ ಜಾತಿಸ್ಮರೋಭವೇತ್ ॥೫೭೫॥

ತಸ್ಮಿನ್ಯೋಗೇ ಮಹಾದೇವಃ ಸರ್ಷಪೈಃ ಸತಿಲೈರ್ಯವೈಃ ।
ಅಖಂಡಬಿಲ್ವಪತ್ರೈಶ್ಚ ಪೂಜನೀಯಃ ಸದಾಶಿವಃ ॥೫೭೬॥

ಅಯಂ ಯೋಗೋ ಮಹಾಪುಣ್ಯಃ ಕೋಟಿಚಂದ್ರಗ್ರಹೈಃ ಸಮಃ ।
ಕೋಟಿಸೂರ್ಯಗ್ರಹೈಸ್ತುಲ್ಯಃ ಸಮೋಽಯಂ ಕೋಟಿಪರ್ವಭಿಃ ॥೫೭೭॥

ಮಾಡುವುದರಿಂದ ಪ್ರಯೋಜನವೇನು ? ದಯಾಳುಗಳಲ್ಲಿ ಉತ್ತಮನಾದ ವಿಷ್ಣುವೇ, ಇವೆಲ್ಲವನ್ನೂ ನಮಗೆ ವಿಸ್ತಾರವಾಗಿ ತಿಳಿಸಬೇಕು" ಎಂದು ದೇವತೆಗಳು ವಿಷ್ಣುವನ್ನು ಪ್ರಾರ್ಥಿಸಿದರು. ಆಗ ವಿಷ್ಣುವು ಹೀಗೆಂದನು. ॥೫೭೨-೫೭೩॥

ವ್ಯತೀಪಾತ, ಆರ್ದ್ರಾನಕ್ಷತ್ರ, ಸೋಮವಾರ ಇವುಗಳಿಂದ ಕೂಡಿದ ಚತುರ್ದಶಿಯ ಅರ್ಧರಾತ್ರಿಯಲ್ಲಿ ಸಕಲಕರ್ಮಗಳ ಫಲವನ್ನೂ ಕೊಡುವ ಶಿವಯೋಗವು ಪ್ರಸಿದ್ಧವಾಗಿರುವುದು. ಅಂತಹ ಶಿವಯೋಗಸಮಯದಲ್ಲಿ ಮಾನವನು ಸ್ನಾನಮಾಡಿ ಆ ಮಹೇಶ್ವರನನ್ನು ಪೂಜೆಮಾಡಿದರೆ ಅವನು ಸಕಲಪಾಪಗಳಿಂದಲೂ ಬಿಡುಗಡೆ ಹೊಂದಿದವನಾಗಿ ಕೂಡಲೇ ತನ್ನ ಪೂರ್ವಜನ್ಮಸ್ಮರಣೆಯನ್ನು ಹೊಂದುವನು. ॥೫೭೪-೫೭೫॥

ಆ ಯೋಗದಲ್ಲಿ ನಿತ್ಯಮಂಗಳಸ್ವರೂಪನಾದ ಮಹಾದೇವನನ್ನು ಎಳ್ಳಿನಿಂದ ಬೆರೆತ ಸಾಸುವೆಗಳಿಂದಲೂ, ತುಂಡಾದ ಬಿಲ್ವದಳಗಳಿಂದಲೂ ಪೂಜೆಮಾಡಬೇಕು. ಈ ಯೋಗವು ತುಂಬಾ ಪುಣ್ಯಪ್ರದವು. ಅದು ಕೋಟಿಚಂದ್ರಗ್ರಹಣ, ಸೂರ್ಯಗ್ರಹಣ ಮತ್ತು ಪರ್ವಕಾಲಗಳಿಗೆ ಸಮಾನವಾದುದು ॥೫೭೬-೫೭೭॥

ತಸ್ಮಿನ್ದಿನೇ ಪ್ರಯತ್ನೇನ ಶೈವಂ ಯಃ ಪೂಜಯೇದ್ಧನೈಃ ।
ಸ ಮಹಾಪಾತಕೇಭ್ಯೋಽಪಿ ಮುಚ್ಯತೇ ನಾತ್ರ ಸಂಶಯಃ ॥೫೭೮॥

ಜಾಗರಶ್ಚೋಪವಾಸಶ್ಚ ತಸ್ಮಿನ್ಯೋಗೇ ಶಿವಾರ್ಚನಂ ।
ಕೃತ್ವಾ ಕಾರ್ಯಃ ಪ್ರಯತ್ನೇನ ಮಧ್ಯೇಽಪಿ ಶಿವಪೂಜನಂ ॥೫೭೯॥

ಅಸ್ಮಿನ್ಯೋಗೇ ಸ ವಿಪ್ರೋಽಪಿ ಯೋಗಮಾಹಾತ್ಮ್ಯವಿಸ್ಮೃದಾ ।
ನಿಶಿ ಜಾಗರಣಂ ಚಕ್ರೇ ಕೇದಾರೇಶಂ ಸಮರ್ಚಯನ್ ॥೫೮೦॥

ಸ ಪೂಜಯೋಪವಾಸೇನ ನಿಶಿ ಜಾಗರಣೇನ ಚ ।
ಪ್ರಾತರ್ಜಾತಿಸ್ಮರೋ ಜಾತಸ್ತತ್ತ್ವಜ್ಞಾನಮವಾಪ ಚ ॥೫೮೧॥

ಸ ಭೂತಭಾವಿಜನ್ಮಾನಿ ಜ್ಞಾತ್ವಾ ಸರ್ವಾಣಿ ತತ್ಕ್ಷಣೇ ।
ಪರಂ ನಿರ್ವೇದಮಾಪನ್ನೋ ನಿರ್ವಿಣ್ಣೋಽಭೂತ್ತದಾ ಸುರಾಃ ॥೫೮೨॥

ಸ ತತೋಽಷ್ಟಾಶೀತಿಲಕ್ಷದುಷ್ಟಕುತ್ಸಿತಯೋನಿಷು ।
ಸಹಸ್ರವಾರಂ ಜನ್ಮಾನಿ ಭವಿಷ್ಯಂತೀತ್ಯಬುಧ್ಯತ ॥೫೮೩॥

ಅಂತಹ ದಿನದಲ್ಲಿ ನಿಯಮದಿಂದ ಶೈವವರ್ಯನನ್ನು ದುಡ್ಡಿನಿಂದ ಪೂಜೆ ಮಾಡುವವನು ಮಹಾಪಾಪಗಳಿಂದಲೂ ಬಿಡುಗಡೆಹೊಂದುವುದರಲ್ಲಿ ಯಾವ ಸಂಶಯವೂ ಇಲ್ಲ. ಜಾಗರಣೆ, ಉಪವಾಸಗಳನ್ನೂ ಶಿವಪೂಜೆಯನ್ನೂ ಶಿವಯೋಗದಲ್ಲಿ ಮಾಡಿ ಮಧ್ಯದಲ್ಲಿ ಪುನಃ ಶಿವನನ್ನು ನಿಯಮದಿಂದ ಪೂಜೆಮಾಡಬೇಕು. ಇದೇ ಯೋಗದಲ್ಲಿ ಬ್ರಾಹ್ಮಣನೂ ಯೋಗಮಹಿಮೆಯನ್ನರಿತವನಾದ್ದರಿಂದ ರಾತ್ರಿಯಲ್ಲೆಲ್ಲಾ ಆ ಕೇದಾರೇಶ್ವರನನ್ನು ಪೂಜೆಮಾಡುತ್ತಾ ಸಂತೋಷದಿಂದ ಜಾಗರಣ ಮಾಡಿದನು. ॥೫೭೮-೫೭೯-೫೮೦॥

ದೇವತೆಗಳಿರಾ! ಅವನು ಪೂಜೆ ಮತ್ತು ಉಪವಾಸ, ರಾತ್ರಿಯಲ್ಲಿ ಜಾಗರಣೆ, ಇವುಗಳನ್ನು ನೆರವೇರಿಸಿದ ಕೂಡಲೇ ಪೂರ್ವಜನ್ಮದ ಜಾತಿಸ್ಮರಣೆಯುಳ್ಳವನಾಗಿ ತತ್ವಜ್ಞಾನವನ್ನು ಅರಿತನು. ಆ ಕೂಡಲೇ ಅವನು ಭೂತಭವಿಷ್ಯದ್ವರ್ತಮಾನ ಜನ್ಮಗಳನ್ನೂ ತಿಳಿದು ಅದರಿಂದ ವಿಶೇಷ ದುಃಖವನ್ನು ಹೊಂದಿ, ಖಿನ್ನನಾದನು. ॥೫೮೧-೫೮೨॥

ಅವನು ಎಂಬತ್ತೆಂಟುಲಕ್ಷದಷ್ಟು ನೀಚಯೋನಿಗಳಲ್ಲಿ ಸಾವಿರಬಾರಿ ಜನ್ಮಗಳನ್ನು ಪಡೆಯುತ್ತೇನೆಂದು ಭಾವಿಸಿಕೊಂಡನು. ಆ ಜನ್ಮಗಳನ್ನೆಲ್ಲಾ ಪಡೆಯದೇ

ತಾನಿ ಜನ್ಮಾನ್ಯಸಂಪ್ರಾಪ್ಯ ದುಃಖಮಪ್ರಾಪ್ಯ ಚ ಸ್ವಯಂ ।
ಮುಕ್ತಸ್ತು ನ ಭವಿಷ್ಯಾಮಿ ಸರ್ವಥೇತ್ಯಪ್ಯಬುಧ್ಯತ ॥೫೮೪॥

ಯತಃ ಪ್ರಾಪ್ಯಾನಿ ಜನ್ಮಾನಿ ಮಯೈತಾವಂತ್ಯತೋ ಮಮ ।
ನ ಭವಿಷ್ಯಂತಿ ದೇಹಾಂತಃ ಶಿವಸ್ಮರಣಪೂರ್ವಕಂ ॥೫೮೫॥

ಯಸ್ಯ ದೇಹಕ್ಷಯೋ ಭಾವಿ ಶಿವಸ್ಮರಣಪೂರ್ವಕಂ ।
ನ ತಸ್ಯ ಜನ್ಮಸಂಬಂಧಃ ಪ್ರಾಪ್ಯತೇದೃಷ್ಟಸಂಗಮಃ ॥೫೮೬॥

ಮರಣಂ ಯಸ್ಯ ನಾ ಜಂತೋಃ ಶಿವಸ್ಮರಣಪೂರ್ವಕಂ ।
ಸ ಸಭಾಗ್ಯಂ ಸ ನಿರ್ದಗ್ಧದುಷ್ಟಾದುಷ್ಟಾಘಸಂತತಿಃ ॥೫೮೭॥

ಅನೇಕಧಾ ಕೃತಂ ಯೇನ ಶ್ರೀಮಹಾದೇವಪೂಜನಂ ।
ತಸ್ಯ ಸ್ಯಾನ್ಮರಣಂ ಜಂತೋಃ ಶಿವಸ್ಮರಣಪೂರ್ವಕಂ ॥೫೮೮॥

ವಿಷ್ಣುರುವಾಚ

ಇತಿ ಸಂಚಿಂತ್ಯ ಸಂಚಿಂತ್ಯ ಶಿವಪೂಜಾಪ್ರಭಾವತಃ ।
ಕಾಯವ್ಯೂಹೇನ ಜನ್ಮಾನಿ ಸಂಪ್ರಾಪ್ತುಂ ಯತ್ನವಾನಭೂತ್ ॥೫೮೯॥

ದುಃಖವನ್ನೂ ಹೊಂದದೇ ತಾನು, ಖಂಡಿತವಾಗಿಯೂ ಮೋಕ್ಷವನ್ನು ಪಡೆಯುವುದಿಲ್ಲವೆಂದೂ ತಿಳಿದುಕೊಂಡನು. ॥೫೮೩-೫೮೪॥

ಇಷ್ಟು ಜನ್ಮಗಳನ್ನು ನಾನು ಅವಶ್ಯವಾಗಿ ಹೊಂದಿಯೇ ತೀರಬೇಕಾಗಿದೆ ಈ ದೇಹತ್ಯಾಗವಾದರೋ ಶಿವಸ್ಮರಣಪೂರ್ವಕವಾಗಿ ಆಗುವುದಿಲ್ಲ ಶಿವಸ್ಮರಣೆ ಮಾಡಿ ಶರೀರತ್ಯಾಗಮಾಡುವವನಿಗೆ ಈ ಜನ್ಮಸಂಬಂಧವೇ ಉಂಟಾಗುವುದಿಲ್ಲ. ಇವೆಲ್ಲವೂ ಫಲವನ್ನನುಭವಿಸುವವನ ಅದೃಷ್ಟದಿಂದುಂಟಾಗುವುದೇ ಸರಿ. ॥೫೮೫-೫೮೬॥

ಶಿವಸ್ಮರಣಪೂರ್ವಕವಾಗಿ ಮರಣಹೊಂದುವ ಮಾನವನೇ ಭಾಗ್ಯಶಾಲಿಯು. ಅವನೇ ಸಕಲದುಷ್ಟವಾದ ಪಾಪರಾಶಿಗಳನ್ನೂ ನಾಶಪಡಿಸಿಕೊಂಡವನೂ ಆಗಿರುತ್ತಾನೆ. ಶ್ರೀ ಮಹಾದೇವನ ಪೂಜೆಯನ್ನು ಅನೇಕಬಾರಿಮಾಡಿದ ಪ್ರಾಣಿಗೇ ಶಿವಸ್ಮರಣಪೂರ್ವಕವಾಗಿ ಮರಣವುಂಟಾಗುತ್ತದೆ. ॥೫೮೭-೫೮೮॥

ಹೀಗೆ ಯೋಚಿಸಿ, ಯೋಚಿಸಿ, ಶಿವಪೂಜಾಮಹಿಮೆಯಿಂದ ಕಾಯವ್ಯೂಹ ಸಾಧನೆಯನ್ನನುಸರಿಸಿ ತಾನು ಮುಂದೆ ಅನುಭವಿಸಬೇಕಾದ ಜನ್ಮಗಳನ್ನು ಪಡೆ

ದೇಹಸೃಷ್ಟಾನಿ ಜನ್ಮಾನಿ ಸ ಸಂಪ್ರಾಪ್ಯ ಪುನಃ ಪುನಃ ।
ಚಂಡಾಲನಾರೀ ಸಮಭೂತ್ಸ ತತ್ವಜ್ಞೋ ವಿಚಕ್ಷಣಃ ॥೫೯೦॥

ಚಂಡಾಲಜನ್ಮ ಸಂಪ್ರಾಪ್ಯ ಶ್ವಮಾಂಸಂ ಸುರಯಾ ಸಹ ।
ಭೋಕ್ತುಂ ಸಮಾರಭೇ ದೇವಾಃ ಕಪಾಲೇನ ಚಿತಾಗ್ನಿನಾ ॥೫೯೧॥

ಶ್ವಮಾಂಸಂ ಸುರಯಾಸಿಕ್ತಂ ಪಚ್ಯಮಾನಂ ವಿಲೋಕ್ಯ ಸಃ ।
ಚರ್ಮಣಾ ಪಿಹಿತಂ ಚಕ್ರೇ ತತ್ಕಪಾಲಮುಖಂ ತದಾ ॥೫೯೨॥

ತದಾನೀಮಾಗತಸ್ತತ್ರ ದಧೀಚಿರ್ಮುನಿಸತ್ತಮಃ ।
ತಾಮದ್ರಾಕ್ಷೀತ್ತತೋ ನಾರೀಂ ಶ್ವಮಾಂಸಪಚನೋನ್ಮುಖೀಂ॥೫೯೩॥

ತಾಮುವಾಚ ತತೋ ನಾರೀಂ ಮುನಿರ್ವಿಸ್ಮಿತಮಾನಸಃ ।
ಚರ್ಮಣಾ ಪಿಹಿತಂ ದೃಷ್ಟ್ವಾ ಕಪಾಲಂ ಮಾಂಸಸಂಯುತಂ ॥೫೯೪॥

ಬಹಳ ಪ್ರಯತ್ನಮಾಡಿದನು. ದೇಹದಿಂದ ಬೇರೆಬೇರೆಯಾಗುವ ಜನ್ಮಗಳನ್ನೆಲ್ಲಾ ಅವನು ಪದೇಪದೇ ಹೊಂದಿ, ತತ್ವಜ್ಞನೂ, ಜಾಣನೂ ಆದ ಆ ಬ್ರಾಹ್ಮಣನು ಕೊನೆಗೆ ಚಂಡಾಲಸ್ತ್ರೀಯಾದನು. ॥೫೮೯-೫೯೦॥

ಓ ದೇವತೆಗಳಿರಾ! ಚಂಡಾಲಜನ್ಮವನ್ನು ಪಡೆದು ನಾಯಿಮಾಂಸವನ್ನು ಹೆಂಡದೊಡನೆ ಕಪಾಲದಲ್ಲಿಟ್ಟು, ಚಿತಾಗ್ನಿಯಿಂದ ಬೇಯಿಸಿ ತಿನ್ನಬೇಕೆಂದು ಪ್ರಾರಂಭಿಸಿದಳು. ಚಂಡಾಲಸ್ತ್ರೀವೇಷಧಾರಿಯಾದ ಆ ಬ್ರಾಹ್ಮಣನು ಹೆಂಡದಿಂದ ನೆನೆದ ನಾಯಿಮಾಂಸವು ಕಪಾಲದಲ್ಲಿ ಬೇಯುತ್ತಿರುವುದನ್ನು ನೋಡಿ ಆಗ ಆ ಕಪಾಲದ ಬಾಯನ್ನು ಚರ್ಮದಿಂದ ಮುಚ್ಚಿದನು. ॥೫೯೧-೫೯೨॥

ಅದೇ ಸಮಯದಲ್ಲಿ ಅಲ್ಲಿಗೆ ಮುನಿಶ್ರೇಷ್ಠನಾದ ದಧೀಚಿಯು ಮಾಂಸವನ್ನು ಬೇಯಿಸುವುದರಲ್ಲಿ ತೊಡಗಿರುವ ಆ ಹೆಂಗಸನ್ನು ಕಂಡನು. ಅನಂತರ ಮಾಂಸಯುಕ್ತವಾದ ಕಪಾಲಕ್ಕೆ ಚರ್ಮವನ್ನು ಮುಚ್ಚಿರುವುದನ್ನು ನೋಡಿ ಆಶ್ಚರ್ಯಗೊಂಡ ಮನಸ್ಸುಳ್ಳವನಾಗಿ ಮುನಿಯು ಅವಳನ್ನು ಕುರಿತು ಹೀಗೆ ಪ್ರಶ್ನೆಮಾಡಿದನು. ॥೫೯೩-೫೯೪॥

॥ ದಧೀಚಿರುವಾಚ ॥

ಅಮೇಧ್ಯತರಮೇತದ್ಧಿ ಶ್ವಮಾಂಸಂ ಪಚ್ಯತೇ ತ್ವಯಾ ।
ಕಿಮರ್ಥಮೇತದಧುನಾ ಚರ್ಮಣಾ ಪಿಹಿತಂ ಮುಖಂ ॥೫೯॥

ಅಮೇಧ್ಯತರವಸ್ತೂನಿ ನ ಸಂತ್ಯೇತದಪೇಕ್ಷಯಾ ।
ಚರ್ಮಣೈತತ್ಪಿಧಾನೇನ ವದ ಕಾರಣಮಸ್ತಿ ಕಿಂ ॥೬೦॥

॥ ವಿಷ್ಣುರುವಾಚ ॥

ಇತಿ ತದ್ವಚನಂ ಶ್ರುತ್ವಾ ಸತ್ಯಮುಕ್ತಂ ತ್ವಯೇತಿ ತಂ ।
ಪ್ರಣಮ್ಯ ವಿನಯಾದಾಹ ಸಾ ಚಂಡಾಲೀಸ್ವರೂಪಭಾಕ್ ॥೬೧॥

॥ ಪ್ರಾಪ್ತಚಂಡಾಲೀಜನ್ಮದ್ವಿಜ ಉವಾಚ ॥

ದೇವೋತ್ತಮಂ ಮಹಾದೇವಂ ಯೇ ವದಂತ್ಯನ್ಯಥಾ ಜನಾಃ ।
ತದ್ದೃಷ್ಟಿಪಾತಭೀತ್ಯೈತಚ್ಚರ್ಮಣಾ ಪಿಹಿತಂ ಮಯಾ ॥೬೨॥

ದೇವೋತ್ತಮೇ ಶಿವೇ ಸಾಂಬೇ ಯೋ ವಿಷ್ಣುಸಮತಾಂ ವದೇತ್ ।
ತದ್ದೃಷ್ಟಿಪಾತಭೀತ್ಯೈತಚ್ಚರ್ಮಣಾ ಪಿಹಿತಂ ಮಯಾ ॥೬೩॥

ಎಲೌ ನಾರಿಯೇ, ಅತ್ಯಂತ ಅಪವಿತ್ರವಾದ ಈ ನಾಯಿಮಾಂಸವನ್ನು ನೀನು ಬೇಯಿಸುತ್ತಿರುವೆ ಹೀಗಿದ್ದರೂ ನೀನು ಆ ಮಾಂಸಯುಕ್ತವಾದ ತಲೆ ಬುರುಡೆಯನ್ನು ಈಗ ಏಕೆ ಚರ್ಮದಿಂದ ಬಾಯಿಮುಚ್ಚಿರುವೆ? ಇದಕ್ಕಿಂತಲೂ ಹೆಚ್ಚಿನ ಅಪವಿತ್ರವಸ್ತುವೇ ವಸ್ತುತಃ ಇಲ್ಲ. ಈ ಸ್ಥಿತಿಯಲ್ಲಿ ನೀನು ಚರ್ಮದಿಂದ ಇದನ್ನು ಮುಚ್ಚಲು ಕಾರಣವೇನಿದೆ. ಹೀಗೆಂದು ದಧೀಚಿಮುನಿಯು ಚಾಂಡಾಲ ವೇಷಧಾರಿಯಾದ ಬ್ರಾಹ್ಮಣನನ್ನು ಪ್ರಶ್ನೆ ಮಾಡಿದನು. ॥೫೯-೬೦॥

ಆ ಮಾತನ್ನು ಕೇಳಿ ನೀನು ಕೇಳಿದುದು ಸತ್ಯವೆಂದು ದಧೀಚಿಮಹರ್ಷಿಗೆ ನಮಸ್ಕರಿಸಿ ವಿನಯದಿಂದ ಚಂಡಾಲಸ್ತ್ರೀವೇಷವನ್ನು ಧರಿಸಿದ್ದ ಬ್ರಾಹ್ಮಣ ನಿಂತೆಂದನು. ॥೬೧॥

ದೇವತೋತ್ತಮನಾದ ಆ ಮಹಾದೇವನನ್ನು ವಿಪರೀತಭಾವನೆಯಿಂದ ವರ್ಣಿಸುವವರೂ, ದೇವತೋತ್ತಮನೂ, ಅಂಬಿಕಾರಮಣನೂ ಎನಿಸಿದ ಆ ಶಿವನಲ್ಲಿ

ನ ಯೈರವ್ಯಭಿಚಾರೇಣ ಕ್ರಿಯತೇ ಶಿವಪೂಜನಂ ।
ತದ್ದೃಷ್ಟಿಪಾತಭೀತ್ಯೈತಚ್ಚರ್ಮಣಾ ಪಿಹಿತಂ ಮಯಾ ॥೬೦೦॥

ಭಸ್ಮನಾ ಮಂತ್ರಪೂತೇನ ನ ಯೈರುದ್ಧೂಳನಂ ಕೃತಂ ।
ತದ್ದೃಷ್ಟಿಪಾತಭೀತ್ಯೈತಚ್ಚರ್ಮಣಾ ಪಿಹಿತಂ ಮಯಾ ॥೬೦೧॥

ನ ಯೈಃ ಕೃತಂ ತ್ರಿಪುಂಡ್ರಸ್ಯ ಕೇವಲಸ್ಯೈವ ಧಾರಣಂ ।
ತದ್ದೃಷ್ಟಿಪಾತಭೀತ್ಯೈತಚ್ಚರ್ಮಣಾ ಪಿಹಿತಂ ಮಯಾ ॥೬೦೨॥

ರುದ್ರಾಕ್ಷಧಾರಣೇ ಭಕ್ತಿರ್ನ ಯೇಷಾಂ ಶ್ರುತಿಸಂಮತೇ ।
ತದ್ದೃಷ್ಟಿಪಾತಭೀತ್ಯೈತಚ್ಚರ್ಮಣಾ ಪಿಹಿತಂ ಮಯಾ ॥೬೦೩॥

ಮೃದೋರ್ಧ್ವಪುಂಡ್ರಫಾಲಾದೌ ಯೇ ಕುರ್ವಂತಿ ಭ್ರಮಾನ್ವಿತಾಃ ।
ತದ್ದೃಷ್ಟಿಪಾತಭೀತ್ಯೈತಚ್ಚರ್ಮಣಾ ಪಿಹಿತಂ ಮಯಾ ॥೬೦೪॥

ಯೇ ಲೀಲಯಾಪ್ಯೂರ್ಧ್ವಪುಂಡ್ರಂ ಧೃತ್ವಾ ತಿಷ್ಠಂತಿ ಮೋಹಿತಾಃ ।
ತದ್ದೃಷ್ಟಿಪಾತಭೀತ್ಯೈತಚ್ಚರ್ಮಣಾ ಪಿಹಿತಂ ಮಯಾ ॥೬೦೫॥

ಮೃದೋರ್ಧ್ವಪುಂಡ್ರಂ ಕರ್ತವ್ಯಮಿತಿ ಮೋಹಾದ್ವದಂತಿ ಯೇ ।
ತದ್ದೃಷ್ಟಿಪಾತಭೀತ್ಯೈತಚ್ಚರ್ಮಣಾ ಪಿಹಿತಂ ಮಯಾ ॥೬೦೬॥

ವಿಷ್ಣುವಿಗೆ ಸಮವಾದ ಭಾವನೆಯನ್ನು ಹೇಳುವವನೂ, ಎಡಬಿಡದೇ ಆ ಶಿವನನ್ನು ಪೂಜೆಮಾಡದವರೂ, ಮಂತ್ರದಿಂದ ಪರಿಶುದ್ಧವಾದ ವಿಭೂತಿಯನ್ನು ಲೇಪನ ಮಾಡದವರೂ, ಶುದ್ಧವೂ ವೇದಪ್ರಸಿದ್ಧವೂ ಆದ ಭಸ್ಮತ್ರಿಪುಂಡ್ರ ಮತ್ತು ರುದ್ರಾಕ್ಷಗಳನ್ನು ಭಕ್ತಿಯಿಂದ ಧರಿಸದವರೂ, ಭ್ರಾಂತಿಯಿಂದ ಮೃತ್ತಿಕೆಯಿಂದ ಊರ್ಧ್ವಪುಂಡ್ರವನ್ನು ಹಣೆ ಮುಂತಾದ ಸ್ಥಳಗಳಲ್ಲಿ ಅಲಂಕರಿಸಿಕೊಳ್ಳುವವರೂ, ಲೀಲೆಯಿಂದ ಅಜ್ಞಾನಯುಕ್ತರಾಗಿ, ಊರ್ಧ್ವಪುಂಡ್ರವನ್ನು ಧರಿಸುವವರೂ ಆದ ಜನಗಳ ದೃಷ್ಟಿಯು ಬೀಳುತ್ತದೆಂಬ ಭಯದಿಂದ ನಾನು ಚರ್ಮದಿಂದ ಈ ಕಪಾಲವನ್ನು ಮುಚ್ಚುತ್ತಿದ್ದೇನೆ ॥೫೯೮-೫೯೯-೬೦೦-೬೦೧-೬೦೨-೬೦೩-೬೦೪-೬೦೫॥

ಮೃತ್ತಿಕೆಯಿಂದ ಊರ್ಧ್ವಪುಂಡ್ರವನ್ನು ಧರಿಸಬೇಕೆಂದು ಮೋಹದಿಂದ ಹೇಳುವವರೂ, ಅಜ್ಞಾನದಿಂದ ಊರ್ಧ್ವಪುಂಡ್ರವನ್ನು ಧರಿಸಿರುವ ಬ್ರಾಹ್ಮಣರು,

ಯೇ ಭೋಜಯಂತಿ ಮೋಹೇನಾಪ್ಯೂರ್ಧ್ವಪುಂಡ್ರಧರಂ ದ್ವಿಜಂ
ತದ್ದೃಷ್ಟಿಪಾತಭೀತ್ಯೈತಚ್ಚರ್ಮಣಾ ಪಿಹಿತಂ ಮಯಾ ॥೬೦೭॥

ಯೇ ಭೋಜಯಂತಿ ಮೋಹೇನ ಶಿವಭಕ್ತಿವಿವರ್ಜಿತಾನ್
ತದ್ದೃಷ್ಟಿಪಾತಭೀತ್ಯೈತಚ್ಚರ್ಮಣಾ ಪಿಹಿತಂ ಮಯಾ ॥೬೦೮॥

ಯೇ ಪೂಜಯಂತಿ ಮೋಹೇನ ಶಿವಭಕ್ತಿವಿವರ್ಜಿತಾನ್ ।
ತದ್ದೃಷ್ಟಿಪಾತಭೀತ್ಯೈತಚ್ಚರ್ಮಣಾ ಪಿಹಿತಂ ಮಯಾ ॥೬೦೯॥

ನಮಸ್ಕುರ್ವಂತಿ ಯೇ ಮೋಹಾಚ್ಛಿವಭಕ್ತಿವಿವರ್ಜಿತಾನ್ ।
ತದ್ದೃಷ್ಟಿಪಾತಭೀತ್ಯೈತಚ್ಚರ್ಮಣಾ ಪಿಹಿತಂ ಮಯಾ ॥೬೧೦॥

ಭಗವಂತಮುಮಾಕಾಂತಂ ಸತತಂ ನಾರ್ಚಯಂತಿ ಯೇ ।
ತದ್ದೃಷ್ಟಿಪಾತಭೀತ್ಯೈತಚ್ಚರ್ಮಣಾ ಪಿಹಿತಂ ಮಯಾ ॥೬೧೧॥

ನ ಚಿತ್ತವೃತ್ತಿಃ ಸತತಂ ಯೇಷಾಂ ಶಿವಕಥಾಶ್ರುತೌ ।
ತದ್ದೃಷ್ಟಿಪಾತಭೀತ್ಯೈತಚ್ಚರ್ಮಣಾ ಪಿಹಿತಂ ಮಯಾ ॥೬೧೨॥

ನ ಯೇಷಾಂ ಸತತಂ ಚಿತ್ತಂ ಮಹೇಶಸ್ಮರಣೇ ರತಂ ।
ತದ್ದೃಷ್ಟಿಪಾತಭೀತ್ಯೈತಚ್ಚರ್ಮಣಾ ಪಿಹಿತಂ ಮಯಾ ॥೬೧೩॥

ನ ಯೇಷಾಂ ಪಾರ್ವತೀನಾಥೇ ಭಕ್ತಿರವ್ಯಭಿಚಾರಿಣೀ ।
ತದ್ದೃಷ್ಟಿಪಾತಭೀತ್ಯೈತಚ್ಚರ್ಮಣಾ ಪಿಹಿತಂ ಮಯಾ ॥೬೧೪॥

ಶಿವಭಕ್ತಿಯಿಲ್ಲದ ಜನಗಳು, ಇವರಿಗೆ ಭೋಜನಮಾಡಿಸುವರೂ, ಶಿವಭಕ್ತಿವಿಹೀನರಾದ ಜನಗಳಿಗೆ ಪೂಜೆ ಮತ್ತು ನಮಸ್ಕಾರಗಳನ್ನು ಮಾಡುವವರೂ, ಷಡ್ಗುಣೈಶ್ವರ್ಯಸಂಪನ್ನನಾದ ಆ ಉಮಾಕಾಂತನನ್ನು ಅನವರತವೂ ಪೂಜಿಸದವರೂ, ಯಾವಾಗಲೂ ಶಿವಕಥಾಶ್ರವಣದಲ್ಲಿ ಮನಸ್ಸಿಡದವರೂ, ಆ ಮಹೇಶನ ಸ್ಮರಣೆಯಲ್ಲಿ ಉದಾಸೀನವುಳ್ಳವರೂ, ಆ ಪಾರ್ವತೀಕಾಂತನಲ್ಲಿ ಅವಿಚ್ಛಿನ್ನವಾದ ಭಕ್ತಿಯನ್ನಿಡದವರೂ ಆದ ಜನಗಳ ದೃಷ್ಟಿಯು ಈ ಮಾಂಸಕ್ಕೆ ಬೀಳುತ್ತದೆಂಬ ಭಯದಿಂದ ನಾನು ಹೀಗೆ ಚರ್ಮದಿಂದ ಮುಚ್ಚುತ್ತಿರುವೆನು. ॥೬೦೭-೬೦೮-೬೦೯-೬೧೦-೬೧೧-೬೧೨-೬೧೩-೬೧೪॥

ಯೇ ವಿಷ್ಣ್ವಾದ್ಯಮರಾರಾಧ್ಯಂ ಮಹೇಶಂ ಪ್ರಾಹುರನ್ಯಥಾ ।
ತದ್ದೃಷ್ಟಿಪಾತಭೀತ್ಯೈತಚ್ಚರ್ಮಣಾ ಪಿಹಿತಂ ಮಯಾ ॥೬೧೫॥

ಸರ್ವಭಾವೇನ ಯೇ ನಿತ್ಯಂ ನ ಯಯುಃ ಶರಣಂ ಶಿವಂ ।
ತದ್ದೃಷ್ಟಿಪಾತಭೀತ್ಯೈತಚ್ಚರ್ಮಣಾ ಪಿಹಿತಂ ಮಯಾ ॥೬೧೬॥

ಸರ್ವೋತ್ತಮೋ ಮಹಾದೇವೋ ನ ಯೇಷಾಂ ಕುಲದೈವತಂ ।
ತದ್ದೃಷ್ಟಿಪಾತಭೀತ್ಯೈತಚ್ಚರ್ಮಣಾ ಪಿಹಿತಂ ಮಯಾ ॥೬೧೭॥

ಶಿವರಾತ್ರಿವ್ರತೇ ಭಕ್ತಿರ್ನ ಯೇಷಾಂ ಶ್ರುತಿಸಂಮತೇ ।
ತದ್ದೃಷ್ಟಿಪಾತಭೀತ್ಯೈತಚ್ಚರ್ಮಣಾ ಪಿಹಿತಂ ಮಯಾ ॥೬೧೮॥

ಸೋಮವಾರವ್ರತೇ ಭಕ್ತಿರ್ನ ಯೇಷಾಂ ಶ್ರುತಿಸಂಮತೇ ।
ತದ್ದೃಷ್ಟಿಪಾತಭೀತ್ಯೈತಚ್ಚರ್ಮಣಾ ಪಿಹಿತಂ ಮಯಾ ॥೬೧೯॥

ಕಾಲಾಷ್ಟಮೀವ್ರತೇ ಭಕ್ತಿರ್ನ ಯೇಷಾಂ ಶ್ರುತಿಸಂಮತೇ ।
ತದ್ದೃಷ್ಟಿಪಾತಭೀತ್ಯೈತಚ್ಚರ್ಮಣಾ ಪಿಹಿತಂ ಮಯಾ ॥೬೨೦॥

ಭಕ್ತಿರ್ನ ಯೇಷಾಂ ವೇದೋಕ್ತಶಿವತೀರ್ಥನಿಷೇವಣೇ ।
ತದ್ದೃಷ್ಟಿಪಾತಭೀತ್ಯೈತಚ್ಚರ್ಮಣಾ ಪಿಹಿತಂ ಮಯಾ ॥೬೨೧॥

ಭಕ್ತಿರ್ನ ಯೇಷಾಂ ವೇದೋಕ್ತೇ ಶಿವನೈವೇದ್ಯಭಕ್ಷಣೇ ।
ತದ್ದೃಷ್ಟಿಪಾತಭೀತ್ಯೈತಚ್ಚರ್ಮಣಾ ಪಿಹಿತಂ ಮಯಾ ॥೬೨೨॥

ವಿಷ್ಣುವೇ ಮುಂತಾದ ದೇವತೆಗಳಿಂದ ಪೂಜಾರ್ಹನಾದ ಮಹೇಶ್ವರನನ್ನು ವಿಪರೀತವಾಗಿ ಭಾವಿಸುವವರೂ, ಎಲ್ಲಾರೀತಿಯಿಂದಲೂ, ಆ ಶಿವನನ್ನೇ ನಿತ್ಯವೂ ಮರೆಹೊಗದವರೂ, ಸರ್ವೋತ್ತಮನೆನಿಸಿದ ಮಹಾದೇವನನ್ನು ಕುಲದೇವತೆಯಾಗಿ ಹೊಂದದವರೂ, ವೇದಸಂಮತವಾದ ಶಿವರಾತ್ರಿವ್ರತ, ಸೋಮವಾರವ್ರತ, ಕಾಲಾಷ್ಟಮೀ ವ್ರತಗಳಲ್ಲಿ ಭಕ್ತಿಹೊಂದದವರೂ, ವೇದಪ್ರತಿಪಾದಿತವಾದ ಶಿವತೀರ್ಥಸೇವೆ, ಶಿವನೈವೇದ್ಯಭಕ್ಷಣಗಳಲ್ಲಿ ಭಕ್ತಿಯಿಡದವರೂ ಮತ್ತು ಶ್ರೀ ಮಹಾದೇವನ ಭಕ್ತರ ವಿಷಯದಲ್ಲಿ ಸರ್ವಪ್ರಕಾರದಿಂದಲೂ ಭಕ್ತಿಯನ್ನಿಡದವರೂ ಆಗಿರುವ ಜನಗಳ ದೃಷ್ಟಿಯು ಬೀಳುತ್ತದೆಂಬ ಭಯದಿಂದ ಈ ನಾಯಿಮಾಂಸವನ್ನು ಕಪಾಲದಲ್ಲಿಟ್ಟು

ಶ್ರೀಮಹಾದೇವಭಕ್ತೇಷು ಭಕ್ತಿರ್ಯೇಷಾಂ ನ ಸರ್ವಥಾ ।
ತದ್ದೃಷ್ಟಿಪಾತಭೀತ್ಯೈತಚ್ಚರ್ಮಣಾ ಪಿಹಿತಂ ಮಯಾ ॥೬೨೩॥

ಯಥಾ ಚಂಡಾಲಸಂಸ್ಪೃಷ್ಟಮನ್ನಂ ಸಂತ್ಯಜ್ಯತೇ ಬುಧೈಃ ।
ಅಶೈವದೃಷ್ಟಮಪ್ಯನ್ನಂ ತಥಾ ತ್ಯಾಜ್ಯಂ ಪ್ರಯತ್ನತಃ ॥೬೨೪॥

ಜ್ಞೇಯಾಶ್ಚಂಡಾಲಚಾಂಡಾಲಾಃ ಶೈವಧರ್ಮವಿವರ್ಜಿತಾಃ ।
ಅತ ಏವ ಹಿ ತದ್ದೃಷ್ಟಂ ಭೋಕ್ತವ್ಯಂ ನ ಕದಾಚನ ॥೬೨೫॥

ಅಮೇಧ್ಯತರಮಪ್ಯೇತದಶೈವೈರ್ಯದಿ ದೃಶ್ಯತೇ ।
ಭವತ್ಯಮೇಧ್ಯಮತ್ಯಂತಂ ಶ್ವಮಲಾಕ್ತಮಿವೋಜ್ಝಿತಂ ॥೬೨೬॥

॥ ವಿಷ್ಣುರುವಾಚ ॥

ಇತಿ ತದ್ವಚನಂ ಶ್ರುತ್ವಾ ದಧೀಚಿರತಿವಿಸ್ಮಿತಃ ।
ತತ್ಸನೇತತ್ಕಥಂ ಜ್ಞಾತಮಿತಿ ಚಿಂತಾಪರೋಽಭವತ್ ॥೬೨೭॥

ಚರ್ಮದಿಂದ ಮುಚ್ಚಿ ಬೇಯಿಸುತ್ತಿರುವೆನು. ॥೬೧೫-೬೧೬-೬೧೭-೬೧೮-೬೧೯-೬೨೦-೬೨೧ ೬೨೨-೬೨೩॥

(ಚಂಡಾಲನಿಂದ ಮುಟ್ಟಲ್ಪಟ್ಟ) ಚಂಡಾಲಸ್ಪರ್ಶವಾದ ಅನ್ನವನ್ನು ಪಂಡಿತರು ತ್ಯಾಗಮಾಡುವಂತೆಯೇ ಶೈವಶ್ರೇಷ್ಠರಲ್ಲದವರು ದರ್ಶನಮಾಡಿದ ಅನ್ನವನ್ನೂ ನಿಯಮದಿಂದ ತ್ಯಾಗಮಾಡಬೇಕು. ಶಿವಧರ್ಮಗಳನ್ನು ಬಿಟ್ಟವರು ಚಂಡಾಲರಲ್ಲಿಯೂ ಅತಿ ನೀಚರಾದ ಚಂಡಾಲರೆನಿಸುವರು. ಆದ್ದರಿಂದಲೇ ಅವರು ನೋಡಿದ ಅನ್ನವನ್ನು ಎಂದಿಗೂ ಊಟಮಾಡಬಾರದು. ಶಿವದ್ರೋಹಿಗಳು ದರ್ಶನ ಮಾಡಿದರೆ ಆ ಅನ್ನವು ಅಮೇಧ್ಯಕ್ಕಿಂತಲೂ ತುಂಬಾ ಹೇಯವಾದುದೇ ಸರಿ. ಅದು ನಾಯಿಯ ಅಮೇಧ್ಯದಿಂದ ಬೆರೆದ ಅತಿನೀಚವಾದ ಅಪವಿತ್ರವಸ್ತುವೆಂದೇ ವಿಶೇಷವಾಗಿ ತ್ಯಾಗಮಾಡಲ್ಪಡುವುದು, ಎಂದು ಆ ಚಂಡಾಲಸ್ತ್ರೀವೇಷವನ್ನು ಧರಿಸಿದ್ದ ಬ್ರಾಹ್ಮಣನು ಹೇಳಿದನು ॥೬೨೪-೬೨೫-೬೨೬॥

ಆ ಮಾತುಗಳನ್ನು ಕೇಳಿ ದಧೀಚಿಮಹರ್ಷಿಯು ತುಂಬಾ ಆಶ್ಚರ್ಯಹೊಂದಿ, ಈ ರಹಸ್ಯವನ್ನು ಇವಳು ಹೇಗೆ ತಿಳಿದಳೆಂದು ಆಲೋಚಿಸತೊಡಗಿದನು. ಇವಳು

ಜಾಬಾಲಶ್ರುತಿಜ್ಞೇಷ್ಟೋಽಯಮರ್ಥೋಽದ್ಯ ಸಮುದೀರಿತಃ ।
ಅಯಮರ್ಥಃ ಕಥಂ ಜ್ಞಾತಶ್ಚಂಡಾಲ್ಯಾ ದುಷ್ಟಚಿತ್ತಯಾ ॥೬೨೮॥

ಇತಿ ಸಂಚಿಂತ್ಯ ಸ ಮುನಿರ್ದಧ್ಯೌ ಸ್ತಿಮಿತಲೋಚನಃ ।
ಚಾಂಡಾಲ್ಯಾಃ ಕಥಮೇತಸ್ಯಾಸ್ತತ್ತ್ವಜ್ಞಾನಮಭೂದಿತಿ ॥೬೨೯॥

ಪ್ರಣಿಧಾನೇನ ವಿಜ್ಞಾಯ ತತ್ಸ್ವರೂಪಂ ತತೋ ಮುನಿಃ ।
ಜಾತಿಸ್ಮರಾಯ ವಿಪ್ರಾಯ ಪ್ರಣಮ್ಯಾಹ ತಮಾದರಾತ್ ॥೬೩೦॥

॥ ದಧೀಚಿರುವಾಚ ॥

ಧನ್ಯೋಽಸಿ ಕೃತಕೃತ್ಯೋಽಸಿ ತತ್ತ್ವಜ್ಞೋಽಸಿ ದ್ವಿಜೋತ್ತಮ ।
ತ್ವತ್ಸ್ವರೂಪಂ ನ ವಿಜ್ಞಾತಂ ಮಯಾ ತತ್ಕ್ಷಮ್ಯತಾಂ ಪುರಾ ॥೬೩೧॥

ವಿಷ್ಣುರುವಾಚ

ಇತ್ಯುಕ್ತ್ವಾ ವಿನಯಾನ್ನತ್ವಾ ದಧೀಚಿಸ್ತಂ ದ್ವಿಜೋತ್ತಮಂ ।
ಅಸ್ಯ ಕೇದಾರನಾಥಸ್ಯ ಪೂಜಾರ್ಥಂ ಸಮುಪಾಗತಃ ॥೬೩೨॥

ಹೇಳಿದ ಈ ಅರ್ಥವು ಜಾಬಾಲಶ್ರುತಿಯಲ್ಲಿ ಹಿರಿದಾಗಿ ಹೇಳಲ್ಪಟ್ಟಿದೆ. ಅಂತಹ ಈ ಅರ್ಥವನ್ನು ದುಷ್ಟಮನಸ್ಕಳಾದ ಈ ಚಂಡಾಲಿಯು ಹೇಗೆ ತಿಳಿದಳು? ॥೬೨೭-೬೨೮॥

ಆ ದಧೀಚಿಮುನಿಯು ಹೀಗೆಂದು ಯೋಚಿಸಿ, ಕೊಂಚಕಾಲ ಕಣ್ಣುಮುಚ್ಚಿ, ಈ ಚಂಡಾಲಿಗೆ ತತ್ವಜ್ಞಾನವು ಹೇಗೆ ಉಂಟಾಯಿತೆಂದು ಧ್ಯಾನಮಾಡಿದನು. ಆಗ ದಿವ್ಯಜ್ಞಾನದಿಂದ ಆ ಮುನಿಗೆ ಆಕೆಯ ಸ್ವರೂಪವು ಗೋಚರಿಸಲು, ಜಾತಿಸ್ಮರನಾದ ಆ ಬ್ರಾಹ್ಮಣನಿಗೆ ನಮಸ್ಕಾರಮಾಡಿ ಆದರದಿಂದ ಅವನೊಡನಿಂತೆಂದನು. ॥೬೨೯-೬೩೦॥

ಅಯ್ಯಾ ಬ್ರಾಹ್ಮಣೋತ್ತಮನೇ, ನೀನೇ ಧನ್ಯನು ಮತ್ತು ಕೃತಾರ್ಥನು, ತತ್ವವನ್ನು ನೀನು ಅರಿತಿರುವೆ ಹಿಂದೆ ನಿನ್ನ ನಿಜಸ್ವರೂಪವನ್ನರಿಯದೇ ನಾನು ನಿನ್ನಲ್ಲಿ ನಡೆದುಕೊಂಡೆನು. ಆದ್ದರಿಂದ ದಯವಿಟ್ಟು ಕ್ಷಮಿಸಬೇಕೆಂದು ದಧೀಚಿ ಮುನಿಯು ಆ ಬ್ರಾಹ್ಮಣನನ್ನು ಕೇಳಿಕೊಂಡನು ॥೬೩೧॥

ದಧೀಚಿಮುನಿಯು ಹೀಗೆ ನುಡಿದು ವಿನಯದಿಂದ ಆ ಬ್ರಾಹ್ಮಣೋತ್ತಮನಿಗೆ ನಮಸ್ಕಾರಮಾಡಿ, ಈ ಕೇದಾರೇಶ್ವರನ ಪೂಜೆಗೋಸ್ಕರ ಇಲ್ಲಿಗೆ ಬಂದನು.

ಅಸ್ಯ ಕೇದಾರನಾಥಸ್ಯ ಪೂಜಯಾ ಬಹವಃ ಪುರಾ ।
ಜಾತಾ ಜಾತಿಸ್ಮರಾ ಯೋಗೇ ತತ್ತ್ವಜ್ಞಾ ಶ್ಚಾಮಿತೌಜಸಃ ॥೬೩೩॥

ಶಿವಾರ್ಚಕಾನಾಂ ಧನ್ಯಾನಾಂ ಶೈವಧರ್ಮರತಾತ್ಮನಾಂ ।
ತತ್ತ್ವಜ್ಞಾನಂ ಭವತ್ಯೇವ ಪ್ರಯಾಸೇನ ವಿನಾಧ್ರುವಂ ॥೬೩೪॥

ಧನ್ಯಾ ಮಹೇಶಸಂಸಕ್ತಪೂತಚಿತ್ತಾ ನಿರಂತರಂ ।
ಸತ್ಯಮೇತತ್ಸತ್ಯಮೇತದುದ್ಧೃತ್ಯ ಭುಜಮುಚ್ಯತೇ ॥೬೩೫॥

ಅನೇಕಜನ್ಮಭಿಸ್ತಸ್ತಂ ಯೇನ ಘೋರತರಂ ತಪಃ ।
ತಸ್ಯೈವ ಸತತಂ ಭಕ್ತಿರ್ಭವತಿ ಶ್ರೀಮಹೇಶ್ವರೇ ॥೬೩೬॥

ಮುಕ್ತಾ ಬಭೂವುರ್ಯಾವಂತಸ್ತಾವಂತಃ ಶಿವಪೂಜಕಾಃ ।
ಮುಕ್ತಿರ್ನಾಸ್ತ್ಯನ್ಯಥಾ ಯಸ್ಮಾದ್ವಿನೋಮಾಕಾಂತಪೂಜಯಾ ॥೬೩೭॥

ಯ ಏಕಾಂತಮುಮಾಕಾಂತಂ ಸ್ಮರಂತಃ ಸಂತಿ ಸಂತತಂ ।
ತೇ ಧನ್ಯಾಸ್ತತ್ಕುಲಂ ಧನ್ಯಂ ಧನ್ಯಾಸ್ತತ್ಪಿತರೋ ಧ್ರುವಂ ॥೬೩೮॥

ಓ ದೇವತೆಗಳಿರಾ, ಈ ಕೇದಾರನಾಥನ ಪೂಜೆಯಿಂದ ಹಿಂದೆ ಅನೇಕಮಂದಿ ಜಾತಿಸ್ಮರಣೆಯುಳ್ಳವರಾಗಿ ಶಿವಯೋಗನುಹಿಮೆಯಿಂದ ತತ್ತ್ವಜ್ಞರೂ ಅಪರಿಮಿತ ತೇಜಸ್ವಿಗಳೂ ಆಗಿರುವರು. ॥೬೩೨-೬೩೩॥

ಶಿವಧರ್ಮದಲ್ಲೇ ನಿರತರಾಗಿ ಶಿವಪೂಜಕರಾಗಿರುವ ಧನ್ಯರಿಗೆ ಆಯಾಸವೇ ಇಲ್ಲದೇ ತತ್ತ್ವಜ್ಞಾನವುಂಟಾಗುವುದರಲ್ಲಿ ಸಂದೇಹವೇ ಇಲ್ಲ. ಆ ಮಹೇಶ್ವರನಲ್ಲಿಯೇ ಯಾವಾಗಲೂ ನೆಲಸಿದ ಪರಿಶುದ್ಧವಾದ ಮನಸ್ಸುಳ್ಳವರೇ ಧನ್ಯರೆಂಬುದು ಸತ್ಯವು. ಭುಜವನ್ನೆತ್ತಿ ಇದು ಸತ್ಯವೆಂದು ಹೇಳುತ್ತೇನೆ. ॥೬೩೪-೬೩೫॥

ಅನೇಕ ಜನ್ಮಗಳಲ್ಲಿ ಅತಿ ಘೋರವಾದ ತಪಸ್ಸು ಮಾಡಿದವರಿಗೇ ಮಹೇಶ್ವರನಲ್ಲಿ ಅನವರತವೂ ಭಕ್ತಿಯುಂಟಾಗುವುದು. ಶಿವಪೂಜಕರಾಗಿರುವಷ್ಟು ಮಂದಿಯೂ ವಸ್ತುತಃ ಮೋಕ್ಷವನ್ನು ಪಡೆದೇ ಇರುವರು. ಆ ಉಮಾರಮಣನನ್ನು ಪೂಜೆಮಾಡದೇ ಖಂಡಿತವಾಗಿಯೂ ಮೋಕ್ಷವುಂಟಾಗುವುದೇ ಇಲ್ಲ ॥೬೩೬-೬೩೭॥

ಏಕಾಂತದಲ್ಲಿ ವೇದಸಂಮತನಾದ ಉಮಾರಮಣನನ್ನು ಯಾವಾಗಲೂ ಸ್ಮರಣೆಮಾಡುವವರೇ ಧನ್ಯರು. ಅವರ ವಂಶವು ಪವಿತ್ರವಾದುದು. ಅವರ ಪಿತೃಗಳು

ವಿನಾ ಭಾಗ್ಯೇನ ಮಹತಾ ಶಂಕರಾರಾಧನೇ ಮತಿಃ ।
ನ ಭವಿಷ್ಯತಿ ತತ್ಸತ್ಯಮುದ್ಧೃತ್ಯ ಭುಜಮುಚ್ಯತೇ ॥೬೩೯॥

ಶಂಕರಾರಾಧಕಾ ಏವ ಭೂರಿಭಾಗ್ಯಸಮಾಶ್ರಯಾಃ ।
ಸತ್ಯಮೇತತ್ಪುನಃ ಸತ್ಯಮುದ್ಧೃತ್ಯ ಭುಜಮುಚ್ಯತೇ ॥೬೪೦॥

ಭೂರಿಭಾಗ್ಯಪ್ರಭಾವೇನ ಶಂಭೌ ಭಕ್ತಿಃ ಪ್ರಜಾಯತೇ ।
ಸತ್ಯಮೇತತ್ಪುನಃ ಸತ್ಯಮುದ್ಧೃತ್ಯ ಭುಜಮುಚ್ಯತೇ ॥೬೪೧॥

ಶಿವಂಕರೋ ಶಂಕರಾನ್ಯೋಽಸ್ತೀತಿ ಶಂಕಾಪಿ ನೈವ ಮೇ ।
ಶಿವ ಏವ ಇತಿಶ್ರುತ್ವಾ ನಿರ್ಣೀತೋಽರ್ಥೋ ಯತೋ ಮಯಾ ॥೬೪೨॥

ಶಂಕರಂ ಶಂಕರಂ ಮತ್ವಾ ಯೋಽರ್ಚಯಂತಿ ತಮನ್ವಹಂ ।
ತಂ ಮನ್ಯಾಪ್ಯಹಮಭ್ಯರ್ಚ್ಯಂ ಭಕ್ತಿಶ್ರದ್ಧಾಪುರಃಸರಂ ॥೬೪೩॥

ಭಗವಂತಮುಮಾಕಾಂತಂ ಯೋ ನಾರ್ಚಯತಿ ಸಂತತಂ ।
ಸ ನಿತ್ಯಸೂತಕೀ ತಸ್ಯ ಪೃಥಿವ್ಯಾಂ ನಾಸ್ತಿ ಸಂತತಿಃ ॥೬೪೪॥

---

ಖಂಡಿತವಾಗಿಯೂ ಧನ್ಯರಾಗಿರುವರು. ವಿಶೇಷ ಭಾಗ್ಯವಿಲ್ಲದೇ ಆ ಶಂಕರನ ಪೂಜೆಯಲ್ಲಿ ಬುದ್ಧಿ ಹುಟ್ಟುವುದಿಲ್ಲ. ಇದು ಸತ್ಯ. ಭುಜವೆತ್ತಿ ಸತ್ಯವೆಂದು ಹೇಳುವೆನು. ||೬೩೮-೬೩೯||

ಆ ಶಂಕರನ ಪೂಜಕರೇ ವಿಶೇಷವಾದ ಭಾಗ್ಯಕ್ಕೆ ಆಶ್ರಯರಾಗುವರು. ಅತಿಶಯವಾದ ಭಾಗ್ಯದ ಮಹಿಮೆಯಿಂದ ಆ ಶಂಭುವಿನಲ್ಲಿ ಜನಗಳಿಗೆ ಭಕ್ತಿಯುಂಟಾಗುತ್ತಿದೆ. ಇದು ಸತ್ಯವು. ಭುಜವನ್ನೆತ್ತಿ ಈ ವಿಷಯವನ್ನು ಸತ್ಯವೆಂದು ನಾನು ಹೇಳುತ್ತೇನೆ. ೬೪೦-೬೪೧

ಆ ಶಂಕರನಿಗಿಂತಲೂ ಬೇರೆಯವನು ಮಂಗಳಕರನೆಂಬ ಯೋಚನೆಯೇ ನನಗಿಲ್ಲ. 'ಶಿವಶಿವ' ಎಂಬ ಶ್ರುತಿಯಿಂದ ಈ ಅರ್ಥವು ನನಗೆ ನಿರ್ಣಯವಾಯಿತು. ಆ ಶಂಕರನೇ ಮಂಗಳಕರನೆಂದು ತಿಳಿದು ಅನವರತವೂ ಪೂಜೆಮಾಡುವವನು ಶ್ರದ್ಧಾಭಕ್ತಿಗಳಿಂದ ನನಗೆ ಪೂಜಾರ್ಹನಾಗಿರುವನು. ೬೪೨-೬೪೩||

ಭಗವಂತನಾದ ಉಮಾರಮಣನನ್ನು ಅನವರತವೂ ಪೂಜೆಮಾಡದವನು ನಿತ್ಯಸೂತಕವುಳ್ಳವನು. ಅವನಿಗೆ ಭೂಮಿಯಲ್ಲಿ ಸಂತಾನವೇ ಇಲ್ಲ. ಯಾವಾ

ಯಃ ಸರ್ವದಾ ಮಹಾದೇವಂ ಭಕ್ತಿಪೂತೋ ನ ಸಂಶ್ರಯೇತ್ ।
ಸ ದುಷ್ಟಃ ಸ ತು ಪಾಪಿಷ್ಠಃ ಸ ಪಾತಕಗಣಾಶ್ರಯಃ ॥೬೪೫॥

ಧೃತ್ವೋಷ್ಣೀಷಾದಿಕಂ ಮೂರ್ಧ್ನಿ ಯಃ ಕುರ್ಯಾಚ್ಛಿವಪೂಜನಂ ।
ಸ ಶಿರೋವ್ಯಾಧಿಸಂಕ್ರಾಂತೋ ನರಕಂ ಚಾಧಿಗಚ್ಛತಿ ॥೬೪೬॥

ಶರೀರೇ ಕಂಚುಕಂ ಧೃತ್ವಾ ಯೋ ಗಚ್ಛೇಚ್ಛಿವಮಂದಿರಂ ।
ಸ ಕುಷ್ಠಾಕ್ರಾಂತಸರ್ವಾಂಗೋ ನರಕಂ ಚಾಧಿಗಚ್ಛತಿ ॥೬೪೭॥

ವಿಭೂತಿಧಾರಣಂ ತ್ಯಕ್ತ್ವಾ ಯೋ ಗಚ್ಛೇಚ್ಛಿವಮಂದಿರಂ ।
ಸ ಪುಲ್ಕಸೋದರೇ ಸ್ಥಿತ್ವಾ ನರಕಂ ಚಾಧಿಗಚ್ಛತಿ ॥೬೪೮॥

ಶಿವಾಲಯಾಂಗಣೇ ಚಾರ್ಮಂ ಯಃ ಪಾದತ್ರಾಣಮುತ್ಸೃಜೇತ್ ।
ಸ ಕಲ್ಪಕೋಟಿಪರ್ಯಂತಂ ಚಂಡಾಲೋ ಭವತಿ ಧ್ರುವಂ ॥೬೪೯॥

ಯಃ ಪಾದತ್ರಾಣಪಾದಃ ಸನ್ಪ್ರವಿಶೇಚ್ಛಂಕರಾಂಗಣಂ ।
ಸ ಕಲ್ಪಕೋಟಿಪರ್ಯಂತಮಂತ್ಯಜಃ ಸಾನ್ವಯೋಭವೇತ್ ॥೬೫೦॥

---

ಗಲೂ ಮಹಾದೇವನನ್ನು ಭಕ್ತಿಪೂರ್ವಕವಾಗಿ ಆಶ್ರಯಿಸದವನೇ ದುಷ್ಟನು, ಪಾಪಿಷ್ಠನು. ಅವನೇ ಸಕಲ ಪಾಪಸಮೂಹಗಳಿಗೂ ಆಶ್ರಯನು. ॥೬೪೪-೬೪೫॥

ತಲೆಯಮೇಲೆ ಪೇಟ (ರುಮಾಲು) ವೇ ಮೊದಲಾದುವುಗಳನ್ನು ಧರಿಸಿ ಶಿವಪೂಜೆಮಾಡುವವನು ತಲೆಬಾಧೆಯಿಂದ ಕೂಡಿದವನಾಗಿ ನರಕವನ್ನು ಹೊಂದುವನು. ಮೈಮೇಲೆ ಅಂಗಿ, ಕೋಟು ಮುಂತಾದವುಗಳನ್ನು ಧರಿಸಿ ಶಿವಮಂದಿರವನ್ನು ಪ್ರವೇಶಿಸುವವನು ಶ್ವೇತರೋಗದಿಂದ ಯುಕ್ತನಾಗಿ ನರಕವನ್ನು ಹೊಂದುವನು. ॥೬೪೬-೬೪೭॥

ವಿಭೂತಿಯನ್ನು ಧರಿಸದೇ ಶಿವದೇವಾಲಯಕ್ಕೆ ಪ್ರವೇಶಮಾಡುವವನು ಚಂಡಾಲನ ಹೊಟ್ಟೆಯಲ್ಲಿ ಹುಟ್ಟಿ, ಕೊನೆಗೆ ನರಕವನ್ನು ಹೊಂದುವನು. ಶಿವದೇವಾಲಯದ ಅಂಗಣದಲ್ಲಿ ಚರ್ಮದ ಪಾದರಕ್ಷೆಯನ್ನು ಬಿಡುವವನು ಕೋಟಿಕಲ್ಪಗಳವರೆಗೆ ಚಂಡಾಲಜನ್ಮವನ್ನು ಖಂಡಿತವಾಗಿ ಅನುಭವಿಸುವನು. ॥೬೪೮-೬೪೯॥

ಪಾದರಕ್ಷೆಯನ್ನು ಹಾಕಿಕೊಂಡು ಶಂಕರನ ದೇವಾಲಯದ ಅಂಗಣವನ್ನು ಪ್ರವೇಶಮಾಡುವವನು ಕೋಟಿಕಲ್ಪಗಳವರೆಗೆ ವಂಶಪಾರಂಪರ್ಯವಾಗಿ ಪಂಚಮನಾ

ಪಾದತ್ರಾಣಂ ಶಿವದ್ವಾರಿ ಚಾರ್ಮಂ ಯಃ ಸ್ಥಾಪಯಿಷ್ಯತಿ ।
ಸ ಕೋಟಿಕಲ್ಪಪರ್ಯಂತಂ ಯಾತಿ ಚಂಡಾಲದಾಸತಾಂ ॥೬೫೧॥

ಧೃತ್ವೋರ್ಧ್ವಪುಂಡ್ರಂ ಯಃ ಕುರ್ಯಾನ್ಮೋಹೇನಾಪಿ ಶಿವಾರ್ಚನಂ ।
ಸ ಯಾತಿ ನರಕಂ ಘೋರಂ ಯಾವದಾಚಂದ್ರತಾರಕಂ ॥೬೫೨॥

ಅವಿನೀತೋ ಮಹಾದೇವಂ ಯಃ ಪೂಜಯಿತುಮಿಚ್ಛತಿ ।
ಸ ಯಾತಿ ನರಕಂ ಘೋರಂ ಯಾವದಾಚಂದ್ರತಾರಕಂ ॥೬೫೩॥

ಪೂಜಾದ್ರವ್ಯಮನಾದಾಯ ಯೋ ಗಚ್ಛೇಚ್ಛಿವಮಂದಿರಂ ।
ಸ ಯಾತಿ ನರಕಂ ಘೋರಂ ಯಾವದಾಚಂದ್ರತಾರಕಂ ॥೬೫೪॥

ಹೃದಿ ದೇವೋತ್ತಮತ್ವೇನ ಯೋ ನ ಧ್ಯಾತಿ ಮಹೇಶ್ವರಂ ।
ಸ ಯಾತಿ ನರಕಂ ಘೋರಂ ಯಾವದಾಚಂದ್ರತಾರಕಂ ॥೬೫೫॥

ಹೃದಿ ಸರ್ವಾತ್ಮಕತ್ವೇನ ಯೋ ನ ಧ್ಯಾತಿ ಮಹೇಶ್ವರಂ ।
ಸ ಯಾತಿ ನರಕಂ ಘೋರಂ ಯಾವದಾಚಂದ್ರತಾರಕಂ ॥೬೫೬॥

ಹೃದಿ ವಿಶ್ವಾತ್ಮಕತ್ವೇನ ಯೋ ನ ಧ್ಯಾತಿ ಮಹೇಶ್ವರಂ ।
ಸ ಯಾತಿ ನರಕಂ ಘೋರಂ ಯಾವದಾಚಂದ್ರತಾರಕಂ ॥೬೫೭॥

ಹೃದಿ ಮೋಕ್ಷಪ್ರದತ್ವೇನ ಯೋ ನ ಧ್ಯಾತಿ ಮಹೇಶ್ವರಂ ।
ಸ ಯಾತಿ ನರಕಂ ಘೋರಂ ಯಾವದಾಚಂದ್ರತಾರಕಂ ॥೬೫೮॥

ಗುವನು. ಶಿವದೇವಾಲಯದ ಬಾಗಿಲಿನಲ್ಲಿ ಚರ್ಮದ ಪಾದರಕ್ಷೆಯನ್ನು ಇಡುವವನು ಕೋಟಿಕಲ್ಪಗಳವರೆಗೆ ಚಂಡಾಲನಿಗೆ ದಾಸನಾಗುವನು. ॥೬೫೦-೬೫೧॥

ಊರ್ಧ್ವಪುಂಡ್ರವನ್ನು ಧರಿಸಿ ಅಜ್ಞಾನದಿಂದ ಶಿವಪೂಜೆಮಾಡುವವನೂ, ವಿನಯವಿಲ್ಲದೇ ಮಹಾದೇವನನ್ನು ಪೂಜೆಮಾಡಲು ಇಚ್ಛಿಸುವವನೂ ಸಹ ಘೋರವಾದ ನರಕವನ್ನು ಚಂದ್ರಸೂರ್ಯರಿರುವವರೆಗೂ ಅನುಭವಿಸುತ್ತಾನೆ. ॥೬೫೨-೬೫೩॥

ಪೂಜಾದ್ರವ್ಯಗಳನ್ನು ತೆಗೆದುಕೊಳ್ಳದೇ ಶಿವಮಂದಿರಕ್ಕೆ ಪ್ರವೇಶಮಾಡುವವನೂ, ಮನಸ್ಸಿನಲ್ಲಿ ಆ ಮಹೇಶ್ವರನನ್ನು ದೇವತೋತ್ತಮ, ಸರ್ವಸ್ವರೂಪ, ಜಗ

ಯಃ ಸತತಮುಮಾಕಾಂತಂ ನಾರಾಧಯತಿ ಸಾದರಂ ।
ಸ ಕಂಟಕೆತರುರ್ಭೂತ್ವಾ ಶ್ಮಶಾನೇಷ್ವಧಿತಿಷ್ಠತಿ ॥೬೫೯॥

ಶಿವಾನಿವೇದಿತಾನ್ನಾನಿ ಯೋ ಭುಂಕ್ತೇ ಸೋಽಪಿ ದುಃಖಿತಃ ।
ಆಬ್ರಹ್ಮಕಲ್ಪಪರ್ಯಂತಂ ವಿಷ್ಠಾಯಾಂ ಜಾಯತೇ ಕ್ರಿಮಿಃ ॥೬೬೦॥

ಶಿವಲಿಂಗಮನಭ್ಯರ್ಚ್ಯ ಸಕೃದ್ವಾ ಯಃ ಪಿಬೇದಪಃ ।
ಸ ಕೋಟಿಜನ್ಮಪರ್ಯಂತಂ ಚಂಡಾಲೋ ಭವತಿ ಧ್ರುವಂ ॥೬೬೧॥

ಶಿವಲಿಂಗಮನಭ್ಯರ್ಚ್ಯ ಯೋಽನ್ಯಕರ್ಮರತೋ ಭವೇತ್ ।
ಸ ಕೋಟಿಜನ್ಮಪರ್ಯಂತಂ ವಿಡ್ವರಾಹೋ ಭವಿಷ್ಯತಿ ॥೬೬೨॥

ಶಿವಲಿಂಗಮನಭ್ಯರ್ಚ್ಯ ಭೋಕ್ತುಂ ಯೋ ಯತತೇ ನರಃ ।
ಸ ಕೋಟಿಕಲ್ಪಪರ್ಯಂತಂ ಶುನಕೋ ಭವತಿ ಧ್ರುವಂ ॥೬೬೩॥

ಶಿವಲಿಂಗಮನಭ್ಯರ್ಚ್ಯ ಯೋ ಭೋಜಯಿತುಮಿಚ್ಛತಿ ।
ಸ ಕೋಟಿಯುಗಪರ್ಯಂತಂ ಮಾರ್ಜಾಲೋ ಭವತಿ ಧ್ರುವಂ॥೬೬೪॥

ದ್ರೂಪ ಮತ್ತು ಮೋಕ್ಷವನ್ನು ಕೊಡುವವನು ಎಂಬುದಾಗಿ ಧ್ಯಾನಮಾಡದಿರುವವನು ಸೂರ್ಯಚಂದ್ರರಿರುವವರೆಗೂ ಘೋರವಾದ ನರಕವನ್ನು ಹೊಂದುತ್ತಾನೆ. ||೬೫೪-೬೫೫-೬೫೬-೬೫೭-೬೫೮||

ಉಮಾರಮಣನನ್ನು ಆದರದಿಂದ ಯಾವಾಗಲೂ ಪೂಜೆಮಾಡದವನು, ಮುಳ್ಳಿನ ಮರವಾಗಿ ಸ್ಮಶಾನದಲ್ಲಿ ಹುಟ್ಟುವನು. ಶಿವನಿಗೆ ನಿವೇದನಮಾಡದ ಅನ್ನವನ್ನು ಊಟಮಾಡುವವನು ದುಃಖವನ್ನು ಹೊಂದಿ, ಬ್ರಹ್ಮಕಲ್ಪದವರೆಗೂ ಅಮೇಧ್ಯದಲ್ಲಿ ಕ್ರಿಮಿಯಾಗಿ ಹುಟ್ಟುತ್ತಾನೆ. ||೬೫೯-೬೬೦||

ಶಿವಲಿಂಗಕ್ಕೆ ಪೂಜೆಮಾಡದೇ ಒಂದುಬಾರಿಯಾದರೂ ನೀರನ್ನು ಕುಡಿಯುವವನು ಕೋಟಿಜನ್ಮಗಳವರೆಗೂ ಚಂಡಾಲನಾಗುವುದು ಖಂಡಿತ. ಶಿವಲಿಂಗವನ್ನು ಪೂಜಿಸದೇ ಇತರ ಕರ್ಮಗಳಲ್ಲಿ ನಿರತನಾಗುವವನು ಕೋಟಿಜನ್ಮಗಳವರೆಗೆ ಅಮೇಧ್ಯಭಕ್ಷಣೆಮಾಡುವ ಹಂದಿಯಾಗುತ್ತಾನೆ. ||೬೬೧-೬೬೨||

ಶಿವಲಿಂಗವನ್ನು ಪೂಜಿಸದೇ ಊಟಮಾಡಲು ಪ್ರಯತ್ನಿಸುವ ಮಾನವನು ಕೋಟಿಕಲ್ಪಗಳವರೆಗೆ ಖಂಡಿತವಾಗಿಯೂ ನಾಯಿಯಾಗುವನು. ಹಾಗೆಯೇ ಶಿವ

ವಿಭೂತಿಧಾರಣಂ ತ್ಯಕ್ತ್ವಾ ಯೋ ಭುಂಕ್ತೇ ಮೋಹಸಂಗತಃ ।
ಸ ಕಾಕಜನ್ಮ ಸಂಪ್ರಾಪ್ಯ ನರಕಂ ಚಾಪ್ಯಧಿಗಚ್ಛತಿ ॥೬೬೫॥

ವಿಭೂತಿಧಾರಣಂ ತ್ಯಕ್ತ್ವಾ ಯೋ ಭೋಜಯಿತುಮಿಚ್ಛತಿ ।
ಸ ಗೃಧ್ರಜನ್ಮ ಸಂಪ್ರಾಪ್ಯ ನರಕಂ ಚಾಧಿಗಚ್ಛತಿ ॥೬೬೬॥

ತ್ರಿಪುಂಡ್ರಾನಂಕಿತಂ ವಿಪ್ರಂ ಯೋ ಭೋಜಯಿತುಮಿಚ್ಛತಿ ।
ಸ ಸರ್ಪಜನ್ಮ ಸಂಪ್ರಾಪ್ಯ ನರಕಂ ಚಾಧಿಗಚ್ಛತಿ ॥೬೬೭॥

ನ ನಮೇದ್ದಂಡವದ್ಭಕ್ತ್ಯಾ ಯೋಽನ್ವಹಂ ಪಾರ್ವತೀಪತಿಂ ।
ಸ ವನೇಽಜಗರೋ ಭೂತ್ವಾ ನರಕಂ ಚಾಧಿಗಚ್ಛತಿ ॥೬೬೮।

ಪ್ರದಕ್ಷಿಣಂ ಮಹೇಶಸ್ಯ ಯೋಽನ್ವಹಂ ನ ಕರಿಷ್ಯತಿ ।
ಸ ತೈಲಘಟ್ಟಕಾಗಾರೇ ಬಲೀವರ್ದೋ ಭವಿಷ್ಯತಿ ॥೬೬೯॥

ಯೋ ನ ಸ್ತೌತಿ ಮಹಾದೇವಂ ಶಿವಸ್ತೋತ್ರೈರನೇಕಧಾ ।
ಸ ಪುನಃ ಪುನರಾಜನ್ಮ ಮೂಕ ಏವಾಭಿಜಾಯತೇ ॥೬೭೦॥

ಲಿಂಗವನ್ನು ಪೂಜೆಮಾಡದೇ ಇತರರಿಗೆ ಭೋಜನಮಾಡಿಸಲು ಅಪೇಕ್ಷಿಸುವವನು ಕೋಟಿಯುಗಗಳವರೆಗೆ ಖಂಡಿತನಾಗಿಯೂ ಬೆಕ್ಕಾಗುವವನು. ॥೬೬೩-೬೬೪॥

ಅಜ್ಞಾನದಿಂದ ಯುಕ್ತನಾಗಿ ವಿಭೂತಿಯನ್ನು ಧರಿಸದೇ ಊಟಮಾಡುವವನು ಕಾಗೆಯ ಜನ್ಮವನ್ನು ಪಡೆದು ನರಕವನ್ನು ಹೊಂದುತ್ತಾನೆ. ವಿಭೂತಿಯನ್ನಿಡದೆ ಮತ್ತೊಬ್ಬರಿಗೆ ಭೋಜನಮಾಡಿಸಲು ಅಪೇಕ್ಷೆಪಡುವವನು ಹದ್ದಿನ ಜನ್ಮವನ್ನು ಹೊಂದಿ ಕೊನೆಗೆ ನರಕವನ್ನೈದುತ್ತಾನೆ. ॥೬೬೫-೬೬೬॥

ಭಸ್ಮತ್ರಿಪುಂಡ್ರವನ್ನು ಧರಿಸದ ಬ್ರಾಹ್ಮಣನಿಗೆ ಭೋಜನಮಾಡಿಸಲು ಇಚ್ಛಿಸುವವನು ಸರ್ಪಜನ್ಮವನ್ನು ಹೊಂದಿ ನರಕಕ್ಕೆ ತೆರಳುವನು. ಪ್ರತಿದಿನವೂ ಆ ಪಾರ್ವತೀರಮಣನಿಗೆ ಭಕ್ತಿಯಿಂದ ನಮಸ್ಕರಿಸದೇ ಇರುವವನೂ, ಕಾಡಿನಲ್ಲಿ ಹೆಬ್ಬಾವಿನ ಜನ್ಮಪಡೆದು ಕೊನೆಗೆ ನರಕವನ್ನೈದುವನು. ॥೬೬೭-೬೬೮॥

ಮಹೇಶ್ವರನಿಗೆ ಪ್ರತಿದಿನವೂ ಪ್ರದಕ್ಷಿಣೆಮಾಡದವನು ಗಾಣಿಗನ ಮನೆಯ ಎತ್ತಾಗಿ ಹುಟ್ಟುವವನು. ಶಿವನ ಸ್ತೋತ್ರಗಳಿಂದ ನಾನಾವಿಧವಾಗಿ ಮಹಾದೇವನನ್ನು ಸ್ತೋತ್ರಮಾಡದವನು, ಪುನಃ ಪುನಃ ಮೂಕನಾಗಿಯೇ ಹುಟ್ಟುವನು ॥೬೬೯-೬೭೦॥

ಯಃ ಪೂಜಿತಂ ಮಹಾದೇವಂ ನ ಪಶ್ಯತ್ಯನ್ವಹಂ ಮುದಾ ।
ಸ ಕೋಟಿಜನ್ಮಪರ್ಯಂತಮಂಧ ಏವಾಭಿಜಾಯತೇ ॥೬೭೦॥

ಯೋಽನ್ವಹಂ ಶಿವಲಿಂಗಾಗ್ರೇ ನರ್ತನಂ ನ ಕರಿಷ್ಯತಿ ।
ಸ ಕೋಟಿಯುಗಪರ್ಯಂತಂ ಮೂತ್ರಕೂಪೇಽಧಿತಿಷ್ಠತಿ ॥೬೭೧॥

ಕುರ್ಯಾಚ್ಛಿವಾಲಯಪ್ರಾಂತೇ ಯೋ ಮಲಂ ಮೋಹತೋಽಪಿ ವಾ ।
ಸ ಕಲ್ಪಕೋಟಿಪರ್ಯಂತಂ ಮಲಕುಂಡೇಽಧಿತಿಷ್ಠತಿ ॥೬೭೩॥

ಕುರ್ಯಾಚ್ಛಿವಾಲಯೇ ಯಸ್ತು ಶ್ಲೇಷ್ಮೋದ್ಗಾರಾದಿಕಾನಿ ಚ ।
ಸ ಕೋಟಿಕಲ್ಪಪರ್ಯಂತಂ ಶ್ಲೇಷ್ಮಕುಂಡೇಽಧಿತಿಷ್ಠತಿ ॥೬೭೪॥

ಶಿವಾಭಿಮರ್ಶನಂ ಶ್ರೌತಂ ನ ಕರಿಷ್ಯತಿ ಯೋಽನ್ವಹಂ ।
ಸ ಕೋಟಿಕಲ್ಪಪರ್ಯಂತಂ ತಪ್ತಶೈಲೇಽಧಿತಿಷ್ಠತಿ ॥೬೭೫॥

ಅತೋಽತಿಸಾವಧಾನೇನ ಸ್ಥಾತವ್ಯಂ ಮುಕ್ತಿಕಾಂಕ್ಷಿಭಿಃ ।
ವಿರೂಪಾಕ್ಷಃ ಪೂಜನೀಯೋ ನಿತ್ಯಮವ್ಯಭಿಚಾರತಃ ॥೬೭೬॥

ಪೂಜೆಮಾಡಿದ ಆ ಮಹಾದೇವನನ್ನು ಪ್ರತಿನಿತ್ಯವೂ ಸಂತೋಷದಿಂದ ನೋಡದಿರುವವನು ಕೋಟಿಜನ್ಮಗಳವರೆಗೂ ಕುರುಡನೇ ಆಗಿ ಹುಟ್ಟುತ್ತಾನೆ. ಶಿವಲಿಂಗದ ಮುಂದೆ ನಿತ್ಯವೂ ನಾಟ್ಯವಾಡದವನು ಕೋಟಿಯುಗಗಳವರೆಗೂ ಮೂತ್ರದ ಬಾವಿಯಲ್ಲಿ ನೆಲಸುವನು. ॥೬೭೦-೬೭೧॥

ಶಿವಾಲಯದ ಪಕ್ಕದ ಪ್ರದೇಶದಲ್ಲಿ ಅಜ್ಞಾನದಿಂದಲಾದರೂ ಮಲವನ್ನು ವಿಸರ್ಜನೆ ಮಾಡುವವನು ಕೋಟಿಕಲ್ಪಗಳವರೆಗೆ ಅಮೇಧ್ಯಕುಂಡದಲ್ಲಿರುವನು. ಶಿವದೇವಾಲಯದಲ್ಲಿ ಶ್ಲೇಷ್ಮವೇ ಮುಂತಾದವುಗಳನ್ನು ಉಗುಳುವವನು ಕೋಟಿಕಲ್ಪಗಳವರೆಗೆ ಶ್ಲೇಷ್ಮಕುಂಡದಲ್ಲೇ ನೆಲಸುವನು. ಶ್ರುತಿಪ್ರಸಿದ್ಧವಾದ ಶಿವನ ಸ್ಪರ್ಶವನ್ನು ಪ್ರತಿದಿನವೂ ಮಾಡದವನು ಕೋಟಿಕಲ್ಪಗಳವರೆಗೆ ಕಾದಕಲ್ಲಿನ ಮೇಲೆಯೇ ಇರುತ್ತಾನೆ. ॥೬೭೩-೬೭೪-೬೭೫॥

ಆದ್ದರಿಂದ ಮೋಕ್ಷವನ್ನು ಬಯಸುವವರು ಸಾವಧಾನದಿಂದ ನಿತ್ಯವೂ ತಪ್ಪದೇ ಆ ವಿರೂಪಾಕ್ಷನನ್ನು ಪೂಜಿಸಬೇಕು. ಮಹೇಶ್ವರನ ಪೂಜೆಯನ್ನು

ಮಹೇಶಾರಾಧನಂ ತ್ಯಕ್ತ್ವಾ ಮುಕ್ತ್ಯರ್ಥೀ ಯೋಽನ್ಯಮರ್ಚಯೇತ್ ।
ಸ ಸಂತ್ಯಕ್ತ್ವಾಽಮೃತಂ ಮೋಹಾದ್ರೇತಃ ಪಿಬತಿ ಸಂತತಂ ॥೬೭೭॥

॥ ಅಗಸ್ತ್ಯ ಉವಾಚ ॥

ಇತ್ಯುಕ್ತ್ವಾ ತದ್ವಚಃ ಶ್ರುತ್ವಾ ಬ್ರಹ್ಮಾದ್ಯಾ ಹೃಷ್ಟಮಾನಸಾಃ ।
ಚಂಡಾಲೀರೂಪಮಾಸಾದ್ಯ ಕಿಂ ಚಕಾರೇತಿ ಚಾಬ್ರುವನ್ ॥೬೭೮॥

॥ ವಿಷ್ಣುರುವಾಚ ॥

ಕಾಯವ್ಯೂಹೇನ ಸರ್ವಾಣಿ ಶರೀರಾಣಿ ಯಥಾಕ್ರಮಂ ।
ಸಂಪ್ರಾಪ್ಯ ಸರ್ವದುಃಖಾನಿ ಸ ಸಂಪ್ರಾಪ ತತಃ ಪರಂ ॥೬೭೯॥

ತತಃ ಪುನಃ ಸಮಾಗತ್ಯ ಕೇದಾರೇಶಮಮುಂ ಪ್ರಭುಂ ।
ಸಂಪೂಜ್ಯ ಸರ್ವಬಂಧೇಭ್ಯೋ ಮುಕ್ತೋ ಮುಕ್ತೋ ಬಭೂವ ಸಃ॥೬೮೦

ಮೋಕ್ಷಂ ಪ್ರತಿ ಸುರಾಃ ಶ್ರೌತಂ ಶ್ರೀ ವಿರೂಪಾಕ್ಷಪೂಜನಂ ।
ಅನ್ಯಾನಪೇಕ್ಷಮನಘಮಸಾಧಾರಣಕಾರಣಂ ॥೬೮೧॥

ಬಿಟ್ಟು, ಮೋಕ್ಷವನ್ನಪೇಕ್ಷಿಸುವವನು ಬೇರೊಂದು ದೈವವನ್ನು ಪೂಜಿಸಲು ಇಚ್ಛಿಸಿದರೆ ಅಮೃತವನ್ನು ಬಿಟ್ಟು, ರೇತಸ್ಸನ್ನು ಪಾನಮಾಡಿದವನಂತಾಗುವುದು ॥೬೭೬-೬೭೭॥

ವಿಷ್ಣುವು ಈ ರೀತಿ ನುಡಿದುದನ್ನು ಕೇಳಿ ಬ್ರಹ್ಮನೇ ಮುಂತಾದ ದೇವತೆಗಳೆಲ್ಲರೂ ಸಂತುಷ್ಟಮನಸ್ಕರಾಗಿ ಚಂಡಾಲಸ್ತ್ರೀ ರೂಪವನ್ನು ಧರಿಸಿ ಆ ಬ್ರಾಹ್ಮಣನು ಮುಂದೇನು ಮಾಡಿದನೆಂದು ವಿಷ್ಣುವನ್ನು ಪುನಃ ಪ್ರಶ್ನೆಮಾಡಿದರು. ॥೭೭೮॥

ಕಾಯವ್ಯೂಹಶಕ್ತಿಯಿಂದ ಆ ಬ್ರಾಹ್ಮಣನು ತಾನು ಮುಂದೆ ಅನುಭವಿಸಬೇಕಾಗಿದ್ದ ದೇಹಗಳನ್ನೆಲ್ಲಾ ಕ್ರಮವಾಗಿ ಹೊಂದಿ, ಎಲ್ಲಾ ವಿಧವಾದ ದುಃಖಗಳನ್ನೂ ಅನುಭವಿಸಿದನು. ಅನಂತರ ಪುನಃ ಬಂದು ಕೇದಾರೇಶ್ವರನೆಂಬ ಈ ಪ್ರಭುವನ್ನು ಪೂಜೆಮಾಡಿ, ಎಲ್ಲಾ ವಿಧವಾದ ಬಂಧನಗಳಿಂದಲೂ ಬಿಡುಗಡೆ ಹೊಂದಿದನು. ॥೬೭೯-೬೮೦॥

ಓ ದೇವತೆಗಳಿರಾ, ಮೋಕ್ಷಪ್ರಾಪ್ತಿಗೆ ಶ್ರುತಿಪ್ರಸಿದ್ಧವಾದ ಶ್ರೀ ವಿರೂಪಾಕ್ಷನ ಪೂಜೆಯೇ ಮುಖ್ಯಸಾಧನ. ಇದು ಮತ್ತಾವುದರ ಅಪೇಕ್ಷೆಯನ್ನೂ ಬೇಡದುದೂ, ದೋಷರಹಿತವೂ ಮತ್ತು ಅಸಾಧಾರಣವಾದ ಕಾರಣವೂ ಎನಿಸಿದೆ. ದೇವತೆಗಳೇ,

ಮಹಾದೇವಾರ್ಚನೇ ಪ್ರೀತಿರ್ಮಹದ್ಭಾಗ್ಯಫಲಂ ಸುರಾಃ ।
ತತೋ ವಿಧೇಯಂ ಯತ್ನೇನ ಶ್ರೀ ಮಹಾದೇವಪೂಜನಂ ॥೬೮೨॥

ಮಹಾದೇವಾರ್ಚಸಪರ್ಕೈಃ ಶಿವಪೂಜಾಫಲೇಪ್ಸುಭಿಃ ।
ಯತ್ಕರ್ತವ್ಯಂ ಪ್ರಯತ್ನೇನ ತತ್ಸಮಾಸೇನ ವಕ್ಷ್ಯತೇ ॥೬೮೩॥

ಕೃತ್ವಾ ಶೌಚಾದಿಕಂ ಕರ್ಮ ಸ್ನಾತ್ವಾ ತು ವಿಮಲೇ ಜಲೇ ।
ಭಸ್ಮನೋದ್ಧೂಳನಂ ಕಾರ್ಯಂ ಸಮ್ಯಗಾಪಾದಮಸ್ತಕಂ ॥೬೮೪॥

ಕೇವಲಂ ವಾರುಣಂ ಸ್ನಾನಂ ದೇಹಬಾಹ್ಯಮಲಾಪಹಂ ।
ವಿಭೂತಿಸ್ನಾನಮನಘಂ ಬಾಹ್ಯಾಂತರಮಲಾಪಹಂ ॥೬೮೫॥

ತ್ಯಕ್ತ್ವಾಽಪಿ ವಾರುಣಂ ಸ್ನಾನಂ ವಿಭೂತಿಸ್ನಾನತತ್ಪರಃ ।
ಅಂತರ್ಬಹಿಶ್ಚ ಸಂಶುದ್ಧಃ ಶಿವಪೂಜಾಫಲಂ ಲಭೇತ್ ॥೬೮೬॥

ಮಹಾದೇವನ ಪೂಜೆಯಲ್ಲಿನ ಪ್ರೀತಿಯು ತುಂಬಾ ಭಾಗ್ಯದ ಫಲವೇಸರಿ. ಆದರಿಂದ ನೀನೆಲ್ಲರೂ ನಿಯಮದಿಂದ ಶ್ರೀ ಮಹಾದೇವನ ಪೂಜೆಯನ್ನು ಮಾಡಬೇಕು. ||೬೮೧-೬೮೨||

ಶಿವಪೂಜಾಫಲವನ್ನಪೇಕ್ಷಿಸಿ ಮಹಾದೇವನನ್ನು ಪೂಜಿಸುವುದರಲ್ಲಿ ನಿರತರಾದವರು ಮಾಡಬೇಕಾದ ನಿತ್ಯಕರ್ಮಗಳನ್ನು ಸಂಗ್ರಹವಾಗಿ ವಿವರಿಸುವೆನು, ಕೇಳಿರಿ. ಬೆಳಗ್ಗೆ ಮೊದಲು ಶೌಚವೇ ಮೊದಲಾದ ಕರ್ಮಗಳನ್ನು ಮುಗಿಸಿಕೊಂಡು ನಿರ್ಮಲವಾದ ನೀರಿನಲ್ಲಿ ಸ್ನಾನಮಾಡಿ, ಕಾಲಿನಿಂದ ತಲೆಯವರೆಗೂ ಚೆನ್ನಾಗಿ ವಿಭೂತಿಯನ್ನು ಲೇಪನಮಾಡಿಕೊಳ್ಳಬೇಕು. ||೬೮೩-೬೮೪||

ಕೇವಲ ನೀರಿನ ಸ್ನಾನವು ಶರೀರದ ಹೊರಗಿನ ಕೊಳೆಯನ್ನು ಮಾತ್ರ ಹೋಗಲಾಡಿಸುವುದು. ದೋಷರಹಿತವಾದ ವಿಭೂತಿಸ್ನಾನವಾದರೋ ಬಾಹ್ಯ ಮತ್ತು ಅಂತರ (ಒಳಗಿನ) ಕಲ್ಮಷವನ್ನು ಹೋಗಲಾಡಿಸುವುದು. ಜಲಸ್ನಾನ ಮಾಡದಿದ್ದರೂ ವಿಭೂತಿಸ್ನಾನತತ್ಪರನಾದರೆ, ಅವನು ಅಂತರಂಗ ಮತ್ತು ಬಾಹ್ಯ ಶುದ್ಧಿಯುಳ್ಳವನಾಗಿ ಶಿವಪೂಜಾ ಫಲವನ್ನೈದುವನು. ||೬೮೫-೬೮೬||

ಯದ್ಬಾಹ್ಯಮಲಮಾತ್ರಸ್ಯ ನಾಶಕಂ ಸ್ನಾನಮಸ್ತಿ ತತ್ ।
ಕೃತಮಪ್ಯಕೃತಂ ಸತ್ಯಂ ಭಸ್ಮಸ್ನಾನಂ ವಿನಾ ಸುರಾಃ ॥೬೮೭॥

ಭಸ್ಮಸ್ನಾನಂ ಶ್ರುತಿಪ್ರೋಕ್ತಮಾಗ್ನೇಯಂ ಸ್ನಾನಮುಚ್ಯತೇ ।
ತನ್ನಾಶಯತಿ ತೀವ್ರೇಣ ಪ್ರಾಣಿಬಾಹ್ಯಾಂತರಂ ಮಲಂ ॥೬೮೮॥

ಯಾ ಭಸ್ಮನಾ ಸಮಾಕ್ರಾಂತಾ ತನುಃ ಸೈವಾತಿನಿರ್ಮಲಾ ।
ಭಸ್ಮಸಂಬಂಧಮಾತ್ರೇಣ ನಶ್ಯತ್ಯಘೌಕುಲಂ ಯತಃ ॥೬೮೯॥

ಕೃತ್ವಾಪಿ ಕೋಟಿಶೋ ನಿತ್ಯಂ ವಾರುಣಂ ಸ್ನಾನಮಾದರಾತ್ ।
ನ ಭವತ್ಯೇವ ಪೂತಾತ್ಮಾ ಭಸ್ಮಸ್ನಾನಂ ವಿನಾ ದ್ವಿಜಾಃ ॥೬೯೦॥

ಯದ್ಭಸ್ಮಸ್ನಾನಮಾಹಾತ್ಮ್ಯಂ ತದ್ವೇದೋ ವೇದ ತತ್ತ್ವತಃ ।
ಯದ್ವಾ ವೇದ ಮಹಾದೇವಃ ಸರ್ವದೇವಶಿಖಾಮಣಿಃ ॥೬೯೧॥

ಭಸ್ಮಸ್ನಾನಮಕೃತ್ವೈವ ಯಃ ಕುರ್ಯಾತ್ಕರ್ಮ ವೈದಿಕಂ ।
ಸ ತತ್ಕರ್ಮಫಲಾರ್ಧಾರ್ಧಮಪಿ ನಾಪ್ನೋತಿ ವಸ್ತುತಃ ॥೬೯೨॥

ಬಾಹ್ಯದ ಕೊಳೆಯನ್ನು ಮಾತ್ರ ನಾಶಮಾಡುವ ಈ ವಾರುಣಸ್ನಾನವು ಭಸ್ಮಸ್ನಾನಮಾಡದಿದ್ದರೆ, ಮಾಡಿದರೂ ಮಾಡದಂತೆಯೇ ಸರಿ. ದೇವತೆಗಳಿರಾ, ವೇದಪ್ರಸಿದ್ಧವಾದ ಭಸ್ಮಸ್ನಾನವು ಆಗ್ನೇಯಸ್ನಾನವೆಂದು ಹೇಳಲ್ಪಡುತ್ತದೆ ಅದು ಪ್ರಾಣಿಗಳ ಒಳಹೊರಗಿನ ಕಲ್ಮಷವನ್ನೂ ಜಾಗ್ರತೆಯಾಗಿ ನಾಶಮಾಡಿಬಿಡುತ್ತದೆ. ॥೬೮೭-೬೮೮॥

ವಿಭೂತಿಧಾರಣೆಯಿಂದ ಶೋಭಿಸುವ ಶರೀರವೇ ತುಂಬಾ ನಿರ್ಮಲವಾದದ್ದು. ಭಸ್ಮಸಂಬಂಧಮಾತ್ರದಿಂದ ಪಾಪರಾಶಿಯು ಕೂಡಲೇ ನಾಶವಾಗುವುದು. ನಿತ್ಯವೂ ಕೋಟ್ಯಂತರ ಜಲಸ್ನಾನವನ್ನು ಆದರದಿಂದ ಮಾಡಿದರೂ ವಿಭೂತಿಸ್ನಾನವಿಲ್ಲದೇ ಮಾನವನು ಪರಿಶುದ್ಧಾಂತಃಕರಣನಾಗುವುದಿಲ್ಲ. ॥೬೮೯-೬೯೦॥

ಆ ಭಸ್ಮಸ್ನಾನ ಮಹಿಮೆಯನ್ನು ವೇದಗಳು ಮತ್ತು ಸಕಲದೇವಶಿಖಾಮಣಿ ಯಾದ ಮಹಾದೇವನು ಇವರಿಬ್ಬರೇ ಸರಿಯಾಗಿ ತಿಳಿದಿರುವವರು. ವಿಭೂತಿ ಸ್ನಾನ ಮಾಡದೇ ವೈದಿಕಕರ್ಮವನ್ನು ಮಾಡುವವನು ಆ ಕರ್ಮದ ಫಲದಲ್ಲಿ ಅರ್ಧದಲ್ಲಿ ಅರ್ಧಭಾಗವನ್ನೂ ಹೊಂದಲಾರನು. ॥೬೯೧-೬೯೨॥

ಯಃ ಕರಿಷ್ಯತಿ ಯತ್ನೇನ ಭಸ್ಮಸ್ನಾನಂ ಯಥಾವಿಧಿ ।
ಸ ಏವ ವೈದಿಕೇ ಕರ್ಮಣ್ಯಧಿಕಾರೀ ಶ್ರುತಿಶ್ರುತಃ ॥೬೯೩॥

ಅಕೃತ್ವಾ ಭಸ್ಮನಾ ಸ್ನಾನಂ ಪೂತೋಽಹಮಿತಿ ಯೋ ವದೇತ್ ।
ಸ ಏವಾನೃತವಾದೀತಿ ವಿಜ್ಞೇಯಃ ಸತತಂ ಬುಧೈಃ ॥೬೯೪॥

ಪಾವನಂ ಪಾವನಾನಾಂ ಚ ಭಸ್ಮಸ್ನಾನಂ ಶ್ರುತಿಶ್ರುತಂ ।
ನ ಕರಿಷ್ಯತಿ ಯೋ ಮೋಹಾತ್ಸಮಹಾಪಾತಕೀ ಭವೇತ್ ॥೬೯೫॥

ಅನಂತೈರ್ವಾರುಣೈಃ ಸ್ನಾನೈರ್ಯತ್ಪುಣ್ಯಂ ಪ್ರಾಪ್ಯತೇ ದ್ವಿಜೈಃ ।
ತತೋಽನಂತಗುಣಂ ಪುಣ್ಯಂ ಭಸ್ಮಸ್ನಾನಾದವಾಪ್ಯತೇ ॥೬೯೬॥

ಕಾಲತ್ರಯೇಽಪಿ ಕರ್ತವ್ಯಂ ಭಸ್ಮಸ್ನಾನಂ ಪ್ರಯತ್ನತಃ ।
ಭಸ್ಮಸ್ನಾನಂ ಯತಃ ಶ್ರೌತಂ ತತ್ತ್ಯಾಗೀ ಪತಿತೋ ಭವೇತ್ ॥೬೯೭॥

ಮೂತ್ರಾದ್ಯುತ್ಸರ್ಜನಾಂತೇಽಪಿ ಭಸ್ಮಸ್ನಾನಂ ಪ್ರಯತ್ನತಃ ।
ಕರ್ತವ್ಯಮನ್ಯಥಾ ಪೂತಾ ನ ಭವಿಷ್ಯಂತಿ ಮಾನವಾಃ ॥೬೯೮॥

ವಿಧಿಯನ್ನನುಸರಿಸಿ ನಿಯಮದಿಂದ ವಿಭೂತಿ ಸ್ನಾನಮಾಡುವವನೇ ವೈದಿಕ ಕರ್ಮಕ್ಕೆ ವೇದೋಕ್ತನಾದ ಅಧಿಕಾರಿಯೆನಿಸುವನು. ಭಸ್ಮಸ್ನಾನಮಾಡದೇ ನಾನು ಪರಿಶುದ್ಧನಾಗಿದ್ದೇನೆಂದು ಹೇಳುವವನು ಸುಳ್ಳನ್ನು ಯಾವಾಗಲೂ ಹೇಳುವವನೆಂದು ಪಂಡಿತರು ತಿಳಿಯಬೇಕು. ॥೬೯೩-೬೯೪॥

ಪರಿಶುದ್ಧರಲ್ಲಿಯೂ ಅತಿಪಾವನವಾದ ವೇದಪ್ರಸಿದ್ಧವೆನಿಸಿದ ಭಸ್ಮಸ್ನಾನವನ್ನು ಅಜ್ಞಾನದಿಂದ ಮಾಡದಿರುವವನು ತುಂಬಾ ಪಾಪಿಯಾಗುವನು. ಅನೇಕ ಜಲಸ್ನಾನಗಳಿಂದ ಉಂಟಾಗುವಷ್ಟು ಪುಣ್ಯವು ಅದಕ್ಕಿಂತಲೂ ಅಪರಿಮಿತಪಾಲು ಹೆಚ್ಚಾಗಿ ಭಸ್ಮಸ್ನಾನದಿಂದ ಬ್ರಾಹ್ಮಣರಿಗೆ ಉಂಟಾಗುವುದು. ॥೬೯೫-೬೯೬॥

ವಿಭೂತಿಸ್ನಾನವು ಶ್ರುತಿಪ್ರಸಿದ್ಧವಾಗಿರುವುದರಿಂದ ಅದನ್ನು ಬೆಳಗ್ಗೆ ಮಧ್ಯಾಹ್ನ ಮತ್ತು ಸಾಯಂಕಾಲ ಈ ಮೂರುವೇಳೆಯಲ್ಲಿಯೂ ನಿಯಮದಿಂದ ಮಾಡಬೇಕು. ಅದನ್ನು ಮಾಡದೇ ಬಿಟ್ಟರೆ ಪಾಪಿಯಾಗುತ್ತಾನೆ. ಮಲಮೂತ್ರವೇ ಮುಂತಾದವುಗಳನ್ನು ವಿಸರ್ಜಿಸಿದ ಮೇಲೆಯೂ ನಿಯಮದಿಂದ ಭಸ್ಮಸ್ನಾನವನ್ನು

ವಿಧಿವತ್ಕೃತಶೌಚೋಽಪಿ ಭಸ್ಮಸ್ನಾನಂ ವಿನಾ ದ್ವಿಜಃ।
ನ ಭವಿಷ್ಯತಿ ಪೂತಾತ್ಮಾ ನಾಧಿಕಾರ್ಯಪಿ ಕರ್ಮಣಿ ॥೬೯॥

ಅಪಾನವಾಯುನಿರ್ಯಾಣೇ ಜೃಂಭಣೇ ಸ್ಕಂಭನೇ ಕ್ಷುತೇ।
ಶ್ಲೇಷ್ಮೋದ್ಗಾರೇಽಪಿ ಕರ್ತವ್ಯಂ ಭಸ್ಮಸ್ನಾನಂ ಪ್ರಯತ್ನತಃ ॥೨೦೦॥

ಭಸ್ಮಸ್ನಾಯೀ ತ್ರಿಪುಂಡ್ರಾಂಕಃ ಕೃತರುದ್ರಾಕ್ಷಭೂಷಣಃ।
ಕೃತ್ವಾ ಶಿವಾರ್ಚನಂ ನಿತ್ಯಂ ಶಿವಪೂಜಾಫಲಂ ಲಭೇತ್ ॥೨೦೧॥

ಕೃತಭಸ್ಮಸ್ನಾನಪೂತೋ ಯತ್ರ ಕುತ್ರಾಪಿ ವಾ ಮೃತಃ।
ಸ ಸರ್ವಪಾಪನಿರ್ಮುಕ್ತಃ ಶಿವಲೋಕಂ ಗಮಿಷ್ಯತಿ ॥೨೦೨॥

ಪುರಾ ಕಶ್ಚಿದ್ದ್ವಿಜವರಃ ಕಾಶೀಂ ಗಂತುಂ ಸಮುದ್ಯತಃ।
ಶನೈಃ ಶನೈರ್ದಕ್ಷಿಣತಶ್ಚಚಾಲಾತ್ಯಂತಮಾಸ್ತಿಕಃ ॥೨೦೩॥

ಮಾಡಬೇಕು. ಇಲ್ಲದಿದ್ದರೆ ಮಾನವರು ಖಂಡಿತವಾಗಿಯೂ ಪಾವನರಾಗುವುದಿಲ್ಲ. ॥೯೭-೯೮॥

ವಿಧಿಗನುಸಾರ ಶೌಚಗಳನ್ನು ಮಾಡಿದರೂ ಭಸ್ಮಸ್ನಾನಮಾಡದ ಬ್ರಾಹ್ಮಣನು ಪರಿಶುದ್ಧನಾಗುವುದಿಲ್ಲ. ಮತ್ತು ವೈದಿಕಕರ್ಮಗಳಿಗೆ ಅಧಿಕಾರಿಯೂ ಆಗಲಾರನು. ಅಪಾನವಾಯುವನ್ನು ಬಿಡುವುದು, ಆಕಳಿಕೆ, ಜೆಮ್ಮು, ಸೀನುವುದು ಮತ್ತು ಶ್ಲೇಷ್ಮವನ್ನು ಉಗುಳುವುದು ಮುಂತಾದುವುಗಳಲ್ಲಿಯೂ ಭಸ್ಮಸ್ನಾನವನ್ನು ನಿಯಮದಿಂದ ಮಾಡಬೇಕು. ॥೯೯-೨೦೦॥

ಭಸ್ಮತ್ರಿಪುಂಡ್ರ, ರುದ್ರಾಕ್ಷಗಳನ್ನು ಅಲಂಕರಿಸಿಕೊಂಡು, ಭಸ್ಮಸ್ನಾನಮಾಡಿದನಂತರ ಶಿವಪೂಜೆಯನ್ನು ನಿತ್ಯವೂ ಮಾಡುವವನು ಶಿವಪೂಜಾಫಲವನ್ನು ಹೊಂದುತ್ತಾನೆ. ಭಸ್ಮಸ್ನಾನಮಾಡಿ ಪವಿತ್ರನಾದವನು ಎಲ್ಲಾದರೂ ಮರಣಹೊಂದಿದರೂ ಅವನು ಸಕಲಪಾಪಗಳಿಂದಲೂ ಬಿಡುಗಡೆ ಹೊಂದಿ ಕೊನೆಗೆ ಶಿವಲೋಕವನ್ನೈದುವನು. ॥೨೦೧-೨೦೨॥

ಹಿಂದೆ ಒಬ್ಬ ಬ್ರಾಹ್ಮಣೋತ್ತಮನು ಕಾಶೀಪಟ್ಟಣಕ್ಕೆ ಹೋಗಲು ಪ್ರಯತ್ನಿಸಿ, ತುಂಬಾ ಆಸ್ತಿಕನಾದ ಅವನು ಮೆಲ್ಲಮೆಲ್ಲಗೆ ದಕ್ಷಿಣದಿಕ್ಕಿಗೆ ಪ್ರಯಾಣಮಾಡಿದನು. ಮಾರ್ಗದಲ್ಲಿ ಪ್ರಯಾಣಮಾಡುತ್ತಾ ರಾತ್ರಿಯಾಗಲು ಒಂದು ಜಾಗದಲ್ಲಿ

ಗಚ್ಛನ್ಮಾರ್ಗೇ ಕ್ವಚಿತ್ಸ್ಥಿತ್ವಾ ರಾತ್ರಿಂ ನೀತ್ವಾರುಣೋದಯೇ ।
ಕೃತ್ವಾ ಶೌಚಾದಿಕಂ ಸರ್ವಂ ಭಸ್ಮಸ್ನಾನಂ ಚಕಾರ ಸಃ ॥೨೦೪॥

ತತಸ್ತಂ ಭಸ್ಮನಾ ಸ್ನಾತಂ ಶುಚಿರ್ಭೂತಂ ದ್ವಿಜೋತ್ತಮಂ ।
ದದರ್ಶ ಪಥಿಕಃ ಕಶ್ಚಿತ್ತದಾ ಸರ್ಪವಿಷಾವೃತಃ ॥೨೦೫॥

ತತಃ ಪ್ರಣಮ್ಯ ತಂ ವಿಪ್ರಂ ಸ್ವವೃತ್ತಾಂತಮಶೇಷತಃ ।
ತಸ್ಮೈ ನಿವೇದಯಾಮಾಸ ಸರ್ಪದಂಶಂ ಚ ಸತ್ವರಂ ॥೨೦೬॥

ತತಸ್ತಮರ್ಧನಿಷ್ಕ್ರಾಂತಪ್ರಾಣವಾಯುಂ ವಿಲೋಕಯನ್ ।
ತದಂಗಂ ಭಸ್ಮಸಂವೀತಂ ಚಕಾರ ದಯಯಾ ದ್ವಿಜಃ ॥೨೦೭॥

ತತಸ್ತಂ ನೇತುಮಚಿರಾದಾಗತಾ ಯಮಕಿಂಕರಾಃ ।
ತತಸ್ತೇ ಭಸ್ಮಸಂವೀತಂ ದೃಷ್ಟ್ವಾ ಪ್ರಾಹುಃ ಪರಸ್ಪರಂ ॥೨೦೮॥

॥ ಯಮದೂತಾ ಊಚುಃ ॥

ಅಯಂ ಕೃತಾಘಸಂಘೋಽಪಿ ಭಸ್ಮಸಂವೀತವಿಗ್ರಹಃ ।
ಪೂತಾತ್ಮಾ ಜಾತ ಏವಾದ್ಯ ನಾಸ್ಯ ಪಾಪಕೃತಂ ಭಯಂ ॥೨೦೯॥

---

ತಂಗಿ ಬೆಳಗ್ಗೆ ಅರುಣೋದಯವಾಗುತ್ತಲೇ ಶೌಚವೇ ಮುಂತಾದವುಗಳನ್ನು ತೀರಿಸಿಕೊಂಡು ವಿಭೂತಿಸ್ನಾನಮಾಡಿದನು. ||೨೦೩-೨೦೪||

ಅನಂತರ ಭಸ್ಮಸ್ನಾನಮಾಡಿ, ಶುಚಿಯಾಗಿರುವ ಆ ಬ್ರಾಹ್ಮಣಶ್ರೇಷ್ಠನನ್ನು ದಾರಿಯಲ್ಲಿ ಹೋಗುತ್ತಿದ್ದ, ಸರ್ಪದ ವಿಷದಿಂದ ಆವೃತನಾದ ಒಬ್ಬ ದಾರಿಗನು ಕಂಡನು. ಆಗ ಆತನು ತನ್ನ ವೃತ್ತಾಂತವನ್ನೆಲ್ಲಾ ಆ ಬ್ರಾಹ್ಮಣನಿಗೆ ಹೇಳಿ, ತನಗೆ ಹಾವು ಕಚ್ಚಿರುವ ಸಂಗತಿಯನ್ನೂ ಕೂಡಲೇ ತಿಳಿಸಿದನು. ||೨೦೫-೨೦೬||

ಆಗ ಅರ್ಧಪ್ರಾಣಹೋಗಿರುವ ಆತನನ್ನು ನೋಡಿ ಆ ಬ್ರಾಹ್ಮಣನು ಅವನ ಅವಯವಗಳಿಗೆ ದಯೆಯಿಂದ ವಿಭೂತಿಯನ್ನು ಲೇಪನಮಾಡಿದನು. ತತ್ಕ್ಷಣದಲ್ಲೇ ಅವನನ್ನು ಎಳೆದೊಯ್ಯಲು ಯಮಭಟರು ಅಲ್ಲಿಗೆ ಬಂದು ಭಸ್ಮಧಾರಣೆಮಾಡಿರುವ ಅವನನ್ನು ಕಂಡು ತಮ್ಮಲ್ಲಿಯೇ ಪರಸ್ಪರವಾಗಿ ಹೀಗೆ ಮಾತನಾಡಿಕೊಂಡರು. ||೨೦೭-೨೦೮||

ಈತನು ಪಾಪರಾಶಿಗಳನ್ನೇ ಮಾಡಿದ್ದರೂ ಭಸ್ಮಧಾರಣೆಮಾಡಿದ ದೇಹವುಳ್ಳವ

ವಿಲಯಂ ಯಾಂತಿ ಪಾಪಾನಿ ಭಸ್ಮಸಂಬಂಧಮಾತ್ರತಃ ।
ಅತ ಏವಾಸ್ಯ ಪಾಪೇಭ್ಯೋ ನ ಭಯಂ ವಿದ್ಯತೇ ಧ್ರುವಂ ॥೨೧೦॥

ಭಸ್ಮ ಪ್ರಾಪ್ತಮನೇನಾದ್ಯ ಭೂರಿಭಾಗ್ಯವಶಾದಿಹ ।
ಪ್ರಾಯಃ ಪೂರ್ವಭವೇನ್ಯೈವ ಬಹುಪುಣ್ಯಕೃತಂ ಭವೇತ್ ॥೨೧೧॥

ದೇಹಾವಸಾನಸಮಯೇ ಭಸ್ಮಪ್ರಾಪ್ತಿರಯುಕ್ತಿತಃ ।
ನ ಭವತ್ಯೇವ ಸಹಸಾ ಬಹುಪುಣ್ಯತಪೋ ವಿನಾ ॥೨೧೨॥

ದ್ವಿತ್ರಾ ಅಪಿ ಕಣಾಃ ಪುಣ್ಯಾಃ ಭಸ್ಮನೋತ್ಯಂತದುರ್ಲಭಾಃ ।
ಅನೇನಾದ್ಯ ಕಥಂ ಪ್ರಾಪ್ತಂ ಬಹುಭಸ್ಮ ಪ್ರಯತ್ನತಃ ॥೨೧೩॥

ಲಬ್ಧಭಸ್ಮಕಣಾರ್ಧೇನಾಪ್ಯರ್ಧೇಂದುಲಲಿತಾಲಕಾಃ ।
ಬಭೂವುರ್ಬಹವೋ ಭೂರಿಭಸ್ಮನಾಪಿ ಕಿಮದ್ಭುತಂ ॥೨೧೪॥

ನಾಗಿರುವುದರಿಂದ ಈಗ ಪರಿಶುದ್ಧನೇ ಆಗಿರುವನು. ಇವನಿಗೆ ಪಾಪಗಳ ಭಯವೇ ಇಲ್ಲ. ಭಸ್ಮದ ಸಂಬಂಧವುಂಟಾದಮಾತ್ರದಿಂದಲೇ ಪಾಪಗಳೆಲ್ಲವೂ ನಾಶವಾಗುವುದರಿಂದ ಇವನಿಗೆ ಯಾವ ವಿಧವಾದ ಪಾಪಗಳಿಂದಲೂ ಖಂಡಿತವಾಗಿಯೂ ಭಯವಿಲ್ಲ. ॥೨೦೯-೨೧೦॥

ತುಂಬಾ ಭಾಗ್ಯವಶದಿಂದ ಇವನಿಗೆ ಈದಿನ ಭಸ್ಮವು ದೊರೆತಿದೆ. ಸಾಮಾನ್ಯವಾಗಿ ಈತನು ಹಿಂದಿನ ಜನ್ಮದಲ್ಲಿಯೇ ವಿಶೇಷ ಪುಣ್ಯವನ್ನು ಗಳಿಸಿರಬೇಕು. ಅನೇಕ ಪುಣ್ಯವನ್ನುಂಟುಮಾಡುವ ತಪಸ್ಸಿಲ್ಲದೇ ಶರೀರತ್ಯಾಗ ಸಮಯದಲ್ಲಿ ವಿಭೂತಿಯು ಸುಲಭವಾಗಿ ದೊರೆಯುವುದೇ ಇಲ್ಲ. ॥೨೧೧-೨೧೨॥

ವಿಭೂತಿಯ ಎರಡು ಮೂರು ಕಣಗಳೇ ವಸ್ತುತಃ ದುರ್ಲಭವಾಗಿರುವಾಗ ಈತನಿಗೆ ಇಷ್ಟೊಂದು ಭಸ್ಮವು ಅನಾಯಾಸವಾಗಿ ಈಗ ಹೇಗೆ ದೊರೆಯಿತು? ಅರ್ಧ ಭಸ್ಮಕಣವನ್ನು ಹೊಂದಿರುವವರನೇಕರು ಆ ಅರ್ಧಚಂದ್ರನನ್ನು ಮುಂಗುರುಳಿನಲ್ಲಿ ಧರಿಸಿರುವ ಪರಶಿವನೇ ಆಗಿರುವರು (ಶಿವಸಾರೂಪ್ಯವನ್ನು ಹೊಂದಿರುವರು). ಹೀಗಿರುವಾಗ ವಿಶೇಷ ಭಸ್ಮವನ್ನು ಹೊಂದಿರುವ ಇವನಿಗೆ ಇನ್ನೆಂತಹ ಅದ್ಭುತವಾದ ಪದವಿಯು ದೊರೆಯುತ್ತದೆಯೋ ಕಾಣೆನು. ॥೨೧೩-೨೧೪॥

ಆಪಾದಮಸ್ತಕಂ ಸಮ್ಯಗ್ಭಸ್ಮನಾಲಂಕೃತೋಽಸ್ತ್ಯಯಂ ।
ಕೃತಕೃತ್ಯೋಽತ ಏವಾದ್ಯ ಮುಕ್ತಿರಸ್ಯ ಭವಿಷ್ಯತಿ ॥೭೧೫॥

ಜ್ಞಾತುಂ ನ ಶಕ್ಯತೇ ಭಾಗ್ಯಂ ಪುರುಷಾಣಾಮಯಂ ಯತಃ ।
ಕೃತಾಘೋಽಪಿ ಪ್ರಾಪ್ತಭಸ್ಮೋ ಮುಕ್ತಃ ಸಂಸಾರಬಂಧನಾತ್॥೭೧೬॥

ಏತಾದೃಶಂ ವಸ್ತುತಸ್ತು ಮಹದ್ಭಾಗ್ಯಮಪೇಕ್ಷಿತಂ ।
ಕಿಮತೋಽಸ್ತ್ಯಧಿಕಂ ಭಾಗ್ಯಮಯತ್ನೇನಾಪವರ್ಗದಂ ॥೭೧೭॥

ತನುರ್ವಿಭೂತಿಸಂವೀತಾ ದೃಷ್ಟಾದೃಷ್ಟವಶಾದಿಹ ।
ತನುಃ ಕ್ವ ದೃಶ್ಯತೇಽಸ್ಮಾಭಿರ್ವಿಭೂತಿಕೃತಭೂಷಣಾ ॥೭೧೮॥

ದಿನಮದ್ಯಾಭವದ್ಧನ್ಯಂ ಯತೋ ಭಸ್ಮವಿಭೂಷಣಃ ।
ದೃಷ್ಟೋಽಸ್ಮಾಭಿರದೃಷ್ಟೇನ ಕಿಮಸ್ತೀಷ್ಟಮಿತೋಽಧಿಕಂ ॥೭೧೯॥

ಅಯಂ ದ್ವಿಜವರೋ ದೃಷ್ಟೋ ಯೋ ಯಮಸ್ಯ ವಿಮೋಚಕಃ ।
ವಿಭೂತಿದಾನಚತುರಃ ಸದಾ ಯೋಧಿಗತೋದಯಃ ॥೭೨೦॥

---

ಈತನು ಕಾಲಿನಿಂದ ತಲೆಯವರೆಗೂ ಚೆನ್ನಾಗಿ ವಿಭೂತಿಯಿಂದ ಅಲಂಕಾರ ಮಾಡಿಕೊಂಡಿರುವನು. ಆದ್ದರಿಂದಲೇ ಇವನು ಕೃತಾರ್ಥನಾಗಿರುವನು. ಇವನಿಗೆ ಕೂಡಲೇ ಮುಕ್ತಿಯುಂಟಾಗುವುದು. ಮಾನವರ ಭಾಗ್ಯವನ್ನು ತಿಳಿಯುವುದೇ ಅಸಾಧ್ಯವಾಗಿದೆ. ಈತನು ಪಾಪಮಾಡಿದರೂ ಭಸ್ಮಧಾರಣೆಮಾಡಿ ಈ ಸಂಸಾರ ಬಂಧನದಿಂದ ಬಿಡುಗಡೆ ಹೊಂದಿರುತ್ತಾನೆ ನಿಶ್ಚಯವಾಗಿ ಇಂತಹ ಭಾಗ್ಯವನ್ನೇ ಎಲ್ಲರೂ ಅಪೇಕ್ಷಿಸುವರು. ಸುಲಭವಾಗಿ ಯಾವ ಪ್ರಯತ್ನವನ್ನೂ ಮಾಡದೇ ಮೋಕ್ಷವನ್ನುಂಟುಮಾಡುವ ಇದಕ್ಕಿಂತಲೂ ಮಹಾಭಾಗ್ಯವೇನು ತಾನೇ ಇರುವುದು ? ॥೭೧೫-೭೧೬-೭೧೭॥

ನಮಗೆ ಅದೃಷ್ಟವಶದಿಂದ ವಿಭೂತಿಲೇಪಿತವಾದ ಈ ಶರೀರವು ಗೋಚರವಾಯಿತು. ವಿಭೂತಿಯನ್ನಲಂಕರಿಸಿಕೊಂಡಿರುವ ಶರೀರವು ನಮಗೆಲ್ಲಿ ಗೋಚರವಾದೀತು ? ಭಸ್ಮಾಲಂಕೃತವಿಗ್ರಹನಾಗಿರುವ ಈತನ ದರ್ಶನವಾದ ಇಂದೇ ಧನ್ಯವು. ಇದಕ್ಕಿಂತಲೂ ಹೆಚ್ಚಿನದೇನು ತಾನೇ ಬೇಕು. ಯಮನ ಭಯವನ್ನು ಬಿಡಿಸುವವನೂ, ವಿಭೂತಿಯನ್ನು ದಾನಮಾಡುವುದರಲ್ಲಿ ಚತುರನೂ, ಯಾವಾಗಲೂ

ಭವ್ಯೋ ಭಸ್ಮಾಂಗರಾಗೋಽಯಂ ಬ್ರಾಹ್ಮಣೋ ಭಗವತ್ಪ್ರಿಯಃ ।
ಭಸ್ಮಾಂಗರಾಗಭಕ್ತಸ್ತು ಭಗವದ್ಭಕ್ತ ಉಚ್ಯತೇ ॥೨೨೧॥

ಏತಸ್ಯ ಸಂನಿಧಾನೇನ ಪ್ರಾಪ್ತಭಸ್ಮೋಽಯಮೀದೃಶಃ ।
ಅಧುನಾ ಭಗವದ್ರೂಪೋ ಭವಿಷ್ಯತಿ ನ ಸಂಶಯಃ ॥೨೨೨॥

ಅಯಂ ಚೇನ್ನೀಯತೇಽಸ್ಮಾಭಿಃ ಪ್ರಮಾದಾನ್ಮೋಹಿತೋಽಪಿ ವಾ ।
ತದಾಽಸ್ಮಾಸು ಯಮಃ ಕ್ರೂರಃ ಕೃಪಾಂ ನೈವ ಕರಿಷ್ಯತಿ ॥೨೨೩॥

ಕಿಂಚಾಧುನೈನಂ ನೇಷ್ಯಂತಿ ವೀರಾಃ ಶಂಕರಕಿಂಕರಾಃ ।
ತೇಷಾಂ ಭಸ್ಮಾಂಗರಾಗಾಣಾಮುತ್ಕಂಠಾನಯನೇ ಯತಃ ॥೨೨೪॥

ಭಸ್ಮಾಂಗರಾಗಪೂತಾಂಗಂ ದೃಷ್ಟ್ವಾ ಶಂಕರಕಿಂಕರಾಃ ।
ದ್ರುತಂ ಹಸಂತಿ ಗಾಯಂತಿ ನದಂತ್ಯಭಿನಯಂತಿ ಚ ॥೨೨೫॥

ಜ್ಞಾನೋದಯವನ್ನು ಹೊಂದಿದವನೂ ಆದ ಈ ಮಹಾನುಭಾವನ ದರ್ಶನವು ಇಂದು ನಮಗೆ ಲಭಿಸಿತು. ॥೨೧೮-೨೧೯-೨೨೦॥

ಭಸ್ಮವನ್ನು ಮೈಗೆಲ್ಲಾ ಅಂಗರಾಗದಂತೆ ಧರಿಸಿರುವ ಈ ಬ್ರಾಹ್ಮಣನು ಭಗವಂತನಿಗೆ ಪ್ರಿಯನೆನಿಸುವನು. ಭಸ್ಮರಾಗವನ್ನು ಮೈಗೆ ಧರಿಸುವವನು ಭಗವದ್ಭಕ್ತನೆಂದು ಹೇಳಲ್ಪಡುವನು. ಈ ಬ್ರಾಹ್ಮಣನ ಸಂನಿಧಿಯಿಂದ ಇವನಿಗೆ ಇಂತಹ ಭಸ್ಮವು ದೊರೆತಿದೆ. ಇವನು ಈಗ ಆ ಭಗವಂತನ ರೂಪವನ್ನೇ ಪಡೆಯುವುದರಲ್ಲಿ ಸಂಶಯವಿಲ್ಲ. ॥೨೨೧-೨೨೨॥

ನಾವು ಪ್ರಮಾದದಿಂದಲಾದರೂ ಒಂದುವೇಳೆ ಇವನನ್ನು ತೆಗೆದುಕೊಂಡು ಹೋದರೆ ಆಗ ಕ್ರೂರನಾದ ಯಮದೇವನು ನಮ್ಮ ಮೇಲೆ ನಿಶ್ಚಯವಾಗಿಯೂ ದಯೆಯನ್ನು ತೋರಿಸುವುದಿಲ್ಲ. ಮತ್ತು ಇವನನ್ನು ವೀರರಾದ ಶಿವಭಟರೂ ಈಗಲೇ ಕರೆದೊಯ್ಯುವರು. ಅವರಿಗೆ ಭಸ್ಮರಾಗಭೂಷಿತರಾದವರನ್ನು ಕರೆದೊಯ್ಯಲು ತುಂಬಾ ಉತ್ಸಾಹವುಂಟು. ॥೨೨೩-೨೨೪॥

ಭಸ್ಮವೆಂಬ ಅಂಗರಾಗದಿಂದ ಪಾವನವಾಗಿರುವ ಶರೀರವುಳ್ಳವನನ್ನು ನೋಡಿ ಶಂಕರಭಟರೆಲ್ಲರೂ ಜಾಗ್ರತೆಯಾಗಿ ನಗುತ್ತಾ ಹಾಡಿಕೊಂಡು ಸಂತೋಷದಿಂದ ಅಭಿನಯಮಾಡುವರು. ಭಸ್ಮವನ್ನು ಧರಿಸಿದ ಈತನನ್ನು ಶಿವದೂತರು ಒಯ್ಯದೇ

ನ ನಯಿಷ್ಯಂತಿ ಚೇದೇನಂ ಭಸ್ಮಾಂಗಂ ಶಿವಕಿಂಕರಾಃ ।
ಕಮನ್ಯಂ ತೇ ನಯಿಷ್ಯಂತಿ ಭಸ್ಮಭಾಸಿತವಿಗ್ರಹಾಃ ॥೨೨೬॥

ಏತಮಾನಯನಂ ಕರ್ತುಂ ಭಗವಾನ್ಭಸ್ಮಭೂಷಣಃ ।
ಭಸ್ಮಾಂಗರಾಗಾನ್ಫಾಲಾಕ್ಷಃ ಪ್ರೇಷಯಿಷ್ಯತಿ ಶಾಂಕರಾನ್ ॥೨೨೭॥

ಯತೋ ಭಸ್ಮಾಂಗರಾಗೇಷು ಭಗವಾನ್ಪ್ರೀತಮಾನಸಃ ।
ಅಧುನೈವಾತಿಯತ್ನೇನ ಪ್ರೇಷಯಿಷ್ಯತಿ ಶಾಂಕರಾನ್ ॥೨೨೮॥

ಭಸ್ಮಾಂಗರಾಗಪೂತಾಂಗಂ ಸಂವೀಕ್ಷ್ಯ ಭಗವಾನಪಿ ।
ಸಮಾಯಾತ್ಯೇವ ಸಹಸಾ ಹಿ ಯತೋ ಭಕ್ತವತ್ಸಲಃ ॥೨೨೯॥

ಭಗವಾನ್ಪ್ರೇಷಯಾಮಾಸ ಭಸ್ಮಾಂಗಾನ್ಭಕ್ತವತ್ಸಲಃ ।
ಭಸ್ಮಾಂಗಸ್ಯಾಸ್ಯ ಸಹಸಾ ನೋಪೇಕ್ಷಾಂ ಸ ಕರಿಷ್ಯತಿ ॥೨೩೦॥

ತ್ರಿನೇತ್ರಪ್ರೇಮಪಾತ್ರೇಽಸ್ಮಿನ್ಭಸ್ಮಗಾತ್ರೇ ತ್ರಿಲೋಚನಃ ।
ಸ ಪ್ರೇಮಪಾತ್ರಪಾತ್ರತ್ವಂ ಸದ್ಯಃ ಪ್ರಕಟಯಿಷ್ಯತಿ ॥೨೩೧॥

---

ಹೋದರೆ ಮತ್ತಾರನ್ನು ತಾನೇ ಭಸ್ಮಾಲಂಕೃತವಿಗ್ರಹರಾದ ಇವರು ಕರೆದೊಯ್ಯು ವರು ? ॥೨೨೫-೨೨೬॥

ಇವನನ್ನು ಕರೆತರುವುದಕ್ಕಾಗಿಯೇ ಭಸ್ಮಭೂಷಿತವಿಗ್ರಹನೂ, ಹಣೆಗಣ್ಣನೂ, ಆದ ಭಗವಂತನು, ಭಸ್ಮವನ್ನು ಅಂಗಾಂಗಗಳಿಗೆಲ್ಲಾ ಧರಿಸಿರುವ ತನ್ನ ಭಕ್ತರನ್ನೇ ಕಳುಹಿಸುತ್ತಾನೆ. ಭಸ್ಮಾಂಗರಾಗದಲ್ಲಿ ಪ್ರೀತಿಯುಕ್ತವಾದ ಮನಸ್ಸುಳ್ಳವನಾದ್ದರಿಂದ ಆ ಭಗವಂತನು ಈಗಲೇ ಅವಶ್ಯವಾಗಿ ತನ್ನ ದೂತರನ್ನು ಇಲ್ಲಿಗೆ ಕಳುಹಿಸುತ್ತಾನೆ. ॥೨೨೭-೨೨೮॥

ಭಸ್ಮಾಂಗರಾಗದಿಂದ ಪರಿಶುದ್ಧನಾಗಿರುವವನನ್ನು ನೋಡಿ, ಆ ಭಗವಂತನೇ ಭಕ್ತವತ್ಸಲನಾದುದರಿಂದ ಒಂದುವೇಳೆ ಇಲ್ಲಿಗೆ ಬರಬಹುದು. ಭಸ್ಮಭೂಷಿತ ಶರೀರನಾದ ಇವನನ್ನು ಉಪೇಕ್ಷೆಮಾಡದೇ, ಕರೆತರಲು ಆ ಭಗವಂತನು ಶಿವದೂತರನ್ನಂತೂ ತಪ್ಪದೆ ಕಳುಹಿಸುವನು. ॥೨೨೯-೨೩೦॥

ಮುಕ್ಕಣ್ಣನ ಪ್ರೇಮಕ್ಕೆ ಆಶ್ರಯನಾಗಿರುವ ಭಸ್ಮವನ್ನು ಧರಿಸಿರುವ ಇವನಲ್ಲಿ ಆ ತ್ರಿಲೋಚನನು ತನ್ನ ಪ್ರೇಮಕ್ಕೆ ಪಾತ್ರನಾಗಿರುವಿಕೆಯನ್ನು ಕೂಡಲೇ ಪ್ರಕಟ ಪಡಿಸುತ್ತಾನೆ. ॥೨೩೧॥

॥ ವಿಷ್ಣುರುವಾಚ ॥

ಇತ್ಯುಕ್ತ್ವಾ ಸಂಸ್ಥಿತಾಸ್ತತ್ರ ತೇ ಕೃತಾಂತಸ್ಯ ಕಿಂಕರಾಃ ।
ಶಂಕರಪ್ರೇಷಿತಾಸ್ತೀವ್ರಂ ಶಾಂಕರಾಶ್ಚ ಸಮಾಗತಾಃ ॥೭೩೨॥

ಭಸ್ಮಾಂಗರಾಗಪೂತಾಂಗಂ ತೇ ತಂ ದೃಷ್ಟ್ವಾ ತತಃ ಪರಂ ।
ಸಂತುಷ್ಟಾಃ ಪೂಜಯಾಮಾಸುರ್ಭೂರ್ಯುಕ್ತಂ ಭಸ್ಮನಾ ಭುವಿ ॥೭೩೩॥

ತತೋ ವಿಮಾನರತ್ನೇ ತೇ ತಂ ವಿಭೂತಿಕಣಾವೃತಂ ।
ಉಪವೇಶ್ಯ ಪುನಃ ಪುಷ್ಪೈಃ ಪೂಜಯಾಮಾಸುರಾದರಾತ್ ॥೭೩೪॥

ಕಲ್ಪವೃಕ್ಷಸಮುದ್ಭೂತಾ ಪುಷ್ಪವೃಷ್ಟಿರಭೂತ್ತತಃ ।
ದೇವದುಂದುಭಯೋ ನೇದುರ್ನನೃತುಶ್ಚಾಪ್ಸರೋ ಗಣಾಃ ॥೭೩೫॥

ತತೋ ಯಯುಃ ಶಿವಗಣಾಸ್ತಂ ಗೃಹೀತ್ವಾ ಶಿವಾಂತಿಕಂ ।
ದೇವದುಂದುಭಿಶಬ್ದೇನ ಶಂಖನಾದಪುರಸ್ಸರಂ ॥೭೩೬॥

ಯಮಭಟರು ಹೀಗೆ ಹೇಳಿದರು ಅಲ್ಲಿಯೇ ನಿಂತುಕೊಂಡರು. ಅದೇ ಸ್ಥಳಕ್ಕೆ ಆ ಶಂಕರನಿಂದ ಕಳುಹಿಸಲ್ಪಟ್ಟ ಶಿವದೂತರೂ ಜಾಗ್ರತೆಯಾಗಿ ಬಂದರು. ಭಸ್ಮಾಂಗರಾಗದಿಂದ ಪಾವನವಾಗಿರುವ ದೇಹವುಳ್ಳ ಅವನನ್ನು ನೋಡಿ ಆ ಶಿವದೂತರು ಅನಂತರ ಸಂತೋಷಭರಿತರಾಗಿ ಭೂಮಿಯಲ್ಲಿಳಿದು ಅವನನ್ನು ಭಸ್ಮದಿಂದ ಪೂಜೆಮಾಡಿದರು. ||೭೩೨-೭೩೩||

ಹೀಗೆ ಪೂಜೆಮಾಡಿದಮೇಲೆ ಆ ಶಿವಕಿಂಕರರು ಉತ್ತಮವಾದ ವಿಮಾನದ ಮೇಲೆ ವಿಭೂತಿಕಣಗಳಿಂದ ಆವರಿಸಲ್ಪಟ್ಟಿರುವ ಬ್ರಾಹ್ಮಣನನ್ನು ಕೂರಿಸಿಕೊಂಡು, ಪುನಃ ಹೂವೇ ಮುಂತಾದವುಗಳಿಂದ ಆದರಪೂರ್ವಕವಾಗಿ ಪೂಜೆಮಾಡಿದರು. ಆಗ ಕಲ್ಪವೃಕ್ಷದಿಂದ ಹೂಮಳೆಗರೆಯಿತು. ದೇವದುಂದುಭಿವಾದ್ಯಗಳು ಮೊಳಗಿದವು. ಅಪ್ಸರಸ್ತ್ರೀಯರ ಸಮೂಹವು ನಾಟ್ಯವಾಡಿತು. ||೭೩೪-೭೩೫||

ಆಮೇಲೆ ಶಿವಗಣವು ಅವನನ್ನು ಕರೆದುಕೊಂಡು ಶಿವನ ಸಮೀಪಕ್ಕೆ ದೇವದುಂದುಭಿ ಮತ್ತು ಶಂಖಗಳ ನಾದಗಳೊಡನೆ ಬಂದಿತು. ಆಗ ದಂಭಾಸಮುದ್ರ

ದದೌ ತಸ್ಮೈ ಕೃಪಾಸಿಂಧುರ್ಗಾಣಾಪತ್ಯಂ ಮಹೇಶ್ವರಃ ।
ಭಸ್ಮಾಂಗರಾಗಮಾತ್ರೇಣ ತ್ರಿನೇತ್ರಂ ಚ ಚಕಾರ ತಂ ॥೭೩೭॥

ನಿರ್ಧೂತಪಾಪಃ ಸಂಪ್ರಾಪ ದುಷ್ಪ್ರಾಪಂ ತಪಸಾಮಪಿ ।
ಗಾಣಾಪತ್ಯಂ ಧರ್ಮಕೋಟಿಪ್ರಾಪ್ಯಮಪ್ರಾಪ್ಯಮನ್ಯತಃ ॥೭೩೮॥

ತಸ್ಮಾತ್ಸರ್ವಪ್ರಯತ್ನೇನ ಭಸ್ಮಸ್ನಾನಂ ದ್ವಿಜಾದಿಭಿಃ ।
ಕರ್ತವ್ಯಂ ಮಂತ್ರಪೂತೇನ ಭಸ್ಮನಾ ವಿಧಿಪೂರ್ವಕಂ ॥೭೩೯॥

ನ ಯಸ್ಯೋದ್ಧೂಳನೇ ಶ್ರದ್ಧಾ ಸರ್ವವೇದಾಂತಸಂಸ್ತುತೇ ।
ತಸ್ಯ ಜನ್ಮ ವೃಥಾ ದೇವಾಃ ಸತ್ಯಂ ಸತ್ಯಂ ನ ಸಂಶಯಃ ॥೭೪೦॥

ಶೈವಧರ್ಮರತಾ ಧನ್ಯಾ ಧನ್ಯಾ ಭಸ್ಮವಿಭೂಷಣಾಃ ।
ಧನ್ಯಾಃ ಶಿವಾರ್ಚನರತಾಃ ಧನ್ಯಾಃ ಪಂಚಾಕ್ಷರಪ್ರಿಯಾಃ ॥೭೪೧॥

ನಾದ ಮಹೇಶ್ವರನು ಅವನಿಗೆ ಗಣಾಧಿಪತಿ ಪದವಿಯನ್ನು ಕೊಟ್ಟನು. ಕೇವಲ ಭಸ್ಮಾಂಗರಾಗಧಾರಣಮಾತ್ರದಿಂದಲೇ ಅವನನ್ನು ಮುಕ್ಕಣ್ಣನನ್ನಾಗಿ ಮಾಡಿದನು. ॥೭೩೬-೭೩೭॥

ಪಾಪರಹಿತನಾದ ಅವನು, ತಪಸ್ಸಿನಿಂದಲೂ ಹೊಂದಲು ಅಸಾಧ್ಯವಾದುದೂ, ಕೋಟ್ಯಂತರ ಧರ್ಮಗಳಿಂದ ಪಡೆಯಲು ಸಾಧ್ಯವಾದುದೂ, ಇತರ ಯಾವುದರಿಂದಲೂ ಅಲಭ್ಯವೂ ಆದ ಗಣಾಧಿಪ ಪದವಿಯನ್ನು ಸುಲಭವಾಗಿ ಹೊಂದಿದನು ಆದ್ದರಿಂದ ಬ್ರಾಹ್ಮಣರಾದವರು ಎಲ್ಲಾ ರೀತಿಯಿಂದಲೂ ನಿಯಮಬದ್ಧರಾಗಿ ಮಂತ್ರಪೂತವಾದ ಭಸ್ಮದಿಂದ ವಿಧಿಯನ್ನನುಸರಿಸಿ ಭಸ್ಮಸ್ನಾನಮಾಡಬೇಕು. ॥೭೩೮-೭೩೯॥

ಸಕಲ ವೇದಾಂತಗಳಿಂದಲೂ ಸ್ತೋತ್ರಮಾಡಲ್ಪಟ್ಟಿರುವ ವಿಭೂತಿಲೇಪನದಲ್ಲಿ ಶ್ರದ್ಧೆಯಿಲ್ಲದವರ ಜನ್ಮವೇ ವ್ಯರ್ಥವು ಓ ದೇವತೆಗಳಿರಾ, ಸತ್ಯವಾಗಿಯೂ ಅವರ ಜನ್ಮವು ವ್ಯರ್ಥವೆಂದೇ ತಿಳಿಯಿರಿ. ಶಿವಧರ್ಮನಿರತರೂ ಭಸ್ಮಾಲಂಕೃತಶರೀರವುಳ್ಳವರೂ, ಶಿವಪೂಜಾಪರಾಯಣರೂ ಮತ್ತು ಶಿವಪಂಚಾಕ್ಷರ ಮಂತ್ರದಲ್ಲಿ ಪ್ರೀತಿಯುಳ್ಳವರೂ ಸಹ ಧನ್ಯರೇ ಸರಿ. ॥೭೪೦-೭೪೧॥

ಕಲೌ ದ್ವಿಜಾ ಭವಿಷ್ಯಂತಿ ಭಸ್ಮಸ್ನಾನವಿವರ್ಜಿತಾಃ ।
ತೇ ಪತಿಷ್ಯಂತಿ ನರಕೇ ಯಾವದಾಚಂದ್ರತಾರಕಂ ॥೭೪೨॥

ಕಲೌ ದ್ವಿಜಾ ಭವಿಷ್ಯಂತಿ ಶಿವಧರ್ಮವಿವರ್ಜಿತಾಃ ।
ತೇ ಪತಿಷ್ಯಂತಿ ನರಕೇ ಯಾವದಾಚಂದ್ರತಾರಕಂ ॥೭೪೩॥

ಕಲೌ ದ್ವಿಜಾ ಭವಿಷ್ಯಂತಿ ಶಿವಸೇವಾವಿವರ್ಜಿತಾಃ ।
ತೇ ಪತಿಷ್ಯಂತಿ ನರಕೇ ಯಾವದಾಚಂದ್ರತಾರಕಂ ॥೭೪೪॥

ಕಲೌ ದ್ವಿಜಾ ಭವಿಷ್ಯಂತಿ ಶಿವಭಕ್ತಿವಿವರ್ಜಿತಾಃ ।
ತೇ ಪತಿಷ್ಯಂತಿ ನರಕೇ ಯಾವದಾಚಂದ್ರತಾರಕಂ ॥೭೪೫॥

ಕಲೌ ದ್ವಿಜಾ ಭವಿಷ್ಯಂತಿ ಶಿವಧ್ಯಾನವಿವರ್ಜಿತಾಃ ।
ತೇ ಪತಿಷ್ಯಂತಿ ನರಕೇ ಯಾವದಾಚಂದ್ರತಾರಕಂ ॥೭೪೬॥

ಕಲೌ ದ್ವಿಜಾ ಭವಿಷ್ಯಂತಿ ತ್ರಿಪುಂಡ್ರಾನಂಕಿತಾಃ ಸದಾ ।
ತೇ ಪತಿಷ್ಯಂತಿ ನರಕೇ ಯಾವದಾಚಂದ್ರತಾರಕಂ ॥೭೪೭॥

ಕಲೌ ದ್ವಿಜಾ ಭವಿಷ್ಯಂತಿ ರುದ್ರಾಕ್ಷಾನಂಕಿತಾಃ ಸದಾ ।
ತೇ ಪತಿಷ್ಯಂತಿ ನರಕೇ ಯಾವದಾಚಂದ್ರತಾರಕಂ ॥೭೪೮॥

ಊರ್ಧ್ವಪುಂಡ್ರರತಾ ವಿಪ್ರಾ ಭವಿಷ್ಯಂತಿ ಕಲೌ ಯುಗೇ ।
ತೇ ಪತಿಷ್ಯಂತಿ ನರಕೇ ಯಾವದಾಚಂದ್ರತಾರಕಂ ॥೭೪೯॥

ಕಲೌ ದ್ವಿಜಾ ಭವಿಷ್ಯಂತಿ ತ್ಯಕ್ತಲಿಂಗಾರ್ಚನಾಃ ಸದಾ ।
ತೇ ಪತಿಷ್ಯಂತಿ ನರಕೇ ಯಾವದಾಚಂದ್ರತಾರಕಂ ॥೭೫೦॥

ಕಲಿಯುಗದಲ್ಲಿ ಬ್ರಾಹ್ಮಣರು ಭಸ್ಮಸ್ನಾನ, ಶಿವಧರ್ಮಪಾಲನೆ, ಪರಶಿವನ ಸೇವೆಗಳನ್ನು ಮಾಡದವರಾಗಿ ಸೂರ್ಯಚಂದ್ರರಿರುವ ವರೆಗೂ ನರಕದಲ್ಲಿ ಬೀಳುತ್ತಾರೆ. ॥೭೪೨-೭೪೩-೭೪೪॥

ಕಲಿಯುಗದಲ್ಲಿ ಬ್ರಾಹ್ಮಣರು ಶಿವಭಕ್ತಿ, ಶಿವಧ್ಯಾನಗಳನ್ನು ಬಿಟ್ಟುಬಿಡುವರು. ಯಾವಾಗಲೂ ಭಸ್ಮತ್ರಿಪುಂಡ್ರ ಮತ್ತು ರುದ್ರಾಕ್ಷಗಳನ್ನು ಧರಿಸುವುದಿಲ್ಲ. ಊರ್ಧ್ವ ಪುಂಡ್ರಗಳನ್ನು ಧರಿಸುವುದರಲ್ಲಿ ನಿರತರಾಗುತ್ತಾರೆ. ಶಿವಲಿಂಗಪೂಜೆ, ರುದ್ರಮಂತ್ರ

ಕಲೌ ದ್ವಿಜಾ ಭವಿಷ್ಯಂತಿ ತ್ಯಕ್ತರುದ್ರಜಪಾಃ ಸದಾ ।
ತೇ ಪತಿಷ್ಯಂತಿ ನರಕೇ ಯಾವದಾಚಂದ್ರತಾರಕಂ ॥೭೫೧॥

ಕಲೌ ದ್ವಿಜಾ ಭವಿಷ್ಯಂತಿ ತ್ಯಕ್ತಪಂಚಾಕ್ಷರಾಃ ಸದಾ ।
ತೇ ಪತಿಷ್ಯಂತಿ ನರಕೇ ಯಾವದಾಚಂದ್ರತಾರಕಂ ॥೭೫೨॥

ಕಲೌ ದ್ವಿಜಾ ಭವಿಷ್ಯಂತಿ ತ್ಯಕ್ತರುದ್ರಾಕ್ಷನಾಸನಾಃ ।
ತೇ ಪತಿಷ್ಯಂತಿ ನರಕೇ ಯಾವದಾಚಂದ್ರತಾರಕಂ ॥೭೫೩॥

ಕಲೌ ದ್ವಿಜಾ ಭವಿಷ್ಯಂತಿ ತ್ಯಕ್ತಶಂಕರವೀಕ್ಷಣಾಃ ।
ತೇ ಪತಿಷ್ಯಂತಿ ನರಕೇ ಯಾವದಾಚಂದ್ರತಾರಕಂ ॥೭೫೪॥

ಕಲೌ ದ್ವಿಜಾ ಭವಿಷ್ಯಂತಿ ಶಿವಾನುತ್ಕರ್ಷವಾದಿನಃ ।
ತೇ ಪತಿಷ್ಯಂತಿ ನರಕೇ ಯಾವದಾಚಂದ್ರತಾರಕಂ ॥೭೫೫॥

ಕಲೌ ದ್ವಿಜಾ ಭವಿಷ್ಯಂತಿ ಶಿವಸ್ತುತಿಪರಾಙ್ಮುಖಾಃ ।
ತೇ ಪತಿಷ್ಯಂತಿ ನರಕೇ ಯಾವದಾಚಂದ್ರತಾರಕಂ ॥೭೫೬॥

ಕಲೌ ದ್ವಿಜಾ ಭವಿಷ್ಯಂತಿ ಶಂಕರಸ್ತುತಿನಿಂದಕಾಃ ।
ತೇ ಪತಿಷ್ಯಂತಿ ನರಕೇ ಯಾವದಾಚಂದ್ರತಾರಕಂ ॥೭೫೭॥

ಕಲೌ ದ್ವಿಜಾ ಭವಿಷ್ಯಂತಿ ಶೈವಪೂಜಾಪರಾಙ್ಮುಖಾಃ ।
ತೇ ಪತಿಷ್ಯಂತಿ ನರಕೇ ಯಾವದಾಚಂದ್ರತಾರಕಂ ॥೭೫೮॥

---

ಜಪ ಮತ್ತು ಶಿವಪಂಚಾಕ್ಷರಮಂತ್ರಜಪ ಇವುಗಳನ್ನು ಯಾವಾಗಲೂ ನಡೆಸುವುದಿಲ್ಲ. ಹೀಗಾಗಿ ಇವರೆಲ್ಲರೂ ಚಂದ್ರಸೂರ್ಯರಿರುವ ವರೆಗೂ ನರಕದಲ್ಲಿ ಬೀಳುತ್ತಾರೆ. ||೭೪೫-೭೪೬-೭೪೭-೭೪೮-೭೪೯-೭೫೦-೭೫೧-೭೫೨||

ಕಲಿಯುಗದಲ್ಲಿ ದ್ವಿಜರು ರುದ್ರಾಕ್ಷಧಾರಣೆಯನ್ನೂ ಶಂಕರನ ದರ್ಶನವನ್ನೂ ಮಾಡುವುದಿಲ್ಲ. ಶಿವನೇ ಉತ್ಕೃಷ್ಟನೆಂದು ಹೇಳುವುದಿಲ್ಲ. ಶಿವನ ಸ್ತೋತ್ರದಲ್ಲಿ ಪರಾಙ್ಮುಖರಾಗುತ್ತಾರೆ. ಶಂಕರನ ಸ್ತೋತ್ರವನ್ನು ನಿಂದೆಮಾಡುತ್ತಾರೆ; ಶೈವ ಶ್ರೇಷ್ಠರ ಪೂಜೆಯಲ್ಲಿಯೂ ಪರಾಙ್ಮುಖರಾಗುವರು. ಅಲ್ಲದೇ ಶಾಂಭವರಿಗೆ

ಕಲೌ ದ್ವಿಜಾ ಭವಿಷ್ಯಂತಿ ತ್ಯಕ್ತಶೈವಾಭಿವಾದನಾಃ ।
ತೇ ಪತಿಷ್ಯಂತಿ ನರಕೇ ಯಾವದಾಚಂದ್ರತಾರಕಂ ॥೨೫೯॥

ಕ್ವಚಿತ್ಕ್ವಚಿದ್ಭವಿಷ್ಯಂತಿ ಕಲೌ ಶಂಕರಪೂಜಕಾಃ ।
ಕಲಿಸ್ಥಾ ದೂಷಯಿಷ್ಯಂತಿ ದೃಷ್ಟ್ವಾ ತಾನಪಿ ಮೋಹತಃ ॥೨೬೦॥

ಕ್ವಚಿತ್ಕ್ವಚಿದ್ಭವಿಷ್ಯಂತಿ ಕಲೌ ಭೂತಿವಿಭೂಷಣಾಃ ।
ಕಲಿಸ್ಥಾ ದೂಷಯಿಷ್ಯಂತಿ ದೃಷ್ಟ್ವಾ ತಾನಪಿ ಮೋಹತಃ ॥೨೬೧॥

ಕ್ವಚಿತ್ಕ್ವಚಿದ್ಭವಿಷ್ಯಂತಿ ಕಲೌ ರುದ್ರಾಕ್ಷಭೂಷಣಾಃ ।
ಕಲಿಸ್ಥಾ ದೂಷಯಿಷ್ಯಂತಿ ದೃಷ್ಟ್ವಾ ತಾನಪಿ ಮೋಹತಃ ॥೨೬೨॥

ಕ್ವಚಿತ್ಕ್ವಚಿದ್ಭವಿಷ್ಯಂತಿ ಕಲೌ ರುದ್ರಜಪೋತ್ಸುಕಾಃ ।
ಕಲಿಸ್ಥಾ ದೂಷಯಿಷ್ಯಂತಿ ದೃಷ್ಟ್ವಾ ತಾನಪಿ ಮೋಹತಃ ॥೨೬೩॥

ಕ್ವಚಿತ್ಕ್ವಚಿದ್ಭವಿಷ್ಯಂತಿ ಕಲೌ ಪಂಚಾಕ್ಷರಪ್ರಿಯಾಃ ।
ಕಲಿಸ್ಥಾ ದೂಷಯಿಷ್ಯಂತಿ ದೃಷ್ಟ್ವಾ ತಾನಪಿ ಮೋಹತಃ ॥೨೬೪॥

ಕ್ವಚಿತ್ಕ್ವಚಿದ್ಭವಿಷ್ಯಂತಿ ಕಲೌ ಶಿವಕಥೋತ್ಸುಕಾಃ ।
ಕಲಿಸ್ಥಾ ದೂಷಯಿಷ್ಯಂತಿ ದೃಷ್ಟ್ವಾ ತಾನಪಿ ಮೋಹತಃ ॥೨೬೫॥

ಕ್ವಚಿತ್ಕ್ವಚಿದ್ಭವಿಷ್ಯಂತಿ ಕಲೌ ಶೈವಜನಪ್ರಿಯಾಃ ।
ಕಲಿಸ್ಥಾ ದೂಷಯಿಷ್ಯಂತಿ ದೃಷ್ಟ್ವಾ ತಾನಪಿ ಮೋಹತಃ ॥೨೬೬॥

ನಮಸ್ಕಾರಗಳನ್ನೂ ಮಾಡುವುದಿಲ್ಲ. ಇಂತಹವರೆಲ್ಲರೂ ನರಕದಲ್ಲಿ ಈ ಸೂರ್ಯಚಂದ್ರರಿರುವವರೆಗೂ ಬಿದ್ದು ನರಳುವರು. ॥೨೫೩-೨೫೪-೨೫೫-೨೫೬-೨೫೭-೨೫೮-೨೫೯॥

ಕಲಿಯುಗದಲ್ಲಿ ಕೆಲ ಕೆಲವು ಕಡೆ, ಶಂಕರಪೂಜಕರೂ, ವಿಭೂತಿಯನ್ನಲಂಕರಿಸುವವರೂ, ರುದ್ರಾಕ್ಷಭೂಷಣವುಳ್ಳವರೂ, ರುದ್ರಮಂತ್ರಜಪದಲ್ಲಿ ನಿರತರೂ, ಶಿವಪಂಚಾಕ್ಷರಮಂತ್ರವನ್ನು ಜಪಮಾಡುವುದರಲ್ಲಿ ಪ್ರೀತಿಯುಳ್ಳವರೂ, ಶಿವಕಥಾಶ್ರವಣದಲ್ಲಿ ಉತ್ಸಾಹವುಳ್ಳವರೂ, ಶಿವಧರ್ಮದ ಜನಗಳನ್ನು ಪ್ರೀತಿಯಿಂದ ಕಾಣುವವರೂ ಇರುತ್ತಾರೆ. ಆದರೆ ಕಲಿಯುಗದ ಜನಗಳು ಅವರನ್ನು ನೋಡಿಯೂ ಅಜ್ಞಾನದಿಂದ ದೂಷಣೆಮಾಡುವರು. ॥೨೬೦-೨೬೧-೨೬೨-೨೬೩-೨೬೪-೨೬೫-೨೬೬॥

ಪ್ರಾಯಃ ಕಲಿಯುಗೇ ಶೈವಾ ಭವಿಷ್ಯಂತ್ಯೇವ ದುರ್ಲಭಾಃ ।
ಯತಃ ಕಲಿಸಮಾಕ್ರಾಂತಾ ಭವಿಷ್ಯಂತಿ ಕಲೌ ನರಾಃ ॥೭೬೭॥

ಕಲಿರೂಪಮಹಾಪಾಪಸಂಕ್ರಾಂತಾ ಯೇ ದುರಾಶಯಾಃ ।
ತೇ ಕಥಂ ವಾ ಭವಿಷ್ಯಂತಿ ಶೈವಾಃ ಶಿಷ್ಟಜನಪ್ರಿಯಾಃ ॥೭೬೮॥

ಯದಿ ಶೈವಾ ಭವಿಷ್ಯಂತಿ ಕಲಾವಪಿ ತಪೋಬಲಾತ್ ।
ತೇ ಕರಿಷ್ಯಂತಿ ಸಂಸಾರಘೋರಸಾಗರಮುತ್ತಮಾಃ ॥೭೬೯॥

ಶೈವೋ ಧನ್ಯಃ ಕಲೌ ನಿತ್ಯಂ ಶಂಕರಂ ಪೂಜಯಿಷ್ಯತಿ ।
ಸ ಧನ್ಯಃ ಸ ತಪೋಮೂರ್ತಿಃ ಸ ಪುಣ್ಯಃ ಸೋಽತಿಪಾವನಃ ॥೭೭೦॥

ಕಲಿಪಾತಕನಿರ್ಮುಕ್ತಃ ಕಲೌ ಶೈವೋ ಭವಿಷ್ಯತಿ ।
ಶೈವೋ ಯಸ್ಮಾತ್ಕಲಿಯುಗೇ ಭವತ್ಯತ್ಯಂತದುರ್ಲಭಃ ॥೭೭೧॥

ಅಶೈವೋ ಯಃ ಕಲಿಯುಗೇ ಸ ಏವ ಕಲಿಸಂಶ್ರಯಃ ।
ಸ ಏವ ಪಾತಕೀ ಜ್ಞೇಯಃ ಸ ಏವ ನರಕಾಲಯಃ ॥೭೭೨॥

---

ಕಲಿಯುಗದ ಮಾನವರಿಗೆ ಕಲಿದೋಷವು ವ್ಯಾಪಿಸುವುದರಿಂದ ಪ್ರಾಯಶಃ ಕಲಿಯುಗದಲ್ಲಿ ಶಿವಭಕ್ತಿಯೇ ದುರ್ಲಭವಾಗುವುದು. ಕಲಿರೂಪವಾದ ಮಹಾಪಾತಕದಿಂದ ಆಕ್ರಾಂತರಾದ ದುಷ್ಟರು ಹೇಗೆತಾನೇ ಸಾಧುಜನಗಳಲ್ಲಿ ಪ್ರೀತಿಯುಳ್ಳ ಶಿಷ್ಟರಾದಾರು? ॥೭೬೭-೭೬೮॥

ತಪೋಬಲದಿಂದ ಈ ಕಲಿಯುಗದಲ್ಲಿಯೂ ಶಿವಭಕ್ತಿಯನ್ನು ಪಡೆದರೆ ಉತ್ತಮರೆನಿಸಿದ ಅವರು ಘೋರವಾದ ಸಂಸಾರಸಾಗರವನ್ನೂ ದಾಟುತ್ತಾರೆ. ನಿತ್ಯವೂ ಕಲಿಯುಗದಲ್ಲಿ ಶಂಕರನನ್ನು ಪೂಜೆಮಾಡುವ ಈಶ್ವರಭಕ್ತನೇ ಧನ್ಯನು. ಧನ್ಯನೆನಿಸಿದ ಅವನೇ ತಪೋಮೂರ್ತಿಯೂ, ಪುಣ್ಯಸ್ವರೂಪನೂ ಮತ್ತು ತುಂಬಾ ಪವಿತ್ರನೂ ಆಗಿರುವನು. ॥೭೬೯-೭೭೦॥

ಕಲಿಸಂಬಂಧವಾದ ಪಾಪದಿಂದ ಬಿಡಲ್ಪಟ್ಟವನು ಈ ಕಲಿಯುಗದಲ್ಲಿ ಶೈವಧರ್ಮಿಯಾಗುತ್ತಾನೆ. ಕಲಿಯುಗದಲ್ಲಿ ಇಂತಹ ಶೈವನು ತುಂಬಾ ದುರ್ಲಭನೇ ಸರಿ. ಕಲಿಯುಗದಲ್ಲಿ ಶಿವಭಕ್ತಿ ಇಲ್ಲದವನೇ ಕಲಿಪಾಪದಿಂದ ಕೂಡಿದವನು. ಅವನೇ ಪಾಪಿಯು. ಅವನನ್ನೇ ನರಕಕ್ಕೆ ಆಹುತಿಯೆಂದು ತಿಳಿಯಬೇಕು. ॥೭೭೧-೭೭೨॥

ಅಶೈವೋ ಯಃ ಕಲಿಯುಗೇ ಕಲಿಪಾಪಕುಲಾಶ್ರಯಃ ।
ಸ ಸಂಪ್ರಾಪ್ಯ ಕಲೌ ದುಃಖಂ ನರಕಂ ಚ ಗಮಿಷ್ಯತಿ ॥೭೭೩॥

ಅಶೈವಸದೃಶಃ ಪಾಪೀ ನ ಭೂತೋ ನ ಭವಿಷ್ಯತಿ ।
ಮಹಾಪಾತಕಕೋಟೀನಾಮಶೈವಃ ಸಂಶ್ರಯೋ ಯತಃ ॥೭೭೪।

ಪುರಾ ಸರ್ವಾಣಿ ಪಾಪಾನಿ ಸಮೂಹೀಭೂಯ ಕೋಟಿಶಃ ।
ಸ್ಥಿತಾನಿ ಘೋರರೂಪಾಣಿ ದುಃಖಿತಾನಿ ಯಮಾಂಗಣೇ ॥೭೭೫।

ತಾನಿ ಪಾಪಾನಿ ಸರ್ವಾಣಿ ದೃಷ್ಟ್ವಾ ಕಾಲಃ ಕದಾಚನ ।
ಬಭಾಷೇ ಧರ್ಮತತ್ವಜ್ಞೋ ಧರ್ಮಶಾಸ್ತ್ರವಿಚಕ್ಷಣಃ ॥೭೭೬॥

॥ ಯಮ ಉವಾಚ ॥

ಅಶೈವೇಷ್ವೇವ ತಿಷ್ಠಂತು ಪಾಪಾನ್ಯೇತಾನಿ ಸರ್ವದಾ ।
ಅಶೈವಾ ಏವ ಸರ್ವೇಷಾಂ ಪಾಪಾನಾಮಾಶ್ರಯಾ ಯತಃ ॥೭೭೭॥

ಅಶೈವಾದಪರೋ ಲೋಕೇ ನಾಸ್ತಿ ಪಾಪಾಶ್ರಯೋ ಯತಃ ।
ಅತೋಽಮೂನ್ಯಪಿ ಪಾಪಾನಿ ತೇಷು ತಿಷ್ಠಂತು ಸರ್ವದಾ ॥೭೭೮॥

---

ಶಿವಭಕ್ತಿರಹಿತನೇ ಕಲಿಯುಗದಲ್ಲಿ ಕಲಿಪಾಪರಾಶಿಗೆ ಆಶ್ರಯನಾಗುವನು. ಅವನು ಕಲಿಯುಗದಲ್ಲಿ ನಾನಾದುಃಖವನ್ನು ಅನುಭವಿಸಿ, ಕೊನೆಗೆ ನರಕವನ್ನೂ ಹೊಂದುತ್ತಾನೆ. ಶಿವದ್ರೋಹಿಗೆ ಸಮಾನವಾದ ಪಾಪಿಯು ಹಿಂದಿರಲಿಲ್ಲ ಮುಂದೆ ಹುಟ್ಟುವುದಿಲ್ಲ. ಶಿವದ್ರೋಹಿಯೇ ಕೋಟ್ಯಂತರ ಮಹಾಪಾಪಗಳಿಗೂ ಆಶ್ರಯ ನಾಗಿರುವನು. ॥೭೭೩-೭೭೪॥

ಹಿಂದೆ ಕೋಟ್ಯಂತರ ಪಾಪಗಳೆಲ್ಲಾ ಗುಂಪಾಗಿ ಭಯಂಕರರೂಪದಿಂದ ಯಮನ ಲೋಕದಲ್ಲಿ ದುಃಖಿಸುತ್ತಾ ಇದ್ದವು. ಒಂದುದಿನ ಆ ಪಾಪಗಳನ್ನೆಲ್ಲಾ ನೋಡಿ ಧರ್ಮತತ್ವವನ್ನರಿತವನೂ, ಧರ್ಮಶಾಸ್ತ್ರದಲ್ಲಿ ಪಂಡಿತನೂ ಆದ ಯಮನು ಹೀಗೆ ಅಪ್ಪಣೆಮಾಡಿದನು ॥೭೭೫-೭೭೬॥

ಈ ಪಾಪಗಳೆಲ್ಲಾ ಯಾವಾಗಲೂ ಶಿವದ್ರೋಹಿಗಳಲ್ಲೇ ನೆಲಸಲಿ ಪಾಪಗಳಿಗೆಲ್ಲಾ ಆ ಶಿವಭಕ್ತಿ ಇಲ್ಲದವರೇ ಆಶ್ರಯರಾಗಿರುವರು. ಶಿವದ್ರೋಹಿಗಿಂತ ಬೇರೆ

ನ ಭಸ್ಮೋದ್ಧೂಳನೇ ಶ್ರದ್ಧಾ ಯೇಷಾಂ ಕಲ್ಮಷಚೇತಸಾಂ ।
ತೇಷ್ವೇವಾಮೂನಿ ಪಾಪಾನಿ ಸದಾ ತಿಷ್ಠಂತು ಭಾಗಶಃ ।೭೭೯॥

ತ್ರಿಪುಂಡ್ರಧಾರಣೇ ಶ್ರದ್ಧಾ ನ ಯೇಷಾಂ ಕಲುಷಾತ್ಮನಾಂ ।
ತೇಷ್ವೇವಾಮೂನಿ ಪಾಪಾನಿ ಸದಾ ತಿಷ್ಠಂತು ಭಾಗಶಃ ।೭೮೦॥

ರುದ್ರಾಕ್ಷಧಾರಣೇ ಶ್ರದ್ಧಾ ನ ಯೇಷಾಂ ಕಲುಷಾತ್ಮನಾಂ ।
ತೇಷ್ವೇವಾಮೂನಿ ಪಾಪಾನಿ ಸದಾ ತಿಷ್ಠಂತು ಭಾಗಶಃ ॥೭೮೧॥

ಶಿವಲಿಂಗಾರ್ಚನೇ ಶ್ರದ್ಧಾ ನ ಯೇಷಾಂ ಕಲುಷಾತ್ಮನಾಂ ।
ತೇಷ್ವೇವಾಮೂನಿ ಪಾಪಾನಿ ಸದಾ ತಿಷ್ಠಂತು ಭಾಗಶಃ ॥೭೮೨॥

ಶಿವಾಭಿವಾದನೇ ಶ್ರದ್ಧಾ ನ ಯೇಷಾಂ ಕಲುಷಾತ್ಮನಾಂ ।
ತೇಷ್ವೇವಾಮೂನಿ ಪಾಪಾನಿ ಸದಾ ತಿಷ್ಠಂತು ಭಾಗಶಃ ॥೭೮೩॥

ಶಿವಾನುಚಿಂತನೇ ಶ್ರದ್ಧಾ ನ ಯೇಷಾಂ ಕಲುಷಾತ್ಮನಾಂ ।
ತೇಷ್ವೇವಾಮೂನಿ ಪಾಪಾನಿ ಸದಾ ತಿಷ್ಠಂತು ಭಾಗಶಃ ॥೭೮೪॥

ಮಹಾದೇವಸ್ತುತೌ ಶ್ರದ್ಧಾ ನ ಯೇಷಾಂ ಕಲುಷಾತ್ಮನಾಂ ।
ತೇಷ್ವೇವಾಮೂನಿ ಪಾಪಾನಿ ಸದಾ ತಿಷ್ಠಂತು ಭಾಗಶಃ ॥೭೮೫॥

ಮಹೇಶಪ್ರೇಕ್ಷಣೇ ಶ್ರದ್ಧಾ ನ ಯೇಷಾಂ ಕಲುಷಾತ್ಮನಾಂ ।
ತೇಷ್ವೇವಾಮೂನಿ ಪಾಪಾನಿ ಸದಾ ತಿಷ್ಠಂತು ಭಾಗಶಃ ॥೭೮೬॥

ಶುಚಿಶೈವಕಥಾಶ್ರದ್ಧಾ ನ ಯೇಷಾಂ ಕಲುಷಾತ್ಮನಾಂ ।
ತೇಷ್ವೇವಾಮೂನಿ ಪಾಪಾನಿ ಸದಾ ತಿಷ್ಠಂತು ಭಾಗಶಃ ।೭೮೭॥

ಯಾದವನು ಈ ಲೋಕದಲ್ಲಿ ಪಾಪಕ್ಕೆ ಆಶ್ರಯನಾಗದಿರುವುದರಿಂದ ಈ ಪಾಪಗಳೆಲ್ಲವೂ ಆ ಶಿವದ್ರೋಹಿಗಳಲ್ಲಿಯೇ ಸೇರಲಿ. ।೭೭೭-೭೮೮॥

ಭಸ್ಮಲೇಪನ, ಭಸ್ಮತ್ರಿಪುಂಡ್ರಧಾರಣೆ, ರುದ್ರಾಕ್ಷಧಾರಣೆ, ಶಿವಲಿಂಗಪೂಜೆ, ಶಿವನ ನಮಸ್ಕಾರ, ಶಿವನಾಮಾನುಚಿಂತನ, ಮಹಾದೇವಸ್ತುತಿ, ಮಹೇಶ್ವರನ ದರ್ಶನ ಶುಚಿಯಾದ ಶಿವಕಥಾಶ್ರವಣ, ಶಿವನ ಮುಂದೆ ನರ್ತನ, ಶಿವಪಂಚಾಕ್ಷರಜಪ,

ಶಿವಾಗ್ರೇ ನರ್ತನೇ ಶ್ರದ್ಧಾ ನ ಯೇಷಾಂ ಕಲುಷಾತ್ಮನಾಂ ।
ತೇಷ್ವೇವಾಮೂನಿ ಪಾಪಾನಿ ಸದಾ ತಿಷ್ಠಂತು ಭಾಗಶಃ ॥೨೮೮॥

ಪಂಚಾಕ್ಷರಜಪೇ ಶ್ರದ್ಧಾ ನ ಯೇಷಾಂ ಕಲುಷಾತ್ಮನಾಂ ।
ತೇಷ್ವೇವಾಮೂನಿ ಪಾಪಾನಿ ಸದಾ ತಿಷ್ಠಂತು ಭಾಗಶಃ ॥೨೮೯॥

ಶ್ರೀಮದ್ರುದ್ರಜಪೇ ಶ್ರದ್ಧಾ ನ ಯೇಷಾಂ ಕಲುಷಾತ್ಮನಾಂ ।
ತೇಷ್ವೇವಾಮೂನಿ ಪಾಪಾನಿ ಸದಾ ತಿಷ್ಠಂತು ಭಾಗಶಃ ॥೨೯೦॥

ಶಿವೋತ್ಕರ್ಷೇ ಪರಾ ಶ್ರದ್ಧಾ ನ ಯೇಷಾಂ ಕಲುಷಾತ್ಮನಾಂ ।
ತೇಷ್ವೇವಾಮೂನಿ ಪಾಪಾನಿ ಸದಾ ತಿಷ್ಠಂತು ಭಾಗಶಃ ॥೨೯೧॥

ಶಿವಸ್ಥಾನೇ ಪರಾ ಶ್ರದ್ಧಾ ನ ಯೇಷಾಂ ಕಲುಷಾತ್ಮನಾಂ ।
ತೇಷ್ವೇವಾಮೂನಿ ಪಾಪಾನಿ ಸದಾ ತಿಷ್ಠಂತು ಭಾಗಶಃ ॥೨೯೨॥

ಅವಿಮುಕ್ತೇ ಪರಾ ಶ್ರದ್ಧಾ ನ ಯೇಷಾಂ ಕಲುಷಾತ್ಮನಾಂ ।
ತೇಷ್ವೇವಾಮೂನಿ ಪಾಪಾನಿ ಸದಾ ತಿಷ್ಠಂತು ಭಾಗಶಃ ॥೨೯೩॥

ಶ್ರೀಮದ್ವಿಶ್ವೇಶ್ವರೇ ಶ್ರದ್ಧಾ ನ ಯೇಷಾಂ ಕಲುಷಾತ್ಮನಾಂ ।
ತೇಷ್ವೇವಾಮೂನಿ ಪಾಪಾನಿ ಸದಾ ತಿಷ್ಠಂತು ಭಾಗಶಃ ॥೨೯೪॥

ಶ್ರೀಮುಕ್ತಮಂಡಪೇ ಶ್ರದ್ಧಾ ನ ಯೇಷಾಂ ಕಲುಷಾತ್ಮನಾಂ ।
ತೇಷ್ವೇವಾಮೂನಿ ಪಾಪಾನಿ ಸದಾ ತಿಷ್ಠಂತು ಭಾಗಶಃ ॥೨೯೫॥

ಶ್ರೀಮದಂತರ್ಗೃಹೇ ಶ್ರದ್ಧಾ ನ ಯೇಷಾಂ ಕಲುಷಾತ್ಮನಾಂ ।
ತೇಷ್ವೇವಾಮೂನಿ ಪಾಪಾನಿ ಸದಾ ತಿಷ್ಠಂತು ಭಾಗಶಃ ॥೨೯೬॥

ಶ್ರೀಕಾಲಭೈರವೇ ಶ್ರದ್ಧಾ ನ ಯೇಷಾಂ ಕಲುಷಾತ್ಮನಾಂ ।
ತೇಷ್ವೇವಾಮೂನಿ ಪಾಪಾನಿ ಸದಾ ತಿಷ್ಠಂತು ಭಾಗಶಃ ॥೨೯೭॥

ಶ್ರೀರುದ್ರಜಪ, ಶಿವನ ಉತ್ಕರ್ಷವನ್ನು ಹೇಳುವುದು, ಶಿವದೇವಾಲಯಗಳಲ್ಲಿ ಆಸ್ತಿಕತೆ, ಅವಿಮುಕ್ತಕ್ಷೇತ್ರ, ಸಂಸ್ಥಾಪಿತನಾದ ವಿಶ್ವೇಶ್ವರ, ಶ್ರೀಮುಕ್ತಿಮಂಟಪ, ಅಂತರ್ಗೃಹಯಾತ್ರೆ, ಶ್ರೀಕಾಲಭೈರವಸ್ವಾಮಿ, ಜ್ಞಾನವಾಪಿ, ಮಣಿಕರ್ಣಿಕೆ,

ಜ್ಞಾನವಾಪ್ಯಾಂ ಪರಾಶ್ರದ್ಧಾ ನ ಯೇಷಾಂ ಕಲುಷಾತ್ಮನಾಂ ।
ತೇಷ್ವೇವಾಮೂನಿ ಪಾಪಾನಿ ಸದಾ ತಿಷ್ಠಂತು ಭಾಗಶಃ ॥೭೯೮॥

ಮಣಿಕರ್ಣ್ಯಾಂ ಪರಾ ಶ್ರದ್ಧಾ ನ ಯೇಷಾಂ ಕಲುಷಾತ್ಮನಾಂ ।
ತೇಷ್ವೇವಾಮೂನಿ ಪಾಪಾನಿ ಸದಾ ತಿಷ್ಠಂತು ಭಾಗಶಃ ॥೭೯೯॥

ಶಿವಭಕ್ತಜನೇ ಶ್ರದ್ಧಾ ನ ಯೇಷಾಂ ಕಲುಷಾತ್ಮನಾಂ ।
ತೇಷ್ವೇವಾಮೂನಿ ಪಾಪಾನಿ ಸದಾ ತಿಷ್ಠಂತು ಭಾಗಶಃ ॥೮೦೦॥

ಶಿವರಾತ್ರಿವ್ರತೇ ಶ್ರದ್ಧಾ ನ ಯೇಷಾಂ ಕಲುಷಾತ್ಮನಾಂ ।
ತೇಷ್ವೇವಾಮೂನಿ ಪಾಪಾನಿ ಸದಾ ತಿಷ್ಠಂತು ಭಾಗಶಃ ॥೮೦೧॥

ಸೋಮವಾರವ್ರತೇ ಶ್ರದ್ಧಾ ನ ಯೇಷಾಂ ಕಲುಷಾತ್ಮನಾಂ ।
ತೇಷ್ವೇವಾಮೂನಿ ಪಾಪಾನಿ ಸದಾ ತಿಷ್ಠಂತು ಭಾಗಶಃ ॥೮೦೨॥

ಅಶ್ರೈವಾಸ್ತ್ವತ ವಿಪಾತಸ್ತೇ ಮಹಾಪಾತಕಾಶ್ರಯಾಃ ।
ಏತೇಷಾಮಪಿ ಪಾಪಾನಾಂ ಭವಿಷ್ಯಂತ್ಯಾಶ್ರಯಾ ಧ್ರುವಂ ॥೮೦೩॥

ಸ್ವಕೀಯಮಾಶ್ರಯಂ ತ್ಯಕ್ತ್ವಾ ನ ಕೋಽಪ್ಯನ್ಯತ್ರ ತಿಷ್ಠತಿ ।
ಅಶ್ರೈವೇಷು ಸ್ವಾಶ್ರಯೇಷು ಪಾತಕಾನ್ಯಾಶ್ರಯಂ ತ್ವತಃ ॥೮೦೪॥

---

ಶಿವಭಕ್ತರು, ಶಿವರಾತ್ರಿವ್ರತ ಮತ್ತು ಸೋಮವಾರವ್ರತ ಇವುಗಳಲ್ಲಿ ತುಂಬಾ ಶ್ರದ್ಧೆಹೊಂದದಿರುವ ಕಲ್ಮಷಾಂತರಂಗವುಳ್ಳವರಲ್ಲಿಯೇ ಈ ಪಾಪಗಳೆಲ್ಲಾ ವಿಭಾಗವಾಗಿ ಯಾವಾಗಲೂ ನೆಲಸಲಿ ॥೭೭೯-೭೮೦-೭೮೧-೭೮೨-೭೮೩-೭೮೪-೭೮೫-೭೮೬-೭೮೭-೭೮೮-೭೮೯-೭೯೦-೭೯೧-೭೯೨-೭೯೩-೭೯೪-೭೯೫-೭೯೬-೭೯೭-೭೯೮-೭೯೯-೮೦೦-೮೦೧-೮೦೨॥

ಮಹಾಪಾಪಗಳಿಗೆ ಆಶ್ರಯರಾದ ಇವರೇ ಶಿವದ್ರೋಹಿಗಳು ಇವರು ಈ ಪಾಪಗಳಿಗೆ ನಿಶ್ಚಯವಾಗಿಯೂ ಆಶ್ರಯರಾಗುವರು. ತಮ್ಮ ಆಶ್ರಯವನ್ನು ಬಿಟ್ಟು ಯಾರೂ ಬೇರೆಕಡೆ ಇರುವುದಿಲ್ಲ. ಆದ್ದರಿಂದ ತನಗೆ ಆಶ್ರಯರಾಗಿರುವ ಶಿವಭಕ್ತಿರಹಿತರನ್ನೇ ಈ ಪಾಪಗಳು ಆಶ್ರಯಿಸುವುವು. ॥೮೦೩-೮೦೪॥

ಲೋಕೇ ನ ಸಹತೇ ಕೋಽಪಿ ಪ್ರಾಯಃ ಸ್ವಸ್ಥಾನರಿಕ್ತತಾಂ ।
ಅಶೈವೇಷ್ವಘಗೇಹೇಷು ತಿಷ್ಠಂತ್ವೇತಾನ್ಯತೋ ಧ್ರುವಂ ॥೮೦೫॥

ಅದ್ಯೈವ ಸತ್ವರಂ ಯಾಂತು ರೇರೇ ಪಾಪಾಧಿದೈವತಾಃ ।
ಅಶೈವಂ ಸ್ವಾಶ್ರಯಂ ತ್ಯಕ್ತ್ವಾ ಮಾ ಯಾಂತ್ವನ್ಯತ್ರ ಸರ್ವಥಾ ॥೮೦೬॥

॥ ವಿಷ್ಣುರುವಾಚ ॥

ಇತ್ಯುಕ್ತ್ವಾ ಪ್ರೇಷಯಾಮಾಸ ಯಮಃ ಪಾಪಾನಿ ಸತ್ವರಂ ।
ಅಶೈವೇಷು ತತಸ್ತಾನಿ ಸ್ಥಿತಾನ್ಯೇತಾನಿ ಸಂತತಂ ॥೮೦೭॥

ಅಶೈವಾಃ ಪಾಪನಿಲಯಾಸ್ತತಸ್ತೇಷಾಂ ಶ್ರುತಿಶ್ರುತೇ ।
ಭಸ್ಮಸ್ನಾನಾಧಿಕೇ ಶ್ರದ್ಧಾ ನ ಭವಿಷ್ಯತಿ ಸರ್ವಥಾ ॥೮೦೮॥

ಜನ್ಮಜನ್ಮಾಂತರಕೃತಂ ಪಾಪಂ ಯಸ್ಯ ಫಲೋನ್ಮುಖಂ ।
ನ ತಸ್ಯ ಜಾಯತೇ ಶ್ರದ್ಧಾ ವಿಭೂತ್ಯುದ್ಧೂಲನಾದಿಷು ॥೮೦೯॥

---

ಪ್ರಪಂಚದಲ್ಲಿ ಸಾಮಾನ್ಯವಾಗಿ ಯಾರೂ ತನ್ನ ಸ್ಥಳವನ್ನು ಶೂನ್ಯ ಮಾಡುವುದನ್ನು ಸಹಿಸುವುದಿಲ್ಲ ಆದ್ದರಿಂದಲೇ ಪಾಪಗಳಿಗೆ ಮನೆಯಾಗಿರುವ ಶಿವದ್ರೋಹಿಗಳಲ್ಲಿ ಈ ಪಾಪಗಳು ತಪ್ಪದೇ ನೆಲಸಿರುವುವು. ಎಲೈ ಪಾಪಗಳ ಅಧಿದೇವತೆಗಳಿರಾ, ಈಗಲೇ ಇಲ್ಲಿಂದ ಜಾಗ್ರತೆ ಹೊರಡಿರಿ. ನಿಮಗೆ ಆಶ್ರಯರಾದ ಶಿವದ್ರೋಹಿಗಳನ್ನು ಬಿಟ್ಟು, ಮತ್ತೆಲ್ಲಿಯೂ ಖಂಡಿತವಾಗಿ ಹೋಗಬೇಡಿರಿ, ಎಂದು ಯಮನು ಆ ಪಾಪಗಳಿಗೆ ಅಭಿಮಾನದೇವತೆಗಳಾಗಿರುವವರಿಗೆ ಆಜ್ಞೆಮಾಡಿದನು. ॥೮೦೫-೮೦೬॥

ಯಮನು ಹೀಗೆ ಅಪ್ಪಣೆಮಾಡಿದ ಕೂಡಲೇ ಆ ಪಾಪಗಳನ್ನೆಲ್ಲಾ ಕಳುಹಿಸಿ ಕೊಟ್ಟನು. ಆಮೇಲೆ ಇವೆಲ್ಲವೂ ಹೋಗಿ ಈಶ್ವರಭಕ್ತರಲ್ಲದವರಲ್ಲಿಯೇ ಅನವರತವೂ ನೆಲಸಿದುವು. ಶಿವಭಕ್ತಿಹೀನರು ಸದಾ ಪಾಪಕ್ಕೆ ಆಶ್ರಯರು. ಆದ್ದರಿಂದಲೇ ವೇದ ಪ್ರಸಿದ್ಧವಾದ ಭಸ್ಮಸ್ನಾನವೇ ಮುಂತಾದುವುಗಳಲ್ಲಿ ಅವರಿಗೆ ಖಂಡಿತವಾಗಿ ನಂಬಿಕೆ ಯುಂಟಾಗುವುದಿಲ್ಲ. ॥೮೦೭-೮೦೮॥

ಜನ್ಮಜನ್ಮಾಂತರಗಳಲ್ಲಿ ಮಾಡಿದ ಪಾಪವು ಫಲೋನ್ಮುಖವಾಗಿದ್ದರೆ ಅವನಿಗೆ ವಿಭೂತಿಲೇಪನವೇ ಮುಂತಾದುವುಗಳಲ್ಲಿ ನಂಬಿಕೆಯುಂಟಾಗುವುದಿಲ್ಲ. ಹಾಗೆಯೇ

ಜನ್ಮಜನ್ಮಾಂತರಕೃತಂ ತಪೋ ಯಸ್ಯ ಫಲೋನ್ಮುಖಂ ।
ನ ತಸ್ಯ ಜಾಯತೇ ಶ್ರದ್ಧಾ ವಿಭೂತ್ಯುದ್ಧೂಲನಾದಿಷು ॥೮೧೦॥

ಫಲೋನ್ಮುಖತಪೋಯೋಗಾದ್ಭಸ್ಮಸ್ನಾನರತಾ ದ್ವಿಜಾಃ ।
ಕುರ್ವಂತಿ ಭಸ್ಮನಾ ಸ್ನಾನಂ ಮಂತ್ರಪೂತೇನ ಭಸ್ಮನಾ ॥೮೧೧॥

ಫಾಲಾದ್ಯಂಗೇಷು ಕರ್ತವ್ಯಂ ತ್ರಿಪುಂಡ್ರಂ ಕೇವಲಂ ತತಃ
ರುದ್ರಾಕ್ಷಧಾರಣಂ ಕಾರ್ಯಂ ಜಾಬಾಲಶ್ರುತಿಚೋದಿತಂ ॥೮೧೨॥

ತತಃ ಸಂಧ್ಯಾದಿಕಂ ಕೃತ್ವಾ ಕರ್ತವ್ಯಂ ಶಿವಪೂಜನಂ ।
ಶಿವಾರ್ಚನೇನ ನಶ್ಯಂತಿ ಪಾಪಾನಿ ವಿವಿಧಾನ್ಯಪಿ ॥೮೧೩॥

ಶಿವಾರ್ಚನೇನ ಪ್ರಾಪ್ಯಂತೇ ಧರ್ಮಾದೀನಿ ಫಲಾನ್ಯಪಿ ।
ಧರ್ಮಾದಿಫಲಹೇತುತ್ವಂ ಯತಃ ಶ್ರೌತಂ ಶಿವಾರ್ಚನಂ ॥೮೧೪॥

ಸರ್ವಕಾಮಪ್ರದಂ ಪುಣ್ಯಂ ಶಿವಲಿಂಗಸ್ಯ ಪೂಜನಂ ।
ಸರ್ವವೇದಶ್ರುತಂ ಪುಣ್ಯಂ ಮಹಾಪಾತಕನಾಶಕಂ ॥೮೧೫॥

---

ಜನ್ಮಾಂತರದಲ್ಲಿ ಮಾಡಿದ ತಪಸ್ಸು ಫಲವನ್ನು ಕೊಡುವ ಸ್ಥಿತಿಯಲ್ಲಿದ್ದರೆ ಅಂತಹವನಿಗೆ ಭಸ್ಮಲೇಪನವೇ ಮುಂತಾದವುಗಳಲ್ಲಿ ನಂಬಿಕೆಯುಂಟಾಗುವುದು.॥೮೦೯-೮೧೦॥

ತಪಸ್ಸಿನ ಯೋಗವು ಫಲೋನ್ಮುಖವಾಗಿದ್ದರೆ ಆಗ ಬ್ರಾಹ್ಮಣರು ಮಂತ್ರಪೂತವಾದ ವಿಭೂತಿಯಿಂದ ಭಸ್ಮಸ್ನಾನವನ್ನು ಮಾಡುತ್ತಾರೆ. ಆಮೇಲೆ ಹಣೆಯೇ ಮುಂತಾದ ಅವಯವಗಳಲ್ಲಿ ಶುದ್ಧವಾದ ಭಸ್ಮತ್ರಿಪುಂಡ್ರವನ್ನೂ, ಜಾಬಾಲಶ್ರುತಿಯಲ್ಲಿ ಹೇಳಿದ ರುದ್ರಾಕ್ಷಧಾರಣೆಯನ್ನೂ ಮಾಡಬೇಕು. ॥೮೧೧-೮೧೨॥

ಆಮೇಲೆ ಸಂಧ್ಯಾವಂದನೆ ಮೊದಲಾದ ಕರ್ಮಗಳನ್ನು ಮಾಡಿ, ಅನಂತರ ಶಿವಪೂಜೆಮಾಡಬೇಕು. ಶಿವಪೂಜೆಯಿಂದ ಬಗೆಬಗೆಯಾದ ಪಾಪಗಳೂ ನಾಶವಾಗುವುವು. ಅದರಿಂದಲೇ ಧರ್ಮ, ಅರ್ಥ, ಕಾಮ ಮತ್ತು ಮೋಕ್ಷರೂಪವಾದ ಫಲಗಳೂ ಉಂಟಾಗುತ್ತವೆ ಶ್ರುತಿಪ್ರಸಿದ್ಧವಾದ ಶಿವಪೂಜೆಯು ಧರ್ಮವೇ ಮೊದಲಾದ ಚತುರ್ವಿಧ ಫಲಗಳನ್ನು ಉಂಟುಮಾಡಲು ಕಾರಣಭೂತವಾಗಿದೆ ॥೮೧೩-೮೧೪॥

ಶಿವಲಿಂಗಪೂಜೆಯು ಸಕಲ ಇಷ್ಟಾರ್ಥಗಳನ್ನೂ ಕೊಡುವಂತಹ ಪುಣ್ಯಕರವಾದುದು. ಸಕಲ ವೇದಗಳಲ್ಲಿಯೂ ಪ್ರಸಿದ್ಧವಾದುದು. ಮಹಾಪಾಪಗಳನ್ನೂ

ಶಿವಾರ್ಚನಂ ಪ್ರಯತ್ನೇನ ಯೇ ಕುರ್ವಂತಿ ವಿಧಾನತಃ ।
ತೇ ಧನ್ಯಾಃ ಪಾವನಾಃ ಪುಣ್ಯಾಸ್ತೇ ತಪೋಮೂರ್ತಯೋ ಧ್ರುವಂ ॥೮೧೬॥

ಕೃತೈರಪಿ ಮಹಾದಾನೈಃ ಕೋಟಿಶೋ ವಿಧಿಪೂರ್ವಕಂ ।
ಶಿವಾರ್ಚನಫಲಂ ಯಾವತ್ತಾವನ್ನಾವಾಪ್ಯತೇ ಧ್ರುವಂ ॥೮೧೭॥

ಕೃತೈರಪಿ ಮಹಾಯಾಗೈಃ ಕೋಟಿಶೋ ವಿಧಿಪೂರ್ವಕಂ ।
ಶಿವಾರ್ಚನಫಲಂ ಯಾವತ್ತಾವನ್ನಾವಾಪ್ಯತೇ ಧ್ರುವಂ ॥೮೧೮॥

ಕೃತೈರಪಿ ಮಹಾಧರ್ಮೈಃ ಕೋಟಿಶೋ ವಿಧಿಪೂರ್ವಕಂ ।
ಶಿವಾರ್ಚನಫಲಂ ಯಾವತ್ತಾವನ್ನಾವಾಪ್ಯತೇ ಧ್ರುವಂ ॥೮೧೯॥

ಕೃತೈರಪಿ ಮಹಾತೀರ್ಥೈಃ ಕೋಟಿಶೋ ವಿಧಿಪೂರ್ವಕಂ ।
ಶಿವಾರ್ಚನಫಲಂ ಯಾವತ್ತಾವನ್ನಾವಾಪ್ಯತೇ ಧ್ರುವಂ ॥೮೨೦॥

ಪೂಜಿತಃ ಶಂಕರೋ ಭಕ್ತ್ಯಾ ದ್ವಿತ್ರೈರ್ಬಿಲ್ವದಲೈರಪಿ ।
ದದಾತ್ಯೇವ ಹಿ ಸಂತುಷ್ಟಃ ಸಾಯುಜ್ಯಮಪಿ ಲೀಲಯಾ ॥೮೨೧॥

ಮಹಾದೇವಾರ್ಚನಸ್ಯೈವ ಮುಕ್ತಿಸಾಧನತಾ ತತಃ ।
ಮುಕ್ತ್ಯರ್ಥಿಭಿಃ ಪ್ರಯತ್ನೇನ ಕರ್ತವ್ಯಂ ಶಿವಪೂಜನಂ ॥೮೨೨॥

ನಾಶಮಾಡುವಂತಹದು. ಶಿವಪೂಜೆಯನ್ನು ನಿಯಮದಿಂದ ವಿಧಿಪೂರ್ವಕವಾಗಿ ಮಾಡುವವರೇ ಧನ್ಯರು, ಅವರೇ ಪರಿಶುದ್ಧರು. ಪುಣ್ಯಕರರೂ, ತಪೋಮೂರ್ತಿಗಳೂ ಅವರೇ ಆಗಿರುವರು. ಇದು ನಿಶ್ಚಯವು. ॥೮೧೫-೮೧೬॥

ವಿಧಿಪೂರ್ವಕವಾಗಿ ಕೋಟ್ಯಂತರ ಮಹಾದಾನಗಳು, ದೊಡ್ಡ ಯಾಗಗಳು, ಮಹಾಧರ್ಮಗಳು ಮತ್ತು ಪುಣ್ಯತೀರ್ಥಸೇವೆಗಳನ್ನು ಮಾಡಿದರೂ ಶಿವಪೂಜಾ ಫಲದಷ್ಟು ಫಲವು ಖಂಡಿತವಾಗಿಯೂ ಉಂಟಾಗುವುದಿಲ್ಲ. ॥೮೧೭-೮೧೮-೮೧೯-೮೨೦।

ಎರಡು ಅಥವಾ ಮೂರು ಬಿಲ್ವಪತ್ರೆಗಳಿಂದ ಭಕ್ತಿಪೂರ್ವಕವಾಗಿ ಆ ಶಂಕರನನ್ನು ಪೂಜೆಮಾಡುವವನು ಸಂತುಷ್ಟನಾಗಿ ಸಾಯುಜ್ಯವನ್ನಾದರೂ ಲೀಲೆಯಿಂದ ಭಕ್ತರಿಗೆ ಕೊಡುವನು. ಮಹಾದೇವನ ಪೂಜೆಗೇ ಮುಕ್ತಿಯನ್ನುಂಟುಮಾಡುವ

ಶಿವೈಕನಿರತೋ ಭೂತ್ವಾ ಯಃ ಶಿವಂ ಪೂಜಯಿಷ್ಯತಿ ।
ಸ ಮಹಾಪಾಪನಿರ್ಮುಕ್ತಃ ಶಿವಲೋಕಂ ಪ್ರಯಾಸ್ಯತಿ ॥೮೨೩॥

ಪಾಪಕಾನನದಾವಾಗ್ನಿಃ ಶ್ರೀಮಹಾದೇವಪೂಜನಂ ।
ಧರ್ಮಾರ್ಥಕಾಮಮೋಕ್ಷಾಣಾಮಸಾಧಾರಣಕಾರಣಂ ॥೮೨೪॥

ಶಿವಾರ್ಚನಾತ್ಪರೋ ಧರ್ಮೋ ನಾಸ್ತಿ ನಾಸ್ತಿ ಸುರಾ ಧ್ರುವಂ ।
ಸತ್ಯಮೇತತ್ಪುನಃ ಸತ್ಯಮುದ್ಧೃತ್ಯ ಭುಜಮುಚ್ಯತೇ ॥೮೨೫॥

ಸತತಂ ಶ್ರೀಮಹೇಶಸ್ಯ ಸರ್ವದೇವಶಿಖಾಮಣೇಃ ।
ಪೂಜಾಂ ಕರೋತಿ ಯಃ ಪ್ರೀತ್ಯಾ ಸ ವಂದ್ಯೋ ಮಮ ಸರ್ವದಾ॥೮೨೬॥

ಸಹಸಾ ನ ಭವತ್ಯೇವ ಪ್ರೀತಿಸ್ತ್ರ್ಯಂಬಕಪೂಜನೇ
ತತ್ರ ಚೇತ್ಪ್ರೀತಿರನಿಶಂ ಜಿತಂ ತರ್ಹಿ ಜಗತ್ತ್ರಯಂ ॥೮೨೭॥

---

ಶಕ್ತಿಯುಂಟಾದುದರಿಂದ ಮೋಕ್ಷವನ್ನು ಬಯಸುವವರೆಲ್ಲರೂ ನಿಯಮದಿಂದ ಶಿವನನ್ನು ಪೂಜೆಮಾಡಬೇಕು. ||೮೨೧-೮೨೨||

ಶಿವನೊಬ್ಬನಲ್ಲಿಯೇ ನಿರತನಾಗಿ ಶಿವನನ್ನು ಪೂಜೆಮಾಡುವವನು, ಮಹಾಪಾಪಗಳಿಂದಲೂ ಬಿಡುಗಡೆಹೊಂದಿ ಶಿವಲೋಕವನ್ನೈದುತ್ತಾನೆ. ಶ್ರೀಮಹಾದೇವನ ಪೂಜೆಯು ಪಾಪವೆಂಬ ಕಾಡಿಗೆ ಕಾಳ್ಗಿಚ್ಚಿನಂತಿರುವುದು. ಇದು ಧರ್ಮ, ಅರ್ಥ, ಕಾಮ ಮತ್ತು ಮೋಕ್ಷಗಳಿಗೆ ಅಸಾಧಾರಣಕಾರಣವಾಗಿರುವುದು. ||೮೨೩-೮೨೪||

ಓ ದೇವತೆಗಳಿರಾ, ಶಿವಪೂಜೆಗಿಂತಲೂ ಉತ್ತಮವಾದ ಬೇರೊಂದು ಧರ್ಮವೇ ಇಲ್ಲವೆಂಬುದು ಖಂಡಿತ ಇದರಲ್ಲಿ ಸಂಶಯವಿಲ್ಲ. ಪುನಃ ಇದು ಸತ್ಯವೆಂದು ಭುಜವನ್ನೆತ್ತಿ ಹೇಳುತ್ತೇನೆ. ಅನವರತವೂ ಸಕಲ ದೇವತಾಶಿಖಾಮಣಿಯಾದ ಮಹೇಶ್ವರನನ್ನು ಪ್ರೀತಿಯಿಂದ ಪೂಜೆಮಾಡುವವನು ನನಗೆ ಯಾವಾಗಲೂ ನಮಸ್ಕಾರಾರ್ಹನು. ||೮೨೫-೮೨೬||

ಆ ಮುಕ್ಕಣ್ಣನ ಪೂಜೆಯಲ್ಲಿ ಯಾರಿಗೂ ಜಾಗ್ರತೆಯಾಗಿ ಪ್ರೀತಿಯುಂಟಾಗುವುದಿಲ್ಲ. ಅದರಲ್ಲಿ ಪ್ರೀತಿಯುಂಟಾದರೆ ಅವನು ಮೂರುಲೋಕವನ್ನು ಜಯಿಸಿದಂತೆಯೇ ಸರಿ. ||೮೨೭||

॥ ಅಗಸ್ತ್ಯ ಉವಾಚ ॥

ಇತ್ಯುಕ್ತಂ ತದ್ವಚಃ ಶ್ರುತ್ವಾ ತಮೂಚುಃ ಕೇಶವಂ ಸುರಾಃ ।
ಕಾಶೀಂ ಗಂತುಂ ಸಮುದ್ಯುಕ್ತಃ ಸ ಕಿಮಾಸೀದಿತಿ ದ್ವಿಜಃ ॥೮೨೮॥

ವಿಷ್ಣುರುವಾಚ

ಸ ಗತೋ ನರ್ಮದಾಂ ರಮ್ಯಾಂ ಶಿವಲಿಂಗಸಮಾಶ್ರಯಾಂ ।
ಗತ್ವಾ ದದರ್ಶ ತತ್ರಸ್ಥಾನ್ಮುನೀನ್ ಶಿವಪರಾಯಣಾನ್ ॥೮೨೯॥

ಪಂಚಾಶತ್ಕೋಟಿಮುನಯಃ ಪ್ರಪನ್ನೀಕೃತಶಂಕರಾಃ ।
ತದೈವ ಪ್ರಸ್ಥಿತಾಃ ಕಾಶೀಂ ಮಹೋತ್ಸಾಹಸಮನ್ವಿತಾಃ ॥೮೩೦॥

ಸ ತೈರ್ಮುನಿವರ್ಯೈಃ ಸಾಕಮತ್ಯಂತಂ ಭಕ್ತಿಪೂರ್ವಕಂ ।
ವಿವೇಶ ಮುಕ್ತಿದಾಂ ಕಾಶೀಂ ಶ್ರೀಮಹೇಶಕೃತಾಶ್ರಯಾಃ ॥೮೩೧॥

ದೃಷ್ಟ್ವಾ ತೇ ಮುನಯಃ ಕಾಶೀಂ ಸತಾಂ ಸದ್ಭುಕ್ತಿಮುಕ್ತಿದಾಂ ।
ಸಂತೋಷಂ ಪರಮಂ ಪ್ರಾಪುರ್ಧನಂ ಪ್ರಾಪ್ಯೇವ ನಿರ್ಧನಃ ॥೮೩೨॥

ಹೀಗೆ ನುಡಿದ ಮಾತುಗಳನ್ನು ಕೇಳಿ ದೇವತೆಗಳು ಕಾಶಿಗೆ ಹೋಗಲು ಪ್ರಯತ್ನಿಸಿದ್ದ ಆ ಬ್ರಾಹ್ಮಣನೇನಾದನು? ಅವನ ವಿಷಯವೇನೆಂದು ವಿಷ್ಣುವನ್ನು ಪ್ರಾರ್ಥಿಸಿದರು. ಮತ್ತೆ ವಿಷ್ಣುವು ದೇವತೆಗಳೊಡನೆ ಹೀಗೆಂದನು. ॥೮೨೮॥

ಆ ಬ್ರಾಹ್ಮಣನು ಶಿವಲಿಂಗಗಳಿಂದ ಆಶ್ರಿತವಾದ ಮನೋಹರವಾಗಿರುವ ನರ್ಮದಾನದಿಗೆ ಹೋಗಿ, ಅದರ ದಡದಲ್ಲಿರುವ ಶಿವತತ್ಪರರಾದ ಮುನಿಗಳನ್ನು ದರ್ಶನಮಾಡಿದನು. ಆಗಲೇ ಆ ಶಂಕರನ ಪ್ರಸಾದವನ್ನು ಹೊಂದಿದ ಐವತ್ತು ಕೋಟಿ ಮಂದಿ ಮುನಿಗಳು ತುಂಬಾ ಉತ್ಸಾಹದಿಂದ ಕಾಶೀ ಪ್ರಯಾಣಕ್ಕೆ ಹೊರಟರು. ॥೮೨೯-೮೩೦॥

ಅವನೂ ಆ ಮುನಿಶ್ರೇಷ್ಠರೊಡನೆ ಭಕ್ತಿಪೂರ್ವಕವಾಗಿ ಶ್ರೀ ಮಹೇಶ್ವರನಿಗೆ ಆಶ್ರಯವಾಗಿ ಮೋಕ್ಷವನ್ನುಂಟುಮಾಡುವ ಕಾಶೀಪಟ್ಟಣಕ್ಕೆ ಪ್ರವೇಶಮಾಡಿದನು. ಆ ಮುನಿಗಳೆಲ್ಲರೂ ಸತ್ಪುರುಷರಿಗೆ ಭೋಗಗಳನ್ನೂ ಮತ್ತು ಮುಕ್ತಿಯನ್ನೂ ಉಂಟುಮಾಡುವ ಆ ಕಾಶೀಪಟ್ಟಣವನ್ನು ನೋಡಿ, ಬಡವನಿಗೆ ಹಣ ಸಿಕ್ಕಿದಂತೆ ಅತಿಯಾಗಿ ಸಂತೋಷಪಟ್ಟರು ॥೮೩೧-೮೩೨॥

ಜ್ಞಾನವಾಪ್ಯಾಂ ತತಃ ಸ್ನಾತ್ವಾ ಸರ್ವೇ ತೇ ಮುನಿಪುಂಗವಾಃ ।
ಜ್ಞಾನೇಶಂ ಪೂಜಯಾಮಾಸುರ್ದಂಡಪಾಣಿಂ ತತಃ ಪರಂ ॥೮೩॥

ಮೋದಾದೀನ್ಢುಂಡಿರಾಜಂ ಚ ಪೂಜಯಿತ್ವಾ ತತಃ ಪರಂ ।
ಬಿಲ್ವಪತ್ರಾಂಜಲಿಪುಟಾಃ ಪ್ರಾಪುರ್ನಿರ್ವಾಣಮಂಟಪಂ ॥೮೪॥

ನಿರ್ವಾಣಮಂಡಪೇ ಸ್ಥಿತ್ವಾ ವಿಶ್ವೇಶ್ವರಮುಮಾಪತಿಂ ।
ದೃಷ್ಟ್ವಾ ಪ್ರಣಮ್ಯ ಸಂತುಷ್ಟಾಸ್ತುಷ್ಟುವುರ್ವಿವಿಧೈಃ ಸ್ತವೈಃ ॥೮೫॥

ತತಃ ಪರಮತಿಸ್ವಚ್ಛೈರ್ಜ್ಞಾನವಾಪೀಜಲೈಃ ಸುರಾಃ ।
ಅಭಿಷಿಚ್ಯ ಪ್ರಯತ್ನೇನ ವಿಶ್ವೇಶ್ವರಮನಾಮಯಂ ॥೮೬॥

ಭಸ್ಮನಾ ಬಿಲ್ವಪತ್ರೈಶ್ಚ ಪೂಜಯಿತ್ವಾ ಪ್ರಯತ್ನತಃ ।
ಪ್ರದಕ್ಷಿಣನಮಸ್ಕಾರಾನ್ಕೃತ್ವಾ ನನೃತುರಾಸ್ತಿಕಾಃ ॥೮೭॥

ನಿರ್ವಾಣಮಂಡಪೇ ಸರ್ವೇ ತತಃ ಪರಮಘಾಪಹೇ ।
ಉಪವಿಶ್ಯ ಯಮಾಸಕ್ತಾಃ ಪ್ರಾಪುರಾನಂದಮಕ್ಷಯಂ ॥೮೮॥

---

ಅನಂತರ ಜ್ಞಾನವಾಪಿಯಲ್ಲಿ ಆ ಮುನಿಪುಂಗವರೆಲ್ಲಾ ಸ್ನಾನಮಾಡಿ, ಜ್ಞಾನೇಶ್ವರನನ್ನು ಪೂಜೆಮಾಡಿದರು. ಅನಂತರ ದಂಡಪಾಣಿಯನ್ನೂ ಮೋದಾದಿ ಗಣಪತಿಯನ್ನೂ ಢುಂಡಿರಾಜನನ್ನೂ ಪೂಜಿಸಿ, ಆಮೇಲೆ ಬೊಗಸೆಯಲ್ಲಿ ಬಿಲ್ವಪತ್ರೆಗಳನ್ನು ಹಿಡಿದು ನಿರ್ವಾಣಮಂಟಪಕ್ಕೆ ಹೋದರು. ||೮೩-೮೪||

ಹಾಗೆಯೇ ಆ ನಿರ್ವಾಣಮಂಟಪದಲ್ಲಿಯೇ ಕೊಂಚಕಾಲ ನಿಂತು, ಉಮಾರಮಣನಾದ ವಿಶ್ವೇಶ್ವರನನ್ನು ದರ್ಶನಮಾಡಿ, ಸಂತೋಷಭರಿತರಾಗಿ ನಾನಾವಿಧವಾದ ಸ್ತೋತ್ರಗಳಿಂದ ಸ್ತುತಿಸಿದರು. ಅನಂತರ ಜ್ಞಾನವಾಪಿಯ ಸ್ವಚ್ಛನೀರಿನಿಂದ ಸುಖಸ್ವರೂಪನಾದ ವಿಶ್ವೇಶ್ವರನಿಗೆ ಅಭಿಷೇಕಮಾಡಿ, ವಿಭೂತಿ ಮತ್ತು ಬಿಲ್ವಪತ್ರೆಗಳಿಂದ ನಿಯಮವಾಗಿ ಪೂಜೆಮಾಡಿದರು. ಅನಂತರ ಆಸ್ತಿಕರಾದ ಅವರು ಪ್ರದಕ್ಷಿಣ ನಮಸ್ಕಾರಗಳನ್ನೂ ನಡೆಸಿದರು. ||೮೫-೮೬-೮೭||

ಪಾಪನಾಶಕವಾದ ನಿರ್ವಾಣಮಂಟಪದಲ್ಲಿ ಎಲ್ಲರೂ ಕುಳಿತುಕೊಂಡು ಇಂದ್ರಿಯನಿಗ್ರಹಮಾಡಿ ಶಿವನನ್ನೇ ಧ್ಯಾನಿಸುತ್ತಾ ಶಾಶ್ವತವಾದ ಆನಂದವನ್ನು ಪಡೆದರು.

ತತಃ ಪಂಚಾಕ್ಷರಂ ಶೈವಂ ಸತಾರಂ ಮುಕ್ತಿದಾಯಕಂ ।
ಜಪ್ತ್ವಾ ರುದ್ರಜಪಂ ಕೃತ್ವಾ ತುಷ್ಟುವುರ್ವಿಶ್ವನಾಯಕಂ ॥೮೩೯॥

ತತೋಽಂತರ್ಗೃಹಯಾತ್ರಾದಿ ಸರ್ವಂ ಕೃತ್ವಾ ಪುನಃ ಶಿವಂ ।
ಸಂಪೂಜ್ಯ ಪ್ರಯಯುಃ ಸರ್ವೇ ಕಾಲನಾಥದಿದೃಕ್ಷಯಾ ॥೮೪೦॥

ಕಾಲಕುಂಡೇ ತತಃ ಸ್ನಾತ್ವಾ ದೃಷ್ಟ್ವಾ ಶ್ರೀಕಾಲಭೈರವಂ ।
ಪೂಜಯಾಮಾಸುರರ್ಘ್ಯಾದ್ಯೈರ್ಭಕ್ತಿಪೂರ್ವಕಮಾದರಾತ್ ॥೮೪೧॥

ತತಸ್ತೇ ಸಂಸ್ಥಿತಾಃ ಕಾಶ್ಯಾಂ ಮುಕ್ತ್ಯರ್ಥಂ ಮುನಿಪುಂಗವಾಃ ।
ಮುಕ್ತಿದಾಂ ಕಾಶಿಕಾಂ ಪ್ರಾಪ್ಯ ತೇ ತು ಮುಚ್ಯಂತಿ ಪಾವನಾಃ ॥೮೪೨॥

ಶ್ರೀಮಹೇಶಪ್ರಸಾದೇನ ಕಾಶೀಂ ಪ್ರಾಪ್ಯ ಮುನೀಶ್ವರಾಃ ।
ಮುಕ್ತಾ ಬಭೂವುಃ ಸರ್ವೇಽಪಿ ಸೋಽಪಿ ಮುಕ್ತೋ ದ್ವಿಜೋತ್ತಮಃ॥೮೪೩॥

ಅನಂತರ ತಾರಕಮಂತ್ರ ಸಮೇತವಾಗಿ ಮೋಕ್ಷಪ್ರದವಾಗಿರುವ ಶಿವಪಂಚಾಕ್ಷರ ಮಂತ್ರವನ್ನು ಜಪಿಸಿ, ರುದ್ರಮಂತ್ರವನ್ನೂ ಪಾರಾಯಣಮಾಡಿ, ಆ ಜಗದೊಡೆಯನನ್ನು ನಾನಾರೀತಿ ಸ್ತೋತ್ರಮಾಡಿದರು. ॥೮೩೮-೮೩೯॥

ಆಮೇಲೆ ಅಂತರ್ಗೃಹವೇ ಮೊದಲಾದ ಯಾತ್ರೆಗಳನ್ನೆಲ್ಲಾ ಮುಗಿಸಿಕೊಂಡು ಅನಂತರ ಶಿವನನ್ನು ಪೂಜಿಸಿ, ಕಾಲನಾಥನನ್ನು ನೋಡಬೇಕೆಂಬ ಇಚ್ಛೆಯಿಂದ ಹೊರಟರು. ಅಲ್ಲಿದ್ದ ಕಾಲಕುಂಡದಲ್ಲಿ ಎಲ್ಲರೂ ಸ್ನಾನಮಾಡಿ ಶ್ರೀ ಕಾಲಭೈರವನನ್ನು ದರ್ಶನಮಾಡಿ, ಅರ್ಘ್ಯಪಾದ್ಯಾಚಮನವೇ ಮುಂತಾದವುಗಳಿಂದ ಭಕ್ತಿ ಮತ್ತು ಆದರಪೂರ್ವಕವಾಗಿ ಪೂಜೆಮಾಡಿದರು. ॥೮೪೦-೮೪೧॥

ಅನಂತರ ಆ ಮುನಿಶ್ರೇಷ್ಠರೆಲ್ಲರೂ ಮುಕ್ತಿಪ್ರಾಪ್ತಿಗೋಸ್ಕರ ಕಾಶಿಯಲ್ಲೇ ನೆಲಸಿದರು. ಮೋಕ್ಷಪ್ರದವಾದ ಕಾಶೀ ಪಟ್ಟಣಕ್ಕೆ ಹೋದವರು ಪಾವನರಾಗಿ ಅವರೆಲ್ಲರೂ ಮುಕ್ತಿಪಡೆಯುವರು. ಆ ಮಹೇಶ್ವರನ ಅನುಗ್ರಹದಿಂದ ಮುನಿಶ್ರೇಷ್ಠರೆಲ್ಲರೂ ಕಾಶೀಪಟ್ಟಣವನ್ನು ಹೊಂದಿ ಎಲ್ಲರೂ ಮುಕ್ತಿಪಡೆದರು. ಆ ಬ್ರಾಹ್ಮಣೋತ್ತಮನೂ ಅಲ್ಲಿ ಮುಕ್ತನಾದನು. ॥೮೪೨-೮೪೩॥

ಶಿವಾರ್ಚನೇನ ಸಂಪ್ರಾಪ್ಯಾ ಕಾಶೀ ಮುಕ್ತಿಪ್ರದಾಯಿನೀ ।
ತತೋ ಮುಕ್ತಿಶ್ಚ ಸಂಪ್ರಾಪ್ಯಾ ಮಹೇಶಾನುಗ್ರಹಾತ್ಸುರಾಃ ॥೮೪೪॥

ಶಿವಪೂಜಾಕಾಮಧೇನುಃ ಕಿಂ ವಾ ನೈವ ಪ್ರಯಚ್ಛತಿ ।
ತತಃ ಸರ್ವಾರ್ಥದಾ ಪುಣ್ಯಾ ಶಿವಪೂಜೇತಿ ಗೀಯತೇ ॥೮೪೫॥

॥ ಅಗಸ್ತ್ಯ ಉವಾಚ ॥

ಇತ್ಯುಕ್ತಾ ವಿಷ್ಣುನಾ ದೇವಾ ಬ್ರಹ್ಮಾದ್ಯಾ ವಿಷ್ಣುಮಾದರಾತ್ ।
ಪ್ರಣಮ್ಯ ಪೂಜಯಾಮಾಸುಃ ಶೈವಧರ್ಮಪರಾಯಣಂ ॥೮೪೬॥

ತತೋ ಬ್ರಹ್ಮಾದಯೋ ದೇವಾಃ ಕೇದಾರೇಶಂ ಪ್ರಯತ್ನತಃ ।
ಸಂಪೂಜ್ಯ ತುಷ್ಟುವುಃ ಸ್ತೋತ್ರೈರ್ದೇವದೇವೋತ್ತಮಂ ಶಿವಂ ॥೮೪೭॥

॥ ಶ್ರೀ ವಿಷ್ಣುರುವಾಚ ॥

ಇತ್ಯಗಸ್ತ್ಯವಚಃ ಶ್ರುತ್ವಾ ಸರ್ವಪಾಪವಿನಾಶಕಂ ।
ಅಗಸ್ತ್ಯಂ ಪೂಜಯಾಮಾಸ ಸ ಶೈವಃ ಶಿವಪೂಜಕಂ ॥೮೪೮॥

ಓ ದೇವತೆಗಳಿರಾ, ಶಿವಪೂಜೆಯಿಂದ ಮುಕ್ತಿಪ್ರದವಾದ ಕಾಶಿಯು ದೊರೆಯಬೇಕು. ಮಹೇಶ್ವರನ ಅನುಗ್ರಹದಿಂದಲೇ ಮೋಕ್ಷವೂ ಉಂಟಾಗುವುದು. ಶಿವಪೂಜೆಯೆಂಬ ಕಾಮಧೇನುವು ಏನನ್ನು ತಾನೇ ಕೊಡುವುದಿಲ್ಲ ಆದ್ದರಿಂದ ಸಕಲ ಇಷ್ಟಾರ್ಥಗಳನ್ನೂ ಕೊಡುತ್ತಾ ಪುಣ್ಯಪ್ರದವಾದದ್ದೆಂದು ಶಿವಪೂಜೆಯು ಸರ್ವತ್ರ ಹೇಳಲ್ಪಡುತ್ತದೆ.'' ॥೮೪೪-೮೪೫॥

ವಿಷ್ಣುವಿನಿಂದ ಹೀಗೆ ಹೇಳಲ್ಪಟ್ಟ ಬ್ರಹ್ಮನೇ ಮೊದಲಾದ ದೇವತೆಗಳು ಶಿವಧರ್ಮ ಮತ್ತು ಶಿವಪೂಜಾಪರಾಯಣನಾದ ವಿಷ್ಣುವಿಗೆ ಪ್ರಣಾಮಮಾಡಿ, ಆದರದಿಂದ ಪೂಜೆಮಾಡಿದರು. ಆಮೇಲೆ ಬ್ರಹ್ಮಾದಿ ದೇವತೆಗಳೆಲ್ಲರೂ ಕೇದಾರೇಶ್ವರನನ್ನು ಪೂಜಿಸಿ, ದೇವತೋತ್ತಮನಾದ ಪರಮಶಿವನನ್ನು ನಾನಾರೀತಿಯಿಂದ ಸ್ತೋತ್ರ ಮಾಡಿದರು. ॥೮೪೬-೮೪೭॥

ಸಕಲ ಪಾಪಗಳನ್ನೂ ನಾಶಮಾಡುವ ಅಗಸ್ತ್ಯ ಮುನಿಗಳ ಈ ಮಾತುಗಳನ್ನು ಕೇಳಿ ಆ ಶೈವಶ್ರೇಷ್ಠನು ಶಿವಪೂಜಕನಾದ ಆ ಮುನಿಯನ್ನು ಪೂಜೆಮಾಡಿದನು.

ಅತೋಽನ್ನಹಂ ಪೂಜನೀಯಃ ಪ್ರಯತ್ನೇನ ಮಹೇಶ್ವರಃ ।
ಯತೋ ವೇದೋದಿತಂ ನಿತ್ಯಂ ಶ್ರೀಮಹಾದೇವಪೂಜನಂ ॥೪೪೯॥

ಅತ್ರ ಶ್ರೀಕುಂಭಘೋಣೇಶಂ ಪೂಜಯಿತ್ವಾ ವಸಾಮ್ಯಹಂ ।
ಮಮ ತ್ರಿಯಂಬಕಾದನ್ಯಃ ಪೂಜ್ಯೋ ನಾಸ್ತ್ಯೇವ ಸರ್ವಥಾ ॥೪೫೦॥

ಶ್ರೂಯತೇ ಮುಕ್ತಿದಾ ನಿತ್ಯಂ ಮಹಾದೇವಕಥಾ ಮಯಾ ।
ಮಹಾಶೈವೈಃ ಸಹ ಪ್ರೀತಿಃ ಕ್ರಿಯತೇ ಸರ್ವದಾ ಮಯಾ ॥೪೫೧॥

ದಿನಾನಿ ಕ್ಷಣವದ್ಯಾಂತಿ ಶಿವಪೂಜಾಪರಸ್ಯ ಮೇ ।
ದುಃಖಮಾತ್ರಂ ವಿಹಾಯಾತ್ರ ಶಿವಕ್ಷೇತ್ರೇ ವಸಾಮ್ಯಹಂ ॥೪೫೨॥

ಶಿವಕ್ಷೇತ್ರನಿವಾಸೇನ ಸುಖಂ ಯಾವದವಾಪ್ಯತೇ ।
ತಾವತ್ಸುಖಂ ವಸ್ತುತಸ್ತು ವೈಕುಂಠೇನ ಮಯಾ ಧ್ರುವಂ ॥೪೫೩॥

ಆದ್ದರಿಂದ ಶ್ರೀಮಹಾದೇವನ ಪೂಜೆಯು ವೇದಪ್ರತಿಪಾದಿತವೂ, ನಿತ್ಯವೂ ಆಗಿರುವುದರಿಂದ ಆ ಮಹೇಶ್ವರನನ್ನು ನಿಯಮಬದ್ಧನಾಗಿ ಮಾನವನು ಪ್ರತಿದಿನವೂ ಪೂಜೆಮಾಡಬೇಕು. ॥೪೪೮-೪೪೯॥

ಇಲ್ಲಿಯೇ ಶ್ರೀ ಕುಂಭಘೋಣೇಶ್ವರನನ್ನು ಪೂಜೆಮಾಡುತ್ತಾ ನಾನು ವಾಸ ಮಾಡುವೆನು. ನನಗೆ ಆ ಮುಕ್ಕಣ್ಣನಿಗಿಂತಲೂ ಬೇರೇ ಯಾರೂ ಖಂಡಿತವಾಗಿ ಪೂಜಾರ್ಹರಿಲ್ಲ. ಮೋಕ್ಷಪ್ರದವಾದ ಆ ಮಹಾದೇವನ ಕಥೆಯನ್ನೇ ನಾನು ನಿತ್ಯವೂ ಕೇಳುತ್ತಾ, ಯಾವಾಗಲೂ, ಶಿವಭಕ್ತಾಗ್ರಣಿಗಳೊಡನೆ ಪ್ರೀತಿಯಿಂದ ವ್ಯವಹರಿಸುವೆನು ॥೪೫೦-೪೫೧॥

ಶಿವಪೂಜಾನಿರತನಾದ ನನಗೆ ದಿನಗಳೆಲ್ಲಾ ಕ್ಷಣಕಾಲದಂತೆ, ಕಳೆದುಹೋಗುತ್ತಿರುವುವು. ದುಃಖವೆಂಬುದನ್ನೇ ಮರೆತು ನಾನು ಈ ಶಿವಕ್ಷೇತ್ರದಲ್ಲಿ ವಾಸಮಾಡುತ್ತಿರುವೆನು. ಶಿವಕ್ಷೇತ್ರವಾಸದಿಂದ ಉಂಟಾಗುವಷ್ಟು ಸುಖವು ವಸ್ತುತಃ ವೈಕುಂಠದಲ್ಲಿಯೂ ದೊರೆಯಲಾರದೆಂದು ನಾನು ಖಂಡಿತವಾಗಿಯೂ ನಂಬಿದ್ದೇನೆ. ॥೪೫೨-೪೫೩॥

ಪೂಜಯಸ್ವಾತ್ರ ಗೌರೀಶಂ ಕುಂಭಘೋಣಾಭಿಧಂ ವಿಧೇ ।
ಸರ್ವಕಾಮಪ್ರದಂ ಲಿಂಗಂ ಕುಂಭಘೋಣಾಭಿಧಂ ಯತಃ ॥೮೫೪॥

ಸರ್ವಾರ್ಥದಾಯಕಂ ಯಸ್ಮಾಚ್ಛ್ರೀಮಹೇಶಸ್ಯ ಪೂಜನಂ ।
ಅತಃ ಕುರು ಪ್ರಯತ್ನೇನ ಶಿವಲಿಂಗಸ್ಯ ಪೂಜನಂ ॥೮೫೫॥

ಶಿವಲಿಂಗಾರ್ಚನೇನೈವ ಮುಕ್ತಿಸ್ತವ ಭವಿಷ್ಯತಿ ।
ಶಿವಲಿಂಗಾರ್ಚನಾದನ್ಯನ್ನಾಸ್ತಿ ಮುಕ್ತಿಪ್ರದಂ ವಿಧೇ ॥೮೫೬॥

ಉದ್ಧೂಳ್ಯ ಭಸ್ಮನಾಂಗಾನಿ ಧೃತ್ವಾ ಚೈವ ತ್ರಿಪುಂಡ್ರಕಂ
ರುದ್ರಾಕ್ಷಧಾರಣಂ ಕೃತ್ವಾ ಪೂಜಯಸ್ವ ಸದಾಶಿವಂ ॥೮೫೭॥

ಅಭಿಷಿಚ್ಯ ಮಹಾದೇವಂ ರುದ್ರಾಧ್ಯಾಯೇನ ಸಾದರಂ ।
ಭಸ್ಮನಾ ಬಿಲ್ವಪತ್ರೈಶ್ಚ ಪೂಜಯಸ್ವ ಮಹೇಶ್ವರಂ ॥೮೫೮॥

ಪೂಜಾಂತೇ ಜಪ ಯತ್ನೇನ ಶೈವಂ ಪಂಚಾಕ್ಷರಂ ವಿಧೇ ।
ಶ್ರೀರುದ್ರಂ ಜಪ ಯತ್ನೇನ ತತಃ ಸರ್ವಾಘನಾಶಕಂ ॥೮೫೯॥

ಓ ಬ್ರಹ್ಮನೇ, ಈ ಕ್ಷೇತ್ರದಲ್ಲಿರುವ ಕುಂಭಘೋಣಸಂಜ್ಞಕನಾದ ಗೌರೀರಮಣನನ್ನು ಪೂಜಿಸು. ಕುಂಭಘೋಣೇಶಲಿಂಗವು ಸಕಲ ಇಷ್ಟಾರ್ಥಗಳನ್ನೂ ಕೊಡುವುದಾಗಿರುವುದು. ಮಹೇಶ್ವರನ ಪೂಜೆಯು ಸಕಲ ಇಷ್ಟಾರ್ಥಗಳನ್ನೂ ಕೊಡುವುದಾದ್ದರಿಂದ ಈ ಶಿವಲಿಂಗವನ್ನು ನಿಯಮದಿಂದ ಪೂಜೆಮಾಡುವನಾಗು. ॥೮೫೪-೮೫೫॥

ಶಿವಲಿಂಗ ಪೂಜೆಯಿಂದಲೇ ನಿನಗೆ ಮುಕ್ತಿಯುಂಟಾಗುವುದು. ಬ್ರಹ್ಮದೇವನೇ, ಶಿವಲಿಂಗಾರ್ಚನೆಗಿಂತ ಬೇರೆಯಾವುದೂ ಮೋಕ್ಷವನ್ನು ಕೊಡಲಾರದು. ವಿಭೂತಿಯನ್ನು ಮೈಗೆಲ್ಲಾ ಲೇಪನಮಾಡಿಕೊಂಡು, ಹಣೆ ಮುಂತಾದ ಪ್ರದೇಶಗಳಲ್ಲಿ ಭಸ್ಮತ್ರಿಪುಂಡ್ರವನ್ನು ಧರಿಸಿಕೊಂಡು, ರುದ್ರಾಕ್ಷಗಳಿಂದ ಅಲಂಕೃತನಾಗಿ ಆ ಸದಾಶಿವನನ್ನು ಪೂಜಿಸು. ॥೮೫೬-೮೫೭॥

ಮಹಾದೇವನನ್ನು ರುದ್ರಮಂತ್ರದಿಂದ ಆದರಪೂರ್ವಕವಾಗಿ ಅಭಿಷೇಕ ಮಾಡಿ, ಅನಂತರ ವಿಭೂತಿ ಮತ್ತು ಬಿಲ್ವಪತ್ರೆಗಳಿಂದ ಆ ಮಹೇಶ್ವರನನ್ನು

ಪಂಚಾಕ್ಷರೇಣ ರುದ್ರೇಣ ಪ್ರೀಣಯಸ್ವ ಸದಾಶಿವಂ ।
ರುದ್ರಪಂಚಾಕ್ಷರಾಭ್ಯಾಂ ತು ಪ್ರೀತೋ ಭವತಿ ಶಂಕರಃ ॥೮೬೦॥

ಷಡಕ್ಷರೇಣ ರುದ್ರೇಣ ಯಃ ಪ್ರೀಣಯತಿ ಶಂಕರಂ ।
ಸ ಘೋರತಪಸಾ ರುದ್ರಂ ಪ್ರೀಣಯತ್ಯೇವ ನಾನ್ಯಥಾ ॥೮೬೧॥

ರುದ್ರಪಂಚಾಕ್ಷರಜಪಸ್ತಪ ಏವ ನ ಸಂಶಯಃ ।
ನ ತತೋಗ್ರಂ ತಪಃ ಕಿಂಚಿತ್ಸತ್ಯಮೇವೋಚ್ಯತೇ ಮಯಾ ॥೮೬೨॥

॥ ಶ್ರೀ ಸದಾಶಿವ ಉವಾಚ ॥

ಇತ್ಯುಕ್ತೋ ವಿಷ್ಣುನಾ ಬ್ರಹ್ಮಾ ಮಾಮನಾದ್ಯಂತಮವ್ಯಯಂ ।
ಪೂಜಯಿತ್ವಾ ಸ್ಥಿತೋ ಭಕ್ತ್ಯಾ ಕುಂಭಘೋಣೇ ಮನೋರಮೇ ॥೮೬೩॥

---

ಪೂಜೆಮಾಡು. ಅಯ್ಯ ಬ್ರಹ್ಮನೇ, ಪೂಜೆ ಮುಗಿದಮೇಲೆ ಶಿವಪಂಚಾಕ್ಷರ ಮಂತ್ರವನ್ನೂ ಸಕಲ ಪಾಪಗಳನ್ನೂ ನಾಶಮಾಡುವ ಶ್ರೀರುದ್ರಮಂತ್ರವನ್ನೂ ನಿಯಮದಿಂದ ಜಪಿಸು. ॥೮೫೮-೮೫೯॥

ಶಿವಪಂಚಾಕ್ಷರ ಮತ್ತು ರುದ್ರಮಂತ್ರಗಳಿಂದ ಸದಾಶಿವನನ್ನು ಸಂತೋಷ ಪಡಿಸು. ಈ ಎರಡು ಮಂತ್ರಜಪಗಳಿಂದ ಶಂಕರನು ಸುಪ್ರೀತನಾಗುತ್ತಾನೆ. ಷಡಕ್ಷರಮಂತ್ರದಿಂದಲೂ ಮತ್ತು ರುದ್ರಮಂತ್ರದಿಂದಲೂ ಶಂಕರನನ್ನು ಸಂತೋಷ ಪಡಿಸುವವನು, ಘೋರವಾದ ತಪಸ್ಸನ್ನುಮಾಡಿ ಶಂಕರನನ್ನು ಸಂತೋಷಪಡಿಸಿ ದಂತೆಯೇ ಆಗುವುದು. ॥೮೬೦-೮೬೧॥

ರುದ್ರಮಂತ್ರ ಮತ್ತು ಶಿವಪಂಚಾಕ್ಷರಮಂತ್ರಗಳ ಜಪವು ತಪಸ್ಸೇ ಎನ್ನುವುದರಲ್ಲಿ ಸಂದೇಹವಿಲ್ಲ. ಅದಕ್ಕಿಂತಲೂ ಘೋರವಾದ ಇನ್ನೊಂದು ತಪಸ್ಸೇ ಇಲ್ಲವೆಂದು ನಾನು ಸತ್ಯವಾಗಿ ಹೇಳುತ್ತೇನೆಂದು ವಿಷ್ಣುವು ಬ್ರಹ್ಮಾದಿ ದೇವತೆಗಳಿಗೆ ಹೇಳಿದನು. ॥೮೬೨॥

ವಿಷ್ಣುವಿನಿಂದ ಹೀಗೆ ಬೋಧಿಸಲ್ಪಟ್ಟ ಆ ಬ್ರಹ್ಮನೂ ಸಹ ಆದ್ಯಂತರಹಿತನೂ (ಜನನಮರಣಗಳಿಂದ ಬಿಡಲ್ಪಟ್ಟವನೂ) ನಾಶವಿಲ್ಲದವನೂ, ಆದ ನನ್ನನ್ನೇ (ಶಿವನನ್ನೇ) ಮನೋಹರವಾದ ಕುಂಭಘೋಣಕ್ಷೇತ್ರದಲ್ಲಿ ಭಕ್ತಿಯಿಂದ ಪೂಜೆ ಮಾಡಿ ಅಲ್ಲಿಯೇ ನಿಂತನು ॥೮೬೩॥

ಯೇ ಮಾಮನನ್ಯಶರಣಾಃ ಸತತಂ ವರೇಣ್ಯಂ
ಸಂಪೂಜಯಂತಿ ನವಕೋಮಲಬಿಲ್ವಪತ್ರೈಃ ।
ತೇ ನಿರ್ಗುಣಾ ಅಪಿ ಗುಣಾಂಬುಧಯೋ ಭವಂತಿ
ವಿಂದಂತಿ ಮುಕ್ತಿಮುಪಭುಕ್ತಸಮಸ್ತಭೋಗಾಃ ॥೮೬೪॥

ಇತಿ ಶ್ರೀಶಿವರಹಸ್ಯೇ ಸಪ್ತಮಾಂಶೇ ಪೂರ್ವಾರ್ಧೇ ಕುಂಭಘೋಣಕ್ಷೇತ್ರ ಮಹಿಮಾವರ್ಣನಂ ನಾಮ ಷಡ್ವಿಂಶೋಽಧ್ಯಾಯಃ

---

ಹೊಸದಾದ ಕೋಮಲವಾಗಿರುವ ಬಿಲ್ವದಳಗಳಿಂದ ಸರ್ವಶ್ರೇಷ್ಠನಾದ ನನ್ನನ್ನೇ ಇನ್ನಾರಲ್ಲೂ ಭಕ್ತಿಯಿಡದೇ ಅನವರತವೂ ಪೂಜೆಮಾಡುವವರು, ತಾವೂ ಗುಣರಹಿತರೂ, ಸದ್ಗುಣಗಳಿಗೆ ಸಮುದ್ರದಂತೆ ಆಶ್ರಯರೂ ಆಗಿ ಇಹದಲ್ಲಿ ಸಮಸ್ತ ಭೋಗಗಳನ್ನೂ ಅನುಭವಿಸಿ ಕೊನೆಯಲ್ಲಿ ಮೋಕ್ಷವನ್ನು ಪಡೆಯುವರೆಂಬುದರಲ್ಲಿ ಸಂಶಯವಿಲ್ಲ, ಎಂದು ಮಹಾದೇವನು ಪಾರ್ವತಿಗೆ ತಿಳಿಯಪಡಿಸಿದನು. ॥೮೬೪॥

ಇಲ್ಲಿಗೆ ಶ್ರೀ ಶಿವರಹಸ್ಯದ ಏಳನೆಯ ಅಂಶದ ಪೂರ್ವಾರ್ಧದಲ್ಲಿ
ಕುಂಭಘೋಣ ಕ್ಷೇತ್ರದ ಮಹಿಮಾವರ್ಣನೆಯೆಂಬ
ಇಪ್ಪತ್ತಾರನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

|| ಶ್ರೀ ಶಿವಾಯನಮಃ ||

# ಅಥ ಶ್ರೀಶಿವರಹಸ್ಯೇ

## ಉಗ್ರಾಖ್ಯೇ

### ಸಪ್ತಮಾಂಶೇ ಪೂರ್ವಾರ್ಧೇ

## ಸಪ್ತವಿಂಶೋಽಧ್ಯಾಯಃ

|| ಶ್ರೀ ಶಿವ ಉವಾಚ ||

ಮಧ್ಯಾರ್ಜುನಾಭಿಧಂ ಕ್ಷೇತ್ರಮೇಕಮಸ್ತಿ ವರಾನನೇ ।
ತತ್ರ ಸಂಪೂಜ್ಯ ಮಾಂ ದೇವಾ ಮುನಯಶ್ಚ ವಸಂತಿ ಹಿ ॥೧॥

ಮಧ್ಯಾರ್ಜುನೇಶಂ ಯಃ ಪಶ್ಯೇನ್ನಿಶಿ ಭಸ್ಮವಿಭೂಷಣಃ ।
ಸಮರ್ಚಯೇಚ್ಚ ಭಕ್ತ್ಯಾ ಯಃ ಸ ಮುಕ್ತೋ ಭವತಿ ಧ್ರುವಂ ॥೨॥

ತತ್ರ ಯತ್ನೇನ ಮದ್ಭಕ್ತಂ ಸುವರ್ಣಾಭರಣಾದಿಭಿಃ ।
ಯಃ ಪೂಜಯೇತ್ಸ ಸಂಸಾರಾನ್ಮುಕ್ತೋ ಭವತಿ ಸರ್ವಥಾ ॥೩॥

## ಇಪ್ಪತ್ತೇಳನೆಯ ಅಧ್ಯಾಯ

ಪರಮೇಶ್ವರನು ಪಾರ್ವತಿಯನ್ನು ಮತ್ತೆ ಕುರಿತು ಮಧ್ಯಾರ್ಜುನೇಶ್ವರ ಕ್ಷೇತ್ರದ ಮಹಿಮೆಯನ್ನು ವಿವರಿಸುತ್ತಾ ಹೀಗೆಂದನು "ಎಲೌ ಮಂಗಳಾಂಗಿಯೇ, ಭೂಲೋಕದಲ್ಲಿ ಮಧ್ಯಾರ್ಜುನಕ್ಷೇತ್ರವೆಂಬ ಒಂದು ಪುಣ್ಯಭೂಮಿಯಿರುವುದು. ಅಲ್ಲಿ ನನ್ನನ್ನು ಪೂಜಿಸಲೋಸುಗ ದೇವತೆಗಳೂ, ಋಷಿಗಳೂ ಸರ್ವದಾ ಅಲ್ಲಿ ನೆಲಸಿರುವರು. ಆ ಕ್ಷೇತ್ರದಲ್ಲಿ ಯಾರು ರಾತ್ರಿಯಲ್ಲಿ ಭಸ್ಮರುದ್ರಾಕ್ಷಸಮೇತರಾಗಿ ನನ್ನನ್ನು ಅರ್ಚಿಸುವರೋ, ಅವರು ನಿಜವಾಗಿಯೂ ಮುಕ್ತರೆನಿಸುವರು. ||೧-೨||

ಅಲ್ಲಿ ನನ್ನ ಭಕ್ತರೆನಿಸಿದವರಿಗೆ ಸುವರ್ಣಾಭರಣಾದಿಗಳನ್ನು ದಾನಮಾಡುವುದರಿಂದಲೂ, ಅರ್ಚಿಸುವುದರಿಂದಲೂ ಮನುಷ್ಯರು ಮೋಕ್ಷವನ್ನು ಪಡೆಯುವರು.

ಅತ್ರ ಪಾತಾರ್ದ್ರಸಂಯುಕ್ತಸಪ್ತಮೀ ಭಾನುವಾಸರೇ ।
ಯೋ ಮಾಂ ಸಮರ್ಚಯೇದ್ಭಕ್ತ್ಯಾ ಸ ಮುಕ್ತೋ ಭವತಿ ಧ್ರುವಂ ॥೪॥

ಅತ್ರ ಯಃ ಕೃತ್ತಿಕಾಯೋಗೇ ಕಾರ್ತಿಕ್ಯಾಂ ಯತ್ನಪೂರ್ವಕಂ ।
ಯಃ ಪೂಜಯತಿ ಮಾಂ ಭಕ್ತ್ಯಾ ಸ ಮುಕ್ತೋ ಭವತಿ ಧ್ರುವಂ ॥೫॥

ಯಸ್ತು ಕೃಷ್ಣಲಮಾತ್ರಂ ವಾ ಸುವರ್ಣಂ ಭಸ್ಮಧಾರಿಣೇ ।
ದದಾತಿ ಪರಯಾ ಭಕ್ತ್ಯಾ ಸ ಮುಕ್ತೋ ಭವತಿ ಧ್ರುವಂ ॥೬॥

ಮಧ್ಯಾರ್ಜುನೇ ತಪಸ್ತಪ್ತಂ ಬಹುಭಿರ್ಮುನಿಭಿಃ ಪುರಾ ।
ಅವಿಮುಕ್ತಮಿದಂ ಪ್ರಾಪ್ತುಂ ಮುಕ್ತ್ಯರ್ಥಂ ಕಮಲಾನನೇ ॥೭॥

ಸಾರ್ಧಲಕ್ಷಸಹಸ್ರಾಣಾಂ ಮುನೀನಾಮೂರ್ಧ್ವರೇತಸಾಂ ।
ವಾಸಸ್ಥಲಮಭೂತ್ಪೂರ್ವಂ ಶ್ರೀಮನ್ಮಧ್ಯಾರ್ಜುನಂ ಶಿವೇ ॥೮॥

ಪುರಾ ದಧೀಚಿನಾ ತತ್ರ ತಪಸ್ತಪ್ತಮನೇಕಧಾ ।
ವಸಿಷ್ಠಾದ್ಯೈಶ್ಚ ಮುನಿಭಿಸ್ತತ್ರ ತಪ್ತಂ ತಪಶ್ಶಿವೇ ॥೯॥

---

ಅಲ್ಲದೆ, ಭಾನುವಾರ, ಸಪ್ತಮೀತಿಥಿ, ಆರ್ದ್ರಾನಕ್ಷತ್ರ, ವ್ಯತೀಪಾತಯೋಗ ಈ ನಾಲ್ಕೂ ಸೇರಿದ ದಿನದಲ್ಲಿ, ಈ ಕ್ಷೇತ್ರದಲ್ಲಿ ಯಾರು ನನ್ನನ್ನು ಆರಾಧಿಸುವರೋ ಅವರು ಸುಲಭವಾಗಿ ಮುಕ್ತಿಯನ್ನು ಹೊಂದುವರು. ॥೩-೪॥

ಕಾರ್ತಿಕಮಾಸದಲ್ಲಿ ಕೃತ್ತಿಕಾನಕ್ಷತ್ರದ ದಿನ ಇಲ್ಲಿ ನನ್ನನ್ನು ಪೂಜಿಸಿದವರಿಗೂ ಮತ್ತು ಕೃಷ್ಣಲಮಾತ್ರ (ಪರಿಮಾಣವಿಶೇಷ) ತೂಕದ ಸುವರ್ಣವನ್ನು ಭಸ್ಮಧಾರಿಯಾದ ನನ್ನ ಭಕ್ತನಿಗೆ ಭಕ್ತಿಯಿಂದ ದಾನಮಾಡಿದವರಿಗೂ ನಾನು ತಪ್ಪದೆ ಮುಕ್ತಿಯನ್ನು ಕೊಡುವೆನು. ॥೫-೬॥

ಅನೇಕ ಋಷಿಗಳು ಹಿಂದೆ ಅವಿಮುಕ್ತಕ್ಷೇತ್ರವೆನಿಸಿದ ಕಾಶೀವಾಸವನ್ನು ಬಯಸಿಯೂ, ಸುಲಭಮೋಕ್ಷಪ್ರಾಪ್ತಿಗಾಗಿಯೂ ಬಹುಕಾಲ ಇಲ್ಲಿ ತಪಸ್ಸನ್ನಾಚರಿಸಿದರು. ಈ ಕ್ಷೇತ್ರದಲ್ಲಿ ಹಾಗೆ ತಪಸ್ಸುಮಾಡುವ ಋಷಿಗಳ ಸಂಖ್ಯೆ ಸುಮಾರು ಒಂದೂವರೆಲಕ್ಷಸಾವಿರದಷ್ಟಿದ್ದಿತು. ॥೭-೮॥

ಹಿಂದೆ ಇಲ್ಲಿ ದಧೀಚಿ, ವಸಿಷ್ಠ ಮುಂತಾದ ಮಹರ್ಷಿಗಳೆಲ್ಲರೂ ನನ್ನನ್ನು

ತಸ್ಮಿನ್ ಕಾಲೇಽಭವದ್ರಾಜಾ ಧರ್ಮಮೂರ್ತಿರಿತಿ ಶ್ರುತಃ ।
ತೇನ ಧರ್ಮೇಣ ಸತತಂ ಕೃತಂ ರಾಷ್ಟ್ರಸ್ಯ ಪಾಲನಂ ॥೧೦॥

ಚತುಷ್ಪಾದಭವದ್ಧರ್ಮಸ್ತಸ್ಮಿನ್ ಶಾಸತಿ ಭೂತಲೇ ।
ಅಧರ್ಮಃ ಸಂಕ್ಷಯೋ ಜಾತಃ ಸರ್ವಸ್ಮಿನ್ ಪೃಥಿವೀತಲೇ ॥೧೧॥

ಪುರಾ ಮಧ್ಯಾರ್ಜುನಕ್ಷೇತ್ರೇ ಕಶ್ಚಿದಾಸೀಚ್ಛಿವಾರ್ಚಕಃ ।
ತಮಾಹ ಬ್ರಾಹ್ಮಣಃ ಕಶ್ಚಿದೂರ್ಧ್ವಪುಂಡ್ರಧರೋ ಭ್ರಮಾತ್ ॥೧೨॥

॥ ದ್ವಿಜ ಉವಾಚ ॥

ಊರ್ಧ್ವಪುಂಡ್ರಧರಂ ಪಶ್ಯ ಮಾಮನಾಕುಲಚೇತಸಂ ।
ಸ ಸಂತೋಷಂ ಯಥಾಕಾಲಂ ವಾರ್ತಾಂ ಕುರು ಮಯಾ ಸಹ॥೧೩॥

ಇತಿ ತದ್ವಚನಂ ಶ್ರುತ್ವಾ ಭ್ರಮಾದ್ದೃಷ್ಟ್ವಾ ಚ ತಂ ದ್ವಿಜಂ ।
ತತೋ ಜಜಾಪ ಶ್ರೀರುದ್ರಂ ಭಾನುಂ ಪಶ್ಯನ್ ಜಲೇ ಸ್ಥಿತಃ ॥೧೪॥

ಕುರಿತು ತಪಸ್ಸನ್ನಾಚರಿಸಿದರು. ಆಗ ಅಲ್ಲಿ ಧರ್ಮಮೂರ್ತಿಯೆಂಬ ರಾಜನು ಸದ್ಧರ್ಮದಿಂದ ರಾಜ್ಯಪರಿಪಾಲನೆ ಮಾಡುತ್ತಿದ್ದನು. ॥೯-೧೦॥

ಅವನ ರಾಜ್ಯದಲ್ಲಿ ಧರ್ಮವು ನಾಲ್ಕು ಪಾದಗಳಿಂದಲೂ ಅಂದರೆ ಸಂಪೂರ್ಣವಾಗಿ ಧರ್ಮವು ನೆಲೆಗೊಂಡಿತ್ತು. ಅಧರ್ಮದ ಹೆಸರೇ ಅಲ್ಲಿರಲಿಲ್ಲ. ಹೀಗಿರಲು ಒಂದುದಿನ ಒಬ್ಬ ಶಿವಾರ್ಚಕನಾದ ಬ್ರಾಹ್ಮಣನಿದ್ದನು. ಅವನನ್ನು ಮತ್ತೊಬ್ಬ ಊರ್ಧ್ವಪುಂಡ್ರಧರನಾದ (ಉದ್ದನಾಮಗಳನ್ನು ಹಣೆಯಲ್ಲಿಡುವವನು) ಬ್ರಾಹ್ಮಣನು ನೋಡಿ, ॥೧೧-೧೨॥

"ಅಯ್ಯಾ ಶೈವನೇ, ಊರ್ಧ್ವಪುಂಡ್ರಧಾರಿಯಾದ ನನ್ನನ್ನು ನೋಡು. ಅತ್ಯಂತ ಸಂತೋಷದಿಂದಿರುವ ನನ್ನೊಡನೆ ನೀನು ಸಲ್ಲಾಪಾದಿಗಳನ್ನು ನಡೆಸುತ್ತಾ ಸುಖದಿಂದಿರು" ಎಂದು ಕೇಳಿಕೊಂಡನು ಒಡನೆಯೇ ಶೈವಬ್ರಾಹ್ಮಣನು ಅವನನ್ನು ನೋಡಿ ಶಿವನಾಮಗಳನ್ನೂ, ಶ್ರೀರುದ್ರಾಧ್ಯಾಯವನ್ನೂ ಜಪಿಸುತ್ತಾ ನೀರಿನಲ್ಲಿ ನಿಂತು ಸೂರ್ಯದರ್ಶನಮಾಡಿದನು. ॥೧೩-೧೪॥

ಶೈವ ಉವಾಚ

ತತೋ ದದರ್ಶ ಧರ್ಮಿಷ್ಠಂ ಧರ್ಮಮೂರ್ತಿಂ ಸಶಾಂಕರಃ
ದೃಷ್ಟ್ವಾ ತಸ್ಮೈ ಸಮಾಚಖ್ಯೌ ವೃತ್ತಾಂತಮತಿದುಃಖಿತಃ ॥೧೫॥

ತ್ವಯಿ ಶಾಸತಿ ಭೂಲೋಕೇ ಧರ್ಮಮಾರ್ಗಪ್ರವರ್ತಕೇ ।
ಅದ್ಯೈವಾಭೂನ್ನೃಪಶ್ರೇಷ್ಠ ಕ್ಷೇತ್ರೇಸ್ಮಿನ್ ಧರ್ಮವಿಪ್ಲವಃ ॥೧೬॥

ಊರ್ಧ್ವಪುಂಡ್ರಧರೋ ವಿಪ್ರಃ ಕಶ್ಚಿದ್ದೃಷ್ಟೋಽಧುನಾ ಮಯಾ ।
ತಂ ದುಷ್ಟಮತಿವೇಗೇನ ಛಿಂದಿಛಿಂದಿ ಶರೋತ್ಕರೈಃ ॥೧೭॥

ತಸ್ಯ ದರ್ಶನಮಾತ್ರೇಣ ದ್ರಷ್ಟವ್ಯೋ ಭಾನುರಾದರಾತ್ ।
ತತೋ ರುದ್ರಜಪಃ ಕಾರ್ಯೋ ಜಲೇ ಸ್ಥಿತ್ವಾ ಪ್ರಯತ್ನತಃ ॥೧೮॥

ಊರ್ಧ್ವಪುಂಡ್ರಂ ಕರಿಷ್ಯಂತಿ ತಂ ದೃಷ್ಟ್ವಾನ್ಯೋಽಪಿ ಮೋಹತಃ ।
ತದ್ವತ್ಕೃತೋರ್ಧ್ವಪುಂಡ್ರಾಣಿ ಯಾಸ್ಯಂತಿ ನರಕಂ ದ್ವಿಜಾಃ ॥೧೯॥

ತ್ರಿಪುಂಡ್ರಕರಣಾಭಾವಂ ಪಾತಕಂ ಪ್ರಾಹುರಾಸ್ತಿಕಾಃ ।
ಊರ್ಧ್ವಪುಂಡ್ರಸ್ಯ ಕರಣಂ ಪಾಪಮಾಹುರ್ಮನೀಷಿಣಃ ॥೨೦॥

---

ಒಡನೆಯೇ ಆತನು ಧರ್ಮಮೂರ್ತಿರಾಜನ ಸಮೀಪಕ್ಕೆ ಹೋಗಿ ಹೀಗೆಂದನು "ಎಲೈ ಧರ್ಮಿಷ್ಠನಾದ ರಾಜನೇ, ನೀನು ಧರ್ಮದಿಂದ ರಾಜ್ಯಭಾರ ಮಾಡುತ್ತಿರುವಾಗ, ಈಗ ಈ ಕ್ಷೇತ್ರದಲ್ಲಿ ಧರ್ಮಚ್ಯುತಿಯೊದಗಿದೆ. ॥೧೫-೧೬॥

ಇಲ್ಲಿ ಒಬ್ಬ ಊರ್ಧ್ವಪುಂಡ್ರಧಾರಿಯಾದ (ನಾಮವಿಡುವ) ಬ್ರಾಹ್ಮಣನೊಬ್ಬನು ಸೇರಿರುವನು. ಅವನನ್ನು ಈಗಲೇ ಬಾಣದಿಂದ ಚೂರುಚೂರಾಗಿ ಕತ್ತರಿಸು. ಅವನನ್ನು ನೋಡಿದೊಡನೆಯೇ ಸೂರ್ಯದರ್ಶನಮಾಡಿ, ನೀರಿನಲ್ಲಿ ನಿಂತು ರುದ್ರಮಂತ್ರ ಜಪಮಾಡಬೇಕು. ॥೧೭-೧೮॥

ಮೇಲುನಾಮಧಾರಿಯೊಬ್ಬನನ್ನು ನೋಡಿದರೆ ಉಳಿದವರೂ ಹಾಗೆಯೇ ಮಾಡಿ ನರಕಕ್ಕೆ ಹೋಗುವರು. ತಿರ್ಯಕ್ ತ್ರಿಪುಂಡ್ರವನ್ನು ಧರಿಸದಿರುವುದೂ, (ಅಡ್ಡಲಾಗಿ ವಿಭೂತಿಯನ್ನು ಮೂರುಸಾಲಾಗಿ ಹಚ್ಚುವುದು) ಊರ್ಧ್ವತ್ರಿಪುಂಡ್ರವನ್ನು ಹಚ್ಚಿಕೊಳ್ಳುವುದೂ, ಪಾಪಕರ್ಮವೆಂದು ವಿದ್ವಾಂಸರು ತೀರ್ಮಾನಿಸಿರುವರು ॥೧೯-೨೦॥

ಗೋಮಾಂಸಭಕ್ಷಣಂ ಪ್ರಾಹುಃ ಪಾತಕಂ ಮುನಿಪುಂಗವಾಃ ।
ಊರ್ಧ್ವಪುಂಡ್ರಸ್ಯ ಕರಣಂ ತಥಾ ಪಾಪಂ ನೃಪೋತ್ತಮಂ ॥೨೦॥

ವರಂ ಗುರುಸತೀಯೋಗೋ ಜನನೀ ಯೋಗ ಏವಚ ।
ಊರ್ಧ್ವಪುಂಡ್ರಸ್ಯ ಕರಣಂ ನ ವರಂ ಸತ್ಯಮುಚ್ಯತೇ ॥೨೧॥

॥ ಶಿವ ಉವಾಚ ॥

ಇತಿ ತದ್ವಚನಂ ಶ್ರುತ್ವಾ ಧರ್ಮಮೂರ್ತಿರ್ವಿಚಕ್ಷಣಃ ।
ಊರ್ಧ್ವಪುಂಡ್ರಧರಂ ವಿಪ್ರಂ ತದಾ ಹಂತುಮುಪಕ್ರಮೇ ॥೨೩॥

ಊರ್ಧ್ವಪುಂಡ್ರಧರಂ ವಿಪ್ರಂ ತಂ ಬಧ್ವಾ ಶಕಟೇ ತತಃ ।
ರಾಜಾ ವಿದಾರಯಾಮಾಸ ಕ್ರಕಚೈರತಿದಾರುಣೈಃ ॥೨೪॥

ತಚ್ಛಿಶ್ನಂ ತನ್ಮುಖೇ ಕ್ಷಿಪ್ತ್ವಾ ಸಿಕ್ತ್ವಾ ಚ ಸುರಯಾ ಮುಖಂ ।
ಚಂಡಾಲಾಮೇಧ್ಯಕೂಪೇ ತಂ ಪಾತಯಾಮಾಸ ಸತ್ವರಂ ॥೨೫॥

ತತಸ್ಸಕಾರಯಾಮಾಸ ಡಿಂಡೀರವಮಿಳಾಪತಿಃ ।
ಊರ್ಧ್ವಪುಂಡ್ರಂ ಭ್ರಮೇಣಾಪಿ ಮಾ ಕುರ್ವಂತ್ವಿತಿ ಸತ್ವರಂ ॥೨೬॥

ಮಾರ್ಚಯಂತು ಮಹೇಶಾನ್ಯಂ ಭ್ರಮೇಣಾಪೀತಿ ಸತ್ವರಂ ।
ಶಿವಯಾತ್ರಾನ್ಯಯಾತ್ರಾಂ ಚ ಮಾ ಕುರ್ವಂತ್ವಿತಿ ಸಾದರಂ ॥೨೭॥

ಗೋಮಾಂಸಭಕ್ಷಣ, ಗುರುಪತ್ನೀಗಮನ, ಮಾತೃಸಂಭೋಗ ಮೊದಲಾದ ಪಾಪಕರ್ಮಗಳಿಗಿಂತಲೂ ಅತಿಯಾದ ಪಾಪಕರ್ಮವೆಂದರೆ ಈ ಊರ್ಧ್ವತ್ರಿಪುಂಡ್ರ ಧಾರಣೆ. ಇದು ನಿಜ.'' ॥೨೧-೨೨॥

ಎಂದು ಹೇಳಿದ ಆ ವಿಪ್ರನ ಮಾತುಗಳನ್ನು ಕೇಳಿ ಧರ್ಮಮೂರ್ತಿರಾಜನು ಒಡನೆಯೇ ಆ ಊರ್ಧ್ವತ್ರಿಪುಂಡ್ರಧಾರಿಯನ್ನು ಕರೆಸಿ, ಗಾಡಿಗೆ ಕಟ್ಟಿಸಿ ಗರಗಸದಿಂದ ಕೊಯ್ಯಿಸಿ ಬಾಯಿಗೆ ಅವನ ಶಿಶ್ನವನ್ನೂ, ಮದ್ಯವನ್ನೂ ಹಾಕಿಸಿ ಚಂಡಾಲರ ಅಮೇಧ್ಯದ ಬಾವಿಯಲ್ಲಿ ಬೀಳಿಸಿದನು. ॥೨೩-೨೪॥

ಅನಂತರ ರಾಜನು ತನ್ನ ಪ್ರಜೆಗಳಿಗೆಲ್ಲಾ ಹೀಗೆ ಡಂಗೂರ ಹೊಯ್ಸಿ ಕಟ್ಟಪ್ಪಣೆ ವಿಧಿಸಿದನು:--ಇನ್ನುಮೇಲೆ ಯಾರೂ ಊರ್ಧ್ವಪುಂಡ್ರವನ್ನು ಧರಿಸ

ಪುನಸ್ಸಂಕಾರಯಾಮಾಸ ಡಿಂಡೀರವಮಿಳಾಪತಿಃ ।
ಉದ್ಧೂಲನಂ ವಿನಾ ವಿಪ್ರಾ ಮಾತಿಷ್ಠಂತ್ವಿತಿ ಸತ್ವರಂ ॥೨೮॥

ಪುನಸ್ಸಂಕಾರಯಾಮಾಸ ಡಿಂಡೀರವಮಿಳಾಪತಿಃ ।
ತ್ರಿಪುಂಡ್ರಧಾರಣಂ ತ್ಯಕ್ತ್ವಾ ಮಾ ತಿಷ್ಠಂತ್ವಿತಿ ಸತ್ವರಂ ॥೨೯॥

ಪುನಸ್ಸಂಕಾರಯಾಮಾಸ ಡಿಂಡೀರವಮಿಳಾಪತಿಃ ।
ರುದ್ರಾಕ್ಷಧಾರಣಂ ತ್ಯಕ್ತ್ವಾ ಮಾ ತಿಷ್ಠಂತ್ವಿತಿ ಸತ್ವರಂ ॥೩೦॥

ಪುನಸ್ಸಂಕಾರಯಾಮಾಸ ಡಿಂಡೀರವಮಿಳಾಪತಿಃ ।
ರುದ್ರಾಧ್ಯಾಯಜಪಂ ತ್ಯಕ್ತ್ವಾ ಮಾತಿಷ್ಠಂತ್ವಿತಿ ಸತ್ವರಂ ॥೩೧॥

ಪುನಸ್ಸಂಕಾರಯಾಮಾಸ ಡಿಂಡೀರವಮಿಳಾಪತಿಃ ।
ಪಂಚಾಕ್ಷರಜಪಂ ತ್ಯಕ್ತ್ವಾ ಮಾತಿಷ್ಠಂತ್ವಿತಿಸತ್ವರಂ ॥೩೨॥

ಪುನಸ್ಸಂಕಾರಯಾಮಾಸ ಡಿಂಡೀರವಮಿಳಾಪತಿಃ ।
ಮಹಾದೇವಕಥಾಂ ತ್ಯಕ್ತ್ವಾ ಮಾತಿಷ್ಠಂತ್ವಿತಿ ಸತ್ವರಂ ॥೩೩॥

ಪುನಸ್ಸಂಕಾರಯಾಮಾಸ ಡಿಂಡೀರವಮಿಳಾಪತಿಃ ।
ಮಹಾದೇವಾರ್ಚನಂ ತ್ಯಕ್ತ್ವಾ ಮಾತಿಷ್ಠಂತ್ವಿತಿ ಸತ್ವರಂ ॥೩೪॥

ಪುನಸ್ಸಂಕಾರಯಾಮಾಸ ಡಿಂಡೀರವಮಿಳಾಪತಿಃ ।
ಶಿವಸ್ಯೈವಾರ್ಚನಂ ನಿತ್ಯಂ ಕುರ್ವಂತ್ವಿತಿ ವಿಶೇಷತಃ ॥೩೫॥

ಪುನಸ್ಸಂಕಾರಯಾಮಾಸ ಡಿಂಡೀರವಮಿಳಾಪತಿಃ ।
ಶಿವರಾತ್ರಿವ್ರತಂ ನಿತ್ಯಂ ಕುರ್ವಂತ್ವಿತಿ ವಿಶೇಷತಃ ॥೩೬॥

ಬಾರದು. ಮರೆತೂ ಶಿವಭಿನ್ನರಾದ ದೇವತೆಗಳ ಅರ್ಚನೆಯನ್ನು ಮಾಡಕೂಡದು. ಇತರ ದೇವತಾಯಾತ್ರೆ ಮತ್ತು ತೀರ್ಥಗಳಿಗೆ ಹೋಗಕೂಡದು. ॥೨೬-೨೭॥

ನಿತ್ಯವೂ ಭಸ್ಮೋದ್ಧೂಲನ ಮತ್ತು ಭಸ್ಮತ್ರಿಪುಂಡ್ರ ಇವುಗಳನ್ನು ಧರಿಸಬೇಕು. ರುದ್ರಾಕ್ಷಧಾರಣೆಯನ್ನು ಬಿಡಕೂಡದು. ರುದ್ರಾಧ್ಯಾಯಜಪ, ಪಂಚಾಕ್ಷರೀ ಜಪ, ಮಹಾದೇವಕಥಾಶ್ರವಣ, ಮಹಾದೇವಾರ್ಚನೆ, ನಿತ್ಯಶಿವಾರ್ಚನೆ, ಶಿವರಾತ್ರಿ

ಪುನಸ್ಸಕಾರಯಾಮಾಸ ಡಿಂಡೀರವಮಿಳಾಪತಿಃ ।
ಸೋಮವಾರವ್ರತಂ ನಿತ್ಯಂ ಕುರ್ವಂತ್ವಿತಿ ವಿಶೇಷತಃ ॥೩೭॥

ಪುನಸ್ಸಕಾರಯಾಮಾಸ ಡಿಂಡೀರವಮಿಳಾಪತಿಃ ।
ಕಾಲಾಷ್ಟಮೀವ್ರತಂ ನಿತ್ಯಂ ಕುರ್ವಂತ್ವಿತಿ ವಿಶೇಷತಃ ॥೩೮॥

॥ ಸದಾಶಿವ ಉವಾಚ ॥

ಇತಿ ಡಿಂಡೀರವಂ ಶ್ರುತ್ವಾ ದಧೀಚ್ಯಾದ್ಯಾ ಮುನೀಶ್ವರಾಃ ।
ಸಂತುಷ್ಟಚಿತ್ತಾಃ ಸಂಪ್ರಾಪುರ್ಧರ್ಮಮೂರ್ತಿಂ ವಿಚಕ್ಷಣಂ ॥೩೯॥

ದದೃಶುರ್ಧರ್ಮಮೂರ್ತಿಂ ತೇ ಭಸ್ಮೋದ್ಧೂಲಿತವಿಗ್ರಹಂ ।
ರುದ್ರಾಕ್ಷಮಾಲಾಭರಣಂ ತ್ರಿಪುಂಡ್ರಾಂಕಿತಮಸ್ತಕಂ ॥೪೦॥

ಸ ಧರ್ಮಮೂರ್ತಿರ್ಧರ್ಮಾತ್ಮಾ ದೃಷ್ಟ್ವಾ ತಾನ್ಮುನಿಪುಂಗವಾನ್ ।
ಅಭ್ಯುತ್ಥಾಯಾತಿಯತ್ನೇನ ಭೂಯೋ ಭೂಯೋ ನನಾಮ ತಾನ್ ॥೪೧॥

ಪ್ರಣಮ್ಯ ಪ್ರೀತಿಹೃದಯೋ ರತ್ನಸಿಂಹಾಸನೇಷು ತಾನ್ ।
ಉಪವಿಶ್ಯ ಯಥಾಶಾಸ್ತ್ರಂ ಪೂಜಯಾಮಾಸ ಸಾದರಂ ॥೪೨॥

ವ್ರತ, ಸೋಮವಾರವ್ರತ, ಕಾಲಾಷ್ಟಮೀವ್ರತ ಮುಂತಾದ ಸತ್ಕರ್ಮಗಳನ್ನು ತಪ್ಪದೆ ನಡೆಸುತ್ತಿರಬೇಕು. ಇದಕ್ಕೆ ಸ್ವಲ್ಪವೂ ಮೀರಿ ನಡೆಯಕೂಡದು. ||೨೮-೨೯-೩೦-೩೧-೩೨-೩೩-೩೪-೩೫-೩೬-೩೭-೩೮||

ಹೀಗೆಂದು ಡಂಗುರ ಹೊಯ್ಸಿದ್ದನ್ನು ದಧೀಚಿಯೇ ಮೊದಲಾದ ಋಷಿಗಳೆಲ್ಲರೂ ಕೇಳಿ ಸಂತೋಷಪಟ್ಟು, ಧರ್ಮಮೂರ್ತಿರಾಜನ ಸಮೀಪಕ್ಕೆ ಹೋದರು. ಆತನು ಭಸ್ಮೋದ್ಧೂಲಿತಗಾತ್ರನಾಗಿ ಹಣೆಯಲ್ಲಿ ಭಸ್ಮತ್ರಿಪುಂಡ್ರವನ್ನೂ, ಕೊರಳಲ್ಲಿ ರುದ್ರಾಕ್ಷಮಾಲೆಯನ್ನೂ ಧರಿಸಿಕೊಂಡಿದ್ದನು. ಅವನ ವೇಷಭೂಷಣಗಳನ್ನು ನೋಡಿ ಆ ಋಷಿಗಳು ಅತ್ಯಾನಂದಪಟ್ಟರು. ||೩೯-೪೦||

ಆ ಧರ್ಮಮೂರ್ತಿಯು ಹಾಗೆ ತನ್ನಲ್ಲಿಗೆ ಬಂದ ಮುನಿಪುಂಗವರನ್ನು ನೋಡಿ ಒಡನೆಯೇ ಎದ್ದುನಿಂತು ಅವರನ್ನು ಸ್ವಾಗತಿಸಿ, ನಮಸ್ಕರಿಸಿ ರತ್ನಸಿಂಹಾಸನಗಳಲ್ಲಿ ಅವರನ್ನು ಕುಳ್ಳಿರಿಸಿ, ವಿಧಿವತ್ತಾಗಿ ಪೂಜೆಮಾಡಿದನು. ||೪೧-೪೨||

ಯಥಾವತ್ಪೂಜಿತಾಸ್ತೇನ ಮುನಯೋ ಬ್ರಹ್ಮವಾದಿನಃ ।
ಚಿರಂ ಜೀವೇತಿ ತಂ ಪ್ರಾಹುರ್ಧರ್ಮಮೂರ್ತಿಂ ಕೃತಾರ್ಚನಂ ॥೪೩॥

ತತಃ ಕೃತಾಂಜಲಿಪುಟಂ ವಿನಯಾನತಕಂಧರಂ ।
ಧರ್ಮಮೂರ್ತಿಂ ಧರ್ಮನಿಷ್ಠಂ ದಧೀಚಿಃ ಪ್ರಾಹ ಸಾದರಂ ॥೪೪॥

॥ ದಧೀಚಿರುವಾಚ ॥

ಧರ್ಮಮೂರ್ತೇ ಧರ್ಮನಿಷ್ಠ ಧರ್ಮಮೂರ್ತಿಸ್ತ್ವಮೇವ ಹಿ ।
ಯತೋಭೂಚ್ಛೈವ ಧರ್ಮೇಷು ವಿಶ್ವಾಸೋ ವೈದಿಕೇಷು ತೇ ॥೪೫॥

ಕೃತಕೃತ್ಯೋಽಸಿ ಧನ್ಯೋಽಸಿ ಮಾನ್ಯೋಽಸ್ಮ್ಯಸ್ಮಾಕಮನ್ವಹಂ ।
ಯತೋಭೂದ್ಭವತೋ ಭಕ್ತಿಃ ಶೈವಧರ್ಮೇಷು ಸಂತತಂ ॥೪೬॥

ಭಕ್ತಿಶ್ಶಾಂಭವಧರ್ಮೇಷು ಭೂರಿಭಾಗ್ಯಫಲಂ ಯತಃ ।
ತತ ಏವಾತಿಧನ್ಯೋಽಪಿ ತೇಷು ಭಕ್ತಿರ್ಯತೋಽಸ್ತಿ ತೇ ॥೪೭॥

ಶೈವಧರ್ಮಪರಿಭ್ರಷ್ಟಾನ್ ಶಿಕ್ಷಯೈವಂ ನೃಪೋತ್ತಮ ।
ತವಾಯಂ ಪರಮೋ ಧರ್ಮಃ ಸರ್ವಸಂಪತ್ಕರೋ ಧ್ರುವಂ ॥೪೮॥

---

ಬ್ರಹ್ಮಜ್ಞಾನಿಗಳಾದ ಆ ಋಷಿಗಳು ಅವನಿಂದ ಸತ್ಕೃತರಾಗಿ ‘ ಬಹುಕಾಲ ಆಯುಷ್ಮಂತನಾಗಿರು ’ ಎಂದು ಆಶೀರ್ವದಿಸಿದರು. ಅನಂತರ, ಕೈಜೋಡಿಸಿ ತಲೆ ಬಗ್ಗಿಸಿ ವಿನಯದಿಂದ ನಿಂತಿದ್ದ ಧರ್ಮಮೂರ್ತಿಸ್ವರೂಪನೂ, ಧರ್ಮನಿಷ್ಠನೂ ಆದ ಧರ್ಮಮೂರ್ತಿರಾಜನನ್ನು ನೋಡಿ ದಧೀಚಿಮಹರ್ಷಿಯು ಪ್ರೀತಿಯಿಂದ ಹೀಗೆಂದನು. ॥೪೩-೪೪॥

“ ಧರ್ಮಕಾರ್ಯತತ್ಪರನೂ, ಧರ್ಮಾತ್ಮನೂ ಆದ ಧರ್ಮಮೂರ್ತಿಯೇ, ನೀನೇ ಧನ್ಯನು. ಏಕೆಂದರೆ ನೀನು ಸಕಲ ಶಿವಧರ್ಮಗಳನ್ನೂ, ವೇದದ ತತ್ತ್ವಾಂಶವನ್ನೂ ಅರಿತವನಾಗಿರುವೆ. ಆದ್ದರಿಂದಲೇ ನೀನು ನಮಗೆಲ್ಲಾ ಮಾನ್ಯನೆನಿಸಿರುವೆ. ಶೈವಧರ್ಮಾಸಕ್ತನಾಗಿರುವ ನಿನ್ನ ಜೀವನವು ಇಂದು ಸಾರ್ಥಕವೆನಿಸಿಕೊಂಡಿದೆ. ॥೪೫-೪೬॥

ಶಾಂಭವರಲ್ಲಿ ಅತ್ಯಂತ ಭಕ್ತಿಬರಬೇಕಾದರೆ ಅವರು ಸುಕೃತಿಗಳಾಗಿರಬೇಕು. ನಿನ್ನಲ್ಲಿ ಇಷ್ಟು ದೃಢಭಕ್ತಿ ತೋರುವುದರಿಂದ ನೀನು ಕೃತಾರ್ಥನಾಗಿರುವೆ.

ದುಷ್ಟಾನಾಂ ಶಿಕ್ಷಣಂ ಧರ್ಮಃ ಶಿಷ್ಟಾನಾಂ ರಕ್ಷಣಂ ತಥಾ ।
ತವಾನೇನೈವ ಧರ್ಮೇಣ ಪುಣ್ಯವೃದ್ಧಿರ್ಭವಿಷ್ಯತಿ ॥೪೯॥

ಶೈವಧರ್ಮಪರಿಭ್ರಷ್ಟಾ ಏತೇ ದುಷ್ಟಾಸ್ತಥಾಚ ತೇ ।
ಹಂತವ್ಯಾ ಏವ ಯತ್ನೇನ ಶಿವಶಸ್ತ್ರೈರ್ನ ಸಂಶಯಃ ॥೫೦॥

॥ ಶಿವ ಉವಾಚ ॥

ತ ಏವ ಶಿಷ್ಟಾ ಯೇ ನಿತ್ಯಂ ಶೈವಧರ್ಮಪರಾಯಣಾಃ ।
ತೇ ರಕ್ಷಣೀಯಾ ಯತ್ನೇನ ಸ್ವಶಕ್ತ್ಯಾ ಸತತಂ ನೃಪೈಃ ॥೫೧॥

ಇತಿ ತದ್ವಚನಂ ಶ್ರುತ್ವಾ ಧರ್ಮಮೂರ್ತಿಃ ಕೃತಾಂಜಲಿಃ ।
ಪಪ್ರಚ್ಛ ಧರ್ಮಾನ್ ಧರ್ಮಜ್ಞಂ ದಧೀಚಿಂ ಮುನಿಸತ್ತಮಂ ॥೫೨॥

॥ ಧರ್ಮಮೂರ್ತಿರುವಾಚ ॥

ಧರ್ಮಃ ಕೋ ವಾ ಶ್ರುತಿಪ್ರೋಕ್ತೋ ಯದ್ಧರ್ಮಾಚರಣಾನ್ಮನೇ ।
ಪ್ರಸೀದತಿ ಮಹಾದೇವೋ ದೇವದೇವಶಿಖಾಮಣಿಃ

ಶಿವಧರ್ಮಪರಿತ್ಯಾಗಿಗಳನ್ನು ಇದೇ ರೀತಿ ಶಿಕ್ಷಿಸುತ್ತಿರು. ಇದು ನಿನಗೆ ಪರಮಧರ್ಮವೆನಿಸುವುದು ಮತ್ತು ಸಂಪತ್ತನ್ನೂ ಅಭಿವೃದ್ಧಿಗೊಳಿಸುವುದು. ॥೪೭-೪೮॥

ದುಷ್ಟಶಿಕ್ಷಣ, ಶಿಷ್ಟರಕ್ಷಣ ಇವುಗಳಿಂದ ರಾಜನಿಗೆ ಧರ್ಮವು ವೃದ್ಧಿ ಹೊಂದುವುದು. ಯಾರು ಶೈವಧರ್ಮಪರಿತ್ಯಾಗಮಾಡಿರುವರೋ, ಅವರು ನಿಜವಾಗಿಯೂ ದುಷ್ಟರು. ಅಂತಹವರನ್ನು ಕ್ರೂರವಾದ ಬಾಣಗಳಿಂದ ಹೊಡೆದು ಕೊಲ್ಲಬೇಕು. ॥೪೯-೫೦॥

ಯಾರು ಶೈವಧರ್ಮಪರಾಯಣರಾಗಿರುವರೋ, ಲೋಕದಲ್ಲಿ ಅವರೇ ಶಿಷ್ಟರು. ರಾಜರಾದವರು ಪ್ರಯತ್ನಪೂರ್ವಕವಾಗಿ ಅವರನ್ನು ರಕ್ಷಿಸಬೇಕು" ಎಂದು ಹೇಳಿದ ಆ ಋಷಿಜನರ ಮಾತನ್ನು ಕೇಳಿ ಧರ್ಮಮೂರ್ತಿರಾಜನು ದಧೀಚಿ ಮಹರ್ಷಿಯನ್ನು ಕುರಿತು, ತನಗೆ ಸದ್ಧರ್ಮವನ್ನು ಉಪದೇಶಿಸಬೇಕೆಂದು ಹೀಗೆ ಕೇಳಿಕೊಂಡನು. ॥೫೧-೫೨॥

ಎಲೌ ಗೌರಿಯೇ, ಧರ್ಮಮೂರ್ತಿರಾಜನು, ಯಾವ ಧರ್ಮಾಚರಣೆಯಿಂದ ದೇವದೇವನಾದ ಪರಶಿವನು ತೃಪ್ತಿಹೊಂದುವನೋ, ಅಂತಹ ವೈದಿಕವಾದ

॥ ಶಿವ ಉವಾಚ ॥

ಇತಿ ತದ್ವಚನಂ ಶ್ರುತ್ವಾ ದಧೀಚಿರ್ಹೃಷ್ಟಮಾನಸಃ ।
ಧರ್ಮಾನ್ವಕ್ತುಂ ಸಮಾರೇಭೇ ಭುಕ್ತಿಮುಕ್ತಿಪ್ರದಾನ್ ಶಿವೇ ॥೫೪॥

॥ ದಧೀಚಿರುವಾಚ ॥

ಭುಕ್ತಿಮುಕ್ತಿಪ್ರದಾ ಧರ್ಮಾಃ ಶೈವಧರ್ಮಾಃ ಶ್ರುತಿಶ್ರುತಾಃ ।
ತದ್ಧರ್ಮಾಚಾರನಿರತಾಃ ಪೂಜನೀಯಾ ಮನೀಷಿಭಿಃ ॥೫೫॥

ಭಸ್ಮಸ್ನಾನಾದಯೋ ಧರ್ಮಾಃ ಮೋಕ್ಷಧರ್ಮಾಃ ಶ್ರುತಿಶ್ರುತಾಃ ।
ತದ್ಧರ್ಮಾಚರಣಂ ಕಾರ್ಯಂ ದ್ವಿಜೈಃ ಸರ್ವೈಃ ಪ್ರಯತ್ನತಃ ॥೫೬॥

ಭಸ್ಮಸ್ನಾನಾದಿಕಂ ತ್ಯಕ್ತ್ವಾ ಯೇ ತಿಷ್ಠಂತಿ ದ್ವಿಜಾತಯಃ ।
ತೇ ಯಾಂತಿ ನರಕಂ ಘೋರಂ ಸಮಿತ್ರಾಃ ಪಿತೃಭಿಸ್ಸಹ ॥೫೭॥

ತ್ರಿಪುಂಡ್ರಧಾರಣಂ ಶ್ರೌತಂ ತ್ಯಕ್ತ್ವಾ ಯೇ ಭುಂಜತೇ ದ್ವಿಜಾಃ
ತೇ ಯಾಂತಿ ನರಕಂ ಘೋರಂ ಸಮಿತ್ರಾಃ ಪಿತೃಭಿಸ್ಸಹ ॥೫೮॥

ವಿಭೂತ್ಯುದ್ಧೂಲನಂ ಶ್ರೌತಂ ತ್ಯಕ್ತ್ವಾ ಯೇ ಭುಂಜತೇ ದ್ವಿಜಾಃ ।
ತೇ ಯಾಂತಿ ನರಕಂ ಘೋರಂ ಸಮಿತ್ರಾಃ ಪಿತೃಭಿಸ್ಸಹ ॥೫೯॥

ಸದ್ಧರ್ಮವನ್ನು ಅರುಹಬೇಕೆಂದು ಕೇಳಿಕೊಳ್ಳಲು, ಆಗ ದಧೀಚಿಮಹರ್ಷಿಯು ಸಂತೋಷದಿಂದ ಕೂಡಿದವನಾಗಿ, ಭುಕ್ತಿ, ಮುಕ್ತಿ ಇವುಗಳನ್ನು ಒದಗಿಸುವ ಧರ್ಮಸ್ವರೂಪವನ್ನು ವಿವರಿಸತೊಡಗಿದನು ॥೫೩-೫೪॥

"ಐಹಿಕ ಮತ್ತು ಆಮುಷ್ಮಿಕ ಸುಖಗಳೆರಡನ್ನೂ ಕೊಡುವ ಧರ್ಮವೆಂದರೆ ಶೈವಧರ್ಮವೇ. ಆ ಧರ್ಮಾನುಯಾಯಿಗಳೇ ಪರಮಪೂಜ್ಯರು. ಭಸ್ಮಸ್ನಾನವೇ ಮೊದಲಾದ ಆ ಧರ್ಮಗಳು ಶ್ರುತ್ಯುಕ್ತಗಳಾಗಿವೆ. ಆದ್ದರಿಂದ ಅವುಗಳನ್ನು ದ್ವಿಜರಾದವರು ಬಹು ಪ್ರಯತ್ನದಿಂದ ಪಾಲಿಸಿಕೊಂಡು ಬರಬೇಕು. ॥೫೫-೫೬॥

ಎಲೈ ರಾಜನೇ, 'ಅಗ್ನಿರಿತಿ ಭಸ್ಮ' ಎಂಬ ಮಂತ್ರಗಳಿಂದ ಮಾಡಬೇಕಾದ ಭಸ್ಮಸ್ನಾನ, ಭಸ್ಮತ್ರಿಪುಂಡ್ರಧಾರಣೆ, ಭಸ್ಮಲೇಪನ, ರುದ್ರಾಕ್ಷಧಾರಣೆ, ಶಿವಲಿಂಗಾರ್ಚನೆ, ಶ್ರೀ ರುದ್ರಮಂತ್ರಜಪ, ಪಂಚಾಕ್ಷರೀಮಂತ್ರಜಪ, ಮಹೇಶ್ವರನ ಸೇವೆ,

ರುದ್ರಾಕ್ಷಧಾರಣಂ ಶ್ರೌತಂ ತ್ಯಕ್ತ್ವಾ ಯೇ ಭುಂಜತೇ ದ್ವಿಜಾಃ ।
ತೇ ಯಾಂತಿ ನರಕಂ ಘೋರಂ ಸಮಿತ್ರಾಃ ಪಿತೃಭಿಸ್ಸಹ ॥೬೦॥

ಶಿವಲಿಂಗಾರ್ಚನಂ ಶ್ರೌತಂ ತ್ಯಕ್ತ್ವಾ ಯೇ ಭುಂಜತೇ ದ್ವಿಜಾಃ ।
ತೇ ಯಾಂತಿ ನರಕಂ ಘೋರಂ ಸಮಿತ್ರಾಃ ಪಿತೃಭಿಸ್ಸಹ ॥೬೧॥

ರುದ್ರಾಧ್ಯಾಯಜಪಂ ಶ್ರೌತಂ ತ್ಯಕ್ತ್ವಾ ಯೇ ಭುಂಜತೇ ದ್ವಿಜಾಃ ।
ತೇ ಯಾಂತಿ ನರಕಂ ಘೋರಂ ಸಮಿತ್ರಾಃ ಪಿತೃಭಿಸ್ಸಹ ॥೬೨॥

ಪಂಚಾಕ್ಷರಜಪಂ ಶ್ರೌತಂ ತ್ಯಕ್ತ್ವಾ ಯೇ ಭುಂಜತೇ ದ್ವಿಜಾಃ ।
ತೇ ಯಾಂತಿ ನರಕಂ ಘೋರಂ ಸಮಿತ್ರಾಃ ಪಿತೃಭಿಸ್ಸಹ ॥೬೩॥

ಮಹೇಶಭಜನಂ ಶ್ರೌತಂ ತ್ಯಕ್ತ್ವಾ ಯೇ ಭುಂಜತೇ ದ್ವಿಜಾಃ ।
ತೇ ಯಾಂತಿ ನರಕಂ ಘೋರಂ ಸಮಿತ್ರಾಃ ಪಿತೃಭಿಸ್ಸಹ ॥೬೪॥

ಮಹೇಶಚಿಂತನಂ ಶ್ರೌತಂ ತ್ಯಕ್ತ್ವಾ ಯೇ ಭುಂಜತೇ ದ್ವಿಜಾಃ ।
ತೇ ಯಾಂತಿ ನರಕಂ ಘೋರಂ ಸಮಿತ್ರಾಃ ಪಿತೃಭಿಸ್ಸಹ ॥೬೫॥

ಮಹೇಶಸ್ಮರಣಂ ಶ್ರೌತಂ ತ್ಯಕ್ತ್ವಾ ಯೇ ಭುಂಜತೇ ದ್ವಿಜಾಃ ।
ತೇ ಯಾಂತಿ ನರಕಂ ಘೋರಂ ಸಮಿತ್ರಾಃ ಪಿತೃಭಿಸ್ಸಹ ॥೬೬॥

ಮಹೇಶಕೀರ್ತನಂ ಶ್ರೌತಂ ತ್ಯಕ್ತ್ವಾ ಯೇ ಭುಂಜತೇ ದ್ವಿಜಾಃ ।
ತೇ ಯಾಂತಿ ನರಕಂ ಘೋರಂ ಸಮಿತ್ರಾಃ ಪಿತೃಭಿಸ್ಸಹ ॥೬೭॥

ಶಿವಾಗ್ರೇ ನರ್ತನಂ ಶ್ರೌತಂ ತ್ಯಕ್ತ್ವಾ ಯೇ ಭುಂಜತೇ ದ್ವಿಜಾಃ ।
ತೇ ಯಾಂತಿ ನರಕಂ ಘೋರಂ ಸಮಿತ್ರಾಃ ಪಿತೃಭಿಸ್ಸಹ ॥೬೮॥

ಶಿವಾಭಿವಂದನಂ ಶ್ರೌತಂ ತ್ಯಕ್ತ್ವಾ ಯೇ ಭುಂಜತೇ ದ್ವಿಜಾಃ ।
ತೇ ಯಾಂತಿ ನರಕಂ ಘೋರಂ ಸಮಿತ್ರಾಃ ಪಿತೃಭಿಸ್ಸಹ ॥೬೯॥

---

ಮಹೇಶ್ವರನ ಧ್ಯಾನ, ಮಹೇಶ್ವರಸ್ಮರಣ, ಮಹೇಶ್ವರಗುಣಾನುವರ್ಣನ, ಶಿವಲಿಂಗದ ಮುಂದೆ ಆಡುವ ನಾಟ್ಯ, ಶಿವನಮಸ್ಕಾರ, ಶಿವಪೂಜನ, ಇತ್ಯಾದಿ ಕರ್ಮಗಳು ಶ್ರುತಿಸ್ಮೃತ್ಯುಕ್ತವಾದವುಗಳು. ಇಂತಹ ವೇದಪ್ರತಿಪಾದ್ಯಸಾಧನಗಳಾದ ಕರ್ಮಗಳನ್ನು ಯಾರು ಸದಾ ಆಚರಿಸಿಕೊಂಡು ಬರುವರೋ ಅವರೇ ಧನ್ಯರು. ಯಾರು

ಮಹೇಶವೀಕ್ಷಣಂ ಶ್ರೌತಂ ತ್ಯಕ್ತ್ವಾ ಯೇ ಭುಂಜತೇ ದ್ವಿಜಾಃ ।
ತೇ ಯಾಂತಿ ನರಕಂ ಘೋರಂ ಸಮಿತ್ರಾಃ ಪಿತೃಭಿಸ್ಸಹ ॥೭೦॥

ಇತ್ಯಾದಯಶ್ಶೈವಧರ್ಮಾ ಬಹವಸ್ಸಂತಿ ಭೂಪತೇ ।
ನೋಲ್ಲಂಘನೀಯಾಸ್ತೇ ಧರ್ಮಾ ಬ್ರಾಹ್ಮಣಾದ್ಯೈಃ ಕದಾಚನ ॥೭೧॥

ಶೈವಧರ್ಮಪರಿತ್ಯಾಗಂ ಯಃ ಕರ್ತುಂ ಯತತೇ ದ್ವಿಜಃ ।
ಸ ಹಂತವ್ಯಃ ಪ್ರಯತ್ನೇನ ಸತ್ವರಂ ಧರ್ಮವಿನ್ನೃಪೈಃ ॥೭೨॥

ಶೈವಧರ್ಮಾಶ್ಶ್ರುತಿಪ್ರೋಕ್ತಾಃ ಶ್ರುತಯಶ್ಚ ಶಿವೋದಿತಾಃ ।
ಶಿವೋಕ್ತಧರ್ಮತ್ಯಾಗೇನ ಯಾತನಾ ಭವತಿ ಧ್ರುವಂ ॥೭೩॥

ವೇದಾಶ್ಶಿವಾಜ್ಞಾವಾಕ್ಯಾನಿ ತಾನಿ ವಾಕ್ಯಾನಿ ಸಾಧುಭಿಃ ।
ಮಾನನೀಯಾನಿ ಯತ್ನೇನ ಯಾವಜ್ಜೀವಮತಂದ್ರಿತೈಃ ॥೭೪॥

ಶಿವಾಜ್ಞಾವಾಕ್ಯಮುಲ್ಲಂಘ್ಯ ಯಃ ಪ್ರವರ್ತಿತುಮಿಚ್ಛತಿ ।
ಸ ಯಾತಿ ನರಕಂ ಘೋರಂ ಸವಂಶೋ ನಾತ್ರ ಸಂಶಯಃ ॥೭೫॥

ಈ ಧರ್ಮಗಳಿಂದ ದೂರವಾಗಿರುವರೋ ಅಂತಹವರು ತಮ್ಮ ಪಿತೃವರ್ಗದೊಡನೆ ಘೋರನರಕಕ್ಕೆ ಈಡಾಗುವರು. ॥೫೭-೫೮-೫೯-೬೦-೬೧-೬೨-೬೩-೬೪-೬೫-೬೬-೬೭-೬೮-೬೯-೭೦॥

ಹೀಗೆ ಅನೇಕ ಶಿವಧರ್ಮಗಳು ಲೋಕದಲ್ಲಿ ಪ್ರಚುರವಾಗಿವೆ. ಬ್ರಾಹ್ಮಣರೇ ಮೊದಲಾದವರೆಲ್ಲರೂ ಈ ಧರ್ಮವನ್ನು ತಪ್ಪದೆ ನಡೆಸಿಕೊಂಡು ಬರಬೇಕು. ಒಂದುವೇಳೆ ಯಾವ ದ್ವಿಜನೇ ಆಗಲಿ ಈ ಧರ್ಮಬಾಹಿರನಾಗಿ ಕಾಣುವನೋ ಅಂತಹವನನ್ನು ಧರ್ಮಜ್ಞರಾದ ರಾಜರು ಕರುಣೆಯಿಲ್ಲದೆ ಕೊಲ್ಲಬಹುದು. ॥೭೧-೭೨॥

ಶೈವಧರ್ಮಗಳೆಲ್ಲಾ ವೇದದಲ್ಲಿ ಹೇಳಿರತಕ್ಕವುಗಳು. ವೇದವಾದರೋ ಪರಶಿವನ ಮಾತುಗಳೇ. ಆದ್ದರಿಂದ ಶೈವಧರ್ಮಗಳೆಲ್ಲಾ ಸಾಕ್ಷಾತ್ ಪರಶಿವನಿಂದಲೇ ಹೇಳಲ್ಪಟ್ಟಂತಾಯಿತು. ಅಂತಹ ಪರಶಿವನ ಆಜ್ಞಾವಾಕ್ಯಗಳನ್ನು ಸಾಧುಸಂತರು ತಪ್ಪದೆ ಜೀವವಿರುವ ವರೆಗೂ ನಡೆಸಿಕೊಂಡು ಬರಬೇಕು. ॥೭೩-೭೪॥

ಶಂಕರನ ಅಪ್ಪಣೆಯನ್ನು ಮೀರಿ ಯಾರು ನಡೆಯುವರೋ, ಅವರು ನಿಜವಾಗಿ ಘೋರನರಕವನ್ನು ಹೊಂದುವರು. ಯಾರು ಅಂತಹ ಶಿವಾಜ್ಞೆಯನ್ನು

ಶಿವಾಜ್ಞಾವಾಕ್ಯಮುಲ್ಲಂಘ್ಯ ಯಃ ಪ್ರವರ್ತಿತುಮಿಚ್ಛತಿ ।
ಸ ಹಂತವ್ಯಸ್ಸದ್ಯ ಏವ ದಯಾಂ ತ್ಯಕ್ತ್ವಾ ಶಿತೈಶ್ಶರೈಃ ॥೭೬॥

ಶಿವಾಜ್ಞಾವಾಕ್ಯಮುಲ್ಲಂಘ್ಯ ಯಃ ಪ್ರವರ್ತಿತುಮಿಚ್ಛತಿ ।
ತಸ್ಮಿನ್ ದಯಾ ವಿಧಾಯಾಂತೇ ಯಾತ್ಯೇವ ನರಕಂ ಧ್ರುವಂ ॥೭೭॥

ಶಿವಾಜ್ಞಾವಾಕ್ಯಮುಲ್ಲಂಘ್ಯ ಯಃ ಪ್ರವರ್ತಿತುಮಿಚ್ಛತಿ ।
ತಸ್ಯ ದೃಷ್ಟ್ವಾ ಮುಖಂ ಸದ್ಯಃ ಕರ್ತವ್ಯಂ ರವಿವೀಕ್ಷಣಂ ॥೭೮॥

ಶಿವಾಜ್ಞಾವಾಕ್ಯಮುಲ್ಲಂಘ್ಯ ಯಃ ಪ್ರವರ್ತಿತುಮಿಚ್ಛತಿ ।
ತಸ್ಯ ಕೃತ್ವಾ ಶಿರಶ್ಛೇದಮಶ್ವಮೇಧಫಲಂ ಲಭೇತ್ ॥೭೯॥

ಶಿವಾಜ್ಞಾವಾಕ್ಯಮನಿಶಂ ಯಃ ಪಾಲಯತಿ ಸಾದರಂ ।
ಸ ಪೂಜನೀಯೋ ಯತ್ನೇನ ಸಾದರಂ ಭಕ್ತಿಪೂರ್ವಕಂ ॥೮೦॥

ಭಸ್ಮೋದ್ಧೂಲನಪೂತಾಂಗೋ ಯೋನ್ವಹಂ ಶಿವಪೂಜಕಃ ।
ಸ ಪೂಜನೀಯೋ ಯತ್ನೇನ ಸಾದರಂ ಭಕ್ತಿಪೂರ್ವಕಂ ॥೮೧॥

ಯಃ ಕೇವಲಂ ತ್ರಿಪುಂಡ್ರಾಂಕಃ ಸತತಂ ಶಿವಪೂಜಕಃ ।
ಸ ಪೂಜನೀಯೋ ಯತ್ನೇನ ಸಾದರಂ ಭಕ್ತಿಪೂರ್ವಕಂ ॥೮೨॥

ಮೀರಿ ನಡೆಯುವರೋ ಅಂತಹವರನ್ನು ನಿರ್ದಯವಾಗಿ ತೀಕ್ಷ್ಣಬಾಣಗಳಿಂದ ಕತ್ತರಿಸಿಹಾಕಬೇಕು. ॥೭೫-೭೬॥

ಶಂಕರನ ಅಪ್ಪಣೆಯನ್ನು ಮೀರುವವರಲ್ಲಿ ಯಾರು ದಯೆಯನ್ನು ತೋರ್ಪಡಿಸುವರೋ ಅವರು ನರಕಭಾಗಿಗಳಾಗುವರು. ಅಶೈವರನ್ನು ನೋಡಿದೊಡನೆಯೇ ತತ್ಪಾಪಪರಿಹಾರಕ್ಕಾಗಿ ಸೂರ್ಯದರ್ಶನ ಮಾಡಬೇಕು. ಅಂತಹವರನ್ನು ಕೊಲ್ಲುವುದರಿಂದ ಅಶ್ವಮೇಧ ಯಾಗದ ಫಲವು ಲಭಿಸುವುದು. ಶಿವಾಜ್ಞಾಪರಿಪಾಲನೆಮಾಡುವವನನ್ನು ಸರ್ವದಾ ಭಕ್ತಿಯಿಂದ ಪೂಜಿಸುತ್ತಿರಬೇಕು. ॥೭೭-೭೮-೭೯-೮೦॥

ಭಸ್ಮವನ್ನು ತನ್ನ ಅವಯವಗಳಿಗೆಲ್ಲಾ ಬಳಿದುಕೊಂಡು, ಭಸ್ಮತ್ರಿಪುಂಡ್ರವನ್ನು ಹಣೆಯಲ್ಲಿ ಧರಿಸಿ, ರುದ್ರಾಕ್ಷಿಯ ಸರಗಳನ್ನು ಕಂಠಕ್ಕೆ ಹಾಕಿಕೊಂಡು

ಸುರುದ್ರಾಕ್ಷಧಾರಣಕೋ ಯೋಽನ್ವಹಂ ಶಿವಪೂಜಕಃ ।
ಸ ಪೂಜನೀಯೋ ಯತ್ನೇನ ಸಾದರಂ ಭಕ್ತಿಪೂರ್ವಕಂ ॥೮೩॥

ಶಿವಲಿಂಗಾರ್ಚನಪರೋ ಯೋಽನ್ವಹಂ ಶಿವಪೂಜಕಃ ।
ಸ ಪೂಜನೀಯೋ ಯತ್ನೇನ ಸಾದರಂ ಭಕ್ತಿಪೂರ್ವಕಂ ॥೮೪॥

ಪಂಚಾಕ್ಷರಜಪಾಸಕ್ತೋ ಯೋಽನ್ವಹಂ ಶಿವಪೂಜಕಃ ।
ಸ ಪೂಜನೀಯೋ ಯತ್ನೇನ ಸಾದರಂ ಭಕ್ತಿಪೂರ್ವಕಂ ॥೮೫॥

ರುದ್ರಾಧ್ಯಾಯಜಪಾಸಕ್ತೋ ಯೋಽನ್ವಹಂ ಶಿವಪೂಜಕಃ ।
ಸ ಪೂಜನೀಯೋ ಯತ್ನೇನ ಸಾದರಂ ಭಕ್ತಿಪೂರ್ವಕಂ ॥೮೬॥

ಶಿವಪ್ರದಕ್ಷಿಣಾಸಕ್ತೋ ಯೋಽನ್ವಹಂ ಶಿವಪೂಜಕಃ ।
ಸ ಪೂಜನೀಯೋ ಯತ್ನೇನ ಸಾದರಂ ಭಕ್ತಿಪೂರ್ವಕಂ ॥೮೭॥

ಶಿವಪ್ರಣಾಮಸಂಸಕ್ತೋ ಯೋಽನ್ವಹಂ ಶಿವಪೂಜಕಃ ।
ಸ ಪೂಜನೀಯೋ ಯತ್ನೇನ ಸಾದರಂ ಭಕ್ತಿಪೂರ್ವಕಂ ॥೮೮॥

ಶಿವಾಗ್ರೇ ನರ್ತನಾಸಕ್ತೋ ಯೋಽನ್ವಹಂ ಶಿವಪೂಜಕಃ ।
ಸ ಪೂಜನೀಯೋ ಯತ್ನೇನ ಸಾದರಂ ಭಕ್ತಿಪೂರ್ವಕಂ ॥೮೯॥

ಶಿವಸ್ತುತಿಶ್ರುತಿಪರೋ ಯೋಽನ್ವಹಂ ಶಿವಪೂಜಕಃ ।
ಸ ಪೂಜನೀಯೋ ಯತ್ನೇನ ಸಾದರಂ ಭಕ್ತಿಪೂರ್ವಕಂ ॥೯೦॥

ಶ್ರೀಮಹೇಶಕಥಾಸಕ್ತೋ ಯೋಽನ್ವಹಂ ಶಿವಪೂಜಕಃ ।
ಸ ಪೂಜನೀಯೋ ಯತ್ನೇನ ಸಾದರಂ ಭಕ್ತಿಪೂರ್ವಕಂ ॥೯೧॥

ಶಿವಪೂಜನಸಂಸಕ್ತೋ ಯೋಽನ್ವಹಂ ಶಿವಪೂಜಕಃ ।
ಸ ಪೂಜನೀಯೋ ಯತ್ನೇನ ಸಾದರಂ ಭಕ್ತಿಪೂರ್ವಕಂ ॥೯೨॥

---

ಯಾರು ಸದಾ ಶಿವಪೂಜಾಸಕ್ತರಾಗಿರುವರೋ ಅಂತಹವರು ಪೂಜ್ಯರು. ಹಾಗೆಯೇ ಶಿವಲಿಂಗಾರ್ಚನೆ, ಪಂಚಾಕ್ಷರೀ ಜಪ, ರುದ್ರಾಧ್ಯಾಯ ಪಾರಾಯಣ, ಶಿವಪ್ರದಕ್ಷಿಣೆ, ಶಿವಪ್ರಣಾಮ, ಶಿವಲಿಂಗದ ಸಮೀಪದಲ್ಲಿ ನರ್ತನ, ಶಿವಸ್ತುತಿ, ಶಿವಕಥಾಶ್ರವಣ, ಶಿವಪೂಜಾಸಕ್ತಿ, ಪ್ರದೋಷಪೂಜಾ, ಶಿವಲಿಂಗದರ್ಶನ, ಶಿವಲಿಂಗಸ್ಪರ್ಶನ, ಶಿವ

ಪ್ರದೋಷಪೂಜಾಸಂಸಕ್ತೋ ಯೋಽನ್ವಹಂ ಶಿವಪೂಜಕಃ ।
ಸ ಪೂಜನೀಯೋ ಯತ್ನೇನ ಸಾದರಂ ಭಕ್ತಿಪೂರ್ವಕಂ ॥೯೩॥

ಶಿವಪ್ರೇಕ್ಷಣಸಂಸಕ್ತೋ ಯೋಽನ್ವಹಂ ಶಿವಪೂಜಕಃ ।
ಸ ಪೂಜನೀಯೋ ಯತ್ನೇನ ಸಾದರಂ ಭಕ್ತಿಪೂರ್ವಕಂ ॥೯೪॥

ಶಿವಸ್ಪರ್ಶನಸಂಸಕ್ತೋ ಯೋಽನ್ವಹಂ ಶಿವಪೂಜಕಃ ।
ಸ ಪೂಜನೀಯೋ ಯತ್ನೇನ ಸಾದರಂ ಭಕ್ತಿಪೂರ್ವಕಂ ॥೯೫॥

ಬಿಲ್ವಪತ್ರಾರ್ಚನಪರೋ ಯೋಽನ್ವಹಂ ಶಿವಪೂಜಕಃ ।
ಸ ಪೂಜನೀಯೋ ಯತ್ನೇನ ಸಾದರಂ ಭಕ್ತಿಪೂರ್ವಕಂ ॥೯೬॥

ಬಿಲ್ವಪೋಷಣಸಂಸಕ್ತೋ ಯೋಽನ್ವಹಂ ಶಿವಪೂಜಕಃ ।
ಸ ಪೂಜನೀಯೋ ಯತ್ನೇನ ಸಾದರಂ ಭಕ್ತಿಪೂರ್ವಕಂ ॥೯೭॥

ವಿಭೂತಿಸಂಗ್ರಹಾಸಕ್ತೋ ಯೋಽನ್ವಹಂ ಶಿವಪೂಜಕಃ ।
ಸ ಪೂಜನೀಯೋ ಯತ್ನೇನ ಸಾದರಂ ಭಕ್ತಿಪೂರ್ವಕಂ ॥೯೮॥

ಪುರಾ ಕಶ್ಚಿದಭೂದ್ರಾಜಾ ಶೈವಧರ್ಮರತಸ್ಸದಾ ।
ಸ ಭೂಪಃ ಪೂಜಯಾಮಾಸ ಶೈವಧರ್ಮರತಾನ್ ದ್ವಿಜಾನ್ ॥೯೯॥

ಭಸ್ಮೋದ್ಧೂಲನಸಂಸಕ್ತಾಃ ಪೂಜಿತಾಸ್ತೇನ ಕೋಟಿಶಃ ।
ಶುದ್ಧ ತ್ರಿಪುಂಡ್ರನಿಟಿಲಾಃ ಪೂಜಿತಾಸ್ತೇನ ಕೋಟಿಶಃ ॥೧೦೦॥

---

ಪೂಜಾರ್ಥವಾಗಿ ಬಿಲ್ವಪತ್ರಾರ್ಚನ, ಬಿಲ್ವವೃಕ್ಷಪೋಷಣ, ವಿಭೂತಿಸಂಗ್ರಹಣ ಮುಂತಾದ ಶಿವಧರ್ಮಕಾರ್ಯಗಳಲ್ಲಿ ಯಾರು ಆಸಕ್ತಿವಹಿಸಿ ಸರ್ವದಾ ಶಿವಾರ್ಚನೆಯಿಂದ ಕಾಲಕಳೆಯುವರೋ ಅವರೇ ಪೂಜ್ಯರು. ಅಂತಹವರನ್ನು ಸದಾ ಭಕ್ತಿಯಿಂದ ಅರ್ಚಿಸಬೇಕು. (೮೧-೮೨-೮೩-೮೪-೮೫-೮೬-೮೭-೮೮-೮೯-೯೦-೯೧-೯೨-೯೩-೯೪-೯೫-೯೬-೯೭-೯೮)

ಹಿಂದೆ ಒಬ್ಬ ಶೈವಧರ್ಮಪಾಲಕನಾದ ರಾಜನಿದ್ದನು. ಆತನು ಶಿವಧರ್ಮಾನುಯಾಯಿಗಳಾದ ದ್ವಿಜರನ್ನು ಮತ್ತು ಭಸ್ಮೋದ್ಧೂಲನ, ಭಸ್ಮತ್ರಿಪುಂಡ್ರಧಾರಣೆ ಮುಂತಾದ ಚಿಹ್ನೆಗಳಿಂದಲಂಕೃತರಾದವರನ್ನು ಬಹಳವಾಗಿ ಪೂಜಿಸುತ್ತಿದ್ದನು.

ರುದ್ರಾಕ್ಷಧಾರಣಾಸಕ್ತಾಃ ಪೂಜಿತಾಸ್ತೇನ ಕೋಟಿಶಃ ।
ಶಿವಲಿಂಗಾರ್ಚನಾಸಕ್ತಾಃ ಪೂಜಿತಾಸ್ತೇನ ಕೋಟಿಶಃ ॥೧೦೧॥

ಪಂಚಾಕ್ಷರಜಪಾಸಕ್ತಾಃ ಪೂಜಿತಾಸ್ತೇನ ಕೋಟಿಶಃ ।
ರುದ್ರಾಧ್ಯಾಯಜಪಾಸಕ್ತಾಃ ಪೂಜಿತಾಸ್ತೇನ ಕೋಟಿಶಃ ॥೧೦೨॥

ಶಿವಪ್ರಣಾಮಸಂಸಕ್ತಾಃ ಪೂಜಿತಾಸ್ತೇನ ಕೋಟಿಶಃ ।
ಶಿವಸಂಸ್ಮರಣಾಸಕ್ತಾಃ ಪೂಜಿತಾಸ್ತೇನ ಕೋಟಿಶಃ ॥೧೦೩॥

ಶ್ರೀಮಹೇಶಕಥಾಸಕ್ತಾಃ ಪೂಜಿತಾಸ್ತೇನ ಕೋಟಿಶಃ ।
ಶಿವಾಗ್ರೇ ನರ್ತನಾಸಕ್ತಾಃ ಪೂಜಿತಾಸ್ತೇನ ಕೋಟಿಶಃ ॥೧೦೪॥

ಬಿಲ್ವಪತ್ರಾರ್ಚನಾಸಕ್ತಾಃ ಪೂಜಿತಾಸ್ತೇನ ಕೋಟಿಶಃ ।
ವಿಭೂತಿಸಂಗ್ರಹಾಸಕ್ತಾಃ ಪೂಜಿತಾಸ್ತೇನ ಕೋಟಿಶಃ ॥೧೦೫॥

ಸ ಭೂಪಃ ಕಾರಯಾಮಾಸ ಶಿವಸ್ಥಾನಾನಿ ಕೋಟಿಶಃ ।
ಸ ಭೂಪಃ ಸ್ಥಾಪಯಾಮಾಸ ಶಿವಲಿಂಗಾನಿ ಕೋಟಿಶಃ ॥೧೦೬॥

ಸ ಭೂಪಃ ಪೂಜಯಾಮಾಸ ಶಿವಲಿಂಗಾನಿ ಕೋಟಿಶಃ ।
ಸ ಧೂಪೈರ್ಧೂಪಯಾಮಾಸ ಶಿವಲಿಂಗಾನಿ ಕೋಟಿಶಃ ॥೧೦೭॥

ಸ ದೀಪೈರ್ದೀಪಯಾಮಾಸ ಶಿವಲಿಂಗಾನಿ ಕೋಟಿಶಃ ।
ಅನ್ನಂ ನಿವೇದಯಾಮಾಸ ಶಿವಲಿಂಗಾನಿ ಕೋಟಿಶಃ ॥೧೦೮॥

ರುದ್ರಾಕ್ಷಿಗಳನ್ನು ಆಸಕ್ತಿಯಿಂದ ಧರಿಸಿದವರನ್ನೂ, ಲಿಂಗಾರ್ಚನೆ, ಪಂಚಾಕ್ಷರೀಜಪ, ರುದ್ರಾಧ್ಯಾಯಜಪ, ಶಿವಪೂಜೆ, ಶಿವಧ್ಯಾನ, ಶಿವಕಥಾಶ್ರವಣ, ಶಿವನ ಮುಂದೆ ನರ್ತನ, ಬಿಲ್ವಪತ್ರೆಗಳನ್ನು ತರುವಿಕೆ, ವಿಭೂತಿಯನ್ನು ಸಂಪಾದಿಸುವಿಕೆ ಮುಂತಾದ ಧರ್ಮಕಾರ್ಯಗಳಲ್ಲಿ ಆಸಕ್ತರಾದವನ್ನು ಆ ರಾಜನು ಬಹುವಾಗಿ ಪೂಜಿಸುತ್ತಿದ್ದನು. ॥೧೦೧-೧೦೨-೧೦೩-೧೦೪-೧೦೫॥

ಆ ರಾಜನು ಅಸಂಖ್ಯಾತವಾದ ಶಿವಸ್ಥಾನಗಳನ್ನೂ, ಶಿವಲಿಂಗಗಳನ್ನೂ ಸ್ಥಾಪನೆಮಾಡಿದನು. ಮತ್ತು ಶಿವಲಿಂಗವನ್ನು ಬಿಲ್ವಾದಿಗಳಿಂದ ಅರ್ಚಿಸಿ, ಧೂಪ ದೀಪ ನೈವೇದ್ಯಾದಿಗಳಿಂದ ಪರಮೇಶ್ವರನನ್ನು ಅನೇಕಬಾರಿ ಪೂಜಿಸಿ ನಮಸಿದನು. ॥೧೦೬-೧೦೭-೧೦೮॥

ಏಕೈಕಸ್ಮಿನ್ ಶಿವಸ್ಥಾನೇ ದೀಪಮಾತ್ರಕುಲಾಲಯಾಃ ।
ದೀಪಸ್ತಂಭಾಃ ಸುವರ್ಣಸ್ಯ ಸ್ಥಾಪಿತಾಸ್ತೇನ ಕೋಟಿಶಃ ॥೧೦೯॥

ಶಿವಸ್ಥಾನಾನ್ಯನಂತಾನಿ ಸೌವರ್ಣಾನಿ ಸ ಭೂಪತಿಃ ।
ಭೂಷಯಾಮಾಸ ಯತ್ನೇನ ರತ್ನಪ್ರಾಸಾದಕೋಟಿಭಿಃ ॥೧೧೦॥

ಕೋಟಿಶಃ ಕಾರಯಾಮಾಸ ಬಿಲ್ವವೃಕ್ಷವನಾನಿ ಸಃ ।
ಬಿಲ್ವಪತ್ರೈಃ ಸ ಲಿಂಗಾನಿ ಪೂಜಯಾಮಾಸ ಕೋಟಿಶಃ ॥೧೧೧॥

ತೇನ ರತ್ನಾನಿ ದತ್ತಾನಿ ಶೈವೇಭ್ಯಃ ಕೋಟಿಶೋ ಮುದಾ ।
ತೇನ ಸಂತೋಷಿತಾಶ್ಶೈವಾಃ ಕೋಟಿಶಃ ಕಾಂಚನಾದಿಭಿಃ ॥೧೧೨॥

ಅಶೈವಾ ನಿಹತಾಸ್ತೇನ ಕೋಟಿಶಃ ಶಸ್ತ್ರಪಾಣಿನಾ ।
ಅಶೈವಾಃ ಪತಿತಾಸ್ತೇನ ಕೋಟಿಶೋ ಯಮಮಂದಿರೇ ॥೧೧೩॥

ಪ್ರತ್ಯಹಂ ಲಿಂಗದಾನಾನಿ ಸ ಚಕಾರ ಸಹಸ್ರಶಃ ।
ಪ್ರತಿಯಾಮೇ ಪ್ರಯತ್ನೇನ ಸ ಚಕಾರ ಶಿವಾರ್ಚನಂ ॥೧೧೪॥

ಪ್ರತಿಶಿವದೇವಾಲಯದಲ್ಲಿಯೂ, ಸದಾ ಉರಿಯಲು ಅನುಕೂಲವಾಗಿರುವಂತಹ ಸುವರ್ಣದ ಅಸಂಖ್ಯಾತ ಕಂಬಗಳನ್ನು ನಿರ್ಮಿಸಿಕೊಟ್ಟನು. ಪ್ರತಿ ದೇವಾಲಯವನ್ನೂ, ರತ್ನಮಯವಾದ ಉಪ್ಪರಿಗೆಗಳಿಂದಲೂ ಸುವರ್ಣಾಭರಣಾದಿಗಳಿಂದಲೂ ಅಲಂಕರಿಸಿದನು. ||೧೦೯-೧೧೦||

ಹಾಗೆಯೇ ಕೋಟಿ ಸಂಖ್ಯೆಯಲ್ಲಿ ಬಿಲ್ವವೃಕ್ಷಗಳನ್ನು ನೆಡಿಸಿ, ಬಿಲ್ವಪತ್ರೆಗಳಿಂದಲೂ ಹಾಗೆಯೇ ಶಿವನನ್ನು ಪೂಜಿಸಿದನು. ಈಶ್ವರಪೂಜಕರಿಗೆ ಕೋಟಿಗಟ್ಟಲೆ ಸುವರ್ಣದಾನಾದಿಗಳನ್ನು ನಡೆಸಿ, ಅದರಿಂದ ಅವರನ್ನು ತೃಪ್ತಿಪಡಿಸಿದನು ||೧೧೧-೧೧೨||

ಶಸ್ತ್ರಪಾಣಿಯಾದ ಆ ರಾಜನು ಅಶೈವರನ್ನು ಕತ್ತರಿಸಿಹಾಕಿಸಿದನು. ಕೋಟಿಗಟ್ಟಲೆಯಲ್ಲಿರುವ ಶೈವೇತರರನ್ನು ಯಮನ ಮನೆಗೆ ಕಳುಹಿಸಿದನು. ಪ್ರತಿದಿನವೂ ಶಿವಲಿಂಗಗಳನ್ನು ಬಹುಸಂಖ್ಯೆಯಲ್ಲಿ ದಾನಮಾಡಿದನು. ಪ್ರತಿಯಾಮವೂ ತಪ್ಪದೆ ಶಿವಲಿಂಗಾರ್ಚನೆಯನ್ನು ನಡೆಸಿದನು. ||೧೧೩-೧೧೪||

ಚಕಾರ ಯಾಮಮಧ್ಯೇಽಪಿ ಸ ಭೂಪಶ್ಶಿವಪೂಜನಂ ।
ಸ ಸರ್ವದಾ ಶಿವಕಥಾಂ ಶುಶ್ರಾವ ಶಿವಚಿಂತಕಃ ॥೧೧೫॥

ಸರ್ವಪ್ರದೋಷಕಾಲೇಷು ಚಕಾರ ಸ ಶಿವಾರ್ಚನಂ ।
ನಿತ್ಯಂ ನಕ್ತವ್ರತಂ ತೇನ ಕೃತಂ ವಿಧಿಪುರಸ್ಸರಂ ॥೧೧೬॥

ಸ ಶಂಕರಂ ಸಮಭ್ಯರ್ಚ್ಯ ಪ್ರದೋಷೇ ಸರ್ವಸಾಧನೈಃ ।
ತತೋ ಭುಂಕ್ತೇನ್ವಹಂ ಭಕ್ತ್ಯಾ ಸ್ಮರನ್ನೇವ ಮನೋಹರಂ ॥೧೧೭॥

ವೃಥಾ ನ ನೀತಂ ಭೂಪೇನ ಕ್ಷಣಾರ್ಧಮಪಿ ಭೂಪತೇ ।
ಸರ್ವದಾ ಸಂಸ್ಮರನ್ನೇವ ಸಂಸ್ಥಿತಸ್ತ್ರಿಪುರಾಂತಕಂ ॥೧೧೮॥

ಸ ಶಂಕರಪ್ರಸಾದೇನ ಕಾಮಗಂ ಯಾನಮಾಪ ಚ ।
ತೇನ ಯಾನೇನ ಸ ನೃಪೋ ನಿತ್ಯಂ ಕಾಶೀಂ ಪ್ರಯಾತಿ ಚ ॥೧೧೯॥

ತತ್ರ ವಿಶ್ವೇಶ್ವರಂ ಸಮ್ಯಕ್ಪೂಜಯಿತ್ವಾ ವಿಧಾನತಃ ।
ಕೃತ್ವಾಂತರ್ಗೃಹಯಾತ್ರಾಮಪಿ ಪುನರಾಯಾತಿ ಭೂಪತೇ ॥೧೨೦॥

ಅನೇಕ ವೇಳೆ ಯಾಮಮಧ್ಯದಲ್ಲಿಯೂ ಅಂದರೆ ತೋರಿದ ಕಾಲದಲ್ಲೆಲ್ಲಾ ಶಿವಪೂಜೆಯನ್ನು ನೆರವೇರಿಸುತ್ತಿದ್ದನು. ಸರ್ವದಾ ಈಶ್ವರಕಥೆಯನ್ನೇ ಕೇಳುತ್ತಾ, ಆಗಾಗ ಶಿವಧ್ಯಾನಮಾಡುತ್ತಾ ಪ್ರತಿ ಪ್ರದೋಷಕಾಲದಲ್ಲಿಯೂ ತಪ್ಪದೆ ಶಿವಾರ್ಚನೆ ಮಾಡುತ್ತಿದ್ದನು. ನಿತ್ಯವೂ ನಕ್ತವ್ರತವನ್ನು ವಿಧಿವತ್ತಾಗಿ ನಡೆಸುತ್ತಿದ್ದನು. ॥೧೧೫-೧೧೬॥

ಪ್ರದೋಷಕಾಲದಲ್ಲಿ ಶಂಕರನನ್ನು ಸಕಲೋಪಚಾರಗಳಿಂದಲೂ ಪೂಜಿಸಿ, ರಾತ್ರಿಯಾದಮೇಲೆ ಪರಶಿವನನ್ನು ಧ್ಯಾನಿಸುತ್ತಾ ಊಟಮಾಡುವನು. ಆ ರಾಜನು ಕ್ಷಣಕಾಲವನ್ನೂ ವ್ಯರ್ಥವಾಗಿ ಕಳೆಯುತ್ತಿರಲಿಲ್ಲ. ಯಾವಾಗಲೂ ಪರಶಿವನನ್ನೇ ಧ್ಯಾನಿಸುತ್ತಾ ಕಾಲಕಳೆಯುತ್ತಿದ್ದನು. ॥೧೧೭-೧೧೮॥

ಈಶ್ವರಾನುಗ್ರಹದಿಂದ ಅವನಿಗೆ ಯಜಮಾನನ ಮನಸ್ಸನ್ನರಿತು ಹಾರಿ ಹೋಗುವ ವಿಮಾನವೊಂದು ದೊರೆಯಿತು. ಅದರಲ್ಲಿ ಕುಳಿತು ರಾಜನು ಪ್ರತಿ ದಿನವೂ ಕಾಶಿಗೆ ಹೋಗಿ ಅಲ್ಲಿ ವಿಶ್ವೇಶ್ವರದರ್ಶನಾದಿಗಳನ್ನು ನೆರವೇರಿಸಿಕೊಂಡು ಹಿಂದಿರುಗಿಬರುತ್ತಿದ್ದನು. ॥೧೧೯-೧೨೦॥

ಸ ಕದಾಚಿದ್ರತ್ನಭಾರ್ಯೈಃ ಸ್ವರ್ಣಭಾರ್ಯೈಶ್ಚ ಭೂಪತಿಃ ।
ಶ್ರೀಮದ್ವಿಶ್ವೇಶ್ವರಂ ಲಿಂಗಂ ಪೂಜಯಾಮಾಸ ಸಾದರಂ ॥೧೨೧॥

ಶ್ರೀಮದ್ವಿಶ್ವೇಶ್ವರಂ ಲಿಂಗಂ ಕ್ಷೀರಾದ್ಯೈರಮಿತೈಸ್ತವಃ ।
ಅಭಿಷಿಚ್ಯ ನವ್ಯೈರ್ಬಿಲ್ವೈಃ ಪೂಜಯಾಮಾಸ ಕೋಟಿಶಃ ॥೧೨೨॥

ಸೋಪಾನಾನಿ ಸರತ್ನಾದ್ಯೈರ್ಜ್ಞಾನವಾಪ್ಯಾಃ ಪ್ರಯತ್ನತಃ ।
ಕಾರಯಾಮಾಸ ಭೂಪಾಲೋ ರತ್ನಕೋಟೇಶ್ವರಾಹ್ವಯಃ ॥೧೨೩॥

ಮೋಕ್ಷಲಕ್ಷ್ಮೀವಿಲಾಸಾಖ್ಯೇ ಮಂದಿರೇ ರತ್ನರಾಜಿತಾಃ ।
ಪ್ರಾಸಾದಃ ಕಾರಿತಸ್ತೇನ ಸತ್ಯಲೋಕಾದಿಲೋಕಗಃ ॥೧೨೪॥

ನಿರ್ವಾಣಮಂಡಪಸ್ತೇನ ರತ್ನೈರೇವ ಪ್ರಯತ್ನತಃ ।
ಕಾರಿತೋ ಮಣಿಸಂರುದ್ಧಸ್ತಂಭೈಶ್ಚ ಶ್ಮಿನ್ನೈರ್ನೃಪ ॥೧೨೫॥

ಸ ಕದಾಚಿತ್ತ್ರಯೋದಶ್ಯಾಂ ಪ್ರದೋಷೇ ಪಾರ್ವತೀಪತಿಂ ।
ಬಿಲ್ವಾದ್ಯೈಃ ಪೂಜಯಚ್ಛಕ್ತ್ಯಾ ಸಂಸ್ಥಿತಸ್ತ್ರಿನಚಿಂತಕಃ ॥೧೨೬॥

---

ಅವನು ರತ್ನದ ಮತ್ತು ಸುವರ್ಣದ ಆಭರಣಗಳಿಂದಲೂ ಕ್ಷೀರಾಭಿಷೇಕ, ಬಿಲ್ವಾರ್ಚನೆ ಇವುಗಳಿಂದಲೂ ವಿಶ್ವೇಶ್ವರಲಿಂಗವನ್ನು ತಪ್ಪದೆ ಪೂಜಿಸುತ್ತಿದ್ದನು. ॥೧೨೧-೧೨೨॥

ರತ್ನಕೋಟೇಶ್ವರನೆಂಬ ಆ ರಾಜನು ಜ್ಞಾನವಾಪಿಯೆಂಬ ಕೊಳಕ್ಕೆ ರತ್ನಮಯವಾದ ಮೆಟ್ಟಿಲುಗಳನ್ನೂ, ಮೋಕ್ಷಲಕ್ಷ್ಮೀವಿಲಾಸವೆಂಬ ಮಂಟಪಕ್ಕೆ ರತ್ನಮಯವಾದ ಉಪ್ಪರಿಗೆಯನ್ನೂ ಮಾಡಿಸಿದನು. ಅದು ಬ್ರಹ್ಮಲೋಕವನ್ನು ಮುಟ್ಟುವಷ್ಟು ಎತ್ತರವಾಗಿದ್ದಿತು. ॥೧೨೩-೧೨೪॥

ಆ ರಾಜನು ನಿರ್ವಾಣಮಂಟಪವನ್ನು ಕೇವಲ ರತ್ನಮಯವಾದ ಕಂಬಗಳಿಂದಲೇ ನಿರ್ಮಿಸಿದನು. ಹೀಗಿರಲು ಒಂದು ದಿವಸ ಆ ರಾಜನು ತ್ರಯೋದಶಿಯ ಪ್ರದೋಷಕಾಲದಲ್ಲಿ ಭಯಭಕ್ತಿಯಿಂದ ಶಂಕರನನ್ನು ಬಿಲ್ವಾದಿ ಸಾಧನಗಳಿಂದ ಪೂಜಿಸಿದನು ॥೧೨೫-೧೨೬॥

ತದಾನೀಂ ತಸ್ಯ ರಿಪವೋ ರಂಧ್ರಾನ್ವೇಷಣತತ್ಪರಾಃ ।
ನಗರಂ ತಸ್ಯ ಭೀಮಾಖ್ಯಂ ವೇಷ್ಟಯಾಮಾಸುರುದ್ಧತಾಃ ॥೧೨೭॥

ರುರುಧುರ್ನಗರದ್ವಾರಂ ಮತ್ತಮಾತಂಗಕೋಟಯಃ ।
ನಾನಾಶಸ್ತ್ರಸಮಾಕ್ರಾಂತಭಟಕೋಟಿಸಮನ್ವಿತಾಃ ॥೧೨೮॥

ತೈಸ್ತ್ಯಕ್ತಾನ್ಯಗ್ನಿಶಸ್ತ್ರಾಣಿ ಕೋಟಿಶೋ ನಗರಾಂತರೇ ।
ತೈರನ್ಯಾನ್ಯಪಿ ಶಸ್ತ್ರಾಣಿ ತ್ಯಕ್ತಾನಿ ನಗರಾಂತರೇ ॥೧೨೯॥

ತದಾಧಿಕಾರಿಪುರುಷಾ ಯುದ್ಧಶಾಸ್ತ್ರವಿಶಾರದಾಃ ।
ರಾಜ್ಞೇ ನಿವೇದಯಾಮಾಸುರ್ಮಹದ್ವೈರಿಕೃತಂ ಭಯಂ ॥೧೩೦॥

ಶ್ರುತ್ವಾಪಿ ತದ್ವಚೋ ರಾಜಾ ಕುರ್ವನ್ ಶಂಕರಪೂಜನಂ ।
ಉತ್ತರಂ ನ ದದೌ ತೇಭ್ಯೋ ಮೌನಮಾಶ್ರಿತ್ಯ ಸಂಸ್ಥಿತಃ ॥೧೩೦॥

ವಿಧಾಯ ಪೂಜಾಂ ವಿಧಿವದ್ಯಥಾ ಪೂರ್ವಂ ಸ ಭೂಪತಿಃ ।
ನಿವೇದ್ಯ ಪೂಜಾಮೀಶಾಯ ನಿರ್ಯಯೌ ಶಿವಮಂದಿರಾತ್ ॥೧೩೧॥

ಆಗ ಅವನ ಶತ್ರುಗಳು ಸಮಯಕಾಯುತ್ತಿದ್ದು ಅವನ ಭೀಮನಾಮಕವಾದ ಪಟ್ಟಣಕ್ಕೆ ಮುತ್ತಿಗೆ ಹಾಕಿದರು. ಅನೇಕ ಶಸ್ತ್ರಾಸ್ತ್ರಗಳಿಂದಲೂ, ಮತ್ತಮಾತಂಗಗಳಿಂದಲೂ, ವೀರಸೈನಿಕರಿಂದಲೂ ಕೂಡಿ ಯುದ್ಧಸನ್ನದ್ಧರಾಗಿ ಅವರು ಅಲ್ಲಿಗೆ ಬಂದರು.॥ ೧೨೭-೧೨೮॥

ಬೆಂಕಿಯನ್ನುಗುಳುವ ಅಸ್ತ್ರಗಳನ್ನೂ, ಅನೇಕ ಶಸ್ತ್ರಗಳನ್ನೂ ಆ ನಗರದ ಮೇಲೆ ಶತ್ರುಗಳು ಪ್ರಯೋಗಿಸಿದರು. ಇದನ್ನು ನೋಡಿ ಭಯಭ್ರಾಂತರಾದ ರಾಜಾಧಿಕಾರಿಗಳು ರಾಜನ ಸಮೀಪಕ್ಕೆ ಬಂದು ಆ ವಿಷಯಗಳನ್ನೆಲ್ಲಾ ರಾಜನಿಗೆ ತಿಳಿಯಪಡಿಸಿದರು. ॥೧೨೯-೧೩೦॥

ಆ ಮಾತನ್ನು ಕೇಳಿ ರಾಜನು ಏನನ್ನೂ ಹೇಳದೆ ಮೌನದಿಂದ ಶಂಕರಪೂಜೆಯನ್ನೇ ನೆರವೇರಿಸುತ್ತಾ, ವಿಧಿವತ್ತಾಗಿ ಪೂಜೆಯನ್ನೆಲ್ಲಾ ಪೂರ್ಣಗೊಳಿಸಿ ಅಲ್ಲಿಂದ ಹೊರಗೆ ಹೊರಟನು ॥೧೩೦-೧೩೧॥

ಸ ಸಂಸ್ಥಿತಾನಿ ಶಸ್ತ್ರಾಣಿ ನಗರೋಪರಿಜಾಲವತ್ ।
ಜ್ವಲಜ್ಜ್ವಾಲಾಸಮಾಕೀರ್ಣಾನ್ಯಾಲೋಕ್ಯಾಭೂಚ್ಚ ವಿಸ್ಮಿತಃ ॥೧೩೩॥

ತದಾ ನೃಪಂ ಸಮಾಲೋಕ್ಯ ಶೂರಾ ನಗರಪಾಲಕಾಃ ।
ಪ್ರಣಮ್ಯ ವಕ್ತುಮುದ್ಯುಕ್ತಾಃ ಕ್ರೂರಾ ವೈರಿಕೃತೋದ್ಯಮಂ ॥೧೩೪॥

॥ ನಗರಪಾಲಕಾ ಊಚುಃ ॥

ಮದಧಾರಾಸಮಾಕ್ರಾಂತಮತ್ತಮಾತಂಗಕೋಟಯಃ ।
ಪ್ರತಿದ್ವಾರಂ ಸಮಾಶ್ರಿತ್ಯ ತಿಷ್ಠಂತ್ಯಗಣಿತಾ ನೃಪ ॥೧೩೫॥

ಸಾರಂಗಾ ಇವ ತಿಷ್ಠಂತಿ ತುರಂಗಾಶ್ಚ ಪುರೋಗಣೇ ।
ದ್ರಷ್ಟುಂ ನ ಶಕ್ಯತೇ ರಾಜನ್ ತತ್ತುರಂಗಾಂಗಸಂಗಮಃ ॥೧೩೬॥

ವ್ಯಥಯಂತಿ ತುರಂಗಾಸ್ತೇ ಶಚೀಪತಿತುರಂಗಮಂ ।
ತದ್ವ್ಯಥಿತೋ ಗತಃ ಪ್ರಾಯಃ ಸ್ವರ್ಗಮಿಂದ್ರತುರಂಗಮಃ ॥೧೩೭॥

ಸೇನಾ ತ್ರಿಪುರಸೇನೇವ ಪುರಮಾವೃತ್ಯ ತಿಷ್ಠತಿ ।
ಸ ಸೇನೇವ ಹಿ ಸಾ ಸೇನಾ ಸೇನಾಂ ನ ಪರಿವಿನ್ದತಿ ॥೧೩೮॥

ಆಗ ತನ್ನ ಪಟ್ಟಣವೆಲ್ಲವೂ ಶಸ್ತ್ರಮಯವಾಗಿದ್ದಿತು. ನಗರದ ಮೇಲುಗಡೆ ಚಪ್ಪರದಂತೆ ಬಲೆಯಂತೆ ಉರಿಯುವ ಅಸ್ತ್ರಗಳು ಹಾರಾಡುತ್ತಿದ್ದುವು. ಇದನ್ನು ನೋಡಿ ಆಶ್ಚರ್ಯಪಡುತ್ತಿರುವ ರಾಜನ ಸಮೀಪಕ್ಕೆ ನಗರಪಾಲಕರು ಕೆಲವರು ಓಡಿ ಬಂದು ಶತ್ರುಗಳು ಮಾಡುವ ಕ್ರೂರಕಾರ್ಯಗಳನ್ನು ವಿವರಿಸತೊಡಗಿದರು. ॥೧೩೩-೧೩೪॥

"ರಾಜನೇ, ಮದ್ದಾನೆಗಳ ಸಾಲು ಶತ್ರುಸೈನ್ಯದಲ್ಲಿ ಸೇರಿ ನಮ್ಮ ನಗರದ್ವಾರಗಳಲ್ಲೆಲ್ಲಾ ನಿಂತಿವೆ. ಜಿಂಕೆಗಳಂತೆ ಕುದುರೆಗಳು ಗುಂಪುಗುಂಪಾಗಿ ನೆರೆದಿವೆ. ಇಂತಹಶತ್ರುಗುಂಪನ್ನೂ ವೇಗವಾದ ಕುದುರೆಗಳನ್ನೂ ನೋಡಲು ಅಸಾಧ್ಯವೆನಿಸಿವೆ ॥೧೩೫-೧೩೬॥

ಆ ಗುಂಪಿನಲ್ಲಿರುವ ಕುದುರೆಗಳು ಒಂದೊಂದೂ ಇಂದ್ರನ ಉಚ್ಚೈಶ್ರವಸ್ಸನ್ನು ಮಂಕುಗೊಳಿಸುವಂತಿವೆ. ಒಟ್ಟು ಶತ್ರುಸೈನ್ಯವು ತ್ರಿಪುರಾಸುರರ ಸೈನ್ಯದಂತೆ ಅಸಂಖ್ಯಾತವಾಗಿ ಬಂದು ನೆರೆದಿದೆ ಇಂತಹ ಅಗಾಧ ಸೈನ್ಯವನ್ನು ನಾವು ಎಂದೂ ನೋಡಿರಲಿಲ್ಲ. ॥೧೩೭-೧೩೮॥

ನಗರದ್ವಾರಮಾರಭ್ಯ ಸಾ ಸೇನಾ ಶತಯೋಜನಂ ।
ತಿಷ್ಠತ್ಯತ್ಯಂತಸಂಮರ್ದರಥವಾಜಿಸಮಾಕುಲಾ ॥೧೩೯॥

ಚಿತ್ರರೂಪಧರಾ ಸೇನಾ ಚಿತ್ರಯುದ್ಧವಿಶಾರದಾ ।
ತಿರಸ್ಕರೋತಿ ಸಾ ಸೇನಾ ರಾಜಂಶ್ಚಿತ್ರರಥಾನಪಿ ॥೧೪೦॥

|| ದಧೀಚಿರುವಾಚ ||

ಇತಿ ತದ್ವಚನಂ ಶ್ರುತ್ವಾ ಧೀರೋ ದಾಂತಃ ಸ ಭೂಪತಿಃ ।
ಚಾರಲಕ್ಷಣಸಂಪನ್ನಾನ್ ದೂತಾನಾಹ ವಿಚಕ್ಷಣಃ ॥೧೪೧॥

|| ರತ್ನಕೋಶೇಶ್ವರ ಉವಾಚ ||

ಚರಂತು ಚತುರಾಶ್ಚಾರಾ ವೈರಿಸೇನಾಂತರೇ ದ್ರುತಂ ।
ವಿಚಾರ್ಯ ವೈರಿಚಿಹ್ನಾನಿ ಸಮಾಯಾಂತು ಸಹಸ್ರಶಃ ॥೧೪೨॥

ಕಿಂ ತೇ ವಿಭೂತಿಭೂಷಾಂಗಾಃ ಕಿಂ ತೇ ಶಂಕರಪೂಜಕಾಃ ।
ಕಿಂ ತೇ ರುದ್ರಾಕ್ಷವಲಯಾಃ ಕಿಂ ತೇ ಶಿವಪರಾಯಣಾಃ ॥೧೪೩॥

ಇದಂ ವಿಚಾರ್ಯ ಸಕಲಂ ಸಮಾಯಾಂತ್ವದ್ಯ ಸತ್ವರಂ ।
ಸಾವಧಾನೇನ ಚಿಹ್ನಾನಿ ತೇಷಾಂ ಪಶ್ಯಂತು ಸಾದರಂ ॥೧೪೪॥

ರಥ, ತುರಗ ಇವುಗಳಿಂದ ಕೂಡಿದ ಸೈನ್ಯವು ನೂರು ಯೋಜನ ಪರ್ಯಂತವಾದ ಭೂಮಿಯಲ್ಲಿ ಹರಡಿ ನಿಂತಿದೆ. ನಾನಾ ಆಕಾರಗಳಿಂದ ಕೂಡಿದ ಸೈನ್ಯವು ವಿಚಿತ್ರ ಯುದ್ಧಮಾಡುತ್ತಾ, ಚಿತ್ರರಥಾದಿ ಶೂರ ಸೇನಾಪತಿಗಳನ್ನೂ ತಿರಸ್ಕರಿಸುತ್ತಿದೆ.'' ||೧೩೯-೧೪೦||

ಸೇವಕರ ಮಾತನ್ನು ಕೇಳಿ ಧೀರನೂ, ಉದಾರನೂ ಆದ ರತ್ನಕೋಶೇಶ್ವರನು, ನಿಪುಣರಾದ ತನ್ನ ಗೂಢಚಾರರನ್ನು ಕರೆದು ಹೀಗೆಂದನು. "ಎಲೈ ಚಾರರೇ, ನೀವು ಗುಪ್ತರೂಪಾಗಿ ಶತ್ರುಸೈನ್ಯವನ್ನು ಹೊಕ್ಕು ಅವರು ಯಾವ ಚಿಹ್ನೆಗಳನ್ನು ಧರಿಸಿದ್ದಾರೆ-ಎಂಬುದನ್ನು ಗಮನಿಸಿ ಹೇಳಿರಿ. ||೧೪೧-೧೪೨||

ಅವರು ವಿಭೂತಿಯನ್ನು ಅವಯವಗಳಿಗೆ ಇಟ್ಟಿರುವರೇ? ಶಿವನನ್ನು ಪೂಜಿಸುವರೆ? ರುದ್ರಾಕ್ಷಿಗಳ ಬಳೆಯನ್ನು ಕೈಗೆ ಧರಿಸಿಕೊಂಡು ಶಿವನನ್ನು ಧ್ಯಾನಿ

ಶೈವಧರ್ಮರತಾಸ್ತೇ ಚೇದ್ವೈರಿಣೋಽಪ್ಯತಿಯತ್ನತಃ ।
ಪೂಜ್ಯಾ ಏವ ಮಮಾತ್ಯಂತಂ ನಾನ್ಯಥಾ ಮಮ ಭಾಷಣಂ ॥೧೪೫॥

ಅಶೈವಾಸ್ತೇ ಯದಿ ತದಾ ತಾನಶೈವಾನ್ ಬಹೂನಪಿ ।
ಹನಿಷ್ಯಾಮ್ಯೇಕ ಏವಾಹಮೇಕೇನೈವಾಸಿನಾಧುನಾ ॥೧೪೬॥

॥ ದಧೀಚಿರುವಾಚ ॥

ಅಶೈವಾಸ್ಸಂತಿ ಯಾವಂತಸ್ತೇ ಮೇ ಸಹಜಶತ್ರವಃ ।
ಶೈವಾ ವಸಂತಿ ಯಾವಂತಸ್ತೇ ಮೇ ಸಹಜಬಾಂಧವಾಃ ॥೧೪೭॥

ಇತಿ ತದ್ವಚನಂ ಶ್ರುತ್ವಾ ಯಯುಶ್ಚಾರಾಸ್ಸಹಸ್ರಶಃ ।
ನೃಪೋಽನ್ಯಾನ್ಪ್ರೇಷಯಾಮಾಸ ಪುರರಕ್ಷಾರ್ಥಮಾದರಾತ್ ॥೧೪೮॥

ತತಃ ಪುನಸ್ಸ ಭೂಪಾಲಃ ಪ್ರವಿಶ್ಯ ಶಿವಮಂದಿರಂ ।
ಪುಷ್ಪಾದ್ಯೈಃ ಪೂಜಯಾಮಾಸ ತ್ರಿಪುರಾರಿಮುದಾರಧೀಃ ॥೧೪೯॥

ಕರ್ಪೂರರಾಶಿಂ ದೀಪಾದ್ಯೈಸ್ಸರಾಜಾ ಶಿವಮಂದಿರಂ ।
ದೀಪಯಾಮಾಸ ಧೂಪೈಶ್ಚ ಧೂಪಯಾಮಾಸ ಗುಗ್ಗುಲೈಃ ॥೧೫೦॥

ಸುವರೇ? ಈ ವಿಷಯಗಳನ್ನು ಚೆನ್ನಾಗಿ ಗಮನಿಸಿ ಅದನ್ನು ನನಗೆ ಬಂದು ತಿಳಿಸಿರಿ. ॥೧೪೩-೧೪೪॥

ಅವರೇನಾದರೂ ಶೈವಧರ್ಮದಲ್ಲಿದ್ದರೆ, ಅವರು ಶತ್ರುಗಳಾದರೂ ನನಗೆ ಪೂಜ್ಯರೆನಿಸುವರು. ಶಿವಧರ್ಮ ಪರಿಭ್ರಷ್ಟರಾಗಿದ್ದರೆ, ಅಂತಹವರನ್ನು ನಾನು ಈಗಲೇ ಕೇವಲ ಒಂದು ಕತ್ತಿಯಿಂದಲೇ ಕತ್ತರಿಸಿ ಹಾಕುವೆನು. ಇದಕ್ಕೆ ಬೇರೆಯಾಗಿ ನಾನು ಮತ್ತಾವ ಮಾತನ್ನೂ ಆಡುವುದಿಲ್ಲ. ॥೧೪೫-೧೪೬॥

ಲೋಕದಲ್ಲಿರುವ ಅಶೈವರೆಲ್ಲಾ ನನಗೆ ನಿಜವಾದ ಶತ್ರುಗಳು ; ಯಾರು ಶಿವ ಧರ್ಮಾವಲಂಬಿಗಳೋ ಅವರೆಲ್ಲರೂ ನನಗೆ ಮಿತ್ರರು" ಎಂದು ರಾಜರು ಹೇಳಿದಾಕ್ಷಣವೇ ಗೂಢಚಾರರು ಗುಂಪುಗುಂಪಾಗಿ ಶತ್ರು ಸೈನ್ಯವನ್ನು ಹೊಕ್ಕು ರಾಜಾಜ್ಞೆಯನ್ನು ಪಾಲಿಸತೊಡಗಿದರು. ರಾಜನು ಅವರ ಸ್ಥಾನದಲ್ಲಿ ಬೇರೆ ನಗರರಕ್ಷಕರನ್ನು ನಿಯಮಿಸಿದನು. ॥೧೪೭-೧೪೮॥

ಒಡನೆಯೇ ರಾಜನು ಮತ್ತೆ ಶಿವಾಲಯವನ್ನು ಪೊಕ್ಕು, ತ್ರಿಪುರಾರಿಯಾದ

ತತಸ್ಸ ಶಿವನೈವೇದ್ಯಂ ಭುಕ್ತ್ವಾ ಭೂಯೋ ಮಹೇಶ್ವರಂ ।
ಸಂಪೂಜ್ಯ ಶಂಕರದ್ವಾರಿ ಸಂವಿಷ್ಟಶ್ಶಂಕರಂ ಸ್ಮರನ್ ॥೧೫೦॥

ತತಸ್ಸಮಾಗತಾಶ್ಚಾರಾಸ್ತದಾನೀಮೇವ ಸತ್ವರಂ ।
ವಿಚಾರ್ಯ ವೈರಿಚಿಹ್ನಾನಿ ಸರ್ವಾಣ್ಯಪಿ ಯಥಾಯಥಂ ॥೧೫೨॥

॥ ಚಾರಾ ಊಚುಃ ॥

ತತಸ್ತಂ ರತ್ನಕೋಶೇಶಂ ಶಿವಸಂವಿಷ್ಟಚೇತಸಂ ।
ಪ್ರಣಮ್ಯೋಚುಃ ಪ್ರಯತ್ನೇನ ಕೃತಾಂಜಲಿಪುಟಾ ಭಟಾಃ ॥೧೫೩॥

ಅಶೈವಾ ಏವ ತೇ ರಾಜನ್ ಶೈವಚಿಹ್ನವಿವರ್ಜಿತಾಃ ।
ಏಕೋಽಪಿ ನಾಸ್ತಿ ತತ್ಸೈನ್ಯೇ ಶೈವಚಿಹ್ನಾಂಕಿತಶ್ಶುಚಿಃ ॥೧೫೪॥

॥ ದಧೀಚಿರುವಾಚ ॥

ಇತಿ ತದ್ವಚನಂ ಶ್ರುತ್ವಾ ಸ ಭೀಮನಗರಾಧಿಪಃ ।
ದದೌ ವಸ್ತ್ರಾಣಿ ಚಾರೇಭ್ಯೋ ವಿಚಿತ್ರಾಣ್ಯತಿಹೃಷ್ಟಧೀಃ ॥೧೫೫॥

ಪರಶಿವನನ್ನು ಪುಷ್ಪಾದಿಗಳಿಂದಲೂ, ಧೂಪದೀಪಾದಿಗಳಿಂದಲೂ, ಕರ್ಪೂರನೀರಾಜನಾದಿಗಳಿಂದಲೂ ವಿಶೇಷ ರೀತಿಯಲ್ಲಿ ಅರ್ಚಿಸತೊಡಗಿದನು. ॥೧೪೯-೧೫೦॥

ಹಾಗೆಯೇ ಶಿವನೈವೇದ್ಯವನ್ನು ಭಕ್ಷಿಸಿ, ಮತ್ತೆ ಸ್ವಾಮಿಗೆ ವಂದಿಸಿ ಆ ದೇವಾಲಯದ ಬಾಗಿಲಿನಲ್ಲಿಯೇ ಕುಳಿತುಕೊಂಡನು. ಆಗ ರಾಜಪ್ರೇಷಿತರಾಗಿದ್ದ ದೂತರು ವೈರಿ ಚಿಹ್ನೆಗಳನ್ನು ವಿಚಾರಮಾಡಿ ರಾಜನ ಸಮೀಪಕ್ಕೆ ಬಂದು ನಿಂತರು. ॥೧೫೧-೧೫೨॥

ಸದಾಶಿವನನ್ನೇ ಧ್ಯಾನಿಸುತ್ತಿದ್ದ ಆ ರಾಜನನ್ನು ಕುರಿತು ಸೇವಕರು ಅಂಜಲಿಬದ್ಧರಾಗಿನಿಂತು "ಮಹಾರಾಜನೇ ; ಶತ್ರುಗಳೆಲ್ಲರೂ ಅಶೈವರೇ, ಯಾರೂ ಶಿವಚಿಹ್ನೆಗಳನ್ನು ಧರಿಸಿದವರಿಲ್ಲ. ಶೈವಚಿಹ್ನಾಂಕಿತನಾದ ಒಬ್ಬನನ್ನೂ ಆ ದೊಡ್ಡ ಸೈನ್ಯದಲ್ಲಿ ನಾವು ನೋಡಲಿಲ್ಲ." ॥೧೫೩-೧೫೪॥

ಆ ಮಾತನ್ನು ಕೇಳಿದೊಡನೆಯೇ ರಾಜನು ತನ್ನ ಚಾರರಿಗೆಲ್ಲಾ ವಿಚಿತ್ರತರವಾದ ವಸ್ತ್ರಗಳನ್ನು ಉಡುಗೊರೆಯಾಗಿ ಕೊಟ್ಟು ಸಂತೋಷದಿಂದಿದ್ದನು ಇತ್ತ

ತದಾ ಗರುಡಶಸ್ತ್ರಾಣಿ ಸಂಖ್ಯಾಹೀನಾನಿ ಭೂಪತಿಃ ।
ದದರ್ಶ ವಹ್ನಿಕಲ್ಪಾನಿ ವೈರಿಸಂಪ್ರೇಷಿತಾನಿ ಸಃ ॥೧೫೬॥

ತತೋ ನಾರಾಯಣಾಸ್ತ್ರಾಣಿ ಬ್ರಹ್ಮಾಸ್ತ್ರಾಣಿ ಚ ಕೋಟಿಶಃ ।
ತದಾಸ್ತ್ರಾನ್ಯಪಿ ಶಸ್ತ್ರಾಣಿ ಶಾಕ್ರಸ್ತ್ರಾಣಿ(?)ದದರ್ಶ ಸಃ ॥೧೫೭॥

ಶಸ್ತ್ರಾಣಿ ತಾನಿ ದೃಷ್ಟ್ವೈವ ಸರ್ವೇ ನಗರವಾಸಿನಃ ।
ಆಬಾಲವೃದ್ಧಂ ಸಂಕ್ಷುಬ್ಧಾನ್ ಕ್ಷಣಮಾತ್ರಂ ಭಯಾಕುಲಾಃ ॥೧೫೮॥

ಕಲ್ಪಾವಸಾನಃ ಕಿಮಯಂ ಯದ್ವಾ ಸರ್ವಕ್ಷಯೋಽಧುನಾ ।
ಕಿಮೇತನ್ನೈವ ಜಾನೀಮ ಇತಿ ತೇ ಚುಕ್ರುಶುರ್ಜನಾಃ ॥೧೫೯॥

ತತಃ ಪರಂ ಸ ಭೂಪಾಲೋ ಮಂದಹಾಸಪುರಸ್ಸರಃ ।
ರೌದ್ರಮಸ್ತ್ರಂ ಲೀಲಯೈವ ಪ್ರೇಷಯಾಮಾಸ ಭೂಪತಿಃ ॥೧೬೦॥

ತದಸ್ತ್ರಮರಿಶಸ್ತ್ರಾಣಿ ಭಸ್ಮೀಕೃತ್ಯಾರಿಮಂಡಲಂ ।
ಭಸ್ಮೀಕೃತ್ಯ ಕ್ಷಣಾರ್ಧೇನ ಪುನಸ್ಸಂಪ್ರಾಪ ಭೂಪತಿಂ ॥೧೬೧॥

ತತಸ್ತದಸ್ತ್ರಂ ಸಂಹೃತ್ಯ ಸ ಭೂಪಾಲಃ ಪುನಃ ಶಿವಂ ।
ಸಂಪೂಜ್ಯ ವಿವಿಧೈಃ ಪುಷ್ಪೈಶ್ಚಕಾರ ಶಯನಂ ಮುದಾ ॥೧೬೨॥

ವೈರಿಗಳು ಅಸಂಖ್ಯಾತವಾದ ಗರುಡಾಸ್ತ್ರಗಳನ್ನು ಬೆಂಕಿಯುಗುಳುವಂತೆ ಪ್ರಯೋಗಿಸಿದರು. ॥೧೫೫-೧೫೬॥

ಹಾಗೆಯೇ ನಾರಾಯಣಾಸ್ತ್ರ, ಬ್ರಹ್ಮಾಸ್ತ್ರ ಮುಂತಾದ ಅನೇಕ ಶಸ್ತ್ರಾಸ್ತ್ರಗಳನ್ನು ಉಗ್ರವಾಗಿ ಶತ್ರುಗಳು ಪ್ರಯೋಗಿಸಿದರು. ಇದನ್ನು ನೋಡಿ ಆ ಊರಿನ ಬಾಲವೃದ್ಧರಾದಿಯಾಗಿ ಎಲ್ಲರೂ ಹೆದರಿಹೋದರು ॥೧೫೭-೧೫೮॥

ಜನರೆಲ್ಲರೂ ಏನು ಈಗಲೇ ಸರ್ವಪ್ರಳಯವಾಗುವುದೋ ಎಂದು ಕಳವಳಪಡಲಾರಂಭಿಸಿದರು. ಆದರೂ ರಾಜನು ಮಾತ್ರ ಭಯಪಡದೇ ಮುಗುಳ್ನಗೆಯಿಂದಲೇ ಒಂದು ರುದ್ರಾಸ್ತ್ರವನ್ನು ಶತ್ರುಸೈನ್ಯದ ಮೇಲೆ ಪ್ರಯೋಗಿಸಿದನು. ॥೧೫೯-೧೬೦॥

ಆ ರುದ್ರಾಸ್ತ್ರವು ಶತ್ರುಮಂಡಲವನ್ನೂ, ಅವರ ಬಾಣಪರಂಪರೆಗಳನ್ನೂ ಕ್ಷಣಕಾಲದಲ್ಲಿ ಧ್ವಂಸಮಾಡಿ ಮತ್ತೆ ರಾಜನನ್ನೇ ಬಂದು ಆಶ್ರಯಿಸಿತು. ರಾಜನು

ತತಃ ಪ್ರಾತಸ್ಸಮುತ್ಥಾಯ ಸ ಭೂಪಾಲಶ್ಶಿವಾರ್ಚಕಃ ।
ಶಿವಂ ಸಂಪೂಜ್ಯ ವಿಧಿವನ್ನಗರಾನ್ನಿರ್ಯಯೌ ಬಹಿಃ ॥೧೬೩॥

ಸ ದದರ್ಶ ಚತುರ್ದಿಕ್ಷು ಪರಿತಶ್ಶತಯೋಜನಂ ।
ಸಾಸ್ಥಿಸಂದಗ್ಧಸರ್ವಾಂಗವೈರಿಭಸ್ಮಚಯಾನ್ನೃಪಃ ॥೧೬೪॥

ತತಸ್ಸ ವಾರುಣಾಸ್ತ್ರೋತ್ಥಜಲೇನಾಪ್ಲಾವ್ಯ ಭೂತಲಂ ।
ದೂರೀಚಕಾರ ತದ್ಭಸ್ಮ ವೈರಿದಾಹಸಮುದ್ಭವಂ ॥೧೬೫॥

ಪುಷ್ಪವೃಷ್ಟಿರಭೂದ್ದಿವ್ಯಾ ತದಾ ಸುರವಿನಿರ್ಮಿತಾ ।
ದೇವದುಂದುಭಯೋ ನೇದುರ್ನನೃತುಶ್ಚಾಪ್ಸರೋಗಣಾಃ ॥೧೬೬॥

ತತಸ್ಸಂತುಷ್ಟಹೃದಯಃ ಸ ಭೂಪಃ ಪುಷ್ಪಸಂಕುಲಂ ।
ವಿವೇಶ ಭೀಮನಗರಂ ಪುಷ್ಯಮಿಂದುರಿವ ದ್ರುತಂ ॥೧೬೭॥

ಸಾಮರ್ಥ್ಯಮೀದೃಶಂ ಪ್ರಾಪ್ತಂ ತೇನ ಶಂಕರಪೂಜಯಾ ।
ಶಿವಾರಾಧನಸಕ್ತಾನಾಮಶಕ್ಯಂ ನಾಸ್ತ್ಯತೋ ನೃಪ ॥೧೬೮॥

ಸಂತುಷ್ಟನಾಗಿ ಮತ್ತೆ ವಿವಿಧವಾದ ಪುಷ್ಪಗಳಿಂದ ಶಿವಾರ್ಚನೆಮಾಡಿ ನಿದ್ರಿಸಿದನು. ॥೧೬೧-೧೬೨॥

ಮಾರನೆಯ ಬೆಳಗ್ಗೆ ಎದ್ದು ಶಿವಾರ್ಚನೆಮಾಡಿ, ನಗರದಿಂದ ಹೊರಗೆ ಬಂದು ನಾಲ್ಕುಕಡೆಗಳಲ್ಲಿಯೂ ನೋಡಿದಾಗ, ನೂರುಯೋಜನ ವಿಸ್ತಾರದಲ್ಲಿ ಶತ್ರು ಕಳೇಬರವು, ಮೂಳೆಸಹ ಭಸ್ಮವಾಗಿ ರಾಶಿರಾಶಿಯಾಗಿ ಬಿದ್ದಿದ್ದಿತು. ॥೧೬೩-೧೬೪॥

ಒಡನೆಯೇ ವಾರುಣಾಸ್ತ್ರವನ್ನುಪಯೋಗಿಸಿ, ಜಲರಾಶಿಯನ್ನುಂಟುಮಾಡಿ ಆ ಬೂದಿಯನ್ನೆಲ್ಲಾ ತೊಳೆಸಿಬಿಟ್ಟನು. ಇದನ್ನು ನೋಡಿದ ದೇವತೆಗಳು ಪುಷ್ಪವೃಷ್ಟಿಯನ್ನು ಸುರಿಸಿ, ದುಂದುಭಿಗಳನ್ನು ಬಾರಿಸಿ ಸಂತೋಷದಿಂದ ನರ್ತನ ಮಾಡಿದರು. ॥೧೬೫-೧೬೬॥

ಇದರಿಂದ ಮತ್ತೂ ಸಂತುಷ್ಟನಾದ ಆ ರಾಜನು ಚಂದ್ರನು ಪುಷ್ಯನಕ್ಷತ್ರವನ್ನು ಪ್ರವೇಶಿಸುವಂತೆ ಪುಷ್ಪಭರಿತವಾದ ಭೀಮನಗರವನ್ನು ಸೇರಿದನು. ಅಂತೂ ಆ ರತ್ನಕೋಶೇಶ್ವರನು ಶಂಕರಾರಾಧನೆಯಿಂದ ಇಂತಹ ಸಾಮರ್ಥ್ಯವನ್ನು ಪಡೆದು

ಸ್ವರ್ಗಾಪವರ್ಗದಾತಾರಂ ಹರಮೇವ ಹಿ ಸಾದರಂ ।
ಸ್ವರ್ಗಾಪವರ್ಗಾವಿಚ್ಛಂತಃ ಪೂಜಯಂತಿ ಸ್ತುವಂತಿ ಚ ॥೧೬೯॥

ಯಸ್ಯಾ ಜನ್ಮಮಹದ್ಭಾಗ್ಯಂ ಬಲೇ ಚಾತುಲಮೀಪ್ಸಿತಂ ।
ಮೋಕ್ಷಶ್ಚಾಪೇಕ್ಷಿತಸ್ಯಾಂತೇ ತೇನ ಕಾರ್ಯಂ ಶಿವಾರ್ಚನಂ ॥೧೭೦॥

ಸ ದುರ್ಭಗ ಇತಿ ಜ್ಞೇಯೋ ಯೋ ನಾರ್ಚಯತಿ ಶಂಕರಂ ।
ಸ ಪಾತಕೀತಿ ವಿಜ್ಞೇಯೋ ನಾರಕೀತ್ಯಪಿ ಭೂಪತೇ ॥೧೭೧॥

ಮಹೇಶಾರಾಧನೇ ಪ್ರೀತಿರ್ಧನ್ಯಾನಾಮೇವ ಜಾಯತೇ ।
ನಾನ್ಯೇಷಾಮನ್ಯಚಿತ್ತಾನಾಮಧನ್ಯಾನಾಂ ದುರಾತ್ಮನಾಂ ॥೧೭೨॥

॥ ಸದಾಶಿವ ಉವಾಚ ॥

ಭಸ್ಮಭೂಷಿತಸರ್ವಾಂಗಾ ನಿಸ್ಸಂಗಾ ಏವ ಕೇವಲಂ ।
ಭಜಂತಿ ಗಿರಿಜಾರ್ಧಾಂಗದಗ್ಧಾನಂಗಮಸಂಗಮಂ ॥೧೭೩॥

ವೈರಿಸಮೂಹವನ್ನು ಅನಾಯಾಸವಾಗಿ ಗೆದ್ದನು. ಆದ್ದರಿಂದ ಶಿವಪೂಜಾಧುರೀಣರಿಗೆ ಅಸಾಧ್ಯವಾದ ಕಾರ್ಯವೆಂದೂ ಕಾಣಲಾರದು. ||೧೬೭-೧೬೮||

ಸ್ವರ್ಗ ಮತ್ತು ಮೋಕ್ಷಸುಖವನ್ನು ಕೊಡತಕ್ಕವನು ಶಂಕರನೊಬ್ಬನೇ. ಇವೆರಡನ್ನೂ ಬಯಸುವವರು ಅದಕ್ಕಾಗಿಯೇ ತಪ್ಪದೆ ಶಿವಾರಾಧನೆ ಮಾಡುವರು. ಯಾವನು ಮಹೈಶ್ವರ್ಯ, ಅತಿಯಾದ ಶೌರ್ಯ, ಪುನರ್ಜನ್ಮರಹಿತವಾದ ಮೋಕ್ಷ ಇವುಗಳನ್ನು ಅಪೇಕ್ಷಿಸುವನೋ, ಅವನು ನಿಜವಾಗಿಯೂ ಶಿವಾರ್ಚನೆ ಮಾಡಬೇಕು. ||೧೬೯-೧೭೦||

ಯಾರಿಗೆ ಈಶ್ವರಾರ್ಚನೆಯಲ್ಲಿ ಶ್ರದ್ಧೆಯಿಲ್ಲವೋ ಅವನು ಪಾಪಿ ಮತ್ತು ನರಕಭಾಗಿ. ಧನ್ಯರಾದವರಿಗೇ ಮಹೇಶ್ವರಾರಾಧನೆಯಲ್ಲಿ ಭಕ್ತಿಯುದಯಿಸುವುದು. ಅಧರ್ಮಿಷ್ಠರಿಗೂ, ದುರಾತ್ಮರಿಗೂ, ಶಿವಾರ್ಚನಾಸಕ್ತಿಯು ಎಂದಿಗೂ ಜನಿಸಲಾರದು. ||೧೭೧-೧೭೨||

ಯಾರು ಶಿವಾರ್ಚನೆಗಾಗಿ ಭಸ್ಮಭೂಷಿತದೇಹವುಳ್ಳವರಾಗುವರೋ ಅವರು ಸಂಗವರ್ಜಿತರು. ಮತ್ತು ಪಾರ್ವತೀಪತಿಯೂ, ಮನ್ಮಥನಾಶಕನೂ ಆದ ಪರಶಿವನ

ಇತಿ ತದ್ವಚನಂ ಶ್ರುತ್ವಾ ಸ ಭೂಪಾಲೋ ಮುನೀಶ್ವರಂ
ತದ್ದಗ್ಧಸೇನಾಸಂಖ್ಯಾಂ ಮೇ ವದ ಜ್ಞಾತ್ವಾ ವಿಶೇಷತಃ ॥೧೭೪॥

ರೌದ್ರಮಸ್ತ್ರಂ ಕುತಃ ಪ್ರಾಪ ಸ ಭೂಪಾಲೋ ಮುನೀಶ್ವರ ।
ಇದಂ ಸರ್ವಮಶೇಷೇಣ ವದೇತ್ಯಾಹ ಸ ಶೋಭನೇ ॥೧೭೫॥

॥ ದಧೀಚಿರುವಾಚ ॥

ಅಕ್ಷೌಹಿಣೀನಾಮಭವಚ್ಛತಲಕ್ಷಭಟಾ ನೃಪ ।
ಗಜಾಸ್ತಾವಂತ ಏವಾಸಂಸ್ತುರಂಗಾಶ್ಚ ಬಲೋನ್ನತಾಃ ॥೧೭೬॥

ಉಷ್ಟ್ರಾಸ್ತದ್ದ್ವಿಗುಣಂ ರಾಜನ್ ಬಲೀವರ್ದಾಶ್ಚ ತುಂದಿಲಾಃ ।
ತತೋ ದಶಗುಣಂ ರಾಜನ್ ಸ್ಯಂದನಾಂ ಚಾಭವದ್ಧ್ರುವಂ ॥೧೭೭॥

ಏತಾವತ್ಸೈನ್ಯಮೇತೇನ ಭೂಪೇನೈಕಾಕಿನಾ ನೃಪ ।
ದಗ್ಧಮೇಕೇನ ಶಸ್ತ್ರೇಣ ರೌದ್ರೇಣಾಮಿತತೇಜಸಾ ॥೧೭೮॥

ಸಾನ್ನಿಧ್ಯವನ್ನು ಅನಾಯಾಸವಾಗಿ ಸಂಪಾದಿಸುವರು, ಎಂದು ದಧೀಚಿ ಮಹರ್ಷಿಯು ಹೇಳಲು, ಆ ಧರ್ಮಮೂರ್ತಿರಾಜನು ಆಶ್ಚರ್ಯಪಡುತ್ತಾ ಮತ್ತೆ ಋಷಿಯನ್ನು ಸ್ತುತಿಸಿ, ಆ ರುದ್ರಾಸ್ತ್ರದಿಂದ ಹತವಾದ ಶತ್ರುಸೈನ್ಯದ ಸಂಖ್ಯೆಯನ್ನು ಹೇಳಬೇಕು ಎಂದು ಬೇಡಿಕೊಂಡನು. ॥೧೭೩-೧೭೪॥

ಮತ್ತು ಅಂತಹ ಅಸ್ತ್ರವು ಆ ರಾಜನಿಗೆ ಬಂದ ಬಗೆ ಹೇಗೆ? ಇವೆಲ್ಲವನ್ನೂ ದಯೆಯಿಂದ ಹೇಳಬೇಕೆಂದು ಪ್ರಾರ್ಥಿಸಲು, ಎಲೌ ದೇವಿಯೇ, ಆಗ ದಧೀಚಿ ಮಹರ್ಷಿಯು ಆ ಸಂಖ್ಯೆಯನ್ನು ಮೊದಲು ಹೀಗೆ ವಿವರಿಸಲು ಆರಂಭಿಸಿದನು “ ಆ ಸೈನ್ಯದಲ್ಲಿ ನೂರುಲಕ್ಷಸೈನಿಕರಿಂದ ಕೂಡಿದ ಅನೇಕ ಅಕ್ಷೌಹಿಣೀಸಂಖ್ಯೆ ಭಟರಿದ್ದರು. ಬಲಿಷ್ಠರಾದ ಅಷ್ಟೇ ಆನೆಗಳೂ, ಅಷ್ಟೇ ಕುದುರೆಗಳೂ ಸೇರಿದ್ದುವು. ॥೧೭೫-೧೭೬॥

ಅದರ ಎರಡರಷ್ಟು ಒಂಟೆಗಳೂ, ಹತ್ತರಷ್ಟು ಎತ್ತುಗಳೂ, ಹತ್ತರಷ್ಟು ರಥಗಳೂ ಕೂಡಿ ಸೈನ್ಯವು ಅಗಾಧವಾಗಿದ್ದಿತು. ಅಷ್ಟು ದೊಡ್ಡ ಸೈನ್ಯವನ್ನೂ, ಈ ರಾಜನು ಒಂದೇ ಒಂದು ರುದ್ರಾಸ್ತ್ರದಿಂದ ಧ್ವಂಸಮಾಡಿಬಿಟ್ಟನು. ॥೧೭೭-೧೭೮॥

ಪುರಾ ಸ ಭೂಪತಿಃ ಸ್ವಚ್ಛಂ ರತ್ನಮಂಡಪಮುತ್ತಮಂ ।
ಕಾರಯಾಮಾಸ ಭೂಪಾಲೋ ದೇವದೇವಾಯ ಶಂಭವೇ ॥೧೮೯॥

ತತ್ರ ಸಂಸ್ಥಾಪಯಾಮಾಸ ಶಿವಲಿಂಗಮನುತ್ತಮಂ ।
ತತಃ ಪ್ರಾದುರಭೂಚ್ಛಂಭುಃ ಪೂಜಿತಸ್ತೇನ ಭೂಪತೇ ॥೧೯೦॥

ತತಸ್ತುಷ್ಟಾವ ಭೂಪಾಲೋ ಮಹಾದೇವಂ ಸುರೋತ್ತಮಂ ।
ಸ್ತುತಃ ಪ್ರಸನ್ನೋ ಗೌರೀಶಸ್ತಸ್ಮೈ ಶಸ್ತ್ರಂ ದದೌ ಪರಂ ॥೧೯೧॥

ತದೈವ ಶಂಕರಃ ಪ್ರಾಹ ಕವಚಂ ಚ ನೃಪೋತ್ತಮ ।
ಸ ತೇನ ಕವಚೇನಾಪಿ ಸ ವೃತೋಭೂನ್ನರಾಧಿಪಃ ॥೧೯೨॥

॥ ಸದಾಶಿವ ಉವಾಚ ॥

ಇತಿ ತದ್ವಚನಂ ಶ್ರುತ್ವಾ ಸ ಭೂಪಾಲೋಽಪಿ ವಿಸ್ಮಿತಃ ।
ಕವಚಂ ದೇವದೇವಸ್ಯ ವದೇತ್ಯಾಹ ಮುನಿಂ ಶಿವೇ ॥೧೯೩॥

ದಧೀಚಿಸ್ತದ್ವಚಃ ಶ್ರುತ್ವಾ ತದಾ ಸಂತುಷ್ಟಮಾನಸಃ ।
ಮದೀಯಂ ಕವಚಂ ವಕ್ತುಂ ಸದ್ಯ ಏವ ಸಮಾರಭೇ ॥೧೯೪॥

ಹಿಂದೆ ಒಂದುಸಾರಿ ಅದೇ ರಾಜನು ದೇವದೇವನಾದ ಈಶ್ವರನಿಗಾಗಿ ಒಂದು ರತ್ನಮಂಟಪವನ್ನು ನಿರ್ಮಾಣಮಾಡಿಸಿದನು. ಅದರಲ್ಲಿ ಶಿವಲಿಂಗವನ್ನಿಟ್ಟು ಭಕ್ತಿಯಿಂದ ಪೂಜಿಸಿದಾಗ ಆ ಪೂಜೆಗೆ ಮೆಚ್ಚಿ ಶಂಕರನು ಪ್ರತ್ಯಕ್ಷನಾದನು. ॥೧೮೯-೧೯೦॥

ಅನಂತರ ರಾಜನು ಸಂತುಷ್ಟನಾಗಿ ಮಹಾದೇವನನ್ನು ಬಹುವಾಗಿ ಸ್ತುತಿಸಿ ಪ್ರಾರ್ಥಿಸಿದನು. ಅದಕ್ಕೆ ಮೆಚ್ಚಿದ ಶಂಕರನು ಆ ರಾಜನಿಗೆ ಶಸ್ತ್ರವೊಂದನ್ನು ಅನುಗ್ರಹಿಸಿ, ದಿವ್ಯಕವಚವೊಂದನ್ನು ಉಪದೇಶಿಸಿದನು. ಆಗ ಆ ರಾಜನು ಶಿವ ಕವಚದಿಂದ ಆಚ್ಛಾದಿತನಾದನು. ॥೧೯೧-೧೯೨॥

ಎಂದು ಹೇಳಿದ ದಧೀಚಿಮಹರ್ಷಿಯ ಮಾತುಗಳನ್ನು ಕೇಳಿದೊಡನೆಯೇ ಧರ್ಮಮೂರ್ತಿರಾಜನು ಶಂಕರನು ಉಪದೇಶಿಸಿದ ಕವಚವನ್ನು ತನಗೂ ಉಪದೇಶಿಸಬೇಕೆಂದು ಕೇಳಲು, ಆಗ ದಧೀಚಿಯು ಸಂತುಷ್ಟನಾಗಿ ಈರೀತಿ ನಾನುಸುರಿದ ಶಿವಕವಚಸ್ತೋತ್ರವನ್ನು ವಿವರಿಸತೊಡಗಿದನು. ॥೧೯೩-೧೯೪॥

|| ದಧೀಚಿರುವಾಚ ||

ಕವಚಂ ದೇವದೇವಸ್ಯ ವಕ್ಷ್ಯೇ ಶೃಣು ನರಾಧಿಪ ।
ಯೇನಾವೃತೋ ಮಹಾದುಃಖೈರ್ಮುಕ್ತೋ ಮುಕ್ತಿಂ ಚ ವಿಂದತಿ ॥೧೮೫॥

ಧ್ಯೇಯಃ ಶ್ರೀಮನ್ಮಹಾದೇವಃ ಸಾಂಬಃ ಸಂಸಾರಮೋಚಕಃ ।
ಪವಿತ್ರಹೃದಯೈಃ ಶುದ್ಧೈಃ ಭಸ್ಮರುದ್ರಾಕ್ಷಭೂಷಣೈಃ ॥೧೮೬॥

ಶ್ರೀ ವಿಶ್ವೇಶಮುಮಾಸಹಾಯಮನಘಂ ವಿಶ್ವಾತ್ಮಕಂ ಚಿದ್ಘನಂ
ಸತ್ಯಜ್ಞಾನಮನಂತಮಕ್ಷರಮಜಂ ನಿರ್ಲಿಪ್ತಮೇಕಂ ಪ್ರಭುಂ ।
ಓಂಕಾರಾತ್ಮಕಮಕ್ಷರಂ ಪರತರಂ ಬ್ರಹ್ಮಾದಿಭಿರ್ಭಾವಿತಂ
ಸಾನಂದಂ ಹೃದಿ ಭಾವಯೇದ್ಭವಭಯಧ್ವಾಂತೇಂದುಮಾನಂದದಂ ॥೧೮೭॥

ಏವಂ ಧ್ಯಾತ್ವಾ ಮಹಾದೇವಂ ಸಚ್ಚಿದಾನಂದ ಲಕ್ಷಣಂ ।
ಕವಚೇನಾವೃತೋ ಭೂತ್ವಾ ಮೃತ್ಯುಪಾಶೈಃ ಪ್ರಮುಚ್ಯತೇ ॥೧೮೮॥

ಎಲೈ ರಾಜನೇ, ಈಗ ನಾನು ಹೇಳಲಿರುವ ಶಿವಕವಚವನ್ನು ಭಕ್ತಿಯಿಂದ ಕೇಳು. ಇದರ ಶ್ರವಣದಿಂದಲೇ ಮನುಷ್ಯನು ದುಃಖಮುಕ್ತನಾಗಿ ಮೋಕ್ಷವನ್ನು ಪಡೆಯುವನು. ಮಹಾದೇವನು ಎಂದೂ ಪೂಜ್ಯನು. ಅವನಿಂದಲೇ ಸಕಲ ಸಂಸಾರ ದುಃಖಗಳೂ ನಾಶವಾಗುತ್ತವೆ. ಆದ್ದರಿಂದ ಶುದ್ಧಮನಸ್ಸಿನಿಂದ ಕೂಡಿ ಭಸ್ಮ ರುದ್ರಾಕ್ಷಗಳನ್ನೂ ಧರಿಸಿ ಸದಾ ಮಹಾದೇವನನ್ನು ಧ್ಯಾನಿಸುತ್ತಿರಬೇಕು. ||೧೮೫-೧೮೬||

ಪಾರ್ವತೀಪತಿಯೂ, ವಿಶ್ವರೂಪಿಯೂ, ಜ್ಞಾನರೂಪಿಯೂ ಪ್ರಜ್ಞಾನಘನನೂ ಆದ ಪರಶಿವನುಸತ್ಯಜ್ಞಾನಾನಂದಮಯನಾಗಿರುವನು. ಆತನಿಗೆ ಯಾವ ಸುಖದುಃಖ ಗಳೂ ಸಂಬಂಧಿಸುವುದಿಲ್ಲ. ಪ್ರಣವರೂಪಿಯೂ, ನಾಶರಹಿತನೂ, ಬ್ರಹ್ಮಾದಿ ಸಕಲ ದೇವತಾವಂದಿತನೂ, ಅಜ್ಞಾನವೆಂಬ ಕತ್ತಲೆಗೆ ಚಂದ್ರನಂತಿರುವವನೂ ಆದ ಪರಶಿವ ನನ್ನು ಮೋಕ್ಷರೂಪವಾದ ಆನಂದಪ್ರಾಪ್ತಿಗಾಗಿ ಸದಾ ಧ್ಯಾನಮಾಡುತ್ತಿರಬೇಕು. ||೧೮೭||

ಹೀಗೆ ಮಹಾದೇವನನ್ನು ಧ್ಯಾನಿಸಿ, ಸಚ್ಚಿದಾನಂದರೂಪಿಯಾದ ಪರಶಿವನ ಕವಚಪಠನದಿಂದ ಮಾನವನು ಮೃತ್ಯುಪಾಶವನ್ನೂ ಗೆಲ್ಲುವನು. ||೧೮೮||

ಯದ್ಬ್ರಹ್ಮರಂಧ್ರಂ ಮಮ ಸಂವಿದಾಭಂ
ತದ್ಬ್ರಹ್ಮರಂಧ್ರೇ ಭಗವಾನುಮೇಶಃ ।
ಪಾಯಾತ್ಸ ಸಂಸ್ಥಾನಮನಂತಲಕ್ಷಣಂ
ನಿವಾರ್ಯ ಸರ್ವಾಘಕುಲಂ ನಿರಂತರಂ ॥೮೯॥

ತತ್ಪಾರ್ಶ್ವಮವ್ಯಾನ್ನಿಗಮಾಂತಚಾರೀ
ರುದ್ರಶ್ಶಿಖಾಂ ಪಾತು ಶಿಖಾವತಂಸಃ ।
ಶಿರೋಽಖಿಲಂ ಪಾತು ಮಮೇಂದುಚೂಡೋ
ಭಾಲಂ ಮಮಾವ್ಯಾಜ್ಜ್ವಲನೋರುಭಾಲಃ ।೯೦॥

ವಾಮಂ ಕಪೋಲಂ ಮಮ ಪಾತು ಶಂಭುಃ
ಕಪೋಲಮೀಶೋಽವತು ದಕ್ಷಿಣಂ ಮೇ ।
ಪಾಯಾದ್ಗಿರೀಶೋಽವತು ವಾಮನೇತ್ರಂ
ತ್ರಿಲೋಚನೋ ದಕ್ಷಿಣಮಕ್ಷಿ ಪಾಯಾತ್ ॥೯೧।

ಭ್ರೂಯುಗ್ಮಮವ್ಯಾದ್ವೃಷಭಧ್ವಜೋ ಮೇ
ಭ್ರೂಮಧ್ಯಮವ್ಯಾನ್ಮಖನಾಶದಕ್ಷಃ ।
ನಾಸಾಪುಟಂ ಪಾತು ಮಮಾಂತಕಾಂತಕೋ ।
ನಾಸಾಂತರಂ ಪಾತು ಪಿನಾಕಪಾಣಿಃ ॥೯೨॥

---

"ಸಕಲ ಜ್ಞಾನಕ್ಕೂ ಆಶ್ರಯನಾಗಿ ದಿವ್ಯಜ್ಯೋತಿರ್ಮಯನಾದ ಶಂಕರನು ಉಮಾ ಸಹಿತನಾಗಿ ನನ್ನ ಬ್ರಹ್ಮರಂಧ್ರಸ್ಥಾನದಲ್ಲಿ ನಿಂತು, ನನ್ನ ಸಕಲಪಾಪರಾಶಿಯನ್ನೆಲ್ಲಾ ನಾಶಗೊಳಿಸಿ, ಸರ್ವಲಕ್ಷಣಗಳಿಂದಲೂ ಕೂಡಿ ನನ್ನನ್ನು ರಕ್ಷಿಸುತ್ತಿರಲಿ. ॥೮೯।

ವೇದಾಂತಪ್ರತಿಪಾದ್ಯಮಾನನಾದ ಶಂಕರನು ಬ್ರಹ್ಮರಂಧ್ರದ ಅಕ್ಕಪಕ್ಕ ಗಳನ್ನು ಕಾಪಾಡಲಿ. ರುದ್ರರೂಪಿಯಾದ ಮತ್ತು ಜಟಾಧಾರಿಯಾದ ಶಂಕರನು ನನ್ನ ಶಿಖೆಯನ್ನೂ, ಚಂದ್ರಶೇಖರನೆನಿಸಿದ ಮಹಾದೇವನು ನನ್ನ ಶಿರೋಭಾಗ ವನ್ನೂ, ಅಗ್ನಿನೇತ್ರನು ನನ್ನ ಹಣೆಯನ್ನೂ ಸಂರಕ್ಷಿಸಲಿ. ॥೯೦॥

ಶಂಭುವು ನನ್ನ ಎಡಕಪೋಲವನ್ನೂ, ಈಶ್ವರನು ಬಲಕೆನ್ನೆಯನ್ನೂ ಗಿರೀಶನು ನನ್ನ ಎಡಗಣ್ಣನ್ನೂ, ತ್ರಿಲೋಚನನು ಬಲಗಣ್ಣನ್ನೂ ರಕ್ಷಿಸಲಿ ॥೯೧॥

ವೃಷಭಧ್ವಜನು ನನ್ನ ಎರಡು ಹುಬ್ಬುಗಳನ್ನೂ, ದಕ್ಷಯಜ್ಞವಿನಾಶಕನು

ಮುಖಂ ಮಮಾವ್ಯಾದ್ರುಚಿಪಂಚವಕ್ತ್ರಃ
ಪಾಯಾನ್ಮಮೋಷ್ಠೌ ಶುಚಿಕೃತ್ತಿವಾಸಾಃ ।
ದಂತಾನ್ಮಮಾವ್ಯಾತ್ಪ್ರಭುರಿಂದುದಂತೋ
ಜಿಹ್ವಾಂ ಮಮಾವ್ಯಾನ್ನಿಗಮಾಂತಜಿಹ್ವಃ ॥೧೯೩॥

ಶ್ರೀ ನೀಲಕಂಠೋಽವತು ಕಂಠದೇಶಂ
ಪಾಯಾನ್ಮಹೇಶೋ ಮಮ ಕಂಠಪಾರ್ಶ್ವೇ ।
ಸ್ಕಂಧೌ ಮಮಾವ್ಯಾನ್ಮದನಾಂತಕಾರೀ
ವಕ್ಷಃಸ್ಥಲಂ ಪಾತು ಮಮಾಂಬಿಕೇಶಃ ॥೧೯೪॥

ವಿಶ್ವಂಭರೋಽವ್ಯಾದುದರಂ ಮಮೇದಂ
ಸರ್ವೇಶ್ವರೋ ರಕ್ಷತು ರೋಮಕೂಪಾನ್ ।
ಅಂತ್ರಾಣಿ ಪಾಯಾದುರುಶಕ್ತಿರವ್ಯಾತ್
ಅಸ್ಥೀನಿ ವಿಶ್ವಸ್ಥಿತಿನಾಶಹೇತುಃ ॥೧೯೫॥

ಭ್ರೂಮಧ್ಯವನ್ನೂ, ಯಮನಿಗೆ ಯಮನಾಗಿರುವವನು ನನ್ನ ಮೂಗಿನ ಪ್ರದೇಶವನ್ನೂ, ಪಿನಾಕಪಾಣಿಯು ನಾಸಾಂತರವನ್ನೂ ಕಾಪಾಡಲಿ. ॥೧೯೨॥

ಪಂಚಮುಖಿಯಾದ ಶಂಕರನು ನನ್ನ ಮುಖಭಾಗವನ್ನೂ, ಚರ್ಮಾಂಬರಧಾರಿಯು ನನ್ನ ತುಟಿಗಳನ್ನೂ, ಚಂದ್ರನಂತೆ ಶುಭ್ರವಾದ ದಂತವುಳ್ಳ ಸ್ವಾಮಿಯು ನನ್ನ ಹಲ್ಲುಗಳನ್ನೂ, ವೇದಾಂತವೇ ನಾಲಿಗೆಯಾಗಿ ಉಳ್ಳ ಪರಶಿವನು ನನ್ನ ನಾಲಿಗೆಯನ್ನೂ ರಕ್ಷಿಸಲಿ. ॥೧೯೩॥

ನೀಲಕಂಠನು ನನ್ನ ಕಂಠಪ್ರದೇಶವನ್ನೂ, ಮಹೇಶ್ವರನು ಕತ್ತಿನ ಪಾರ್ಶ್ವಗಳನ್ನೂ, ಮದನನಾಶಕನು ನನ್ನ ಎರಡು ಹೆಗಲುಗಳನ್ನೂ, ಪಾರ್ವತೀಪತಿಯು ನನ್ನ ಎದೆಯಭಾಗವನ್ನೂ ಸಲಹಲಿ. ॥೧೯೪॥

ವಿಶ್ವಂಭರನು ನನ್ನ ಉದರಭಾಗವನ್ನೂ, ಸರ್ವೇಶ್ವರನು ನನ್ನ ರೋಮಕೂಪಗಳನ್ನೂ, ಸಕಲ ಶಕ್ತಿಸಂಪನ್ನನು ನನ್ನ ಕರುಳನ್ನೂ, ಜಗತ್ತಿನ ರಕ್ಷಣೆ ಮತ್ತು ನಾಶಕ್ಕೆ ಕಾರಣನಾದ ದೇವದೇವನು ನನ್ನ ಮೂಳೆಗಳನ್ನೂ ಸಂರಕ್ಷಿಸಲಿ. ॥೧೯೫॥

ತ್ರಿಯಂಬಕೋ ದಕ್ಷಿಣಬಾಹುಮವ್ಯಾತ್
ವಾಮಂ ಮಮಾವ್ಯಾದ್ಭುಜಗಾವನದ್ಧಃ ।
ಪ್ರಕೋಷ್ಠಮವ್ಯಾದ್ಗಿರಿರಾಜಚಾಪೋ
ಹಸ್ತೌ ಮಮಾವ್ಯಾದ್ವರಶೂಲಹಸ್ತಃ ॥೧೯೬॥

ವಿಶಾಖನಾಥೋಽವತು ಹಸ್ತಶಾಖಾನ್
ನಖಾನ್ಮಮಾವ್ಯಾನ್ನರಸಿಂಹಹಾರೀ ।
ಪೃಷ್ಠಂ ಮಮಾವ್ಯಾತ್ತ್ರಿಪುರಾರಿರವ್ಯಾತ್
ಕಟಿದ್ವಯಂ ಮೇ ಗಿರಿಜಾಸಹಾಯಃ ॥೧೯೭॥

ಕಟ್ಯಂತರಾಳಂ ಮಮ ಪಾತು ಶಂಭು
ರೂರುದ್ವಯಂ ಮೇ ಮೃಗಶಾಬಪಾಣಿಃ ।
ಜಾನುದ್ವಯಂ ಪಾತು ಜನಾರ್ದನೇಶೋ
ಗುಲ್ಫದ್ವಯಂ ಪಾತು ವಿರಾಟ್ಸ್ವರೂಪಃ ॥೧೯೮॥

ತ್ರ್ಯಂಬಕನು ನನ್ನ ಬಲಭುಜವನ್ನೂ, ಸರ್ಪಭೂಷಣನು ನನ್ನ ಎಡಭುಜವನ್ನೂ, ಮೇರುಪರ್ವತವನ್ನೇ ಬಿಲ್ಲನ್ನಾಗಿ ಉಳ್ಳವನು ನನ್ನ ಮುಂಗೈಯನ್ನೂ, ತ್ರಿಶೂಲಧಾರಿಯಾದ ಶಂಕರನು ನನ್ನ ಎರಡು ಕೈಗಳನ್ನೂ ಕಾಪಾಡಲಿ. ॥೧೯೬॥

ಕುಮಾರಸ್ವಾಮಿಗೆ ಪಿತೃವಾದ ಮಹಾದೇವನು ನನ್ನ ಕೈಗಳನ್ನೂ, ನರಸಿಂಹಾವತಾರವನ್ನು ಶರಭಾವತಾರದಿಂದ ಮುಂಕುಗೊಳಿಸಿದ ಶಂಭುವು ನನ್ನ ಉಗುರುಗಳನ್ನೂ, ತ್ರಿಪುರಾರಿಯು ಬೆನ್ನುಭಾಗವನ್ನೂ, ಪಾರ್ವತೀಪತಿಯು ಎರಡು ಕಟಿಪ್ರದೇಶಗಳನ್ನೂ ಸಲಹಲಿ ॥೧೯೭॥

ನನ್ನ ಸೊಂಟದ ಮಧ್ಯಭಾಗವನ್ನು ಶಂಕರನೂ, ಎರಡು ತೊಡೆಗಳನ್ನು ಮೃಗಪಾಣಿಯೂ, ಜನಾರ್ದನನಿಗೂ ಒಡೆಯನಾದವನು ನನ್ನ ಎರಡು ಮೊಳಕಾಲುಗಳನ್ನೂ, ವಿರಾಟ್ಸ್ವರೂಪನಾದ ಪರಶಿವನು ನನ್ನ ಎರಡು ಹಿಮ್ಮಡಿಗಳನ್ನೂ ಕಾಪಾಡಲಿ. ॥೧೯೮॥

ಪಾದೌ ಮಮಾವ್ಯಾದಮರೈಕವಂದ್ಯಃ
ಪಾಯಾದ್ಧರಃ ಪಾದತಲದ್ವಯಂ ಮೇ ।
ಪಾದಾಂಗುಲೀನ್ ಪಾತು ಸಮಸ್ತರೂಪೋ
ಸರ್ವಾಂ ತನುಂ ಪಾತು ಮಹೇಶ್ವರೋ ಮೇ ॥೧೯೯॥

ಪ್ರಾಚ್ಯಾಂ ಸದಾ ರಕ್ಷತು ನೀಲರುದ್ರಃ
ಕರ್ಪೂರಗೌರೋವತು ದಕ್ಷಿಣಾಯಾಂ ।
ಪಾತು ಪ್ರತೀಚ್ಯಾಂ ಭಗನೇತ್ರಹಾರೀ
ಪಾಯಾದುದೀಚ್ಯಾಂ ಜಗದೇಕನಾಥಃ ॥೨೦೦॥

ಮಮೋರ್ಧ್ವಮವ್ಯಾದುಡುರಾಜಕಾಂತಿ
ರಧೋ ಮಮಾವ್ಯಾದುರಗೇಂದ್ರಭೂಷಃ ।
ದಿಗಂತರಾಲೇಷು ಸಮಸ್ತನಾಥೋ
ಪಾಯಾದ್ವೃಷಾಧೀಶ್ವರಕೇತುಲಕ್ಷ್ಯಃ ॥೨೦೧॥

ದೇವಪೂಜ್ಯನೆನಿಸಿದ ಶಂಕರನು ನನ್ನ ಎರಡು ಕಾಲುಗಳನ್ನೂ, ಹರನು ನನ್ನ ಅಂಗಾಲುಗಳನ್ನೂ, ಸಮಸ್ತರೂಪದಿಂದಿರುವವನು ಅಂಗುಲಿಗಳನ್ನೂ ಮಹೇಶ್ವರನು ನನ್ನ ಸಮಸ್ತ ದೇಹವನ್ನೂ ಸಲಹಲಿ. ॥೧೯೯॥

ನೀಲವರ್ಣದ ರುದ್ರನು ನನ್ನನ್ನು ಪೂರ್ವದಿಕ್ಕಿನಲ್ಲಿಯೂ, ಕರ್ಪೂರವರ್ಣದ ಶಂಕರನು ದಕ್ಷಿಣದಿಕ್ಕಿನಲ್ಲಿಯೂ, ಭಗದೇವತೆಯ ನೇತ್ರವನ್ನು ಅಪಹರಿಸಿದ ಪರಶಿವನು ಪಶ್ಚಿಮದಿಕ್ಕಿನಲ್ಲಿಯೂ, ಜಗತ್ಪತಿಯೆನಿಸಿದ ರುದ್ರನು ಉತ್ತರದಿಕ್ಕಿನಲ್ಲಿಯೂ ನನ್ನನ್ನು ಕಾಪಾಡಲಿ. ॥೨೦೦॥

ಚಂದ್ರಕಾಂತಿವಿಶಿಷ್ಟನಾದ ಶಂಕರನು ಊರ್ಧ್ವಭಾಗದಲ್ಲಿಯೂ, ಸರ್ಪಭೂಷಣನೆನಿಸಿದವನು ಅಧೋಭಾಗದಲ್ಲಿಯೂ, ಸಮಸ್ತಜಗತ್ತಿಗೂ ಒಡೆಯನಾದವನು ದಿಙ್ಮಧ್ಯಪ್ರದೇಶದಲ್ಲಿಯೂ, ವೃಷಭಧ್ವಜನು ಸಕಲ ಪ್ರದೇಶಗಳಲ್ಲಿಯೂ ನನ್ನನ್ನು ರಕ್ಷಿಸಲಿ. ॥೨೦೧॥

ನದೀಷು ಮಾಂ ರಕ್ಷತು ವಿಶ್ವನಾಥಃ
ಕೂಪೇಷು ಮಾಂ ರಕ್ಷತು ವಿಶ್ವಮೂರ್ತಿಃ
ಪಾಯಾತ್ಸಮುದ್ರೇಷು ಜಲಾಧಿರಾಜಃ
ಸರಿತ್ಸಮುದ್ರಾದಿ ವಿಧಾನದಕ್ಷಃ ॥೨೦೩॥

ವಾತ್ಯಾ ಸುಪಾಯಾದತಿಬಾಹ್ಯವರ್ತೀ
ದವಾನಲಾತ್ಪಾತು ದವಾನಲಾಭಃ ।
ಸಿಂಹಾರಿಭೀತೇರವತು ಪ್ರಭೇಶಃ
ಪಾಯಾದಟವ್ಯಾಂ ಪರಶತ್ರುಹಾರೀ ॥೨೦೪॥

ಶೈಲೇಷು ಮಾಂ ರಕ್ಷತು ಶೈಲವಾಸೀ
ಪಾಯಾದ್ವಿಲಾಸೀ ಗಿರಿಗಹ್ವರೇಷು ।
ಗರ್ತೇಷು ಪಾಯಾತ್ಸುರಗರ್ವಹಾರೀ
ವೃಕ್ಷೇಷು ಪಾಯಾದ್ವಿಷವೃಕ್ಷಹಾರೀ ॥೨೦೫॥

ವಿಶ್ವನಾಥನು ನನ್ನನ್ನು ನದಿಗಳಲ್ಲಿಯೂ, ವಿಶ್ವಮೂರ್ತಿಯು ಬಾವಿಗಳಲ್ಲಿಯೂ, ಜಲಾಧಿರಾಜನೂ, ನದಿ, ಸಮುದ್ರ ಇವುಗಳಿಗೆ ನಿಯಾಮಕನೂ ಆದ ಶಂಭುವು ಸಮುದ್ರದಲ್ಲಿಯೂ ನನ್ನನ್ನು ಸರ್ವದಾ ಕಾಪಾಡುತ್ತಿರಲಿ. ॥೨೦೩॥

ಸಕಲ ಪ್ರಪಂಚದ ಬಾಹ್ಯದಲ್ಲಿ ಪ್ರಕಾಶಿಸುವ ಶಂಕರನು ನನ್ನನ್ನು ಬಿರುಗಾಳಿಯ ದೆಸೆಯಿಂದಲೂ, ಕಾಡುಗಿಚ್ಚಿನಂತೆ ಜ್ವಲಿಸುವ ದೇವನು ಕಾಡುಗಿಚ್ಚಿನಿಂದಲೂ, ತೇಜೋರಾಶಿಯಾದ ಶಂಭುವು ಸಿಂಹಾದಿ ಪ್ರಾಣಿಗಳಿಂದಲೂ, ಶತ್ರುನಾಶಕನಾದ ಸ್ವಾಮಿಯು ಅಡವಿಯಲ್ಲಿಯೂ ಕಾಪಾಡಲಿ. ॥೨೦೪॥

ಶೈಲವಾಸಿಯಾದ ದೇವನು ನನ್ನನ್ನು ಪರ್ವತಗಳಲ್ಲಿಯೂ, ಸದಾ ವಿಲಾಸದಿಂದಿರುವ ಶಂಕರನು ಬೆಟ್ಟ, ಗುಡ್ಡ, ಗುಹೆಗಳಲ್ಲಿಯೂ, ದೇವತೆಗಳ ಗರ್ವವನ್ನು ನಾಶಮಾಡಿದವನು ಹಳ್ಳಕೊಳ್ಳಗಳಲ್ಲಿಯೂ, ವಿಷವೃಕ್ಷವನ್ನೇ ನಿರ್ಮೂಲಗೊಳಿಸುವ ಶಂಕರನು ಸಕಲ ವೃಕ್ಷಗಳಲ್ಲಿಯೂ ಸಲಹಲಿ. ॥೨೦೫॥

ಗಜೇಷು ಪಾಯಾದ್ಗಜದರ್ಪಹಾರೀ
ಪಾಯಾದ್ವಿಷಾದಿಷ್ವಪಿ ವೀರಭದ್ರಃ ।
ಸರ್ಪೇಷು ಪಾಯಾದ್ವಿಷಸರ್ಪಹಾರೀ
ಪಾಯಾತ್ತ್ರಿಮೂರ್ತಿರ್ವಿಷವೃಶ್ಚಿಕೇಷು ॥೨೦೫॥

ಭೂತಾಧಿಪಃ ಪಾತು ವಿರೋಧಿಭೀತೇಃ
ಪಾಯಾತ್ಪಿಶಾಚಾದಿಷು ಭೂತನಾಥಃ ।
ಮೃತ್ಯುಂಜಯೋ ರಕ್ಷತು ಮೃತ್ಯುಭೀತೇಃ
ಕಾಲಾಗ್ನಿರುದ್ರೋऽವತು ಕಾಲಭೀತೇಃ ॥೨೦೬॥

ಪಾಪಾರಿರವ್ಯಾದ್ಬಹುಪಾತಕೇಭ್ಯಃ
ಪಾಯಾದ್ಗೃಹೇಭ್ಯಃ ಕೆಮಲಾಸನಾರ್ಚಃ ।
ಶ್ರೀವಿಷ್ಣುನೇತ್ರಾರ್ಚಿತ ಪಾದಪದ್ಮಃ
ಪಾತು ಪ್ರಭಾತೇಷ್ವಖಿಲೇಷು ಶಂಭುಃ ॥೨೦೭॥

ಆನೆಯ ದರ್ಪವನ್ನು ಮುಂಕುಗೊಳಿಸುವ ಮಹಾದೇವನು ಆನೆಗಳ ಭಯವನ್ನೂ, ವೀರಭದ್ರನು ವಿಷಭಯವನ್ನೂ, ವಿಷಸರ್ಪಗಳನ್ನೇ ಹಾರವಾಗಿ ಉಳ್ಳವನು ಸರ್ಪಭಯವನ್ನೂ, ತ್ರಿಮೂರ್ತಿಸ್ವರೂಪನು ಚೇಳು ಮುಂತಾದ ವಿಷಪ್ರಾಣಿಗಳ ಭಯವನ್ನೂ ತಪ್ಪಿಸಿ ಸಲಹಲಿ. ॥೨೦೫॥

ಶತ್ರುಭಯುವನ್ನು ಭೂತಾಧಿಪನೂ, ಪಿಶಾಚಾದಿಗಳಬಾಧೆಯನ್ನು ಭೂತನಾಥನೂ, ಮೃತ್ಯುಭಯವನ್ನು ಮೃತ್ಯುಂಜಯನೂ, ಯಮಭಯವನ್ನು ಕಾಲಾಗ್ನಿರುದ್ರನೂ ತಪ್ಪಿಸಲಿ. ॥೨೦೬॥

ಪಾಪನಾಶಕನಾದ ಶಂಕರನು ನನ್ನ ಅನೇಕ ಪಾಪಗಳನ್ನು ಹೋಗಲಾಡಿಸಲಿ. ವಿಷ್ಣುವಿನಿಂದ ಪೂಜಿತನಾದವನು ಗೃಹದಲ್ಲಿ ನನ್ನನ್ನು ರಕ್ಷಿಸಲಿ ವಿಷ್ಣುನೇತ್ರದಿಂದ ಸಂಪೂಜಿತವಾದ ಪಾದಪದ್ಮವುಳ್ಳವನು ನನ್ನನ್ನು ಪ್ರಾತಃಕಾಲದಲ್ಲಿಯೂ, ಶಂಭುವು ಸರ್ವಕಾಲದಲ್ಲಿಯೂ ಸಲಹಲಿ ॥೨೦೭॥

ಮಧ್ಯಂದಿನೇ ಪಾತು ಮೃಡೋऽನಿಶಂ ಮಾಂ
ಸಾಯಾಹ್ನಿ ಪಾಯಾದಮರಾಧಿನಾಥಃ ।
ಮಹೇಶ್ವರೋ ರಕ್ಷತು ಮಧ್ಯರಾತ್ರೇ
ಪಾಯಾದುಷಸ್ಯಂಧಕನಾಶಹೇತುಃ ॥೨೦೮॥

ಸರ್ವೇಷು ಕಾಲೇಷ್ವಪಿ ಪಾತು ಶಂಭುಃ
ಉಮಾಂಗಸಂಶ್ಲಿಷ್ಟಮನೋಜ್ಞದೇಹಃ ।
ಮಾರ್ಗೇ ಮೃಗವ್ಯಾಧವಪುರ್ಧರೋऽವ್ಯಾ
ದ್ಯುದ್ಧೇಷು ಪಾಯಾದಸುರೌಘಹಾರೀ ॥೨೦೯॥

ಸರ್ವತ್ರ ಸರ್ವಾರ್ತಿಹರೋ ಹರೋऽವ್ಯಾ
ತ್ಸರ್ವೇಪ್ಸಿತಾರ್ಥಪ್ರದರೂಪಧಾರೀ ।
ರಕ್ಷಾವಿಹೀನಸ್ಥಲಮಸ್ತಿ ಯನ್ಮೇ
ತತ್ರಾವತು ಬ್ರಹ್ಮಜನಾರ್ದನೇಶಃ ॥೨೧೦॥

ಕೃತ್ವೈವಂ ಕವಚಂ ಪೂರ್ವಂ ಸ್ತೋತ್ರಮೇತತ್ಪಠೇನ್ನರಃ ।
ಸ್ತೋತ್ರಂ ಚೈತನ್ಮಹೇಶೇನ ತಸ್ಮೈ ಪ್ರಖ್ಯಾತಮಾದರಾತ್ ॥೨೧೧॥

---

ಮೃಡನು ಮಧ್ಯಾಹ್ನದಲ್ಲಿಯೂ, ದೇವಾಧಿದೇವನು ಸಾಯಂಕಾಲದಲ್ಲಿಯೂ, ಮಹೇಶ್ವರನು ಮಧ್ಯರಾತ್ರಿಯಲ್ಲಿಯೂ, ಅಂಧಕಾಸುರನಾಶಕನು ಉಷಃಕಾಲದಲ್ಲಿಯೂ ರಕ್ಷಿಸಲಿ. ॥೨೦೮॥

ಶಂಭುವು ನನ್ನನ್ನು ಸರ್ವಕಾಲದಲ್ಲಿಯೂ, ಪಾರ್ವತಿಯನ್ನೇ ಅರ್ಧದೇಹದಲ್ಲಿರಿಸಿಕೊಂಡಿರುವ ಶಂಕರನು ಮಾರ್ಗದಲ್ಲಿಯೂ ರಾಕ್ಷಸರ ತಂಡವನ್ನು ನಾಶಗೊಳಿಸಿದ ದೇವನು ಯುದ್ಧರಂಗದಲ್ಲಿಯೂ ಸಲಹಲಿ. ॥೨೦೯॥

ಸರ್ವಪೀಡಾಪರಿಹಾರಕನೂ ಸಕಲೇಪ್ಸಿತಾರ್ಥಪ್ರದಾಯಕನೂ ಆದ ಮಹಾದೇವನು ನನ್ನನ್ನು ಸರ್ವತ್ರ ರಕ್ಷಿಸಲಿ. ಬ್ರಹ್ಮ ಮತ್ತು ವಿಷ್ಣುಗಳಿಗೆ ಅಧಿಪತಿಯೆನಿಸಿದ ಮಹಾದೇವನು ನನಗೆ ರಕ್ಷಣೆ ದೊರೆಯದಿರುವ ಸ್ಥಳಗಳಲ್ಲೆಲ್ಲಾ ನಿಂತು ಕಾಪಾಡುತ್ತಿರಲಿ." ॥೨೧೦॥

ಈ ರೀತಿಯಾದ ಶಿವಕವಚ ಸ್ತೋತ್ರವು ಶಂಕರನಿಂದಲೇ ಹಿಂದೆ ಹೇಳಲ್ಪಟ್ಟಿತು.

ಹರಹರಾಮರವರಪುರಾರೇ
ಸೃಷ್ಟಸುರಾಸುರಪಾಪಾರೇ ।
ಯಮಾರೇ ಭೂತಭಯಂಕರ
ಭವಭಯಹರ ಶಂಕರ ಸಂಸಾರೇ ॥೨೧೨॥

ಸರ್ಗಸ್ಥಿತಿಕಾರಣ ಪುರಾಣ ವಿಷಮೇಕ್ಷಣ
ಪಿನಾಕಪಾಣೇ ತ್ರಿಶೂಲಪಾಣೇ ।
ಚಂದ್ರರೇಖಾಭರಣ ಕಾರಣಕಾರಣ
ವಿಗತಕಾರಣ ಮೃಗಪಾಣೇ ॥೨೧೩॥

ಮಣಿಗಣಮಂಡಿತಫಣಾಗಣ
ಭಣತ್ಫಣಿಪತಿಭೂಷ ।
ನಿರ್ಜಿತಕಾಮ ಸಂಪೂರ್ಣಕಾಮ
ವಿವಿಧಾನಂತಕಲ್ಯಾಣಗುಣ ॥೨೧೪॥

ಇದನ್ನು ಪಠಿಸುವ ನರನು ಶಂಕರಸ್ತುತಿಯನ್ನು ಆದರದಿಂದ ಮಾಡಿದಂತಾವುದು. ॥೨೧೧॥

ದೇವರಾಕ್ಷಸರ ಸಕಲ ಪಾಪವನ್ನೂ ನಾಶಗೊಳಿಸುವವನೇ, ತ್ರಿಪುರಾಸುರ ನಾಶಕನೇ, ಭೂತಾದಿಗಳಿಗೆ ಭಯಪ್ರದವಾಗಿರುವವನೇ, ಸಂಸಾರದುಃಖಗಳನ್ನು ಸದಾ ನಾಶಗೊಳಿಸುವವನೇ. ನಿನಗೆ ವಂದನೆ, ನನ್ನನ್ನು ಸಲಹು. ॥೨೧೨॥

ಜಗತ್ತಿನ ಸೃಷ್ಟಿಸ್ಥಿತಿಲಯಗಳಿಗೆ ಕಾರಣನಾಗಿ ಆದ್ಯಂತಶೂನ್ಯನಾಗಿ ವಿಷಮ ಲೋಚನನೆನಿಸಿ, ಪಿನಾಕ ಮತ್ತು ತ್ರಿಶೂಲ ಇವುಗಳನ್ನು ಧರಿಸಿದ ಚಂದ್ರರೇಖಾ ಭರಣನಾಗಿರುವ ಮೃಗಪಾಣಿಯೇ, ನೀನು ಸಕಲ ಕಾರಣವಸ್ತುಗಳಿಗೂ ಮೂಲ ಕಾರಣನೆನಿಸಿರುವೆಯಲ್ಲವೆ! ಇಂತಹ ನಿನಗೆ ನಮಸ್ಕಾರ. ॥೨೧೩॥

ರತ್ನಸಮೂಹಗಳಿಂದ ಪ್ರಕಾಶಿಸುವ ನಾಗಫಣಗಳಿಂದ ಶೋಭಿಸುವ ಶಂಕರನೇ, ಮನ್ಮಥನನ್ನು ಜಯಿಸಿದವನೇ, ಕಲ್ಯಾಣಗುಣಗಣಭರಿತನೇ ನನ್ನನ್ನು ಸಲಹು. ॥೨೧೪॥

ಗೌರೀಮನೋಭಿರಾಮ ಯೋಗಿ
ಮನೋಭಿರಾಮ ವಿವಿಧನಿರ್ಮಿತಸಾಮ ।
ವಿವಿಧಶ್ರುತ್ಯಭಿಹಿತಪರಮಾದ್ಭುತಧಾಮ ॥೨೧೫॥

ಸ್ಮರಶಾಸನ ಸುಮೇರುರುಚಿಶಿಖರ
ಶಿಖರಿವರಕೃತಸಮಲಂಕೃತಶರಾಸನ ।
ಸಂಹೃತಕಮಲಾಸನ ಸಂದಗ್ಧಾಸುರ
ವರತ್ರಿಪುರಾಸುರಕಾನನ ॥೨೧೬॥

ಹಿಮಗಿರಿನಿಭ ವೃಷಭಾಧಿಪ
ಕೇತನ ಗುರುತರಕರುಣಾನಿಧಾನ ।
ಧಿಕ್ಕೃತವಾಮನ ನಿರ್ಮಿತಪವನಾವ
ಕೃತ್ತಿವಸನ ॥೨೧೭॥

ಪಂಚವಿಧ ಪಂಚಾನನ ನಿಜಭಕ್ತಹೃದಯಾನನ ।
ಮಹಾರಜತವಿರಾಜಿತ ವಿವಿಧರತ್ನವರಸಿಂಹಾಸನ ॥೨೧೮॥

ಗೌರಿಯ ಮನಸ್ಸಿಗೆ ಆನಂದದಾಯಕನೇ, ಯೋಗಿಜನರ ಮನಸ್ಸಿಗೆ ಆಹ್ಲಾದಕರನೆನಿಸಿರುವವನೇ, ವಿವಿಧವಾದ ಶ್ರುತಿವಾಕ್ಯಗಳಿಂದ ಪ್ರದರ್ಶಿತವಾದ ಮಹಿಮೆಯುಳ್ಳವನೇ, ನನ್ನನ್ನು ಸಲಹು. ||೨೧೫||

ಮನ್ಮಥನನ್ನು ಶಿಕ್ಷಿಸಿ, ಮೇರುಪರ್ವತದ ಶಿಖರದಲ್ಲಿ ನೆಲಸಿ, ಅದನ್ನೇ ಧನುಸ್ಸನ್ನಾಗಿ ಮಾಡಿಕೊಂಡ ಪರಶಿವನೇ, ನೀನು ಅಂತಹ ಧನುಸ್ಸಿನಿಂದಲೇ ಸಕಲ ರಾಕ್ಷಸರನ್ನೂ ಸಂಹರಿಸಿ, ತ್ರಿಪುರಾಸುರರೆಂಬ ಭಯಂಕರವಾದ ಅರಣ್ಯವನ್ನು ಧ್ವಂಸಮಾಡಿದವನೇ, ನಿನಗೆ ನಮಸ್ಕಾರ. ||೨೧೬||

ಹಿಮಾಚಲದಂತೆ ಶುಭ್ರವಾಗಿರುವ ವೃಷಭವನ್ನೇ ವಾಹನವನ್ನಾಗಿ ಉಳ್ಳವನೇ, ಗುರುತರವಾದ ಕರುಣಾಶ್ರಯನೇ, ವಾಮನಾವತಾರಿಯಾದ ವಿಷ್ಣುವನ್ನು ತಿರಸ್ಕರಿಸಿದವನೇ, ಗಜಚರ್ಮಾಂಬರಧಾರಿಯೇ, ನನ್ನನ್ನು ಸಲಹು. ||೨೧೭||

ಸದ್ಯೋಜಾತಾದಿ ಪಂಚಮುಖಗಳಿಂದ ವಿರಾಜಿಸುತ್ತಾ, ತನ್ನ ಭಕ್ತರ ಹೃದಯದಲ್ಲಿ ನೆಲಸಿ, ಮಹಾ ರಜತಾದ್ರಿಯಲ್ಲಿ ವಿರಾಜಿಸುವ ಸಿಂಹಾಸನಾಸೀನನಾಗಿರುವ ಮಹಾದೇವನೇ, ನಮ್ಮನ್ನು ಕರುಣೆಯಿಂದ ಸಲಹು. ||೨೧೮||

ಶಾರ್ದೂಲಚರ್ಮವಸನ
ಸಮಧಿಷ್ಠಿತಮಹಾಶ್ಮಶಾನ ।
ಭಕ್ತಭಯಭಂಜನಸೋಮ
ಸೂರ್ಯಾಗ್ನಿನಯನ ಕಾಲಕೂಟವಿಷಾದನ ॥೨೧೯॥

ಜಯ ಜಯ ಮಹೇಶ ಕೇಶವೇಶ
ಜಯ ಜಯಾಂಬಿಕೇಶ ।
ಜಯ ಜಯ ವಿಶ್ವೇಶ
ಜಯ ಜಯ ಗೌರೀಶ
ಜಯ ಜಯ ಪ್ರಹತಗಜಾಧೀಶ ॥೨೨೦॥

ಜ್ವಲ ಜ್ವಲಿತಮಹಾಜ್ವಲನ ಸಂಹರ
ಸಂಹರ ಸಂಸಾರಮಮರವರ ।
ನಾಶಯ ನಾಶಯ ಪಾತಕಂ
ಉನ್ಮೂಲಯೋನ್ಮೂಲಯ ದುಷ್ಟವಾಸನಾಂ ॥೨೨೧॥

ವಿಪ್ರೋಥಯ ವಿಪ್ರೋಥಯ ಭೂತಭಯಂ
ಆಹ್ಲಾದಯ ಆಹ್ಲಾದಯ ।

ವ್ಯಾಘ್ರಚರ್ಮಾಂಬರಧಾರಿಯೇ, ಶ್ಮಶಾನವಾಸಿಯೇ, ಭಕ್ತರ ಭಯವನ್ನು ನಾಶಮಾಡಿದವನೇ, ಸೂರ್ಯ, ಚಂದ್ರ, ಅಗ್ನಿ ಇವರನ್ನೇ ಮೂರು ಕಣ್ಣುಗಳನ್ನಾಗಿ ಹೊಂದಿದವನೇ, ಕಾಲಕೂಟವೆಂಬ ವಿಷವನ್ನು ಭಕ್ಷಿಸಿದವನೇ, ನಿನಗೆ ವಂದನೆ. ॥೨೧೯॥

ವ್ಯೋಮಕೇಶನೇ, ಅಂಬಿಕಾಪತಿಯೇ, ವಿಶ್ವೇಶ್ವರನೇ, ಗೌರೀಪತಿಯೇ, ಗಜಾಸುರನನ್ನು ನಾಶಪಡಿಸಿದವನೇ, ಮಹೇಶ್ವರನೇ, ನೀನು ಜಯಶಾಲಿಯಾಗು. ॥೨೨೦॥

ಮಹಾಜ್ವಾಲಾರೂಪದಿಂದಿರುವವನೇ, ನನ್ನ ಸಂಸಾರದುಃಖವನ್ನು ಭಂಗಗೊಳಿಸು. ನನ್ನ ಸಕಲ ಪಾಪಗಳನ್ನೂ ನಾಶಗೊಳಿಸು. ದುಷ್ಟಸಂಸ್ಕಾರವನ್ನು ಮುಕ್ತಗೊಳಿಸು. ಭೂತಗಳಿಂದ ಒದಗುವ ಭಯವನ್ನೂ ನಿವಾರಿಸು. ನನ್ನ

ದೇಹಿ ದೇಹಿ ಮುಕ್ತಿಮುಮಾ
ವದನಾರವಿಂದ ಚಂದ್ರಚೂಡ ॥೨೨೨॥

ಇಂದ್ರಚಂದ್ರೋಪೇಂದ್ರಾದಿ ಸಕಲ
ಸುರರತ್ನ ಕಿರೀಟಪ್ರಭಾರೂಷಿತ
ದಿವ್ಯರತ್ನ ಖಚಿತನಿವಿಧಮಣಿಪಾದುಕೆ ।
ಲಕ್ಷ್ಮೀಪತಿನಯನಾರವಿಂದಪೂಜಿತ
ಪಾದಪದ್ಮ ಮುನಿವರಹೃತ್ಪದ್ಮಸದ್ಮ ॥೨೨೩॥

ಭುಕ್ತಿಮುಕ್ತಿಫಲಪ್ರದ ದಲಿತಾಮರವೈರಿ
ನಿಕರಕರರಾಜಿತಮೃಗಶಾಬ ।
ಶಾಬಚಂದ್ರಾವತಂಸ ಸಮಧಿಷ್ಠಿತ
ಕಾಶೀನಗರವರಪ್ರದ ॥೨೨೪॥

ಪರಯೋಗಿ ಚಿತ್ತಚಿಂತಿತ ಚಿಹ್ನಿತಜನಮಂದಾರ
ಮಂದಾರಕುಸುಮಕರವಂದಾರು ।
ವೃಂದಾರಕ ವರಪೂಜಿತಪಿನಮಸ್ತಥ ॥೨೨೫॥

ನೊರಗಿದ ಮನಸ್ಸನ್ನು ಆನಂದಗೊಳಿಸು. ಮುಕ್ತಿರೂಪವಾದ ಆನಂದವನ್ನು ಕರುಣಿಸು. ಉಮಾವದನವೆಂಬ ಅರವಿಂದದಂತೆ ನಿನ್ನ ನಾಮಗಳು ಹೊರಹೊರಡುತ್ತಿರುವವು. ನಮ್ಮನ್ನು ರಕ್ಷಿಸು (೨೨೧-೨೨೨)

ಪರಶಿವನೇ, ನಿನ್ನ ಪಾದುಕೆಯು ಇಂದ್ರ, ಚಂದ್ರ, ಉಪೇಂದ್ರ ಮುಂತಾದ ದೇವಶ್ರೇಷ್ಠರ ಕಿರೀಟವಲ್ಲಿ ಅಡಗಿರುವ ದಿವ್ಯರತ್ನಗಳ ಕಾಂತಿಯಿಂದ ಪ್ರಕಾಶಿತವಾಗಿರುವುದು ನಿನ್ನ ಪಾದವು ಮಹಾವಿಷ್ಣುವಿನ ನೇತ್ರಕಮಲದಿಂದ ಪೂಜಿತವಾಗಿರುವುದು. ನಿನಗೆ ಆಶ್ರಯಸ್ಥಿತ್ತಿರುವ ಮನೆಯೆಂದರೆ ಋಷಿಜನರ ಹೃದಯಕಮಲವೇ ಅಲ್ಲವೆ! (೨೨೩)

ಭುಕ್ತಿ ಮತ್ತು ಮುಕ್ತಿಯನ್ನು ಕೊಡುವವನೇ, ದೇವತೆಗಳ ಶತ್ರುಗಳನ್ನು ನಾಶಗೊಳಿಸಿದವನೇ, ಮೃಗಪಾಣಿಯೇ, ಕಾಶೀನಗರಾಧಿದೇವತೆಯೇ, ಕಾಶೀವಾಸಿಗಳಿಗೆ ಸಕಲವರಗಳನ್ನೂ ಕೊಡುವವನೇ, ನಿನಗೆ ವಂದನೆ. (೨೨೪)

ಶ್ರೇಷ್ಠರಾದ ಯೋಗಿಗಳ ಮನಸ್ಸಿನಲ್ಲಿ ಸದಾ ಮಂದಾರವೃಕ್ಷದಂತೆ ಪ್ರತಿಫಲಿ

ನದನದೀಕುಲಾಚಲ ರಸಾತಲ ತಲಾತಲ
ಸುತಲವಿತಲಾದಿ ನಾನಾ ಭುವನನಾಯಕ ।
ನಾನಾನಾಯಕರತ್ನನೂಪುರವಿಲಸತ್ಪಾದಪಂಕಜ ॥೨೨೬॥

ಜಗದೇಕನಾಯಕ ಜಯಜಯ
ಮಹಾದೇವ ದೇವತಾಸಾರ್ವಭೌಮ
ಭಕ್ತಾರ್ತಿಭಂಜನ । ಕರುಣಾಕರ
ಶಂಕರಾಮರೇಶ ಮಹೇಶ ಶಂಭೋ
ಪರೇಶ ಭವಭರ್ಗ ಪಿನಾಕಪಾಣೇ ॥೨೨೭॥

ಸಂಸಾರಸಾಗರಮಪಾರಮಘೋರಮಾಪ್ತಂ
ಮಾಮುದ್ಧರ ತ್ರಿಪುರಸೂದನ ಮನ್ಮಥಾರೇ ।
ಗೌರೀಪತೇ ಪುರಹರಾಮಿತಪುಣ್ಯಮೂರ್ತೇ
ಮುಕ್ತಿಪ್ರದಾಯಕ ಯಮಾಂತಕ ವಿಶ್ವಮೂರ್ತೇ ॥೨೨೮॥

---

ಸತಕ್ಕವನೇ, ಮಂದಾರಕುಸುಮಗಳಿಂದಲೂ, ದೇವತೆಗಳ ಸಮೂಹದಿಂದಲೂ ಪೂಜಿತವಾದ ಪಾದಪದ್ಮವುಳ್ಳವನೇ, ಮನ್ಮಥನನ್ನು ಜಯಿಸಿದವನೇ, ನಿನಗೆ ವಂದನೆ. ॥೨೨೫॥

ನದ, ನದೀ, ಕುಲಪರ್ವತಗಳು, ರಸಾತಲ, ತಲಾತಲ, ಸುತಲ, ವಿತಲ ಮುಂತಾದ ಸಕಲ ಲೋಕಗಳಿಗೂ ನಾಯಕನಾಗಿರುವವನೇ, ಅನೇಕ ನಾಯಕ ಶ್ರೇಷ್ಠರಿಗೆ ರತ್ನಪ್ರಾಯನಾಗಿರುವವನೇ, ಕಾಲುಬಳೆಯಿಂದ ವಿರಾಜಿತವಾದ ಪಾದಪದ್ಮವುಳ್ಳವನೇ, ನನ್ನನ್ನು ರಕ್ಷಿಸು. ನನ್ನನ್ನು ಸಲಹು. ॥೨೨೬॥

ಜಗತ್ಪತಿಯೇ, ಮಹಾದೇವನೇ, ದೇವತಾಸಾರ್ವಭೌಮನೇ, ಭಕ್ತರ ದುಃಖನಿವಾರಕನೇ, ಕರುಣಾಸಾಗರನೇ, ಶಂಕರನೇ, ದೇವದೇವನೇ, ಪರಮೇಶ್ವರನೇ, ಭವನಾಶಕನೇ, ಕಿರಣಗಳಿಂದ ಪ್ರಕಾಶಿಸುವವನೇ, ಪಿನಾಕಪಾಣಿಯೇ ನಮ್ಮನ್ನು ಸಲಹು. ॥೨೨೭॥

ಗೌರೀಪತಿಯೂ, ತ್ರಿಪುರನಾಶಕನೂ, ಅನಂತಪುಣ್ಯಮೂರ್ತಿಯೂ, ಮುಕ್ತಿಪ್ರದನೂ ಆದ ಪರಶಿವನೇ, ನೀನು ವಿಶ್ವಮೂರ್ತಿಯು. ಜಗದ್ವಂದ್ಯನು. ಸಂಸಾರ ಸಾಗರದಲ್ಲಿ ಬಿದ್ದು ಗೋಳಾಡುತ್ತಿರುವ ನನ್ನನ್ನು ಉದ್ಧರಿಸು. ॥೨೨೮॥

ಸಂಸಾರಸಾಗರಮಸಾರಮಘೋರಮಾಪ್ತಂ
ಮಾಮುದ್ಧರ ತ್ರಿಪುರಸೂದನ ಮನ್ಮಥಾರೇ ।
ವಿಶ್ವಾಧಿಕಾವ್ಯಯವಿಶುದ್ಧ ಗುಣಸ್ವಭಾವ
ನಿರ್ದ್ವಂದ್ವ ನಿತ್ಯನಿರುಪಾಧಿಕ ನಿರ್ವಿಕಾರ ॥೨೨೯॥

ಸಂಸಾರಸಾಗರಮಸಾರಮಘೋರಮಾಪ್ತಂ
ಮಾಮುದ್ಧರ ತ್ರಿಪುರಸೂದನ ಮನ್ಮಥಾರೇ ।
ಸೋಮತ್ರಿನೇತ್ರ ಹರಿನೇತ್ರ ಸಮರ್ಚಿತಾಂಘ್ರೇ
ಬ್ರಹ್ಮೇಂದ್ರಮುಖ್ಯಸುರವಂದಿತಪಾದಪದ್ಮ ॥೨೩೦॥

ಸಂಸಾರಸಾಗರಮಪಾರಮಘೋರಮಾಪ್ತಂ
ಮಾಮುದ್ಧರ ತ್ರಿಪುರಸೂದನ ಮನ್ಮಥಾರೇ ।
ನಿರ್ಲಿಪ್ತ ಪಾಲಿತಸುರಾಸುರವರ್ಗಸರ್ವ
ಸೃಷ್ಟಿಸ್ಥಿತಿಪ್ರಲಯಕಾರಣ ಸರ್ವರೂಪ ॥೨೩೧॥

ಸಂಸಾರಸಾಗರಮಸಾರಮಘೋರಮಾಪ್ತಂ
ಮಾಮುದ್ಧರ ತ್ರಿಪುರಸೂದನ ಮನ್ಮಥಾರೇ ।

ವಿಶ್ವದಲ್ಲಿ ಅಧಿಕರೂಪದಿಂದಿರುವವನೇ, ನಾಶರಹಿತನೇ, ಶುದ್ಧಗುಣ ಸ್ವರೂಪನೇ, ದ್ವಂದ್ವರಹಿತನೇ, ನಿತ್ಯನೇ, ಉಪಾಧಿಗಳಿಗೆ ಅಧೀನನಲ್ಲದವನೇ, ವಿಕಾರಕ್ಕೆ ಸಿಕ್ಕದವನೇ, ಸೋಮಸೂರ್ಯಾಗ್ನಿಗಳನ್ನೇ ಕಣ್ಣುಗಳನ್ನಾಗಿ ಉಳ್ಳವನೇ, ವಿಷ್ಣುನೇತ್ರದಿಂದ ಅರ್ಚಿತನಾದವನೇ, ಬ್ರಹ್ಮೇಂದ್ರಾದಿ ಮುಖ್ಯ ದೇವತೆಗಳಿಂದ ವಂದಿತನಾದ ಪಾದಪದ್ಮವುಳ್ಳವನೇ, ಸಂಸಾರಸಾಗರದಿಂದ ಉದ್ಭವಿಸುವ ನಿಸ್ಸಾರವೂ, ಭಯಂಕರವೂ ಆದ ದುಃಖಪರಂಪರೆಗಳನ್ನು ನಾಶಮಾಡಿ, ನನ್ನನ್ನು ಉದ್ಧರಿಸು. ಮನ್ಮಥನಾಶಕನೇ, ನನ್ನನ್ನು ಕಾಪಾಡು, ತ್ರಿಪುರಾರಿಯೇ, ನನ್ನ ದುಃಖಪರಂಪರೆಗಳನ್ನು ಹೋಗಲಾಡಿಸು. ॥೨೨೯-೨೩೦॥

ಸರ್ವವನ್ನು ದೂರಮಾಡಿರುವ ನಿನ್ನ ಭಕ್ತರನ್ನು ರಕ್ಷಿಸುವವನೇ, ಸುರಾಸುರರಿಗೂ, ಜಗತ್ತಿನ ಸೃಷ್ಟಿಸ್ಥಿತಿಲಯಗಳಿಗೂ ಮೂಲಕಾರಣನೆನಿಸಿದ ಮನ್ಮಥಾರಿಯೇ, ವ್ಯಾಘ್ರಚರ್ಮಾಂಬರಧಾರಿಯೂ, ಕರ್ಪೂರರಾಶಿಯಂತೆ ಶುಭ್ರವರ್ಣವಿಶಿಷ್ಟನೂ,

ಶಾರ್ದೂಲಚರ್ಮಪರಿವೀತ ಸುರಾಸುರೇಶ
ಕರ್ಪೂರಗೌರ ಕರುಣಾಕರ ಚಂದ್ರಮೌಳೇ ॥೨೩೨॥

ಸಂಸಾರಸಾಗರಮಪಾರಮಘೋರಮಾಪ್ತಂ
ಮಾಮುದ್ಧರ ತ್ರಿಪುರಸೂದನ ಮನ್ಮಥಾರೇ ।
ಬಿಲ್ವಾರ್ಚನಪ್ರಿಯ ವಿಭೂತಿವಿಭೂಷಿತಾಂಗ
ನಿಸ್ಸಂಗ ನಿರ್ಗುಣ ನಿರಂಜನ ನಿರ್ವಿಕಾರ ॥೨೩೩॥

ಸಂಸಾರಸಾಗರಮಪಾರಮಘೋರಮಾಪ್ತಂ
ಮಾಮುದ್ಧರ ತ್ರಿಪುರಸೂದನ ಮನ್ಮಥಾರೇ ।
ಯೋಗೀಂದ್ರಮಾನಸಸರೋರುಹಸನ್ನಿವಿಷ್ಟ
ಶ್ರೇಷ್ಠೇಷ್ಟದಾಯಕ ವಿಶಿಷ್ಟಜನೇಷ್ಟಶೂಲಿನ್ ॥೨೩೪॥

ಸಂಸಾರಸಾಗರಮಪಾರಮಘೋರಮಾಪ್ತಂ
ಮಾಮುದ್ಧರ ತ್ರಿಪುರಸೂದನ ಮನ್ಮಥಾರೇ ।
ಶಾಂತಾಂತಕಾಂತಕ ಮುಮುಕ್ಷುಜನಾಭಿಸೇವ್ಯ
ಶೈಲಾಧಿರಾಜತನಯಾಯುತವಾಮಭಾಗ ॥೨೩೫॥

ಕರುಣಾನಿಧಿಯೂ ಆದ ಚಂದ್ರಶೇಖರನೇ, ತ್ರಿಪುರಾರಿಯೇ, ಅಪಾರವಾದ ಸಂಸಾರ ಸಮುದ್ರಕ್ಕೆ ಸಿಕ್ಕಿಬಿದ್ದಿರುವ ನನ್ನನ್ನುದ್ಧರಿಸು. (೨೩೦-೨೩೨)

ಬಿಲ್ವಾರ್ಚನೆಯಲ್ಲಿ ಆಸಕ್ತಿಯುಳ್ಳವನೇ, ವಿಭೂತಿವಿಭೂಷಿತಾಂಗನೇ, ಸಂಗವರ್ಜಿತನೂ, ಗುಣರಹಿತನೂ, ದೋಷವಿದೂರನೂ, ಯೋಗಿಗಳ ಮನಸ್ಸೆಂಬ ಕಮಲದಲ್ಲಿ ನೆಲಸಿರುವವನೂ ಸಕಲೇಷ್ಟಾರ್ಥಪ್ರದಾಯಕನೂ, ಭಕ್ತರ ಇಷ್ಟಾರ್ಥವನ್ನು ಪೂರ್ತಿಗೊಳಿಸುವವನೂ ಆದ ತ್ರಿಪುರಾರಿಯೇ, ಅಪಾರಸಂಸಾರಸಾಗರದ ಮಧ್ಯವರ್ತಿಯಾದ ನನ್ನನ್ನುದ್ಧರಿಸು. (೨೩೩-೨೩೪)

ಶಾಂತಾತ್ಮನೂ, ಅಂತಕಾಂತಕನೂ, ಆದ ನೀನು ಮೋಕ್ಷಾಪೇಕ್ಷಿಗಳಾದ ಜನರಿಂದ ಸೇವಿತನಾದವನು, ಪಾರ್ವತಿಯಿಂದ ಆಲಿಂಗಿತವಾದ ವಾಮಭಾಗವುಳ್ಳವನು, ಕಲ್ಯಾಣಕರವಾದ ರೂಪುಳ್ಳವನು, ಮೇರುಪರ್ವತವನ್ನೇ ಶ್ರೇಷ್ಠವಾದ ಬಿಲ್ಲುಗಳನ್ನಾಗಿ

ಸಂಸಾರಸಾಗರಮಪಾರಮಘೋರಮಾಪ್ತಂ
ಮಾಮುದ್ಧರ ತ್ರಿಪುರಸೂದನ ಮನ್ಮಥಾರೇ ।
ಕಲ್ಯಾಣರೂಪ ಕನಕಾಚಲಚಾರುಚಾಪ
ವಿಜ್ಞಾತರೂಪ ದುರವಾಪ ವಿಹಸ್ತಪಾಪ ॥೨೩೬॥

ಸಂಸಾರಸಾಗರಮಪಾರಮಘೋರಮಾಪ್ತಂ
ಮಾಮುದ್ಧರ ತ್ರಿಪುರಸೂದನ ಮನ್ಮಥಾರೇ ।
ವೇದಾಂತವೇದ್ಯ ವಿಭವಾವ್ಯಯ ಶುದ್ಧವೃತ್ತೇ
ವೃತ್ತಿಪ್ರದಾಭಯದ ದಕ್ಷ ಕೃಪಾಸಮುದ್ರ ॥೨೩೭॥

॥ ಮಹಾದೇವ ಉವಾಚ ॥

ಸಂಸಾರಸಾಗರಮಪಾರಮಘೋರಮಾಪ್ತಂ
ಮಾಮುದ್ಧರ ತ್ರಿಪುರಸೂದನ ಮನ್ಮಥಾರೇ ।
ಏವಂ ಸ್ತುತ್ವಾ ಮಹಾದೇವಂ ಕೃತ್ವಾ ತು ಕವಚಂ ನೃಪ ।
ಸರ್ವಪಾಪವಿನಿರ್ಮುಕ್ತೋ ಮಾಮುಪೈಷ್ಯತ್ಯಸಂಶಯಂ ॥೨೩೮॥

ಅನೇನ ಕವಚೇನೈವ ಸಂವೃತೋ ಯತ್ರ ಯೋ ವಸೇತ್ ।
ಸರ್ವಪಾಪವಿನಿರ್ಮುಕ್ತಸ್ತತ್ರ ಸೌಖ್ಯಂ ಲಭೇನ್ನರಃ ॥೨೩೯॥

ಉಳ್ಳವನು. ತಿಳಿಯಲಾಗದ ರೂಪ್ಯುಳ್ಳವನೇ ಅತಿಶಯವಾದ ಸಕಲ ಪಾಪಗಳಿಂದಲೂ ದೂರನಾದವನೇ, ಅಪಾರವಾದ ಸಂಸಾರದಲ್ಲಿ ಮುಳುಗಿಹೋಗಿರುವ ನನ್ನನ್ನುದ್ಧರಿಸು ರಕ್ಷಿಸು. ॥೨೩೫-೨೩೬

ವೇದಾಂತವೇದ್ಯನೂ, ಅತಿಶಯವಾದ ಐಶ್ವರ್ಯಶಾಲಿಯೂ, ಶುದ್ಧಚಾರಿತ್ರವುಳ್ಳವನೂ, ಭಕ್ತರಿಗೆ ಅಭಯಪ್ರದಾನವಮಾಡುವವನೂ, ದಕ್ಷಬ್ರಹ್ಮನಿಗೆ ಅಂತ್ಯದಲ್ಲಿ ಕರುಣೆಯನ್ನು ತೋರಿಸಿದವನೂ ಆದ ಮಹಿಮಾಶಾಲಿಯೇ, ನಿನಗೆ ವಂದಿಸುವೆ ಅಪಾರವಾದ ಈ ಸಂಸಾರದ ದುಃಖವನ್ನು ತಪ್ಪಿಸಿ ನನ್ನನ್ನು ಉದ್ಧರಿಸು." ॥೨೩೭॥

ಎಲೈ ರಾಜನೇ, ಈ ರೀತಿ ನನ್ನ ಕವಚವನ್ನು ಪಠಿಸುತ್ತಾ ಸ್ತೋತ್ರಮಾಡಿದವನು ನಿಜವಾಗಿಯೂ ಪಾಪಮುಕ್ತನಾಗಿ ನನ್ನನ್ನೇ ಕೊನೆಯಲ್ಲಿ ಹೊಂದುವನು.

॥ ದಧೀಚಿರುವಾಚ ॥

ಏವಮುಕ್ತ್ವಾ ಮಹಾದೇವೋ ರತ್ನಕೋಶಂ ಪ್ರತಿಪ್ರಭುಃ ।
ತತ್ರೈವ ಲಿಂಗೇ ಕಾಶ್ಮೀರೇ ಕ್ಷಣಾದಂತರ್ದಧೇ ನೃಪ ॥೨೪೦॥

ಶ್ರೀರುದ್ರಕವಚಾಕ್ರಾಂತಶ್ರೀಮಹಾರುದ್ರಪೂಜಕಃ ।
ಸರ್ವಪಾಪವಿನಿರ್ಮುಕ್ತಃ ಶಿವಲೋಕಂ ಗಮಿಷ್ಯತಿ ॥೨೪೧॥

ಶ್ರೀರುದ್ರಕವಚಂ ಜಪ್ತ್ವಾ ಕೃತ್ವಾ ಶ್ರೀರುದ್ರಪೂಜನಂ ।
ಜಪ್ತ್ವಾ ಪಂಚಾಕ್ಷರಂ ಶೈವಂ ನಿಷ್ಪಾಪೋ ಜಾಯತೇ ನರಃ ॥೨೪೨॥

ಇದಂ ತು ಕವಚಂ ಪೂರ್ವಮಂಬಾಯೈ ಶಂಕರೋದಿತಂ ।
ಷಣ್ಮುಖಾಯಾತಿಭಕ್ತಾಯ ದೇವ್ಯಾಪಿ ಸಮುದೀರಿತಂ ॥೨೪೩॥

ತತಃ ಪರಂ ಷಣ್ಮುಖೇನ ಮಹ್ಯಮುಕ್ತಂ ನರಾಧಿಪ ।
ಇದಂ ತು ಪರಮಪ್ರೇಮ್ಣಾ ಮಯಾ ತುಭ್ಯಮುದೀರಿತಂ ॥೨೪೪॥

ನನ್ನ ಈ ಕವಚದಿಂದ ಆಚ್ಛಾದಿತನಾದವನು ಸರ್ವಪಾಪವಿದೂರನಾಗಿ ನನ್ನ ಸನ್ನಿಧಿಯನ್ನು ಪಡೆಯುವನು. ಇದು ನಿಜವೆಂದು ನಂಬು. ॥೨೩೮-೨೩೯॥

ಎಂದು ಮಹಾದೇವನು ರತ್ನಕೋಶೇಶ್ವರನಿಗೆ ತಿಳಿಯಹೇಳಿ ಅದೇ ಲಿಂಗದಲ್ಲಿಯೇ ಮಾಯವಾದನು. ಈರೀತಿ ಯಾರು ರುದ್ರಕವಚದಿಂದ ಕೂಡಿದವನಾಗಿ, ಮಹಾ ರುದ್ರನನ್ನು ಪೂಜಿಸುವನೋ ಅಂತಹಈಶ್ವರಭಕ್ತನು ಸಕಲ ಪಾಪವಿನಿರ್ಮುಕ್ತನಾಗಿ ಶಿವಲೋಕವನ್ನು ಹೊಂದುವನು. ॥೨೪೦-೨೪೧॥

ರುದ್ರಕವಚವನ್ನು ಜಪಿಸುತ್ತಾ, ರುದ್ರಪೂಜೆಯನ್ನೆಸಗುತ್ತಾ ಪಂಚಾಕ್ಷರೀ ಮಂತ್ರವನ್ನು ಪಠಿಸುತ್ತಾ ಮಾನವನು ಸಕಲ ಪಾಪಗಳನ್ನೂ ಕಳೆದುಕೊಳ್ಳುವನು. ಈ ರುದ್ರಕವಚವನ್ನು ಹಿಂದೆ ಶಂಕರನು ಪಾರ್ವತಿಗೆ ಉಪದೇಶಿಸಿದನು. ಪಾರ್ವತಿಯೂ ಅದನ್ನು ತನ್ನ ಪ್ರಿಯಪುತ್ರನೂ ಅತಿಭಕ್ತನೂ ಆದ ಷಣ್ಮುಖನಿಗೆ ತಿಳಿಯ ಹೇಳಿದನು. ॥೨೪೨-೨೪೩॥

ಷಣ್ಮುಖಸ್ವಾಮಿಯು ನನ್ನಮೇಲಿನ ಪ್ರೀತಿಯಿಂದ ನನಗೆ ಇದನ್ನು ಬೋಧಿಸಿದನು ಈಗ ನಾನು ಇದನ್ನು ನಿನಗಾಗಿ ಆದರಿಂದ ತಿಳಿಯಪಡಿಸಿರುವೆನು.

ಯದಾ ಪ್ರಭೃತ್ಯನೇನಾಹಂ ಕವಚೇನಾವೃತೋ ನೃಪ ।
ತದಾ ಪ್ರಭೃತಿ ದುಃಖಾನಿ ನ ದೃಶ್ಯಂತೇ ಮಯಾ ಧ್ರುವಂ ॥೨೪೫॥

ಮುರಸ್ಯ ನಿಧನಂ ಕರ್ತುಂ ಪುರಾ ವಿಷ್ಣುಸ್ಸಮುದ್ಯತಃ ।
ಜಯಪ್ರದಂ ಕಿಮಸ್ತೀತಿ ಮಾಮುವಾಚ ಕೃತಾಂಜಲಿಃ ॥೨೪೬॥

ತತಸ್ತಸ್ಮೈ ಮಯೈವೋಕ್ತಮಿದಂ ಕವಚಮುತ್ತಮಂ ।
ಅನೇನ ಕವಚೇನೈವ ಸಂವೃತಃ ಸ ಯಯೌ ಹರಿಃ ॥೨೪೭॥

ತತಸ್ತೇನ ಜಯಃ ಪ್ರಾಪ್ತಃ ಕವಚಸ್ಯ ಪ್ರಭಾವತಃ ।
ಅಘೋರವಜ್ರಕವಚಮಿದಂ ಶೈವಮನುತ್ತಮಂ ॥೨೪೮॥

ಅನೇನ ಕವಚೇನೈವ ಕವಚೀ ಸಮಭೂದ್ಧರಿಃ ।
ಏತತ್ಕವಚಸಂಬದ್ಧಾದ್ಧರಿರ್ನಾಪ ವೇದನಾಂ ॥೨೪೯॥

ತತಃ ಪರಂ ಮುರಂ ಹತ್ವಾ ಹರಿಃ ಪ್ರಾಪ ಹಿಮಾಲಯಂ
ತದಾ ಕಣ್ವಃ ಸಮಾಗತ್ಯ ಹರಿಂ ಪ್ರಾಹ ಕೃತಾಂಜಲಿಃ ॥೨೫೦॥

ಎಂದಿನಿಂದ ನಾನು ಇದನ್ನು ಪಾರಾಯಣಮಾಡಲಾರಂಭಿಸಿದೆನೋ, ಅಂದಿನಿಂದ ನನಗೆ ಸಕಲ ದುಃಖಗಳೂ ಮಾಯವಾಗಿ ಹೋಗಿವೆ. ನಾನು ಅತ್ಯಂತ ಸುಖಿಯಾಗಿರುವೆನು. ॥೨೪೪-೨೪೫॥

ಹಿಂದೆ ವಿಷ್ಣುವು ಮುರಾಸುರನನ್ನು ಕೊಲ್ಲಲು ಅಸಮರ್ಥನಾಗಿ ಜಯಪ್ರದವಾದ ಮಂತ್ರವು ಯಾವುದಿದೆಯೆಂದು ನನ್ನನ್ನು ಪ್ರಶ್ನಿಸಲು, ಆಗ ನಾನು ಈ ರುದ್ರಕವಚವನ್ನು ವಿಷ್ಣುವಿಗೆ ಉಪದೇಶಿಸಿದೆನು. ಇದನ್ನು ಜಪಿಸಿ, ವಿಷ್ಣುವು ಶತ್ರುನಿಗ್ರಹಾರ್ಥವಾಗಿ ಪ್ರಯಾಣಮಾಡಿದನು. ॥೨೪೬-೨೪೭॥

ಆಗಲೇ ವಿಷ್ಣುವು ಈ ಕವಚದ ಪ್ರಭಾವದಿಂದ ಜಯಶಾಲಿಯಾದನು. ಇದನ್ನೇ ಶಿವಸಂಬಂಧವಾದ ಅಘೋರವಜ್ರಕವಚವೆನ್ನುವರು. ಈ ಕವಚದಿಂದಲೇ ಅವನು ವಜ್ರಕವಚಧಾರಿಯಂತಾಗಿ, ಶತ್ರುಪಕ್ಷದಿಂದ ಯಾವ ವೇದನೆಯನ್ನೂ ಪಡೆಯಲಿಲ್ಲ. ಒಡನೆಯೇ ಅನಾಯಾಸವಾಗಿ ಶತ್ರುವನ್ನು ಸಂಹರಿಸಿ ವಿಷ್ಣುವು ಹಿಮಾಲಯಕ್ಕೆ ತೆರಳಿದನು. ಅಲ್ಲಿಗೆ ಕಣ್ವಮಹರ್ಷಿಯು

॥ ಕಣ್ವ ಉವಾಚ ॥

ಸಂಸಾರತಾಪಸಂತಪ್ತಂ ಮಮ ಚಿತ್ತಮಧೋಕ್ಷರೇ ।
ಕಥಂ ಸಂಸಾರಸಂತಾಪನಿಚ್ಛಿತ್ತಿಃ ಸ್ಯಾದ್ವದಸ್ವ ಮೇ ॥೨೫೧॥

॥ ವಿಷ್ಣುರುವಾಚ ॥

ಸಂಸಾರಸಾಗರೇ ಘೋರೇ ನಿಮಗ್ನಾನಾಂ ಪ್ರವರ್ತಿನಾಂ ।
ಅಪಾರಕರುಣಾಸಿಂಧುಃ ಸಾಂಬ ಏವಾವಲಂಬನಂ ॥೨೫೨॥

ಶಿವಮೇವ ಭಜಸ್ವ ಸಾವಧಾನಂ ಸ ತು ಸಂಸಾರಹರಃ ಪುರಾ ಪುರಾರಿಂ ।
ಬಹವಸ್ಸಮುಪಾಸ್ಯ ಮುಕ್ತಿಮಾಪುಸ್ತ್ರಿಪುರಾರಿರ್ನಿಜಭಕ್ತಮುಕ್ತಿಹೇತುಃ ॥೨೫೩॥

ನವಬಿಲ್ವದಳೈರಘಾಂತಕಂ
ರುಜ ಕಾಲಾಂತಕಮರ್ಚಯಿಷ್ಯಸಿ ।

ಹೋಗಿ ಮಹಾವಿಷ್ಣುವನ್ನು ಕುರಿತು ಅಂಜಲಿಬದ್ಧನಾಗಿ ನಿಂತು ಹೀಗೆ ಪ್ರಾರ್ಥಿಸಿದನು. ॥೨೪೮-೨೪೯-೨೫೦॥

“ಮಹಾವಿಷ್ಣುವೇ, ನನ್ನ ಈ ಮನಸ್ಸು ಸಂಸಾರತಾಪದಿಂದ ಬಳಲಿ ಹೋಗಿದೆ. ಈ ದುಃಖವು ಪರಿಹಾರವಾಗುವ ಮಾರ್ಗವನ್ನು ವಿವರಿಸಿ ಹೇಳುವವನಾಗು” ಎನ್ನಲು ಆಗ ಮಹಾವಿಷ್ಣುವು ಹೀಗೆಂದನು. ಕಣ್ವಋಷಿಯೇ, ಘೋರತರವಾದ ಸಂಸಾರಸಾಗರದಲ್ಲಿ ಮುಳುಗಿ, ದಿಕ್ಕುಕಾಣದೆ ಸನ್ಮಾರ್ಗದಲ್ಲಿ ನಡೆಯುವವರಿಗೆ ದಯಾನಿಧಿಯಾದ ಶಂಕರನೇ ಆಶ್ರಯದಾತನು. ॥೨೫೧-೨೫೨॥

ಆದ್ದರಿಂದ ನೀನು ಸಾವಧಾನಚಿತ್ತನಾಗಿ ಶಂಕರನನ್ನೇ ಪೂಜಿಸು. ಹಿಂದೆ ಅನೇಕರು ಭಗವಂತನಾದ ತ್ರಿಪುರಾರಿಯನ್ನು ಭಜಿಸಿ ಮುಕ್ತಿಯನ್ನು ಪಡೆದಿರುವರು. ಏಕೆಂದರೆ ಪರಶಿವನು ತನ್ನ ಭಕ್ತರಿಗೆ ಮುಕ್ತಿಪ್ರದನಲ್ಲವೆ? ॥೨೫೩॥

ಪಾಪನಾಶಕನೂ, ಯಮನಿಗೆ ಯಮನಂತಿರುವವನೂ, ಭಕ್ತರ ಕಷ್ಟಗಳನ್ನು ಪರಿಹರಿಸುವವನೂ, ಅಂಧಕಾಸುರನಾಶಕನೂ, ಶಿವಲಿಂಗಸ್ವರೂಪಿಯೂ ಆದ

ವಿಪದಂತಕಮಂಧಕಾಂತಕಂ
ಶಿವಲಿಂಗಾತ್ಮಕಮಾಶು ಸಂತತಂ ॥೨೫೪॥

ಬಹುಪಾಪವಿಮೋಚಕಂ ಪ್ರಭುಂ
ಯದಿ ಕಾಲಾಂತಕಮರ್ಚಯಿಷ್ಯಸಿ ।
ಸತತಂ ನಿಯತಂ ತದಾ ಭವಾನ್
ವಿಷಸಂಸಾರವಶಂ ನ ಯಾಸ್ಯತಿ ॥೨೫೫॥

ಭಜ ಭರ್ಗಮನರ್ಗಲಂ ಪ್ರಭುಂ
ಭಗವಂತಂ ಭಗನೇತ್ರಹಾರಿಣಂ ।
ಭವಭೀಮಮಯಂ ತದಾ ಮುನೇ
ನ ಭವಂತಂ ಪ್ರತಿಭಾವಯಿಷ್ಯತಿ ॥೨೫೬॥

ಭಸಿತಾಭರಣೋ ಭಜ ಪ್ರಭುಂ
ಭವಭೀತಿರ್ನ ಭವಿಷ್ಯತಿ ತ್ವಯಿ ।
ಶುಭದಸ್ತ್ವಯಿ ಶಂಭುರವ್ಯಯೋ
ನಿಯತಂ ತಿಷ್ಠತಿ ತಂ ಸಮರ್ಚಯ ॥೨೫೭॥

ಪರಶಿವನನ್ನು ತಪ್ಪದೆ ಕೋಮಲವಾದ ಬಿಲ್ವದಳಗಳಿಂದ ಅರ್ಚಿಸುವವನಾಗು. ೨೫೪

ಸಕಲದ ಪಾಪವನ್ನೂ ನಾಶಗೊಳಿಸುವ ಕಾಲಾಂತಕನಾದ ಶಂಕರನನ್ನು ನೀನು ಭಕ್ತಿಯಿಂದ ಅರ್ಚಿಸಿದ ಪಕ್ಷದಲ್ಲಿ ನೀನು ಎಂದಿಗೂ ವಿಷಮಯವಾದ ಸಂಸಾರ ಪಾಶಕ್ಕೆ ವಶನಾಗಲಾರೆ. ೨೫೫

ಲೋಕರಕ್ಷಕನೂ, ಪ್ರತಿಬಂಧಕ ವಿರಹಿತನೂ, ಜಗತ್ಪ್ರಭುವೂ, ಷಡ್ಗುಣೈಶ್ವರ್ಯ ಸಂಪನ್ನನೂ, ಭಗದೇವತೆಯ ನೇತ್ರವನ್ನು ಅಪಹರಿಸಿದವನೂ (ದಕ್ಷಬ್ರಹ್ಮನ ಯಾಗದಲ್ಲಿ) ಸಂಸಾರದುಃಖವನ್ನು ಧ್ವಂಸಮಾಡುವವನೂ ಆದ ಪರಶಿವನನ್ನು ನೀನು ಅರ್ಚಿಸಿದರೆ ನಿನ್ನನ್ನು ಯಾರೂ ಎದುರಿಸಲಾರರು. ॥೨೫೬॥

ನೀನು ವಿಭೂತಿಧಾರಣೆಮಾಡಿ ಪರಶಿವನನ್ನು ಪೂಜಿಸು ನಿನಗೆ ಈ ಸಂಸಾರ

ನವಬಿಲ್ವಪಲಾಶಕಾಶಪುಷ್ಪೈಃ
ಕರವೀರೈಃ ಕನಕಾಹ್ವಯಪ್ರಸೂನೈಃ ।
ಭಸಿತೇನ ಚ ಭಾಲಲೋಚನಂ
ಶಿವಲಿಂಗೇ ಸತತಂ ಸಮರ್ಚಯ ॥೨೫೮॥

ಸಕೃದಸ್ಯಮಲ್ಯೈಃ ಸ ಬಿಲ್ವಪಲ್ಲವೈಃ
ಕುಶದತ್ತೂರಪಲಾಶಕಾಶಪುಷ್ಪೈಃ ।
ಸ ಜಲೈರಭಿಪೂಜ್ಯ ಪಾರ್ವತೀಶಂ
ಸಕಲಾಪಜ್ಜಲಧಿಂ ತರಂತಿ ಧೀರಾಃ ॥೨೫೯॥

ಹೃದಿ ತಿಷ್ಠತಿ ಶೈಲಜಾಪದೌ
ಶಿವಲಿಂಗೇ ಚ ನಿರಂತರಂ ಶಿವೇ ।
ನ ಯಜಂತಿ ಶಿವಂ ನರಾಧಮಾ
ನರಕಾವಾಸರತಾ ನಿರಂತರಂ ॥೨೬೦॥

ತಾಪವು ನಿವೃತ್ತಿಯಾಗುವುದು. ಪರಶಿವನು ಸರ್ವದಾ ಮಂಗಳಕರನು, ನಾಶರಹಿತನು. ಅಂತಹವನನ್ನು ನೀನು ಸರ್ವದಾ ಪೂಜಿಸು. ||೨೫೭||

ಬಿಲ್ವಪತ್ರೆ, ಮುತ್ತುಗ, ಕಾಶಪುಷ್ಪ, ಕಣಗಲು, ಕನಕ ಪುಷ್ಪ (ಸಂಪಿಗೆ ಹೂ) ವಿಭೂತಿ, ಮುಂತಾದ ಪೂಜಾದ್ರವ್ಯಗಳಿಂದ ಫಾಲಾಕ್ಷನಾದ ಶಂಕರನನ್ನು ಶಿವಲಿಂಗದಲ್ಲಿ ಸರ್ವದಾ ಪೂಜಿಸು. ||೨೫೮||

ಪರಿಶುದ್ಧವಾದ, ಬಿಲ್ವಪಲ್ಲವ, ದರ್ಭೆ, ದತ್ತೂರಿ, ಮುತ್ತುಗ, ಕಾಶಪುಷ್ಪ ಇವುಗಳನ್ನು ತಂದು, ಶುದ್ಧೋದಕದಿಂದ ಶಿವಲಿಂಗವನ್ನು ಅಭಿಷೇಕಮಾಡಿ ಪೂಜಿಸಿದವರು ಆಪತ್ಸಮುದ್ರವನ್ನು ದಾಟಿ ಮುಕ್ತಿಯನ್ನು ಹೊಂದುವರು. ||೨೫೯||

ಪಾರ್ವತೀಪತಿಯಾದ ಶಂಕರನು ಎಲ್ಲರ ಹೃದಯದಲ್ಲಿಯೂ ಅಡಗಿರುವನು. ಮತ್ತು ಶಿವಲಿಂಗದಲ್ಲಿ ಸಾನ್ನಿಧ್ಯವನ್ನಿಟ್ಟಿರುವನು. ಇಂತಹ ಪರಶಿವನನ್ನು ಪೂಜಿಸದ ಮಾನವರು ನಿರಂತರವೂ ನರಕವಾಸವನ್ನು ಹೊಂದುವರು. ||೨೬೦||

ವಿದಧಾತಿ ಪರಂ ಪದಂ ಶಿವಃ
ಕುಶಪತ್ರೈರಪಿ ಸಾಧುಪೂಜಿತಃ ।
ತಮುಪಾಸ್ಯ ಮಹೇಶ್ವರಂ ಭ್ರಮಾ
ತ್ಪರಮನ್ಯಂ ಸಮುಪಾಸತೇ ಜನಃ ॥೨೬೦॥

ಭಗವಂತಮುಮಾಪತಿಂ ಭವಂ
ಭಜನೀಯಂ ನ ಭಜಂತಿ ಯೇ ಜನಾಃ ।
ನರಕೇಷು ಪತಂತಿ ತೇ ಜನಾಃ
ಸತತಂ ಸತ್ಯಮುದೀರ್ಯತೇ ಮಯಾ ॥೨೬೧॥

ದಿವಿ ಯೇ ನಿವಸಂತಿ ಭೂತಲೇ
ಗ್ರಸಿತಾಃ ಸಂಸೃತಿಘೋರದಂದಶೂಕೈಃ ।
ದ್ವಿಜ ತೇ ಶಿವಪೂಜನೌಷಧಂ
ಸಮವಾಪ್ಯಾಮೃತತಾಂ ಪ್ರಯಾಂತಿ ಸತ್ಯಂ ॥೨೬೨॥

ಸಕೃದಪ್ಯತಿಭಕ್ತಿಪೂರ್ವಕಂ
ಶಿವಮೇಕಂ ಪ್ರಣಮಂತಿ ಯೇ ಜನಾಃ ।

ಶಂಕರನು ಕೇವಲ ದರ್ಭೆ, ಪತ್ರೆ ಇವುಗಳಿಂದ ಪೂಜಿತನಾಗಿ, ಭಕ್ತಿಯಿಂದ ಪೂಜಿಸಿದ ಭಕ್ತನಿಗೆ ಶಾಶ್ವತವಾದ ಮುಕ್ತಿಯನ್ನು ಅನುಗ್ರಹಿಸುವನು. ಇಂತಹ ಮಹಾದೇವಾರ್ಚನೆಯನ್ನು ಬಿಟ್ಟು ಜನರು ಮೂರ್ಖತನದಿಂದ ದೇವತಾಂತರವನ್ನು ಪೂಜಿಸುವರು. ॥೨೬೦॥

ಸಕಲರಿಂದಲೂ ಪೂಜ್ಯನಾದ, ಮತ್ತು ಉಮಾಪತಿಯಾದ ಪರಶಿವನನ್ನು ಯಾರು ಭಜಿಸುವುದಿಲ್ಲವೋ, ಅಂತಹವರು ನಿಜವಾಗಿಯೂ ನರಕಭಾಗಿಗಳಾಗುವರು. ಇದು ಸತ್ಯವೆಂದು ನಂಬು. ॥೨೬೧॥

ಭೂಲೋಕದಲ್ಲಿ ಯಾರು ಸಂಸಾರವೆಂಬ ಘೋರವಾದ ಸರ್ಪಗಳಿಂದ ಕಚ್ಚಲ್ಪಟ್ಟಿರುವರೋ, ಅಂತಹವರು ಶಿವಪೂಜೆಯೆಂಬ ಔಷಧವನ್ನು ಪಾನಮಾಡಿದರೆ, ದೇವತ್ವವನ್ನು ಹೊಂದಿ ಸುಖಿಗಳೆನಿಸುವರು. ಇದು ನಿಜ ॥೨೬೨॥

ಯಾರು ಒಂದುಸಾರಿಯಾದರೂ ಮಂಗಳಸ್ವರೂಪನಾದ ಶಂಕರನನ್ನು ಭಕ್ತಿ

ಅಮರೈರಖಿಲೈಶ್ಚ ತೇ ನತಾಃ
ಸತತಂ ಸತ್ಯಮಿದಂ ಧ್ರುವಂ ಧ್ರುವಂ ॥೨೬೪॥

ಕೃತಸರ್ವಮಖೋಽಪಿ ಜನ್ಮ ಧತ್ತೇ
ಕೃತವಿಶ್ವೇಶಪದಾಂಬುಜಪ್ರಣಾಮಃ ।
ನ ಪುನರ್ಜನಿಭಾಗ್ಭವಾಮಿ ಸತ್ಯಂ
ಭುಜಮುದ್ಧೃತ್ಯ ನ ಸಂಶಯಂ ಕುರುಷ್ವ ॥೨೬೫॥

ಅಕೃತೇಶಪದಾಂಬುಜಪ್ರಣಾಮಾ
ನರಕಾವಾಸಮವಾಪ್ಯ ದುಃಖಭೋಗಂ ।
ಸಮುಪಾಸ್ಯ ಮುಹುರ್ಮುಹುರ್ನಿವೃತ್ತಾ
ನ ಭವಂತಿ ಪ್ರಲಯೇಽಪಿ ಸತ್ಯಮೇವ ॥೨೬೬॥

ನಿಮಿಧಾನಿತಪಾತಕಾಶ್ರಯಾ ಯೇ
ನ ನಮಂತಿ ತ್ರಿಪುರಾರಿಮಾದರೇಣ ।
ಅತ ಏವ ಯಮಾಲಯಾಂತರೇ
ನಿವಸಂತ್ಯಸ್ಯಹಮಾಪ್ತದುಃಖಭೋಗಾಃ ॥೨೬೭॥

ಪೂರ್ವಕವಾಗಿ ವಂದಿಸುವರೋ, ಅಂತಹವನನ್ನು ಸಕಲ ದೇವತೆಗಳೂ ವಂದಿಸುವರು. ಇದು ನಿಜ. ಇದರಲ್ಲಿ ಸ್ವಲ್ಪವೂ ಸುಳ್ಳಿಲ್ಲ. ॥೨೬೪॥

ಮಾನವನು ಎಷ್ಟೇ ಯಜ್ಞಾದಿಕರ್ಮಗಳನ್ನು ಆಚರಿಸಿದರೂ ಆತನಿಗೆ ಪುನರ್ಜನ್ಮ ತಪ್ಪುವುದಿಲ್ಲ. ವಿಶ್ವೇಶ್ವರನ ಪಾದಕಮಲವನ್ನು ಭಕ್ತಿಯಿಂದ ನಮಸ್ಕರಿಸಿದವನಿಗೆ ಮಾತ್ರ ಸತ್ಯವಾಗಿಯೂ ಪುನಃ ಜನ್ಮಪ್ರಾಪ್ತಿಯಿರುವುದಿಲ್ಲ ಇದು ನಿಜವೆಂದು ಬಾಹುವನ್ನೆತ್ತಿ ಪ್ರಮಾಣಮಾಡುವೆನು. ॥೨೬೫॥

ಈಶ್ವರ ಪದಾಂಬುಜಕ್ಕೆ ಎರಗದಿದ್ದವರಿಗೆ ನರಕವಾಸವೂ, ದುಃಖಾನುಭವವೂ ತಪ್ಪಲಾರದು. ಅಂತಹವರು ಪ್ರಲಯಕಾಲಪರ್ಯಂತ ನರಕಾನುಭವವನ್ನು ಪಡೆಯುತ್ತಾ ಜನ್ಮತಾಳುತ್ತಿರುವರು. ॥೨೬೬॥

ಅನೇಕಪಾಪ ಪಾಪಕಾರ್ಯಗಳಿಂದ ಪರಮಪಾಪಿಗಳೆನಿಸಿದವರು ಪರಶಿವನನ್ನು ಒಂದುಸಾರಿಯೂ ನಮಸ್ಕರಿಸದೆ, ಯಮಾಲಯದಲ್ಲಿ ಸರ್ವದಾ ಸಕಲ ದುಃಖಗಳನ್ನೂ ಅನುಭವಿಸುತ್ತಾ ನೆಲಸಿರುವರು. ॥೨೬೭॥

ಪ್ರಣಮಂತ್ಯಮರಾಸ್ತ್ರಿಲೋಚನಂ
ಮುನಯಸ್ಸಿದ್ಧಗಣಾಶ್ಚ ಸಂತತಂ ।
ನಿಗಮಾಶ್ಚ ನಮಂತಿ ತಂ ತತಃ
ಪ್ರಣಮಸ್ವ ಪ್ರಣಮಾಮ್ಯಹಂ ತಮೀಶಂ ॥೨೬೮॥

ಸಕಲಾಮರವಂದ್ಯಪಾದಪದ್ಮಂ
ವೃಷಪದ್ಮಂ ತ್ರಿದಶೈಕಭಾಗಧೇಯಂ ।
ಭಜ ಸಂತತಮದ್ರಿಜಾಸಹಾಯಂ
ನಿರಪಾಯಂ ನಿರಪದ್ಯಮುಕ್ತ್ಯುಪಾಯಂ ॥೨೬೯॥

ಯಜ ಕೋಮಲಬಿಲ್ವಪಲ್ಲವೈ
ರನುವಾರಂ ಭುಜಗಾಧಿಪೈಕಹಾರಂ ।
ಸಕಲಾಘಹರಂ ನಿರಸ್ತವೀರಂ
ಹರಮಾರಾಧ್ಯತರಂ ಪರಂ ಗಿರಾಂ ॥೨೭೦॥

ದೇವತೆಗಳೂ, ಮುನಿಗಳೂ, ಸಿದ್ಧರೂ, ಸಕಲ ವೇದಗಳೂ, ತ್ರಿಲೋಚನನೆನಿಸಿದ ಮಹಾದೇವನಿಗೆ ಸರ್ವದಾ ನಮಸ್ಕರಿಸುತ್ತಿರುವರು. ಅಂತಹ ಪರಮಪೂಜ್ಯನನ್ನು ನೀನು ತಪ್ಪದೆ ಪೂಜಿಸು. ನಾನೂ ಸಹ ಅವನನ್ನೇ ಪೂಜಿಸುತ್ತಾ ಅವನ ಅನುಗ್ರಹಕ್ಕೆ ಪಾತ್ರನಾಗಬಯಸುವೆನು. ॥೨೬೮॥

ಸಕಲ ದೇವತೆಗಳಿಂದಲೂ ಪೂಜಿತವಾದ ಪಾದಪದ್ಮವುಳ್ಳವನೂ, ಸಂಪದ್ವಿಶಿಷ್ಟನೂ, ದೇವತೆಗಳಿಗೆ ನಿಧಿಯಂತಿರುವವನೂ, ಪಾರ್ವತೀರಮಣನೂ ಆದ ಮಹಾದೇವನು ಸರ್ವದಾ ಅಪಾಯಾದಿಗಳಿಂದ ದೂರನಾಗಿರುವನು. ಮುಕ್ತಿಪ್ರಾಪ್ತಿಗೆ ಮೂಲಕಾರಣನಾಗಿರುವನು. ಇಂತಹ ಮಹಾದೇವನನ್ನು ಪೂಜಿಸು. ॥೨೬೯॥

ಸರ್ಪಭೂಷಣನೂ, ಪಾಪವಿನಾಶಕನೂ, ವೀರಾಧಿವೀರನೂ, ಪೂಜ್ಯತಮನೂ, ಎನಿಸಿದ ಪಾರ್ವತೀಪತಿಯನ್ನು ಕೋಮಲವಾದ ಬಿಲ್ವಪಲ್ಲವಗಳಿಂದ ಸರ್ವದಾ ನೀನು ಪೂಜಿಸುತ್ತಿರು. ॥೨೭೦॥

ಭಜತಾಮಭಯಪ್ರದಂ ಮಹೇಶಂ
ಭಜ ಮೃತ್ಯುಂಜಯಮಾದರೇಣ ನಿತ್ಯಂ ।
ತಮುಪಾಸ್ಯ ನ ಸಂವಸ ದ್ವಿಜ ತ್ವಂ
ಹಿತಮೇತತ್ಸತ್ಯಮುದೀರಿತಂ ಮಯಾ ತೇ ॥೨೭೦॥

ದ್ವಿಜ ತೇ ಶಿವ ಏವ ದೈವತಂ
ನ ಶಿವಾನ್ಯಸ್ತವ ದೈವತಂ ಸುರೇಡ್ಯಂ ।
ಅತ ಏವ ನಿರಂತರಂ ಮಹೇಶಂ
ಭಜ ಫಾಲಸ್ಫುರದುಜ್ಜ್ವಲತ್ರಿಪುಂಡ್ರಃ ॥೨೭೨॥

ದ್ವಿಜದೈವತದೈವತಂ ಮಹೇಶಂ
ಯದಿ ನಾರಾಧಯಸಿ ಪ್ರಕಾಮಮೀಡ್ಯಂ ।
ದ್ವಿಜತೈವ ತದಾ ನ ಸಂಗತಾ
ತವ ಸತ್ಯಂ ಪ್ರವದಾಮಿ ನಾನ್ಯಥಾ ॥೨೭೩॥

ತನ್ನ ಭಕ್ತರಿಗೆ ಅಭಯಪ್ರದನಾದವನು ಮೃತ್ಯುಂಜಯನು. ಅಂತಹವನನ್ನು ನೀನು ತಪ್ಪದೆ ಪೂಜಿಸು. ಎಲೈ ಬ್ರಾಹ್ಮಣನೇ, ನಿನಗೆ ಹಿತವಾದ ಒಂದು ಮಾತನ್ನು ಹೇಳುವೆನು. ತಪ್ಪದೆ ಪರಶಿವನನ್ನು ಸರ್ವದಾ ಪೂಜಿಸುತ್ತಿರು. ॥೨೭೦॥

ಎಲೈ ಓ ದ್ವಿಜನೇ, ನಿನಗೆ ಈಶ್ವರನೇ ಮುಖ್ಯದೇವರು. ದೇವತೆಗಳಲ್ಲಿ ಶಿವನನ್ನು ಬಿಟ್ಟರೆ ಮತ್ತಾರೂ ನಿನಗೆ ಆರಾಧ್ಯದೇವತೆಯಾಗಲಾರರು. ಆದ್ದರಿಂದ, ನೀನು ಸರ್ವದಾ ಭಸ್ಮತ್ರಿಪುಂಡ್ರವನ್ನು ಧರಿಸಿ ಮಹಾದೇವನನ್ನೇ ಪೂಜಿಸುತ್ತಿರು. ॥೨೭೨॥

ಎಲೈ ದ್ವಿಜನೇ, ದ್ವಿಜರಿಗೆ ಮುಖ್ಯ ಆರಾಧ್ಯದೇವತೆಯಾದ ಶಂಕರನನ್ನು ನೀನು ಪೂಜಿಸದಿದ್ದರೆ, ನಿನ್ನಲ್ಲಿ ಆ ದ್ವಿಜತ್ವವೇ ಉಳಿಯಲಾರದು. ಬ್ರಾಹ್ಮಣ ಧರ್ಮವೇ ನಿನ್ನಲ್ಲಿ ಮಾಯವಾದೀತು ಇದನ್ನು ನಿಜವೆಂದು ನಾನು ನಂಬುತ್ತೇನೆ. ॥೨೭೩॥

ಶ್ರುತಿಬೋಧಿತಭಸ್ಮಧಾರಣಂ
ವಿಹಿತಂ ಯಚ್ಛಿವಲಿಂಗಪೂಜನಂ ।
ತದಿದಂ ದ್ವಯಮಾಸ್ತಿಕೈರ್ದ್ವಿಜೈ
ರ್ನ ಪರಿತ್ಯಾಜ್ಯಮಿತಿ ಶ್ರುತಿಃ ಸ್ವಯಂ ॥೨೭೪॥

ದ್ವಿಜ ಕೇವಲ ಭಸ್ಮಧಾರಣಂ
ಸತತಂ ಕೇವಲಲಿಂಗಪೂಜನಂ ।
ಶ್ರುತಿಬೋಧಿತಮಿತ್ಯವೈಹಿ ತಸ್ಮಾ
ತ್ತದುಪಾಸ್ಯಂ ದ್ವಯಮುಸ್ಯನನ್ಯಭಾಜಾ ॥೨೭೫॥

ಶಿವಮೇವ ಯಜಸ್ವ ಸಾರ್ವಕಾಲಂ
ಶಿವಭಿನ್ನಂ ನ ಯಜಸ್ವ ಮೋಹತೋಽಪಿ ।
ಶಿವಭಿನ್ನಸಮರ್ಚನಂ ವ್ಯರ್ಥಮೇವೇ
ತ್ಯನುವಾರಂ ಕುರು ನಿಶ್ಚಯಂ ದ್ವಿಜತ್ವಂ ॥೨೭೬॥

ವೇದೋಕ್ತವಾದ ಭಸ್ಮಧಾರಣೆ, ಶಿವಲಿಂಗಪೂಜಾ ಈ ಎರಡು ಕರ್ಮಗಳೂ ಆಸ್ತಿಕರಾದ ದ್ವಿಜರಿಗೆ ವಿಹಿತವಾಗಿರುವುವು. ಆದ್ದರಿಂದಲೇ ಈ ಕರ್ಮದ್ವಯಗಳನ್ನು ಎಂದೂ ಬಿಡಕೂಡದೆಂದು ವೇದವು ಸಾರುತ್ತಿರುವುದು. ॥೨೭೪॥

ಎಲೈ ಬ್ರಾಹ್ಮಣನೇ, ಭಸ್ಮಧಾರಣೆ, ಶಿವಲಿಂಗಪೂಜೆ, ಇವೆರಡೂ ಬ್ರಾಹ್ಮಣನಿಗೆ ಶ್ರುತಿಬೋಧಿತವಾದುವುಗಳೆಂದು ತಿಳಿ. ಆದ್ದರಿಂದ ದೇವತಾಂತರಗಳ ಆರಾಧನೆಯನ್ನು ಬಿಟ್ಟು ನಿಜವಾಗಿಯೂ ಆಸ್ತಿಕನಾದವನು ಸರ್ವದಾ ಇವೆರಡನ್ನೇ ಆಶ್ರಯಿಸಬೇಕು. ॥೨೭೫॥

ನೀನು ಯಾವಾಗಲೂ ಈಶ್ವರನನ್ನೇ ಆರಾಧಿಸು. ಶಿವಭಿನ್ನರಾದ ಯಾರನ್ನೂ ಆಕಸ್ಮಾತ್ತಾಗಿಯೂ ಪೂಜಿಸಬೇಡ. ಶಿವನನ್ನು ಬಿಟ್ಟು ಉಳಿದ ದೇವತೆಗಳ ಆರಾಧನೆಯು ವ್ಯರ್ಥವೆಂದೇ ಭಾವಿಸಿ, ನಿಜವಾದ ದ್ವಿಜತ್ವವನ್ನು ಪಡೆಯುವವನಾಗು. ॥೨೭೬॥

ಶಿವಶಂಕರ ಚಂದ್ರಶೇಖರೇ
ತ್ಯತಿಭಕ್ತ್ಯಾ ವದ ಸಂತತಂ ಮುದಾ ಚ ।
ಶಿವನಾಮಜಪಂ ವಿಹಾಯ ನಾನ್ಯ
ಜ್ಜಪ ಮೋಹಾದಪಿ ನಾಮ ಸರ್ವಥೈವ ॥೨೭೭॥

ಶಿವನಾಮ ಸುಧೈವ ವಿಪ್ರ ಪೇಯಾ
ಸತತಂ ಮುಕ್ತಿಮಭೀಪ್ಸಿತಾ ದ್ವಿಜೇನ ।
ಶಿವನಾಮಸುಧಾಪರಾ ತು ಜಿಹ್ವಾ
ದ್ವಿಜ ನಾನಾವಿಧಭೂರಿಪುಣ್ಯಲಭ್ಯಾ ॥೨೭೮॥

ಶಿವನಾಮಸುಧಾರತೈವ ಜಿಹ್ವಾ
ಮಹತಾಮೇವ ಭವತ್ಯತೋಽನುವಾರಂ ।
ಶಿವಶಂಕರ ಚಂದ್ರಶೇಖರ
ತ್ರಿಪುರಾರೇತಿ ಜಪಸ್ವ ಸಾವಧಾನಂ ॥೨೭೯॥

ಶಿವ, ಶಂಕರ, ಚಂದ್ರಶೇಖರ ಮುಂತಾದ ಶಿವನಾಮಗಳನ್ನೇ ಪ್ರೀತಿಯಿಂದ ಸದಾ ಜಪಿಸು. ಈ ಶಿವನಾಮಗಳನ್ನು ಬಿಟ್ಟು ಉಳಿದ ಯಾರ ಹೆಸರುಗಳನ್ನೇ ಆಗಲಿ ಎಂದೂ ಜಪಿಸಬೇಡ. ॥೨೭೭॥

ಎಲೈ ವಿಪ್ರನೇ, ಶಿವನಾಮವೇ ಒಂದು ಅಮೃತ. ಮುಕ್ತಿಯನ್ನು ಬಯಸುವವರು ತಪ್ಪದೆ ಅದನ್ನೇ ಪಾನಮಾಡಬೇಕು. ಆ ಅಮೃತಪಾನದಲ್ಲಿ ಆಸಕ್ತಿ ಹೊಂದಿದ ನಾಲಿಗೆಯೇ ಸುಕೃತಶಾಲಿಯೆನಿಸುವುದು. ॥೨೭೮॥

ಆದರೆ ಮಹಾತ್ಮರೆನಿಸಿದವರ ನಾಲಿಗೆಯಲ್ಲಿ ಮಾತ್ರ ಶಿವನಾಮಾಮೃತವು ಓಡಾಡುತ್ತಿರುವುದು. ಇತರರಿಗೆ ಅದರಲ್ಲಿ ಆಸಕ್ತಿಯುದಯಿಸಲಾರದು ಆದ್ದರಿಂದ ಎಲೈ ಬ್ರಾಹ್ಮಣನೇ, ನೀನು ಸರ್ವದಾ ಶಿವ, ಶಂಕರ, ಚಂದ್ರಶೇಖರ, ತ್ರಿಪುರಾರೇ ಎಂಬ ಶಿವನಾಮಗಳನ್ನೇ ಜಪಿಸುತ್ತಿರು. ॥೨೭೯॥

ಶಿವನಾಮ ಸುಧಾಂ ಮುಹುರ್ಮುಹುಃ
ಪಿಬ ಸಾನಂದಮನಂತರಾಯಮಾಶು ।
ಶಿವನಾಮಸುಧೈವ ಮುಕ್ತಿಹೇತು
ರ್ಮುನಿವೃಂದೈರಖಿಲೈಶ್ಚ ಸೇವ್ಯಮಾನಾ ॥೨೮೦॥

ಅಮೃತಾಮೃತಪಾರ್ಯಮುಕ್ತಿಬೀಜಂ
ಶಿವನಾಮಾಮೃತಮಿತ್ಯಮೈಮಿ ನೂನಂ ।
ಅತ ಏವ ಮುಹುರ್ಮುಹುರ್ಮಯಾ
ಶಿವನಾಮಾಮೃತಮೇವ ಪೀಯತೇ ॥೨೮೧॥

ಶಿವನಾಮಸುಧಾಂ ನಿಪೀಯ ಭಕ್ತ್ಯಾ
ಸುಧಿಯಸ್ಸ್ವಾದು ಸುಧಾಂ ಚ ನಾದ್ರಿಯಂತೇ ।
ದಿವಿ ಪೀತಸುಧಾಃ ಪ್ರಯಾಂತಿ ಗರ್ಭಂ
ಶಿವನಾಮಾಮೃತಪಾಃ ಪ್ರಯಾಂತಿ ಮುಕ್ತಿಂ ॥೨೮೨॥

ಮುಕ್ತಿಹೇತುವಾದ ಶಿವನಾಮಾಮೃತವನ್ನು ಆನಂದದಿಂದ ಅಡ್ಡಿಆತಂಕಗಳಿಲ್ಲದಂತೆ ಜಪಿಸುತ್ತಿರು. ಮುಕ್ತಿಪ್ರದವಾದ ಇದನ್ನೇ ಅನೇಕ ಋಷಿವರ್ಗವು ಅನುಸರಿಸಿ ಮೋಕ್ಷವನ್ನು ಪಡೆದಿರುವುದು. ಇದನ್ನು ನೀನು ಮರೆಯಬೇಡ.॥೨೮೦॥

ಅಮೃತಕ್ಕೂ ಅಮೃತತ್ವವನ್ನು ಕೊಡುವುದೂ, ಮುಕ್ತಿಗೆ ಮೂಲಕಾರಣವಾಗಿರುವುದೂ, ಶಿವನಾಮವೆಂದೇ ನನ್ನ ಭಾವನೆ. ಆದ್ದರಿಂದಲೇ ನಾನು ಸರ್ವದಾ ತಪ್ಪದೆ ಶಿವನಾಮಾಮೃತವನ್ನೇ ಪಾನಮಾಡುತ್ತಿರುವೆನು. ॥೨೮೧॥

ಶಿವನಾಮಗಳೆಂಬ ಅಮೃತವನ್ನು ಕುಡಿದವರು, ನಿಜವಾಗಿರುವ ಅಮೃತಪಾನದಲ್ಲಿ ಆಸಕ್ತಿಯನ್ನು ತೋರಿಸಲಾರರು. ಏಕೆಂದರೆ ಅಮೃತಪಾನಮಾಡಿದ ದೇವತೆಗಳಿಗೂ ಮತ್ತೆ ಜನ್ಮತಾಳುವ ಕಷ್ಟವು ತಪ್ಪಲಿಲ್ಲ. ಶಿವನಾಮಾಮೃತಪಾನ ಮಾಡಿದವರಿಗೆ ಮಾತ್ರ ಪುನರ್ಜನ್ಮದ ವ್ಯಥೆಯೇ ಇರುವುದಿಲ್ಲ. ॥೨೮೨॥

ಶಿವನಾಮಸುಧಾ ವಿನಿರ್ಮಿತಾ
ಗಿರಿಜೇಶೇನ ಪುರಾ ಕೃಪಾಲುನಾ ।
ದ್ವಿಜ ಸಾಕೃ(ತ) ಪುಣ್ಯಸಂಚಯೈ
ರ್ಮುಹುರತ್ಯಂತಮುದಾ ನಿಪೀಯತೇ ॥೨೮೩॥

ರಸಭಾಜನಭೋಜನೇ ನಿದಾನಂ
ರಸನಾ ಸ್ಯೈವ ಯಯಾ ಮುಹುಃ ಪ್ರಕಾಮಂ ।
ಶಿವನಾಮಸುಧಾ ನಿಪೀಯತೇ
ನಿಯಮೇನಾನ್ಯವಿಲಾಪನಂ ವಿಹಾಯ ॥೨೮೪॥

ಶಿವಮರ್ಚಿತಮನ್ವಹಂ ಪ್ರಸೂನೈ
ರ್ನವಬಿಲ್ವೈರಪಿ ಪಶ್ಯ ಸಾವಧಾನಂ ।
ಇದಮೇವ ಫಲಂ ಮತಂ ಯತೋಕ್ಣೋ
ರ್ವಿಲಸತ್ಪದ್ಮಪಲಾಶತುಲ್ಯಕಾಂತ್ಯೋಃ ॥೨೮೫॥

ಬ್ರಾಹ್ಮಣನೇ, ಕೃಪಾಪೂರ್ಣನಾದ ಪರಶಿವನು ಶಿವನಾಮವೆಂಬ ಅಮೃತವನ್ನು ಜನರ ಹಿತರಕ್ಷಣೆಗಾಗಿ ನಿರ್ಮಿಸಿರುವನು. ಆದರೆ ಆ ಅಮೃತವು ಪುಣ್ಯಶಾಲಿಗಳಿಗೆ ಮಾತ್ರ ದೊರಕುವುದೇ ಹೊರತು ಬೇರೆಯವರಿಗಲ್ಲ. ॥೨೮೩॥

ರುಚಿಕರವಾದ ಭೋಜನದ ಸವಿಯನ್ನು ತಿಳಿಯುವ ನಾಲಿಗೆಯು ಶಿವನಾಮಾಮೃತವನ್ನು ಪಾನಮಾಡಿದುದೇ ಆದರೆ, ಇತರ ಯಾವ ರಸದ್ರವ್ಯಗಳಲ್ಲಿಯೂ ಆಸೆಯನ್ನಿಡಲಾರದು. ಆದರಿಂದಲೇ ಅತಿಶಯವಾದ ಸುಖವನ್ನು ಅದು ಅನುಭವಿಸಬಲ್ಲುದು. ॥೨೮೪॥

ಬಿಲ್ವದಳಗಳಿಂದಲೂ, ಸುಗಂಧಮಯವಾದ ಪುಷ್ಪಗಳಿಂದಲೂ ಅರ್ಚಿತವಾದ ಶಿವಲಿಂಗವನ್ನು ದರ್ಶನಮಾಡುತ್ತಿರು. ಅರಳಿದ ಕಮಲಗಳಂತೆ, ಮುತ್ತುಗದ ಹೂವಿನಂತೆ, ಕಾಂತಿಯುಳ್ಳ ನಿನ್ನ ಕಣ್ಣುಗಳಿಗೆ ಇದೇ ಸರಿಯಾದ ಫಲವೆಂದು ಭಾವಿಸು. ॥೨೮೫॥

ನವಬಿಲ್ವದಳೈಸ್ಸಮರ್ಚಿತಂ
ಶಿವಲಿಂಗಂ ದ್ವಿಜ ಸಾಧು ಪಶ್ಯತಾಂ ।
ವಿವಿಧಾಮಿತಘೋರಪಾಪಸಂಘಃ
ಪ್ರಲಯಂ ಯಾತಿ ನ ಸಂಶಯಸ್ತದೈವ ॥೨೮೬॥

ಶೃಣು ಶರ್ವಕಥಾಮಘೌಘಹಂತ್ರೀಂ
ಅನುವಾರಂ ನಿಯಮೇನ ಸಾವಧಾನಂ ।
ಇದಮೇವ ಫಲಂ ವಿನಿಶ್ಚಿತಂ
ಶ್ರುತಿಭಿಃ ಶ್ರೋತ್ರಯುಗಸ್ಯ ವಸ್ತುತಸ್ತು ॥೨೮೭॥

ನವಕೋಮಲಬಿಲ್ವಪಲ್ಲವೈಃ
ಶಿವಲಿಂಗಂ ಸವಿಧಾನಮರ್ಚಯಿತ್ವಾ ।
ಶಿವಸಾತ್ಕೃತಬಿಲ್ವಪಲ್ಲವಾನ್
ಸಮುಪಾಘ್ರಾಯ ವಿನೋದಯಸ್ವ ಚಿತ್ತಂ ॥೨೮೮॥

ಸ್ಪೃಶ ಶಂಕರಮರ್ಚಿತಂ ತ್ರಿಕಾಲಂ
ಸಕಲಾಘೌಘವಿನಾಶನಾಯ ನಿತ್ಯಂ ।

ಹೊಸ ಚಿಗುರಾದ ಬಿಲ್ವದಳಗಳಿಂದ ಅರ್ಚಿತವಾದ ಶಿವಲಿಂಗವನ್ನು ದರ್ಶನ ಮಾಡುವವರ, ಅನಂತವಾದ ಘೋರಪಾಪಗಳು ಏಕದಾ ಮಾಯವಾಗುವುವು. ಈ ವಿಷಯದಲ್ಲಿ ಸಂಶಯವಿಲ್ಲ. ॥೨೮೬॥

ಸಕಲ ಪಾಪರಾಶಿಯನ್ನೂ ನಿವಾರಿಸುವ ಈಶ್ವರ ಕಥೆಗಳನ್ನು ಕೇಳುವುದೇ ಕಿವಿಗಳಿಗೆ ಸಾರ್ಥಕವಾದ ಕಾರ್ಯವೆಂದು ಸಕಲ ವೇದಗಳೂ ಘೋಷಿಸುತ್ತಿರುವುವು. ಆದ್ದರಿಂದ ನೀನು ತಪ್ಪದೆ ಶಿವಕಥೆಗಳನ್ನು ಕೇಳುತ್ತಿರು. ॥೨೮೭॥

ಅನೇಕ ಬಿಲ್ವದಳಗಳಿಂದ ಪೂಜಿತವಾದ ಶಿವಲಿಂಗವನ್ನು ವಿಧಿವತ್ತಾಗಿ ಪೂಜಿಸಿ, ಶಿವಪೂಜಾನಿರ್ಮಾಲ್ಯವಾದ ಬಿಲ್ವದಳಗಳನ್ನು ಮೂಸಿನೋಡಿ ಆನಂದ ಪಡುವುದೇ ನಾಸಿಕಾ ಮತ್ತು ಮನಸ್ಸಿನ ಕರ್ತವ್ಯವಲ್ಲವೇ ! ॥೨೮೮॥

ತ್ರಿಕಾಲಗಳಲ್ಲಿಯೂ ಪೂಜಿತವಾದ ಶಿವಲಿಂಗವನ್ನು ಸ್ಪರ್ಶಮಾಡುತ್ತಿರು. ಅದರಿಂದ ನಿನ್ನ ಸಕಲ ಪಾಪರಾಶಿಯೂ ನಾಶವಾಗುವುದು. ಎಲೈ ಮನಸ್ಸೇ, ನೀನು

ಭಜ ಚೇತಸಿ ಭಾಲಚಂದ್ರಮೌಳಿಂ
ಮುಹುರಾನಂದದಮದ್ವಿತೀಯಮೇಕಂ ॥೨೮೯॥

ಮನಸಾ ವಚಸಾ ಸುಕರ್ಮಣಾ
ಶಿವ ಏಕಃ ಶಿವಯಾ ಸಮನ್ವಿತಃ ।
ಭಜನೀಯ ಇತಿ ಶ್ರುತಿಃ ಸ್ವಯಂ
ಪ್ರತಿವಾರಂ ವದತಿ ಪ್ರಬೋಧಕೃತ್ ॥೨೯೦॥

ತ್ರಿಪುರಾರಿಕಥಾಸುಪೂಜನೇ
ತ್ರಿಪುರಾರೇರಭಿವೀಕ್ಷಣೇಽಪಿ ಚಿತ್ತಂ ।
ಮಹತಾಂ ಭವತಿ ಹ್ಯನನ್ಯಭಾಜಾಂ
ನ ಭವತ್ಯೇವ ದುರಾತ್ಮನಾಂ ಕರೋತಿ ॥೨೯೧॥

॥ ದಧೀಚಿರುವಾಚ ॥

ಇತಿ ವಿಷ್ಣುವಚಃ ಶ್ರುತ್ವಾ ಕಣ್ವಃ ಸಂತುಷ್ಟಮಾನಸಃ ।
ಶಿವಾರ್ಚನಪರೋ ಜಾತಃ ಸರ್ವಭಾವೇನ ಸರ್ವದಾ ॥೨೯೨॥

ಚಂದ್ರಶೇಖರನೂ, ಆನಂದದಾಯಕನೂ, ಸಜಾತೀಯ ದ್ವಿತೀಯ ರಹಿತನೂ ಆದ ಪರಶಿವನನ್ನು ಸರ್ವದಾ ಧ್ಯಾನಿಸುತ್ತಿರು. ॥೨೮೯॥

ಮನಸ್ಸು, ಮಾತು, ಕೆಲಸ ಇವುಗಳಿಂದಲೂ, ಪಾರ್ವತೀಸಮೇತನಾದ ಶಿವನನ್ನೇ ಸೇವಿಸುತ್ತಿರಬೇಕೆಂದು ವೇದವು ಸರ್ವದಾ ಜನರಿಗೆ ಎಚ್ಚರಿಕೆ ಕೊಡುತ್ತಿರುವುದು. ॥೨೯೦॥

ಮತ್ತಾರನ್ನೂ ಆಶ್ರಯಿಸದೇ ಕೇವಲ ಶಂಕರನನ್ನೇ ಮೊರೆಹೊಕ್ಕಿರುವ ಮಹಾತ್ಮರ ಮನಸ್ಸು ಸರ್ವದಾ ತ್ರಿಪುರಾರಿಯ ಕಥಾಶ್ರವಣದಲ್ಲಿಯೂ, ಶಿವಲಿಂಗದರ್ಶನದಲ್ಲಿಯೂ ನಿಲ್ಲುವುದು. ದುರಾತ್ಮರಿಗೆ ಎಂದೂ ಈ ಕಾರ್ಯದಲ್ಲಿ ಮನಸ್ಸು ಪ್ರವರ್ತಿಸಲಾರದು.'' ॥೨೯೧॥

ಎಂದು ಹೇಳಿದ ವಿಷ್ಣುವಿನ ಮಾತುಗಳನ್ನು ಕೇಳಿ ಕಣ್ವಋಷಿಯು ಸಂತುಷ್ಟನಾಗಿ ಸರ್ವದಾ ಶಿವಪೂಜಾನಿರತನಾದನು. ಆದ್ದರಿಂದ ಎಲೈ ರಾಜನೇ, ನೀನು

ಅತೋ ಯತ್ನೇನ ಸತತಂ ಕರ್ತವ್ಯಂ ಶಿವಪೂಜನಂ ।
ಶಿವಾರ್ಚನಂ ಯತೋ ನಿತ್ಯಂ ಭುಕ್ತಿಮುಕ್ತಿಫಲಪ್ರದಂ ॥೨೯೩॥

ಪುರಾ ಕಶ್ಚಿದಭೂದ್ರಾಜನ್ ದರಿದ್ರೋ ದ್ವಿಜಬಾಲಕಃ ।
ಸ ಯಯಾಚೇ ನಿಶಿ ಕ್ಷೀರಂ ಅನ್ನಂ ಭುಂಜನ್ಸ್ವಮಾತರಂ ॥೨೯೪॥

ಮಾತಾ ತದ್ವಚನಂ ಶ್ರುತ್ವಾ ಬಾಷ್ಪಸಂಕುಲಿತೇಕ್ಷಣಾ ।
ಬಾಷ್ಪಾಣಿ ದೂರೀಕುರ್ವಂತೀ ಸುದತೀ ಪ್ರಾಹ ತಂ ಸುತಂ ॥೨೯೫॥

ಕುತಃ ಕ್ಷೀರಂ ಮಯಾ ದೇಯಮಭಾಗ್ಯಾಹಂ ಯತಃ ಶಿಶೋ ।
ಅನರ್ಚಿತಹರಾಯ ಸ್ಯಾದಭಾಗ್ಯಮತ ಏವ ಮೇ ॥೨೯೬॥

॥ ಸುದತ್ಯುವಾಚ ॥

ಶಿವಾರ್ಚನಪರಾ ನಿತ್ಯಂ ಮನೋವಾಕ್ಕಾಯಕರ್ಮಭಿಃ ।
ಸಂಪ್ರಾಪ್ಯ ಮಹದೈಶ್ವರ್ಯಂ ತತೋ ಮುಕ್ತಾ ಭವಂತಿ ಚ ॥೨೯೭॥

ಸದಾ ತಪ್ಪದೆ ಶಿವಾರ್ಚನೆಯಲ್ಲಿಯೇ ನಿರತನಾಗಿರು. ಅದು ಭುಕ್ತಿ ಮತ್ತು ಮುಕ್ತಿ, ಇವೆರಡನ್ನೂ ಅನುಗ್ರಹಿಸುವುದು. ||೨೯೨-೨೯೩||

ಎಲೈ ರಾಜನೇ, ಹಿಂದೆ ಒಬ್ಬ ದರಿದ್ರನಾದ ಬ್ರಾಹ್ಮಣ ಬಾಲಕನಿದ್ದನು. ಆತನು ಒಂದುದಿನ ರಾತ್ರಿ ಬರಿಯ ಅನ್ನವನ್ನು ತಿನ್ನುತ್ತಾ ತಾಯಿಯನ್ನು ನೋಡಿ, ಸ್ವಲ್ಪ ಹಾಲನ್ನು ಕೊಡು ಎಂದು ಕೇಳಿದನು. ಒಡನೆಯೇ ತಾಯಿಯು ಅವನ ಮಾತುಗಳನ್ನು ಕೇಳಿ ವ್ಯಥೆಯಿಂದ ಅಳುತ್ತಾ, ಕಣ್ಣೀರನ್ನೊರಸಿಕೊಂಡು ಮಗನೊಡನೆ ಹೀಗೆಂದಳು ||೨೯೪-೨೯೫||

"ಅಪ್ಪಾ ಮಗುವೇ, ನಾನು ಎಲ್ಲಿಂದ ಹಾಲು ತರಲಿ. ನನ್ನ ಬಡತನದಿಂದ ನಾನು ಹಾಲುತರಲು ಅಸಮರ್ಥಳಾಗಿರುವೆನು. ನಾನು ಐಶ್ವರ್ಯಪ್ರಾಪ್ತಿಗಾಗಿ ಈಶ್ವರನನ್ನು ಜನ್ಮಾಂತರದಲ್ಲಿ ಅರ್ಚಿಸಿದವಳಲ್ಲ. ಶಿವಾರ್ಚನಾಸಕ್ತರಾಗಿ, ಮನಸ್ಸು, ಮಾತು, ಕರ್ಮ ಇವುಗಳಿಂದ ಶಿವಾರಾಧನೆ ಮಾಡಿದವರು ಐಶ್ವರ್ಯಸಂಪನ್ನರಾಗುವರಲ್ಲದೆ, ಮುಕ್ತಿಯನ್ನು ಸಹ ಪಡೆಯುವರು." ||೨೯೬-೨೯೭||

ಇತಿ ತದ್ವಚನಂ ಶ್ರುತ್ವಾ ತದೋತ್ಥಾಯ ದ್ವಿಜಾರ್ಭಕಃ ।
ಮಧ್ಯಾರ್ಜುನಮಿದಂ ಕ್ಷೇತ್ರಮುವಾಸ ಜನನೀಯುತಃ ॥೨೯೮॥

ತತಸ್ಸ ಮುನಿಶಾರ್ದೂಲಮಗಸ್ತ್ಯಂ ಭಸ್ಮಭೂಷಿತಂ ।
ಪ್ರಣಮ್ಯ ಬಿಲ್ವಪತ್ರಾದ್ಯೈಃ ಸಂಪೂಜ್ಯೋವಾಚ ಬಾಲಕಃ ॥೨೯೯॥

॥ ದ್ವಿಜಬಾಲಕ ಉವಾಚ ॥

ಸ್ವಾಮಿನ್ನಹಂ ದರಿದ್ರೋಽಸ್ಮಿ ದರಿದ್ರಾನ್ಮರಣಂ ವರಂ ।
ಪ್ರಾಪ್ಯತೇ ಹಿ ಮಹದ್ದುಃಖಂ ದಾರಿದ್ರ್ಯೇಣ ಮುನೀಶ್ವರ ॥೩೦೦॥

ಕಿಂ ಮಹದ್ಭಾಗ್ಯದಂ ಪುಣ್ಯಂ ಕಿಂ ದಾರಿದ್ರ್ಯವಿನಾಶಕಂ ।
ತದ್ವದಸ್ವ ಮುನಿಶ್ರೇಷ್ಠ ತತ್ಕರಿಷ್ಯಾಮ್ಯಹಂ ಧ್ರುವಂ ॥೩೦೧॥

॥ ಅಗಸ್ತ್ಯ ಉವಾಚ ॥

ಬಾಲಶೀಲಯಾ ನಿರ್ಲೀಲಂ ಬಾಲೇಂದುಲಲಿತಾಕೃತಂ ।
ಸಲೀಲಯಾ ತೇ ಸಕಲಂ ಮಂಗಳಂ ಕಲಯಿಷ್ಯತಿ ॥೩೦೨॥

ಎಂದು ತಾಯಿಯು ಹೇಳಿದ ಮಾತನ್ನು ಕೇಳಿ ಆ ಬ್ರಾಹ್ಮಣಬಾಲಕನು ತಾಯಿಯೊಡನೆ ಈ ಮಧ್ಯಾರ್ಜುನಕ್ಷೇತ್ರಕ್ಕೆ ಬಂದನು. ಇಲ್ಲಿ ಭಸ್ಮಶೋಭಿತನೂ, ಋಷಿಶ್ರೇಷ್ಠನೂ ಆಗಿರುವ ಅಗಸ್ತ್ಯಮಹರ್ಷಿಯನ್ನು ಕಂಡು, ಅವನನ್ನು ಬಿಲ್ವ ಪತ್ರಾದಿಗಳಿಂದ ಅರ್ಚಿಸಿ ಋಷಿಯೊಡನೆ ಹೀಗೆ ಮಾತನಾಡಿದನು. ॥೨೯೮-೨೯೯॥

'ಎಲೈ ಸ್ವಾಮಿಯೇ, ನಾನು ದರಿದ್ರನಾಗಿರುವೆನು. ದಾರಿದ್ರ್ಯಕ್ಕಿಂತಲೂ ಮರಣವೇ ಶ್ರೇಷ್ಠವೆಂದು ನಾನು ತಿಳಿದಿರುವೆನು. ಬಡತನದ ಕಷ್ಟವು ದುಃಖ ಭೂಯಿಷ್ಠವಾದುದು. ಇಂತಹ ದುಃಖವನ್ನು ನಿವಾರಣೆಮಾಡುವ ಮತ್ತು ಐಶ್ವರ್ಯ ವನ್ನು ಒದಗಿಸುವ ಉಪಾಯವೊಂದನ್ನು ವಿವರಿಸಿ ಹೇಳುವುದಾದರೆ ನಾನು ಅದರಂತೆಯೇ ನಡೆಯುವೆನು' ॥೩೦೦-೩೦೧॥

ಎಂದು ಆ ಬಾಲಕನು ಪ್ರಾರ್ಥಿಸಿಕೊಳ್ಳಲು ಅಗಸ್ತ್ಯಮಹರ್ಷಿಯು ಪರ ಶಿವನ ಮಹಿಮಾತಿಶಯವನ್ನು ಉಪದೇಶಿಸಲಾರಂಭಿಸಿದನು. ಬಾಲಕನೇ, ಪರಮೇ ಶ್ವರನು ಬಾಲನಂತೆ ಜಗತ್ತಿನಿಂದ ಆಟವಾಡುವವನಾದರೂ ಅವನ ಸ್ವಭಾವವು

ಅಮಂಗಲಹರೋ ಯಸ್ಮಾನ್ಮಂಗಲೋ ಮಂಗಳಾಪತಿಃ ।
ತಮೇವಾರ್ಚಯ ಯತ್ನೇನ ಸರ್ವದಾರಿದ್ರ್ಯನಾಶಕಂ ॥೩೦೩॥

ಪುಣ್ಯಪುಣ್ಯಂ ಧರ್ಮಧರ್ಮಂ ಮಂಗಳಾನಾಂ ಚ ಮಂಗಳಂ ।
ಪಾವನಂ ಪಾವನಾನಾಂ ಚ ಜಪ ಶೈವಂ ಷಡಕ್ಷರಂ ॥೩೦೪॥

ಶಿವಲಿಂಗಂ ಬಿಲ್ವಪತ್ರೈಃ ಪೂಜಯಸ್ವಾನ್ವಹಂ ಮುದಾ ।
ತತ್ಪೂಜಯಾ ಮಹದ್ಭಾಗ್ಯಂ ಪ್ರಾಪ್ತವ್ಯಂ ನಾತ್ರ ಸಂಶಯಃ ॥೩೦೫॥

ನ ಪ್ರಾಪ್ಯತೇ ಮಹದ್ಭಾಗ್ಯಂ ಶಿವಲಿಂಗಾರ್ಚನಂ ವಿನಾ ।
ಅತೋಽನ್ವಹಂ ಪ್ರಯತ್ನೇನ ಲಿಂಗೇ ಪೂಜಯ ಶಂಕರಂ ॥೩೦೬॥

ಜಗತ್ಯಾಂ ಸಂತಿ ಯಾವಂತೋ ಭಾಗ್ಯವಂತೋಽತ್ರ ಸಂತತಂ ।
ತಾವಂತೋ ಗಿರಿಜಾಕಾಂತ ನಿತಾಂತಂ ಪೂಜಯಂತಿ ಹಿ ॥೩೦೭॥

ಆಟದ ದೃಷ್ಟಿಯಲ್ಲಿಲ್ಲ. ಬಾಲಚಂದ್ರನಿಂದ ಅಲಂಕೃತನಾಗಿ ಭಕ್ತರನ್ನು ರಕ್ಷಿಸುವನು ಸರ್ವಮಂಗಳೆಯೆನಿಸಿದ ಪಾರ್ವತಿಗೆ ಪತಿಯಾಗಿರುವುದರಿಂದ ಭಕ್ತರ ಅಮಂಗಳಗಳನ್ನು ಪರಿಹರಿಸುವನು. ಆದ್ದರಿಂದ ನೀನು ಸರ್ವದಾ ದಾರಿದ್ರ್ಯನಾಶಕನಾದ ಪರಶಿವನನ್ನೇ ತಪ್ಪದೆ ಆರಾಧಿಸು. ॥೩೦೨-೩೦೩॥

ಪುಣ್ಯರಾಶಿಗೆ ಪುಣ್ಯರೂಪನಾಗಿಯೂ, ಧರ್ಮಗಳಿಗೆ ಧರ್ಮನೆನಿಸಿಯೂ, ಮಂಗಳಗಳಿಗೆ ಮಂಗಳರೂಪಿಯಾಗಿಯೂ, ಪರಿಶುದ್ಧವಸ್ತುಗಳಿಗೆ ಪಾವನವಸ್ತುವಾಗಿಯೂ ಇರುವ ಷಡಕ್ಷರೀಮಂತ್ರವನ್ನು ಜಪಿಸು. ಶಿವಲಿಂಗವನ್ನು ಬಿಲ್ವಪತ್ರೆಗಳಿಂದ ನಿತ್ಯವೂ ಪೂಜಿಸು. ಅದರಿಂದ ನೀನು ಅತಿಯಾದ ಐಶ್ವರ್ಯವನ್ನು ಸಂಪಾದಿಸಬಹುದು. ॥೩೦೪-೩೦೫॥

ಶಿವಲಿಂಗಾರಾಧನೆ ಮಾಡದೆ ಐಶ್ವರ್ಯವನ್ನು ಸಂಪಾದಿಸಲು ಸಾಧ್ಯವೇ ಇಲ್ಲ. ಆದ್ದರಿಂದ ನೀನು ತಪ್ಪದೆ ನಿತ್ಯವೂ ಪರಶಿವನನ್ನು ಪೂಜಿಸು. ಲೋಕದಲ್ಲಿ ಎಷ್ಟು ಜನರು ಐಶ್ವರ್ಯವಂತರಿರುವರೋ ಅವರೆಲ್ಲರೂ ಈಶ್ವರಾರಾಧನೆಯಿಂದ ಐಶ್ವರ್ಯವನ್ನು ಸಂಪಾದಿಸಿದವರೇ ಅಲ್ಲವೇ ! ॥೩೦೬-೩೦೭॥

ವಿನಾ ಯತ್ನಮನಾಯಾಸಾದುಪೇಂದ್ರಾದ್ಯಾಃ ಶಿವೇ ।
ಸಮಭ್ಯರ್ಚ್ಯ ಮಹದ್ಭಾಗ್ಯಂ ಲಬ್ಧ್ವಾ ತಿಷ್ಠಂತಿ ಸಂತತಂ ॥೩೦೮॥

ಶಿವಲಿಂಗಾರ್ಚನೇನೈವ ವಿಷ್ಣುತ್ವಂ ಪ್ರಾಪ ಕೇಶವಃ ।
ಬ್ರಹ್ಮತ್ವಮಪಿ ಸಂಪ್ರಾಪ ಬ್ರಹ್ಮಾ ಶಂಕರಪೂಜಯಾ ॥೩೦೯॥

ಇಂದ್ರತ್ವಮಿಂದ್ರಃ ಸಂಪ್ರಾಪ ಶ್ರೀ ಮಹಾದೇವಪೂಜಯಾ ।
ವಾಯುಸ್ಸಂಪ್ರಾಪ ವಾಯುತ್ವಂ ಶ್ರೀ ಮಹಾದೇವಪೂಜಯಾ॥೩೧೦॥

ನ ವಿಷ್ಣುತ್ವಾದಿ ದಾತಾನ್ಯೋ ವಿನಾ ದೇವೋತ್ತಮಂ ಶಿವಂ ।
ಸತ್ಯಮೇತತ್ಪುನಃ ಸತ್ಯಮುದ್ಧೃತ್ಯ ಭುಜಮುಚ್ಯತೇ ॥೩೧೧॥

ವಿಷ್ಣುರ್ಯದರ್ಚನಾದರ್ಚ್ಯಸ್ತಮೇವ ಗಿರಿಜಾಪತಿಂ ।
ಪೂಜಯಸ್ವಾತಿಯತ್ನೇನ ಸರ್ವಸಂಪತ್ಪ್ರದಂ ಪ್ರಭುಂ ॥೩೧೨॥

ಶಿವಲಿಂಗೇ ಶಿವಂ ನಿತ್ಯಂ ಪೂಜಯಸ್ವಾತಿಯತ್ನತಃ ।
ಶಿವಲಿಂಗಾರ್ಚನೇನೈವ ತುಷ್ಟೋ ಭವತಿ ಶಂಕರಃ ॥೩೧೩॥

ಅನಾಯಾಸವಾಗಿ ಉಪೇಂದ್ರನೇ ಮೊದಲಾದವರು ಈಶ್ವರಾರಾಧನೆ ಮಾಡಿ ಅತಿಯಾದ ಐಶ್ವರ್ಯವನ್ನು ಸಂಪಾದಿಸಿದರು. ಕೇಶವನು ಸರ್ವವ್ಯಾಪಕವಾದ ವಿಷ್ಣುತ್ವವನ್ನೂ, ಬ್ರಹ್ಮನು ಸೃಷ್ಟಿಕರ್ತೃತ್ವರೂಪವಾದ ಬ್ರಹ್ಮಪದವಿಯನ್ನೂ ಹೊಂದಿದುದು ಶಂಕರಾರಾಧನೆಯಿಂದಲ್ಲವೆ? ॥೩೦೮-೩೦೯॥

ಇಂದ್ರನು ಇಂದ್ರಪದವಿಯನ್ನು ಪಡೆದುದೂ, ವಾಯುವು ವಾಯುಪದವಿಯಲ್ಲಿ ನಿಂತುದೂ, ಶಂಕರಾರಾಧನೆಯಿಂದಲೇ. ಸಕಲೈಶ್ವರ್ಯವನ್ನೂ ದಾನ ಮಾಡುವ ಸಾಮರ್ಥ್ಯವು ಈಶ್ವರನಿಗಲ್ಲದೆ ವಿಷ್ಣ್ವಾದಿ ಯಾವ ದೇವತೆಗಳಿಗೂ ಇಲ್ಲವೆಂಬುದನ್ನೂ ತಿಳಿದುಕೋ? ॥೩೧೦-೩೧೧॥

ವಿಷ್ಣುವು ಯಾರನ್ನು ಪೂಜಿಸಿ ತಾನು ಪೂಜ್ಯನೆನಿಸಿಕೊಂಡನೋ, ಅಂತಹ ಶಂಕರನನ್ನು ನೀನು ಸರ್ವದಾ ಪೂಜಿಸು. ಆತನೇ ಸಕಲ ಸಂಪತ್ತುಗಳನ್ನೂ ಅನುಗ್ರಹಿಸುವವನು. ಮಹಾದೇವನನ್ನು ಶಿವಲಿಂಗದಲ್ಲಿ ಪೂಜಿಸುವುದೇ ಅತ್ಯಂತ

ಪ್ರತಿಮಾ ಪೂಜನಾಚ್ಛ್ರೇಷ್ಠಂ ಶಿವಲಿಂಗಸ್ಯ ಪೂಜನಂ ।
ಶಿವಲಿಂಗಾರ್ಚನಾಚ್ಛ್ರೇಷ್ಠಮನ್ಯಂ ನೈವ ಹಿ ದೃಶ್ಯತೇ ॥೩೧೪॥

॥ ದಧೀಚಿರುವಾಚ ॥

ಏವಮುಕ್ತ್ವಾ ಸ್ಥಿತೋಽಗಸ್ತ್ಯಃ ಸನಾತನಋಷಿಸ್ತದಾ ।
ತದುಕ್ತಂ ವಚನಂ ಶ್ರುತ್ವಾ ತಂ ಪ್ರಣಮ್ಯಾಹ ಸಾದರಂ ॥೩೧೫॥

॥ ಸನಾತನ ಉವಾಚ ॥

ಶಿವಲಿಂಗಾನಿ ಪೂಜ್ಯಾನಿ ಕಾನಿ ಕಾನಿ ಮುನೀಶ್ವರ ।
ಏತತ್ಸರ್ವಂ ವಿಶೇಷೇಣ ವದ ಮಹ್ಯಂ ಕೃಪಾನಿಧೇ ॥೩೧೬॥

॥ ದಧೀಚಿರುವಾಚ ॥

ಇತಿ ತದ್ವಚನಂ ಶ್ರುತ್ವಾ ಪ್ರಹೃಷ್ಟವದನೋ ಮುನಿಃ ।
ಶಿವಲಿಂಗಸ್ವರೂಪಾಣಿ ವಕ್ತುಂ ಸಮುಪಚಕ್ರಮೇ ॥೩೧೭॥

॥ ಅಗಸ್ತ್ಯ ಉವಾಚ ॥

ಶಿವಲಿಂಗಾನಿ ತಿಷ್ಠಂತಿ ವಿವಿಧಾನ್ಯುತ್ತಮಾನಿ ಚ ।
ತತ್ಸ್ವರೂಪಾಣಿ ಸರ್ವಾಣಿ ಶೃಣು ವಕ್ಷ್ಯೇ ಸನಾತನ ॥೩೧೮॥

ಶ್ರೇಷ್ಠವಾದ ಮಾರ್ಗ. ಅದರಿಂದಲೇ ಈಶ್ವರನು ತೃಪ್ತನಾಗುವನು. ಪ್ರತಿಮಾಪೂಜೆಗಿಂತ ಶಿವಲಿಂಗಾರಾಧನೆ ಶ್ರೇಷ್ಠವಾದದ್ದು. ಅದಕ್ಕಿಂತ ಉತ್ತಮವಾದ ಕಾರ್ಯವು ಯಾವುದೂ ಕಾಣಲಾರದು.'' ॥೩೧೨-೩೧೩-೩೧೪॥

ಎಂದು ಅಗಸ್ತ್ಯಮಹರ್ಷಿಯು ಹೇಳಲು ಸನಾತನಋಷಿಯು ಅವನ ಮಾತುಗಳನ್ನು ಕೇಳಿ, ಅವನಿಗೆ ನಮಸ್ಕರಿಸಿ ಮತ್ತೆ “ ಮಹೇಶ್ವರನೇ, ಲೋಕದಲ್ಲಿ ಯಾವಯಾವ ಶಿವಲಿಂಗಗಳು ಪೂಜ್ಯವಾದವುಗಳು ಎಂಬುದನ್ನು ವಿಸ್ತಾರವಾಗಿ ನಮಗೆ ತಿಳಿಯಪಡಿಸು” ಎಂದು ಪ್ರಾರ್ಥಿಸಿದನು. ॥೩೧೫-೩೧೬॥

ಅವನ ಪ್ರಾರ್ಥನೆಯಂತೆ ಅಗಸ್ತ್ಯಮಹರ್ಷಿಯು ಶಿವಲಿಂಗಸ್ವರೂಪಗಳನ್ನು ವಿವರಿಸಲು ಆರಂಭಿಸಿದನು. “ಅಯ್ಯಾ ಸನಾತನನೇ, ಅನೇಕವಿಧವಾಗಿ ಶಿವ

ಶಿವಲಿಂಗಸ್ವರೂಪಂ ತು ವಕ್ತುಂ ಯದ್ಯಪಿ ನೋಚಿತಂ ।
ತಥಾಪಿ ಶಿವಭಕ್ತಾಯ ತುಭ್ಯಂ ತತ್ಪ್ರವದಾಮ್ಯಹಂ ॥೩೧೯॥

ಶಿವಲಿಂಗಸ್ಯ ಮಾಹಾತ್ಮ್ಯಂ ಯಸ್ಯ ಕಸ್ಯಾಪಿ ಸತ್ವರಂ ।
ನ ವಕ್ತವ್ಯಂ ಯತಸ್ತತ್ತು ಗೋಪನೀಯಂ ಪ್ರಯತ್ನತಃ ॥೩೨೦॥

ಯಸ್ಯಾಸ್ತಿ ಶ್ರುತಿಷು ಶ್ರದ್ಧಾ ತಸ್ಯ ಶ್ರದ್ಧಾ ಮಹೇಶ್ವರೇ ।
ತಸ್ಯೈವ ಶಿವಮಾಹಾತ್ಮ್ಯೇ ಶ್ರದ್ಧಾ ನಾನ್ಯಸ್ಯ ಸರ್ವಥಾ ॥೩೨೧॥

ತಸ್ಮೈ ವಕ್ತವ್ಯಮುತ್ಕೃಷ್ಟಂ ಶಿವಮಾಹಾತ್ಮ್ಯಮಾದರಾತ್ ।
ತವಾಸ್ತಿ ಶಂಕರೇ ಶ್ರದ್ಧಾ ತತಃ ಪ್ರಾಯಃ ಪುರಾ ಭವಾನ್ ॥೩೨೨॥

॥ ಸನಾತನ ಉವಾಚ ॥

ಯಸ್ಯಾಸ್ತಿ ಶಿವಮಾಹಾತ್ಮ್ಯೇ ಶ್ರದ್ಧಾ ಮುಕ್ತಿಪ್ರದಾಯಿನೀ ।
ಬ್ರಾಹ್ಮಣಃ ಕೇವಲಾ ಭೂತಿರ್ಧೃತಾ ಚ ವಿಧಿವತ್ತ್ವಯಾ ॥೩೨೩॥

---

ಲಿಂಗಗಳು ಉತ್ತಮಗಳೆನಿಸಿವೆ. ಅವುಗಳ ಸ್ವರೂಪವನ್ನೆಲ್ಲಾ ವಿಶದವಾಗಿ ತಿಳಿಸುವೆನು ಕೇಳು. ॥೩೧೭-೩೧೮॥

ವಾಸ್ತವವಾಗಿ ಶಿವಲಿಂಗಸ್ವರೂಪವನ್ನು ವಿವರಿಸುವುದು ಉಚಿತವಲ್ಲ. ಆದರೂ ಈಶ್ವರನಲ್ಲಿ ಅತಿಶಯವಾದ ಭಕ್ತಿಯಿಟ್ಟಿರುವ ನಿನಗೆ ಶಿವಸ್ವರೂಪವನ್ನು ಈಗ ಹೇಳುವೆನು. ಶಿವಲಿಂಗದ ಮಹಿಮೆಯನ್ನು ಎಲ್ಲರಿಗೂ ಹೇಳಬಾರದು. ಏಕೆಂದರೆ ಇದು ಅತಿ ಗೋಪ್ಯವಾದ ವಿಷಯ. ॥೩೧೯-೩೨೦॥

ಯಾವನಿಗೆ ವೇದವಾಕ್ಯಗಳಲ್ಲಿ ಶ್ರದ್ಧೆಯಿದೆಯೋ ಅವನಿಗೆ ಈಶ್ವರಭಕ್ತಿಯೂ, ಈಶ್ವರಮಹಿಮಾಶ್ರವಣದಲ್ಲಿ ಆಸಕ್ತಿಯೂ. ಸಂಭವಿಸುವುದು. ಅಂತಹವನಿಗೆ ಈಶ್ವರಮಹಿಮೆಯನ್ನು ವಿವರಿಸಿ ಹೇಳಬೇಕು. ನಿನಗೆ ಈಗ ಶಿವಪೂಜಾದಿಗಳಲ್ಲಿ ವಿಶೇಷ ಶ್ರದ್ಧೆಯಿರುವುದನ್ನು ನೋಡಿದರೆ ನೀನು ಪೂರ್ವಜನ್ಮದಲ್ಲಿ ಶ್ರುತ್ಯುಕ್ತ ಕರ್ಮಗಳನ್ನು ನಡೆಸುವವನಾಗಿದ್ದಿರಬಹುದು ॥೩೨೧-೩೨೨॥

ಯಾವನಿಗೆ ಶಿವಮಹಿಮೆಯನ್ನು ಕೇಳುವುದರಲ್ಲಿ ಶ್ರದ್ಧಾಭಕ್ತಿಯುಂಟಾಗಿರುವುದೋ ಅವನೇ ನಿಜವಾಗಿಯೂ ಬ್ರಾಹ್ಮಣನು. ನೀನು ಆದರಂತೆ ವಿಧಿವತ್ತಾದ ಕರ್ಮಾಚರಣೆಯಿಂದ ಬ್ರಾಹ್ಮಣನೆನಿಸಿಕೊಂಡಿರುವೆ ಎಂದು ಅಗಸ್ತ್ಯಋಷಿಯು ಹೇಳಲು

ನ ಕದಾಪಿ ಪುರಾಕೃತಂ ಮಯಾ
ವಿಧಿವತ್ಕೇವಲಮೀಶವಂದನಂ ।
ಯದಿ ತತ್ಕೃತಮಾದರಾತ್ತದಾ
ಮಮ ಜನ್ಮೇದಮಭೂತ್ಕಥಂ ಮುನೇ ॥೩೨೪॥

ಅಹಮೀದೃಶಜನ್ಮಭಾಜನಂ
ನ ಪುರಾ ಬ್ರಾಹ್ಮಣಜನ್ಮಭಾಜನಂ ।
ಯದಿ ತನ್ಮಮ ತದ್ಭವೇತ್ತದಾ
ನ ಶಿವಃ ಸಾಧು ಸಮರ್ಚಿತಃ ಕಥಂ ॥೩೨೫॥

ನ ಕದಾಪಿ ಪುರಾಕೃತಂ ಮಯಾ
ವಿಧಿವತ್ಕೇವಲಭಸ್ಮಧಾರಣಂ ।
ಯದಿ ತತ್ಕೃತಮಾದರಾತ್ತದಾ
ಮಮ ಜನ್ಮೇದಮಭೂತ್ಕಥಂ ಮುನೇ ॥೩೨೬॥

ನ ಕದಾಪಿ ಪುರಾಕೃತಂ ಮಯಾ
ವಿಧಿವತ್ಕೇವಲಶಂಕರಾರ್ಚನಂ ।

ಆಗ ಸನಾತನನು ಹೀಗೆ ಉತ್ತರವಿತ್ತನು. 'ಮಹರ್ಷಿಯೇ ನಾನು ಎಂದೂ ಹಿಂದೆ ವಿಧಿವತ್ತಾಗಿ ಈಶ್ವರಪ್ರಣಾಮಮಾಡಲಿಲ್ಲ. ಹಾಗೆ ಮಾಡಿದ್ದರೆ ನನಗೆ ಇಂತಹ ಪಾಪಿ ಜನ್ಮವು ಮತ್ತೇಕೆ ಬರುತ್ತಿದ್ದಿತು? ||೩೨೩-೩೨೪||

ನೀನು ಹೇಳಿದಂತಹ ಬ್ರಾಹ್ಮಣಜನ್ಮಪ್ರಾಪ್ತಿಯೂ ಸಹ ಹಿಂದೆ ನನಗುಂಟಾಗಿರಲಿಲ್ಲವೆಂದು ತೋರುವುದು. ಒಂದುವೇಳೆ ಆ ಬ್ರಾಹ್ಮಣಜನ್ಮವು ಬಂದಿದ್ದರೆ ನಾನು ಶಿವಾರಾಧನೆ ಮಾಡದೆ ಬಿಡುತ್ತಿದ್ದೆನೆ? ||೩೨೫||

ನಾನು ಹಿಂದೆ ಎಂದೂ ವಿಧಿವತ್ತಾಗಿ ಭಸ್ಮಧಾರಣೆ ಮಾಡಿರಲಾರೆ. ಹಾಗೆ ಮಾಡಿದ್ದರೆ ನನಗೆ ಇಂತಹ ಜನ್ಮವು ಪ್ರಾಪ್ತಿಯಾಗುತ್ತಿರಲಿಲ್ಲ. ||೩೨೬||

ಮಹರ್ಷಿಯೇ, ನಾನು ಹಿಂದಿನ ಜನ್ಮದಲ್ಲಿ ಈಶ್ವರಾರ್ಚನೆ, ಈಶ್ವರಸೇವೆ, ಈಶ್ವರದರ್ಶನ, ಶಿವಧ್ಯಾನ, ಶೈವನಿಗೆ ಸತ್ಕಾರ ಇವುಗಳಲ್ಲಿ ಯಾವುದನ್ನೂ ನಡೆಸಿಲ್ಲ

ಯದಿ ತತ್ಕೃತಮಾದರಾತ್ತದಾ
ಮಮ ಜನ್ಮೇದಮಭೂತ್ಕಥಂ ಮುನೇ ॥೩೨೭॥

ನ ಕದಾಪಿ ಪುರಾಕೃತಂ ಮಯಾ
ವಿಧಿವತ್ಕೇವಲಮೀಶಸೇವನಂ ।
ಯದಿ ತತ್ಕೃತಮಾದರಾತ್ತದಾ
ಮಮ ಜನ್ಮೇದಮಭೂತ್ಕಥಂ ಮುನೇ ॥೩೨೮॥

ನ ಕದಾಪಿ ಪುರಾಕೃತಂ ಮಯಾ
ವಿಧಿವತ್ಕೇವಲಮೀಶವೀಕ್ಷಣಂ ।
ಯದಿ ತತ್ಕೃತಮಾದರಾತ್ತದಾ
ಮಮ ಜನ್ಮೇದಮಭೂತ್ಕಥಂ ಮುನೇ ॥೩೨೯॥

ನ ಕದಾಪಿ ಮಯಾ ಕೃತಂ ಪುರಾ
ವಿಧಿವತ್ಕೇವಲಮೀಶಚಿಂತನಂ ।
ಯದಿ ತತ್ಕೃತಮಾದರಾತ್ತದಾ
ಮಮ ಜನ್ಮೇದಮಭೂತ್ಕಥಂ ಮುನೇ ॥೩೩೦॥

ನ ಕದಾಪಿ ಮಯಾಕೃತಂ ಪುರಾ
ವಿಧಿವತ್ಕೇವಲಶೈವಸೇವನಂ ।
ಯದಿ ತತ್ಕೃತಮಾದರಾತ್ತದಾ
ಮಮ ಜನ್ಮೇದಮಭೂತ್ಕಥಂ ಮುನೇ ॥೩೩೧॥

ವಿಹಿತಂ ವಿಧಿವದ್ವಿಭೂತಿಧಾರಣಂ
ಕೃತಮಿತ್ಯುಕ್ತಮಿದಂ ತ್ವಯಾಧುನಾ ।
ವಿಧಿವನ್ನ ವಿಭೂತಿಧಾರಣಂ
ಕೃತಮೇವೇತ್ಯನುಮೀಯತೇ ಮಯಾ

---

ವೆಂಬೇ ತೋರುವುದು. ಒಂದುವೇಳೆ ಅವುಗಳಲ್ಲಿ ಯಾವುದೊಂದನ್ನು ನಡೆಸಿದ್ದರೂ ನನಗೆ ಇಂತಹ ಜನ್ಮವು ಪ್ರಾಪ್ತವಾಗುತ್ತಿರಲಿಲ್ಲ. ॥೩೨೭-೩೨೮-೩೨೯-೩೩೦-೩೩೧॥

ನೀನು ವಿಧಿವತ್ತಾಗಿ ವಿಭೂತಿಧಾರಣೆ ಮಾಡಿಕೊಂಡಿದ್ದೀಯೆಂದು ಹೇಳಿದೆ

ಅಧುನಾಪಿ ವಿಭೂತಿಧಾರಣಂ
ವಿಧಿವನ್ನ ಕ್ರಿಯತೇ ಹಿ ವಸ್ತುತಃ ।
ವಿಧಿವನ್ನ ವಿಭೂತಿಧಾರಣಂ
ವಿಹಿತಂ ಕರ್ತುಮಪೀಹ ಶಕ್ಯತೇ ॥೩೩೩॥

ವಿಬುಧೈರಪಿ ಭಸ್ಮಧಾರಣಂ
ವಿಧಿವತ್ಕರ್ತುಮಶಕ್ಯಮೇವ ಹಿ ।
ನ ಯತೋಽಧಿಗತೋ ವಿಭೂತಿಧಾರಣೇ
ವಿಬುಧೈರಪ್ಯತಿವಿಸ್ತೃತೋ ವಿಧಿಃ ॥೩೩೪॥

ಕ್ರಿಯತೇ ಹಿ ಕಥಂಚಿದೇವ ತತ್
ವಿಹಿತಂ ಕೇವಲಭಸ್ಮಧಾರಣಂ ।
ಭವದಾದಿಭಿರಪ್ಯನುಕ್ಷಣಂ
ವಿಧಿಸಂರಕ್ಷಣದಕ್ಷಮಾನಸೈಃ ॥೩೩೫॥

ವಿಧಿನಾಪಿ ಕೃತಂ ನ ವಸ್ತುತಃ
ವಿಧಿವತ್ಕೇವಲಭಸ್ಮಧಾರಣಂ ।

---

ಯಲ್ಲವೆ. ನಾನು ಹಾಗೂ ವಿಭೂತಿಧಾರಣೆ ಮಾಡಿಕೊಂಡಿಲ್ಲವೆಂದೇ ಊಹಿಸುತ್ತೇನೆ. ||೩೩೨||

ಎಲೈ ಮುನಿಯೇ, ಈಗಲೂ ವಿಧಿವತ್ತಾಗಿ ನಾನು ಭಸ್ಮಧಾರಣೆ ಮಾಡಿಕೊಂಡಿಲ್ಲ. ಏಕೆಂದರೆ ನೀನು ಹೇಳಿದಂತೆ ವಿಧಿವತ್ತಾಗಿ ಭಸ್ಮಧಾರಣೆಮಾಡಲು ಸಾಧ್ಯವೇ ಇಲ್ಲ. ||೩೩೩||

ದೇವತೆಗಳಿಂದಲೂ ವಿಧಿವತ್ತಾಗಿ ಭಸ್ಮಧಾರಣೆ ಮಾಡಿಕೊಳ್ಳಲು ಸಾಧ್ಯವಿಲ್ಲ. ಏಕೆಂದರೆ, ಆ ಭಸ್ಮಧಾರಣೆಯ ವಿಧಿಯು ಅವರಿಗೂ ಅಷ್ಟು ಕಠಿನವಾಗಿದೆ. ||೩೩೪||

ವಿಧಿಯಂತೆಯೇ ನಡೆದು ಅದನ್ನು ರಕ್ಷಿಸಬೇಕೆಂದಿರುವ ನಿಮ್ಮಂತಹವರೂ ಕೂಡ ಕೇವಲ ಭಸ್ಮವನ್ನು ಮಾತ್ರ ಹೇಗೋ ಧರಿಸುತ್ತಿರುವಿರಿ. ನಿಮಗೂ ಆ ವಿಧಿಯನ್ನು ಅನುಸರಿಸಿಕೊಂಡುಬರಲು ಕಷ್ಟವಾಗಿದೆ. ||೩೩೫||

ಬ್ರಹ್ಮನೂ ಸಹ ವಿಧಿವತ್ತಾಗಿ ಭಸ್ಮಧಾರಣೆ ಮಾಡಿದಂತೆ ಕಾಣು

ಯದಿ ತೇನ ಕೃತಂ ತಥಾ ತದಾ
ನ ಕಥಂ ಮುಕ್ತಿಮವಾಪ ತತ್ಕ್ಷಣೇ ॥೩೩೬॥

ಯದಿ ಕೇವಲಭಸ್ಮಧಾರಣಂ
ಕೃತಮಾದೇಹವಿಸರ್ಜನಂ ತದಾ ।
ಕ್ವ ಜನಿರ್ಧೃತಶುದ್ಧಭಸ್ಮನಾಂ
ಜನಿಶಂಕಾಪಿ ನ ಜಾಯತೇ ಯತಃ ॥೩೩೭॥

ಭವಬಂಧವಿಮೋಚಕಂ ಯತಃ
ವಿಹಿತಂ ಕೇವಲಭಸ್ಮಧಾರಣಂ ।
ತತ ಏವ ಭವಾಭಿಭಾವಕಾಃ
ಸತತಂ ಕೇವಲಭಸ್ಮಧಾರಣಂ ॥೩೩೮॥

ಯದಿ ಕೇವಲಭಸ್ಮಧಾರಣೇ
ವಿಮಲಾ ಭಕ್ತಿರುದೇತಿ ಭಾಗ್ಯತಃ ।
ನ ತದಾ ಮರಣಾದಿಕಂ ಭಯಂ
ಕ್ವ ಭಯಂ ಕೇವಲಭಸ್ಮಧಾರಣೇ ॥೩೩೯॥

---

ಹಾಗೆ ಬ್ರಹ್ಮನು ಭಸ್ಮಧಾರಣೆಮಾಡಿದ್ದರೆ ಆತನಿಗೆ ಮುಕ್ತಿಯು ದೊರಕುತ್ತಿದ್ದಿತಲ್ಲದೆ ಮತ್ತೆ ಬ್ರಹ್ಮಪದವಿಯಲ್ಲಿ ಕಷ್ಟಪಡುತ್ತಿದ್ದನೆ? ||೩೩೬||

ದೇಹತ್ಯಾಗ ಮಾಡುವವರೆಗೂ, ಭಸ್ಮಧಾರಣೆ ಮಾಡಿದವರಿಗೆ ಪುನಃ ಜನ್ಮ ಪ್ರಾಪ್ತಿಯಿರುವುದಿಲ್ಲ. ಏಕೆಂದರೆ ಶುದ್ಧಭಸ್ಮಧಾರಿಗಳಾದವರಿಗೆ ಮತ್ತೆ ಭೂಲೋಕದಲ್ಲಿ ಜನ್ಮತಾಳುವ ಊಹೆಯೂ ಇರುವುದಿಲ್ಲ. ||೩೩೭||

ಕೇವಲ ಭಸ್ಮಧಾರಣೆಯಿಂದಲೇ ಸಂಸಾರದುಃಖವು ನಾಶವಾಗುವುದೆಂದು ತಿಳಿದು ಸಂಸಾರದುಃಖವನ್ನು ದೂರಮಾಡಲಿಚ್ಛಿಸುವವರೆಲ್ಲರೂ ಸತತವಾಗಿ ಭಸ್ಮಧಾರಣೆಮಾಡಿಕೊಂಡಿರುವರು. ||೩೩೮||

ಕೇವಲ ಭಸ್ಮಧಾರಣೆಯಿಂದಲೇ ಮರಣಾದಿ ಭಯಗಳು ತಪ್ಪಿಹೋಗುವುದರಿಂದ ಭಸ್ಮಧಾರಣೆಯಲ್ಲಿ ನಿಜವಾದ ಭಕ್ತಿ ಹುಟ್ಟಬೇಕಾದರೆ ಮನುಷ್ಯನು ನಿಜವಾದ ಸುಕೃತಶಾಲಿಯಾಗಿರಬೇಕು. ಅದರಿಂದಲೇ ಅವನು ಸಕಲ ಭವಭಯಗಳನ್ನೂ ಕಳೆದುಕೊಳ್ಳಬಹುದು. ||೩೩೯||

ವಿವಿಧಾಮಿತಪುಣ್ಯಪೂರಣೇ
ದೃಢಭಕ್ತಿರ್ಭವನಾಶಕಾರಣೇ ।
ಭವತಿ ತ್ರಿಪುರಾರಿಭೂಷಣೇ
ಸತತಂ ಕೇವಲಭಸ್ಮಧಾರಣೇ ॥೩೪೦॥

ಧೃತಕೇವಲಭಸ್ಮಭೂಷಣೋ
ಯದಿ ಶಂಭುಂ ಧೃತಭಸ್ಮಭೂಷಣಂ ।
ವಿಷಯಾನಸಹಾಯ ಚಿಂತಯೇತ್
ಕ್ಷಣಮಾತ್ರಂ ಕ್ವ ತದಾ ಭಯಂ ಯಮಾತ್ ॥೩೪೧॥

ಬಹುಜನ್ಮಕೃತೈರನಾವೃತೈಃ
ಸುಕೃತೈಃ ಕೇವಲಭಸ್ಮಧಾರಣೇ ।
ಸಮುದೇತಿ ಮತಿಃ ಶ್ರುತಿಶ್ರುತೇ
ಸತತಂ ಶೈವಮತಾನುವರ್ತಿನಾಂ ॥೩೪೨॥

ಸಿತಕೇವಲಭಸ್ಮಧಾರಿಣಾಂ
ಅಧಿಕಾರಃ ಶಿವಲಿಂಗಪೂಜನೇ ।

---

ವಿವಿಧವಾದ ಪುಣ್ಯಕರ್ಮಗಳಿಗೆ ಫಲರೂಪವಾಗಿರುವ, ಸಂಸಾರದುಃಖನಾಶಕವಾಗಿರುವ. ಪರಶಿವನಿಗೆ ಅಲಂಕಾರಪ್ರಾಯವಾಗಿರುವ ಭಸ್ಮಧಾರಣೆಯಲ್ಲಿ ದೃಢಭಕ್ತಿ ಬರಬೇಕಾದರೆ ಮಹಾ ಸುಕೃತಿಯಾಗಿರಬೇಕು. (೩೪೦)

ಕೇವಲ ಭಸ್ಮಧಾರಣೆಯಿಂದಲೇ ಪರಿಶುದ್ಧನಾಗಿ, ಭಸ್ಮಧಾರಿಯಾದ ಶಂಕರನನ್ನು ಅನನ್ಯಮನಸ್ಸಿನಿಂದ ಕ್ಷಣಕಾಲ ಧ್ಯಾನಮಾಡಿದರೂ ಅವನಿಗೆ ಯಮನಿಂದ ಭಯವು ತಪ್ಪಿಹೋಗುವುದು ನಿಶ್ಚಯ. (೩೪೧)

ಅನೇಕ ಜನ್ಮಗಳಲ್ಲಿ ನಿಷ್ಕಳಂಕವಾದ ಪುಣ್ಯವನ್ನಾರ್ಜಿಸಿದವರಿಗೆ ಮತ್ತು ಶಿವಧರ್ಮಾನುಯಾಯಿಗಳಿಗೆ ಮಾತ್ರ ಶ್ರುತಿಚೋದಿತವಾದ ಭಸ್ಮಧಾರಣೆಯಲ್ಲಿ ಬುದ್ಧಿಯು ಪ್ರವರ್ತಿಸುವುದು. (೩೪೨)

ಭಸ್ಮಧಾರಿಗಳಿಗೆ ಮಾತ್ರ ಶಿವಲಿಂಗಪೂಜೆಯಲ್ಲಿ ಅಧಿಕಾರವು ಲಭಿಸುವುದು. ಇತರರಿಗೆ ಅದು ಸಿದ್ಧಿಪ್ರದವಾಗದು. ಆದ್ದರಿಂದಲೇ ಯಾರು ಭಸ್ಮಧಾರಣೆಯಿಂದ

ಅತ ಏವ ತದರ್ಚಿತಶ್ಶಿವೋ
ವಿತರತ್ಯೇವ ತದೀಪ್ಸಿತಂ ಫಲಂ ॥೩೪೩॥

ಸಿತಕೇವಲಭಸ್ಮಧಾರಣಂ
ವಿಧಿವದ್ಭೂರಿ ವಿಧಾಯ ಸಾದರಂ ।
ಸತತಂ ಶಿವನಿಷ್ಠಚೇತಸಾಂ
ತನುಬಂಧಃ ಕ್ವ ತದಾತಿದುಃಖದಃ ॥೩೪೪॥

॥ ದಧೀಚಿರುವಾಚ ॥

ಇತಿ ತದ್ವಚನಂ ಶ್ರುತ್ವಾ ಭೂರಿ ಭಕ್ತಿಪ್ರವರ್ಧಕಂ ।
ಅಗಸ್ತ್ಯಸ್ತಂ ಪ್ರಣಮ್ಯಾಹ ಸನಾತನಮುನಿಂ ತದಾ ॥೩೪೫॥

॥ ಅಗಸ್ತ್ಯ ಉವಾಚ ॥

ಧನ್ಯೋಽಸಿ ಭಸ್ಮನಿಷ್ಠೋಽಸಿ ತತ ಏವಾಭವನ್ಮುನೇ ।
ಶಂಕರಾನುಗ್ರಹೀತೋಽಸಿ ಸರ್ವಥಾ ನಾತ್ರ ಸಂಶಯಃ ॥೩೪೬॥

ಶಿವಲಿಂಗವನ್ನು ಪೂಜಿಸುವರೋ ಅಂತಹವರಿಗೆ ಮಾತ್ರ ಸಂಪೂರ್ಣ ಇಷ್ಟಾರ್ಥವು ಲಭಿಸುವುದು. ॥೩೪೩॥

ಶುಭ್ರವಾದ ಭಸ್ಮವನ್ನು ಧರಿಸಿಕೊಂಡು, ಆದರದಿಂದ ಶಿವನನ್ನೇ ಮನಸ್ಸಿನಲ್ಲಿ ಧ್ಯಾನಿಸುತ್ತಾ ಜೀವಿಸುವವರಿಗೇ, ಕೇವಲ ದೇಹಧಾರಣೆಯೂ ಸಹ ಸುಖಪ್ರದವಾಗಿರುವುದೇ ಹೊರತು ಅದರಿಂದ ಯಾವವಿಧದ ದುಃಖವೂ ಉಂಟಾಗಲಾರದು.” ॥೩೪೩॥

ಈರೀತಿ ಅತಿಶಯವಾದ ಭಕ್ತಿಯನ್ನು ಸೂಚಿಸುವ ಸನಾತನಋಷಿಯ ಮಾತುಗಳನ್ನು ಕೇಳಿ ಅಗಸ್ತ್ಯಮಹಾಮುನಿಯು ಸನಾತನನಿಗೆ ವಂದಿಸುತ್ತಾ ಹೀಗೆಂದನು. “ಎಲೈ ಸನಾತನಮುನಿಯೇ, ನೀನೇ ಧನ್ಯನು ಭಸ್ಮಧಾರಣೆಯಲ್ಲಿ ನಿನಗೆ ಇಷ್ಟರಮಟ್ಟಿನ ದೃಢನಂಬಿಕೆಯಿರುವುದರಿಂದ ನೀನು ಶಂಕರನಿಂದ ಅನುಗ್ರಹೀತನಾಗಿರುವೆಯೆಂಬುದೇ ನನ್ನ ನಂಬಿಕೆ ಇದರಲ್ಲಿ ಸಂಶಯವಿಲ್ಲ. ॥೩೪೫-೩೪೬॥

ಶಂಕರೇಣಾನುಗೃಹೀತಾನಾಂ ಭಕ್ತಿರ್ಭಸ್ಮನಿ ಜಾಯತೇ ।
ನಾನ್ಯೇಷಾಮಿತಿ ವೇದೋಽಪಿ ಸ್ವಯಂ ವದತಿ ಸಾದರಂ ॥೩೪೭॥

ಶ್ರುತೌ ಶ್ರದ್ಧಾ ತವೈವಾಸ್ತಿ ಯತಸ್ತೇ ಭಸ್ಮಧಾರಣೇ ।
ಭಕ್ತಿರೇತಾದೃಶೀ ಯಸ್ಮಾತ್ತ್ವಮನ್ಯೋಽಸಿ ಸನಾತನ ॥೩೪೮॥

ಸನಾತನ ಯತಃ ಶ್ರದ್ಧಾ ತವ ದೇವೋತ್ತಮೇ ಶಿವೇ ।
ತತಸ್ತೇ ಶಿವಲಿಂಗಾನಾಂ ಮಾಹಾತ್ಮ್ಯಂ ತದ್ವದಾಮ್ಯಹಂ ॥೩೪೯॥

ಶಿವಲಿಂಗೇಷು ಸರ್ವೇಷು ರಸಲಿಂಗಮನುತ್ತಮಂ ।
ತತ್ರ ಸಂಪೂಜಿತಃ ಶಂಭುಃ ಪ್ರಸೀದತಿ ನ ಸಂಶಯಃ ॥೩೫೦॥

ರಸಲಿಂಗೇ ಮಹಾದೇವಂ ಸಂಪೂಜ್ಯಾನ್ವಹಮಾದರಾತ್ ।
ಭುಕ್ತ್ವಾ ಭೋಗಾನ್ಮಹಾದೇವಂ ಪ್ರಾಪ್ನೋತ್ಯೇವ ನ ಸಂಶಯಃ ॥೩೫೧॥

ಹೈಮರೌಪ್ಯಾದಿಲಿಂಗೇಷು ಸಂಪೂಜ್ಯ ಪರಮೇಶ್ವರಂ ।
ಸರ್ವಪಾಪವಿನಿರ್ಮುಕ್ತಾಃ ಪ್ರಯಾಂತಿ ಶಿವಮಂದಿರಂ ॥೩೫೨॥

ಸನಾತನಮಹರ್ಷಿಯೇ, ಈಶ್ವರಾನುಗ್ರಹವಿರುವವರಿಗೆ ಮಾತ್ರ ಭಸ್ಮಧಾರಣೆಯಲ್ಲಿ ಶ್ರದ್ಧೆ ಹುಟ್ಟುವುದು; ಇತರರಿಗೆ ಎಂದೂ ತೋರಲಾರದು ಎಂದು ವೇದವೇ ಹೇಳುತ್ತಿರುವುದು. ಮೊದಲು ಆ ವೇದದಲ್ಲಿ ನಿನಗೆ ಅತ್ಯಂತ ಶ್ರದ್ಧೆಯಿರುವುದರಿಂದಲೇ ಭಸ್ಮಧಾರಣೆಯಲ್ಲಿ ನಿನಗೆ ಇಷ್ಟು ಆಸಕ್ತಿಯಿರುವುದು. ಒಟ್ಟಿನಲ್ಲಿ ನೀನೇ ಧನ್ಯ. ೩೪೭-೩೪೮

ನಿನಗೆ ದೇವೋತ್ತಮನಾದ ಶಂಕರನಲ್ಲಿ ಇಷ್ಟು ಭಕ್ತಿಯಿರುವುದರಿಂದಲೇ ನಿನಗೆ ಈಗ ನಾನು ಶಿವಲಿಂಗಗಳ ಮಹಿಮೆಯನ್ನು ವಿಸ್ತರಿಸಿ ಹೇಳುವೆನು. ಶಿವಲಿಂಗಗಳಲ್ಲೆಲ್ಲಾ ರಸಲಿಂಗವೆಂಬುದು ಅತ್ಯಂತ ಶ್ರೇಷ್ಠವಾದುದು. ಅದರ ಪೂಜೆಯಿಂದ ಶಂಕರನು ಪ್ರಸನ್ನನಾಗುವುದರಲ್ಲಿ ಸಂಶಯವಿಲ್ಲ. ॥೩೪೯-೩೫೦॥

ರಸಲಿಂಗದಲ್ಲಿ ಮಹಾದೇವನನ್ನು ಪೂಜಿಸುವವರಿಗೆ ಮಹಾದೇವನು ಸಕಲ ಸಂಪತ್ತುಗಳನ್ನೂ ನಿಜವಾಗಿ ಕೊಡುವನು. ಅದೇರೀತಿ ಚಿನ್ನ, ಬೆಳ್ಳಿ ಮುಂತಾದ ಲೋಹನಿರ್ಮಿತವಾದ ಲಿಂಗಗಳಲ್ಲಿ ಈಶ್ವರನನ್ನು ಪೂಜಿಸುವುದರಿಂದಲೂ ಮಾನವನು ಸಕಲ ಪಾಪನಿರ್ಮುಕ್ತನಾಗುವನು. ॥೩೫೧-೩೫೨॥

ಕಾಶ್ಮೀರಲಿಂಗಮಮಲಂ ಪುರಾ ವಿಷ್ಣುರ್ಯಥಾವಿಧಿ ।
ಪೂಜಯಿತ್ವಾ ಪರಾಂವೃದ್ಧಿಂ ಲಕ್ಷ್ಮೀಂ ಚಾವಾಪ ಶೋಭನಾಂ ॥೩೫೩॥

ವಿಧಿರ್ಮರಕತೇ ಲಿಂಗೇ ಸಮಭ್ಯರ್ಚ್ಯ ಮಹೇಶ್ವರಂ ।
ಸರ್ಗಕೋಽಭೂದಯತ್ನೇನ ಮಹಾದೇವಪ್ರಸಾದತಃ ॥೩೫೪॥

ವೃತ್ರಂ ಹತ್ವಾ ವಿನಾ ಯತ್ನಂ ಸ್ವರ್ಗಂ ಪ್ರಾಪ ಪುನರ್ಮಘವಾ ।
ಹೇಮಲಿಂಗೇ ಸಮಭ್ಯರ್ಚ್ಯ ಮಹಾದೇವಂ ಶಚೀಪತಿಃ ॥೩೫೫॥

ಯೋಗಿನೋ ಯೋಗಸಂಪನ್ನಾ ಜಾತಾ ಭಸ್ಮವಿಭೂಷಣಾಃ ।
ವೈದ್ರುಮಂ ಲಿಂಗಮಭ್ಯರ್ಚ್ಯ ಯೋಗಸಿದ್ಧ್ಯರ್ಥಮಾದರಾತ್ ॥೩೫೬॥

ಕಪಿಲಾದ್ಯಾ ಮಹಾಸಿದ್ಧಾ ನಾರ್ಮದಂ ಲಿಂಗಮುತ್ತಮಂ ।
ಸಂಪೂಜ್ಯ ಸಿದ್ಧಿಮಾಪನ್ನಾಃ ಸಿತಭಸ್ಮವಿಭೂಷಣಾಃ ॥೩೫೭॥

ದೇವೈಃ ದೇವರ್ಷಿಭಿಃ ಸಿದ್ಧೈರನ್ಯೈಶ್ಚ ಮುನಿಪುಂಗವೈಃ ।
ನಾರ್ಮದಾದೀನಿ ಲಿಂಗಾನಿ ಪೂಜಿತಾನಿ ಮುಮುಕ್ಷುಭಿಃ ॥೩೫೮॥

ಹಿಂದೆ ವಿಷ್ಣುವು ಕಾಶ್ಮೀರಲಿಂಗದಲ್ಲಿ ಶಿವನನ್ನು ಪೂಜಿಸಿ ತತ್ಫಲವಾಗಿ ಲಕ್ಷ್ಮೀ ದೇವಿಯನ್ನು ಪಡೆದನು. ಹಾಗೆಯೇ ಬ್ರಹ್ಮನು ಮರಕತಲಿಂಗಾರಾಧನೆಯಿಂದ ಸುಲಭನಾಗಿ ಸೃಷ್ಟಿಕರ್ತನಾದನು ॥೩೫೩-೩೫೪॥

ಇಂದ್ರನು ಹಿಂದೆ ಸುವರ್ಣಲಿಂಗದಲ್ಲಿ ಶಿವನನ್ನಾರಾಧಿಸಿ ವೃತ್ರಾಸುರನನ್ನು ಕೊಂದು ಸ್ವರ್ಗವನ್ನು ಮತ್ತೆ ಪಡೆದನು. ಹಾಗೆಯೇ ಅನೇಕರು ಯೋಗಿಗಳು ಭಸ್ಮಭೂಷಿತರಾಗಿ ಹವಳದ ಲಿಂಗವನ್ನು ಆರಾಧಿಸಿ, ಯೋಗಸಿದ್ಧಿಯನ್ನು ಪಡೆದು ಮೋಕ್ಷವನ್ನು ಹೊಂದಿದರು. ॥೩೫೫-೩೫೬॥

ಕಪಿಲರೇ ಮೊದಲಾದ ಸಿದ್ಧಪುರುಷರು ಶುಭ್ರಭಸ್ಮಧಾರಿಗಳಾಗಿ ನರ್ಮದಾ ಲಿಂಗವನ್ನು ಪೂಜಿಸಿ ತಪಸ್ಸಿದ್ಧಿಯನ್ನು ಪಡೆದರು. ಹಾಗೆಯೇ ದೇವರ್ಷಿಗಳೂ, ಸಿದ್ಧರೂ, ಬ್ರಹ್ಮರ್ಷಿಗಳೂ, ದೇವತೆಗಳೂ ಮೋಕ್ಷಾಪೇಕ್ಷೆಯಿಂದ ನರ್ಮದಾದಿ ಶಿವಲಿಂಗಗಳನ್ನರ್ಚಿಸಿದರು. ॥೩೫೭-೩೫೮॥

ಮೃನ್ಮಯಂ ಲಿಂಗಮಭ್ಯರ್ಚ್ಯ ಪುರಾ ಲಕ್ಷ್ಮೀಃ ಪ್ರಯತ್ನತಃ ।
ಜಾತಾ ಸೌಭಾಗ್ಯಸಂಪನ್ನಾ ಮಹಾದೇವಪ್ರಸಾದತಃ ॥೩೫೯॥

ಶೀಘ್ರಮಿಷ್ಟಾರ್ಥದಂ ಪ್ರೋಕ್ತಂ ಮೃತ್ತಿಕಾಲಿಂಗಪೂಜನಂ ।
ತದಾಯುರ್ವೃದ್ಧಿದಂ ನಿತ್ಯಂ ಭುಕ್ತಿಮುಕ್ತಿಪ್ರದಂ ಚ ತತ್ ॥೩೬೦॥

ಯಾವನ್ಮೃದ್ರೇಣುರಚಿತಂ ಪಾರ್ಥಿವಂ ಲಿಂಗಮುತ್ತಮಂ ।
ತಾವಂತ್ಯಘಾನಿ ನಶ್ಯಂತಿ ತನ್ಮೃಲ್ಲಿಂಗಾರ್ಚನಾನ್ಮುನೇ ॥೩೬೧॥

ಮೃನ್ಮಯಂ ಲಿಂಗಮಭ್ಯರ್ಚ್ಯ ಸರ್ವದಾ ಕಾಮದಂ ಶುಭಂ ।
ಸರ್ವದುಃಖಹರಂ ಪುಣ್ಯಂ ಪ್ರೋಕ್ತಂ ಸ್ವರ್ಗಾಪವರ್ಗದಂ ॥೩೬೨॥

ಮೃನ್ಮಯಂ ಲಿಂಗಮಭ್ಯರ್ಚ್ಯ ಪುರಾ ಬ್ರಹ್ಮಾದಯಃ ಸುರಾಃ ।
ಸ್ವಸ್ವೇಪ್ಸಿತಂ ಸಮಾಸಾದ್ಯ ಬಭೂವುಸ್ಸುಖಿನೋ ಮುನೇ ॥೩೬೩॥

ತಸ್ಮಾನ್ನ ಮೃನ್ಮಯಲಿಂಗಸ್ಯ ಪ್ರಯತೇ ಸಾಂಗಮರ್ಚನಂ ।
ತೇನ ಸದ್ಯಃ ಸಂಪ್ರಾಪ್ನೋತಿ ಸೌಭಾಗ್ಯಮತುಲಂ ಧ್ರುವಂ ॥೩೬೪॥

ಲಕ್ಷ್ಮೀದೇವಿಯು ಮೃತ್ತಿಕಾಲಿಂಗವನ್ನು ಪೂಜಿಸಿ, ಮಹಾದೇವಾನುಗ್ರಹದಿಂದ ಸೌಭಾಗ್ಯವನ್ನೆಲ್ಲಾ ಸಂಪಾದಿಸಿದಳು. ಆದ್ದರಿಂದಲೇ ಮೃನ್ಮಯಲಿಂಗವೆಂಬುದು ಶೀಘ್ರವಾಗಿ ಇಷ್ಟಾರ್ಥವನ್ನು ನೆರವೇರಿಸತಕ್ಕದ್ದು. ಆಯುರಾರೋಗ್ಯಾದಿಗಳನ್ನೂ ಅಭಿವೃದ್ಧಿಪಡಿಸತಕ್ಕದ್ದು. (೩೫೯-೩೬೦)

ಮೃನ್ಮಯವಾದ ಶಿವಲಿಂಗದಲ್ಲಿ ಎಷ್ಟು ಮಣ್ಣಿನ ಕಣಗಳಿವೆಯೋ, ಅಷ್ಟು ಸಂಖ್ಯೆಯ ಪಾಪಗಳು ಪೂಜೆಯಿಂದ ನಿವೃತ್ತಿಯಾಗುವುವು. ಸಕಲೇಷ್ಟಾರ್ಥಪ್ರದವಾಗಿ, ಸರ್ವದುಃಖನಾಶಕವಾಗಿ, ಸ್ವರ್ಗ ಮತ್ತು ಮೋಕ್ಷಸುಖವನ್ನು ಕೊಡುವುದೆಂದರೆ ಮೃಲ್ಲಿಂಗಾರಾಧನೆಯೊಂದೇ (೩೬೧-೩೬೨)

ಬ್ರಹ್ಮಾದಿ ದೇವತೆಗಳೂ ಸಹ ಹಿಂದೆ ತಮ್ಮ ತಮ್ಮ ಇಷ್ಟಾರ್ಥಗಳನ್ನು ಮೃಲ್ಲಿಂಗಾರಾಧನೆಯಿಂದಲೇ ಸಂಪಾದಿಸಿಕೊಂಡರು. ಆದ್ದರಿಂದ ಮಣ್ಣಿನ ಲಿಂಗವನ್ನು ಸಾಂಗವಾಗಿ ಆರಾಧಿಸುವುದರಿಂದ ಸಕಲಸೌಭಾಗ್ಯಗಳೂ ಶೀಘ್ರವಾಗಿ ಲಭಿಸುವುವು. ಇದರಲ್ಲಿ ಸಂದೇಹವಿಲ್ಲ (೩೬೩-೩೬೪)

ಪುರಾ ವಜ್ರಂ ಸಮಾದಾಯ ವಜ್ರೀ ಪರ್ವತಶಾಸನಃ ।
ಗಿರಿಪಕ್ಷಭೇದನಾರ್ಥಮುದ್ಯುಕ್ತಃ ಪ್ರಯಯೌ ಗಿರೀನ್ ॥೩೬೫॥

ತಮಾಯಾಂತಂ ಸಮಾಲೋಕ್ಯ ಮೈನಾಕೋ ಹಿಮವತ್ಪ್ರಿಯಃ ।
ಹಿಮವಂತಂ ಪ್ರಣಮ್ಯಾಹ ವಿನಯಾನತಕಂಧರಃ ॥೩೬೬॥

|| ಮೈನಾಕ ಉವಾಚ ||

ಶೈಲಪಕ್ಷಭೇದನಾರ್ಥಂ ವಜ್ರಪಾಣಿಃ ಸಮುದ್ಯತಃ ।
ಕಿಂ ಕರ್ತವ್ಯಂ ಮಯಾ ಸ್ವಾಮಿನ್ ಭವತಾ ಚ ವದಸ್ವ ಮೇ ॥೩೬೭॥

ಕಮದ್ಯ ಶರಣಂ ಯಾಮಃ ಕಃ ಶರಣ್ಯಃ ಸುಖಪ್ರದಃ ।
ಕಃ ಪೂಜಿತೋ ವಜ್ರಘಾತಾದಸ್ಮಾನ್ಸಂರಕ್ಷಯಿಷ್ಯತಿ ॥೩೬೮॥

|| ಹಿಮವಾನುವಾಚ ||

ಇತಿ ಪುತ್ರವಚಃ ಶ್ರುತ್ವಾ ಹಿಮವಾಂಛಿವಪೂಜಕಃ ।
ಪುತ್ರಂ ಪ್ರತ್ಯಾಹ ವಚನಂ ಸರ್ವದುಃಖವಿನಾಶಕಂ ॥೩೬೯॥

ದುಃಖಂ ಮಾ ಕುರು ಪುತ್ರ ತ್ವಂ ತ್ಯಜ ವಜ್ರೋದ್ಭವಂ ಭಯಂ ।
ಸರ್ವದುಃಖನಿವೃತ್ತ್ಯರ್ಥಂ ಶಂಕರಂ ಶರಣಂ ವ್ರಜ ॥೩೭೦॥

---

ಹಿಂದೆ ಇಂದ್ರನು ಪರ್ವತಗಳ ರೆಕ್ಕೆಗಳನ್ನು ಕತ್ತರಿಸಲು ಹೊರಟು ಮೈನಾಕ ಪರ್ವತವನ್ನು ಅರಸಿಕೊಂಡು ಹೊರಟನು. ಹಾಗೆ ತನಗಾಗಿ ಬರುತ್ತಿದ್ದ ಇಂದ್ರನನ್ನು ನೋಡಿ ಮೈನಾಕನು ತಂದೆಯಾದ ಹಿಮವಂತನನ್ನು ಕುರಿತು ವಿನಯದಿಂದ ಹೀಗೆ ಪ್ರಶ್ನಿಸಿದನು. ||೩೬೫-೩೬೬||

“ತಂದೆಯೇ, ವಜ್ರಾಯುಧವನ್ನು ಹಿಡಿದು ಇಂದ್ರನು ಪರ್ವತಪಕ್ಷಗಳನ್ನು ಕತ್ತರಿಸುವುದಕ್ಕಾಗಿ ನನ್ನನ್ನೇ ಅರಸಿಕೊಂಡು ಬರುತ್ತಿರುವನು. ಈ ಸಮಯದಲ್ಲಿ ನನ್ನನ್ನು ರಕ್ಷಿಸುವವರಾರು? ಯಾರನ್ನು ಮರೆಹೋಗಲಿ? ವಜ್ರಾಯುಧದಪೆಟ್ಟನ್ನು ತಪ್ಪಿಸುವವರಾರು?” ||೩೬೭-೩೬೮||

ಎಂದು ಕೇಳಿಕೊಂಡ ಮಗನನ್ನು ನೋಡುತ್ತಾ, ಶಿವಾರಾಧಕನಾದ ಹಿಮವಂತನು, ಸರ್ವದುಃಖವಿನಾಶಕವಾದ ಕೆಲವುಮಾತುಗಳನ್ನಾಡಿದನು. “ಎಲೈ

ಕಥಂ ವಜ್ರೋದ್ಭವಂ ಭಾನಿ ಶಿವಾರ್ಚನಪರಸ್ಯ ತೇ ।
ನ ಭಯಂ ಶಿವಭಕ್ತಾನಾಂ ಸ್ವಪ್ನೇಽಪಿ ಪ್ರಲಯೇಽಪಿ ವಾ ॥೩೨೦॥

ವಯಂ ಶಿವೈಕಶರಣಾಸ್ತತೋಽಸ್ಮಾಕಂ ಸದಾಶಿವಃ ।
ಶುಭಪ್ರದಃ ಶುಭಾಕಾರೋ ದಾಸ್ಯತ್ಯೇವ ಶುಭಾನ್ನ ನಃ ॥೩೨೧॥

ಕ್ವ ಭಯಂ ಶಾಂಭವಾನಾಂ ನೋ ವಜ್ರಿಣಶ್ಚಕ್ರಿಣೋಽಥವಾ ।
ಕಾಲಮೃತ್ಯೋರಪಿ ಭಯಂ ನಾಸ್ಮಾಕಂ ವಿದ್ಯತೇ ಸುತ ॥೩೨೩॥

ಶರಣಂ ಯಾಂತಿ ಯೇ ನಿತ್ಯಂ ಮಹಾದೇವಮುಮಾಪತಿಂ ।
ದುಃಖಾನಿ ನ ಭವಿಷ್ಯಂತಿ ತೇಷಾಂ ಸ್ವಪ್ನೇಽಪಿ ಸರ್ವಥಾ ॥೩೨೪॥

ತಾವದೇವ ಹಿ ದುಃಖಾನಿ ವಿವಿಧಾನಿ ಶರೀರಿಣಾಂ ।
ಯಾವನ್ನಾರಾಧ್ಯತೇ ಭಕ್ತ್ಯಾ ಭಗವಾನಂಬಿಕಾಪತಿಃ ॥೩೨೫॥

ಯಃ ಪೂಜಯತಿ ಗೌರೀಶಂ ಸಾವಧಾನೇನ ಸಾದರಂ ।
ಸ ದುಃಖೀ ನ ಭವತ್ಯೇವ ಪ್ರಲಯೇಽಪಿ ನ ಸಂಶಯಃ ॥೩೨೬॥

ಪುತ್ರನೇ, ನೀನು ವಜ್ರಾಯುಧದ ಏಟನ್ನು ತಪ್ಪಿಸಿಕೊಳ್ಳಬೇಕಾದರೆ ಅಥವಾ ಇತರ ಯಾವ ದುಃಖಗಳನ್ನು ನಿವಾರಿಸಿಕೊಳ್ಳಬೇಕಾದರೂ ಮೊದಲು ಈಶ್ವರಾರಾಧನೆ ಮಾಡು; ಶಂಕರನನ್ನೇ ಮೊರೆಹೊಂದು. ॥೩೧೯-೩೨೦॥

ಶಿವಾರ್ಚನಪರನಾಗಿ ಶಿವನನ್ನೇ ನಂಬಿರುವವನಿಗೆ, ವಜ್ರಾಯುಧದಿಂದ ಭಯವು, ಸ್ವಪ್ನದಲ್ಲಿಯಾಗಲಿ, ಪ್ರಲಯಕಾಲದಲ್ಲಿಯಾಗಲಿ ಉಂಟಾಗಲಾರದು. ಅಲ್ಲದೆ ನಾವು ಸದಾ ಶಿವನನ್ನೇ ಮೊರೆಹೊಕ್ಕಿರುವವರು. ಇಂತಹ ನಮಗೆ ಶಂಕರನು ಸರ್ವದಾ ಮಂಗಳವನ್ನೇ ಅನುಗ್ರಹಿಸುವನು ॥೩೨೧-೩೨೨॥

ಶಾಂಭವರೆನಿಸಿದ ನಮಗೆ ಇಂದ್ರನಿಂದಾಗಲಿ, ವಿಷ್ಣುವಿನಿಂದಾಗಲಿ, ಕಾಲಮೃತ್ಯುವಿನಿಂದಾಗಲಿ ಭಯವಿರುವುದಿಲ್ಲ. ಸದಾಶಿವನನ್ನೇ ಮೊರೆಹೊಕ್ಕಿರುವವರಿಗೆ ಸ್ವಪ್ನದಲ್ಲಿಯೂ ದುಃಖಗಳೊದಗಲಾರವು. ॥೩೨೩-೩೨೪॥

ಅಂಬಿಕಾಪತಿಯೆನಿಸಿದ ಶಂಕರನನ್ನು ಸ್ಮರಿಸುವವರೆಗೇ, ಆರಾಧಿಸುವವರೆಗೇ ಮಾನವರಿಗೆ ದುಃಖವಾರ್ತೆಯಿರುವುದು. ಸಾವಧಾನಮನಸ್ಸಿನಿಂದ ಗೌರೀಪತಿಯನ್ನು ಪೂಜಿಸಿದವರಿಗೆ ಪ್ರಲಯಪರ್ಯಂತ ದುಃಖವೊದಗುವುದಿಲ್ಲ. ॥೩೨೫-೩೨೬॥

ಪೂಜಯಿತ್ವಾಪಿ ಗೌರೀಶಂ ಯದಿ ದುಃಖಮವಾಪ್ಯತೇ ।
ವೇದಾಃ ಪ್ರಮಾಣಮಿತಿ ಧೀಃ ಪ್ರಮಾರೂಪಾ ತದಾ ಕಥಂ ॥೩೭೭॥

ಯದಾಸ್ತಾದ್ರಾವೃದೇತ್ಯರ್ಕಸ್ತದಾಪಿ ಶಿವಪೂಜಕಃ ।
ನ ಪ್ರಾಪ್ನೋತ್ಯೇವ ದುಃಖಾನಿ ಸ್ವಪ್ನೇಽಪೀತಿ ಮತಿರ್ಮಮ ॥೩೭೮॥

ಲೋಕೇ ಶಿವಾರ್ಚನಾದನ್ಯನ್ನಾಸ್ತಿ ಶೋಕವಿನಾಶಕಂ ।
ಸತ್ಯಮೇತತ್ಪುನಃ ಸತ್ಯಮುದ್ಧೃತ್ಯ ಭುಜಮುಚ್ಯತೇ ॥೩೭೯॥

ಶೋಕಃ ಪಾಪಕೃತಃ ಪಾಪಂ ವಿನಶ್ಯತಿ ಶಿವಾರ್ಚನಾತ್ ।
ನಷ್ಟೇ ಪಾಪೇ ಕುತಶ್ಶೋಕೋ ನಾನಾಪಾತಕಹೇತುಕಃ ॥೩೮೦॥

ನ ಭವಿಷ್ಯತಿ ವಿಶ್ವಾಸೋ ಯೇಷಾಮೀಶ್ವರಪೂಜನೇ ।
ತೇಷಾಂ ಬಹೂನಿ ದುಃಖಾನಿ ಭವಿಷ್ಯತಿ ನ ಸಂಶಯಃ ॥೩೮೧॥

ಯೇಷಾಮೀಶ್ವರಪೂಜಾಯಾಂ ವಿಶ್ವಾಸಸ್ಸತತಂ ಭವೇತ್ ।
ಸದಾ ತೇಷಾಂ ಭವಿಷ್ಯಂತಿ ಶೋಭನಾನಿ ಸುಖಾನಿ ಚ ॥೩೮೨॥

ಗೌರೀಪತಿಯನ್ನು ಪೂಜಿಸಿದವನಿಗೂ ದುಃಖಪ್ರಾಪ್ತಿಯಿರುವುದಾದರೆ ವೇದಗಳು ಪ್ರಮಾಣಗಳೆಂಬ ಜ್ಞಾನವು ನಿಶ್ಚಯಾತ್ಮಕವೆನಿಸುವುದು ಹೇಗೆ? ಪರಶಿವನನ್ನು ಪೂಜಿಸಿದವರಿಗೆ ದುಃಖವಿರುವುದಿಲ್ಲವೆಂಬ ಮಾತು ವೇದದ್ದಲ್ಲವೆ? ಪ್ರದೋಷಕಾಲದಲ್ಲಿ ಶಿವಾರ್ಚನೆಮಾಡಿದವನಿಗಂತೂ ಸ್ವಪ್ನದಲ್ಲಿಯೂ ದುಃಖವಿರುವುದಿಲ್ಲವೆಂದೇ ನನ್ನ ಭಾವನೆ. ॥೩೭೭-೩೭೮॥

ಲೋಕದಲ್ಲಿ ಶಿವಾರ್ಚನೆಗಿಂತ ಶೋಕವಿನಾಶಕವಾದ ವಸ್ತುವು ಮತ್ತೊಂದಿಲ್ಲ; ಎಂಬುದಾಗಿ ಸಾರಿಸಾರಿ ಹೇಳುವೆನು. ಪಾಪದಿಂದ ಶೋಕವು ಹೆಚ್ಚುವುದು. ಅಂತಹ ದುಃಖವು ಶಿವಾರ್ಚನೆಯಿಂದ ನಾಶವಾಗುವುದು ಪಾಪವು ನಷ್ಟವಾದ ಮೇಲೆ ದುಃಖವೆಲ್ಲಿಂದ ಬರುವುದು? ದುಃಖಮೂಲವೇ ಪಾತಕ. ॥೩೭೯-೩೮೦॥

ಈಶ್ವರಾರ್ಚನೆಯಲ್ಲಿ ನಂಬಿಕೆಯಿಡದಿದ್ದವರಿಗಂತೂ ಸದಾ ದುಃಖವು ತಪ್ಪುವುದೇ ಇಲ್ಲ. ಯಾರು ಶಿವಾರ್ಚನೆಯಲ್ಲಿ ಆದರ ವಿಶ್ವಾಸಗಳನ್ನು ಹೊಂದಿರುವರೋ, ಅಂತಹವರಿಗೆ ಸುಖಪರಂಪರೆಗಳು ಮಂಗಳಕರವಾಗಿ ಲಭಿಸುವುವು. ॥೩೮೧-೩೮೨॥

ಅತ ಏವ ಮಹಾದೇವಂ ಸರ್ವಲೋಕಮಹೇಶ್ವರಂ ।
ಪೂಜಯಂತ್ಯತಿಯತ್ನೇನ ಮುನಯೋ ದುಃಖನಾಶಕಂ ॥೩೮೩॥

ಹೃದಿ ಕ್ಷಣಂ ಕ್ಷಣಾರ್ಧಂ ವಾ ಧ್ಯಾಯೇದ್ಯಃ ಪಾರ್ವತೀಪತಿಂ ।
ಸ ನಾಪ್ನೋತ್ಯೇವ ದುಃಖಾನಿ ಕದಾಚಿದಪಿ ಸರ್ವಥಾ ॥೩೮೪॥

ಮಹೇಶಧ್ಯಾನಮತುಲಂ ದುಃಖಾರಣ್ಯದವಾನಲಃ ।
ಸತ್ಯಮೇತತ್ಪುನಃ ಸತ್ಯಂ ಸತ್ಯಮೇವ ನ ಸಂಶಯಃ ॥೩೮೫॥

ಮಹೇಶಸ್ಮೃತಿಮಾತ್ರೇಣ ಮಹಾಪಾತಕಕೋಟಯಃ ।
ನಶ್ಯಂತಿ ದುಃಖದಾಸ್ಸದ್ಯಃ ಶಲಭಾ ಇವ ವಹ್ನಿಗಾಃ ॥೩೮೬॥

ಮಹಾಪ್ರಲಯಕಾಲೇ ವಾ ಘೋರಾಯಾಂ ವಾ ಮಹಾಪದಿ ।
ನ ಪ್ರಾಪ್ನುವಂತಿ ದುಃಖಾನಿ ಶಿವಾರ್ಚನಪರಾಸ್ಸ್ವತ ॥೩೮೭॥

ಕರ್ಮಣಾ ಮನಸಾ ವಾಚಾ ಶಿವಮಭ್ಯರ್ಚಯಂತಿ ಯೇ ।
ತೇಷಾಂ ಶುಭಪ್ರದಃ ಸದ್ಯಃ ಪ್ರಸೀದತಿ ಮಹೇಶ್ವರಃ ॥೩೮೮॥

---

ಆದ್ದರಿಂದಲೇ ಋಷಿಗಳು ಸರ್ವಲೋಕೇಶ್ವರನಾದ ಶಂಕರನನ್ನು ತಪ್ಪದೆ ಪೂಜಿಸುವರು. ಯಾರು ಕ್ಷಣಕಾಲವಾಗಲಿ, ಅರ್ಧಕ್ಷಣಹೊತ್ತಾಗಲಿ ಪಾರ್ವತೀಪತಿಯಾದ ಮಹಾದೇವನನ್ನು ಸ್ಮರಿಸುವರೋ, ಅಂತಹವರು ಎಂದೂ ದುಃಖಪರಂಪರೆಗಳನ್ನು ಹೊಂದಲಾರರು. ॥೩೮೩-೩೮೪॥

ಮಹೇಶ್ವರನ ಧ್ಯಾನವೆಂಬುದು, ದುಃಖವೆಂಬ ಕಾಡಿಗೆ ಕಾಡುಕಿಚ್ಚಿನಂತಿರುವುದು. ಇದು ಸಂಪೂರ್ಣವಾಗಿ ಸತ್ಯವಾದದ್ದು. ಮಹೇಶ್ವರನ ಸ್ಮರಣಮಾತ್ರದಿಂದಲೇ ದುಃಖಕರವಾದ ಕೋಟ್ಯಂತರ ಪಾಪರಾಶಿಗಳು, ಬೆಂಕಿಯಲ್ಲಿ ಪತಂಗದ ಹುಳುಗಳು ನಾಶವಾಗುವಂತೆ ನಷ್ಟವಾಗುವುವು. ॥೩೮೫-೩೮೬॥

ಎಲೈ ಪುತ್ರನೇ, ಪ್ರಳಯಕಾಲದಲ್ಲಿಯೂ ಘೋರವಾದ ವಿಪತ್ಕಾಲದಲ್ಲಿಯೂ ಶಿವಾರ್ಚನಪರರಾದವರು ದುಃಖವನ್ನು ಹೊಂದಲಾರರು. ಯಾರು ಕಾಯೇನ, ವಾಚಾ, ಮನಸಾ ಶಂಕರನನ್ನು ಅರ್ಚಿಸುತ್ತಾರೆಯೋ, ಅವರಿಗೆ ಮಹಾದೇವನು ಸಕಲ ಶುಭಫಲಗಳನ್ನೂ ಅನುಗ್ರಹಿಸುವನು. ಇದರಲ್ಲಿ ಸಂಶಯವಿಲ್ಲ. ॥೩೮೭-೩೮೮॥

ಯಮಾದಪಿ ನ ಭೀಸ್ತೇಷಾಂ ಯೇಷಾಂ ಭಕ್ತಿರ್ಮಹೇಶ್ವರೇ ।
ಭಕ್ತಿರ್ಮಾಹೇಶ್ವರೀ ಯಸ್ಮಾತ್ಸರ್ವಸೌಭಾಗ್ಯದಾಯಿನೀ ॥೩೮೯॥

ಧನ್ಯಾಸ್ತೇ ಕೃತಪುಣ್ಯಾಸ್ತೇ ಕೃತಾರ್ಥಾಸ್ತೇ ಸದಾಪಿ ಯೇ ।
ಸ್ತುವಂತಿ ಪಾರ್ವತೀನಾಥಂ ಪೂಜಯಂತಿ ಚ ಸಾದರಂ ॥೩೯೦॥

ಯೇ ಪೂಜಯಂತಿ ವಿಧಿವತ್ಕೀರ್ತಯಂತಿ ಚ ಶಂಕರಂ ।
ತೇಷಾಂ ಹೃದಿ ಮಹಾದೇವಃ ಶುಭದಸ್ತಿಷ್ಠತಿ ಧ್ರುವಂ ॥೩೯೧॥

ತ್ವಮಪ್ಯತ್ಯಂತಯತ್ನೇನ ಲಿಂಗಮೂರ್ತಿಂ ಮಹೇಶ್ವರಂ ।
ಸರ್ವದುಃಖವಿನಾಶಾರ್ಥಂ ಪೂಜಯಸ್ವ ವಿಧಾನತಃ ॥೩೯೨॥

ಕುರುಷ್ವ ಮೃನ್ಮಯಂ ಲಿಂಗಂ ತಸ್ಮಿನ್ಪೂಜಯ ಶಂಕರಂ ।
ತತಸ್ಸಂಪೂಜಿತಶ್ಶಂಭುಃ ಸದ್ಯಸ್ತುಷ್ಟೋ ಭವಿಷ್ಯತಿ ॥೩೯೩॥

ಸ ಸಂತುಷ್ಟೋ ಮಹಾದೇವೋ ದದಾತ್ಯೇವ ಸುಖಂ ಸದಾ ।
ಅದೇಯಂ ಶಿವಭಕ್ತಾಯ ಮಹೇಶಸ್ಯ ನ ವಿದ್ಯತೇ ॥೩೯೪॥

ಮಹೇಶ್ವರ ವಿಷಯಕವಾದ ಭಕ್ತಿಯು ಸರ್ವಸೌಭಾಗ್ಯದಾಯಕವಾದುದು ಶಿವಭಕ್ತಿಯುಳ್ಳವನು ಯಮನಿಂದಲೂ ಹೆದರಬೇಕಾಗಿಲ್ಲ. ಯಾರು ಪಾರ್ವತೀ ಪತಿಯಾದ ಶಂಕರನನ್ನು ಸದಾ ಧ್ಯಾನಿಸುವರೋ ಮತ್ತು ಪೂಜಿಸುವರೋ ಅವರೇ ಧನ್ಯರು. ಕೃತಾರ್ಥರು. ಮತ್ತು ಸುಕೃತಿಗಳು. ॥೩೮೯-೩೯೦॥

ಯಾರು ವಿಧಿವತ್ತಾಗಿ ಶಂಕರನನ್ನು ಪೂಜಿಸುವರೋ, ಅವರ ಹೃದಯದಲ್ಲಿ ಸ್ವಾಮಿಯು ಶುಭಪ್ರದನಾಗಿ ನೆಲಸುವನು. ಇದು ನಿಜ. ಆದ್ದರಿಂದ ನೀನು ಸರ್ವದುಃಖನಾಶಕನಾದ ಮಹಾದೇವನನ್ನು ಈಗಲೇ ಪೂಜಿಸು ನೀನು ದುಃಖ ರಾಶಿಯಿಂದ ಮುಕ್ತನಾಗುವೆ. ॥೩೯೧-೩೯೨॥

ಮೃತ್ತಿಕೆಯಿಂದ ಶಿವಲಿಂಗವನ್ನು ಮಾಡಿ ಅದನ್ನು ಭಕ್ತಿಯಿಂದ ಪೂಜಿಸು. ಅದರಿಂದ ಸಂತುಷ್ಟನಾದ ಮಹಾದೇವನು ಸರ್ವಸೌಖ್ಯವನ್ನೂ ದಯಪಾಲಿಸುವನು. ಮಹಾದೇವನು ತನ್ನ ಭಕ್ತನಿಗೆ ಕೊಡದಿರುವ ವರವೇ ಇರುವುದಿಲ್ಲ. ॥೩೯೩-೩೯೪॥

ವಿಷ್ಣುತ್ವಂ ಯೋ ದದೌ ವಿಷ್ಣೋರ್ವಿಷ್ಣುನೇತ್ರಾರ್ಚಿತಶ್ಶಿವಃ ।
ಸ ಸರ್ವದಾ ಸುಖಂ ತುಭ್ಯಂ ಪೂಜಿತಸ್ಸಂಪ್ರಯಚ್ಛತಿ ॥೩೯೫॥

ಬ್ರಹ್ಮಣಾ ಯೋಽರ್ಚಿತಸ್ಸಾಂಬೋ ಬ್ರಹ್ಮತ್ವಂ ಬ್ರಹ್ಮಣೇ ದದೌ ।
ಸ ಸರ್ವದಾ ಸುಖಂ ತುಭ್ಯಂ ಪೂಜಿತಸ್ಸಂಪ್ರಯಚ್ಛತಿ ॥೩೯೬॥

ಋಷಿಭಿಃ ಪೂಜಿತಶ್ಶಂಭುಸ್ತೇಭ್ಯೋ ಮೋಕ್ಷಂ ದದೌ ಶಿವಃ ।
ಸ ಸರ್ವದಾ ಸುಖಂ ತುಭ್ಯಂ ಪೂಜಿತಸ್ಸಂಪ್ರಯಚ್ಛತಿ ॥೩೯೭॥

ಇಂದ್ರಾರ್ಚಿತೋಽಯಮಿಂದ್ರಾಯ ದದಾವಿಂದ್ರತ್ವಮೀಶ್ವರಃ ।
ಸ ಸರ್ವದಾ ಸುಖಂ ತುಭ್ಯಂ ಪೂಜಿತಸ್ಸಂಪ್ರಯಚ್ಛತಿ ॥೩೯೮॥

॥ ದಧೀಚಿರುವಾಚ ॥

ಅಪಾರಕರುಣಾಸಿಂಧುರ್ಜಗದಾಪನ್ನಿವಾರಕಃ ।
ನ ಹರಿಷ್ಯತಿ ಕಿಂ ಶೋಕಂ ತವ ಪುತ್ರಸ್ಯ ಶಂಕರಃ ॥೩೯೯॥

ಇತ್ಯುಕ್ತಂ ತದ್ವಚಃ ಶ್ರುತ್ವಾ ಮೈನಾಕಃ ಪ್ರೀತಮಾನಸಃ ।
ಕೃತಾಂಜಲಿಪುಟೋ ಭೂತ್ವಾ ಪಿತರಂ ಪ್ರಾಹ ಭೂಪತೇ ॥೪೦೦॥

---

ತನ್ನ ಕಣ್ಣುಗಳನ್ನೇ ಕಿತ್ತು ಶಿವಪಾದವನ್ನರ್ಚಿಸಿದ ವಿಷ್ಣುವಿಗೆ ವಿಷ್ಣುಪದವಿಯನ್ನೂ, ಭಕ್ತಿಯಿಂದಾರಾಧಿಸಿದ ಬ್ರಹ್ಮನಿಗೆ ಬ್ರಹ್ಮಪದವಿಯನ್ನೂ ಕೊಟ್ಟ ಶಂಕರನನ್ನು ನೀನು ಪೂಜಿಸು. ಶಂಭುವು ನಿನಗೆ ಸಕಲ ಸುಖಸಂಪತ್ತನ್ನೂ ಸರ್ವದ ಅನುಗ್ರಹಿಸುವನು. ॥೩೯೫-೩೯೬॥

ಇಂದ್ರನಿಂದ ಅರ್ಚಿತನಾಗಿ ಶಂಕರನು ಅವನಿಗೆ ಇಂದ್ರಪದವಿಯನ್ನೂ, ಋಷಿಗಳಿಂದ ಪೂಜಿತನಾಗಿ ಮೋಕ್ಷವನ್ನೂ ಅನುಗ್ರಹಿಸಿರುವನು. ಅಂತಹ ಮಹಾದೇವನನ್ನು ನೀನೂ ಪೂಜಿಸು. ನಿನ್ನ ಕಷ್ಟವು ನಿವಾರಣೆಯಾಗುವುದು. ॥೩೯೭-೩೯೮॥

ಸಂಪೂರ್ಣ ಕರುಣಾನಿಧಿಯೂ, ಜಗತ್ತಿನ ಕಷ್ಟವನ್ನೆಲ್ಲಾ ನಿವಾರಣೆಮಾಡುವವನೂ ಆದ ಮಹಾದೇವನು ನಿನ್ನ ಶೋಕವನ್ನು ಹೋಗಲಾಡಿಸದಿರುವನೆ?'' ಎಂದು ಹಿಮವಂತನು ಮಗನಾದ ಮೈನಾಕನಿಗೆ ಉಪದೇಶಿಸಲು, ಆ ಮಾತನ್ನು

ಮೃತ್ತಿಕಾಲಿಂಗಪೂಜಾಯಾ ವಿಧಾನಂ ವದ ಭೋಃ ಪಿತಃ ।
ಯಲ್ಲಿಂಗಪೂಜಯಾ ಸದ್ಯಃ ಪ್ರಸೀದತಿ ಮಹೇಶ್ವರಃ ॥೪೦೦॥

ಕಿಂ ವಾ ಪೂಜೋಪಕರಣಂ ಕೋ ವಾ ಮಂತ್ರಸ್ಸಮರ್ಚನೇ ।
ಅರ್ಚಕಸ್ಯಾಪಿ ನಿಯಮಃ ಕೋ ವಾ ತನ್ಮೇ ವದಾಧುನಾ ॥೪೦೧॥

॥ ಹಿಮವಾನುವಾಚ ॥

ಇತಿ ತದ್ವಚನಂ ಶ್ರುತ್ವಾ ಹಿಮವಾನಪಿ ಹೃಷ್ಟಧೀಃ ।
ಮೃತ್ತಿಕಾಲಿಂಗಪೂಜಾಯಾ ವಿಧಾನಂ ವಕ್ತುಮಾರಭೇ ॥೪೦೩॥

ಕೃತ್ವಾ ಶೌಚಾದಿಕಂ ಸಮ್ಯಗುಷಸಿ ಸ್ನಾನಮಾಚರೇತ್ ।
ನಿಮಜ್ಜ್ಯಾಂಭಸಿ ಗೌರೀಶಸ್ಮರಣಂ ಚ ಸಮಾಚರೇತ್ ॥೪೦೪॥

ಸದ್ಯೋಜಾತಾದಿಮಂತ್ರಾಣಾಂ ಸಮಾಪ್ತಿರ್ಯಾವದಾಭವೇತ್ ।
ತಾವತ್ಸ್ನಾತ್ವೈವ ತಾನ್ಮಂತ್ರಾನ್ ಸ್ಮರ್ತವ್ಯಃ ಪಾರ್ವತೀಪತಿಃ ॥೪೦೫॥

ಪರಿಧಾಯ ತತೋ ವಸ್ತ್ರಂ ಕೃತ್ವಾ ಚೋದ್ಧೂಲನಂ ತತಃ ।
ತ್ರಿಪುಂಡ್ರಧಾರಣಂ ಕೃತ್ವಾ ಕಾರ್ಯಂ ರುದ್ರಾಕ್ಷಧಾರಣಂ ॥೪೦೬॥

---

ಕೇಳಿದ ವೈನಾಕನು ಅಂಜಲಿಬದ್ಧನಾಗಿ ತಂದೆಯನ್ನು ಕುರಿತು ಹೀಗೆಂದನು. ॥೩೯೯-೪೦೦॥

"ತಂದೆಯೇ, ಮೃತ್ತಿಕಾಲಿಂಗ ಪೂಜಾವಿಧಾನವನ್ನು ವಿಸ್ತಾರವಾಗಿ ಹೇಳು. ಮೃತ್ತಿಕಾಲಿಂಗಾರಾಧನೆಯಿಂದ ಮಹಾದೇವನು ತೃಪ್ತಿಹೊಂದುವನು ಎಂದು ಹೇಳಿದೆಯಲ್ಲವೆ? ಆ ಆರಾಧನೆಗೆ ಬೇಕಾದ ಮುಖ್ಯಸಾಮಗ್ರಿಗಳಾವುವು? ಮಂತ್ರವಾವುದು? ಪೂಜಕನ ನಿಯಮವೇನು?" ॥೪೦೧-೪೦೨॥

ಎಂದು ಪ್ರಶ್ನಿಸಿದ ಮಗನನ್ನು ನೋಡುತ್ತಾ ಹಿಮವಂತನು ಹೀಗೆಂದನು. ಮೃತ್ತಿಕಾಲಿಂಗಾರ್ಚನೆಮಾಡುವವನು ಉಷಃಕಾಲಕ್ಕೆದ್ದು, ಶೌಚಾದಿಗಳನ್ನು ತೀರಿಸಿಕೊಂಡು, ಪರಶಿವನನ್ನು ಸ್ಮರಿಸುತ್ತಾ ನೀರಿನಲ್ಲಿ ಮುಳುಗಿ ಸ್ನಾನಮಾಡಬೇಕು. ॥೪೦೩-೪೦೪॥

'ಸದ್ಯೋಜಾತಂ ಪ್ರಪದ್ಯಾಮಿ' ಮುಂತಾದ ರುದ್ರದೇವತಾಕವಾದ ಮಂತ್ರ ಪುರಶ್ಚರಣೆಮಾಡುತ್ತಾ ಪಾರ್ವತೀಪತಿಯನ್ನು ಧ್ಯಾನಿಸಬೇಕು. ಅನಂತರ ಶುಚಿವಸ್ತ್ರ

ಅಂಗಪ್ರತ್ಯಂಗಭಾಗೇಷು ಭಸ್ಮಯೋಗೋ ಯಥಾ ತಥಾ ।
ಉದ್ಧೂಲನಂ ಪ್ರಯತ್ನೇನ ಕರ್ತವ್ಯಂ ಶಿವಪೂಜಕೈಃ ॥೪೦೭॥

ತತಸ್ಸಂಧ್ಯಾಂ ವಿಧಾಯೈವ ಶುದ್ಧಕ್ಷೇತ್ರೇ ನಿವೇಶ್ಯ ಚ ।
ಊರ್ಧ್ವಾಗ್ರಧಃ ಸಂಸ್ಕೃತಕುಶೇ ಸಂವಿಶೇದ್ವ್ಯಾಘ್ರಚರ್ಮಣಿ ॥೪೦೮॥

ತತಶ್ಶಂಭೋರಾಜ್ಞಯೇತಿ ಸಂಕಲ್ಪಂ ಚ ಸಮಾಚರೇತ್ ।
ವಿಧೇಯಶ್ಚ ಸ ಸಂಕಲ್ಪಃ ಪ್ರಾಣಾಯಾಮಪುರಸ್ಸರಂ ॥೪೦೯॥

ಪಂಚಾಕ್ಷರೇಣ ಮಂತ್ರೇಣ ವೈದಿಕೈಃ ಪ್ರೀತಿತತ್ಪರೈಃ ।
ಮೃತ್ತಿಕಾಹರಣಾದೀನಿ ಕರ್ತವ್ಯಾನಿ ಪ್ರಯತ್ನತಃ ॥೪೧೦॥

ಪಂಚಾಕ್ಷರೇಣ ಮಂತ್ರೇಣ ಮೃದಂ ಸಂಗೃಹ್ಯ ಪಾಣಿನಾ ।
ಪಾತ್ರೇ ಸಂಸ್ಥಾಪನೀಯಾ ಸಾ ಮೃತ್ತೇನ ಮನುನಾ ಸುತ ॥೪೧೧॥

ಪಂಚಾಕ್ಷರಂ ಸಮುಚ್ಚಾರ್ಯ ಗೃಹೀತ್ವಾ ಜಲಮುತ್ತಮಂ ।
ಸಾ ಮೃತ್ತಿಕಾ ಪ್ರೋಕ್ಷಣೀಯಾ ತೇನೈವ ಮನುನಾ ದ್ವಿಜೈಃ ॥೪೧೨॥

---

ಧಾರಿಯಾಗಿ, ಭಸ್ಮೋದ್ಧೂಲನ ಮತ್ತು ಭಸ್ಮತ್ರಿಪುಂಡ್ರಧಾರಣ ಇವುಗಳನ್ನು ನೆರವೇರಿಸಿ, ರುದ್ರಾಕ್ಷಿಯ ಸರವನ್ನು ಕಂಠಕ್ಕೆ ಹಾಕಿಕೊಳ್ಳಬೇಕು ॥೪೦೫-೪೦೬॥

ಅಂಗಪ್ರತ್ಯಂಗಗಳೆಲ್ಲಕ್ಕೂ ವಿಭೂತಿಯು ಸ್ಪಷ್ಟವಾಗಿ ಸಂಬಂಧವಾಗುವಂತೆ ಬಳಿದುಕೊಳ್ಳಬೇಕು. ಅನಂತರ ಸಂಧ್ಯಾವಂದನಾದಿಗಳನ್ನು ತೀರಿಸಿಕೊಂಡು ಶುದ್ಧ ಪ್ರದೇಶದಲ್ಲಿ ದರ್ಭಾಸನದ ಮೇಲೆ ವ್ಯಾಘ್ರಾಜಿನವನ್ನು ಹಾಕಿ ಅದರಲ್ಲಿ ಕುಳಿತುಕೊಳ್ಳಬೇಕು. ॥೪೦೭-೪೦೮॥

ಪ್ರಾಣಾಯಾಮ ಮಾಡುತ್ತಾ, 'ಶಂಭೋರಾಜ್ಞಯಾ' ಎಂದು ಪ್ರಾರಂಭಿಸಿ ಈಶ್ವರಾರಾಧನೆಗೆ ವಿಧಿವತ್ತಾಗಿ ಸಂಕಲ್ಪ ಮಾಡಬೇಕು. ಶಿವಪಂಚಾಕ್ಷರೀಮಂತ್ರದಿಂದ ಮೃತ್ತಿಕೆಯನ್ನು ತರಬೇಕು. ॥೪೦೯-೪೧೦॥

ಶಿವಪಂಚಾಕ್ಷರೀಮಂತ್ರದಿಂದ ಮೃತ್ತಿಕೆಯನ್ನು ಕೈಯಲ್ಲಿ ಹಿಡಿದುಕೊಂಡು ಒಂದು ಅದೇ ಮಂತ್ರದಿಂದಲೇ ಅದನ್ನು ಒಂದು ಪಾತ್ರೆಗೆ ಹಾಕಿ, ಅದೇ ಮಂತ್ರದಿಂದಲೇ ಶುದ್ಧೋದಕದಿಂದ ಪ್ರೋಕ್ಷಣೆಮಾಡಬೇಕು. ಅಥವಾ ಬ್ರಾಹ್ಮಣರ ಮುಖೇನ ಪ್ರೋಕ್ಷಣೆಮಾಡಿಸಬೇಕು ॥೪೧೧-೪೧೨॥

ಕಾರ್ಯಂ ಪಂಚಾಕ್ಷರೇಣೈವ ವ್ಯನ್ಯಯಂ ಲಿಂಗಮುತ್ತಮಂ ।
ಲಿಂಗಪೀಠಂ ತು ಕರ್ತವ್ಯಂ ಸದ್ಯೋಜಾತಾದಿಭಿಸ್ಸತ ॥೪೧೩॥

ಸುವರ್ತುಲಂ ವೃತ್ತಕಂಠಮನುನ್ನತಮನಾವೃತಂ ।
ಕೂರ್ಮಪೀಠಸಮಂಚೈವ ಲಿಂಗಪೀಠಂ ಶ್ರುತಿಶ್ರುತಂ ॥೪೧೪॥

ವಿದ್ಯಾದ್ಗೋಮುಖವತ್ಪೀಠಮೇವಂ ಕೃತ್ವಾ ಪ್ರಯತ್ನತಃ ।
ಶಿವಲಿಂಗಂ ಯೋಜನೀಯಂ ತಸ್ಮಿಂಸ್ತನ್ಮಂತ್ರಪೂರ್ವಕಂ ॥೪೧೫॥

ಸದ್ಯೋಜಾತಾದಿಭಿರ್ಮಂತ್ರೈಃ ಶಿವಪಂಚಾಕ್ಷರೇಣ ಚ ।
ಪ್ರತಿಷ್ಠಾ ತತ್ರ ಕರ್ತವ್ಯಾ ಶಿವಲಿಂಗಸ್ಯ ವೈದಿಕೈಃ ॥೪೧೬॥

ಸದ್ಯೋಜಾತಾದಿಭಿರ್ಮಂತ್ರೈರ್ಧ್ಯಾತ್ವಾ ದೇವಂ ಮಹೇಶ್ವರಂ ।
ತೈರೇವಾವಾಹನಂ ಕಾರ್ಯಂ ತಸ್ಮಿಲ್ಲಿಂಗೇ ಶಿವಾತ್ಮಕೇ ॥೪೧೭॥

ಆಸನಾದ್ಯುಪಚಾರಾಂಶ್ಚ ತೈರೇವ ಮನುಭಿಸ್ಸತ ।
ಪಂಚಾಕ್ಷರಾನ್ವಿತೈಃ ಕಾರ್ಯಾ ವೈದಿಕೈಃ ಸಾವಧಾನತಃ ॥೪೧೮॥

ಅದೇ ಪಂಚಾಕ್ಷರೀ ಮಂತ್ರವನ್ನೇ ಪಠಿಸುತ್ತಾ ಶಿವಲಿಂಗವನ್ನು ನಿರ್ಮಿಸಬೇಕು. ಅನಂತರ ಸದ್ಯೋಜಾತಾದಿ ಮಂತ್ರಗಳಿಂದ ಲಿಂಗಪೀಠವನ್ನು ನಿರ್ಮಿಸಬೇಕು. ಆ ಪೀಠವು ದುಂಡಾಗಿ, ಸುತ್ತಲು ಕಂಠಭಾಗ (ಗಡುವು) ವುಳ್ಳದ್ದಾಗಿ ಬಹಳ ಎತ್ತರವಾಗಿರದೆ, ಆಚ್ಛಾದನೆಯಾವುದೂ ಇಲ್ಲದೇ ಕೂರ್ಮಪೀಠದಷ್ಟು ವಿಶಾಲವಾಗಿರಬೇಕು ॥೪೧೩-೪೧೪॥

ಆ ಪೀಠವನ್ನು ಗೋಮುಖಾಕಾರದಲ್ಲಿ ರಚಿಸಬೇಕು. ಅದರಲ್ಲಿ ಸದ್ಯೋಜಾತಾದಿ ಮಂತ್ರಗಳನ್ನುಚ್ಚರಿಸುತ್ತಾ ಶಿವಲಿಂಗವನ್ನು ಸ್ಥಾಪಿಸಿ ಅದೇ ಮಂತ್ರಗಳಿಂದಲೇ ಪರಮೇಶ್ವರನನ್ನು ಧ್ಯಾನಿಸಿ ಆವಾಹನೆ ಮಾಡಬೇಕು. ಆಗ ಆ ಲಿಂಗವು ಶಿವಾತ್ಮಕವಾಗುವುದು. ॥೪೧೫-೪೧೬॥

ಶಿವಲಿಂಗ ಪ್ರತಿಷ್ಠೆಗೆ ಬಹು ಮುಖ್ಯ ಮಂತ್ರಗಳೆಂದರೆ ಸದ್ಯೋಜಾತಾದಿ ಮಂತ್ರಗಳು ಮತ್ತು ಶಿವಪಂಚಾಕ್ಷರೀ ಮಂತ್ರ. ಮೇಲಿನ ಮಂತ್ರಗಳಿಂದಲೇ ಆಸನ, ಸಿಂಹಾಸನಾದಿ ಉಪಚಾರಗಳನ್ನು ನೆರವೇರಿಸಬೇಕು. ॥೪೧೭-೪೧೮॥

ಪೂಜಾ ತು ಶಿವಲಿಂಗಸ್ಯ ಪಂಚಾಕ್ಷರಪುರಸ್ಸರಂ ।
ನಮಸ್ಸೋಮೇತಿ ಮಂತ್ರೇಣ ಸ್ನಾನಂ ತೇನ ಸಮಾಚರೇತ್ ॥೪೦೯॥

ಪಂಚಾಕ್ಷರಃ ಸ್ವತಶ್ಶುದ್ಧಃ ಸರ್ವವೇದಶಿರೋಮಣಿಃ ।
ತತಸ್ತೇನ ಸ ಸೋಮೇನ ಕರ್ತವ್ಯಂ ಶಿವಪೂಜನಂ ॥೪೧೦॥

ಪಂಚಾಕ್ಷರೇಣ ಶುದ್ಧೇನ ಯೋರ್ಚಯೇದ್ಗಿರಿಜಾಪತಿಂ ।
ಸ ತೀರ್ತ್ವಾ ಘೋರಸಂಸಾರಂ ಶಿವಸಾಯುಜ್ಯಮಾಪ್ನುಯಾತ್ ॥೪೧೧॥

ಅಭಿಷಿಚ್ಯ ಮಹಾದೇವಂ ರುದ್ರಾಧ್ಯಾಯೇನ ಸಾದರಂ ।
ಸಸೋಮಶಿವಮಂತ್ರೇಣ ಪೂಜನೀಯೋ ಮಹೇಶ್ವರಃ ॥೪೧೨॥

ಪಂಚಾಕ್ಷರೇಣ ಸಂಪೂಜ್ಯ ಬಿಲ್ವಪತ್ರೇಣ ಶಂಕರಂ ।
ಅಘೋರಾಗಾಧಪಾಪಾಬ್ಧಿಂ ತರತ್ಯೇವ ನ ಸಂಶಯಃ ॥೪೧೩॥

ಸಂಪೂಜ್ಯ ಗಿರಿಜಾನಾಥಮಖಂಡೈರ್ಬಿಲ್ವಪತ್ರಕೈಃ ।
ಕೋಟಿಜನ್ಮಾರ್ಜಿತೈಃ ಪಾಪೈಃ ಸದ್ಯೋ ಮುಕ್ತೋ ಭವೇದ್ದ್ವಿಜಃ ॥೪೧೪॥

---

ಶಿವಲಿಂಗದ ಪೂಜೆಯನ್ನು ಶಿವಪಂಚಾಕ್ಷರೀ ಮಂತ್ರಪುರಸ್ಸರವಾಗಿ ನೆರವೇರಿಸಬೇಕು. ನಮಸ್ಸೋಮಾಯೇತಿ ಮಂತ್ರದಿಂದ ಸ್ನಾನಮಾಡಿಸಬೇಕು. ಮತ್ತು ನಮಸ್ಸೋಮಾಯೇತಿ ಮಂತ್ರವನ್ನು ಮಂತ್ರಶ್ರೇಷ್ಠವಾದ ಪಂಚಾಕ್ಷರೀಮಂತ್ರದೊಡನೆ ಉಚ್ಚರಿಸುತ್ತಾ ಸಕಲ ಪೂಜೆಯನ್ನೂ ನೆರವೇರಿಸಬೇಕು. ॥೪೦೯-೪೧೦॥

ಶುದ್ಧವಾದ ಪಂಚಾಕ್ಷರೀ ಮಂತ್ರದಿಂದ ಶಂಕರನನ್ನು ಪೂಜಿಸಿದವನು ಘೋರಸಂಸಾರದುಃಖದಿಂದ ಪಾರಾಗಿ ಶಿವಸಾಯುಜ್ಯವನ್ನು ಪಡೆಯುವನು. ರುದ್ರಾಧ್ಯಾಯದಿಂದಲೂ, ಸದ್ಯೋಜಾತಾದಿ ಮಂತ್ರಗಳಿಂದಲೂ ಮಹೇಶ್ವರನಿಗೆ ಅಭಿಷೇಕಪೂರ್ವಕವಾಗಿ ಅರ್ಚನೆಮಾಡಬೇಕು ॥೪೧೧-೪೧೨॥

ಪಂಚಾಕ್ಷರಮಂತ್ರಪುರಸ್ಸರವಾಗಿ, ಅಖಂಡವಾಗಿರುವ ಅಂದರೆ ಮುರಿದು ಹರಿದುಹೋಗದಿರುವ ಬಿಲ್ವಪತ್ರೆಗಳನ್ನು ಶಂಕರನ ಪಾದಗಳಿಗೆ ಅರ್ಚಿಸಿದವರು ತಮ್ಮ ಅತಿಶಯವಾದ ಪಾಪಸಮುದ್ರದಿಂದ ಉತ್ತೀರ್ಣರಾಗಿ, ಅನೇಕ ಜನ್ಮಗಳಿಂದ ಕೂಡಿ ಹಾಕಿಕೊಂಡಿದ್ದ ಪಾಪರಾಶಿಯನ್ನೆಲ್ಲಾ ಕಳೆದುಕೊಳ್ಳುವರು. ॥೪೧೩-೪೧೪॥

ದೂರ್ವಾಂಕುರೈರ್ಜಲಾಪುಷ್ಪೈರ್ಧತ್ತೂರಕುಸುಮಾನ್ವಿತೈಃ ।
ಸದ್ರೋಣಕುಸುಮೈರ್ಭಕ್ತ್ಯಾ ಪಾರ್ಥಿವಂ ಲಿಂಗಮರ್ಚಯ ॥೪೨೫॥

ಬೃಹತೀಕುಸುಮೈರ್ಯಸ್ತು ನೃಸ್ಮಯಂ ಲಿಂಗಮರ್ಚಯೇತ್ ।
ಸ ಮಹಾಋಣಬಂಧೇಭ್ಯೋ ಮುಚ್ಯತೇ ನಾತ್ರಸಂಶಯಃ ॥೪೨೬॥

ವತ್ಸರಂ ನೃಸ್ಮಯಂ ಲಿಂಗಂ ಬೃಹತೀಕುಸುಮೈರ್ನವೈಃ ।
ಸಂಪೂಜ್ಯ ಕಪಿಲಾಜ್ಯೇನ ನೈವೇದ್ಯಂ ದೇಯಮಾದರಾತ್ ।

ಪುಷ್ಪಾಣಿ ಚ ಪ್ರದೇಯಾನಿ ನಿತ್ಯಂ ಸಾರ್ಧಶತತ್ರಯಂ
ಏವಂ ಯಃ ಪೂಜಯೇದ್ಭಕ್ತ್ಯಾ ಸ ಕಥಂ ಋಣಕೋ ಭವೇತ್॥೪೨೮॥

ಸವೃಂತೈರನ್ಯಕುಸುಮೈಃ ಪೂಜನೀಯೋ ಮಹೇಶ್ವರಃ ।
ವೃಂತಹೀನೈಃ ಪೂಜನೀಯೋ ಬೃಹತೀಕುಸುಮೈಶ್ಶಿವಃ ॥೪೨೯॥

ನೀಲೋತ್ಪಲೈಃ ಸಮಭ್ಯರ್ಚ್ಯ ನೃಸ್ಮಯಂ ಲಿಂಗಮುತ್ತಮಂ ।
ಮಹಾನಿಧಿಪತಿರ್ಭೂತ್ವಾ ಮುಕ್ತೋ ಭವತಿ ಬಂಧನಾತ್ ॥೪೩೦॥

ಗರಿಕೆಯ ಹುಲ್ಲು, ದತ್ತೂರ ಹೂವು, ತುಂಬೆಹೂವು, ಮುಂತಾದುವುಗಳಿಂದ ಮೃಣ್ಮಯಲಿಂಗವನ್ನು ವಿಶೇಷವಾಗಿ ಪೂಜಿಸಬೇಕು. ಬೃಹತೀ ಕುಸುಮಗಳಿಂದ (ಹೆಗ್ಗುಳ್ಳದ ಹೂವು ಅಥವಾ ರಾಮಗುಳ್ಳ) ಮೃಣ್ಮಯಲಿಂಗವನ್ನು ಪೂಜಿಸಿದವರು ಋಣಬಂಧನದಿಂದ ಮುಕ್ತರಾಗುವರು ॥೪೨೫-೪೨೬॥

ಮೃಣ್ಮಯ ಲಿಂಗಕ್ಕೆ ಪ್ರತಿದಿನವೂ ಮುನ್ನೂರೈವತ್ತು ಪುಷ್ಪಗಳನ್ನು ಪೂಜಿಸುತ್ತಾ ಕಪಿಲವರ್ಣದ ಹಸುವಿನ ತುಪ್ಪವನ್ನು ನಿವೇದಿಸುತ್ತಾ ಒಂದು ವರ್ಷಪರ್ಯಂತ ಪೂಜಿಸುವವನು ನಿಜವಾಗಿಯೂ ಋಣಮುಕ್ತನಾಗುವನು. ಇದರಲ್ಲಿ ಸಂಶಯವಿಲ್ಲ. ॥೪೨೭-೪೨೮॥

ಇತರ ಹೂವುಗಳನ್ನು ಗೊಂಚಲು ಗೊಂಚಲಾಗಿ ಪೂಜಿಸಬೇಕು. ಹೆಗ್ಗುಳ್ಳದ ಬೃಹತೀ ಹೂವುಗಳನ್ನು ಮಾತ್ರ ಬಿಡಿಬಿಡಿಯಾಗಿ ಪೂಜಿಸಬೇಕು. ನೀಲೋತ್ಪಲಗಳಿಂದ ಮೃತ್ತಿಕಾಲಿಂಗಾರಾಧನೆ ಮಾಡಿದವನು ನಿಧಿಗಳಿಗೆ ಅಧಿಪತಿ ಯೆನಿಸಿ ಋಣಬಂಧನದಿಂದ ಮುಕ್ತನಾಗುವನು ॥೪೨೯-೪೩೦॥

ಜಪಾಪುಷ್ಪೈಸ್ಸಮಭ್ಯರ್ಚ್ಯ ಶಿವಲಿಂಗಂ ತು ಪಾರ್ಥಿವಮ್ ।
ಮಹಾವ್ಯಾಧಿವಿನಿರ್ಮುಕ್ತೋ ದೀರ್ಘಾಯುರ್ಜಾಯತೇ ನರಃ ॥೪೩೧॥

ಏಕವಿಂಶತಿಲಿಂಗಾನಿ ಪಾರ್ಥಿವಾನಿ ಪ್ರಯತ್ನತಃ ।
ನಿತ್ಯಂ ಲಕ್ಷಜಪಾಪುಷ್ಪೈಃ ಮಾಸಮೇಕಂ ಪ್ರಪೂಜಯೇತ್ ॥೪೩೨॥

ಶ್ವೇತಗೋಘೃತದೀಪಾಶ್ಚ ದೇಯಾಃ ಶತಚತುಷ್ಟಯಮ್ ।
ಸಘೃತಕ್ಷೀರನೈವೇದ್ಯಂ ಕ್ಷೀರಾನ್ನಂ ಚ ಪ್ರಕಲ್ಪಯೇತ್ ॥೪೩೩॥

ಭೋಜನೀಯಾಶ್ಶತಂ ವಿಪ್ರಾಃ ಸ್ವಾದ್ವನ್ನೈಃ ಸುರಸಾಯನೈಃ ।
ಸುವರ್ಣದಕ್ಷಿಣಾದೇಯಾ ಯದ್ವಾ ಕೃಷ್ಣಲಕಂ ಸುತ ॥೪೩೪॥

ಏವಂ ಯಃ ಪಾರ್ಥಿವೇ ಲಿಂಗೇ ಪೂಜಾಂ ಕುರ್ಯಾತ್ಪ್ರಯತ್ನತಃ ।
ಸ ಮಹಾರೋಗಕೋಟಿಭ್ಯೋ ಮುಕ್ತೋ ಭವತಿ ಸರ್ವಥಾ ॥೪೩೫॥

ಯೋಽರ್ಚಯೇನ್ಮೃನ್ಮಯಂ ಲಿಂಗಂ ನವಬಿಲ್ವದಲೈಸ್ಸದಾ ।
ಸ ಸರ್ವಭುವನಾಧೀಶೋ ಭವತ್ಯೇವ ನ ಸಂಶಯಃ ॥೪೩೬॥

---

ಕೆಂಪು ದಾಸವಾಳದ ಹೂವುಗಳಿಂದ ಮೃತ್ತಿಕಾಲಿಂಗವನ್ನು ಪೂಜಿಸಿದವನು ಮಹಾವ್ಯಾಧಿಗಳಿಂದ ಬಿಡುಗಡೆ ಹೊಂದುವನು ಈ ರೀತಿ ಇಪ್ಪತ್ತೊಂದು ಮೃತ್ತಿಕಾ ಲಿಂಗಗಳನ್ನು ನಿತ್ಯವೂ ಲಕ್ಷ ದಾಸವಾಳದ ಪುಷ್ಪಗಳಿಂದ ಒಂದು ತಿಂಗಳು ಪರ್ಯಂತ ಭಕ್ತಿಯಿಂದ ಪೂಜಿಸಬೇಕು. ।।೪೩೧-೪೩೨।।

ಬಿಳಿಯ ಹಸುವಿನ ತುಪ್ಪದ ನಾನೂರು ದೀಪಗಳನ್ನು ಹೊತ್ತಿಸಿಟ್ಟು, ತುಪ್ಪ, ಹಾಲು, ಹಾಲಿನ್ನ ಮುಂತಾದುವುಗಳನ್ನು ನೈವೇದ್ಯವಾಗಿ ಸಮರ್ಪಿಸಬೇಕು. ಹಾಗೆಯೇ ಮಧುರವಾದ ಭೋಜನದಿಂದ ನೂರುಮಂದಿ ವಿಪ್ರರಿಗೆ ಸಮಾರಾಧನೆಯನ್ನು ನಡೆಸಿ, ಅವರಿಗೆ ಸುವರ್ಣದ ದಕ್ಷಿಣೆಯನ್ನಾಗಲಿ ಅಥವಾ ಕೃಷ್ಣಲಕ (ಕಪ್ಪು ಧಾನ್ಯ) ವನ್ನಾಗಲಿ ದಾನವಾಗಿ ಕೊಡಬೇಕು. ।।೪೩೩-೪೩೪।।

ಹೀಗೆ ಮೃತ್ತಿಕಾಲಿಂಗಾರಾಧನೆ ಮಾಡಿದವನು ಮಹಾ ರೋಗಾದಿಗಳಿಂದ ಬಿಡುಗಡೆ ಹೊಂದಿ ಮುಕ್ತನಾಗುವನು ಹೊಸ ಬಿಲ್ವದಳಗಳಿಂದ ಲಿಂಗಾರಾಧನೆ ಮಾಡಿದವನು ಸಕಲ ಭುವನಗಳಿಗೂ ಒಡೆಯನಾಗುವನು ಎಂಬುದರಲ್ಲಿ ಸಂಶಯವಿಲ್ಲ. ।।೪೩೫-೪೩೬।।

ಮೃನ್ಮಯಂ ಲಿಂಗಮಭ್ಯರ್ಚ್ಯ ಸತ್ಯಲೋಕಾಧಿಪತ್ಯತಾಂ ।
ಸಂಪ್ರಾಪ್ಯ ಶಿವಸಾಯುಜ್ಯಂ ಪ್ರಾಪ್ನೋತ್ಯೇವ ನ ಸಂಶಯಃ ॥೪೩೭॥

ಮೃನ್ಮಯಂ ಲಿಂಗಮಭ್ಯರ್ಚ್ಯ ಯುದ್ಧಾರ್ಥಂ ಯೋ ಗಮಿಷ್ಯತಿ ।
ಸ ಶತ್ರುಸೈನ್ಯಂ ಹತ್ವೈವ ವೀರಶ್ರಿಯಮವಾಪ್ನುಯಾತ್ ॥೪೩೮॥

ಯೋಽರ್ಚಯೇತ್ಪಾರ್ಥಿವಂ ಲಿಂಗಂ ಭಕ್ತ್ಯಾ ನಿತ್ಯಂ ಪ್ರಯತ್ನತಃ ।
ಸದ್ಯಃ ಸಂಪಾದಯತ್ಯೇವ ಸ ದರಿದ್ರೋಽದರಿದ್ರತಾಂ ॥೪೩೯॥

ಯೋಽರ್ಚಯೇತ್ಪಾರ್ಥಿವಂ ಲಿಂಗಂ ನಿತ್ಯಂ ದೂರ್ವಾಸಹಸ್ರತಃ ।
ಸ ಸರ್ವವಿದ್ಯಾಸಂಪನ್ನೋ ಗುರುಜಿಚ್ಚ ಭವಿಷ್ಯತಿ ॥೪೪೦॥

ಮೃನ್ಮಯಂ ಲಿಂಗಮಭ್ಯರ್ಚ್ಯ ಕಾಮಂ ಯಂ ಯಮಭೀಪ್ಸತೇ ।
ತಂ ತಂ ಕಾಮಮವಾಪ್ನೋತಿ ಸರ್ವಥಾ ಸತ್ಯಮುಚ್ಯತೇ ॥೪೪೧॥

ಕೃತ್ವಾ ಮೃನ್ಮಯಲಿಂಗಸ್ಯ ಪೂಜಾಂ ಭಕ್ತಿಪುರಸ್ಸರಂ ।
ಪ್ರಾರ್ಥಯೇದಂಜಲಿಂ ಕೃತ್ವಾ ಮೂರ್ಧ್ನಿ ಭಕ್ತಿಪುರಸ್ಸರಂ ॥೪೪೨॥

ಸಾಮಾನ್ಯ ಮನುಷ್ಯನು ಮೃತ್ತಿಕಾಲಿಂಗಾರಾಧನೆ ಮಾಡಿದರೆ, ಸತ್ಯಲೋಕಾಧಿಪತಿಯಾಗಿ ಶಿವಸಾಯುಜ್ಯವನ್ನು ಪಡೆಯುವನು. ರಾಜನಾದವನು ಮೃಲ್ಲಿಂಗಾರ್ಚನೆ ಮಾಡಿ ಯುದ್ಧಸನ್ನದ್ಧನಾದರೆ ಆತನು ಸಕಲ ಶತ್ರುಸೈನ್ಯವನ್ನೂ ಗೆದ್ದು ವೀರಲಕ್ಷ್ಮಿಯನ್ನು ಪಡೆಯುವನು. ॥೪೩೭-೪೩೮॥

ಮೃಲ್ಲಿಂಗವನ್ನು ನಿತ್ಯವೂ ಪೂಜಿಸುವವನು ದಾರಿದ್ರ್ಯಮುಕ್ತನಾಗಿ ಧನಿಕನಾಗುವನು. ಸಹಸ್ರಗರಿಕೆಯಿಂದ ಈ ಲಿಂಗವನ್ನು ಪೂಜಿಸುವವನು ವಿದ್ಯಾವಂತನಾಗಿ ಗುರುವನ್ನೂ ವಿದ್ಯೆಯಲ್ಲಿ ಮೀರಿಸುವನು. ॥೪೩೯-೪೪೦॥

ಯಾವ ಯಾವ ಇಷ್ಟಾರ್ಥಗಳನ್ನು ಪಡೆಯಬೇಕಾದರೂ, ಮೃತ್ತಿಕಾಲಿಂಗಾರಾಧನೆಯಿಂದ ಅನಾಯಾಸವಾಗಿ ಪಡೆಯಬಹುದು. ಮೃತ್ತಿಕಾಲಿಂಗವನ್ನು ಭಕ್ತಿಯಿಂದ ಪೂಜಿಸಿ ಕೊನೆಯಲ್ಲಿ ಅಂಜಲಿಯನ್ನು ಶಿರಸ್ಸಿನಮೇಲಿಟ್ಟುಕೊಂಡು ಈರೀತಿ ಪ್ರಾರ್ಥಿಸಬೇಕು. ॥೪೪೧-೪೪೨॥

ಪ್ರಸೀದ ಗಿರಿಜಾನಾಥ ಕರುಣಾರಸವಾರಿಧೇ ।
ಅನಾಥನಾಥ ದೇವೇಶ ಶರಣಾಗತವತ್ಸಲ ॥೪೪೩॥

ತಾರಯಸ್ವ ಮಹಾದೇವ ಸಂಸಾರಾಬ್ಧೇರಗಾಧತಃ ।
ಕೃಪಾನಿಧಾನ ಸರ್ವಜ್ಞ ಸರ್ವದೇವ ಶಿಖಾಮಣೇ ॥೪೪೪॥

ತ್ವದೀಯೋಽಹಂ ಮಹಾದೇವ ತ್ವದನ್ಯಂ ನ ಭಜಾಮ್ಯಹಂ ।
ತ್ವದನ್ಯಂ ನ ವದಾಮೀಶ ತ್ವದನ್ಯಂ ನ ನಮಾಮ್ಯಹಂ ॥೪೪೫॥

ಪಿತಾ ತ್ವಮೇವ ಗೌರೀಶ ಮಾತಾ ಭ್ರಾತಾ ಚ ಮೇ ಪ್ರಭೋ ।
ಸರ್ವಂ ತ್ವಮೇವ ಸರ್ವಸ್ವಂ ತ್ವಮೇವ ಪರಮೇಶ್ವರ ॥೪೪೬॥

ಶೃಣೋಮಿ ತ್ವತ್ಕಥಾಮೇವ ಶಂಭೋ ಸರ್ವಶ್ರುತಿಶ್ರುತಾಂ ।
ತವೈವ ನಾಮ ವಕ್ಷ್ಯಾಮಿ ಭುಕ್ತಿಮುಕ್ತಿಪ್ರದಾಯಕಂ ॥೪೪೭॥

ಭವಂತಮೇವ ಸತತಂ ಪೂಜಯಾಮಿ ಸದಾಶಿವ ।
ತ್ವದನ್ಯಂ ನಾರ್ಚಯಿಷ್ಯಾಮಿ ಸ್ವಪ್ನೇಽಪಿ ಪರಮೇಶ್ವರ ॥೪೪೮॥

ತ್ವತ್ಪಾದಪದ್ಮಪ್ರಣತಂ ಚಿತ್ತಮಸ್ತು ಮಮ ಪ್ರಭೋ ।
ತ್ವದನ್ಯಚಿಂತನಾಚ್ಚಿತ್ತಂ ಪರಾವೃತ್ತಂ ಶಿವಾಸ್ತು ಮೇ ॥೪೪೯॥

ಮಹಾದೇವನೇ, ಗೌರೀಪತಿಯೇ, ಕರುಣಾಸಮುದ್ರನೇ, ಅನಾಥನಾಥನೇ, ದೇವಪತಿಯೇ, ಶರಣಾಗತವತ್ಸಲನೇ, ನೀನು ಈ ಸಂಸಾರಸಾಗರದಿಂದ ನನ್ನನ್ನು ದ್ಧರಿಸು. ದಯಾಸಮುದ್ರನೇ, ಸರ್ವದೇವಶಿಖಾಮಣಿಯೇ, ನಾನು ನಿನ್ನ ಭಕ್ತನಾಗಿರುವೆನು ನಿನ್ನನ್ನು ಬಿಟ್ಟು ಮತ್ತಾರನ್ನೂ ನಾನು ಭಜಿಸಲಾರೆನು. ಮತ್ತಾರಿಗೂ ನಮಸ್ಕರಿಸಲಾರೆನು. ನಿನ್ನನ್ನೇ ನಂಬಿರುವೆನು. ॥೪೪೩-೪೪೪-೪೪೫॥

ಗೌರೀಪತಿಯೇ, ನನಗೆ ನೀನೇ ತಂದೆ, ತಾಯಿ, ಸಹೋದರ ಮತ್ತು ಸರ್ವಸ್ವರೂಪಿಯು. ನಿನ್ನ ಕಥೆಯು ಸರ್ವ ಶ್ರುತಿಸಮ್ಮತನಾದುದೆಂದೂ, ನಿನ್ನ ನಾಮವು ಭುಕ್ತಿಮುಕ್ತಿಪ್ರದಾಯಕನಾದುದೆಂದೂ, ತಿಳಿದು ಯಾವಾಗಲೂ ನಿನ್ನನ್ನೇ ಅರ್ಚಿಸುತ್ತಾ, ನಿನ್ನನ್ನು ಬಿಟ್ಟು ಮತ್ತಾರನ್ನು ಸ್ವಪ್ನದಲ್ಲಿಯೂ ಸ್ಮರಿಸುವುದಿಲ್ಲ ॥೪೪೬-೪೪೭-೪೪೮॥

ನನ್ನ ಚಿತ್ತವು ಸರ್ವದಾ ನಿನ್ನ ಪಾದಪದ್ಮದಲ್ಲಿ ನೆಲೆಯಾಗಿ ನಿಲ್ಲಲಿ.

ತ್ವಯ್ಯೇವ ಸರ್ವಭಾವೇನ ಚಿತ್ತಮಸ್ತು ಮಹೇಶ್ವರ ।
ನಾನ್ಯತ್ರ ಯಾಯಾನ್ಮಚ್ಚಿತ್ತಂ ತ್ವದನ್ಯತ್ರ ಮಹೇಶ್ವರ ॥೪೫೦॥

ಇತಿ ಸಂಪ್ರಾರ್ಥ್ಯ ದೇವೇಶಂ ಜಪ್ಯಃ ಪಂಚಾಕ್ಷರಸ್ತತಃ ।
ಕಾರ್ಯಃ ಪಂಚಾಕ್ಷರೇಣೈವ ನ್ಯಾಸಃ ಪಂಚಾಕ್ಷರಸ್ಯ ತು ॥೪೫೧॥

ಅಂಗಪ್ರತ್ಯಂಗದೇಶೇಷು ನ್ಯಾಸಃ ಪಂಚಾಕ್ಷರಾದ್ದ್ವಿಜೈಃ ।
ಕಾರ್ಯಸ್ತತಃ ಪ್ರಯತ್ನೇನ ಪಂಚಾಕ್ಷರಜಪೋ ದ್ವಿಜೈಃ ॥೪೫೨॥

ಪಂಚಾಕ್ಷರಜಪೇ ಶ್ರದ್ಧಾಂ ವಿಧಾಯ ಸ್ವಗುರುಂ ಸ್ಮರನ್ ।
ಅಷ್ಟೋತ್ತರಸಹಸ್ರಂ ತು ಕಾರ್ಯಃ ಪೂಜೋತ್ತರಂ ಜಪಃ ॥೪೫೩॥

ಪಂಚಾಕ್ಷರಸಮೋ ಮಂತ್ರೋ ನಾಸ್ತಿ ವೇದೇಷು ಸರ್ವಥಾ ।
ಪಂಚಾಕ್ಷರಜಪೇ ಶ್ರದ್ಧಾ ಬಹುಪುಣ್ಯತಪಃಫಲಂ ॥೪೫೪॥

ವೇದಾಲಂಕಾರರೂಪೋಽಯಂ ಶೈವಃ ಪಂಚಾಕ್ಷರಃ ಸ್ಮೃತಃ ।
ತತಸ್ತಸ್ಯ ಜಪೇ ಶ್ರದ್ಧಾ ನಾಲ್ಪಸ್ಯ ತಪಸಃ ಫಲಂ ॥೪೫೫॥

ಮತ್ತಾವ ದೇವತಾಧ್ಯಾನಕ್ಕೂ ನನ್ನ ಮನಸ್ಸು ತೊಡಗದಿರಲಿ. ಸರ್ವಸ್ವರೂಪಿ ಯಾದವನು ಶಂಕರನು ಎಂಬ ಭಾವನೆಯನ್ನು ತಾಳುತ್ತಾ ನನ್ನ ಮನಸ್ಸು ಅನ್ಯತ್ರ ಹೋಗದಿರಲಿ. ॥೪೪೯-೪೫೦॥

ಹೀಗೆ ದೇವರನ್ನು ಪ್ರಾರ್ಥಿಸಿ, ನ್ಯಾಸಪೂರ್ವಕವಾಗಿ ಶಿವಪಂಚಾಕ್ಷರೀ ಜಪವನ್ನು ಆರಂಭಿಸಬೇಕು. ಮೊದಲು ಐದು ಅಕ್ಷರಗಳಿಗೂ ಐದು ಅಂಗನ್ಯಾಸ ಮತ್ತು ಕರನ್ಯಾಸಗಳನ್ನು ಜೋಡಿಸಿಕೊಳ್ಳಬೇಕು. ॥೪೫೧-೪೫೨॥

ಜಪಮಾಡುವಾಗ ಶ್ರದ್ಧಾಪೂರ್ವಕವಾಗಿ ತನ್ನ ಗುರುವನ್ನು ಸ್ಮರಿಸಿಕೊಳ್ಳುತ್ತಾ ಪೂಜಾನಂತರದಲ್ಲಿ ನೂರೆಂಟುಸಾರಿ ಜಪಮಾಡಬೇಕು. ಈ ಮಂತ್ರಜಪಕ್ಕೆ ಸಮವಾದ ಪುಣ್ಯಕಾರ್ಯವೇ ಯಾವುದೂ ಇಲ್ಲ. ವೇದದಲ್ಲಿ ಇಷ್ಟು ಪವಿತ್ರವಾದ ಮಂತ್ರವೇ ಕಂಡುಬರುವುದಿಲ್ಲ. ॥೪೫೩-೪೫೪॥

ಈ ಮಂತ್ರವು ವೇದಕ್ಕೇ ಅಲಂಕಾರಪ್ರಾಯವಾದುದು. ಅದರಲ್ಲಿ ಶ್ರದ್ಧೆ ಹುಟ್ಟಬೇಕಾದರೆ, ಅವನು ಅತಿಯಾದ ತಪಸ್ಸನ್ನಾಚರಿಸಬೇಕು. ಹಿಂದೆ ಓಂಕಾರ

ಪುರೋಂಕಾರಮುನೇಃ ಪುತ್ರೋ ವೇದಸಾರ ಇತಿ ಶ್ರುತಃ ।
ಸ ಮಹಾದೇವಮೇವೈಕಂ ಪೂಜಯಾಮಾಸ ಸಾದರಂ ॥೪೫೬॥

ಶಿವನಾಮಾಂಕಿತಾನೇವ ವೇದಭಾಗಾನ್ ಪ್ರಯತ್ನತಃ ।
ಸ ದೃಷ್ಟ್ವಾ ಸರ್ವಭಾವೇನ ಮಹೇಶಂ ಶರಣಂ ಗತಃ ॥೪೫೭॥

ಅಕ್ಷರಾಭ್ಯಾಸಕಾಲೇಽಪಿ ಶಿವಪಂಚಾಕ್ಷರೋತ್ತರೇ ।
ವರ್ಣಾ ನೋಚ್ಚಾರಿತಾಸ್ತೇನ ಶಿಕ್ಷಿತೋಽಧ್ಯಾಪಕೈರಪಿ ॥೪೫೮॥

ಸದಾ ಶಿವ ಶಿವೇತ್ಯೇವ ಸ ವದನ್ ಸಂಸ್ಥಿತೋ ಮುದಾ ।
ಶಿವನಾಮವಿಹಾಯಾನ್ಯಂ ನೋಕ್ತಂ ನಾಮ ತು ತೇನ ಹಿ ॥೪೫೯॥

ಅನುಕ್ಷಣಂ ಬಿಲ್ವಪತ್ರೈರಚ್ಛಿದ್ರೈಃ ಕೋಮಲೈರ್ನವೈಃ ।
ಸ ಶಿವಂ ಪೂಜಯಾಮಾಸ ಪಂಚಾಕ್ಷರಪುರಸ್ಸರಂ ॥೪೬೦॥

ಸ್ನಾನಕಾಲಾದಿಕಾಲೇಷು ಸರ್ವೇಷ್ವಪಿ ಸ ಯತ್ನತಃ ।
ಶಿವೇತ್ಯುಚ್ಚಾರ್ಯ ಕರ್ಮಾಣಿ ನಿವೇದಯತಿ ಶಂಕರಂ ॥೪೬೧॥

ಮುನಿಯ ಪುತ್ರನಾದ ವೇದಸಾರನೆಂಬುವನು ಒಂದು ಸಾರಿ ಈರೀತಿ ಮಹಾದೇವನನ್ನು ಭಕ್ತಿಯಿಂದ ಪೂಜಿಸಿದನು. ॥೪೫೫-೪೫೬॥

ವೇದಭಾಗದಲ್ಲೆಲ್ಲಾ ಶಿವನಾಮಗಳೇ ತುಂಬಿದ್ದುದನ್ನು ನೋಡಿ, ಆತನು ಶಂಕರನನ್ನೇ ಮೊರೆಹೊಕ್ಕನು. ಅಕ್ಷರಾಭ್ಯಾಸಕಾಲದಲ್ಲಿಯೂ ಕೂಡ ಅಧ್ಯಾಪಕರು ಎಷ್ಟೇ ಬಲಾತ್ಕರಿಸಿದರೂ, ಶಿವಪಂಚಾಕ್ಷರಗಳನ್ನು ಬಿಟ್ಟು ಮುಂದೆ ಬೇರೊಂದು ಅಕ್ಷರವನ್ನೂ ಉಚ್ಚರಿಸಲಿಲ್ಲ ॥೪೫೭-೪೫೮॥

ಯಾವಾಗಲೂ ಶಿವಶಬ್ದೋಚ್ಚಾರಣೆಯಲ್ಲಿಯೇ ನಿರತನಾಗಿ, ಮತ್ತಾವ ದೇವರ ಹೆಸರನ್ನೂ ಹೇಳುತ್ತಿರಲಿಲ್ಲ. ಮತ್ತು ಅಖಂಡವಾದ ಹಾಗೂ ಕೋಮಲವಾದ ಬಿಲ್ವದಳಗಳಿಂದ ಪಂಚಾಕ್ಷರಮಂತ್ರಪುರಸ್ಸರವಾಗಿಯೇ ಶಿವಾರಾಧನೆಯನ್ನು ಮುಂದುವರಿಸುತ್ತಿದ್ದನು. ॥೪೫೯-೪೬೦॥

ಸ್ನಾನಕಾಲವೇ ಮೊದಲಾದ ಎಲ್ಲಾ ಕಾಲಗಳಲ್ಲಿಯೂ ಸಕಲ ಕರ್ಮಗಳನ್ನೂ ಶಿವಶಬ್ದವನ್ನುಚ್ಚರಿಸುತ್ತಾ ಶಿವಾರ್ಪಣೆ ಮಾಡಿಬಿಡುತ್ತಿದ್ದನು. ಶಿವಪೂಜೆಯನ್ನು

ಕದಾಪಿ ಲೌಕಿಕೀ ವಾರ್ತಾ ನ ಕೃತಾ ತೇನ ಸರ್ವಥಾ ।
ಶಿವಪೂಜಾಂ ವಿನಾ ತೇನ ನ ಕದಾಪಿ ಸ್ಥಿತಂ ಮುದಾ ॥೪೬೨॥

ಪೂಜಯಿತ್ವಾ ಮಹಾದೇವಂ ಸ ಬಿಲ್ವೈರತಿಕೋಮಲೈಃ ।
ನನರ್ತ ಶಂಕರಸ್ಯಾಗ್ರೇ ಶಿವನಾಮ ವದನ್ ಮುದಾ ॥೪೬೩॥

ನಾರೀ ನ ವೀಕ್ಷಿತಾ ತೇನ ಪಶ್ಯತಾ ಸಾದರಂ ಶಿವಂ ।
ಶಿವಾನ್ಯಸ್ತೇನ ನ ಧ್ಯಾತಃ ಪ್ರಮಾದೇನಾಪಿ ಸರ್ವಥಾ ॥೪೬೪॥

ಸಂಶ್ರುತಂ ಶಿವನಾಮ್ನೈವ ತೇನ ಯತ್ನಪುರಸ್ಸರಂ ।
ಶಿವನಾಮಾನ್ಯನಾಮಾನಿ ನ ಶುಶ್ರಾವ ಸ ಸರ್ವಥಾ ॥೪೬೫॥

ಉದ್ಧೂಲನತ್ರಿಪುಂಡ್ರಾಭ್ಯಾಂ ರುದ್ರಾಕ್ಷೈಶ್ಚ ಸ ವಿಭೂಷಿತಃ ।
ಶಿವನಾಮಜಪಂ ಕುರ್ವನ್ ಸರ್ವದಾಪಿ ಸ ಸಂಸ್ಥಿತಃ ॥೪೬೬॥

ತಂ ದೃಷ್ಟ್ವೈವ ಸುರಾಸ್ಸರ್ವೇ ವಿಷ್ಣುಬ್ರಹ್ಮಪುರೋಗಮಾಃ ।
ಪ್ರಣಮಂತ್ಯತಿಯತ್ನೇನ ಪೂಜಯಂತಿ ಚ ಶಾಂಭವಂ ॥೪೬೭॥

ತಂ ದೃಷ್ಟ್ವಾ ಋಷಯಶ್ಚೈವಂ ಪ್ರಣಮಂತಿ ಸ್ತುವಂತಿ ಚ ।
ರ್ವಂದ್ಯಸ್ಸಮಭೂಚ್ಛ್ರೀಮಹಾದೇವಪೂಜಯಾ ॥೪೬೮॥

ಬಿಟ್ಟು ಆತನು ಎಂದೂ ಲೌಕಿಕವಾದ ಮತ್ತಾವಕಾರ್ಯಕ್ಕೂ ಕೈಹಾಕುತ್ತಿರಲಿಲ್ಲ ॥೪೬೧-೪೬೨॥

ಭಕ್ತಿಯಿಂದ ಪೂಜೆಯನ್ನು ನೆರವೇರಿಸಿ ಆತನು ಭಕ್ತಿಯಿಂದ ನರ್ತನ ಮಾಡುತ್ತಿದ್ದನು. ಈ ಶಿವಪೂಜಾಕಾರ್ಯದಲ್ಲಿ ಅವನು ಎಂದೂ ಸ್ತ್ರೀಯರ ಮುಖವನ್ನಾಗಲಿ, ದೇವತಾಂತರ ಧ್ಯಾನವನ್ನಾಗಲಿ ಮಾಡಿದವನಲ್ಲ. ॥೪೬೩-೪೬೪॥

ಅವನು ಪ್ರಯತ್ನಪೂರ್ವಕವಾಗಿ ಶಿವನಾಮಗಳನ್ನು ಬಿಟ್ಟು ಮತ್ತಾವ ಹೆಸರನ್ನೂ ಕೇಳುತ್ತಿರಲಿಲ್ಲ ಭಸ್ಮೋದ್ಧೂಲನ, ಭಸ್ಮತ್ರಿಪುಂಡ್ರ, ರುದ್ರಾಕ್ಷಿಧಾರಣ, ಶಿವನಾಮಜಪ ಇವುಗಳಲ್ಲಿಯೇ ಸದಾ ನಿರತನಾಗಿದ್ದನು. ॥೪೬೫-೪೬೬॥

ಹೀಗಿರುವ ಅವನನ್ನು ನೋಡಿ, ಬ್ರಹ್ಮಾದಿ ಸಕಲ ದೇವತೆಗಳೂ ಅವನಿಗೆ ವಂದಿಸಿ ಪೂಜಿಸುತ್ತಿದ್ದರು. ಸಕಲ ಮಹರ್ಷಿಗಳೂ ಇವನನ್ನು ಶ್ಲಾಘಿಸುತ್ತಿದ್ದರು.

ಸ ತು ಮೃನ್ಮಯಲಿಂಗಾನಿ ನಿತ್ಯಮೇಕಾದಶಾದರಾತ್ ।
ಪೂಜಯಾಮಾಸ ಬಿಲ್ವಾದ್ಯೈಸ್ತತಃ ಪೂಜ್ಯೋ ಬಭೂವ ಸಃ ॥೪೬೯॥

ಮಹಾದೇವಾರ್ಚನಪರಃ ಕೋ ವಾ ಯಾತಿ ನ ಪೂಜ್ಯತಾಂ ।
ಕೋ ವಾ ನ ಮುಕ್ತಃ ಸಂಸಾರಾದಸಾರಾದಘಸಾಗರಾತ್ ॥೪೭೦॥

ಸಂಸಾರತರಣೋಪಾಯಶ್ಶಿವಾರಾಧನಮುಚ್ಯತೇ ।
ಸತ್ಯಮೇತತ್ಸತ್ಯಮೇತದ್ವಿಶ್ವಸ್ಯಾರ್ಚಯ ಶಂಕರಂ ॥೪೭೧॥

ಯಃ ಶ್ರದ್ಧಯಾ ಮಹಾದೇವಮಾರಾಧಯತಿ ಸಾದರಂ ।
ಸರ್ವಪಾಪವಿನಿರ್ಮುಕ್ತೋ ಮುಕ್ತೋ ಭವತಿ ಸಂಸೃತೇಃ ॥೪೭೨॥

ಶಿವಾರ್ಚಕಸ್ಸಖಾ ಯೇಷಾಂ ತೇಷಾಮಪಿ ನ ಪಾಪಧೀಃ ।
ಸಾಕ್ಷಾಚ್ಛಿವಾರ್ಚಕಾನಾಂ ತು ಕುತಃ ಪಾಪಭಯಂ ಭವೇತ್ ॥೪೭೩॥

ಶಿವಾರ್ಚಕೋ ವಸೇದ್ಯತ್ರ ತತೋ ದ್ವಾದಶಯೋಜನಂ ।
ಮುಕ್ತಿಕ್ಷೇತ್ರಮಿತಿ ಜ್ಞೇಯಂ ವೇದವಾದರತೈರ್ದ್ವಿಜೈಃ ॥೪೭೪॥

---

ಹೀಗೆ ಸಕಲರಿಗೂ ಪೂಜ್ಯನೆನಿಸಿ, ಅವನು ಮಹಾದೇವಾರ್ಚನೆಯಲ್ಲಿಯೇ ನಿರತನಾಗಿದ್ದನು. ॥೪೬೮-೪೬೯॥

ಅವನು ಪ್ರತಿದಿನವೂ ಹನ್ನೊಂದು ಮೃತ್ತಿಕಾಲಿಂಗಗಳನ್ನು ಬಿಲ್ವಾದಿಗಳಿಂದ ಪೂಜಿಸುತ್ತಿದ್ದನು. ಮಹಾದೇವಾರ್ಚನಪರನಾದವನು ಸರ್ವರಿಗೂ ಪೂಜ್ಯನಾಗುವನು. ಮತ್ತು ನಿತ್ಯಮುಕ್ತನಾಗುವನು. ಪಾಪಸಮುದ್ರದಿಂದ ದಾಟಿ ಮುಂದೆ ಹೋಗುವನು. ॥೪೬೯-೪೭೦॥

ಸಂಸಾರದುಃಖದಿಂದ ಪಾರಾಗಲು ಶಿವಾರಾಧನೆಯೇ ಮುಖ್ಯ ಸಾಧನವೆಂಬುದನ್ನು ಸತ್ಯವೆಂದು ತಿಳಿದು ಶಂಕರನನ್ನು ಆರಾಧಿಸು. ಯಾವನು ಶ್ರದ್ಧೆಯಿಂದ ಮಹಾದೇವನನ್ನು ಭಕ್ತಿಪುರಸ್ಸರವಾಗಿ ಆರಾಧಿಸುವನೋ, ಅವನು ಪಾಪನಿರ್ಮುಕ್ತನಾಗಿ ಸಂಸಾರದುಃಖದಿಂದ ಬಿಡುಗಡೆ ಹೊಂದುವನು. ॥೪೭೧-೪೭೨॥

ಶಿವಾರ್ಚಕನು ಸ್ನೇಹಿತನಾದರೇ ಸಕಲ ಪಾಪಗಳೂ ನಿವೃತ್ತಿಯಾಗುವಾಗ ಸಾಕ್ಷಾತ್ತಾಗಿ ತಾನೇ ಶಿವಾರ್ಚನೆ ಮಾಡುವವನಿಗೆ ಪಾಪಭಯುವೆಲ್ಲಿಂದ ಒದಗುವುದು? ಶಿವಾರಾಧಕನು ವಾಸಮಾಡುವ ಪ್ರದೇಶಕ್ಕಿಂತ ಹನ್ನೆರಡು ಯೋಜನ ದೂರವಿರುವ

ಯಥಾ ಶಿವಾರ್ಚನಾನ್ಮುಕ್ತಿರ್ನ ತಥಾನ್ಯೇನ ಕರ್ಮಣಾ ।
ಸತ್ಯಮೇತತ್ಸತ್ಯಮೇತದಿತಿ ಜಾಬಾಲವಾದಿನಃ ॥೪೭೫॥

ಶಿವಸ್ಸರ್ವಪ್ರಯತ್ನೇನ ಸರ್ವದಾ ಸರ್ವಥಾ ದ್ವಿಜೈಃ ।
ಪೂಜನೀಯಸ್ಸಾವಧಾನಂ ಭುಕ್ತಿಮುಕ್ತಿಪ್ರದಾಯಕಃ ॥೪೭೬॥

ಭುಕ್ತಿಮುಕ್ತಿಪ್ರದಂ ದೇವಂ ಮಹಾದೇವಮುಮಾಪತಿಂ ।
ಪೂಜಯಂತ್ಯತಿಯತ್ನೇನ ಧನ್ಯಾ ವೇದಾರ್ಥವಾದಿನಃ ॥೪೭೭॥

ಮಹೇಶಪೂಜನಾನ್ಮುಕ್ತಿರನಾಯಾಸೇನ ಲಭ್ಯತೇ ।
ಮೋಕ್ಷಹೇತುತಯಾನ್ಯತ್ತು ನ ಶ್ರುತಂ ಶ್ರುತಿಷು ಧ್ರುವಂ ॥೪೭೮॥

॥ ದಧೀಚಿರುವಾಚ ॥

ಕಿಮನ್ಯದ್ಬಹುನೋಕ್ತೇನ ಕೇವಲಂ ಶಿವಪೂಜಯಾ ।
ನಶ್ಯಂತಿ ಪಾಪಗಿರಯಃ ಸಂಸಾರಾಬ್ಧಿಶ್ಚ ಶುಷ್ಯತಿ ॥೪೭೯॥

ಇತ್ಯುಕ್ತಸ್ಸತು ಮೈನಾಕಃ ಶುಚಿರ್ಭೂತಸ್ತದಾಜ್ಞಯಾ ।
ತದಾ ಮೃನ್ಮಯಲಿಂಗಸ್ಯ ಪೂಜಾಂ ಕರ್ತುಂ ಸಮಾರಭೇ ॥೪೮೦॥

---

ಕ್ಷೇತ್ರವೆಲ್ಲಾ ಮುಕ್ತಿಕ್ಷೇತ್ರವೆಂದೆನಿಸಿಕೊಳ್ಳುವುದು ಎಂದು ವೇದಾರ್ಥವಾದಿಗಳ ಮತವಾಗಿದೆ. ॥೪೭೩-೪೭೪॥

ಜಾಬಾಲೋಪನಿಷತ್ತಿನಲ್ಲಿ, ಶಿವಾರ್ಚನೆಯಿಂದ ಮುಕ್ತಿಯು ದೊರಕುವಷ್ಟು ಸುಲಭವಾಗಿ ಮತ್ತಾವ ಕರ್ಮದಿಂದಲೂ ಸಿಗಲಾರದೆಂದು ಹೇಳಿದೆ. ಆದ್ದರಿಂದ ದ್ವಿಜರಾದವರು ಸರ್ವದಾ ಸರ್ವಪ್ರಕಾರದಿಂದಲೂ ಭುಕ್ತಿ, ಮುಕ್ತಿಗಳನ್ನು ಕೊಡುವ ಶಿವಾರ್ಚನೆಯನ್ನು ತಪ್ಪದೆ ಮಾಡುತ್ತಿರಬೇಕು ॥೪೭೫-೪೭೬॥

ವೇದಾರ್ಥಜ್ಞರಾದ ಮಹಾತ್ಮರು ಭುಕ್ತಿಮುಕ್ತಿಪ್ರದನಾದ ಮಹಾದೇವನನ್ನು ಭಕ್ತಿಯಿಂದಾರಾಧಿಸುತ್ತಾರೆ ಅನಾಯಾಸದಿಂದ ಮುಕ್ತಿಯನ್ನು ದೊರಕಿಸುವ ಮಹೇಶಪೂಜೆಯಿಂದಲೇ ಮೋಕ್ಷವು ಲಭಿಸಬೇಕೇ ಹೊರತು ಅನ್ಯಥಾ ಇಲ್ಲ ಎಂದು ವೇದಗಳಲ್ಲಿ ಘಂಟಾಘೋಷವಾಗಿ ಹೇಳಲ್ಪಟ್ಟಿದೆ ॥೪೭೭-೪೭೮॥

ಒಟ್ಟಿನಲ್ಲಿ ಪಾಪರಾಶಿಯೂ, ಸಂಸಾರಸಾಗರವೂ ಶಿವಪೂಜೆಯಿಂದಲ್ಲದೆ ಮತ್ತಾವುದರಿಂದಲೂ ಕಮ್ಮಿಯಾಗಲಾರದು " ಎಂದು ಹೇಳಿದ ತಂದೆಯ ಮಾತುಗಳನ್ನು

ವಿಧಾಯ ಮೃನ್ಮಯಂ ಲಿಂಗಂ ವಿಧಿವದ್ಭಕ್ತಿಪೂರ್ವಕಂ ।
ಪೂಜಯಾಮಾಸ ಯತ್ನೇನ ಬಿಲ್ವಪತ್ರಾದಿಸಾಧನೈಃ ॥೪೮೧॥

ತದಾನೀಮಾಗತಂ ವಜ್ರಮಿಂದ್ರೇಣ ಪ್ರೇಷಿತಂ ನೃಪ ।
ಆಗತ್ಯ ತಂ ಪುನಃ ಪ್ರಾಪ ಮೈನಾಕೇನ ಪ್ರಧರ್ಷಿತಂ ॥೪೮೨॥

॥ ಇಂದ್ರ ಉವಾಚ ॥

ತದಾ ಶಚೀಪತೇರ್ವಜ್ರಂ ನಿಸ್ತೇಜಸ್ಕಂ ವಿಲೋಕಯನ್
ದುಃಖಸಂಕುಲಿತಃ ಪ್ರಾಹ ಗುರುಂ ನತ್ವಾ ಕೃತಾಂಜಲಿಃ ॥೪೮೩॥

ಗುರೋ ವಜ್ರಾಯುಧಂ ತೀಕ್ಷ್ಣಮಸ್ಮ ಶಕ್ತಿರ್ಗರೀಯಸೀ ।
ಈದೃಶಂ ಚೇದಮಧುನಾ ಮೈನಾಕೇ ಕುಂಠಿತಂ ಕಥಂ ॥೪೮೪॥

ಅನೇನೈವ ಹತಃ ಕ್ರೂರಃ ಪುರಾ ವೃತ್ರಾಸುರೋ ಮಹಾನ್ ।
ವೃತ್ರಾಸುರಸಮೋ ನಾಸ್ತಿ ಮಮ ಶತ್ರುರ್ದುರಾಸದಃ ॥೪೮೫॥

ವಿಂಧ್ಯಾದಿಶೈಲಪಕ್ಷಾಣಾಂ ಛೇದೋನೇನ ಕೃತೋ ಗುರೋ ।
ಅನೇನೈವಾಸುರಾಃ ಪೂರ್ವಂ ಬಹವೋ ನಿಹತಾ ಮಯಾ ॥೪೮೬॥

---

ಕೇಳಿ ಮೈನಾಕನು, ಒಡನೆಯೇ ಪರಿಶುದ್ಧನಾಗಿ ತಂದೆಯು ಹೇಳಿದಂತೆ ಮೃನ್ಮಯಲಿಂಗವನ್ನಾರಾಧಿಸಲು ಯತ್ನಿಸಿದನು. ॥೪೭೯-೪೮೦॥

ವಿಧಿವತ್ತಾಗಿ ಮೃತ್ತಿಕಾಲಿಂಗವನ್ನು ನಿರ್ಮಿಸಿಕೊಂಡು, ಬಿಲ್ವಪತ್ರಾದಿಸಾಧನಗಳಿಂದ ಪೂಜಿಸುತ್ತಿರುವಾಗಲೇ, ಇಂದ್ರನು ವಜ್ರಾಯುಧವನ್ನು ಮೈನಾಕನ ಮೇಲೆ ಪ್ರಯೋಗಿಸಲು, ಆ ವಜ್ರಾಯುಧವು ಮೈನಾಕನ ಸಮೀಪಕ್ಕೆ ಬಂದು ಅಲ್ಲಿ ತಿರಸ್ಕೃತವಾಗಿ ಹಿಂದಿರುಗಿ ಇಂದ್ರನನ್ನೇ ಹೊಂದಿತು. ॥೪೮೧-೪೮೨॥

ಹಾಗೆ ಬಲಹೀನವಾಗಿ ಬಂದ ವಜ್ರಾಯುಧವನ್ನು ನೋಡಿ ಇಂದ್ರನು ಆಶ್ಚರ್ಯಪಟ್ಟು ಬೃಹಸ್ಪತ್ಯಾಚಾರ್ಯರ ಸಮೀಪಕ್ಕೆ ಹೋಗಿ ಇಷ್ಟು ತೀಕ್ಷ್ಣವಾದ ವಜ್ರಾಯುಧವು ಇಷ್ಟುಜಾಗ್ರತೆ ಮಂಕಾಗಲು ಕಾರಣವೇನೆಂದು ಪ್ರಶ್ನಿಸಿದನು. ॥೪೮೩-೪೮೪॥

ಮತ್ತು ಅತ್ಯಂತ ಶೂರನೂ, ಕ್ರೂರನೂ ಆದ ವೃತ್ರಾಸುರನೆಂಬ ಶತ್ರುವನ್ನೂ, ವಿಂಧ್ಯವೇ ಮೊದಲಾದ ಅನೇಕ ಪರ್ವತಗಳ ರೆಕ್ಕೆಗಳನ್ನೂ, ಸಮರ್ಥರಾದ

ಯದಾ ಸುದರ್ಶನಂ ಪೂರ್ವಂ ಶಿವಸ್ಸ್ವಾಂಗುಲಿರೇಖಯಾ ।
ಸಸರ್ಜ ಸೂರ್ಯಸಂಕಾಶಂ ತದೇದಂ ಚ ಸಸರ್ಜ ಹಿ ॥೪೮೭॥

ತತಶ್ಶಿವೋ ದೇವದೇವೋ ವಿಷ್ಣುನೇತ್ರಸಮರ್ಚಿತಃ ।
ಸುದರ್ಶನಂ ದದೌ ತುಷ್ಟೋ ವಿಷ್ಣವೇ ಕರುಣಾನಿಧಿಃ ॥೪೮೮॥

ತತೋ ಮಾಂ ಕ್ಲಿನ್ನವದನಂ ವೃತ್ರಾಸುರತಿರಸ್ಕೃತಂ ।
ವಿಲೋಕ್ಯ ಕೃಪಯಾ ಮಹ್ಯಂ ದದೌ ವಜ್ರಮಿದಂ ಶಿವಃ ॥೪೮೯॥

ತತೋನೇನೈವ ವಜ್ರೇಣ ಹತೋ ವೃತ್ರಾಸುರೋ ಗುರೋ ।
ತದೇವಂ ಖಲ್ವಿದಂ ವಜ್ರಂ ಯೇನ ವಜ್ರೀ ಭವಾಮ್ಯಹಂ ॥೪೯೦॥

ಸುದರ್ಶನಸ್ಯ ಸಾಮರ್ಥ್ಯಂ ಯಾದೃಶಂ ತಾದೃಶಂ ಗುರೋ ।
ಅಸ್ಯಾಪ್ಯಸ್ತ್ಯೇವ ಸಾಮರ್ಥ್ಯಮತ್ರ ನಾಸ್ತ್ಯೇವ ಸಂಶಯಃ ॥೪೯೧॥

ತಥಾ ಚ ಸತಿ ಸಾಮರ್ಥ್ಯಮಸ್ಯಾಸೀತ್ಕುಂಠಿತಂ ಕಥಂ ।
ಅಸ್ಯ ಚೇತ್ಕುಂಠಿತಾಶಕ್ತಿಃ ಕುಂಠಿತಾಶಕ್ತಿರದ್ಯ ಮೇ ॥೪೯೨॥

---

ರಾಕ್ಷಸಶತ್ರುಗಳನ್ನೂ ಇದೇ ವಜ್ರಾಯುಧದಿಂದಲೇ ಹಿಂದೆ ನಾಶಮಾಡಿರುವೆನು. ||೪೮೫-೪೮೬||

ವಿಷ್ಣುವು ತನ್ನ ನೇತ್ರಕಮಲವನ್ನು ಕಿತ್ತು ಶಿವನಪಾದವನ್ನರ್ಚಿಸಿದಾಗ ಕರುಣಾನಿಧಿಯಾದ ಶಂಕರನು ಅವನ ಭಕ್ತಿಗೆ ಮೆಚ್ಚಿ, ಸೂರ್ಯನಂತೆ ಉರಿಯುವ ಸುದರ್ಶನವೆಂಬ ಚಕ್ರವನ್ನು ತನ್ನ ಪಾದಾಂಗುಷ್ಠದಿಂದ ಬರೆದು ಸೃಷ್ಟಿಮಾಡಿದನಷ್ಟೆ. ಆಗಲೇ ಈ ನನ್ನ ವಜ್ರಾಯುಧವನ್ನೂ ನಿರ್ಮಿಸಿ ನನಗೆ ಅನುಗ್ರಹಿಸಿದನಲ್ಲವೆ! ||೪೮೭-೪೮೮||

ಗುರುವೇ, ವೃತ್ರಾಸುರನಿಂದ ಹೆದರಿ ಕಂದಿಹೋಗಿದ್ದ ನನ್ನನ್ನು ನೋಡಿ ಪರಶಿವನು ಈ ವಜ್ರಾಯುಧವನ್ನು ನನಗೆ ಅನುಗ್ರಹಿಸಿ ಕೊಟ್ಟನು. ಅಂತಹ ವಜ್ರಾಯುಧದಿಂದಲೇ ಆ ವೃತ್ರಾಸುರನನ್ನು ಕೊಂದು, ವಜ್ರೀ ಎಂಬ ಹೆಸರಿನಿಂದ ಪ್ರಸಿದ್ಧನಾದೆನು. ||೪೮೯-೪೯೦||

ವಿಷ್ಣುವಿನ ಸುದರ್ಶನಕ್ಕಿರುವ ಶಕ್ತಿಯೇ ಇದಕ್ಕೂ ಇರುವುದು. ಇದರಲ್ಲಿ ಸಂಶಯವಿಲ್ಲ. ಹೀಗಿರುವಾಗ ಇದರ ಶಕ್ತಿಯು ಕುಂಠಿತವಾದದ್ದು ಹೇಗೆ? ಇದು ಇಷ್ಟು ಬಲಹೀನವಾದರೆ ನನ್ನ ಶಕ್ತಿಯು ಇನ್ನೆಲ್ಲಿ ಪ್ರಕಾಶಿಸುವುದು? ||೪೯೧-೪೯೨||

ಯಸ್ಮಾದೇತದಧೀನಂ ಮೇ ಜೀವನಂ ಶಿವಕಲ್ಪಿತಂ ।
ಅಸ್ಯ ಚೇತ್ಕುಂಠಿತಾ ಶಕ್ತಿರ್ಜೀವನಂ ಮೇ ಕಥಂ ಭವೇತ್ ॥೪೯೩॥

ಇತಿ ತದ್ವಚನಂ ಶ್ರುತ್ವಾ ಗುರುರರ್ಚಿತಶಂಕರಃ ।
ಜ್ಞಾತಮೈನಾಕವೃತ್ತಾಂತಃ ಶಚೀನಾಥಮುವಾಚ ಸಃ ॥೪೯೪॥

॥ ಬೃಹಸ್ಪತಿರುವಾಚ ॥

ಮೈನಾಕಶ್ಶೋಕನಾಶಾರ್ಥಂ ಸರ್ವಶೋಕನಿವಾರಕಂ ।
ಶಂಕರಂ ಹಿಮವದ್ವಾಕ್ಯಾದಾರಾಧಯತಿ ಸಾದರಂ ॥೪೯೫॥

ಸಕೃದ್ವಾ ಮೃನ್ಮಯಂ ಲಿಂಗಂ ಸಮರ್ಚಯತಿ ಶಂಕರಂ ।
ತತಸ್ತಸ್ಮಿನ್ನಿದಂ ವಜ್ರಮಭವತ್ಕುಂಠಿತಂ ಧ್ರುವಂ ॥೪೯೬॥

ಶಿವಾರ್ಚಕೇಷು ವಜ್ರಸ್ಯ ಶಕ್ತಿರ್ನ ಪ್ರಸರಿಷ್ಯತಿ ।
ವಜ್ರಮೇತದ್ಯತಶ್ಶೈವಂ ತತಶ್ಶೈವೇ ನ ಕುಪ್ಯತಿ ॥೪೯೭॥

ತತಸ್ಸುದರ್ಶನಾದೀನಾಂ ಮಹಾಸ್ತ್ರಾಣಾಮಪಿ ಪ್ರಭಾ ।
ನ ಪ್ರಧೃಷ್ಯತಿ ಶೈವೇಂದ್ರಾನಿಂದ್ರೇದಂ ಕಿಂ ಪುನರ್ವದ ॥೪೯೮॥

ಶಂಕರನು ಇದಕ್ಕೆ ಅಧೀನವಾಗಿದ್ದುಕೊಂಡೇ ನೀನು ಜೀವನವನ್ನು ನಡೆಸು ಎಂದು ನನಗೆ ಆಜ್ಞೆಮಾಡಿರುವನು. ಇದು ಹೀಗೆ ಮಂಕಾದರೆ ನಾನು ಇನ್ನು ಜೀವಿಸುವುದೆಂತು ? ಎಂದು ಇಂದ್ರನು ಕೊರಗುತ್ತಿರಲು, ಬೃಹಸ್ಪತಿಯು ಒಡನೆಯೇ ಶಿವಾರ್ಚನೆಮಾಡಿ ಅದರಿಂದ ಮೈನಾಕನ ವೃತ್ತಾಂತವನ್ನು ತಿಳಿದು ಇಂದ್ರನನ್ನು ಕುರಿತು ಹೀಗೆಂದನು. ॥೪೯೩-೪೯೪॥

ಅಯ್ಯಾ ಇಂದ್ರನೇ, ನಿನ್ನ ವಜ್ರಾಯುಧಕ್ಕೆ ಹೆದರಿ ದುಃಖಿಸುತ್ತಿದ್ದ ಮೈನಾಕನು ತಂದೆಯ ಅಪ್ಪಣೆಯಂತೆ ಸಕಲ ದುಃಖನಿವಾರಕನಾದ ಶಂಕರನನ್ನು ಮೃನ್ಮಯವಾದ ಲಿಂಗದಲ್ಲಿ ಬಹು ಭಕ್ತಿಯಿಂದ ಪೂಜಿಸುತ್ತಿರುವನು. ಅದರಿಂದಲೇ ಈಗ ನಿನ್ನ ವಜ್ರಾಯುಧವು ಕುಂಠಿತವಾಗಿದೆ. ॥೪೯೫-೪೯೬॥

ಈ ವಜ್ರಾಯುಧವು ಶಿವನಿಂದ ಬಂದಿರುವುದಾದ್ದರಿಂದಲೇ, ಈಶ್ವರ ಭಕ್ತರಲ್ಲಿ ಈ ಆಯುಧವು ಕ್ರೂರವಾಗಿ ವರ್ತಿಸಲಾರದು. ಅದೇ ರೀತಿ ಸುದರ್ಶನಾದಿ ಸಕಲ

ಸುದರ್ಶನಾದೀನ್ಯಸ್ತ್ರಾಣಿ ಪ್ರಯುಕ್ತಾನ್ಯಪಿ ಶಾಂಕರೇ ।
ಪ್ರಸೂನಾನೀವ ಶೈವೇಷು ದುಃಖಾಯ ನ ಭವಿಷ್ಯತಿ ॥೪೯೯॥

ಯವಸೋನ್ನಯನೇ ವಾಯುಸ್ಸಮರ್ಥ ಇತಿ ಪರ್ವತಾನ್ ।
ಕಿಮುನ್ನೇತುಂ ಸಮರ್ಥಸ್ಸ್ಯಾತ್ತದ್ವದಸ್ಯ ಶಚೀಪತೇ ॥೫೦೦॥

ಸುದರ್ಶನಾದಿಶಸ್ತ್ರಾಣಿ ಶೈವಾನ್ಯಾಸೂನ್ ಸ್ವಶಕ್ತಿತಃ ।
ನಾಶಯಿಷ್ಯಂತು ಶೈವಾಸೂನ್ನಾಶಯಿಷ್ಯಂತಿ ತಾನಿ ಕಿಂ ॥೫೦೧॥

ವಜ್ರಮಸ್ತ್ವಶನಿರ್ವಾಸ್ತು ಚಕ್ರಂ ವಾಸ್ತು ತಥಾಪಿ ತತ್ ।
ಶೈವಾನ್ ಚಾಲಯಿತುಂ ವಾಪಿ ಸಮರ್ಥೋ ನ ಭವಿಷ್ಯತಿ ॥೫೦೨॥

ಗೃಧ್ರೋ ಯದಿ ಸಮರ್ಥಸ್ಸ್ಯಾನ್ನಾಗನಾಯಕಭಕ್ಷಣೇ ।
ತದಾ ಸುದರ್ಶನಾದೀನಿ ಚಾಲಯಂತಿ ಶಿವಾರ್ಚಕಾನ್ ॥೫೦೩॥

ಅಪಾನಪವನೋ ವಿಂಧ್ಯಮುನ್ನಯೇದ್ಯದಿ ಸತ್ವರಂ ।
ತದಾ ಸುದರ್ಶನಾದೀನಿ ಚಾಲಯಂತಿ ಶಿವಾರ್ಚಕಾನ್ ॥೫೦೪॥

ರಾಜಲೋತಿಕೃಶಃ ಶೀಘ್ರಂ ಗರುಡಂ ಯದಿ ಭಕ್ಷಯೇತ್ ।
ತದಾ ಸುದರ್ಶನಾದೀನಿ ಚಾಲಯಂತಿ ಶಿವಾರ್ಚಕಾನ್ ॥೫೦೫॥

---

ಶೈವ ಆಯುಧಗಳೂ ಶಿವಾರಾಧಕರನ್ನು ಹಿಂಸಿಸಲಾರವು. ಹೀಗಿರುವಾಗ ನಿನ್ನ ವಜ್ರಾಯುಧದ ವಿಷಯವನ್ನು ಏನೆಂದು ಹೇಳಲಿ? ॥೪೯೭-೪೯೮॥

ಸುದರ್ಶನವೇ ಮೊದಲಾದ ಯಾವ ನಿಶಿತಾಸ್ತ್ರಗಳನ್ನು ಶೈವರ ಮೇಲೆ ಪ್ರಯೋಗಿಸಿದರೂ, ಅವು ಅವರಿಗೆ ಪುಷ್ಪಮಾಲೆಯಂತಾಗುವುದು. ಹೊಟ್ಟನ್ನು ಮೇಲೆ ಹಾರಿಸುವ ವಾಯುವು ಬೆಟ್ಟಗಳನ್ನು ಮೇಲೇಳಿಸುವುದೆ? ಇಂದ್ರನೇ, ಆದರಂತೆ ನಿನ್ನ ವಜ್ರಾಯುಧವು ವೈನಾಕನಲ್ಲಿ ಕೆಲಸಮಾಡಲಾರದು. ॥೪೯೯-೫೦೦॥

ಸುದರ್ಶನಾದಿ ಅಸ್ತ್ರಗಳು ಶಿವಪೂಜಕರಲ್ಲದವರ ಪ್ರಾಣಗಳನ್ನು ಮಾತ್ರ ನಾಶಗೊಳಿಸಲಿ. ವಜ್ರಾಯುಧವಾಗಲಿ, ಸಿಡಿಲಾಗಲಿ, ಚಕ್ರವೇ ಆಗಲಿ ಶೈವರನ್ನು ಏನೂ ಮಾಡಲಾರದು. ಅವುಗಳಿಗೆ ಅಷ್ಟು ಶಕ್ತಿಯಿರುವುದಿಲ್ಲ. ॥೫೦೧-೫೦೨॥

ಹದ್ದು ಆದಿಶೇಷನನ್ನು ಭಕ್ಷಿಸುವುದು, ಮನುಷ್ಯರ ಅಪಾನವಾಯುವು ಪರ್ವತವನ್ನು ಹಾರಿಸುವುದು, ಸಣ್ಣಹಾವೊಂದು ಗರುಡಭಕ್ಷಣೆಗೆ ತೊಡಗುವುದು,

ಅತ್ಯಲ್ಪಹರಿಣೀಶಾಬೋ ಮೃಗೇಂದ್ರಂ ಯದಿ ಭಕ್ಷಯೇತ್ ।
ತದಾ ಸುದರ್ಶನಾದೀನಿ ಚಾಲಯಂತಿ ಶಿವಾರ್ಚಕಾನ್ ॥೫೦೬॥

ಯದಿ ಭಾನುಂ ಗ್ರಸೇದ್ರಾತ್ರೌ ಸೈಂಹಿಕೇಯೋ ವಿಧೌ ಸತಿ ।
ತದಾ ಸುದರ್ಶನಾದೀನಿ ಚಾಲಯಂತಿ ಶಿವಾರ್ಚಕಾನ್ ॥೫೦೭॥

ಚಂದ್ರಂ ಯದಿ ಗ್ರಸೇತ್ಕೇತುರ್ಮಧ್ಯಾಹ್ನೇ ಸಂಸ್ಥಿತೇ ರವೌ ।
ತದಾ ಸುದರ್ಶನಾದೀನಿ ಚಾಲಯಂತಿ ಶಿವಾರ್ಚಕಾನ್ ॥೫೦೮॥

ಸಾಂಸಿದ್ಧಿಕದ್ರವತ್ವಾಧಿಕರಣೇಯಂ ಪೃಥಿವೀ ಯದಿ ।
ತದಾ ಸುದರ್ಶನಾದೀನಿ ಚಾಲಯಂತಿ ಶಿವಾರ್ಚಕಾನ್ ॥೫೦೯॥

ನೈಮಿತ್ತಿಕದ್ರವತ್ವಾಧಿಕರಣಂ ಸ್ಯಾಜ್ಜಲಂ ಯದಿ ।
ತದಾ ಸುದರ್ಶನಾದೀನಿ ಚಾಲಯಂತಿ ಶಿವಾರ್ಚಕಾನ್ ॥೫೧೦॥

ಶೀತಸ್ಪರ್ಶಾಧಿಕರಣಂ ತೇಜೋ ಮಾತ್ರಂ ಭವೇದ್ಯದಿ ।
ತದಾ ಸುದರ್ಶನಾದೀನಿ ಚಾಲಯಂತಿ ಶಿವಾರ್ಚಕಾನ್ ॥೫೧೧॥

ಚಿತ್ರರೂಪಾಧಿಕರಣಂ ವಾಯುಮಾತ್ರಂ ಭವೇದ್ಯದಿ ।
ತದಾ ಸುದರ್ಶನಾದೀನಿ ಚಾಲಯಂತಿ ಶಿವಾರ್ಚಕಾನ್ ॥೫೧೨॥

ಅಂಗುಲೀಯೋಗಸಂಭೂತೋ ಯದ್ಯಾಕಾಶೋ ಭವಿಷ್ಯತಿ ।
ತದಾ ಸುದರ್ಶನಾದೀನಿ ಚಾಲಯಂತಿ ಶಿವಾರ್ಚಕಾನ್ ॥೫೧೩॥

ಚಿಕ್ಕ ಜಿಂಕೆಯ ಮರಿಯು ಸಿಂಹವನ್ನು ತಿನ್ನುವುದು, ರಾಹುವು ರಾತ್ರಿಹೊತ್ತಿನಲ್ಲಿ ಚಂದ್ರನ ಎದುರಿನಲ್ಲಿ ಸೂರ್ಯನನ್ನು ಭಕ್ಷಿಸುವುದು, ಹಾಗೆಯೇ ಚಂದ್ರನನ್ನು ಹಗಲುಹೊತ್ತಿನಲ್ಲಿ ಸೂರ್ಯನೆದುರಿಗೆ ನುಂಗುವುದು, ಭೂಮಿಯು ಸಾಂಸಿದ್ಧಿಕದ್ರವತ್ವಾಧಿಕರಣವಾಗುವುದು, ಹಾಗೆಯೇ ಜಲವು ನೈಮಿತ್ತಿಕದ್ರವತ್ವಾಧಿಕರಣವಾಗುವುದು. (ಅಂದರೆ ಭೂಮಿಯು ದ್ರವವಾಗುವುದು. ಜಲವು ಭೂಮಿಯಾಗುವುದು.) ಇವೇ ಮೊದಲಾದ ವಿರುದ್ಧ ಕಾರ್ಯಗಳು ಜಗತ್ತಿನಲ್ಲಿ ಕಂಡುಬಂದರೆ ಆಗ ಸುದರ್ಶನಾದಿ ಆಯುಧಗಳು ಶೈವರನ್ನು ಹಿಂಸೆಗೊಳಿಸಿಯಾವು. ಅಗ್ನಿಯು ಶೀತಸ್ಪರ್ಶವನ್ನುಂಟುಮಾಡುವುದು, ವಾಯುವಿನಲ್ಲಿ ವಿಧವಿಧವಾದ ರೂಪ ತೋರುವುದು,

ನಿಶ್ವಾಸಪವನೋತ್ಪನ್ನೋ ಮಹಾಕಾಲೋ ಭವೇದ್ಯದಿ
ತದಾ ಸುದರ್ಶನಾದೀನಿ ಚಾಲಯಂತಿ ಶಿವಾರ್ಚಕಾನ್ ॥೫೦೪॥

ದಿಶೋ ಯದಿ ಸಮುತ್ಪನ್ನಾ ದಿಗ್ಭ್ಯ ಏವ ಕದಾಚನ ।
ತದಾ ಸುದರ್ಶನಾದೀನಿ ಚಾಲಯಂತಿ ಶಿವಾರ್ಚಕಾನ್ ॥೫೦೫॥

ಜನ್ಯೋ ವಿನಶ್ವರಶ್ಚಾಯಂ ಯದ್ಯಾತ್ಮಾ ಸ್ಯಾತ್ಕದಾಚನ ।
ತದಾ ಸುದರ್ಶನಾದೀನಿ ಚಾಲಯಂತಿ ಶಿವಾರ್ಚಕಾನ್ ॥೫೦೬॥

ಶೀತರಶ್ಮಿರ್ಯದಿ ಭವೇದುಷ್ಣರಶ್ಮಿರಯಂ ಸದಾ ।
ತದಾ ಸುದರ್ಶನಾದೀನಿ ಚಾಲಯಂತಿ ಶಿವಾರ್ಚಕಾನ್ ॥೫೦೭॥

ಉಷ್ಣರಶ್ಮಿರ್ಯದಿ ಭವೇತ್ ಶೀತರಶ್ಮಿರಯಂ ಸದಾ ।
ತದಾ ಸುದರ್ಶನಾದೀನಿ ಚಾಲಯಂತಿ ಶಿವಾರ್ಚಕಾನ್ ॥೫೦೮॥

ಸ್ವಸುತಾಯ ಹಿತಾಯಾಪಿ ಜನನೀ ವಿಷದಾ ಯದಿ ।
ತದಾ ಸುದರ್ಶನಾದೀನಿ ಚಾಲಯಂತಿ ಶಿವಾರ್ಚಕಾನ್ ॥೫೦೯॥

ಸ್ವಸುತಾಯಾಧಿಕವಿದ್ಯಾಯ ಪಿತಾ ಯದಿ ರಿಪುರ್ಭವೇತ್ ।
ತದಾ ಸುದರ್ಶನಾದೀನಿ ಚಾಲಯಂತಿ ಶಿವಾರ್ಚಕಾನ್ ॥೫೧೦॥

ವಂಧ್ಯಾ ಯದಿ ಸುತಂ ಸೂತೇ ಯದಿ ಸೂತೇ ಶುನೀ ವೃಕಂ ।
ತದಾ ಸುದರ್ಶನಾದೀನಿ ಚಾಲಯಂತಿ ಶಿವಾರ್ಚಕಾನ್ ॥೫೧೧॥

---

ಆಕಾಶವು ಅಂಗುಲೀಸ್ಪರ್ಶಕ್ಕೆ ಆಶ್ರಯವಾಗುವುದು, ನಿಟ್ಟುಸಿರಿನಿಂದಲೇ ಮಹಾಕಾಲವು ಕಳೆದುಹೋಗುವುದು, ದಿಕ್ಕುಗಳು ದಿಕ್ಕುಗಳಿಂದಲೇ ಹುಟ್ಟುವುದು, ಆತ್ಮನಿಗೆ ಉತ್ಪತ್ತಿನಷ್ಟಾದಿಗಳು ಸಂಭವಿಸುವುದು, ಚಂದ್ರನು ಉಷ್ಣಕಿರಣನಾಗುವುದು, ಸೂರ್ಯನು ಶೀತರಶ್ಮಿಯಾಗುವುದು, ತಾಯಿಯೇ ಮಗನಿಗೆ ವಿಷಕೊಡುವುದು, ವಿದ್ಯಾವಂತನಾದ ಮಗನನ್ನು ನೋಡಿ ತಂದೆಯು ವೈರಿಯಾಗುವುದು, ಗೊಡ್ಡಿಯು ಮಗನನ್ನು ಹೆರುವುದು, ನಾಯಿಯು ತೋಳವನ್ನು ಮರಿಹಾಕುವುದು, ಇವುಗಳೆಲ್ಲಾ ಅಸಂಭವನಾದ ಕಾರ್ಯಗಳೇ. ಇಂತಹ ಅಸಂಭವವಾದ ಕಾರ್ಯಗಳು

ಶೈವೇ ವಜ್ರಪ್ರಯೋಗೋಽಯಮಜ್ಞಾತ್ವೈವ ತ್ವಯಾ ಕೃತಃ ।
ಶೈವೇ ಶಸ್ತ್ರಪ್ರಯೋಗಸ್ತು ಕೇನಾಪಿ ನ ಕೃತಃ ಪುರಾ ॥೫೨೨॥

ಶೈವಾನಾಂ ದುಃಖದಾನಾರ್ಥಮುದ್ಯೋಗಂ ಯಃ ಕರಿಷ್ಯತಿ ।
ಸ ಯಾತಿ ನರಕಂ ಘೋರಂ ಯಾವದಾಚಂದ್ರತಾರಕಂ ॥೫೨೩॥

ನ ಬಿಭೇತ್ಯಶನೇಃ ಶೈವಃ ಕಾಲಾಗ್ನೇಃ ಪ್ರಲಯಾದಪಿ ।
ಸ ತಾದೃಶಶ್ಶಿವರತೋ ವಜ್ರಾದಸ್ಮಾದ್ಬಿಭೇತಿ ಕಿಂ ॥೫೨೪॥

ಸ ಸಮರ್ಥೋ ವಜ್ರಮೇತಚ್ಚೂರ್ಣೀಕರ್ತುಂ ತಥಾಪಿ ಸಃ ।
ನ ಚೂರ್ಣೀಕೃತವಾನಿಂದ್ರಕೃಪಯೈವ ಹಿ ಕೇವಲಂ ॥೫೨೫॥

ವಿಷ್ಣುಮೈನಾಕಯೋಃ ಪೂರ್ವಂ ಹಿಮವದ್ಗಿರಿಗಹ್ವರೇ ।
ಕೃತೋ ವಾಕ್ಕಲಹಸ್ತೇನ ವೈರವೃದ್ಧಿರಭೂತ್ತಯೋಃ ॥೫೨೬॥

ಲೋಕದಲ್ಲಿ ನಡೆದದ್ದೇ ಆದರೆ ಆಗ ಸುದರ್ಶನವೇ ಮೊದಲಾದ ಇತರ ಅಸ್ತ್ರಗಳು ಶಿವಾರ್ಚಕರನ್ನು ಹಿಂಸಿಸಿಯಾವು! ||೫೦೩-೫೦೪-೫೦೫-೫೦೬-೫೦೭-೫೦೮-೫೦೯-೫೧೦-೫೧೧-೫೧೨-೫೧೩-೫೧೪-೫೧೫-೫೧೬-೫೧೭-೫೧೮-೫೧೯-೫೨೦-೫೨೧||

ಶಿವಧರ್ಮಾನುಯಾಯಿಯಾದವನಲ್ಲಿ ನೀನು ವಿವೇಕವಿಲ್ಲದೆ ಶಸ್ತ್ರಪ್ರಯೋಗ ಮಾಡಿರುವೆ. ಹೀಗೆ ಹಿಂದೆ ಯಾರೂ ಮಾಡಿರಲಿಲ್ಲ. ಶೈವರಿಗೆ ದುಃಖವನ್ನುಂಟು ಮಾಡುವ ಯಾವ ಕೆಲಸವನ್ನು ಮಾಡಿದರೂ, ಆ ರೀತಿ ಕಾರ್ಯಮಾಡಿದವರು, ಸೂರ್ಯಚಂದ್ರರಿರುವ ಪರ್ಯಂತ ನರಕಭಾಗಿಗಳಾಗುವರು. ಇದು ನಿಜ. ||೫೨೨-೫೨೩||

ಶೈವನಾದವನು, ಸಿಡಿಲಿಗೂ, ಪ್ರಳಯಕಾಲಾಗ್ನಿಗೂ, ಹೆದರುವುದಿಲ್ಲ. ಹಾಗಿರುವಾಗ ನಿನ್ನ ವಜ್ರಾಯುಧಕ್ಕೆ ಅವನು ಹೆದರುವನೆ? ಈ ವಜ್ರಾಯುಧವನ್ನು ತನ್ನ ಮಹಿಮೆಯಿಂದ ಚೂರುಚೂರು ಮಾಡಬಹುದು. ಆದರೂ ಎಲೈ ಇಂದ್ರನೇ, ನಿನ್ನ ಮೇಲಿನ ದಯೆಯಿಂದ ಅವನು ಹಾಗೆ ಮಾಡಲಿಲ್ಲ. ||೫೨೪-೫೨೫||

ಹಿಂದೆ, ವಿಷ್ಣುವಿಗೂ, ಮೈನಾಕನಿಗೂ ಹಿಮಗಿರಿಯಲ್ಲಿ ಲೋಕದಲ್ಲಿ ಯಾರು ದೊಡ್ಡವರೆಂಬ ವಿಷಯದಲ್ಲಿ ದೊಡ್ಡ ಚರ್ಚೆಹುಟ್ಟಿತು. ವಿಷ್ಣುವು ಅಜ್ಞಾನದಿಂದ

ವಿಷ್ಣುನೋಕ್ತಮಹಂ ಶ್ರೇಷ್ಠೋ ಮದನ್ಯೋ ನೇತಿಮೋಹತಃ ।
ಉತ್ಕೃಷ್ಟಶ್ಚೈವ ನಿವೇತಿ ಮೈನಾಕಸ್ಸ ತದಾಬ್ರವೀತ್ ॥೫೨೭॥

ತದಾ ವಿಷ್ಣುರ್ಮಹಾಮೋಹವಶಗೋ ವಿವಶೋ ಭವೇತ್ ।
ಅಧಿಕೋಽಹಂ ನಾಧಿಕೋಽನ್ಯಸ್ಸತ್ಯಮೇತದಿತಿ ಭ್ರಮಾತ್ ॥೫೨೮॥

ವಿಶ್ವಾಧಿಕೋ ರುದ್ರ ಏವೇತ್ಯಬ್ರವೀದ್ಧಿಮವತ್ಸುತಃ ।
ಏವಮುಕ್ತ್ವಾ ಸ ಮೈನಾಕಸ್ತತೋ ವಿಷ್ಣುಮಭರ್ತ್ಸಯತ್ ॥೫೨೯॥

ತದೈವಾಸಹಮಾನಸ್ತಂ ತದುತ್ಕರ್ಷಂ ಶಿವಾರ್ಚಕಃ ।
ಕ್ರೋಧಃ ಕಿಂಶುಕತುಲ್ಯಾಕ್ಷೋ ಬಭಾಷೇ ತಂ ಜನಾರ್ದನಂ ॥೫೩೦॥

॥ ಮೈನಾಕ ಉವಾಚ ॥

ಯಸ್ತ್ರ್ಯಕ್ಷಃ ಶ್ರೀಮಹಾದೇವಃ ಸರ್ವದೇವಶಿಖಾಮಣಿಃ ।
ತದ್ಭೃತ್ಯಭೃತ್ಯತುಲ್ಯೋಽಪಿ ನ ನೂನಂ ತ್ವಂ ಜನಾರ್ದನ ॥೫೩೧॥

ಗಣನಾ ಕುತ್ರ ತೇ ವಿಷ್ಣೋ ಗಣನೀಯೋಽಸಿ ಕಿಂ ಭವಾನ್ ।
ತ್ವಾದೃಶಾ ಗಿರಿಶದ್ವಾಸ್ಸ್ಥೈಃ ಕತಿ ವಾ ನ ಹತಾ ಹರೇ ॥೫೩೨॥

---

ಎಲ್ಲರಿಗಿಂತಲೂ ನಾನೇ ದೊಡ್ಡವನೆಂದೂ, ನನಗಿಂತ ಶ್ರೇಷ್ಠರು ಯಾರೂ ಇಲ್ಲವೆಂದೂ ಹೇಳಿದನು. ಮೈನಾಕನು ಅದಕ್ಕೊಪ್ಪದೆ ಶಿವನೇ ಲೋಕದಲ್ಲಿ ಸರ್ವಶ್ರೇಷ್ಠನು ಎಂದು ವಾದಿಸಿದನು. ||೫೨೬-೫೨೭||

ವಿಷ್ಣುವು ಮತ್ತೆ ಅಜ್ಞಾನಿಯಂತೆ ಲೋಕದಲ್ಲಿ ನಾನೇ ದೊಡ್ಡವನು ನನಗಿಂತ ಶ್ರೇಷ್ಠನು ಯಾರೂ ಇಲ್ಲ ಎಂದು ಘೋಷಿಸಿದನು. ಮೈನಾಕನಾದರೋ ರುದ್ರನೇ ವಿಶ್ವಾಧಿಕನು ಎಂದು ಸಾರುತ್ತಾ ವಿಷ್ಣುವನ್ನು ನಿಂದಿಸಿದನು ಮತ್ತು ಮೈನಾಕನು ಮುತ್ತುಗದ ಹೂವಿನಂತೆ ಕೆಂಪಾದ ಕಣ್ಣುಳ್ಳವನಾಗಿ ಕೋಪದಿಂದ ವಿಷ್ಣುವನ್ನು ಕುರಿತು ಹೀಗೆಂದನು. ||೫೨೮-೫೨೯-೫೩೦||

" ವಿಷ್ಣುವೇ, ತ್ರಿಲೋಚನನಾದ ಮಹಾದೇವನು ಸಕಲ ದೇವತೆಗಳಿಗೂ ಶ್ರೇಷ್ಠನೆನಿಸಿದವನು. ಅವನ ಸೇವಕನಿಗೂ ನೀನು ಸಮನಾದವನಲ್ಲ. ಹಾಗಿರುವಾಗ ನೀನು ಶಂಕರನ ಮುಂದೆ ಎಷ್ಟರವನು? ಶಂಕರನ ದ್ವಾರಪಾಲಕರು ನಿನ್ನಂತಹವರನೇಕರನ್ನು ಇಲ್ಲಿನವರೆಗೆ ಅನೇಕವೇಳೆ ನಾಶಗೊಳಿಸಿರುವರು ||೫೩೧-೫೩೨||

ಮಹೇಶಾನ್ನತ್ವಮುತ್ಕೃಷ್ಟೋ ಮಹೇಶೇನ ಸಮೋಽಪಿ ನ ।
ಮಹೇಶಭೃತ್ಯತುಲ್ಯೋಽಪಿ ನ ತತ್ತುಲ್ಯಃ ಕಥಂ ಭವಾನ್ ॥೫೩೩॥

ಯದಿ ಸಿಂಹೇನ ತುಲ್ಯಸ್ಸ್ಯಾತ್ ಶುನಕೋ ಮಲಭಕ್ಷಕಃ ।
ತಥಾಪಿ ಶ್ರೀಮಹೇಶೇನ ನ ತುಲ್ಯಸ್ತ್ವಂ ಜನಾರ್ದನ ॥೫೩೪॥

ಯದಿ ಮತ್ತೇಭತುಲ್ಯಸ್ಸ್ಯಾನ್ಮಲಾಶೀ ಗ್ರಾಮಸೂಕರಃ ।
ತಥಾಪಿ ಶ್ರೀಮಹೇಶೇನ ನ ತುಲ್ಯಸ್ತ್ವಂ ಜನಾರ್ದನ ॥೫೩೫॥

ಯದಿ ಭೂಪಾಲತುಲ್ಯಸ್ಸ್ಯಾದ್ದರಿದ್ರಃ ಶ್ವಪಚಾಧಮಃ ।
ತಥಾಪಿ ಶ್ರೀಮಹೇಶೇನ ನ ತುಲ್ಯಸ್ತ್ವಂ ಜನಾರ್ದನ ॥೫೩೬॥

ಯದಿ ಪೀಯೂಷತುಲ್ಯಸ್ಸ್ಯಾದುಷ್ಟ್ರಮೂತ್ರಂ ಮಲಾನ್ವಿತಂ ।
ತಥಾಪಿ ಶ್ರೀಮಹೇಶೇನ ನ ತುಲ್ಯಸ್ತ್ವಂ ಜನಾರ್ದನ ॥೫೩೭॥

ಯದಿ ವಿಪ್ರಾಸ್ಯತುಲ್ಯಸ್ಸ್ಯಾದಪಾನಂ ಮಲದೂಷಿತಂ ।
ತಥಾಪಿ ಶ್ರೀಮಹೇಶೇನ ನ ತುಲ್ಯಸ್ತ್ವಂ ಜನಾರ್ದನ ॥೫೩೮॥

ಯದಿ ಸ್ಯಾನ್ಮೇರುಣಾ ತುಲ್ಯೋ ಮಲರಾಶಿಃ ಕ್ರಿಮಿಶ್ರಿತಃ ।
ತಥಾಪಿ ಶ್ರೀಮಹೇಶೇನ ನ ತುಲ್ಯಸ್ತ್ವಂ ಜನಾರ್ದನ ॥೫೩೯॥

ಯದ್ಯತ್ಯುತ್ತಮರತ್ನೇನ ಕಾಚಸ್ತುಲ್ಯೋ ಭವಿಷ್ಯತಿ ।
ತಥಾಪಿ ಶ್ರೀಮಹೇಶೇನ ನ ತುಲ್ಯಸ್ತ್ವಂ ಜನಾರ್ದನ ॥೫೪೦॥

ನೀನು ಈಶ್ವರನಿಗಿಂತ ದೊಡ್ಡವನೂ ಅಲ್ಲ, ಸಮನೂ ಅಲ್ಲ. ಅವನ ಸೇವಕನಿಗೂ ನೀನು ಸರಿಸಮನಾಗಲಾರೆ ಸಿಂಹಕ್ಕೂ, ನಾಯಿಗೂ; ಮದ್ದಾನೆಗೂ, ಮಲಭಕ್ಷಣೆಮಾಡುವ ಊರಿನ ಹಂದಿಗೂ, ಎಂದಾದರೂ ಸಾಮ್ಯವಿರುವುದೆ? ||೫೩೩-೫೩೪-೫೩೫||

ಎಲೈ ವಿಷ್ಣುವೇ, ದರಿದ್ರನಾದ ಚಂಡಾಲನು ರಾಜನಿಗೆ ಸಮನಾದರೂ, ಒಂಟೆಯ ಮಲಮೂತ್ರವು ಅಮೃತಕ್ಕೆ ಸದೃಶವಾದರೂ, ಮಲದೂಷಿತವಾದ ಗುದಪ್ರದೇಶವು ಮುಖಕ್ಕೆ ತುಲ್ಯವೆನಿಸಿದರೂ. ನೀನು ಮಾತ್ರ ಈಶ್ವರನಿಗಿಂತ ದೊಡ್ಡವನಾಗಲಾರೆ. ಕ್ರಿಮಿಭೂಯಿಷ್ಠವಾದ ಅಮೇಧ್ಯದ ರಾಶಿಯು ಮೇರುಪರ್ವ

ಯದಿ ಕ್ಷೀರಾಬ್ಧಿತುಲ್ಯಸ್ಸ್ಯಾನ್ಮೂತ್ರಕೂಪೋ ಮಲಾವಿಲಃ ।
ತಥಾಪಿ ಶ್ರೀಮಹೇಶೇನ ನ ತುಲ್ಯಸ್ತ್ವಂ ಜನಾರ್ದನ ॥೫೪೧॥

ಯದಿ ರಂಭಾಸಮಾನಸ್ಸ್ಯಾಚ್ಚಂಡಾಲೀ ಛಿನ್ನನಾಸಿಕಾ ।
ತಥಾಪಿ ಶ್ರೀಮಹೇಶೇನ ನ ತುಲ್ಯಸ್ತ್ವಂ ಜನಾರ್ದನ ॥೫೪೨॥

ಯದಿ ಕಿನ್ನರಗಾನೇನ ಸಮಸ್ಸ್ಯಾದ್ಗರ್ದಭಸ್ವನಃ ।
ತಥಾಪಿ ಶ್ರೀಮಹೇಶೇನ ನ ತುಲ್ಯಸ್ತ್ವಂ ಜನಾರ್ದನ ॥೫೪೩॥

ಯದಿ ಸೋಮಪತುಲ್ಯಸ್ಸ್ಯಾನ್ಮದ್ಯಪೋ ಮಾಂಸಭಕ್ಷಕಃ ।
ತಥಾಪಿ ಶ್ರೀ ಮಹೇಶೇನ ನ ತುಲ್ಯಸ್ತ್ವಂ ಜನಾರ್ದನ ॥೫೪೪॥

ಯದಿ ಯಾಗೀಯಪಶುಹಾ ಬ್ರಹ್ಮಹಂತೃಸಮೋ ಭವೇತ್ ।
ತಥಾಪಿ ಶ್ರೀ ಮಹೇಶೇನ ನ ತುಲ್ಯಸ್ತ್ವಂ ಜನಾರ್ದನ ॥೫೪೫॥

ಯದಿ ಕಾಚೋ ಭವೇಚ್ಛ್ರೇಷ್ಠೋ ಮಣೇರತ್ಯುತ್ತಮೋತ್ತಮಾತ್ ।
ತಥಾಪಿ ಶ್ರೀ ಮಹೇಶೇನ ನ ತುಲ್ಯಸ್ತ್ವಂ ಜನಾರ್ದನ ॥೫೪೬॥

ಯದಿ ರೇತೋ ಭವೇಚ್ಛ್ರೇಷ್ಠಂ ಪೀಯೂಷಾದುತ್ತಮೋತ್ತಮಾತ್ ।
ತಥಾಪಿ ತ್ವಂ ಮಹಾದೇವಾದಧಿಕೋ ನ ಜನಾರ್ದನ ॥೫೪೭॥

ಯದ್ಯಮೇಧ್ಯಂ ಭವೇಚ್ಛ್ರೇಷ್ಠಂ ನವನೀತಾನ್ಮನೋರಮಾತ್ ।
ತಥಾಪಿ ತ್ವಂ ಮಹಾದೇವಾದಧಿಕೋ ನ ಜನಾರ್ದನ ॥೫೪೮॥

---

ತಕ್ಕೂ, ಗಾಜು ಉತ್ತಮವಾದ ರತ್ನಕ್ಕೂ, ಮಲದಿಂದ ಕೂಡಿದ ಮೂತ್ರದ ಬಾವಿಯು ಕ್ಷೀರಸಮುದ್ರಕ್ಕೂ, ಮೂಗನ್ನು ಕತ್ತರಿಸಿಕೊಂಡ ಚಂಡಾಲಸ್ತ್ರೀಯು ರಂಭೆಗೂ, ಕತ್ತೆಯ ಧ್ವನಿಯು ಕಿನ್ನರರ ಗಾನಕ್ಕೂ ಸಮಾನವೆನಿಸೀತೆ? ಹಾಗೆಯೇ ಸೋಮಪಾನಮಾಡಿದವನು, ಮಾಂಸಭಕ್ಷಕನೊಡನೆಯೂ, ಯಾಗದಲ್ಲಿ ಪಶುವನ್ನು ವಧಿಸುವವನು ಬ್ರಹ್ಮಹತ್ಯೆಮಾಡಿದವನೊಡನೆಯೂ, ಉತ್ತಮೋತ್ತಮವಾದ ಶಿರೋಮಣಿಯು ಗಾಜಿನೊಡನೆಯೂ, ದಿವ್ಯಾಮೃತವು ಮನುಷ್ಯನ ರೇತಸ್ಸಿನೊಡನೆಯೂ ಎಂದಾದರೂ ಸಾಮ್ಯವನ್ನು ಪಡೆದೀತೆ? ಒಂದು ವೇಳೆ ಅಮೇಧ್ಯವು ದಿವ್ಯವಾದ ಬೆಣ್ಣೆಗಿಂತಲೂ, ಶ್ರೇಷ್ಠವೆನಿಸೀತು! ಮುನಿಗಳಿಗೂ ಮೋಹಕನಾದ

ಯದಿ ಶ್ರೇಷ್ಠೋ ಭವೇತ್ಕುಷ್ಠೀ ಮನ್ಮಥಾನ್ಮುನಿಮೋಹನಾತ್ ।
ತಥಾಪಿ ತ್ವಂ ಮಹಾದೇವಾದಧಿಕೋ ನ ಜನಾರ್ದನ ॥೩೪೯॥

ಯದಿ ಸ್ಯಾತ್ಪೇಚಕಃ ಶ್ರೇಷ್ಠೋ ರಮ್ಯಾದೈರಾವತಾದಪಿ ।
ತಥಾಪಿ ತ್ವಂ ಮಹಾದೇವಾದಧಿಕೋ ನ ಜನಾರ್ದನ ॥೩೫೦॥

ಯದಿ ಸ್ಯಾದ್ರಾಸಭಃ ಶ್ರೇಷ್ಠೋ ದೇವಾಶ್ವಾದಪಿ ಶೋಭನಾತ್ ।
ತಥಾಪಿ ತ್ವಂ ಮಹಾದೇವಾದಧಿಕೋ ನ ಜನಾರ್ದನ ॥೩೫೧॥

ಅಣೋರಣೀಯಾನ್ಮಹತೋ ಮಹೀಯಾಂಸ್ತ್ರಿಪುರಾಂತಕಃ ।
ತಾದೃಶಾಚ್ಛ್ರೀಮಹಾದೇವಾದಧಿಕಸ್ತ್ವಂ ಕಥಂ ಹರೇ ॥೩೫೨॥

ಪರಮಾಣುರ್ಯಥಾಲ್ಪೋ ವಸ್ತುತೋ ಮೇರ್ವಪೇಕ್ಷಯಾ ।
ತಥಾ ಜನಾರ್ದನಾಲ್ಪೋಽಸಿ ತ್ವಮುಮಾಪತ್ಯಪೇಕ್ಷಯಾ ॥೩೫೩॥

॥ ಗುರುರುವಾಚ ॥

ಸ ವೈನಾಕಸ್ತಮುಕ್ತ್ವೈವಂ ವಿಷ್ಣುಂ ಸ್ವೋತ್ಕರ್ಷವಾದಿನಂ ।
ಪಾತಯಿತ್ವಾ ಭುವಿ ಕ್ರೋಧಾದ್ಧರ್ಷಯಾಮಾಸ ಪಾದತಃ ॥೩೫೪॥

ಸುಂದರ ಮನ್ಮಥನು ಕುಷ್ಠರೋಗಿಯಿಂದಲೂ, ಐರಾವತವು ಕಣ್ಣುಕಾಣದ ಗೂಬೆಯಿಂದಲೂ, ಉಚ್ಚೈಃಶ್ರವಸ್ಸೆಂಬ ದಿವ್ಯಾಶ್ವವು ಕತ್ತೆಯಿಂದಲೂ, ಶ್ರೇಷ್ಠತ್ವದಲ್ಲಿ ಪರಾಜಯಪಡೆದರೂ, ಪರಶಿವನು ನಿನಗಿಂತ ಕನಿಷ್ಠನಾಗನು. ಮಹಾವಿಷ್ಣುವೇ. ಎಂದೂ ನೀನು ಮಹಾದೇವನಿಗಿಂತ ಅಧಿಕನಾಗಲಾರೆ! ಇದು ನಿಶ್ಚಯ. (೩೩೬-೩೩೭-೩೩೮-೩೩೯-೩೪೦-೩೪೧-೩೪೨-೩೪೩-೩೪೪-೩೪೫-೩೪೬-೩೪೭-೩೪೮-೩೪೯-೩೫೦-೩೫೧)

ಪರಮೇಶ್ವರನು ಅಣುವಿಗಿಂತಲೂ ಅಣುವಾಗಿ ಕಾಣುವನು ಮಹಾವಸ್ತುವಿಗಿಂತಲೂ ಮಹತ್ತಾಗಿ ಕಾಣುವನು. ಆ ಮಹಾತ್ಮನಾದ ಮಹಾದೇವನು ನಿನಗಿಂತ ಅಲ್ಪನು ಹೇಗಾಗುವನು? ಮೇರುವಿಗಿಂತಲೂ ಪರಮಾಣುವು ಎಷ್ಟು ಅಲ್ಪವಾಗಿ ಕಾಣುವುದೋ, ಅಷ್ಟೇ ಪ್ರಮಾಣದ ಅಂತರವು ನಿನಗೂ ಮಹಾದೇವನಿಗೂ ಕಾಣುವುದು. (೩೫೨-೩೫೩)

ಎಂದು ವೈನಾಕನು ತನ್ನನ್ನು ದೊಡ್ಡವನೆಂದು ಹೇಳಿಕೊಂಡ ವಿಷ್ಣುವನ್ನು

ತತ್ಪಾದಘರ್ಷಣೇನೈವ ವಿಷ್ಣುಃ ಕೃಷ್ಣತ್ವಮಾಗತಃ ।
ತದಾಪ್ರಭೃತಿ ತಂ ಪ್ರಾಹುಃ ಕೃಷ್ಣ ಇತ್ಯಖಿಲಾ ಜನಾಃ ॥೫೫೫॥

ಮೈನಾಕಪಾದಯೋಗೇನ ಗತಮೋಹೋ ಜನಾರ್ದನಃ ।
ಮೈನಾಕಂ ಸತ್ವರಂ ನತ್ವಾ ತಮುವಾಚ ವಿನಯಾನ್ವಿತಃ ॥೫೫೬॥

ಉತ್ಕೃಷ್ಟಃ ಶಿವ ಏವೇತಿ ತ್ವಯೋಕ್ತಂ ಹಿಮವತ್ಸುತ ।
ತತ್ತಥೈವ ನ ಸಂದೇಹೋ ವೇದೋಽಪ್ಯಾಹ ತಥಾ ಯತಃ ॥೫೫೭॥

ವೇದೈರ್ವಿಶ್ವಾಧಿಕತ್ವೇನ ಶ್ರೀ ರುದ್ರಃ ಪ್ರತಿಪಾದಿತಃ ।
ಯತೋ ವಿಶ್ವಾಧಿಕೋ ರುದ್ರ ಇತಿ ವಾಕ್ಯಂ ಶ್ರುತಿಶ್ರುತಂ ॥೫೫೮॥

ಶ್ರೀ ಮಹಾದೇವದುಗ್ಧಾಬ್ಧೌ ವಿಷ್ಣುಬ್ರಹ್ಮಾದಯಃ ಸುರಾಃ ।
ಶೀಕರಾ ಇತಿ ಜಾಬಾಲೋ ವದತ್ಯೇವ ಮುಹುರ್ಮುಹುಃ ॥೫೫೯॥

ಮಯಾದ್ಯ ಭ್ರಾಂತಚಿತ್ತೇನ ಮಯ್ಯುತ್ಕೃಷ್ಟತ್ವಮೀರಿತಂ ।
ನ ಮಯಾ ಪ್ರಕೃತಿಸ್ಥೇನ ಮಯ್ಯುತ್ಕೃಷ್ಟತ್ವಮೀರಿತಂ ॥೫೬೦॥

---

ನಿಂದಿಸಿ, ಕೋಪದಿಂದ ಕಾಲಿನಿಂದ ಒದ್ದು ಕೆಳಕ್ಕೆ ಕೆಡವಿದನು. ಆ ಪಾದಾಘಾತದ ವೇಗದಿಂದ ವಿಷ್ಣುವು ಕಪ್ಪುಬಣ್ಣದವನಾದನು. ಅಂದಿನಿಂದ ಅವನಿಗೆ ಕೃಷ್ಣನೆಂಬ ಹೆಸರು ಬಂದಿತು. ॥೫೫೪-೫೫೫॥

ವಿಷ್ಣುವು ಆಗ ಮೂರ್ಛೆ ಬಿದ್ದಿದ್ದು, ಮೈನಾಕನಿಗೆ ವಂದಿಸಿ, ಹೀಗೆ ಪ್ರಾರ್ಥಿಸ ತೊಡಗಿದನು. "ಮೈನಾಕನೇ, ಶಿವನೇ ದೊಡ್ಡವನೆಂದು ಹೇಳಿದ ನಿನ್ನ ಮಾತು ಸತ್ಯವಾದದ್ದು. ವೇದವೂ ನಿನ್ನ ಅಭಿಪ್ರಾಯವನ್ನೇ ಸರಿಹೋಲುತ್ತಿರುವುದು. ॥೫೫೬-೫೫೭॥

ಶ್ರೀ ರುದ್ರನೇ ವಿಶ್ವಾಧಿಕನು ಎಂದು ಸಕಲ ವೇದಗಳೂ ಹೇಳುತ್ತಿವೆ. ಮಹಾದೇವನೆಂಬುವನು ಒಂದು ಕ್ಷೀರಸಮುದ್ರವಾದರೆ, ವಿಷ್ಣು, ಬ್ರಹ್ಮ ಮುಂತಾದವರು ಒಂದೊಂದು ಹನಿಗಳಂತಿರುವರು ಎಂದು ಜಾಬಾಲರು ಹೇಳುತ್ತಿರುವರು. ಭ್ರಾಂತಸ್ವಭಾವವುಳ್ಳವನಾಗಿ ನಾನು ದೊಡ್ಡವನೆಂದು ಹೇಳಿಕೊಂಡೆನು. ಈಗ ಸ್ವಭಾವಸ್ಥಿತಿಯುಳ್ಳ ನಾನು ಉತ್ಕೃಷ್ಟನಲ್ಲವೆಂದು ಭಾವಿಸಿರುವೆನು. ॥೫೫೮-೫೫೯-೫೬೦॥

ಮಯ್ಯದ್ಯ ಯಾ ಕೃತಾ ಶಿಕ್ಷಾ ತ್ವಯಾ ಮೈನಾಕ ಶಾಂಭವ
ಸಾ ಶಿಕ್ಷಾ ವಸ್ತುತೋ ಜಾತಾ ಮಯಾ ವಾದ್ಯ ಹಿತಾವಹಾ ॥೫೬೦॥

ಯಥಾ ಸುತಂ ಪಿತೋನ್ಮತ್ತಂ ಶಿಕ್ಷಯತ್ಯಕ್ಷತಾದಿಭಿಃ ।
ತಥಾಧುನಾ ಭ್ರಾಂತಚಿತ್ತೇ ಮಯಿ ಶಿಕ್ಷಾ ಕೃತಾ ತ್ವಯಾ ॥೫೬೧॥

ಮೈನಾಕ ತ್ವತ್ಪದಸ್ಪಂದ್ಯಯೋಗೇನೈವ ಮಮಾಧುನಾ ।
ಭ್ರಾಂತಿರ್ಗತಾನ್ಯಥಾ ಭ್ರಾಂತಿಃ ಕಥಂ ತ್ಯಕ್ಷ್ಯತಿ ಮಾಂ ದ್ರುತಂ ॥೫೬೩॥

ಸರ್ವಾಂಗೋದ್ಧೂಲನಾದ್ಭಸ್ಮ ಸಂಗತಂ ಚರಣದ್ವಯೇ ।
ತಾಭ್ಯಾಂ ಚ ಸಂಗಮಾನ್ಮೇಹೋ ಮಮಾದ್ಯೇಹ ಗತೋ ಧ್ರುವಂ ॥೫೬೪॥

ಮಹಾನ್ಮೇ ಉಪಕಾರೋಽಯಂ ಮೈನಾಕಾದ್ಯ ತ್ವಯಾ ಕೃತಃ ।
ನಾಸ್ತಿ ಪ್ರತ್ಯುಪಕಾರೋಽಸ್ಯ ವಸ್ತುತಃ ಸತ್ಯಮುಚ್ಯತೇ ॥೫೬೫॥

ಭ್ರಾಂತ್ಯಾಪಿ ಶಿವೋತ್ಕರ್ಷಂ ನ ವದಿಷ್ಯಾಮ್ಯಹಮೇಕದಾ ।
ಶಿಕ್ಷಾಂ ಮಮ ಮನ್ಯೈವ ತ್ವಂ ನಿರೋಽಯಂ ಮಮ ಶಾಂಭವ ॥೫೬೬॥

ಅನ್ಯಥಾ ಭ್ರಾಂತಚಿತ್ತೇನ ಮಯಾ ಚೇದ್ವಲ್ಗನಂ ಕೃತಂ ।
ತದಾಗ್ರೇ ಯಾತನಾ ಘೋರಾ ಭವಿಷ್ಯತಿ ಮಮ ಧ್ರುವಂ ॥೫೬೭॥

---

ಶಾಂಭವನೆನಿಸಿದ ಮೈನಾಕನೇ, ನಿನ್ನಿಂದ ಈಗ ಪಡೆದ ಶಿಕ್ಷೆಯು ನನಗೆ ನಿಜವಾಗಿಯೂ ಹಿತಕಾರಿಯಾದುದು. ಉನ್ಮತ್ತನಾದ ಪುತ್ರನನ್ನು ತಂದೆಯು ದಂಡಾದಿಗಳಿಂದ ಶಿಕ್ಷಿಸುವಂತೆ ನೀನು ಅಜ್ಞಾನಿಯಾದ ನನ್ನನ್ನು ಸರಿಯಾದ ರೀತಿಯಲ್ಲಿ ಶಿಕ್ಷಿಸಿರುವೆ. ॥೫೬೦-೫೬೨॥

ನಿನ್ನ ದೇಹವೆಲ್ಲವೂ ಭಸ್ಮೋದ್ಧೂಲಿತವಾಗಿರುವುದರಿಂದ ನಿನ್ನ ಪಾದಸಂಗತವಾದ ಭಸ್ಮವು ಈಗ ನನ್ನ ಮೈಗೆ ತಗುಲಿತು. ಇದರಿಂದ ನನ್ನ ದೇಹ ಕೃತಾರ್ಥವೆನಿಸಿತು. ನೀನು ನನಗೆ ಮಹತ್ತಾದ ಉಪಕಾರವನ್ನೇ ಮಾಡಿರುವೆ. ನಿಜವಾಗಿಯೂ ನಿನಗೆ ನಾನು ಏನೂ ಪ್ರತ್ಯುಪಕಾರ ಮಾಡಲಾರೆನು ॥೫೬೩-೫೬೪-೫೬೫॥

ಎಲೈ ಶಾಂಭವಶ್ರೇಷ್ಠನಾದ ಮೈನಾಕನೇ, ಇನ್ನು ಮುಂದೆ ನಾನು ಎಂದಾದರೂ ಅಜ್ಞಾನದಿಂದ ಶಿವನು ದೊಡ್ಡವನೆಂಬುದನ್ನು ಹೇಳದಿದ್ದರೆ ನೀನು, ನಿಜವಾಗಿಯೂ

|| ಗುರುರುವಾಚ ||

ಪ್ರಾಯಶ್ಚಿತ್ತಂ ಸುನಿರ್ವೃತ್ತಮದ್ಯ ತ್ವತ್ಕೃತಶಿಕ್ಷಯಾ ।
ಅತಃಪರಂ ಮದುತ್ಕರ್ಷವಾದಜಂ ಪಾತಕಂ ನ ಮೇ ||೫೬೮||

ಇತ್ಯುಕ್ತ್ವಾ ಶಾಂಭವಶ್ರೇಷ್ಠಂ ಮೈನಾಕಂ ಶಂಕರಪ್ರಿಯಂ ।
ಮಂದಾರಪುಷ್ಪೈಃ ಸಂಪೂಜ್ಯ ಯಯೌ ನತ್ವಾ ಜನಾರ್ದನಃ ||೫೬೯||

ಇಂದ್ರಾತಸ್ತಾದೃಶೇ ಶಕ್ತೇ ಮೈನಾಕೇ ಶಾಂಭವೋತ್ತಮೇ ।
ತ್ವತ್ಪ್ರೇಷಿತಮಿದಂ ವಜ್ರಂ ಲಗಿಷ್ಯತಿ ಕಥಂ ವದ ||೫೭೦||

ವಜ್ರಂ ಕಿಮಿತಿ ತೇನೇದಂ ನೈವ ಚೂರ್ಣೀಕೃತಂ ತದಾ
ನ ಜಾನೇ ಸ ಯತಃ ಕ್ರೂರಃ ಪಾದಧರ್ಷಿತಮಾಧವಃ ||೫೭೧||

ಶಕ್ತಿಶ್ಶಾಂಭವಮಾತ್ರಸ್ಯಾಪ್ಯಸ್ತ್ಯೇವೈತಾದೃಶೀ ಸದಾ ।
ಶಕ್ತಿರಸ್ತೀದೃಶೀ ತಸ್ಮಿನ್ ಮೈನಾಕ ಇತಿ ನಾದ್ಭುತಂ ||೫೭೨||

---

ನನಗೆ ಶಿಕ್ಷೆಯನ್ನು ವಿಧಿಸು ಆಗ ಅದು ನನಗೆ ವರದಂತಾಗುವುದು. ಏಕೆಂದರೆ ತಿಳಿಯದೆ ಮಾಡಿದ ಅಪರಾಧಕ್ಕಾಗಿ ನಾನು ಮುಂದೆ ಘೋರ ನರಕದುಃಖಕ್ಕೀಡಾಗ ಬೇಕಾಗಬಹುದು. ||೫೬೬-೫೬೭||

ಈಗ ನೀನು ನನ್ನನ್ನು ಶಿಕ್ಷಿಸಿದುದು, ನನ್ನ ತಪ್ಪಿಗೆ ಪ್ರಾಯಶ್ಚಿತ್ತವಾಯಿತು. ನಾನು ದೊಡ್ಡವನೆಂದು ಹೇಳಿಕೊಂಡ ಪಾಪವು ಈಗ ನನಗೆ ತಪ್ಪಿಹೋಯಿತು." ಎಂದು ವಿಷ್ಣುವು ವಿಧೇಯನಾಗಿ ಮಾತನಾಡಿ, ಮೈನಾಕನನ್ನು ಶಂಕರಪ್ರಿಯನೆಂದು ಭಾವಿಸಿ, ಮಂದಾರಪುಷ್ಪಗಳಿಂದ ಪೂಜಿಸಿ ಹೊರಟುಹೋದನು. ಆದ್ದರಿಂದ ಎಲೈ ಇಂದ್ರನೇ, ಅಂತಹ ಶಾಂಭವಶ್ರೇಷ್ಠನ ಮುಂದೆ ನಿನ್ನ ವಜ್ರಾಯುಧವು ಏನೂ ಕೆಲಸಮಾಡಲಾರದು. ||೫೬೮-೫೬೯-೫೭೦||

ವಿಷ್ಣುವನ್ನೇ ಕಾಲಿನಿಂದ ಒದ್ದ ಕ್ರೂರ ಮೈನಾಕನು ನಿನ್ನ ವಜ್ರಾಯುಧ ವನ್ನು ಚೂರು ಚೂರು ಮಾಡಬಹುದಾಗಿತ್ತು. ಹಾಗೆ ಏಕೆ ಮಾಡಲಿಲ್ಲವೋ ಕಾಣೆ. ಸಾಮಾನ್ಯ ಶಾಂಭವನಿಗೇ ಅಂತಹ ಅಗಾಧಶಕ್ತಿಯಿರುವಾಗ, ಈ ಮೈನಾಕನಲ್ಲಿ ತೋರಿಬರುವ ಈ ಸಾಮರ್ಥ್ಯದಲ್ಲಿ ಆಶ್ಚರ್ಯವೇನು ? ||೫೭೧-೫೭೨||

ಮಾಧವಂ ಪ್ರಣತಂ ದೃಷ್ಟ್ವಾ ಸ ಮೈನಾಕಃ ಕೃಪಾನಿಧಿಃ ।
ತಂ ತತ್ಯಾಜಾನ್ಯಥಾ ಸದ್ಯಸ್ತಂ ಹನ್ಯಾದೇವ ಮಾಧವಂ ॥೫೭೩॥

ನ ತ್ಯಕ್ಷ್ಯತ್ಯೇವ ಮೈನಾಕೋ ಭವಂತಂ ಮತ್ತಮೀದೃಶಂ ।
ತ್ವಯಾ ತದ್ಘನನಂ ಕರ್ತುಂ ವಜ್ರಂ ಸಂಪ್ರೇಷಿತಂ ಯತಃ ॥೫೭೪॥

ಅನ್ಯಾದೃಶಂ ನ ಜಾನೀಹಿ ಮೈನಾಕಂ ಶಾಂಭವೋತ್ತಮಂ ।
ಸ ತಾದೃಶೋ ನ ಮೈನಾಕೋ ಯಸ್ತ್ವಾಮುಷ್ಣೀಂ ಸ್ಥಾತುಮಿಚ್ಛತಿ ॥೫೭೫॥

ಬಲಂ ತೇನ ಮಹತ್ಪ್ರಾಪ್ತಂ ಮೃತ್ತಿಕಾಲಿಂಗಪೂಜಯಾ ।
ಸ ಚೇತ್ಕ್ರುದ್ಧೋ ಜಗತ್ಸರ್ವಂ ನಾಶಯಿಷ್ಯತಿ ಸತ್ವರಂ ॥೫೭೬॥

ಯತ್ಪಾದಘರ್ಷಣಾತ್ಸದ್ಯೋ ವಿಷ್ಣುಃ ಕೃಷ್ಣತ್ವಮಾಪ್ತವಾನ್ ।
ಸ ಮೈನಾಕೋಽತಿದುರ್ಧರ್ಷೋ ನ ಭವಿಷ್ಯತಿ ಕಿಂ ವದ ॥೫೭೭॥

ಶಿವಾರ್ಚನಪ್ರಸಂಗೇನ ಸ ತಿಷ್ಠತ್ಯಧುನಾ ಧ್ರುವಂ ।
ತಸ್ಮಿಂಸ್ಸಮಾಪ್ತೇ ಮೈನಾಕಸ್ತವ ಶಿಕ್ಷಾಂ ಕರಿಷ್ಯತಿ ॥೫೭೮॥

ಆಗ ವಿಷ್ಣುವು ನಮಸ್ಕಾರಮಾಡಿದುದರಿಂದಲೇ ದಯಾನಿಧಿಯಾದ ಮೈನಾಕನು ಅವನನ್ನು ಪ್ರಾಣಸಹಿತವಾಗಿ ಬಿಟ್ಟುಬಿಟ್ಟನು. ಇಲ್ಲವಾದರೆ ಅವನನ್ನು ಕೊಂದೇಬಿಡುತ್ತಿದ್ದನು. ಈಗಲೂ ನೀನು ಆ ಮೈನಾಕನನ್ನು ಹೊಡೆಯಲು ವಜ್ರಾಯುಧವನ್ನು ಪ್ರಯೋಗಿಸಿರುವುದರಿಂದ ನಿನ್ನನ್ನು ಅವನು ಶಿಕ್ಷಿಸದೆ ಬಿಡಲಾರನು. ॥೫೭೩-೫೭೪॥

ಶಾಂಭವನಾದ ಮೈನಾಕನನ್ನು ಇತರರಂತೆ ತಿಳಿಯಬೇಡ. ಅವನು ಎಂದೂ ಸುಮ್ಮನಿರುವ ವ್ಯಕ್ತಿಯಲ್ಲ. ಮೃತ್ತಿಕಾಲಿಂಗಾರಾಧನೆಯಿಂದ ಅತಿಶಯವಾದ ಬಲವನ್ನು ಗಳಿಸಿರುವನು. ಅವನು ಕೋಪಿಸಿಕೊಂಡರೆ ಕೂಡಲೇ ಜಗತ್ತನ್ನೆಲ್ಲಾ ನಾಶಗೊಳಿಸುವನು. ॥೫೭೫-೫೭೬॥

ಅವನ ಪಾದಾಘಾತದಿಂದಲೇ ವಿಷ್ಣುವಿನ ದೇಹವು ಕಪ್ಪಾಗಬೇಕಾದರೆ ಆತನು ಸಾಮಾನ್ಯ ವೀರನೇ. ಈಗ ಅವನು ಶಿವಾರ್ಚನೆಯ ಕಾರ್ಯದಲ್ಲಿ ವ್ಯಗ್ರನಾಗಿರುವನು. ಅದು ಮುಗಿದೊಡನೆಯೇ ನಿನಗೆ ಪ್ರಬಲವಾದ ಶಿಕ್ಷೆಯನ್ನು ವಿಧಿಸುವನು. ಇದು ನಿಜ. ॥೫೭೭-೫೭೮॥

ಇಂದ್ರಾದ್ಯೈವ ಮೈನಾಕಂ ಶರಣಂ ಯಾಸಿ ಚೇತ್ತದಾ ।
ಸ ಮೈನಾಕಃ ಕೃಪಾಸಿಂಧುರ್ಭವಂತಂ ರಕ್ಷಯಿಷ್ಯತಿ ॥೫೭೯॥

ಅನ್ಯಥಾಽದ್ಯೈವ ಮೈನಾಕೋ ಭವಂತಮತಿವೀರ್ಯವಾನ್ ।
ಹತ್ವಾನ್ಯಸ್ಮೈ ಸ್ವರ್ಗಲೋಕಂ ದಾಪಯಿಷ್ಯತಿ ಶಾಂಕರಾತ್ ॥೫೮೦॥

॥ ಅಗಸ್ತ್ಯ ಉವಾಚ ॥

ಇತೀಂದ್ರಸ್ತದ್ವಚಶ್ಶ್ರುತ್ವಾ ಮೈನಾಕಂ ಶರಣಂ ಗತಃ ।
ಪಾಲಯಾಮಾಸ ಮೈನಾಕಸ್ತಮಿಂದ್ರಂ ಶರಣಾಗತಂ ॥೫೮೧॥

ಮೈನಾಕೇನೇದೃಶೀ ಶಕ್ತಿಃ ಪ್ರಾಪ್ತಾ ಮೃಲ್ಲಿಂಗಪೂಜಯಾ ।
ಮೃಲ್ಲಿಂಗಪೂಜನಂ ಯಸ್ಮಾತ್ಸರ್ವಾಭೀಷ್ಟಪ್ರದಾಯಕಂ ॥೫೮೨॥

ಮೃಲ್ಲಿಂಗಪೂಜನಾತ್ಪೂರ್ವಂ ಬಹವೋ ಬ್ರಹ್ಮವಾದಿನಃ ।
ತತ್ತ್ವಜ್ಞಾನಂ ಪರಂ ಪ್ರಾಪ್ಯ ಶಿವಂ ಪ್ರಾಪುಶ್ಶಿವಾಜ್ಞಯಾ ॥೫೮೩॥

ಸರ್ವಶ್ರುತಿಶ್ರುತಂ ಪುಣ್ಯಂ ಸರ್ವಸಂಪತ್ಪ್ರವರ್ಧಕಂ ।
ಆರೋಗ್ಯದಂ ಪುಷ್ಟಿದಂ ಚ ಧನ್ಯಂ ಮೃಲ್ಲಿಂಗಪೂಜನಂ ॥೫೮೪॥

---

ಎಲೈ ಇಂದ್ರನೇ, ನೀನು ಈಗಲೇ ಹೋಗಿ ಮೈನಾಕನನ್ನು ಮೊರೆಹೊಕ್ಕು ಕ್ಷಮೆ ಬೇಡಿಕೋ. ಇಲ್ಲವಾದರೆ ಈಗಲೇ ಅವನು ನಿನ್ನನ್ನು ಕೊಂದು, ನಿನ್ನ ರಾಜ್ಯವನ್ನು ಮತ್ತಾರಿಗಾದರೂ ಕೊಡಿಸುವನು. ಇದು ನಿಜ. ॥೫೭೯-೫೮೦॥

ಎಂದು ಹೇಳಲು ಇಂದ್ರನು ಅದಕ್ಕೆ ಹೆದರಿ ಒಡನೆಯೇ ಮೈನಾಕನನ್ನು ಮೊರೆಹೋಗಲು, ಕೃಪಾಳುವಾದ ಮೈನಾಕನು ಅವನನ್ನು ಕ್ಷಮಿಸಿ ರಕ್ಷಿಸಿದನು. ಆದ್ದರಿಂದ ಮೃತ್ತಿಕಾಲಿಂಗಾರ್ಚನೆಯೆಂಬುದು ಸರ್ವಸಿದ್ಧಿಪ್ರದವಾದುದೆಂದು ತಿಳಿ ಎಂದು ಹೇಳುತ್ತಾ ಅಗಸ್ತ್ಯಮಹರ್ಷಿಯು ಅದೇ ವಿಷಯವನ್ನು ಮುಂದುವರಿಸಿದನು ॥೫೮೧-೫೮೨॥

ಹಿಂದೆ ಅನೇಕ ಬ್ರಹ್ಮಜ್ಞಾನಿಗಳು ಮೃಲ್ಲಿಂಗಾರ್ಚನೆಮಾಡಿ ತತ್ತ್ವಜ್ಞಾನವನ್ನು ಪಡೆದರು. ಆದ್ದರಿಂದ ಈ ಕರ್ಮವು ಶ್ರುತಿಶ್ರುತವಾದದ್ದು, ಸರ್ವಸಂಪತ್ತನ್ನೂ ಹೆಚ್ಚಿಸತಕ್ಕದ್ದು. ಆರೋಗ್ಯ, ಪುಷ್ಟಿ ಇವುಗಳನ್ನಿತ್ತು ಭಕ್ತರಿಗೆ ಮಂಗಳಕರವೆನಿಸಿಕೊಂಡಿರುವುದು. ॥೫೮೩-೫೮೪॥

ಮೃಲ್ಲಿಂಗಪೂಜನಾದನ್ಯತ್ ನಾಸ್ತಿ ಸರ್ವೇಪ್ಸಿತಾರ್ಥದಂ ।
ಸತ್ಯಮಿತ್ಯಾಹ ಭಗವಾನ್ನಂದಿಕೇಶಾಯ ಶಂಕರಃ ।೫೮೫॥

ಮೃಲ್ಲಿಂಗಪೂಜನಂ ಶ್ರೌತಂ ಸದಾ ಸ್ವಾಭೀಪ್ಸಿತಾರ್ಥದಂ ।
ಸತ್ಯಂ ಸತ್ಯಮಿತಿ ಪ್ರಾಹ ಮಂಗಲಾಪಿ ಸುಮಂಗಲಾ ॥೫೮೬॥

ರತ್ನಲಿಂಗಾದಪಿ ಶ್ರೇಷ್ಠಂ ಮೃನ್ಮಯಂ ಲಿಂಗಮುತ್ತಮಂ ।
ತತೋಽಧಿಕಂ ನಾರ್ಮದಂ ಸ್ಯಾದ್ರಸಜಂ ಚ ತತೋಽಧಿಕಂ ॥೫೮೭॥

ಪುರಾ ರೇವಾತಟೇ ರಮ್ಯೇ ಮೌದ್ಗಲ್ಯೋ ಮುನಿಪುಂಗವಃ ।
ಜಾಬಾಲಶ್ರುತಿತತ್ತ್ವಜ್ಞಃ ಶಿವಪೂಜಾಪರಸ್ಸ್ಥಿತಃ ॥೫೮೮॥

ಉದ್ಧೂಲನತ್ರಿಪುಂಡ್ರಾಭ್ಯಾಂ ರುದ್ರಾಕ್ಷೈಶ್ಚ ವಿಭೂಷಿತಃ ।
ಶ್ರೀರುದ್ರಜಪಸಂಸಕ್ತಃ ಪಂಚಾಕ್ಷರಜಪಪ್ರಿಯಃ ॥೫೮೯॥

ಸದಾಶಿವಕಥಾಮೇವ ಸದಾ ಶೃಣ್ವನ್ನಿಲೋಕಯನ್
ಶಿವಲಿಂಗಂ ಸಮಭ್ಯರ್ಚ್ಯ ಮೋದಮಾನಃ ಸ್ಥಿತಸ್ಸದಾ ।೫೯೦।

ಮೃಲ್ಲಿಂಗಪೂಜೆಗಿಂತಲೂ ಸಕಲೇಷ್ಟಾರ್ಥವನ್ನೂ ಒದಗಿಸಿಕೊಡುವ ಮತ್ತಾವ ವ್ರತವೂ ಇರಲಾರದು. ಇದು ಸತ್ಯ ಎಂದು ಶಂಕರನು ನಂದೀಶ್ವರನಿಗೆ ಹೇಳಿರುವನು. ಹಾಗೆಯೇ ಸರ್ವಮಂಗಳೆಯೆನಿಸಿದ ಪಾರ್ವತಿಯೂ ಸಹ ಅಭೀಷ್ಟಾರ್ಥಪ್ರದವಾದ ವ್ರತವೆಂದರೆ ಮೃಲ್ಲಿಂಗ ಪೂಜೆಯೆಂದೇ ಹೇಳಿರುವಳು. ॥೫೮೫-೫೮೬॥

ರತ್ನಲಿಂಗಕ್ಕಿಂತ ಮೃನ್ಮಯಲಿಂಗವು ಶ್ರೇಷ್ಠವಾದುದು. ಅದಕ್ಕಿಂತ ನರ್ಮದಾ ಲಿಂಗವೂ, ತದಪೇಕ್ಷೆಯಾ ರಸಲಿಂಗವೂ ಶ್ರೇಷ್ಠವೆನಿಸಿಕೊಂಡಿದೆ. ಹಿಂದೆ ಮನೋಹರವಾದ ನರ್ಮದಾ ತೀರದಲ್ಲಿ ಜಾಬಾಲೋಪನಿಷದರ್ಥವನ್ನು ಸಂಪೂರ್ಣವಾಗಿ ತಿಳಿದು ಶಿವಪೂಜಾಸಕ್ತನಾಗಿದ್ದ ಮೌದ್ಗಲ್ಯನೆಂಬ ಮಹರ್ಷಿಯೊಬ್ಬನಿದ್ದನು. ॥೫೮೭-೫೮೮॥

ಆತನು ಯಾವಾಗಲೂ, ಭಸ್ಮೋದ್ಧೂಲನ, ಭಸ್ಮತ್ರಿಪುಂಡ್ರಧಾರಣ, ರುದ್ರಾಕ್ಷಾಭರಣ ಇವುಗಳಿಂದ ಅಲಂಕೃತನಾಗಿದ್ದು, ಶ್ರೀ ರುದ್ರ, ಶಿವಪಂಚಾಕ್ಷರ ಇವುಗಳ ಜಪದಲ್ಲಿಯೇ ಆಸಕ್ತನಾಗಿ ಸದಾ ಶಿವಲಿಂಗಾರ್ಚನೆಯಿಂದಲೇ ಕಾಲಕಳೆಯುತ್ತಿದ್ದನು. ॥೫೮೯-೫೯೦॥

|| ಋಷಯ ಊಚುಃ ||

ತಂ ತಾದೃಶಂ ಶಿವರತಂ ದೃಷ್ಟ್ವಾ ರೇವಾನಿವಾಸಿನಃ ।
ಪ್ರಣಮ್ಯ ವಿನಯಾನಮ್ರಾಃ ಸಪ್ರಚ್ಛುರ್ಧರ್ಮಸಂಹಿತಂ ॥೫೯೧॥

ಮೌದ್ಗಲ್ಯಮುನಿಶಾರ್ದೂಲ ವೇದತತ್ತ್ವಜ್ಞಸತ್ತಮ ।
ಭುಕ್ತಿಮುಕ್ತಿಪ್ರದಾನ್ ಧರ್ಮಾನ್ ವದ ಕಾರುಣಿಕೋತ್ತಮ ॥೫೯೨॥

ಕ್ವ ವಾ ಮಹೇಶಸಾನ್ನಿಧ್ಯಂ ವಿಶೇಷೇಣಾಧಿತಿಷ್ಠತಿ ।
ಕ್ವ ವಾ ಮಹೇಶ್ವರೋ ನಿತ್ಯಂ ಪೂಜಿತೋ ಭುಕ್ತಿಮುಕ್ತಿದಃ ॥೫೯೩॥

ಕಿಂ ವಾ ಮಹೇಶಪೂಜಾಯಾಂ ಸಾಧನಂ ಶ್ರುತಿಸಂಮತಂ ।
ಏತತ್ಸರ್ವಂ ವಿಶೇಷೇಣ ವದ ಮೌನಿಶಿರೋಮಣೇ ॥೫೯೪॥

ಧನ್ಯಾ ಯೂಯಂ ಧರ್ಮನಿಷ್ಠಾ ಭೂತಿಭೂಷಿತವಿಗ್ರಹಾಃ ।
ರೇವಾಯಾಂ ಲಿಂಗರೂಪಿಣ್ಯಾಂ ಭವದ್ಭಿಃ ಸ್ಥೀಯತೇ ಯತಃ॥೫೯೫॥

ಶಿವಲಿಂಗಮಯೀ ರೇವಾ ಮಹೇಶಸ್ಯಾಪರಾ ತನುಃ ।
ಶಿವೋ ನಾರ್ಮದಲಿಂಗೇಷು ಸರ್ವದಾಪ್ಯಧಿತಿಷ್ಠತಿ ॥೫೯೬॥

---

ಹಾಗೆ ಶಿವಪೂಜಾಪರಾಯಣನಾಗಿದ್ದ ಮೌದ್ಗಲ್ಯನನ್ನು ನೋಡಿ ಆ ರೇವಾ ತೀರವಾಸಿಗಳೆಲ್ಲರೂ ವಿನಯಾವನತರಾಗಿ, ಧರ್ಮಸ್ವರೂಪವನ್ನು ತಮಗೆ ತಿಳಿಸಬೇಕೆಂದು ಹೀಗೆ ಪ್ರಶ್ನಿಸಿದರು. "ಮುನಿಶ್ರೇಷ್ಠನಾದ ಮೌದ್ಗಲ್ಯಮಹರ್ಷಿಯೇ, ವೇದತತ್ತ್ವವನ್ನರಿತವನೇ, ಭುಕ್ತಿಮುಕ್ತಿಪ್ರದಗಳಾದ ಧರ್ಮಗಳನ್ನು ನಮಗೆ ತಿಳಿಯಹೇಳು. ||೫೯೧-೫೯೨||

ಮಹರ್ಷಿಯೇ, ಮಹೇಶ್ವರನ ಸಾನ್ನಿಧ್ಯವು ವಿಶೇಷವಾಗಿ ಎಲ್ಲಿ ತೋರಿಬರುವುದು? ಎಲ್ಲಿ ಮಹಾದೇವನನ್ನು ಪೂಜಿಸಿದರೆ, ಭಕ್ತರಿಗೆ ಭುಕ್ತಿಯೂ ಮುಕ್ತಿಯೂ ಲಭಿಸುವುದು? ಈಶ್ವರಾರಾಧನೆಗೆ ಮುಖ್ಯ ಸಾಧನವಾದುದು ಯಾವುದು? ಪೂಜಾಕ್ರಮವು ಹೇಗೆ? ಇವೆಲ್ಲವನ್ನೂ ವಿಸ್ತಾರವಾಗಿ ತಿಳಿಸಬೇಕೆಂದು ಪ್ರಾರ್ಥಿಸಲು, ||೫೯೩-೫೯೪||

ಆಗ ಮೌದ್ಗಲ್ಯನು ಹೀಗೆಂದನು, "ಎಲೈ ಧರ್ಮಾತ್ಮರೇ, ನೀವೇ ಧನ್ಯರು. ವಿಭೂತಿಯಿಂದ ನಿಮ್ಮ ದೇಹವನ್ನೆಲ್ಲಾ ಅಲಂಕರಿಸಿಕೊಂಡಿರುವಿರಿ. ಮತ್ತು ಶಿವ

ಲಿಂಗರೂಪೀ ಮಹಾದೇವಃ ಶಿವಲಿಂಗೇ ಸಮರ್ಚಿತಃ ।
ದದಾತಿ ಮಹದೈಶ್ವರ್ಯಂ ಮೋಕ್ಷಂ ಚಾಂತೇ ದ್ವಿಜೋತ್ತಮಾಃ ॥೯೭॥

ನಾನಾವಿಧಾನಿ ಲಿಂಗಾನಿ ತಾನ್ಯುಚ್ಯಂತೇ ಮಯಾಧುನಾ ।
ಗೋಮೇಧಿಕಾಖ್ಯಮಸ್ತ್ಯೇಕಂ ಲಿಂಗಂ ಶಂಕರಸಂಮಿತಃ ॥೯೮॥

ಪುಷ್ಪರಾಗಾಖ್ಯಮಸ್ತ್ಯೇಕಂ ಲಿಂಗಂ ಶಂಕರಸಂಮತಂ ।
ಇಂದ್ರನೀಲಮಯಂ ಲಿಂಗಂ ಮೌಕ್ತಿಕಂ ಲಿಂಗಮೇವ ಚ ॥೯೯॥

ವೈದ್ರುಮಂ ಲಿಂಗಮಸ್ತ್ಯೇಕಂ ಪದ್ಮರಾಗಮಯಂ ತಥಾ ।
ವಜ್ರವೈಡೂರ್ಯಲಿಂಗಾನಿ ತಥಾ ಧಾತುಮಯಾನಿ ಚ ॥೧೦೦॥

ಕಾಶ್ಮೀರಲಿಂಗಮಸ್ತ್ಯೇಕಂ ಸ್ಫಾಟಿಕಂ ಲಿಂಗಮಸ್ತಿ ಚ ।
ಅನ್ನಲಿಂಗಂ ಧಾನ್ಯಲಿಂಗಂ ಲಿಂಗಂ ಗೋಮಯನಿರ್ಮಿತಂ ॥೧೦೧॥

ಲಾವಣಂ ಲಿಂಗಮಸ್ತ್ಯೇಕಂ ಫಲದಾರುಮಯಂ ತಥಾ ।
ಭಸ್ಮನಾ ರಚಿತಂ ಲಿಂಗಂ ಮೃನ್ಮಯಂ ಲಿಂಗಮಸ್ತಿ ಚ ॥೧೦೨॥

---

ಲಿಂಗರೂಪಿಣಿಯಾದ ರೇವಾತೀರದಲ್ಲಿ ನೀವು ಸದಾ ವಾಸಿಸುತ್ತಿರುವಿರಿ. ಈ ನರ್ಮದೆಯು ಶಿವಲಿಂಗಮಯಿಯಾಗಿ, ಈಶ್ವರನ ಅಪರದೇಹದಂತಿರುವುದು. ನರ್ಮದಾ ಲಿಂಗಗಳಲ್ಲಿ ಶಂಕರನನ್ನು ಸದಾ ತನ್ನ ಸಾನ್ನಿಧ್ಯವನ್ನಿಟ್ಟಿರುವನು ॥೯೫-೯೬॥

ಲಿಂಗರೂಪಿಯಾದ ಮಹಾದೇವನನ್ನು ಶಿವಲಿಂಗದಲ್ಲಿಯೇ ಪೂಜಿಸಿದರೆ, ಅದರಿಂದ ತೃಪ್ತನಾಗುವ ಪರಶಿವನು ಐಹಿಕಜೀವನದಲ್ಲಿ ಅತಿಶಯವಾದ ಐಶ್ವರ್ಯವನ್ನೂ ಕೊನೆಯಲ್ಲಿ ಮೋಕ್ಷವನ್ನೂ ಅನುಗ್ರಹಿಸುವನು. ಹಾಗೆಯೇ ಶಿವಲಿಂಗಗಳಲ್ಲಿ ಅನೇಕ ಭೇದಗಳಿವೆ. ಅವೆಲ್ಲವನ್ನೂ ಈಗ ನಿಮಗೆ ತಿಳಿಸುವೆನು. ಗೋಮೇಧಿಕ ರತ್ನಮಯವಾದ ದಿವ್ಯಲಿಂಗವೊಂದಿರುವುದು. ಅದು ಶಿವಪ್ರೀತಿಕರವಾದುದು. ॥೯೭-೯೮॥

ಪುಷ್ಪರಾಗಲಿಂಗ, ಇಂದ್ರನೀಲಲಿಂಗ, ಮೌಕ್ತಿಕಲಿಂಗ, ವಿದ್ರುಮ (ಹವಳ) ಲಿಂಗ, ಪದ್ಮರಾಗಲಿಂಗ, ವಜ್ರಲಿಂಗ, ವೈಡೂರ್ಯಲಿಂಗ, ಧಾತುಮಯವಾದ (ಲೋಹಜನ್ಯವಾದ) ಲಿಂಗಗಳು ಇವೆಲ್ಲವೂ ಶಿವಸಂಮತವಾದ ಶಿವಲಿಂಗಗಳು. ॥೯೯-೧೦೦॥

ಅಲ್ಲದೆ ಕಾಶ್ಮೀರಲಿಂಗ, ಸ್ಫಟಿಕಲಿಂಗ, ಅನ್ನಲಿಂಗ, ಧಾನ್ಯಲಿಂಗ, ಗೋಮಯಲಿಂಗ, ಲವಣಲಿಂಗ, ದಾರುಲಿಂಗ, ಭಸ್ಮಲಿಂಗ, ಮೃನ್ಮಯಲಿಂಗ ಇವೆಲ್ಲವೂ ಶಿವಪ್ರೀತಿಕರಗಳೇ. ॥೧೦೧-೧೦೨॥

ನರ್ಮದಾ ಜಲಸಂಭೂತಂ ಲಿಂಗಮೇಕಂ ಮುನೀಶ್ವರಾಃ ।
ಶಿಲಾಜನ್ಯಂ ರಸೋತ್ಪನ್ನಂ ಲಿಂಗಂ ಜಾಬಾಲಚೋದಿತಂ ॥೬೦೩॥

ಲಿಂಗೇಷ್ವೇತೇಷು ಸರ್ವೇಷು ಲಿಂಗತ್ರಯಮನುತ್ತಮಂ ।
ತತ್ರ ಸಂಪೂಜಿತಶ್ಶಂಭುಃ ಪ್ರಸೀದತಿ ನ ಸಂಶಯಃ ॥೬೦೪॥

ಮೃದ್ಬಾಣರಸಲಿಂಗಾನಿ ಶ್ರೇಷ್ಠಾನ್ಯೇತೇಷು ವಸ್ತುತಃ ।
ತ್ರಿಷ್ವಾದ್ಯಾದ್ಬಾಣಮುತ್ಕೃಷ್ಟಂ ರಸಲಿಂಗಂ ತತೋಧಿಕಂ ॥೬೦೫॥

ವಿದ್ಯುದ್ಗೋಮುಖಸತ್ಕಾರ್ಯಂ ಮೃನ್ಮಯಂ ಲಿಂಗಮುತ್ತಮಂ ।
ಏವ ಮನ್ಯಾನಿ ಲಿಂಗಾನಿ ಕರ್ತವ್ಯಾನಿ ಮುನೀಷಿಭಿಃ ॥೬೦೬॥

ವಕ್ಷ್ಯೇಹಂ ಬಾಣಲಿಂಗಸ್ಯ ಲಕ್ಷಣಂ ಶ್ರುತಿಚೋದಿತಂ ।
ಬಾಣಲಿಂಗಂ ಶ್ರುತಿಪ್ರೋಕ್ತಂ ತಲ್ಲಕ್ಷಣಮಪಿ ದ್ವಿಜಾಃ ॥೬೦೭॥

ತ್ರಿಪಂಚಸಪ್ತಧಾ ಯತ್ತು ತುಲಾತುಲಿತಮಾಸ್ತಿಕಾಃ ।
ನ ಯಾತಿ ಸಮತಾಂ ತತ್ತು ಬಾಣಲಿಂಗಮಿತಿ ಶ್ರುತಂ ॥೬೦೮॥

---

ನರ್ಮದಾ ನದಿಯಲ್ಲಿ ದೊರೆಯುವ ಲಿಂಗ, ಶಿಲಾನಿರ್ಮಿತವಾದ ಲಿಂಗ, ಪಾದರಸ (ದ್ರವದ್ರವ್ಯ) ಗಳಿಂದ ನಿರ್ಮಿತವಾದ ಲಿಂಗ (ಜಾಬಾಲೋಪನಿಷತ್ತಿನಲ್ಲಿ ವರ್ಣಿತವಾದುದು) ಇವೆಲ್ಲವೂ ಶಿವಪ್ರೀತಿಕರಗಳೇ. ಅವರೆ ಮೇಲೆ ಹೇಳಿದ ಲಿಂಗ ಭೇದಗಳಲ್ಲಿ ಈ ಮೂರು ಮಾತ್ರ ಅತ್ಯಂತ ಶ್ರೇಷ್ಠವಾದವುಗಳು. ಅವುಗಳ ಪೂಜೆ ಯಿಂದ ಪರಶಿವನು ಜಾಗ್ರತೆ ಪ್ರಸನ್ನನಾಗುವನು. ॥೬೦೩-೬೦೪॥

ಆ ಮೂರು ಲಿಂಗಗಳೇ ಮೃಲ್ಲಿಂಗ, ಬಾಣಲಿಂಗ, ರಸಲಿಂಗಗಳು. ಇವುಗಳ ಲ್ಲಿಯೂ ಮೃಲ್ಲಿಂಗಕ್ಕಿಂತ ಬಾಣಲಿಂಗವೂ, ಅದಕ್ಕಿಂತ ರಸಲಿಂಗವೂ ಶ್ರೇಷ್ಠಗಳೆನಿಸಿ ಕೊಂಡಿವೆ ಮೃನ್ಮಯವಾದ ಲಿಂಗವನ್ನು ತೆಳುವಾಗಿ (ವಿದ್ಯುತ್) ಗೋಮುಖದ ಆಕಾರದಲ್ಲಿ ರಚಿಸಬೇಕು. ಹಾಗೆಯೇ ಇತರ ಲಿಂಗಗಳನ್ನೂ ಲಕ್ಷಣಬದ್ಧವಾಗಿ ಮಾಡಿಕೊಳ್ಳಬೇಕು. ॥೬೦೫-೬೦೬॥

ಬಾಣಲಿಂಗಲಕ್ಷಣವೂ ಬಾಣಲಿಂಗ ಮಹಿಮೆಯೂ ಶ್ರುತಿಸಂಮತವಾದದ್ದು. ಅದಕ್ಕೆ ಮೂರು, ಐದು, ಅಥವಾ ಏಳು ಪಟ್ಟೆಗಳು ಸುತ್ತಲೂ ಇರುತ್ತವೆ. ಇತರ ಲಿಂಗಗಳಂತೆ ಬಾಣಲಿಂಗವು ಸಮಾಕಾರದಲ್ಲಿರುವುದಿಲ್ಲ. ॥೬೦೭-೬೦೮॥

ಸಪೀಠಮಪ್ಯಪೀಠಂ ವಾ ಬಾಣಲಿಂಗಂ ಶಿವಾತ್ಮಕಂ ।
ಪೂಜನೀಯಂ ಪ್ರಯತ್ನೇನ ಭುಕ್ತಿಮುಕ್ತಿಫಲೇಪ್ಸುಭಿಃ ॥೬೦೯॥

ನ ಪ್ರತಿಷ್ಠಾದ್ಯಪೇಕ್ಷಾಪಿ ಬಾಣಲಿಂಗಸ್ಯ ವಸ್ತುತಃ ।
ಯತಃ ಕುತಶ್ಚಿದಾನೀಯ ಬಾಣಲಿಂಗಂ ಪ್ರಪೂಜಯೇತ್ ॥೬೧೦॥

ನರ್ಮದೇ ನರ್ಮದಾಲಿಂಗೇ ನಿವಾಸಾಮ್ಯಹಮನ್ವಹಂ ।
ಸಂದೇಹಂ ಮಾಕುರುಷ್ವೇತಿ ಪ್ರಾಹ ಶಂಭುರ್ಯತಃ ಪುರಾ ॥೬೧೧॥

ಶಿವಲಿಂಗಸಹಸ್ರಾಣಾಂ ಪೂಜಯಾ ಯತ್ಫಲಂ ಭವೇತ್ ।
ತತಶ್ಶತಗುಣಂ ಪುಣ್ಯಂ ಲಿಂಗೇನ್ವಾದಿಸಮುದ್ಭವೇ ॥೬೧೨॥

ತೇಭ್ಯಶ್ಶತಗುಣಂ ಪುಣ್ಯಂ ರತ್ನಲಿಂಗಸ್ಯ ಪೂಜನೇ ।
ಗೋಮೇದಿಕಾದಿಲಿಂಗಾನಿ ರತ್ನಲಿಂಗಾನಿ ಸುವ್ರತಾಃ ॥೬೧೩॥

ರತ್ನಲಿಂಗಸಹಸ್ರಾಣಾಂ ಪೂಜಯಾ ಯತ್ಫಲಂ ಲಭೇತ್ ।
ತತಶ್ಶತಗುಣಂ ಪುಣ್ಯಂ ಧಾತುಲಿಂಗಸ್ಯ ಪೂಜನೇ ॥೬೧೪॥

---

ಬಾಣಲಿಂಗಕ್ಕೆ ಪೀಠವಿರಲೇಬೇಕೆಂಬ ನಿಯಮವಿಲ್ಲ ಪೀಠರಹಿತವಾದ ಲಿಂಗವನ್ನಾಗಲಿ ಪೂಜಿಸಬಹುದು. ಮಂತ್ರಪುರಸ್ಸರವಾಗಿ ಪ್ರತಿಷ್ಠೆಮಾಡಬೇಕೆಂಬ ನಿಯಮವೂ ಬಾಣಲಿಂಗಕ್ಕಿಲ್ಲ. ಎಲ್ಲಿಂದಾದರೂ ಅದನ್ನು ತಂದು ಪೂಜಿಸಬಹುದು. ॥೬೦೯-೬೧೦॥

ನರ್ಮದಾಲಿಂಗವಿಷಯದಲ್ಲಿ ಹಿಂದೆ ಮಹಾದೇವನೇ ನರ್ಮದಾನದಿಯನ್ನು ಕುರಿತು " ನಿನ್ನ ನರ್ಮದಾಲಿಂಗದಲ್ಲಿ ನಿಜವಾಗಿಯೂ ನಾನು ನೆಲಸಿರುವೆನು. ಸಂದೇಹಪಡಬೇಡ " ಎಂದು ಅಭಯಪ್ರದಾನಮಾಡಿ ವರವಿತ್ತಿರುವನು. ಅಂತೂ ಒಟ್ಟಿನಲ್ಲಿ ಇತರ ಸಹಸ್ರಾರು ಲಿಂಗಗಳ ಅರ್ಚನೆಯಿಂದ ಲಭಿಸುವ ಸುಕೃತಕ್ಕಿಂತಲೂ ಹಿಂದೆ ಹೇಳಿದ ಅನ್ನಲಿಂಗವೇ ಮೊದಲಾದ ಶಿವಲಿಂಗಗಳ ಅರ್ಚನೆಯಿಂದ ಶತಗುಣವಾಗಿ ಫಲವು ಲಭಿಸುವುದು. ॥೬೧೧-೬೧೨॥

ಮೇಲೆ ಹೇಳಿದ ಅನ್ನಲಿಂಗಕ್ಕಿಂತಲೂ ರತ್ನಲಿಂಗಾರ್ಚನೆಯು ವಿಶೇಷ ಪುಣ್ಯಪ್ರದವಾದುದು. ಗೋಮೇದಕಾದಿರತ್ನಗಳಿಂದ ನಿರ್ಮಿತವಾದುದೇ ರತ್ನ

ಧಾತುಲಿಂಗೇಷ್ವಪಿ ಶ್ರೇಷ್ಠಂ ಹೇಮಲಿಂಗಂ ಶ್ರುತಿಶ್ರುತಂ ।
ತತ್ರ ಸಂಪೂಜಿತಶ್ಶಂಭುಃ ಪ್ರಸೀದತಿ ನ ಸಂಶಯಃ ॥೬೧೫॥

ಧಾತುಲಿಂಗಸಹಸ್ರಾಣಾಂ ಪೂಜಯಾ ಯತ್ಫಲಂ ಲಭೇತ್ ।
ತತಶ್ಶತಗುಣಂ ಪುಣ್ಯಂ ಮೃತ್ತಿಕಾಲಿಂಗಪೂಜನೇ ॥೬೧೬॥

ಮೃಲ್ಲಿಂಗಾನಾಂ ಸಹಸ್ರಸ್ಯ ಪೂಜಯಾ ಯತ್ಫಲಂ ಲಭೇತ್ ।
ತತಶ್ಶತಗುಣಂ ಪುಣ್ಯಂ ಬಾಣಲಿಂಗಸ್ಯ ಪೂಜನೇ ॥೬೧೭॥

ಅನಂತ ಬಾಣಲಿಂಗಾನಾಂ ಪೂಜಯಾ ಯತ್ಫಲಂ ಭವೇತ್ ।
ತತೋಽನಂತಗುಣಂ ಪುಣ್ಯಂ ರಸಲಿಂಗಸ್ಯ ಪೂಜನೇ ॥೬೧೮॥

ರಸಲಿಂಗಸಮಂ ಲಿಂಗಂ ನಾಸ್ತಿ ನ ಶ್ರೂಯತೇಽಪಿ ಚ ।
ರಸಲಿಂಗಂ ಶಿವಸ್ಸಾಕ್ಷಾತ್ಸಚ್ಚಿದಾನಂದಲಕ್ಷಣಃ ॥೬೧೯॥

ರಸಲಿಂಗಸ್ಯ ಮಾಹಾತ್ಮ್ಯಂ ಜಾನಾತಿ ಭಗವಾಂಛಿವಃ ।
ತದನ್ಯೇನ ವಿಜಾನಂತಿ ಸತ್ಯಂ ಸತ್ಯಂ ನ ಸಂಶಯಃ ॥೬೨೦॥

---

ಲಿಂಗಗಳು ಇಂತಹ ಸಾವಿರ ರತ್ನಲಿಂಗಗಳ ಅರ್ಚನೆಯಿಂದ ಲಭಿಸುವ ಪುಣ್ಯವೆಲ್ಲಾ ಕೇವಲ ಒಂದು ಧಾತುಲಿಂಗಾರ್ಚನೆಯಿಂದಲೇ ಲಭಿಸುವುದು. ಲೋಹಗಳಿಂದ ನಿರ್ಮಿತವಾದ ಲಿಂಗವೇ ಧಾತುಲಿಂಗ. ॥೬೧೩-೬೧೪॥

ಧಾತುಲಿಂಗಗಳಲ್ಲಿಯೂ ಸುವರ್ಣಲಿಂಗವು ಶ್ರೇಷ್ಠವಾದುದು. ಅದರ ಅರ್ಚನೆಯಿಂದ ಶಂಕರನು ತೃಪ್ತಿಹೊಂದುವನು. ಅನೇಕ ಧಾತುಲಿಂಗಗಳ ಅರ್ಚನೆಯ ಸುಕೃತವೆಲ್ಲಾ ಕೇವಲ ಒಂದು ಮೃತ್ತಿಕಾಲಿಂಗಾರ್ಚನೆಯಿಂದಲೇ ಲಭಿಸುವುದು. ॥೬೧೫-೬೧೬॥

ಮೃಲ್ಲಿಂಗ ಸಹಸ್ರಗಳ ಅರ್ಚನಾಫಲವು ಒಂದು ಬಾಣಲಿಂಗಾರ್ಚನೆಯಿಂದಲೂ, ಇಂತಹ ಬಾಣಲಿಂಗಸಹಸ್ರಗಳ ಅರ್ಚನಾಫಲವು ಒಂದು ರಸಲಿಂಗಾರ್ಚನೆಯಿಂದಲೂ ಲಭಿಸುವುದು. ॥೬೧೭-೬೧೮॥

ರಸಲಿಂಗಕ್ಕೆ ಸದೃಶವಾದ ಶಿವಲಿಂಗವೇ ಲೋಕದಲ್ಲಿಲ್ಲ. ಸಚ್ಚಿದಾನಂದ ಲಕ್ಷಣನಾದ ಶಿವನೇ ಆ ರಸಲಿಂಗ, ಇಂತಹ ರಸಲಿಂಗದ ಮಹಿಮೆಯು ಸಾಕ್ಷಾತ್ಪರ ಶಿವನಿಗೊಬ್ಬನಲ್ಲದೆ ಮತ್ತಾರಿಗೂ ತಿಳಿಯದು. ॥೬೧೯-೬೨೦॥

ಬಹವೋ ಮುನಯಃ ಪೂರ್ವಂ ರಸಲಿಂಗಾರ್ಚನಾದ್ದ್ವಿಜಾಃ ।
ಮೋಕ್ಷಂ ಪ್ರಾಪುರನಾಯಾಸಾದ್ವಿನಾ ಯಾಗಾದಿಕರ್ಮಭಿಃ ॥೬೨೦॥

ಶಿವಾ ಸ್ವಯಮುಮಾಕಾಂತಂ ರಸಲಿಂಗಸ್ವರೂಪಿಣಂ ।
ಪೂಜಯಾಮಾಸ ತೇನೈವ ಪ್ರಸನ್ನೋಽಭೂನ್ಮಹೇಶ್ವರಃ ॥೬೨೧॥

ರಸಸ್ಸಾಕ್ಷಾನ್ಮಹಾದೇವೋ ರಸೋ ವೈ ಸ ಇತಿ ಶ್ರುತಿಃ ।
ಅತೋ ರಸಾತ್ಮಕಂ ಲಿಂಗಂ ಜಾಬಾಲೇ ಬಹುಧಾ ಶ್ರುತಂ ॥೬೨೨॥

ರಸಃ ಸೃಷ್ಟೋ ಮಹೇಶೇನ ಭಕ್ತಾನುಗ್ರಹಕಾಂಕ್ಷಯಾ ।
ತತ್ಕೃತಂ ಲಿಂಗಮುತ್ಕೃಷ್ಟಂ ಸರ್ವಾಭೀಷ್ಟಫಲಪ್ರದಂ ॥೬೨೩॥

ಯಂ ಯಂ ಕಾಮಯತೇ ಕಾಮಂ ರಸಲಿಂಗಸ್ಯ ಪೂಜಯಾ ।
ತಂ ತಮಾಪ್ನೋತಿ ವಿಪ್ರೇಂದ್ರಾಃ ಸತ್ಯಂ ಸತ್ಯಂ ನ ಸಂಶಯಃ ॥೬೨೪॥

ಸರ್ವಲಿಂಗೋತ್ತಮಂ ಲಿಂಗಂ ರಸಲಿಂಗಮನುತ್ತಮಂ ।
ತತಸ್ತತ್ಪೂಜಯಾ ಶಂಭುಸ್ಸಾಕ್ಷಾತ್ಸಂಪ್ರೀತೋ ಭವೇತ್ ॥೬೨೫॥

ಹಿಂದೆ ಅನೇಕ ಮಹರ್ಷಿಗಳು ರಸಲಿಂಗಾರ್ಚನೆ ಮಾಡಿ, ಇತರ ಯಾವ ವಿಧವಾದ ಯಾಗಾದಿ ಕರ್ಮಗಳನ್ನೂ ಆಚರಿಸದೆ ಮುಕ್ತಿಯನ್ನು ಪಡೆದಿರುವರು. ಪಾರ್ವತಿಯೇ ಮೊದಲು ರಸಲಿಂಗವನ್ನು ಪೂಜಿಸಿ, ಅದರಿಂದ ಪರಶಿವನನ್ನು ತೃಪ್ತಿಪಡಿಸಿರುವಳು. (೬೨೦-೬೨೧)

"ರಸೋವೈಸಃ" ಎಂಬ ಶ್ರುತಿಯಂತೆ ಶಂಕರನು ಕೇವಲ ರಸರೂಪಿಯೇ ಆಗಿರುವನು. ಆದ್ದರಿಂದಲೇ ಜಾಬಾಲಿರು ತಮ್ಮ ಉಪನಿಷತ್ತಿನಲ್ಲಿ ಈ ರಸಲಿಂಗವನ್ನು ಬಹುವಾಗಿ ಅರ್ಚಿಸಿರುವರು. ಭಕ್ತರನ್ನು ಉದ್ಧಾರಮಾಡುವ ದೃಷ್ಟಿಯಿಂದಲೇ ಶಂಕರನು ರಸವನ್ನು ಸೃಷ್ಟಿಮಾಡಿರುವನು. ಆದರಿಂದ ನಿರ್ಮಿತವಾದ ಶಿವಲಿಂಗವು ಸರ್ವಾಭೀಷ್ಟಫಲಪ್ರದವಾದುದೆಂದು ತಿಳಿಯಬೇಕು (೬೨೨-೬೨೪)

ರಸಲಿಂಗಾರಾಧನೆಯಿಂದ ಆರಾಧಕರ ಸಕಲೇಷ್ಟಾರ್ಥಗಳೂ ಸಿದ್ಧಿಸುತ್ತವೆ. ಇದು ನಿಜ. ಸರ್ವಲಿಂಗಗಳಲ್ಲಿ ರಸಲಿಂಗವೇ ಶ್ರೇಷ್ಠವಾದುದರಿಂದ ಶಂಕರನು ಅದರ ಪೂಜೆಯಿಂದ ತೃಪ್ತನಾಗುವನು. (೬೨೫-೬೨೬)

ರಸಲಿಂಗಾರ್ಚನಂ ಶ್ರೇಷ್ಠಂ ಸರ್ವಲಿಂಗಾರ್ಚನಾದಪಿ ।
ತತಸ್ತದೇವ ಯತ್ನೇನ ಪೂಜನೀಯಂ ಮನೀಷಿಭಿಃ ॥೬೨೭॥

ರಸಲಿಂಗಂ ಯದಿ ಭವೇತ್ಪೂಜನೀಯಂ ತದನ್ವಹಂ ।
ತದಭಾವೇ ಪೂಜನೀಯಂ ಬಾಣಲಿಂಗಂ ಪ್ರಯತ್ನತಃ ॥೬೨೮॥

ಬಾಣಲಿಂಗಂ ಯದಿ ಗೃಹೇ ನ ಭವಿಷ್ಯತಿ ಸರ್ವಥಾ ।
ಪೂಜನೀಯಂ ಪ್ರಯತ್ನೇನ ಮೃತ್ತಿಕಾಲಿಂಗಮಾಸ್ತಿಕೈಃ ॥೬೨೯॥

ತದಭಾವೇ ಪೂಜನೀಯಂ ಧಾತುಲಿಂಗಂ ಪ್ರಯತ್ನತಃ ।
ತದಭಾವೇ ರತ್ನಲಿಂಗಂ ಪೂಜನೀಯಂ ಪ್ರಯತ್ನತಃ ॥೬೩೦॥

ಕಾಶ್ಮೀರಲಿಂಗಮಭ್ಯರ್ಚ್ಯ ತದಭಾವೇ ಪ್ರಯತ್ನತಃ
ಸ್ಫಾಟಿಕಂ ಲಿಂಗಮಭ್ಯರ್ಚ್ಯಂ ತದಭಾವೇ ಪ್ರಯತ್ನತಃ ॥೬೩೧॥

ತದಭಾವೇ ಪೂಜನೀಯಂ ಶಿಲಾಲಿಂಗಂ ಪ್ರಯತ್ನತಃ
ತದಭಾವೇ ಪೂಜನೀಯಂ ದಾರುಲಿಂಗಂ ಪ್ರಯತ್ನತಃ ॥೬೩೨॥

ತದಭಾವೇ ಪೂಜನೀಯಮನ್ನಲಿಂಗಂ ಪ್ರಯತ್ನತಃ ।
ತದಭಾವೇ ತು ಭೂತ್ಯಾದಿ ಲಿಂಗಾನ್ಯರ್ಚ್ಯಾನಿ ಯತ್ನತಃ ॥೬೩೩॥

ಆದಕ್ಕಾಗಿಯೇ ಯಾವಾಗಲೂ ರಸಲಿಂಗವನ್ನೇ ಪೂಜಿಸಬೇಕು. ಒಂದು ವೇಳೆ ಪೂಜೆಗೆ ಆ ರಸಲಿಂಗವು ಲಭಿಸದಿದ್ದರೆ, ಬಾಣಲಿಂಗವನ್ನಾದರೂ ಪೂಜಿಸಬಹುದು. ॥೬೨೭-೬೨೮॥

ಬಾಣಲಿಂಗವು ದೊರೆಯದಿದ್ದರೆ, ಮೃತ್ತಿಕಾಲಿಂಗ; ಅದೂ ಸಿಗದಿದ್ದರೆ ಧಾತುಲಿಂಗ, ಅದೂ ಲಭಿಸದಿದ್ದರೆ ರತ್ನಲಿಂಗ, ಹೀಗೆಯೇ ಕಾಶ್ಮೀರಲಿಂಗ, ಸ್ಫಟಿಕಲಿಂಗ, ಶಿಲಾಲಿಂಗ, ಅನ್ನಲಿಂಗ, ವಿಭೂತಿಲಿಂಗ ಹೀಗೆ ಪೂರ್ವಪೂರ್ವ ಲಿಂಗಗಳಿಗೆ ಪ್ರಾಶಸ್ತ್ಯವನ್ನು ಒಪ್ಪಿಕೊಳ್ಳುತ್ತಾ ಶಿವಲಿಂಗಾರಾಧನೆ ಮಾಡಬೇಕು ॥೬೨೯-೬೩೦-೬೩೧-೬೩೨-೬೩೩॥

ಯಾದೃಶಂ ತಾದೃಶಂ ವಾಸ್ತು ಶಿವಲಿಂಗಂ ಶಿವಾತ್ಮಕಂ ।
ಪೂಜನೀಯಂ ಪ್ರಯತ್ನೇನ ದ್ವಿಜೈರ್ವೇದೋಕ್ತಮಾರ್ಗತಃ ॥೬೩೪॥

ಶೈವಃ ಪಂಚಾಕ್ಷರೋ ಮಂತ್ರೋ ಯಸ್ಸರ್ವಶ್ರುತಿಸಂಶ್ರುತಃ ।
ತೇನೈವ ಮಂತ್ರರಾಜೇನ ಪೂಜನೀಯೋ ಮಹೇಶ್ವರಃ ॥೬೩೫॥

ಶ್ರೀಮತ್ಪಂಚಾಕ್ಷರೇಣೈವ ಪೂಜಿತಶ್ಶ್ರೀಮಹೇಶ್ವರಃ ।
ದದಾತಿ ಪರಮಾಮೃದ್ಧಿಂ ಮೋಕ್ಷಂ ಚಾಂತೇ ನ ಸಂಶಯಃ ॥೬೩೬॥

ಶ್ರೀಮಹಾದೇವಮಾರಾಧ್ಯಂ ಲಿಂಗರೂಪಿಣಮವ್ಯಯಂ ।
ಪಂಚಾಕ್ಷರೇಣ ಸಂಪೂಜ್ಯ ಮುಕ್ತಾಃ ಪೂರ್ವಮನಂತಶಃ ॥೬೩೭॥

ಶ್ರೌತೇನ ಮನುನಾ ಕಾರ್ಯಂ ಶ್ರೌತಲಿಂಗಾರ್ಚನಂ ದ್ವಿಜಾಃ ।
ಶ್ರೌತೋ ಮನುರ್ಮಂತ್ರರಾಜಃ ಶೈವಃ ಪಂಚಾಕ್ಷರಃ ಸ್ಮೃತಃ ॥೬೩೮॥

ವೈದಿಕೈರ್ಯತ್ನತಃ ಕಾರ್ಯಂ ವೈದಿಕಂ ಲಿಂಗಪೂಜನಂ ।
ಅನ್ಯಥಾ ರೌರವಂ ಯಾಂತಿ ಯಾವದಾಚಂದ್ರತಾರಕಂ॥ ॥೬೩೯॥

ಲಿಂಗಪೂಜೈವ ಕರ್ತವ್ಯಾ ವೈದಿಕೈರ್ವೇದಮಂತ್ರತಃ ।
ಶಿವಲಿಂಗಾನ್ಯಪೂಜಾನಾಂ ವೈದಿಕಾ ನಾಧಿಕಾರಿಣಃ ॥೬೪೦॥

ಯಾವ ಲಿಂಗವನ್ನೇ ಆಗಲಿ ಅದು ಶಿವಾತ್ಮಕವಾದದ್ದೆಂದು ಭಾವಿಸಿ ಪೂಜಿಸಬೇಕು. ಆ ಪೂಜೆಯಾದರೋ ವೇದೋಕ್ತವಾಗಿರಬೇಕು. ಸರ್ವಶ್ರುತಿ ಸಮ್ಮತವಾದ ಶಿವಪಂಚಾಕ್ಷರೀಮಂತ್ರವನ್ನೇ ಎಲ್ಲರೂ ಉಚ್ಚರಿಸಿ, ಪರಶಿವನನ್ನು ಪೂಜಿಸಬೇಕು ಏಕೆಂದರೆ ಅದು ಮಂತ್ರರಾಜವೆನಿಸಿಕೊಂಡಿದೆ. ॥೬೩೪-೬೩೫॥

ಶ್ರೀಶಿವಪಂಚಾಕ್ಷರೀಮಂತ್ರಪುರಸ್ಸರವಾಗಿ ತನ್ನನ್ನು ಆರಾಧಿಸಿದವರಿಗೆಲ್ಲಾ ಲಿಂಗರೂಪಿಯೂ, ನಾಶರಹಿತನೂ ಆದ ಪರಶಿವನು ಶಾಶ್ವತವಾದ ಮುಕ್ತಿಯನ್ನು ಅನುಗ್ರಹಿಸಿರುವನು. ಅದರಂತೆ ಅನೇಕರು ಹೀಗೆ ಮಾಡಿ ಮುಕ್ತರಾಗಿ ಹೋಗಿರುವರು. ॥೬೩೬-೬೩೭॥

ಶ್ರುತ್ಯುಕ್ತ (ಆಗಮ) ಮಾರ್ಗದಿಂದ ಪ್ರತಿಷ್ಠಿತವಾದ ಶ್ರೌತಲಿಂಗವನ್ನು ಮಂತ್ರರಾಜನೆನಿಸಿದ ಪಂಚಾಕ್ಷರೀಮಂತ್ರಪುರಸ್ಸರವಾಗಿಯೇ ಪೂಜಿಸಬೇಕು.

ದ್ವಿಜಾಃ ಕಲೌ ಕರಿಷ್ಯಂತಿ ಶಿವಲಿಂಗಾನ್ಯಪೂಜನಂ ।
ತೇ ರೌರವಂ ಪ್ರಯಾಸ್ಯಂತಿ ಸತ್ಯಂ ಸತ್ಯಂ ನ ಸಂಶಯಃ ॥೬೪೧॥

ಯಾವನ್ನ ಕಲಿರಾಯಾತಿ ತಾವದ್ಯೂಯಂ ಪ್ರಯತ್ನತಃ ।
ಶಿವಲಿಂಗಾರ್ಚನಂ ಕೃತ್ವಾ ಲಭಧ್ವಂ ಮುಕ್ತಿಮಾಸ್ತಿಕಾಃ ॥೬೪೨॥

ಶ್ರೌತಂ ಶಿವಾರ್ಚನಂ ಯಸ್ಮಾತ್ಕರ್ತವ್ಯಂ ಮುಕ್ತಿಕಾಂಕ್ಷಿಭಿಃ ।
ಶ್ರೌತಲಿಂಗಾರ್ಚನತ್ಯಾಗೇ ಪತಂತಿ ನರಕೇ ಧ್ರುವಂ ॥೬೪೩॥

ಚರಲಿಂಗಾನಿ ಪೂಜ್ಯಾನಿ ಸ್ಥಾವರಾಣ್ಯಪಿ ಯತ್ನತಃ ।
ತ್ರಿಕಾಲಂ ಸ್ಥಾವರಂ ಲಿಂಗಂ ಪೂಜನೀಯಂ ಪ್ರಯತ್ನತಃ ॥೬೪೪॥

ಕೃತ್ವಾ ತು ಶಿವಲಿಂಗಾರ್ಚಾಂ ಚರಲಿಂಗಾರ್ಚನಂ ವಿನಾ ।
ಭೋಕ್ತವ್ಯಂ ಸ್ಥಾವರಾರ್ಚಾಂ ತು ವಿನಾ ಭುಂಜೀತ ನ ದ್ವಿಜಾಃ ೬೪೫॥

---

ವೇದೋಕ್ತಾಗಮದಿಂದ ವಿಧಿಸಲ್ಪಟ್ಟ ಶಿವಲಿಂಗವನ್ನು ವೇದಮಂತ್ರಗಳಿಂದಲೇ ಆರಾಧಿಸಬೇಕು. ವೇದಮಂತ್ರಗಳನ್ನರಿತವರಿಗೆ ಶಿವಲಿಂಗವನ್ನು ಬಿಟ್ಟು ಮತ್ತಾವ ದೇವರನ್ನು ಅರ್ಚಿಸುವುದರಲ್ಲಿಯೂ ಅಧಿಕಾರವಿಲ್ಲ. ॥೬೩೮-೬೩೯-೬೪೦॥

ಕಲಿಯುಗವು ಪ್ರಾಪ್ತವಾದೊಡನೆಯೇ ಅನೇಕ ದ್ವಿಜರು ಶಿವಲಿಂಗ ಪೂಜೆಯನ್ನು ಬಿಟ್ಟು ಬೇರೆ ದೇವತೆಗಳನ್ನರ್ಚಿಸಿ, ರೌರವನರಕವನ್ನು ಹೊಂದುವರು. ಎಲೈ ಆಸ್ತಿಕಶ್ರೇಷ್ಠರೇ, ನೀವು ಅಂತಹ ಕಲಿಯುಗ ಬರುವ ಪರ್ಯಂತವಾಗಿ ಯಾದರೂ ಶಿವಲಿಂಗಾರ್ಚನೆ ಮಾಡುತ್ತಿರಿ. ಅದರಿಂದ ನಿಮಗೆ ಸ್ಥಿರಮುಕ್ತಿ ಲಭಿಸುವುದು. ಇದರಲ್ಲಿ ಸ್ವಲ್ಪವೂ ಸಂಶಯವಿಲ್ಲ. ॥೬೪೧-೬೪೨॥

ಶ್ರುತ್ಯುಕ್ತವಾದ ಶಿವಲಿಂಗವನ್ನೇ ಮುಕ್ತಿಕಾಂಕ್ಷೆಯಿಂದಿರುವವರು ಪೂಜಿಸಬೇಕು. ಇಲ್ಲದಿದ್ದರೆ ಅವರು ನರಕಭಾಗಿಗಳಾಗುವರು. ಹಾಗೆಯೇ ಚರಲಿಂಗಗಳೆನಿಸಿದ ಶಾಂಭವರನ್ನೂ ಪೂಜಿಸುತ್ತಾ, ಪ್ರಾತಃಮಧ್ಯಾಹ್ನಸಾಯಂಕಾಲಗಳಲ್ಲಿ ತಪ್ಪದೆ ಸ್ಥಿರವಾಗಿ ಪ್ರತಿಷ್ಠಿತಗಳಾದ ಶಿವಲಿಂಗಗಳನ್ನೂ ಪೂಜಿಸಬೇಕು ॥೬೪೩-೬೪೪॥

ಸ್ಥಿರವಾದ ಶಿವಲಿಂಗಗಳನ್ನರ್ಚಿಸಿ. ಒಂದುವೇಳೆ ಚರಲಿಂಗಾ (ಶಾಂಭವರ) ರ್ಚನೆ ಮಾಡದಿದ್ದರೂ, ತಾನು ಭೋಜನಾದಿಗಳನ್ನು ನಡೆಸಬಹುದು. ಆದರೆ ಸ್ಥಿರಶಿವಲಿಂಗಗಳನ್ನರ್ಚಿಸದೆ ಭೋಜನಮಾಡುವವನು ಪಾಪಿಯೆನಿಸುವನು.

ಸ್ಥಾವರಂ ಲಿಂಗಮಭ್ಯರ್ಚ್ಯ ಸ್ಪೃಷ್ಟ್ವಾ ಚ ಪ್ರತ್ಯಹಂ ದ್ವಿಜೈಃ ।
ಭೋಕ್ತವ್ಯಮನ್ಯಥಾ ಯಾತಿ ನರಕಂ ಸೂತಕಂ ವಿನಾ ॥೬೪೬॥

ನ ಯತ್ರ ಸ್ಥಾವರಂ ಲಿಂಗಂ ತತ್ರ ಸ್ಥಾತವ್ಯಮೇವ ನ ।
ಯತಃಸ್ಥಾವರಲಿಂಗಸ್ಯ ಪೂಜಾ ನಿತ್ಯಂ ದ್ವಿಜನ್ಮನಾಂ ॥೬೪೭॥

ಸರ್ವಥಾ ಸ್ಥಾವರಂ ಲಿಂಗಂ ಯದಿ ನ ಸ್ಯಾತ್ತದಾ ದ್ವಿಜೈಃ ।
ಚರಲಿಂಗಮುಪಸ್ಪೃಶ್ಯ ಜಪ್ಯೋ ರುದ್ರೋಽಷ್ಟಧಾ ದ್ವಿಜೈಃ ॥೬೪೮॥

ಅಥವಾ ನಾರ್ಮದಂ ಲಿಂಗಂ ಮನುಲಿಪ್ತೇಽವನೀತಲೇ ।
ಸ್ಥಾಪಯಿತ್ವಾ ಪೂಜನೀಯಂ ಶೈವೇನ ಮನುನಾ ದ್ವಿಜೈಃ ॥೬೪೯॥

ಪೂಜಾಂತೇ ತತ್ಪುನರ್ಗ್ರಾಹ್ಯಂ ನಾರ್ಮದಂ ಲಿಂಗಮಾಸ್ತಿಕೈಃ ।
ನೀತ್ವಾನ್ಯತ್ರಾಪಿ ಸಂಸ್ಥಾಪ್ಯ ಪೂಜನೀಯಂ ಪುನಃ ಪುನಃ ॥೬೫೦॥

ಯದಿ ನಾರ್ಮದಲಿಂಗಸ್ಯಾಪ್ಯಭಾವಃ ಸ್ಯಾತ್ತದಾ ದ್ವಿಜೈಃ ।
ಸಂಪೂಜ್ಯಂ ಪಾರ್ಥಿವಂ ಲಿಂಗಂ ಸ್ಥಾಪಯಿತ್ವಾವನೀತಲೇ ॥೬೫೧॥

ದ್ವಿಜರಾದವರಂತೂ ಪ್ರತಿದಿನವೂ ಸ್ಥಾವರಲಿಂಗಾರಾಧನೆ ಮಾಡದೆ ನಿಜವಾಗಿಯೂ ಭೋಜನಮಾಡಬಾರದು. ಹಾಗೆ ಮಾಡಿದರೆ ಅವರಿಗೆ ಅದರಿಂದ ಪುನರ್ಜನ್ಮವಿಲ್ಲದ ನರಕಯಾತನೆಯೇ ಲಭಿಸುವುದು. ||೬೪೫-೬೪೬||

ದ್ವಿಜರಾದವರು ಸ್ಥಿರಲಿಂಗವಿಲ್ಲದಿರುವ ಸ್ಥಳದಲ್ಲಿ ವಾಸಮಾಡಲೇ ಕೂಡದು. ಏಕೆಂದರೆ ನಿತ್ಯವೂ ಅವರು ಅದನ್ನು ಪೂಜಿಸಲೇಬೇಕು. ಒಂದುವೇಳೆ ಸ್ಥಾವರ ಲಿಂಗವು ದೊರಕದಿದ್ದರೆ ಚರಲಿಂಗವನ್ನೇ ಸ್ಪರ್ಶಮಾಡಿಕೊಂಡು, ರುದ್ರಾಧ್ಯಾಯವನ್ನು ಎಂಟುಬಾರಿ ಉಚ್ಚರಿಸಬೇಕು. ||೬೪೭-೬೪೮||

ಅಥವಾ ನರ್ಮದಾಲಿಂಗವಿದ್ದರೆ ಅದನ್ನು ಸಾರಿಸಿ ಶುದ್ಧಿಗೊಳಿಸಿದ ಭೂಮಿಯಲ್ಲಿಟ್ಟು ಶಿವಮಂತ್ರಪೂರ್ವಕವಾಗಿ ಪೂಜಿಸಬೇಕು. ಪೂಜಾನಂತರದಲ್ಲಿ ಆ ಲಿಂಗವನ್ನು ತೆಗೆದುಕೊಂಡು ಎಲ್ಲಿಗೆಬೇಕಾದರೂ ಒಯ್ಯಬಹುದು ||೬೪೯-೬೫೦||

ಒಂದುವೇಳೆ ನರ್ಮದಾಲಿಂಗವು ದೊರೆಯದೇ ಹೋದರೆ, ಮೃತ್ತಿಕೆಯಿಂದ ಶಿವಲಿಂಗವನ್ನು ನಿರ್ಮಿಸಿ ಅದನ್ನು ಪೂಜಿಸಬೇಕು. ಮೃಲ್ಲಿಂಗವೆಂಬುದು ಸ್ಥಾವರವೆ

ಮೃಲ್ಲಿಂಗಾರ್ಚನಮಾತ್ರೇಣ ಸ್ಥಾವರಂ ಲಿಂಗಮರ್ಚಿತಂ ।
ಸ್ಥಾವರತ್ವಂ ಚ ಮೃಲ್ಲಿಂಗೇ ಸ್ಥಾವರತ್ವಸ್ಯ ಕಲ್ಪನಾತ್ ॥೬೫೨॥

ಸದ್ಯೋಜಾತಾದಿಭಿರ್ಮಂತ್ರೈಃ ಸ್ಥಾಪಯಿತ್ವಾ ಸ್ಥಿರೋ ಭವ ।
ಗೃಹಾಣ ಪೂಜಾಮಿತಿ ಚ ಸ್ಥಾವರತ್ವಂ ಪ್ರಕಲ್ಪಯೇತ್ ॥೬೫೩॥

ನಿತ್ಯಂ ಬಿಲ್ವದಲೈಃ ಕಾರ್ಯಂ ಭಸ್ಮನಾ ಚ ಶಿವಾರ್ಚನಂ ।
ಧೂಪದೀಪಾದಿಕಂ ಸರ್ವಂ ಕಲ್ಪನೀಯಂ ಸ್ವಶಕ್ತಿತಃ ॥೬೫೪॥

ಶಿವಲಿಂಗಾರ್ಚನಂ ಪುಣ್ಯಂ ಭುಕ್ತಿದಂ ಮುಕ್ತಿದಂ ತಥಾ ।
ಕಾಶೀಪ್ರಾಪ್ತಿಕರಂ ಚೈತತ್ಕಿಂ ನಿರ್ವಾಣಂ ನ ಯಚ್ಛತಿ ॥೬೫೫॥

ಶಿವಲಿಂಗಾರ್ಚನಾದ್ವಿಪ್ರಾಃ ಕಾಶೀತತ್ತ್ವಂ ಚ ಬುಧ್ಯತೇ ।
ಕಾದೃಶಂ ತದ್ಭುಕ್ತಿದಂ ಚ ಮುಕ್ತಿದಂ ಚ ಭವಿಷ್ಯತಿ ॥೬೫೬॥

ಪುರಾ ಪುಣ್ಯನಿಧಿರ್ನಾಮ ಬ್ರಾಹ್ಮಣೋ ವೇದವಿತ್ತಮಃ ।
ಶಿವಾರ್ಚಕಃ ಸ್ಥಿತಸ್ತಸ್ಯ ಮಾಹಾತ್ಮ್ಯಂ ವೇದ್ಮ್ಯಹಂ ದ್ವಿಜಾಃ ॥೬೫೭॥

---

ನಿಸಿಕೊಂಡಿರುವುದರಿಂದ, ಅದರ ಅರ್ಚನೆಯು ಸ್ಥಾವರಲಿಂಗಾರ್ಚನೆಯ ಫಲವನ್ನು ಕೊಡುವುದು. ॥೬೫೧-೬೫೨॥

ನಿತ್ಯವೂ ಶಿವಾರ್ಚನೆಯಕಾಲದಲ್ಲಿ ಸದ್ಯೋಜಾತಾದಿಮಂತ್ರಗಳಿಂದ ಆ ಶಿವಲಿಂಗದಲ್ಲಿ ಸ್ಥಾವರತ್ವವನ್ನು ಪ್ರತಿಬಿಂಬಿಸಿ, ಸಕಲ ಪೂಜಾದಿಗಳನ್ನೂ ಸ್ವೀಕರಿಸಬೇಕೆಂದು ಸ್ವಾಮಿಯನ್ನು ಪ್ರಾರ್ಥಿಸುತ್ತಾ ಧೂಪದೀಪಾದಿಗಳನ್ನು ಯಥಾಶಕ್ತಿ ನಿವೇದಿಸಬೇಕು. ॥೬೫೩-೬೫೪॥

ಶಿವಲಿಂಗಾರ್ಚನೆಯು ಭುಕ್ತಿ, ಮುಕ್ತಿ ಇವೆರಡನ್ನೂ ಕೊಡುವುದಲ್ಲದೆ, ಭಕ್ತನಿಗೆ ಕಾಶೀಕ್ಷೇತ್ರವಾಸವನ್ನು ಕರುಣಿಸಿ, ತನ್ಮೂಲಕ ಸ್ಥಿರಮುಕ್ತಿಯನ್ನು ಅನುಗ್ರಹಿಸುವುದು. ಶಿವಪೂಜಾಮಹಿಮೆಯಿಂದಲೇ ಕಾಶೀಕ್ಷೇತ್ರದ ಅರಿವು ಗೋಚರವಾಗುವುದು ಅದಕ್ಕೆ ಸಮನಾಗಿ ಭುಕ್ತಿಮುಕ್ತಿಪ್ರದವಾದ ಕಾರ್ಯವು ಲೋಕದಲ್ಲಿ ಮತ್ತಾವುದಿರುವುದು ? ॥೬೫೫-೬೫೬॥

ಹಿಂದೆ ಪುಣ್ಯನಿಧಿಯೆಂಬ ಹೆಸರಿನ ಬ್ರಾಹ್ಮಣಶ್ರೇಷ್ಠನೊಬ್ಬನು, ವೇದವೇದಾಂಗಪಾರಂಗತನಾಗಿ, ಶಿವಾರ್ಚನೆಯಲ್ಲಿ ನಿರತನಾಗಿದ್ದನು. ಆತನ ಮಹಿಮೆ

ಸ ಬಿಲ್ವದಳಪುಷ್ಪಾದ್ಯೈರ್ಭಸ್ಮನಾ ಚ ಮಹೇಶ್ವರಂ ।
ರಸಲಿಂಗಾತ್ಮಕಂ ನಿತ್ಯಂ ಪೂಜಯಾಮಾಸ ಸಾದರಂ ॥೬೫೮॥

ಸ ನಿತ್ಯಂ ಪೂಜಯಾಮಾಸ ಬಾಣಲಿಂಗಾನಿ ಸಾದರಂ ।
ಪಾರ್ಥಿವಾನ್ಯಪಿ ಲಿಂಗಾನಿ ಪೂಜಯಾಮಾಸ ಭಕ್ತಿತಃ ॥೬೫೯॥

ಶಿವವ್ರತಾನಿ ಸರ್ವಾಣಿ ಸ ಚಕಾರ ಯಥಾವಿಧಿ ।
ಶಿವಕ್ಷೇತ್ರಾಣಿ ಸರ್ವಾಣಿ ಸ ದದರ್ಶಾಸ್ತಿಕೋತ್ತಮಃ ॥೬೬೦॥

ಶಿವಾರ್ಚನೋತ್ಪನ್ನಪುಣ್ಯಾತ್ಸತು ಪುಣ್ಯನಿಧಿರ್ದ್ವಿಜಃ ।
ಶಿವಕ್ಷೇತ್ರಾಣಿ ಸರ್ವಾಣಿ ದೃಷ್ಟ್ವಾ ಕಾಶೀಮವಾಪ ಚ ॥೬೬೧॥

ಕಾಶ್ಯಾಂ ತತಃ ಸ್ಥಿತಿಂ ಚಕ್ರೇ ಶೈವಧರ್ಮಪರಾಯಣಃ ।
ವಿಶ್ವೇಶ್ವರಂ ವೇದವೇದ್ಯಂ ಪೂಜಯಾಮಾಸ ಸಂತತಂ ॥೬೬೨॥

ತತ್ರಾಂತರ್ಗೃಹಯಾತ್ರಾದಿ ಕರ್ಮಕೃತ್ವಾ ಯಥಾಕ್ರಮಂ ।
ವಾಯುಮಾತ್ರಾಶನೋ ಭೂತ್ವಾ ವಿಶ್ವೇಶಾರ್ಚಾಪರೋಽಭವತ್॥೬೬೩॥

ಯನ್ನು ವರ್ಣಿಸುವೆನು ಕೇಳಿರಿ. ಆತನು ಪ್ರತಿದಿನವೂ ತಪ್ಪದೆ ರಸಲಿಂಗವನ್ನು ಬಿಲ್ವದಳ, ಭಸ್ಮ, ಪುಷ್ಪ ಮುಂತಾದುವುಗಳಿಂದ ಅರ್ಚಿಸುತ್ತಾ ಕಾಲಕಳೆಯುತ್ತಿದ್ದನು. ॥೬೫೭-೬೫೮॥

ಅಷ್ಟೇ ಅಲ್ಲದೆ ಆತನು ನಿತ್ಯವೂ ಬಾಣಲಿಂಗ ಮತ್ತು ಪಾರ್ಥಿವಲಿಂಗಗಳನ್ನೂ ಪೂಜಿಸುತ್ತಾ, ಎಲ್ಲಾ ಶಿವವ್ರತಗಳನ್ನೂ ಆಚರಿಸುತ್ತಾ, ಶಿವಕ್ಷೇತ್ರಗಳಲ್ಲೆಲ್ಲಾ ಸುತ್ತುತ್ತಾ ಆಸ್ತಿಕವರೇಣ್ಯನೆನಿಸಿಕೊಂಡಿದ್ದನು. ॥೬೫೯-೬೬೦॥

ಶಿವಾರ್ಚನೆಯಿಂದ ಸಂಪಾದಿಸಿದ ಪುಣ್ಯರಾಶಿಯೇ ಅವನಿಗೆ ಸಕಲ ಶಿವಕ್ಷೇತ್ರಗಳನ್ನೆಲ್ಲಾ ದರ್ಶನಮಾಡಿಸಿ, ಕೊನೆಗೆ ಕಾಶಿಯನ್ನೂ ಹೊಂದಿಸಿತು. ಅದರಂತೆ ಆ ಪುಣ್ಯನಿಧಿಯು ಕಾಶಿಯಲ್ಲಿ ಶಿವಧರ್ಮಪರಾಯಣನಾಗಿ, ವೇದವೇದ್ಯನೂ, ಲೋಕೇಶ್ವರನೂ ಆದ ವಿಶ್ವೇಶ್ವರನನ್ನು ಸದಾ ಪೂಜಿಸುತ್ತಿದ್ದನು. ॥೬೬೧-೬೬೨॥

ಅಲ್ಲಿ ಒಳಕ್ಷೇತ್ರದಲ್ಲಿರುವ ಶಿವದೇವಾಲಯಗಳನ್ನು ದರ್ಶನಮಾಡುತ್ತಾ, ವಾಯ್ವಾಹಾರದಿಂದ ವಿಶ್ವೇಶ್ವರನನ್ನು ಆರಾಧಿಸುತ್ತಾ ಕಾಲಕಳೆಯುತ್ತಿದ್ದನು.

ಏವಂ ಸ್ಥಿತಂ ಪುಣ್ಯನಿಧಿಂ ಭೃಗುಃ ಸಂಪೂಜ್ಯ ಸಾದರಂ ।
ಕಾಶೀಪ್ರಭಾವಮಮಲಂ ವದಸ್ವೇತ್ಯಬ್ರವೀದ್ದ್ವಿಜಃ ॥೬೬೪॥

ಇತಿ ತದ್ವಚನಂ ಶ್ರುತ್ವಾ ಪುಣ್ಯಃ ಪುಣ್ಯನಿಧಿಸ್ಸ್ಥಿತಃ ।
ಕಾಶೀಪ್ರಭಾವಮಮಲಂ ಜ್ಞಾತ್ವಾ ವಕ್ತುಂ ಸಮಾರಭೇ ॥೬೬೫॥

ಕಾಶೀತ್ಯಸ್ಯ ಮಹಾಮತೋ ಶ್ರುತಿಶಿರೋರತ್ನಸ್ಯ ತತ್ತ್ವಂ ಮಯಾ ।
ನ ಜ್ಞಾತಂ ಮುನಿಭಿಃ ಸುರೈರಪಿ ಪರಿಜ್ಞಾತಂ ಮುಕುಂದಾದಿಭಿಃ
ನ ಜ್ಞಾತಂ ಶ್ರುತಿಭಿಶ್ಚ ನೈವ ವಿದಿತಂ ಸಿದ್ಧೈಶ್ಚ ವೇದೇಶ್ವರ ।
ಸ್ತತ್ತ್ವಂ ತಚ್ಛಿವತತ್ತ್ವವತ್ತದಿತರೈರ್ಜ್ಞೇಯಂ ಕಥಂ ತದ್ಭವೇತ್॥೬೬೬॥

ಯಾ ಕಾಶೀ ಹೃದಯಸ್ಯ ದೀಪಕಲಿಕೇವಾಭಾತಿ ತಸ್ಯೈವ ಸಾ
ವಿಜ್ಞೇಯಾ ಭವತಿ ಸ್ಫುಟಂ ತದಿತರೈರ್ನ ಜ್ಞಾಯತೇ ಸರ್ವಥಾ ।
ಸಾ ಭಾತ್ಯೇವ ತಥಾ ಮಹೇಶಹೃದಯೇ ವಿಜ್ಞಾಯತೇ ಸಾ ತತ
ಸ್ತೇನೇಶೇನ ಪರಾತ್ಪರೇಣ ವಿಭುನಾ ವಿಶ್ವಾಧಿಕೇನ ಧ್ರುವಂ ॥೬೬೭॥

ಹೀಗಿರುವಾಗ ಭೃಗುಮಹರ್ಷಿಯು ಆ ಪುಣ್ಯನಿಧಿಯ ಸಮೀಪಕ್ಕೆ ಬಂದು ಕಾಶೀ ಮಹಿಮೆಯನ್ನು ವಿವರಿಸಬೇಕೆಂದು ಪ್ರಾರ್ಥಿಸಿದನು. ॥೬೬೩-೬೬೪॥

ಪುಣ್ಯನಿಧಿಯು ಭೃಗುಮಹರ್ಷಿಯ ಮಾತನ್ನು ಕೇಳಿ, ಕಾಶೀಪ್ರಭಾವವನ್ನು ಹೇಳಲುಪಕ್ರಮಿಸಿದನು. "ಕಾಶೀಕ್ಷೇತ್ರವೆಂಬುದು ವೇದಗಳಿಗೆ ರತ್ನಪ್ರಾಯವಾಗಿದೆ. ಅದರ ಮಹಿಮೆಯನ್ನು ಸುರಾಸುರರೂ, ವಿಷ್ಣುವೇ ಮೊದಲಾದವರೂ, ಉಪನಿಷತ್ತುಗಳೂ ಸಿದ್ಧಸಾಧ್ಯರೂ ಸಹ ತಿಳಿಯಲಾರರು. ಕಾಶೀಮಹಿಮೆಯನ್ನು ತಿಳಿಯುವುದೆಂದರೆ ಶಿವತತ್ತ್ವವನ್ನು ತಿಳಿದಂತೆಯೇ ಸರಿ. ಆದ್ದರಿಂದ ಅದು ಸುಲಭವಾಗಿ ಯಾರಿಗೂ ತಿಳಿಯಲಾರದು. ॥೬೬೫-೬೬೬॥

ಯಾರ ಹೃದಯದಲ್ಲಿ ಕಾಶೀಕ್ಷೇತ್ರವು ಸದಾ ದೀಪದಕುಡಿಯಂತೆ ಪ್ರಕಾಶಿಸುತ್ತಿರುವುದೋ, ಅವರಿಗೇ ಆ ಶಿವತತ್ತ್ವವೂ ಕಾಶೀಮಹಿಮೆಯೂ ಸುಲಭವಾಗಿ ಗೋಚರಿಸುವುದು. ಹಾಗೆಯೇ ಆ ಕಾಶೀಕ್ಷೇತ್ರವು ಮಹೇಶ್ವರನ ಹೃದಯದಲ್ಲಿ ಸದಾ ಸ್ಫುರಿಸುತ್ತಿರುವುದು. ಆದರಿಂದಲೇ ಅದರ ನಿಜಶಕ್ತಿಯು ವಿಶ್ವಾಧಿಕನಾದ ಶಂಕರನಿಗೊಬ್ಬನಿಗೆ ಮಾತ್ರ ಗೋಚರವಾಗುವುದು. ॥೬೬೭॥

ಯಸ್ಯಾಮಂತಕಭೀತಿಲೇಶರಹಿತಾಃ ಕಾರ್ತಾಂತವಾರ್ತಾಂ ವಿನಾ
ನಿಶ್ಶಂಕಂ ನಿವಸಂತಿ ಸಂತತಮುಮಾಕಾಂತಾರ್ಚಕಾಃ ಶಾಂಕರಾಃ ।
ಸೇಯಂ ಪಾಶುಪತಸ್ಥಲೀ ಮುನಿವರ್ಯೈರಾರಾಧಿತಾ ಸಂಸ್ತುತಾ
ವೇದಾಂತೈಃ ಶಿವರೂಪಿಣೀತಿ ಸತತಂ ಕಾಶೀತಿ ಕಾಶೀತಿ ಚ ॥೬೬೮॥

ಯಸ್ಯಾಂ ದೇಹವಿಸರ್ಜನೇ ಸತಿ ಮಹಾದೇವಃ ಪರಂ ತಾರಕಂ
ವ್ಯಾಚಷ್ಟೇ ಶಿವತತ್ಪರಾಯ ವಿಲುಠತ್ಸಂಸಾರವಿಚ್ಛಿತ್ತಯೇ ।
ತದ್ರೂಪಂ ಭಗವಾನನೇತಿ ಭಗವಾನ್ ರುದ್ರಸ್ತದನ್ಯೋ ನವಾ
ಯೋ ವೈ ರುದ್ರ ಇತಿ ಶ್ರುತಿಸ್ತದಿತರಂ ನೈವಾಭಿವಕ್ತಿ ಧ್ರುವಂ ॥೬೬೯॥

ವಿಶ್ವೇಶಾಭಿಧಲಿಂಗರೂಪಮಮಲಂ ಧೃತ್ವಾಽವಿಮುಕ್ತೇ ಸದಾ
ಶೈವಾನ್ ತಾರಯಿತುಂ ಮಹಾಘನಿಚಯಾನ್ ಸಂಸಾರತೋಽಪೀಶ್ವರಃ ।
ಮಾಯಾಜಾಲವಿಶೋಧನಾಯ ಸತತಂ ಸಾಂಬೋಽಂಬಯಾ ಸಂಸ್ಥಿತಃ
ಕಾಶೀತತ್ತ್ವವಿದುತ್ತಮಃ ಶಿವತಮಃ ಸರ್ವೋತ್ತಮಶ್ಶಂಕರಃ ॥೬೭೦॥

ಆ ಕಾಶೀಕ್ಷೇತ್ರದಲ್ಲಿ ವಾಸಮಾಡುವವರಿಗೆ ಯಮನಿಂದಾಗಲಿ, ಅವನ ಸೇವಕರಿಂದಾಗಲಿ ಭಯವಿರುವುದಿಲ್ಲ. ಯಮನ ವೃತ್ತಾಂತವನ್ನೇ ಅರಿಯದೆ ಅವರೆಲ್ಲರೂ ಶಿವಾರಾಧನೆಯಲ್ಲಿಯೇ ಕಾಲಕಳೆಯುವರು. ಆದ್ದರಿಂದಲೇ ಈ ಕಾಶಿಯು ಪಶುಪತಿಕ್ಷೇತ್ರವೆನಿಸಿಕೊಂಡು, ಋಷಿಶ್ರೇಷ್ಠರಿಂದಲೂ, ವೇದಾಂತಗಳಿಂದಲೂ, ಹೊಗಳಿಸಿಕೊಳ್ಳುತ್ತಾ, ಶಿವರೂಪಿಣಿಯಾಗಿ, ಕಾಶೀ ಎಂಬ ಹೆಸರಿನಿಂದ ಪ್ರಸಿದ್ಧಿಗೊಂಡಿರುವುದು. ॥೬೬೮॥

ಕಾಶಿಯಲ್ಲಿ ದೇಹತ್ಯಾಗಮಾಡುವ ಶಿವತತ್ಪರನಿಗೆ ಅವನ ಸಂಸಾರದುಃಖಗಳು ನಾಶವಾಗಲೋಸುಗ ಪರಶಿವನು ತಾರಕಮಂತ್ರವನ್ನು ಉಪದೇಶಿಸುವನು. ಹಾಗೆ ಉಪದಿಷ್ಟನಾದವನು ಸಾಕ್ಷಾದ್ರುದ್ರಸ್ವರೂಪಿಯೇ ಆಗಿ, "ಯೋವೈರುದ್ರಃ" ಎಂಬ ಶ್ರುತ್ಯರ್ಥಕ್ಕೆ ವಿಷಯನಾಗುವನು. ಆ ಶ್ರುತಿಯು ಮಾತ್ರ ಇವನ ಸ್ವರೂಪವನ್ನೂ, ಕಾಶೀಮಹಿಮೆಯನ್ನೂ ಸ್ಪಷ್ಟವಾಗಿ ವಿವರಿಸಬಲ್ಲುದು. ॥೬೬೯॥

ಪಾರ್ವತೀಸಹಿತನಾದ ಶಂಕರನು ಅವಿಮುಕ್ತಕ್ಷೇತ್ರವೆನಿಸಿದ ಕಾಶಿಯಲ್ಲಿ ಸಂಸಾರದುಃಖದಲ್ಲಿ ಮುಳುಗಿರುವ ತನ್ನ ಭಕ್ತರ ಪಾಪರಾಶಿಯನ್ನೆಲ್ಲಾ ನಿವಾರಿಸಿ, ಅವರಿಗೆ ಅಜ್ಞಾನ ನಿವಾರಣೆಮಾಡಿ ಮುಕ್ತಿಯನ್ನು ಒದಗಿಸಲೋಸುಗ, ಶ್ರೀವಿಶ್ವೇಶ್ವರ

ಕಾಶೀನಾಮ ಸುಧಾನಿಧಿಃ ಸುರಗಣೈಃ ಸಂಸೇವಿತಃ ಸಾದರಂ
ಜಾಬಾಲಾದಿಸಮಸ್ತವೇದನಿಕರೈಸ್ಸಮ್ಯಕ್ಸ್ತುತಃ ಸಂತತಂ ।
ನಾನಾತೀರ್ಥಸಮನ್ವಿತಃ ಶ್ರುತಿಮತೈರ್ಲಿಂಗೈರನೇಕೈರ್ವೃತೋ
ದೃಷ್ಟೋ ಹಂತಿ ಸಮಸ್ತಪಾತಕಗಣಾನ್ ಧ್ಯಾತಸ್ತು ನಿರ್ವಾಣದಃ ॥೬೭೦॥

ಕಾಶೀತ್ಯೇವ ಮಹಾಮನುಃ ಶ್ರುತಿಪಥಂ ಪ್ರಾಪ್ತೋಽಖಿಲಾಪದ್ಗಣಾನ್
ದೂರೀಕೃತ್ಯ ನರಂ ಕರೋತಿ ವಿಮಲಂ ಮುಕ್ತಿಂ ದದಾತಿ ಸ್ವತಃ ।
ವೇದಾಂತೈರಖಿಲೈಃ ಸ್ತುತಃ ಸತು ಮನುಃ ಶೈವಂ ತತಸ್ತಂ ಮನುಂ
ವೇದೋ ವೇದ ಶಿವೋಽಥವಾ ತದಿತರೋ ನೋ ವೇದ ಸತ್ಯಂ ಧ್ರುವಂ॥೬೭೨॥

ಕಾಶೀ ವೀಥಿಷು ಸಂಚರನ್ ಪ್ರತಿಪದಂ ಯಾಗಾಯುತಾನಾಂ ಫಲಂ
ಸಂಪ್ರಾಪ್ನೋತಿ ನರಾಧಮೋಽಪಿ ಕಿಮುತ ಸ್ವಸ್ಥಃ ಶಿವಾರಾಧಕಃ ।

ಲಿಂಗರೂಪವನ್ನು ತಾಳಿ ನೆಲಸಿರುವನು. ಅಂತಹ ಪರಶಿವನಿಗೆ ಮಾತ್ರ ಆ ಕಾಶೀ ಮಹಿಮೆಯು ಸಂಪೂರ್ಣವಾಗಿ ತಿಳಿದುಬರುವುದು. ಇತರರಿಗೆ ತಿಳಿಯಲು ಸಾಧ್ಯವೇ! ॥೬೭೦॥

ಕಾಶಿಯೆಂಬುದು ದೇವತೆಗಳ ಸಮೂಹದಿಂದ ಸೇವಿತವಾಗಿರುವ ಒಂದು ಅಮೃತರಾಶಿಯೆಂದು ತಿಳಿಯಬೇಕು. ಜಾಬಾಲೋಪನಿಷತ್ತೇ ಮೊದಲಾದ ಶ್ರುತಿಗಳು ಸಂತತವಾಗಿ ಕಾಶಿಯನ್ನು ಸ್ತುತಿಸುತ್ತಿರುವುವು. ವೇದದಲ್ಲಿ ನಾನಾ ಹೆಸರಿನಿಂದ ಉಕ್ತವಾಗಿರುವ ಅನೇಕ ತೀರ್ಥಗಳು ಈ ಕ್ಷೇತ್ರದಲ್ಲಿರುವುವು. ಕೇವಲ ದರ್ಶನದಿಂದಲೇ ಇದು ಸಕಲ ಪಾಪವನ್ನೂ ನಿರ್ಮೂಲಮಾಡಿ ಭಕ್ತರಿಗೆ ಸ್ಥಿರಮುಕ್ತಿಯನ್ನು ಕೊಡುವುದು. ॥೬೭೧॥

ಕಾಶೀ ಎಂಬ ಹೆಸರೇ ಒಂದು ದಿವ್ಯಮಂತ್ರ. ಅದರ ಶ್ರವಣದಿಂದಲೇ ಮಾನವನ ಪಾಪರಾಶಿಯೆಲ್ಲಾ ನಿರ್ಮೂಲವಾಗಿ, ನಿಶ್ಚಲವಾದ ಮುಕ್ತಿಯು ಲಭಿಸುವುದು. ಈ ಮಂತ್ರವು ಸಮಸ್ತ ಉಪನಿಷತ್ತುಗಳಿಂದಲೂ ಸ್ತುತವಾಗಿದೆ. ಇಂತಹ ಶೈವಮಂತ್ರಮಹಿಮೆಯನ್ನು ಸಾಕ್ಷಾತ್ಪರಶಿವನೂ ಮತ್ತು ವೇದಗಳೂ ತಿಳಿಯಬಲ್ಲವು. ಮತ್ತಾರಿಗೂ ಈ ಮಂತ್ರದ ಸ್ವರೂಪವು ಗೋಚರವಾಗದು. ॥೬೭೨॥

ಕಾಶೀನಗರದ ಬೀದಿಗಳಲ್ಲಿ ಸಂಚರಿಸುವ ಪಾಪಿಷ್ಠರಿಗೂ ಸಹಸ್ರಾರು ಯಾಗಗಳ ಆಚರಣೆಯಿಂದ ಬರುವ ಫಲವು ಲಭಿಸುವುದು. ಹೀಗಿರುವಾಗ

ತಸ್ಮಾದಾದರತೋಽನಿಶಂ ಶಿವಪುರೀ ಸೇವ್ಯಾ ಮೃಡಾನೀಪತಿಃ
ಸೇವ್ಯಸ್ಸಂತತಮಂತಕಾಂತಕ ಮಹಾದೇವೇತಿ ಸಂವಾದಿಭಿಃ ॥೬೭೩॥

ಸಂಸಾರಾದ್ಭುತಸಾಗರೇಷು ಪತಿತಾಃ ಕ್ಲಿಶ್ಯಂತಿ ಯೇ ಸಂತತಂ
ತೇ ಕಾಶೀಂತರಿಮಾಶು ಶಂಭು ಕೃಪಯಾ ಸಂಪ್ರಾಪ್ಯ ತೀರ್ತ್ವ್ಯ...ನ ತಾನ್ ।
ಯಾತಾಯಾತಪರಿಶ್ರಮೈರ್ಬಹುತರೈರ್ದುಸ್ತಾರಸಂಸಾರಜೈ
ರ್ನಿರ್ಮುಕ್ತಾಃ ಶಿವಮೇವ ಸಾಂಬಮನಘಾಃ ಸಂಪ್ರಾಪ್ನುವಂತಿ ಧ್ರುವಂ
॥೬೭೪॥

ಬದ್ಧಸ್ತಾವದನೇಕದುಷ್ಕೃತಚಯೈಸ್ಸಂಸಾರಪಾಶೈರ್ನರೋ
ನಾನಾದುಃಖಯುತೈರನುಕ್ಷಣಮಭೇದ್ಯಾಪತ್ಸಮೂಹೈರಪಿ ।
ಯಾವನ್ನಾಪ ಮಹೇಶಸಾಂದ್ರಕೃಪಯಾ ಕಾಶೀಂ ಮಹೇಶಾಶ್ರಯಾಂ
ಕಾಶೀಂ ಪ್ರಾಪ್ಯ ಪ್ರಮುಚ್ಯತೇ ದೃಢತರೈಃ ಸಂಸಾರಪಾಶೈರ್ನರಃ ।೬೭೫

---

ಅಲ್ಲಿಯೇ ನೆಲಸಿ ಸನ್ಮಾರ್ಗದಿಂದಿದ್ದು ಶಿವಾರಾಧನೆ ಮಾಡಿಕೊಂಡಿರುವವನಿಗೆ ಹೇಳತಕ್ಕದ್ದೇನು? ಆದ್ದರಿಂದ ಸರ್ವದಾ ಶಿವಧ್ಯಾನಾಸಕ್ತರಾಗಿರುವವರು ಶಿವಪುರಿಯೆನಿಸಿದ ಕಾಶಿಯನ್ನು ಹೊಂದಿ ಅಲ್ಲಿ ಭವಾನೀಪತಿಯಾದ ಮಹಾದೇವನನ್ನು ಸೇವಿಸುತ್ತಿರಬೇಕು. ಇದರಿಂದ ಐಹಿಕ ಮತ್ತು ಆಮುಷ್ಮಿಕಗಳೆರಡೂ ಸಿದ್ಧಿಸುವುವೆಂಬುದರಲ್ಲಿ ಅನುಮಾನವಿಲ್ಲ. ॥೬೭೩॥

ಸಂಸಾರವೆಂಬ ಅಗಾಧಸಾಗರದಲ್ಲಿ ಮುಳುಗಿ ದುಃಖಿಸುತ್ತಿರುವ ಮಾನವರು ಕಾಶಿಯನ್ನು ಸೇರಿ ಅಲ್ಲಿ ಈಶ್ವರಕೃಪೆಯನ್ನು ಸಂಪಾದಿಸಿದರೆ ಅವರು ಆ ದುಃಖರಾಶಿಯಿಂದ ದಾಟಿದವರಾಗಿ, ಆಗಾಗ ಒದಗುವ ದುಃಖಪರಂಪರೆಗಳಿಂದ ನಿರ್ಮುಕ್ತರಾಗುವರು. ಅಲ್ಲದೆ ಸಾಕ್ಷಾತ್ಪರಶಿವನ ಸಾನ್ನಿಧ್ಯವನ್ನೇ ಪಡೆದು ಸುಖಿಸುವರು ಎಂಬುದರಲ್ಲಿ ಯಾವ ಸಂಶಯವೂ ಇಲ್ಲ ॥೬೭೪॥

ಮಾನವನು ಅನೇಕ ಪಾಪಕಾರ್ಯಾಚರಣೆಮಾಡಿದ್ದರೂ, ಅತಿಯಾದ ಸಂಸಾರ ದುಃಖಕ್ಕೆ ಸಿಕ್ಕಿದ್ದರೂ, ದುರ್ಭೇದ್ಯವಾದ ಆಪತ್ಸಮೂಹದಲ್ಲಿ ಮುಳುಗಿದ್ದರೂ, ಕಾಶಿಯನ್ನು ಪ್ರವೇಶಿಸಿ, ಅಲ್ಲಿ ಮಹೇಶ್ವರನ ದರ್ಶನಮಾಡಿ ಅವನ ಅನುಗ್ರಹವನ್ನು ಸಂಪಾದಿಸಿದುದೇ ಆದರೆ ಸಕಲ ಕಷ್ಟನಷ್ಟಗಳಿಂದಲೂ ಮುಕ್ತನಾಗಿ ಸ್ಥಿರಶಾಂತಿಯನ್ನು ಪಡೆಯುವನು. ॥೬೭೫॥

ಮತ್ಯಾಸ್ತಾವದಿಹ ಭ್ರಮಂತಿ ಸತತಂ ಸಂಸಾರಘೋರೇ ಹ್ರದೇ
ಪಾಪಾವರ್ತಸಮನ್ವಿತೇ ದುರಿತಭೀರಿಂಗತ್ತರಂಗಾವೃತೇ ।
ಯಾವದ್ವಿಶ್ವಪತಿಃ ಪ್ರಿಯಸ್ಸರನತಾ ಕಾಶೀ ನ ಸಂಪ್ರಾಪ್ಯತೇ
ಕಾಶೀಂ ಪ್ರಾಪ್ಯತು ನ ಭ್ರಮಂತಿ ಮನುಜಾಃ ಸಂಸಾರಘೋರೇ ಹ್ರದೇ ॥೬೭॥

ಕಾಶೀಂ ಪ್ರಾಪ್ಯ ಕುಯೋನಿಚಕ್ರಕುಹರಂ ನ ಪ್ರಾಪ್ನುವಂತಿ ಧ್ರುವಂ
ಸತ್ಯಂ ಸತ್ಯಮಿಹೋಚ್ಯತೇ ಭುಜಯುಗಂ ಸಮ್ಯಕ್ಸಮುದ್ಧೃತ್ಯ ಚ ।
ವೇದಾಸ್ತತ್ರ ತು ಸಾಕ್ಷಿಣಃ ಶ್ರುತಿಶಿರೋವೇದ್ಯೋಽಥ ಸಾಕ್ಷೀ ಶಿವಃ
ವಿಷ್ಣುಬ್ರಹ್ಮಪುರೋಗಮಾಃ ಸುರಗಣಾ ಯೇ ಚಾತ್ರ ತೇ ಸಾಕ್ಷಿಣಃ ॥೬೭॥

ಕಾಶೀಮಾಶು ಸಮಾಶ್ರಿತಃ ಶಿವಮನಾದ್ಯಂತಂ ಭವೇದ್ಯಃ ಸದಾ
ಸಾನಂದಂ ಚ ಸಮಸ್ತದುಃಖನಿಕರಂ ಸಂಹೃತ್ಯ ಶುದ್ಧಶ್ಶಿವಂ ।
ಸಂಪ್ರಾಪ್ನೋತಿ ನ ಸಂಶಯಃ ಶ್ರುತಿರಿಯಂ ಕಾಶೀಂ ಸಮಾಶ್ರೀಯತಾಂ
ವಿಶ್ವೇಶಃ ಸಮುಪಾಸ್ಯತಾಮಿತಿ ಯತೋ ಡಿಂಡಿಮರವೋ ವೈದಿಕಃ ॥೬೮॥

ಅಗಾಧವಾದ ಮಡುವಿನಂತಿರುವ ಸಂಸಾರದಲ್ಲಿ ಓಡಾಡಿ, ಪಾಪರಾಶಿಯೆಂಬ ಸುಳಿಗೂ, ಪಾಪಭಯವೆಂಬ ಅಲೆಗಳ ಹೊಡೆತಕ್ಕೂ ಸಿಕ್ಕಿದವರು ದೇವಪೂಜ್ಯವಾದ ಕಾಶಿಯನ್ನು ಸೇರಿ ವಿಶ್ವೇಶ್ವರನನ್ನು ದರ್ಶನಮಾಡುವವರೆಗೆ ವ್ಯಥೆಪಡುತ್ತಿರುವರು. ಅನಂತರ ಅವರಿಗೆ ಎಂದಿಗೂ ಅಂತಹ ದುಃಖವು ಒದಗಲಾರದು. ॥೬೬॥

ಕಾಶೀಕ್ಷೇತ್ರದಲ್ಲಿ ನೆಲಸಿ ಪರಶಿವಾನುಗ್ರಹವನ್ನು ಸಂಪಾದಿಸಿದವರಿಗೆ ಎಂದಿಗೂ ಪಾಪಿಜನ್ಮವು ಬರುವುದಿಲ್ಲ. ಇದು ಅಕ್ಷರಶಃ ನಿಜ. ಭುಜಗಳನ್ನೆತ್ತಿ ಶಪಥ ಮಾಡುತ್ತೇನೆ. ಈ ಮಾತಿಗೆ ಸಕಲ ವೇದಗಳೂ, ವೇದವೇದ್ಯನಾದ ಶಂಕರನೂ, ಬ್ರಹ್ಮಾದಿಸಕಲದೇವತೆಗಳೂ ಸಾಕ್ಷಿಗಳಾಗಿರಲಿ. ॥೬೭॥

ಕಾಶಿಯನ್ನು ಹೊಂದಿ ಆದ್ಯಂತರಹಿತನಾದ ಸದಾ ಶಿವನನ್ನು ಪೂಜಿಸಿದವನು ನಿಜವಾಗಿಯೂ ಆನಂದವನ್ನು ಪಡೆಯುವನಲ್ಲದೆ ಸಮಸ್ತ ದುಃಖರಾಶಿಯಿಂದಲೂ ಬಿಡುಗಡೆ ಹೊಂದುವನು. ಈ ವಿಷಯವನ್ನೇ ವೇದವೆಂಬ ಕಹಳೆಯು ಕಾಶಿಯನ್ನು ಸರ್ವರೂ ಸೇರಬೇಕೆಂದೂ, ವಿಶ್ವೇಶ್ವರನನ್ನು ಸೇವಿಸಬೇಕೆಂದೂ ಘೋಷಿಸುತ್ತಿರುವುದು ॥೬೮॥

ಘೋರಾಪದ್ಯಪಿ ಶಾಂಭವೈಶ್ಶ್ರುತಿಮತಾ ಕಾಶೀ ಸುರಾರಾಧಿತಾ
ನ ತ್ಯಾಜ್ಯಾ ತ್ರಿಪುರಾರಿರಾಜನಗರೀ ಕಾಶೀ ಯತೋ ಮುಕ್ತಿದಾ ।
ತ್ಯಕ್ತ್ವಾ ಸಾ ಯದಿ ಮೋಹತಃ ಶ್ರುತಿಮತಾ ಕಾಶೀ ತದಾ ದುರ್ಲಭಾ
ಮುಕ್ತಿಸ್ಸತ್ಯಮಿತಿ ಶ್ರುತಿಶ್ರುತಿರಿಯಂ ಮಾನ್ಯಾ ಸದಾ ವೈದಿಕೈಃ ॥೬೭॥

ಶ್ರೀವಿಶ್ವೇಶ್ವರಮಪ್ರಮೇಯಮಮಲಂ ವೇದಾಂತವೇದ್ಯಂ ಪ್ರಭುಂ
ಲಿಂಗಾಕಾರಮುಪಾಶ್ರಿತಂ ಶ್ರುತಿಮತಂ ಕಾಶ್ಯಾಂ ತದಾ ಸಂಸ್ಥಿತಂ
ಯಸ್ಸಂತ್ಯಜ್ಯ ದಿಗಂತರಂ ಪ್ರತಿಗತೋ ಮೋಹಾತ್ಸಮುಕ್ತ್ಯಂಗನಾ ।
ಪಾದಾಗ್ರೇಣ ಹತಃ ಪತತ್ಯನುದಿನಂ ಸಂಸಾರಕೂಪೇ ಧ್ರುವಂ ॥೬೮॥

ತಂ ಮನ್ಯೇ ಪುರುಷಾಧಮಂ ನರಖರಂ ಸಂಸಾರದುಃಖಾಶ್ರಯಂ
ನಿರ್ಭಾಗ್ಯಂ ಪರದುಃಖದಾನನಿರತಂ ಪಾಪೌಘಮೋಹಾಶ್ರಯಂ ।
ಯಃ ಕಾಶೀಂ ನ ನಿಷೇವತೇ ಶಿವಮುಮಾಕಾಂತಂ ನ ಸಂಸೇವತೇ
ಸಂಸಾರಾರ್ಣವತಾರಕಂ ಪ್ರಭುಮನಾದ್ಯಂತಂ ಭವಾನೀಪತಿಂ ॥೬೯॥

ಕಾಶಿಯಲ್ಲಿ ನೆಲಸಿರುವವರಿಗೆ ಎಂತಹ ವಿಪತ್ಸುಖಗಳು ಸಂಭವಿಸಿದರೂ ಆ ಶಿವರಾಜಧಾನಿಯಾದ ಕಾಶಿಯನ್ನು ದೂರಮಾಡಿ ಹೋಗುವುದು ತರವಲ್ಲ. ಏಕೆಂದರೆ ಅದು ಮುಕ್ತಿಪ್ರದವಾದುದು. ಅಜ್ಞಾನದಿಂದ ಒಂದುವೇಳೆ ಆ ಕ್ಷೇತ್ರವನ್ನು ಬಿಟ್ಟು ಸ್ಥಳಾಂತರಕ್ಕೆ ಹೋಗುವುದಾದರೆ ಅವರಿಗೆ ಎಂದಿಗೂ ಮೋಕ್ಷವು ದೊರಕಲಾರದು. ಈ ಮಾತು ಸತ್ಯವಾದುದು. ಇದನ್ನು ವೈದಿಕರಾದವರೆಲ್ಲರೂ ನಂಬಲೇಬೇಕು. ||೬೭||

ವೇದಾಂತವೇದ್ಯನೂ, ಅಳತೆ ಅಂಕೆಗಳಿಗೆ ತಿಳಿಯದವನೂ, ಪವಿತ್ರನೂ, ಜಗದೊಡೆಯನೂ, ಲಿಂಗಾಕಾರದಲ್ಲಿರುವವನೂ ಆದ ವಿಶ್ವೇಶ್ವರನನ್ನು ಆಶ್ರಯಿಸಿದವರಿಗೆ ಮುಕ್ತಿಯು ದೊರಕುವುದರಲ್ಲಿ ಸಂಶಯವಿಲ್ಲ. ಒಂದುವೇಳೆ ಇಂತಹ ಕಾಶೀಕ್ಷೇತ್ರವನ್ನು ದೂರಮಾಡಿ ಹೋದವರು ಮುಕ್ತಿಕಾಂತೆಯ ಪಾದಾಗ್ರದಿಂದ ಜಾರಿ ಸಂಸಾರವೆಂಬ ಬಾವಿಗೆ ಬೀಳುವರೆಂಬುದರಲ್ಲಿ ಸಂಶಯವಿಲ್ಲ. ॥೬೮॥

ಸಂಸಾರವೆಂಬ ಸಾಗರದಿಂದ ದಾಟಿಸುವ, ಜಗತ್ಪ್ರಭುವಾದ ಭವಾನೀಪತಿಯನ್ನು ಯಾವನು ಸೇವಿಸುವುದಿಲ್ಲವೋ ಮತ್ತು ಯಾವನು ಕಾಶೀಕ್ಷೇತ್ರವನ್ನು ಆಶ್ರಯಿಸುವುದಿಲ್ಲವೋ, ಅವನೇ ಪಾಪಿಯೆನಿಸುವನು. ಅವನೇ ಪುರುಷಾಧಮನು.

ತಂ ಮನ್ಯೇ ಪುರುಷೋತ್ತಮಂ ಶಿವಮತಂ ನಿರ್ಮೂಲತಾಪದ್ರುಮಂ
ವೇದಾಂತಾರ್ಥವಿಚಾರಪಾರರಹಿತಂ ಸೌಭಾಗ್ಯವಂತಂ ಸದಾ ।
ಯಃ ಕಾಶೀಂ ಸಮುಪಾಸತೇ ಶಿವಮನಾದ್ಯಂತಂ ಭಜೇತ್ಸಂತತಂ
ಭಸ್ಮಾಲಂಕೃತವಿಗ್ರಹಃ ಶಿವಮಹಾದೇವೇತಿ ಮಂತ್ರಂ ಜಪನ್ ॥೬೮೨॥

ಕಾಶ್ಯೇಕಾ ಜಗತೀತಲೇ ಶ್ರುತಿಮತಾ ಮುಕ್ತಿಪ್ರದೇತಿ ಶ್ರುತಾ
ಗೌರೀಶಂಕರಸಂಮತಾ ಮುನಿವರ್ಯೈರ್ವೇದೈಶ್ಚ ನಿತ್ಯಂ ಸ್ತುತಾ ।
ಕಾಶೀತೋಧಿಕಮನ್ಯತೀರ್ಥಮಭಿತೋ ವೇದೇಷು ನ ಶ್ರೂಯತೇ
ತೀರ್ಥಾನಾಮಧಿದೇವತೇಯಮನಘಾ ಕಾಶೀಮಹೇಶಪ್ರಿಯಾ ॥೬೮೩॥

ಕಾಶ್ಯಾಂ ವರ್ಣಯಿತಾ ಶಿವಃ ಪರತರಂ ಪಂಚಾಕ್ಷರಂ ತಾರಕಂ
ತಚ್ಛೈವಂ ಪ್ರಣವಾನ್ವಿತಂ ಶ್ರುತಿಶಿರೋರತ್ನಂ ತದಿತ್ಯಾದರಾತ್ ।
ದುರ್ವಾಸಾದಿಸಮಸ್ತಮೌನಿನಿಕರೈಃ ಕಾಶೀಸಮಾರಾಧಿತಾ
ಸೇಯಂ ಶಂಭುಸಮಾಶ್ರಿತಾ ಶಿವಪುರೀ ಮುಕ್ತ್ಯಂಗನಾಸಂಶ್ರಯಾ ॥೬೮೪॥

---

ಸಂಸಾರದುಃಖಗಳಿಗೆ ಸಿಕ್ಕಿ ನರಳುವವನೂ ಆತನೇ. ಮತ್ತೊಬ್ಬರಿಗೂ ಆತನಿಂದ ಅನೇಕ ದುಃಖಪರಂಪರೆಗಳು ಲಭಿಸುವುವು. ॥೬೮೧॥

ಯಾರು ಕಾಶಿಯನ್ನು ಸೇರಿ, ಅಲ್ಲಿ ಆದ್ಯಂತರಹಿತನಾದ ವಿಶ್ವೇಶ್ವರಸ್ವಾಮಿಯನ್ನು, ಭಸ್ಮೋದ್ಧೂಲಿತಗಾತ್ರನಾಗಿ ಈಶನಾಮಸ್ಮರಣೆಮಾಡುತ್ತಾ ನೆಲಸುವನೋ, ಅವನೇ ಪುರುಷಶ್ರೇಷ್ಠನು. ಆತನೇ ಶಂಕರನಿಗೆ ಪ್ರಿಯನೆನಿಸಿದವನು. ಆತನಿಗೇ ಸಕಲ ವೇದವೇದಾಂತಗಳ ಅರ್ಥವೆಲ್ಲಾ ಸುಲಭವಾಗಿ ಗೋಚರಿಸುವುದು. ಆತನಿಗೇ ಸಕಲ ಸೌಭಾಗ್ಯಗಳೂ ದೊರಕುವುವೆಂಬುದರಲ್ಲಿ ಅನುಮಾನವಿಲ್ಲ. ॥೬೮೨॥

ಮುಕ್ತಿಯನ್ನು ಒದಗಿಸುವುದರಲ್ಲಿ ಅರವಟ್ಟಿಗೆಯಂತಿರುವುದು ಜಗತ್ತಿನಲ್ಲಿ ಕಾಶಿಯೊಂದೇ. ಅದೇ ಪರಶಿವನಿಗೆ ಸಮ್ಮತವಾದ ಕ್ಷೇತ್ರ, ಅದನ್ನೇ ಸಕಲ ಮುನಿಗಳೂ, ವೇದಗಳೂ ನಿತ್ಯವೂ ಸ್ತುತಿಸುತ್ತಿರುವರು. ಕಾಶಿಗಿಂತಲೂ ಉತ್ತಮವೆನಿಸಿಕೊಂಡಿರುವ ಕ್ಷೇತ್ರವೆಂಬುದು ವೇದದಲ್ಲಿ ಎಲ್ಲಿಯೂ ಹೇಳಿದಂತೆ ಕಾಣುವುದಿಲ್ಲ. ಸಕಲ ತೀರ್ಥಗಳಿಗೂ ಅಧಿದೇವತೆಯೆನಿಸಿಕೊಂಡಿರುವ ಈ ಕಾಶೀಕ್ಷೇತ್ರವು ಮಹಾದೇವನಿಗೆ ಅತ್ಯಂತ ಪ್ರಿಯವಾದುದಲ್ಲವೆ! ॥೬೮೩॥

ಕಾಶಿಯಲ್ಲಿರುವ ವಿಶ್ವೇಶ್ವರನು ಪರಮಪೂಜ್ಯನು. ಪ್ರಣವಸಹಿತವಾದ ಶಿವಪಂಚಾಕ್ಷರೀಮಂತ್ರವೇ ಸಂಸಾರದುಃಖತಾರಕವಾದುದು. ಮತ್ತು ವೇದಗಳಿಗೆ

ಕಾಶೀವೀಥಿಷು ಮುಕ್ತಿರೂಪವನಿತಾ ವಿಶ್ವೇಶ್ವರಪ್ರೇರಿತಾ
ಸಂಚಾರಂ ಸಮುದಂ ಕರೋತಿ ಪರಿತಃ ಸಂವೀಕ್ಷ್ಯ ಶೈವೋತ್ತಮಾನ್ ।
ಏತೇ ಮಾಮಭಿಯಾಂತು ಸತ್ವರಮಿಹ ಪ್ರಧ್ವಸ್ತದುಃಖಾಬ್ಧಯಃ
ಶ್ರೀವಿಶ್ವೇಶ ಕೃಪಾವಶಾದಿತಿ ಸದಾ ವೇದಾಂತವಾಕ್ಯಸ್ತುತಾ ॥೬೮೫॥

ಏತದ್ವೇದರಹಸ್ಯಮಾಹುರಭಿತೋ ವೇದಾಂತವಾಕ್ಯೈರ್ಯತೋ
ನಿಶ್ಚಿತ್ಯೋಕ್ತಮನೇಕನೇಪಹೃದಯಂ ಪ್ರಾಗೇವ ಮೇ ಚೋದಿತಂ ।
ದೇವೀ ಷಣ್ಮುಖ ನಂದಿ ಭೃಂಗಿರಿಟಿಭಿಃ ಸಂಸೇವಿತೇ ನಾದರಾ
ದಾರಾಧ್ಯೇ ನ ಮಹೇಶ್ವರೇಣ ಜಗತಾಮಿರ್ಶೇನ ಸತ್ಯಂ ಧ್ರುವಂ ॥೬೮೬॥

॥ ಮೌದ್ಗಲ್ಯ ಉವಾಚ ॥

ಇತಿ ತದ್ವಚನಂ ಶ್ರುತ್ವಾ ಭೃಗುಃ ಕಾಶ್ಯಾಮುವಾಚ ಸಃ ।
ಕಾಶೀಪ್ರಭಾವೋ ವಿಜ್ಞಾತಸ್ತೇನ ಲಿಂಗಾರ್ಚನಾತ್ಮನೇ ॥೬೮೭॥

ಶಿರೋಭೂಷಣದಂತಿರುವುದು ಎಂದು ತಿಳಿದು, ದೂರ್ವಾಸಾದಿ ಸಕಲ ಮುನಿಗಳೂ ಆ ಕಾಶಿಯನ್ನು ಸೇವಿಸುತ್ತಿರುವರು. ಇಂತಹ ಕಾಶೀಕ್ಷೇತ್ರವೆಂಬುದು ಮುಕ್ತಿ ದೇವತೆಗೆ ಆಶ್ರಯವಿತ್ತು ಪರಶಿವನಿಂದಲೂ ಆಶ್ರಯಿಸಲ್ಪಟ್ಟಿರುವುದು. ॥೬೮೪॥

ಮುಕ್ತಿಯೆಂಬ ವನಿತೆಯು ಕಾಶೀನಗರದ ಎಲ್ಲಾ ಬೀದಿಗಳಲ್ಲೂ ಸಂಚರಿಸುತ್ತಾ, ಈಶ್ವರನನ್ನು ಆರಾಧಿಸುವವರಿಗೆಲ್ಲಾ ಆನಂದವನ್ನುಂಟುಮಾಡುತ್ತಿರುವಳು. ಮತ್ತು ಶೈವೋತ್ತಮರು ನನ್ನಲ್ಲಿಗೆ ಬಂದರೆ ಅವರ ದುಃಖರಾಶಿಯನ್ನೆಲ್ಲಾ ವಿಶ್ವೇಶ್ವರನ ಕೃಪೆಯಿಂದ ನಿರ್ಮೂಲಗೊಳಿಸುವೆನು ಎಂದು ಹೇಳುತ್ತಾ ಉಪನಿಷದ್ವಾಕ್ಯಗಳಿಂದ ಸ್ತುತಿಸಲ್ಪಡುತ್ತಿರುವಳು. ॥೬೮೫॥

ಇದು ವೇದರಹಸ್ಯವು. ಉಪನಿಷದ್ವಾಕ್ಯಗಳು ಇದನ್ನು ವಿವರಿಸುತ್ತಲಿರುವುವು. ಇದನ್ನು ನಿಶ್ಚಯವೆಂದು ನಂಬಿ ನಾನು ಹೇಳುತ್ತಿರುವೆನು. ಇವನ್ನು ಹಿಂದೆ ಲೋಕಾರಾಧ್ಯನಾದ ಪರಶಿವನೇ, ಷಣ್ಮುಖ, ನಂದಿ, ಭೃಂಗಿ, ರಿಟಿ ಮುಂತಾದವರಿಂದ ಕೂಡಿಕೊಂಡು ದೇವಿಗೆ ಈ ರಹಸ್ಯವನ್ನೆಲ್ಲಾ ತಿಳಿಯಪಡಿಸಿರುವನು. ಇದು ಸತ್ಯವಾದದ್ದು. ಎಂದು ಪುಣ್ಯಸಿದ್ಧಿಯು ಹೇಳಲು, ॥೬೮೬॥

ಆ ಮಾತುಗಳನ್ನು ಕೇಳಿ ಭೃಗುಮಹರ್ಷಿಯು ಕಾಶಿಯಲ್ಲಿಯೇ ವಾಸ ಮಾಡಲಾರಂಭಿಸಿದನು. ಅವನಿಂದಲೇ ಕಾಶಿಯ ಪ್ರಭಾವವು ನನಗೆ ತಿಳಿದಂತಾ

ಶಿವಲಿಂಗಾರ್ಚನಫಲಂ ಮಯಾ ವಕ್ತುಂ ನ ಶಕ್ಯತೇ ।
ಶಿವಲಿಂಗಾರ್ಚನಫಲಂ ಭಗವಾನ್ವೇದ ಸ ಶಂಕರಃ ॥೬೮॥

॥ ಅಗಸ್ತ್ಯ ಉವಾಚ ॥

ಶಿವಲಿಂಗಾರ್ಚನಂ ದಾನಂ ಶಿವಲಿಂಗಾರ್ಚನಂ ಜಪಃ ।
ಶಿವಲಿಂಗಾರ್ಚನಂ ಧ್ಯಾನಂ ಶಿವಲಿಂಗಾರ್ಚನಂ ತಪಃ ॥೬೯॥

ಇತಿ ತದ್ವಚನಂ ಶ್ರುತ್ವಾ ಮುನಯಸ್ತೇ ತತಃ ಪರಂ ।
ಶಿವಾರ್ಚನಪರಾ ಜಾತಾ ಭಸ್ಮೋದ್ಧೂಲಿತವಿಗ್ರಹಾಃ ॥೭೦॥

ಶಿವಲಿಂಗಾರ್ಚನಂ ನಿತ್ಯಂ ತದಕೃತ್ವೈವ ಯೋ ವಸೇತ್ ।
ಸ ಯಾತಿ ನರಕಂ ಘೋರಂ ಕಲ್ಪಾಂತೇಽಪಿ ನ ಮುಚ್ಯತೇ ॥೭೧॥

ಪುರಾ ವಸಿಷ್ಠೋ ಮೋಹೇನ ತ್ಯಕ್ತಭಸ್ಮಾನುಲೇಪನಂ ।
ತ್ಯಕ್ತಲಿಂಗಾರ್ಚನಂ ಶಿಷ್ಯಂ ವಿಲೋಕ್ಯಾಹಾತಿದುಃಖಿತಃ ॥೭೨॥

ಯಿತು. ಅಂತೂ ಶಿವಲಿಂಗಾರ್ಚನೆಯ ಫಲವನ್ನಂತೂ ಹೇಳಲು ಸಾಧ್ಯವೇ ಇಲ್ಲ. ಅದನ್ನಂತೂ ಶಂಕರನೊಬ್ಬನೇ ತಿಳಿಯಬಲ್ಲನು. ॥೬೭-೬೮॥

ಲೋಕದಲ್ಲಿ ದಾನ, ಜಪ, ಧ್ಯಾನ, ತಪಸ್ಸು ಇವೆಲ್ಲವೂ ಶಿವಲಿಂಗಾರ್ಚನೆಯಿಂದಲೇ ಚರಿತಾರ್ಥವಾಗುತ್ತವೆ.'' ಎಂದು ಹೇಳಿದ ಮೌದ್ಗಲ್ಯಋಷಿಯ ಮಾತುಗಳನ್ನು ಕೇಳಿ ಆ ಋಷಿಗಳೆಲ್ಲರೂ ಶಿವಾರ್ಚನೆಮಾಡಲಾರಂಭಿಸಿ, ಭಸ್ಮೋದ್ಧೂಲಿತಗಾತ್ರರಾಗಿ ನಿಂತರು. ॥೬೯-೭೦॥

ನಿತ್ಯದಲ್ಲಿಯೂ ಯಾವನು ಶಿವಲಿಂಗಾರ್ಚನೆಮಾಡದೆ ಕಾಲ ಕಳೆಯುವನೋ ಅವನು ಘೋರನರಕವನ್ನು ಹೊಂದಿ ಕಲ್ಪಾಂತ್ಯದಲ್ಲಿಯೂ ಅಲ್ಲಿಂದ ಬಿಡುಗಡೆ ಹೊಂದಲಾರನು. ಹಿಂದೆ ಒಂದು ಸಾರಿ ವಸಿಷ್ಠಮಹರ್ಷಿಯು ಭಸ್ಮಲೇಪನವಿಲ್ಲದೆ ಶಿವಲಿಂಗಾರ್ಚನೆಯಲ್ಲಿ ವಿಮುಖನಾಗಿದ್ದ ತನ್ನ ಶಿಷ್ಯನನ್ನು ನೋಡಿ ದುಃಖಿತನಾಗುತ್ತಾ ಹೀಗೆಂದನು. ॥೭೧-೭೨॥

॥ ವಸಿಷ್ಠ ಉವಾಚ ॥

ಹಾ ಹಾ ಶಿಷ್ಯ ಕಥಂ ತ್ಯಕ್ತಂ ವಿಭೂತ್ಯುದ್ಧೂಲನಂ ತ್ವಯಾ ।
ಕಥಂ ಶಿವಾರ್ಚನಂ ತ್ಯಕ್ತಂ ವೇದವೇದಾಂತಬೋಧಿತಂ ॥೬೯೩॥

ತ್ಯಕ್ತಲಿಂಗಾರ್ಚನೈರ್ವಿಪ್ರೈಸ್ತ್ಯಕ್ತಭಸ್ಮಾನುಲೇಪನೈಃ ।
ಪ್ರಾಪ್ಯತೇ ಯಾತನಾ ಘೋರಾ ಸತತಂ ಕಲ್ಪಕೋಟಿಷು ॥೬೯೪॥

ಯೇನ ತ್ಯಕ್ತೋ ಭಸ್ಮಯೋಗೋ ಯೇನ ತ್ಯಕ್ತಂ ಶಿವಾರ್ಚನಂ ।
ತಸ್ಯ ಕಲ್ಪಶತಾಂತೇಽಪಿ ಮುಕ್ತಿರತ್ಯಂತದುರ್ಲಭಾ ॥೬೯೫॥

॥ ಅಗಸ್ತ್ಯ ಉವಾಚ ॥

ಭೂತಿಲಿಂಗಾರ್ಚನೇ ತ್ಯಕ್ತ್ವಾ ಕರೋತ್ಯುಗ್ರಂ ತಪೋಽನಿಶಂ ।
ತಥಾಪಿ ತತ್ತಪಸ್ತಸ್ಯ ಫಲದಂ ನ ಭವಿಷ್ಯತಿ ॥೬೯೬॥

ಇತ್ಯುಕ್ತ್ವಾ ಶಿಷ್ಯಸಂಯುಕ್ತೋ ವಸಿಷ್ಠೋ ವೇದವಿತ್ತಮಃ ।
ಯಯೌ ಯಮಸಭಾಂ ಸದ್ಯಃ ಶಿವನಾಮಾನಿ ಕೀರ್ತಯನ್ ॥೬೯೭॥

ಸ ಸಭಾಸದ್ಯಮಃ ಶ್ರುತ್ವಾ ಶಿವನಾಮಾನುಕೀರ್ತನಂ ।
ಅಭ್ಯುತ್ಥಾಯ ವಸಿಷ್ಠಂ ತಂ ಪೂಜಯಾಮಾಸ ಸಾದರಂ ॥೬೯೮॥

"ಎಲೈ ಶಿಷ್ಯನೇ, ವಿಭೂತಿಧಾರಣೆಯನ್ನೂ, ಶಿವಲಿಂಗಾರ್ಚನೆಯನ್ನೂ ಏತಕ್ಕಾಗಿ ಬಿಟ್ಟಿರುವೆ? ಅದು ಸಕಲ ವೇದವೇದಾಂತಗಳಲ್ಲಿಯೂ ಉಕ್ತವಾಗಿರುವುದಲ್ಲವೆ? ಲಿಂಗಾರ್ಚನೆಯನ್ನೂ ಭಸ್ಮಧಾರಣೆಯನ್ನೂ ಬಿಟ್ಟವರಿಗೆ ನರಕಯಾತನೆಗಳು ಕಲ್ಪಕೋಟಿಪರ್ಯಂತ ತಪ್ಪಲಾರದಷ್ಟೆ! ಭಸ್ಮಯೋಗ, ಶಿವಾರ್ಚನೆ ಇವೆರಡನ್ನು ಬಿಟ್ಟವರಿಗೆ ಕಲ್ಪಶತವಾದರೂ ಮುಕ್ತಿಯು ದೊರಕಲಾರದು. ॥೬೯೩-೬೯೪-೬೯೫॥

ವಿಭೂತಿಧಾರಣೆ, ಲಿಂಗಾರ್ಚನೆ ಇವುಗಳನ್ನು ಬಿಟ್ಟು ಎಷ್ಟೇ ಘೋರವಾದ ತಪಸ್ಸನ್ನಾಚರಿಸಿದರೂ, ಆ ತಪಸ್ಸಿನ ಫಲವು ಅವರಿಗೆ ದೊರೆಯಲಾರದು" ಹೀಗೆಂದು ವಸಿಷ್ಠನು ಶಿಷ್ಯನಿಗೆ ಹೇಳುತ್ತಾ ಶಿಷ್ಯನೊಡಗೂಡಿ ಶಿವನಾಮಗಳನ್ನೇ ಸ್ಮರಿಸುತ್ತಾ ಯಮಸಭೆಯನ್ನು ಪ್ರವೇಶಿಸಿದನು. ॥೬೯೬-೬೯೭॥

ಆ ಶಿವನಾಮಗಳನ್ನು ಕೇಳಿದೊಡನೆಯೇ ಯಮನು ಸಭ್ಯರೊಡಗೂಡಿ, ವಸಿಷ್ಠಮಹರ್ಷಿಗೆ ಅಭ್ಯುತ್ಥಾನಾದಿಸತ್ಕಾರಗಳಿಂದ ಪೂಜಿಸಿ, ತೃಪ್ತಿಪಡಿಸಿದನು.

ತತಃ ಪ್ರಹೃಷ್ಟಹೃದಯೋ ವಸಿಷ್ಠೋ ಯಮಪೂಜಿತಃ ।
ವಿಧಾಯ ಕುಶಲಪ್ರಶ್ನಮನ್ಯದಪ್ಯಾಹ ಸಾದರಂ ॥೬೯೯॥

ಯಮಪಾತ್ರಾಗಣಿತಾಸ್ಸಂತಿ ನರಕೇಷ್ವತಿದುಃಖಿತಾಃ ।
ಪಚ್ಯಮಾನಾಃ ಕ್ವಾಥ್ಯಮಾನಾ ದಹ್ಯಮಾನಾಶ್ಚ ಕಿಂಕರೈಃ ॥೭೦೦॥

ಏತೈಃ ಕಿಂ ಕಿಂ ಕೃತಂ ಪಾಪಂ ಪುರಾ ನರಕಸಾಧನಂ ।
ಕೇಭ್ಯಶ್ಚೈಭಿರ್ಭುಜ್ಯತೇ ಪಾಪೈರ್ಘೋರಾ ನರಕಯಾತನಾ ॥೭೦೧॥

ಯಮೇದಂ ಮಹ್ಯಮಖಿಲಂ ವಿಚಾರ್ಯ ವದ ಸಾದರಂ ।
ಯೇನ ಪಾಪಾನ್ನಿವೃತ್ತಿಸ್ಸ್ಯಾದ್ಯಾತನಾ ಸಾಧನಾನ್ಮಮ ॥೭೦೨॥

॥ ಅಗಸ್ತ್ಯ ಉವಾಚ ॥

ಇತಿ ತದ್ವಚನಂ ಶ್ರುತ್ವಾ ದೃಷ್ಟ್ವಾ ಸ ನರಕಸ್ಥಿತಾನ್ ।
ದಹ್ಯಮಾನಾನ್ಪಚ್ಯಮಾನಾನುವಾಚ ವಚನಂ ತದಾ ॥೭೦೩॥

॥ ಯಮ ಉವಾಚ ॥

ಸರ್ವಕಾಮಪ್ರದಂ ಶ್ರೌತಂ ಸುಲಭಂ ಲಿಂಗಪೂಜನಂ ।
ಪುರಾ ತ್ಯಕ್ತಂ ದುರಾಚಾರೈರೇತೈರ್ನರಕವಾಸಿಭಿಃ ॥೭೦೪॥

---

ಆಗ ವಸಿಷ್ಠಮಹರ್ಷಿಯು ಆವನ ಸತ್ಕಾರದಿಂದ ತೃಪ್ತನಾಗಿ ಕುಶಲ ಪ್ರಶ್ನೆ ಮಾಡುತ್ತಾ ಹೀಗೆಂದನು "ಎಲೈ ಯಮನೇ, ನಿನ್ನ ಈ ನರಕದಲ್ಲಿ ನಿನ್ನ ದೂತರು ಅನೇಕರನ್ನು ಬೇಯಿಸುತ್ತಾ, ಕುದಿಸುತ್ತಾ, ಸುಡುತ್ತಾ ಹಿಂಸಿಸುತ್ತಿರುವರು. ಅದಕ್ಕೆ ಕಾರಣವೇನು ? ॥೬೯೮-೬೯೯-೭೦೦॥

ಇವರು ಮಾಡಿರುವ ಪಾಪಕಾರ್ಯಗಳಾವುವು ? ಎಂತಹ ಪಾಪಗಳಿಗೆ ಈ ಶಿಕ್ಷೆಯನ್ನು ನೀನು ವಿಧಿಸುವೆ ? ಇದೆಲ್ಲವನ್ನೂ ವಿಸ್ತಾರವಾಗಿ ನನಗೆ ಆದರದಿಂದ ತಿಳಿಸು. ನಾನೂ ಸಹ ಅನೇಕ ದುಃಖಕರವಾದ ಪಾಪಗಳ ಸಂಪರ್ಕವನ್ನು ಕಳೆದು ಕೊಳ್ಳುವೆನು." ॥೭೦೧-೭೦೨॥

ಎಂದು ಕೇಳಿದ ವಸಿಷ್ಠಮಹರ್ಷಿಯನ್ನು ಕುರಿತು, ಯಮನು ಹಾಗೆ ನರಕದಲ್ಲಿ ಸುಟ್ಟು ಬೇಯುತ್ತಿರುವ ಪಾಪಿಗಳನ್ನು ನೋಡುತ್ತಾ ಹೀಗೆಂದನು "ಮಹ

ತ್ಯಕ್ತ್ವಾ ಲಿಂಗಾರ್ಚನಂ ಶ್ರೌತಂ ಪತಿತಾ ನರಕಾಲಯೇ ।
ನೈತೇಷಾಂ ಬ್ರಹ್ಮಕಲ್ಪಾಂತೇಽಪ್ಯಸ್ಮಾನ್ಮೋಕ್ಷೋ ನ ದೃಶ್ಯತೇ ॥೭೦೫॥

ಮೋಕ್ಷೋಽಸ್ತಿ ಬ್ರಹ್ಮಹಾದೀನಾಂ ಕಲ್ಪಾಂತೇ ಬ್ರಹ್ಮಣಾ ಸಹ ।
ತ್ಯಕ್ತಲಿಂಗಾರ್ಚನಾನಾಂ ತು ಮೋಕ್ಷೋ ನಾಸ್ತ್ಯೇವ ಸರ್ವಥಾ ॥೭೦೬॥

ತ್ಯಕ್ತಲಿಂಗಾರ್ಚನಾನಾಂ ಚೇನ್ನರಕಾನ್ನಿರ್ಗಮೋ ಭವೇತ್ ।
ತದಾ ಸಮುದ್ರೇ ವಿಂಧ್ಯಾದ್ರಿಃ ಪ್ಲವೇತ್ಕಾಷ್ಠಕರಂಡವತ್ ॥೭೦೭॥

ತ್ಯಕ್ತಲಿಂಗಾರ್ಚನಾನಾಂ ಚೇನ್ನರಕಾನ್ನಿರ್ಗಮೋ ಭವೇತ್ ।
ತದೋತ್ತಮಾಶ್ವೋ ಜಾಯೇತ ಗಾರ್ದಭಾದತಿಕೋಮಲಾತ್ ॥೭೦೮॥

ತ್ಯಕ್ತಲಿಂಗಾರ್ಚನಾನಾಂ ಚೇನ್ನರಕಾನ್ನಿರ್ಗಮೋ ಭವೇತ್ ।
ತದಾ ಮೃಗೇಂದ್ರೋ ಜಾಯೇತ ಹರಿಣೀಶಾಬಕಾದಪಿ ॥೭೦೯॥

ತ್ಯಕ್ತಲಿಂಗಾರ್ಚನಾನಾಂ ಚೇನ್ನರಕಾನ್ನಿರ್ಗಮೋ ಭವೇತ್ ।
ತದಾ ಗಜೇಂದ್ರೋ ಜಾಯೇತ ಸೂಕರಾದಪಿ ಕೋಮಲಾತ್ ॥೭೧೦॥

---

ಹೀಗೆಯೇ ಈ ಪಾಪಿಗಳು ಸರ್ವ ಕಾಮಪ್ರದವೂ, ವೇದವಿಹಿತವೂ, ಸುಲಭವೂ ಆದ ಶಿವಲಿಂಗ ಪೂಜೆಯನ್ನು ದೂರಮಾಡಿರುವರು. ಆದಕ್ಕಾಗಿಯೇ ಇವರಿಗೆ ಈ ಶಿಕ್ಷೆ ವಿಹಿತವಾಗಿದೆ. ॥೭೦೩-೭೦೪॥

ಇವರು ಶ್ರುತ್ಯುಕ್ತವಾದ ಶಿವಲಿಂಗಾರ್ಚನೆಯನ್ನು ಬಿಟ್ಟಿರುವುದರಿಂದ ಇವರಿಗೆ ಬ್ರಹ್ಮಕಲ್ಪಾಂತದಲ್ಲಿಯೂ ಸಹ ಮೋಕ್ಷವಿರುವುದಿಲ್ಲ. ಬ್ರಹ್ಮಘ್ನನೇ ಮೊದಲಾದ ಮಹಾ ಪಾಪಿಷ್ಠರಿಗೂ ಕಲ್ಪಾಂತರದಲ್ಲಿ ಚತುರ್ಮುಖ ಬ್ರಹ್ಮನೊಡನೆ ಮುಕ್ತಿಯು ಸಂಭವಿಸೀತು. ಶಿವಲಿಂಗಾರ್ಚಕರಲ್ಲದವರಿಗೆ ಮಾತ್ರ ನಿಜವಾಗಿಯೂ ಎಂದೂ ಮೋಕ್ಷವು ದೊರಕಲಾರದು. ॥೭೦೫-೭೦೬॥

ಶಿವಲಿಂಗಾರ್ಚನೆಯನ್ನು ಪರಿತ್ಯಜಿಸಿರುವವರಿಗೆ ನರಕದಿಂದ ಬಿಡುಗಡೆ ಯಾಗುವುದಾದರೆ, ವಿಂಧ್ಯಪರ್ವತವು ಸಮುದ್ರದಲ್ಲಿ ಮರದ ಬುಟ್ಟಿಯಂತೆ ತೇಲೀತು. ಸುಂದರವಾದ ಕತ್ತೆಯಿಂದ ಕುದುರೆಯು ಜನಿಸಿದರೂ, ಜಿಂಕೆಯಿಂದ ಸಿಂಹವೇ ಉತ್ಪತ್ತಿಯಾದರೂ, ಹಂದಿಯಿಂದ ಆನೆಯು ಹುಟ್ಟಿದರೂ, ಶಿವಾರ್ಚನಾ ವಿಹೀನರಿಗೆ ಮುಕ್ತಿಯು ದೊರೆಯಲಾರದು. ಚಂಡಾಲಸ್ತ್ರೀಯಲ್ಲಿ ಬ್ರಾಹ್ಮಣನು

ತ್ಯಕ್ತಲಿಂಗಾರ್ಚನಾನಾಂ ಚೇನ್ನರಕಾನ್ನಿರ್ಗಮೋ ಭವೇತ್ ।
ತದಾ ಚಾಂಡಾಲಕನ್ಯಾಯಾಂ ಜಾಯತೇ ಬ್ರಾಹ್ಮಣೋತ್ತಮಃ ॥೭೦೧॥

ತ್ಯಕ್ತಲಿಂಗಾರ್ಚನಾನಾಂ ಚೇನ್ನರಕಾನ್ನಿರ್ಗಮೋ ಭವೇತ್ ।
ತದಾ ನರಾಣಾಂ ಭಕ್ಷ್ಯಂ ಸ್ಯಾತ್ಪುರೀಷಂ ಸಘೃತಾನ್ನವತ್ ॥೭೦೨॥

ತ್ಯಕ್ತಲಿಂಗಾರ್ಚನಾನಾಂ ಚೇನ್ನರಕಾನ್ನಿರ್ಗಮೋ ಭವೇತ್ ।
ತದಾ ಮುಖಾನ್ನಿಸ್ಸರೇಯುರ್ಮಲಮೂತ್ರಸಮನ್ವಿತಾಃ ॥೭೦೩॥

ತ್ಯಕ್ತಲಿಂಗಾರ್ಚನಾನಾಂ ಚೇನ್ನರಕಾನ್ನಿರ್ಗಮೋ ಭವೇತ್ ।
ತದಾ ಶೃಂಗಾಣಿ ಜಾಯೇರನ್ನರಾಣಾಂ ನೇತ್ರಗೋಲಕಾತ್ ॥೭೦೪॥

ತ್ಯಕ್ತಲಿಂಗಾರ್ಚನಾನಾಂ ಚೇನ್ನರಕಾನ್ನಿರ್ಗಮೋ ಭವೇತ್ ।
ತದೋತ್ಪತ್ತಿಃ ಶಿಲಾಯಾಂ ಸ್ಯಾದಂಕುರಾಣಾಂ ಮೃದಂ ವಿನಾ ॥೭೦೫॥

ತದಾಘ್ರಾಣೇನ ಗೃಹ್ಯೇತ ರಸೋ ಜಿಹ್ವೇಂದ್ರಿಯಂ ವಿನಾ ।
ತ್ಯಕ್ತಲಿಂಗಾರ್ಚನಾನಾಂ ಚೇನ್ನರಕಾನ್ನಿರ್ಗಮೋ ಭವೇತ್ ॥೭೦೬॥

ತ್ಯಕ್ತಲಿಂಗಾರ್ಚನಾನಾಂ ಚೇನ್ನರಕಾನ್ನಿರ್ಗಮೋ ಭವೇತ್ ।
ತದಾ ಶ್ರೋತ್ರೇಣ ಗೃಹ್ಯೇತ ಘಟಾದಿರ್ನಯನಂ ವಿನಾ ॥೭೦೭॥

ತ್ಯಕ್ತಲಿಂಗಾರ್ಚನಾನಾಂ ಚೇನ್ನರಕಾನ್ನಿರ್ಗಮೋ ಭವೇತ್ ।
ತದಾ ನೇತ್ರೇಣ ಗೃಹ್ಯೇತ ಗಂಧೋ ಘ್ರಾಣೇಂದ್ರಿಯಂ ವಿನಾ ॥೭೦೮॥

---

ಜನಿಸಿದರೂ, ಮನುಷ್ಯರಿಗೆ ಅಮೇಧ್ಯವು ತುಪ್ಪಾನ್ನದಂತಾದರೂ, ಮಲಮೂತ್ರಾದಿಗಳು ಮುಖದಿಂದ ನಿಸ್ಸೃತವಾದರೂ, ನೇತ್ರಗೋಲಕದಿಂದ ಕೊಂಬುಗಳು ಹುಟ್ಟಿದರೂ, ಕಲ್ಲಿನಮೇಲೆ ಮಣ್ಣಿಲ್ಲದೆ ಗಿಡವು ಅಂಕುರಿಸಿದರೂ, ನಾಲಿಗೆಯು ಸಹಾಯವಿಲ್ಲದೆ ಮೂಗೇ ರಸವನ್ನು ಗ್ರಹಿಸುವುದಾದರೂ, ಕಿವಿಯೇ ಕಣ್ಣಿನ ಸಹಾಯವಿಲ್ಲದೆ ಘಟಾದಿಗಳ ಪ್ರತ್ಯಕ್ಷಕ್ಕೆ ಕಾರಣವಾದರೂ, ನೇತ್ರವು ಮೂಗಿನ ಸಹಾಯವಿಲ್ಲದೆ ವಾಸನೆಯನ್ನು ಗ್ರಹಿಸುವುದಾದರೂ, ಮೂಗು ಕಿವಿಯ ಸಹಕಾರವಿಲ್ಲದೆ ಆನೆಯ ಘೀಂಕಾರವನ್ನು ಅರಿಯುವುದಾದರೂ, ನಾಲಿಗೆಯೇ ಚರ್ಮದ ಸಹಾಯವಿಲ್ಲದೆ ಸ್ಪರ್ಶಸುಖವನ್ನು ಅನುಭವಿಸಿದರೂ, ಮನೋಬುದ್ಧಿಗಳ ಸಹಾಯ

ತ್ಯಕ್ತಲಿಂಗಾರ್ಚನಾನಾಂ ಚೇನ್ನರಕಾನ್ನಿರ್ಗಮೋ ಭವೇತ್ ।
ತದಾ ಘ್ರಾಣೇನ ಗೃಹ್ಯೇತ ವಿನಾ ಶ್ರೋತ್ರಂ ಗಜಧ್ವನಿಃ ॥೨೧೯॥

ತ್ಯಕ್ತಲಿಂಗಾರ್ಚನಾನಾಂ ಚೇನ್ನರಕಾನ್ನಿರ್ಗಮೋ ಭವೇತ್ ।
ತದಾ ಸ್ಪರ್ಶೋಽಪಿ ಗೃಹ್ಯೇತ ರಸನೇನ ತ್ವಚಂ ವಿನಾ ॥೨೨೦॥

ತ್ಯಕ್ತಲಿಂಗಾರ್ಚನಾನಾಂ ಚೇನ್ನರಕಾನ್ನಿರ್ಗಮೋ ಭವೇತ್ ।
ತದಾ ತ್ವಚೈವ ಗೃಹ್ಯೇತ ಬುದ್ಧ್ಯಾಧಾರೋ ವಿನಾ ಮನಃ ॥೨೨೧॥

ತಸ್ಮಾತ್ತ್ಯಕ್ತಶಿವಾರ್ಚನಾನಾಂ ನಿಷ್ಕೃತಿರ್ನರಕಾಲಯಾತ್ ।
ನಾಸ್ತ್ಯೇವ ಬ್ರಹ್ಮಕಲ್ಪಾಂತೇಷ್ವೇತತ್ಸತ್ಯಂ ನ ಸಂಶಯಃ ॥೨೨೨॥

ಯೇ ತಿಷ್ಠಂತಿ ಭ್ರಮೇಣಾಪಿ ವಿಹಾಯ ಶಿವಪೂಜನಂ ।
ತೇ ಕಲ್ಪಾಂತೇಽಪಿ ನ ತ್ಯಾಜ್ಯಾ ನರಕೇಭ್ಯೋ ನ ಸಂಶಯಃ ॥೨೨೩॥

ಭಸ್ಮಾನುಲೇಪನಂ ತ್ಯಕ್ತ್ವಾ ಯೇ ತಿಷ್ಠಂತಿ ನರಾಧಮಾಃ ।
ತೇ ಕಲ್ಪಾಂತೇಽಪಿ ನ ತ್ಯಾಜ್ಯಾ ನರಕೇಭ್ಯೋ ನ ಸಂಶಯಃ ॥೨೨೪॥

ರುದ್ರಾಕ್ಷಧಾರಣಂ ತ್ಯಕ್ತ್ವಾ ಯೇ ತಿಷ್ಠಂತಿ ನರಾಧಮಾಃ ।
ತೇ ಕಲ್ಪಾಂತೇಽಪಿ ನ ತ್ಯಾಜ್ಯಾ ನರಕೇಭ್ಯೋ ನ ಸಂಶಯಃ ॥೨೨೫॥

ವಿಲ್ಲದೆ ಚರ್ಮವೇ ಜ್ಞಾನಪ್ರಬೋಧಕವಾದರೂ, ಶಿವಲಿಂಗಾರ್ಚನಾವಿಹೀನರಿಗೆ ಎಂದಿಗೂ ಮುಕ್ತಿಯು ಲಭಿಸಲಾರದು. ಶಿವ. ಸಿಜ. ೨೦೭-೨೦೮-೨೦೯-೨೧೦-೨೧೧-೨೧೨-೨೧೩-೨೧೪-೨೧೫-೨೧೬-೨೧೭-೨೧೮-೨೧೯-೨೨೦-೨೨೧॥

ಶಿವಾರ್ಚನೆಯಲ್ಲಿ ವಿಮುಖರಾದವರಿಗೆ ಬ್ರಹ್ಮಕಲ್ಪಾಂತದಲ್ಲಿಯೂ ನರಕದಿಂದ ಮೋಚನೆಯಿರುವುದಿಲ್ಲ. ಇದು ನಿಶ್ಚಯ. ಯಾರು ಅಜ್ಞಾನದಿಂದ ಶಿವಾರ್ಚನೆಯಿಲ್ಲದೆ ಕಾಲಕಳೆಯುವರೋ ಅವರನ್ನು ಕಲ್ಪಾಂತದಲ್ಲಿಯೂ ನರಕದಿಂದ ಬಿಡುಗಡೆ ಮಾಡುವುದಿಲ್ಲ. (೨೨೨-೨೨೩)॥

ಭಸ್ಮಲೇಪನೆಯಿಲ್ಲದೆ, ರುದ್ರಾಕ್ಷಿಯನ್ನು ಧರಿಸದೆ, ಶಿವಸ್ಮರಣೆ ಮಾಡದೆ, ಶಿವಧ್ಯಾನ, ಶಿವಸ್ತುತಿ ಇವುಗಳಿಗೆ ಮನಗೊಡದೆ, ಸರ್ವದಾ ಮಹಾದೇವನಲ್ಲದ ಇತರ ದೇವತಾಧ್ಯಾನಗಳಿಂದಲೇ ಕಾಲಕಳೆಯುವವರನ್ನು ಕಲ್ಪಾಂತದವರೆಗೂ ನರಕದಿಂದ ಬಿಡಕೂಡದು. ಯತ್ನಪೂರ್ವಕವಾಗಿ ಮಹಾದೇವನನ್ನು ನೋಡದೆ,

ಯೇ ಶಿವಸ್ಮರಣಂ ತ್ಯಕ್ತ್ವಾ ಹಿವಾನ್ಯಸ್ಮರಣೇರತಾಃ ।
ತೇ ಕಲ್ಪಾಂತೇಽಪಿ ನ ತ್ಯಾಜ್ಯಾ ನರಕೇಭ್ಯೋ ನ ಸಂಶಯಃ ॥೭೨೬॥

ಪ್ರಣಾಮಾನ್ಯೇ ನ ಕುರ್ವಂತಿ ಮಹಾದೇವಾಯ ಸಾದರಂ ।
ತೇ ಕಲ್ಪಾಂತೇಽಪಿ ನ ತ್ಯಾಜ್ಯಾ ನರಕೇಭ್ಯೋ ನ ಸಂಶಯಃ ॥೭೨೭॥

ಯೇ ನ ಕುರ್ವಂತಿ ಯತ್ನೇನ ಮಹಾದೇವಸ್ತುತಿಂ ಮುದಾ ।
ತೇ ಕಲ್ಪಾಂತೇಽಪಿ ನ ತ್ಯಾಜ್ಯಾ ನರಕೇಭ್ಯೋ ನ ಸಂಶಯಃ ॥೭೨೮॥

ಯೇ ನ ಕುರ್ವಂತಿ ಯತ್ನೇನ ಶ್ರೀ ಮಹಾದೇವಚಿಂತನಂ ।
ತೇ ಕಲ್ಪಾಂತೇಽಪಿ ನ ತ್ಯಾಜ್ಯಾ ನರಕೇಭ್ಯೋ ನ ಸಂಶಯಃ ॥೭೨೯॥

ಯೇ ನ ಕುರ್ವಂತಿ ಯತ್ನೇನ ಶ್ರೀ ಮಹಾದೇವವೀಕ್ಷಣಂ ।
ತೇ ಕಲ್ಪಾಂತೇಽಪಿ ನ ತ್ಯಾಜ್ಯಾ ನರಕೇಭ್ಯೋ ನ ಸಂಶಯಃ ॥೭೩೦॥

ಶ್ರೀ ಮಹಾದೇವನೈವೇದ್ಯಮನ್ವಹಂ ಯೇ ನ ಭುಂಜತೇ ।
ತೇ ಕಲ್ಪಾಂತೇಽಪಿ ನ ತ್ಯಾಜ್ಯಾ ನರಕೇಭ್ಯೋ ನ ಸಂಶಯಃ ॥೭೩೧॥

ಶಿವಾಭಿಷೇಕಪಾನೀಯಮನ್ವಹಂ ನ ಪಿಬಂತಿ ಯೇ ।
ತೇ ಕಲ್ಪಾಂತೇಽಪಿ ನ ತ್ಯಾಜ್ಯಾ ನರಕೇಭ್ಯೋ ನ ಸಂಶಯಃ ॥೭೩೨॥

ಶಿವಭಕ್ತಿವಿಹೀನಾ ಯೇ ತೇ ದಂಡ್ಯಾ ಮಮ ಸರ್ವದಾ ।
ತದನ್ಯೇ ಶಿವಭಕ್ತಾ ಯೇ ತೇ ಪೂಜ್ಯಾ ಮಮ ಸರ್ವದಾ ॥೭೩೩॥

ಅನಂತಬ್ರಹ್ಮಕಲ್ಪಾಂತೇಷ್ವೈತೇಷಾಂ ಮಹಾಮುನೇ ।
ನ ನಿವೃತ್ತಿರಘೋರೇಭ್ಯೋ ನರಕೇಭ್ಯೋ ನ ಸಂಶಯಃ ॥೭೩೪॥

ಮಹಾದೇವನನ್ನು ಧ್ಯಾನಿಸದೆ, ಮಹೇಶ್ವರನ ನೈವೇದ್ಯವನ್ನು ಭಕ್ಷಿಸದೆ, ಶಿವಾಭಿಷೇಕಪಾನೀಯವನ್ನು ಕುಡಿಯದೆ ಇದ್ದ ಶಿವಭಕ್ತಿವಿಹೀನರಾದವರನ್ನು ನಾನು ಎಂದಿಗೂ ನರಕದಿಂದ ಬಿಡುಗಡೆಮಾಡುವುದಿಲ್ಲ. ಶಿವಭಕ್ತಿವಿಹೀನರಾದವರು ನನ್ನ ಹಸ್ತಿಗೆ ಸಿಕ್ಕುವರು. ಈಶ್ವರಭಕ್ತರೆನಿಸಿದವರು ನನಗೆ ಸರ್ವದಾ ಪೂಜ್ಯರೆನಿಸುವರು. ॥೭೨೬-೭೨೭-೭೨೮-೭೨೯-೭೩೦-೭೩೧-೭೩೨-೭೩೩-೭೩೪॥

ಶೈವರಲ್ಲದವರಿಗೆ ಅನಂತಬ್ರಹ್ಮಕಲ್ಪ[illegible]ಗಳಾದರೂ ಭಯಂಕರವಾದ

ಊರ್ಧ್ವಪುಂಡ್ರಂ ಧೃತಂ ಪೂರ್ವಮೇಭಿಃ ಶ್ರುತಿತಿರಸ್ಕೃತಂ ।
ಅತ ಏತೇ ತದಾಕಾರಶಸ್ತ್ರಕುಂಡೇ ನಿಪಾತಿತಾಃ ॥೭೩೫॥

ಲಿಂಗಾಕಾರಶಿಲಾಭಿನ್ನಶಿಲಾಽರ್ಚಾ ಯೈಃ ಕೃತಾ ಪುರಾ ।
ಅತಸ್ತಪ್ತಶಿಲಾಸ್ಪೃಷ್ಟೇ ತಿಷ್ಠಂತ್ಯಗ್ನಿಹತಪ್ರಭಾಃ ॥೭೩೬॥

ಮಹೇಶ್ವರಾರ್ಚನಂ ಪೂರ್ವಮೇಭಿರ್ನಕೃತಮಾದರಾತ್ ।
ಅತಸ್ತಪ್ತಕಟಾಹೇಷು ಪಾತಿತಾಸ್ಸಂತಿ ಸರ್ವದಾ ॥೭೩೭॥

ಪ್ರಣಾಮಾ ನ ಕೃತಾ ಯುಷ್ಮೈರೇತೈಸ್ತ್ರಿಪುರಘಾತಿನಃ ।
ಅತಸ್ತಪ್ತಾಯಸಸ್ತಂಭಾಂಸ್ತಿಷ್ಠಂತ್ಯಾಶ್ಲಿಷ್ಯ ಸರ್ವದಾ ॥೭೩೮॥

ಭಸ್ಮಾನುಲೇಪನಂ ತ್ಯಕ್ತ್ವಾ ಸ್ಥಿತಮೇಭಿಃ ಪುರಾ ತತಃ ।
ವಿಷ್ಠಾನುಲೇಪನಂ ಕೃತ್ವಾ ತಿಷ್ಠಂತಿ ಘಟಿತಾಡಿತಾಃ ॥೭೩೯॥

ಪ್ರದೋಷೇಷು ಮಹಾದೇವೋ ನೈತೈಸ್ಸಂಸೇವಿತೋ ಮುದಾ ।
ಅತ ಏವ ಶಸ್ತ್ರಸಂಘೈಃ ಘರ್ಷಂತೇ ಬಹುಧಾ ಸದಾ ॥೭೪೦॥

---

ನರಕದಿಂದ ಉದ್ಧಾರವಿರುವುದಿಲ್ಲ. ಇಲ್ಲಿರುವವರೆಲ್ಲರೂ ಶ್ರುತಿಗೆ ವಿರುದ್ಧವಾಗಿರುವ ಊರ್ಧ್ವಪುಂಡ್ರವನ್ನು ಧರಿಸಿದ್ದರು. ಅದಕ್ಕಾಗಿ ಇವರನ್ನು ಅದೇ ಊರ್ಧ್ವಪುಂಡ್ರಾಕಾರದ ಶಸ್ತ್ರಕುಂಡದಲ್ಲಿ ಹಾಕಿ ಬೇಯಿಸುತ್ತಿರುವೆನು. ॥೭೩೪-೭೩೫॥

ಶಿವಲಿಂಗಾಕಾರವಲ್ಲದ ಬೇರೆ ಯಾವ ಶಿಲೆಯನ್ನು ಪೂಜಿಸಿದರೂ ಅವರು ಪಾಪಿಗಳೆನಿಸುವರು. ಅಂತಹವರನ್ನು ಕಾದ ಕಲ್ಲಿನಮೇಲಿಟ್ಟು ಅಗ್ನಿಯಿಂದ ಸುಡಿಸುತ್ತಿದ್ದೇನೆ. ಇಲ್ಲಿರುವವರು ಮಹೇಶ್ವರಾರ್ಚನ ಮಾಡದೇ ಜೀವಿಸಿದ್ದರಿಂದ ಕಾದ ಕಡಾಯಿಯಲ್ಲಿ ಹಾಕಿ ಬೇಯಿಸುತ್ತಿರುವೆನು. ॥೭೩೬-೭೩೭॥

ಈ ದುಷ್ಟರು ತ್ರಿಪುರಾಂತಕನಾದ ಸದಾಶಿವನಿಗೆ ಎಂದೂ ವಂದಿಸಿದವರಲ್ಲ. ಆದರಿಂದ ಇವರನ್ನು ಕಾದ ಕಬ್ಬಿಣದ ಸಲಾಕೆಗೆ ಆಲಿಂಗಿಸಿಕೊಂಡಿರುವಂತೆ ಮಾಡಿರುವೆನು. ಇವರು ಭಸ್ಮಲೇಪವಿಲ್ಲದೆ ಇದ್ದುದರಿಂದ ಇವರ ಮೈಗೆಲ್ಲಾ ಅಮೇಧ್ಯವನ್ನು ಬಳಿಸಿ ಸೇವಕರಿಂದ ಹೊಡೆಸುತ್ತಿರುವೆನು. ॥೭೩೮-೭೩೯॥

ಇವರು ಪ್ರದೋಷಕಾಲದಲ್ಲಿ ಮಹಾದೇವನನ್ನು ಧ್ಯಾನಿಸಲಿಲ್ಲ. ಸೇವಿಸಲಿಲ್ಲ. ಅದಕ್ಕಾಗಿ ಇವರನ್ನು ಒಲೆಯಮೇಲಿಟ್ಟು ಬೇಯಿಸುತ್ತಿರುವೆನು. ಇವರು ಶಿವ

ಏತೈರ್ಗಿರಿಶಸ್ಯೈವೇದ್ಯಂ ನ ಭುಕ್ತಮತಿಪಾವನಂ ।
ಅತೋ ವಿಷ್ಠಾಂ ಕ್ರಿಮಿಪ್ರಸ್ಪಷ್ಟಾಂ ಭಕ್ಷಯಂತಿ ಮುಹುರ್ಮುಹುಃ ॥೭೪೧॥

ಏತೈರ್ನ ಪೀತಂ ಯತ್ನೇನ ಶಿವತೀರ್ಥಮಘಾಪಹಂ ।
ಅತ ಏವ ಪಿಬಂತ್ಯತ್ರ ಲಾಲಾಂ ಶುನಕವಕ್ತ್ರಜಾಂ ॥೭೪೨॥

ಏತೈರ್ಮಹೇಶನಿರ್ಮಾಲ್ಯಂ ನಾಘ್ರಾತಮಿತಿ ಯತ್ನತಃ ।
ಅತ ಏವಾಮೇಧ್ಯಗಂಧಂ ತಿಷ್ಠಂತ್ಯಾಘ್ರಾಯ ಸರ್ವದಾ ॥೭೪೩॥

ಶಿವರಾತ್ರಿವ್ರತಂ ತ್ಯಕ್ತ್ವಾ ಸ್ಥಿತಮೇತೈರ್ದುರಾತ್ಮಭಿಃ ।
ಅತ ಏವ ಮಹಾಘೋರೇ ಕುಂಭೀಪಾಕೇ ನಿಪಾತಿತಾಃ ॥೭೪೪॥

ಏತೈರ್ಭುಕ್ತಂ ದಿವಾ ಪೂರ್ವಂ ಸ್ವೇಚ್ಛಯಾ ಸೋಮವಾಸರೇ ।
ಅತ ಏವಾತಿಸಂತಪ್ತೇ ಮೂತ್ರಕುಂಡೇ ನಿಪಾತಿತಾಃ ॥೭೪೫॥

ಕಾಲಾಷ್ಟಮೀ ವ್ರತಂ ತ್ಯಕ್ತ್ವಾ ಏತೈಃ ಪೂರ್ವಂ ದುರಾತ್ಮಭಿಃ ।
ಅತ ಏವಾತಿಸಂತಪ್ತೇ ಮೂತ್ರಕುಂಡೇ ನಿಪಾತಿತಾಃ ॥೭೪೬॥

---

ನೈವೇದ್ಯವನ್ನು ಎಂದೂ ಭಕ್ಷಿಸಲಿಲ್ಲ. ಆದರಿಂದಲೇ ಕ್ರಿಮಿಭೂಯಿಷ್ಠವಾದ ಅಮೇಧ್ಯವನ್ನು ಇಲ್ಲಿ ಭಕ್ಷಿಸುತ್ತಿರುವರು. ॥೭೪೦-೭೪೧॥

ಇವರು ಶಿವತೀರ್ಥವನ್ನು ಎಂದೂ ಪಾನಮಾಡದಿದ್ದುದರಿಂದ ಇಲ್ಲಿ ನಾಯಿಯ ಜೊಲ್ಲನ್ನು ಕುಡಿಯುತ್ತಿರುವರು. ಮಹೇಶನಿರ್ಮಾಲ್ಯವನ್ನು ಆಘ್ರಾಣಿಸದಿರುವವರು ಅಮೇಧ್ಯಗಂಧವನ್ನೂ, ಶಿವರಾತ್ರಿವ್ರತಮಾಡದಿರುವ ದುರಾತ್ಮರು ಕುಂಭೀಪಾಕನರಕಭೋಗವನ್ನೂ ಅನುಭವಿಸುತ್ತಿರುವರು. ॥೭೪೨-೭೪೩-೭೪೪॥

ಸೋಮವಾರ ಮಧ್ಯಾಹ್ನವೇ ಇವರು ಶಿವಾರ್ಚನೆಮಾಡದೆ ಊಟಮಾಡಿರುವುದರಿಂದ ಮೂತ್ರಕುಂಡದಲ್ಲಿ ಬಿದ್ದು ಓಡಾಡುತ್ತಿರುವರು. ಈ ದುಷ್ಟರು ಕಾಲಾಷ್ಟಮೀವ್ರತಮಾಡದಿರುವುದರಿಂದ ಇವರಿಗೂ ಅದೇ ಶಿಕ್ಷೆಯನ್ನು ವಿಧಿಸಲಾಗಿದೆ. ॥೭೪೫-೭೪೬॥

ಏತೈರುಕ್ತಾ ದೇವದೇವೇ ಶಿವೇ ವಿಷ್ಣ್ವಾದಿಸಾಮ್ಯತಾ ।
ಅತ ಏವಾತಿಸಂತಪ್ತೈರ್ನಿಪೀಡ್ಯಂತೇ ಶರೋತ್ಕರೈಃ ॥೭೪೭॥

ಅನ್ಯಸಾಧಾರಣತ್ವೇನ ಯಚ್ಛಿವಂ ಮನುತೇ ಪ್ರಭುಂ ।
ಸ ಸಂತತಂ ತಪ್ತಶಸ್ತ್ರೈಃ ಪೀಡಿತೋಽತ್ರಾಧಿತಿಷ್ಠತಿ ॥೭೪೮॥

ಏತಾದೃಶಾನ್ ದುರಾಚಾರಾನನಂತಾನ್ನರಕಸ್ಥಿತಾನ್ ।
ದೃಷ್ಟ್ವಾಹಮಪಿ ಕ್ಲಿಶ್ಯಾಮಿ ಕದಾಚಿನ್ಮುನಿಸತ್ತಮ ॥೭೪೯॥

ಸಂತಿ ಬಿಲ್ವಾನಿ ಹಸ್ತೇನ ಪ್ರಾಪ್ಯಾನಿ ಶಿವಪೂಜನೇ ।
ನೈವಾಸೀನ್ಮತಿರೇತೇಷಾಂ ಸ್ಥಿತಾನಾಂ ನರಕಾಲಯೇ ॥೭೫೦॥

ಜಲಮಪ್ಯಮಲಂ ಲಿಂಗೇ ದಾತುಂ ಶಕ್ತಿರಪಿ ಸ್ಥಿತಾ ।
ತಥಾಪಿ ತತ್ಪರಿತ್ಯಾಗಾತ್ಪತಂತಿ ನರಕೇ ಜನಾಃ ॥೭೫೦॥

ಯಥೇಷ್ಟಂ ಭುವಿ ಭಸ್ಮಾಸ್ತಿ ಸರ್ವಪಾತಕಶೋಧಕಂ ।
ತಥಾಪಿ ತತ್ಪರಿತ್ಯಾಗಾತ್ಪತಂತಿ ನರಕೇ ಜನಾಃ ॥೭೫೨॥

ಮಹಾದೇವಸ್ತುತಿಂ ಕರ್ತುಂ ವಾಗಸ್ತಿ ವಶವರ್ತಿನೀ ।
ತಥಾಪಿ ತತ್ಪರಿತ್ಯಾಗಾತ್ಪತಂತಿ ನರಕೇ ಜನಾಃ ॥೭೫೩॥

---

ದೇವದೇವನಾದ ಶಂಕರನನ್ನು ವಿಷ್ಣ್ವಾದಿದೇವತೆಗಳಿಗೆ ಸಮನೆಂದು ತಿಳಿದಿದ್ದ ಇವರನ್ನು ಕಾದ ಬಾಣಗಳಿಂದ ಪೀಡಿಸುತ್ತಿರುವೆನು. ಶಂಕರನನ್ನು ಸಾಮಾನ್ಯ ದೇವತೆಯೆಂದು ತಿಳಿದಿರುವವರಿಗೆಲ್ಲಾ ಇದೇ ಕಾದ ಶಸ್ತ್ರಗಳಿಂದ ಹಿಂಸೆಯೊದಗುತ್ತದೆ. ॥೭೪೭-೭೪೮॥

ಹೀಗೆ ಕಷ್ಟಪಡುತ್ತಿರುವ ಪಾಪಿಗಳನ್ನು ನೋಡಿ ನನಗೆ ಒಂದು ವಿಧವಾದ ಚಿಂತೆಯುಂಟಾಗುತ್ತದೆ. ಲೋಕದಲ್ಲಿ ಬಿಲ್ವಪತ್ರೆಗಳು ಅತಿ ಸುಲಭವಾಗಿ ದೊರೆಯುತ್ತವೆ. ಶಿವಲಿಂಗಗಳು ಎಲ್ಲೆಲ್ಲಿಯೂ ಗೋಚರಿಸುತ್ತಿವೆ. ಹೀಗಿರುವಾಗ ಸುಲಭವಾಗಿ ಶಿವಾರ್ಚನೆಮಾಡಿ, ನರಕವನ್ನು ಹೊಂದದಿರುವ ಬುದ್ಧಿಯು ಪ್ರಾಪ್ತವಾಗದೆ ಹೋಯಿತಲ್ಲಾ ಎಂದು ನಿಜವಾಗಿಯೂ ದುಃಖಪಡುವೆನು. ॥೭೪೯-೭೫೦॥

ಶಿವಾಭಿಷೇಕಕ್ಕೆ ನಿರ್ಮಲವಾದ ಜಲವಿದೆ ಪಾಪನಾಶಕವಾದ ಭಸ್ಮವಿದೆ. ಶಿವಸ್ತುತಿಮಾಡಲು ಮಾತುಗಳು ಸ್ವಾಧೀನವಾಗಿವೆ ಪ್ರದಕ್ಷಿಣೆಮಾಡಲು ಕಾಲುಗಳು

ಶಿವಪ್ರದಕ್ಷಿಣಂ ಕರ್ತುಂ ಸ್ವವಶೌ ಚರಣೌ ಸ್ಥಿತೌ ।
ತಥಾಪಿ ತತ್ಪರಿತ್ಯಾಗಾತ್ಪತಂತಿ ನರಕೇ ಜನಾಃ ॥೭೫೪॥

ಶಿವಾಯ ಪ್ರಣತಿಂ ಕರ್ತುಂ ಶರೀರಂ ಸ್ವವಶಂಸ್ಥಿತಂ ।
ತಥಾಪಿ ತತ್ಪರಿತ್ಯಾಗಾತ್ಪತಂತಿ ನರಕೇ ಜನಾಃ ॥೭೫೫॥

ಮಹೇಶಕೀರ್ತನಂ ಕರ್ತುಂ ರಸನಾ ಸ್ವವಶಾ ಸ್ಥಿತಾ ।
ತಥಾಪಿ ತತ್ಪರಿತ್ಯಾಗಾತ್ಪತಂತಿ ನರಕೇ ಜನಾಃ ॥೭೫೬॥

ಮಹೇಶಸ್ಮರಣಂ ಕರ್ತುಂ ಸ್ವಾಂತಂ ಚ ಸ್ವವಶೇಸ್ಥಿತಂ ।
ತಥಾಪಿ ತತ್ಪರಿತ್ಯಾಗಾತ್ಪತಂತಿ ನರಕೇ ಜನಾಃ ॥೭೫೭॥

ಹಾ ಹಾ ತ್ಯಕ್ತಶಿವಾಚಾರಾ ನರಾಸ್ಸರ್ವೇಽಪಿ ಪಾಮರಾಃ ।
ಕಥಂ ಪತಂತಿ ನರಕೇ ಶಲಭಾ ಇವ ಪಾವಕೇ ॥೭೫೮॥

ಶೈವಾಚಾರವಿಹೀನಾನಾಮೇತೇಷಾಂ ನರಕಾಲಯಾತ್ ।
ನ ಕದಾಪಿ ಮುನಿಶ್ರೇಷ್ಠ ನಿಷ್ಕೃತಿಸ್ಸತ್ಯಮುಚ್ಯತೇ ॥೭೫೯॥

ವಿಷ್ಣುರಪ್ಯಥವಾ ಬ್ರಹ್ಮಾ ಶೈವಧರ್ಮವಿವರ್ಜಿತಃ ।
ತಸ್ಯಾಪಿ ನರಕಾದ್ಘೋರಾನ್ನಿಷ್ಕೃತಿರ್ನ ಮುನೇ ಧ್ರುವಂ ॥೭೬೦॥

---

ಶಕ್ತವಾಗಿರುತ್ತವೆ. ನಮಸ್ಕಾರ ಮಾಡಲು ದೇಹವು ಅಧೀನದಲ್ಲಿರುವುದು. ಮಹೇಶ್ವರನನ್ನು ಹೊಗಳಲು ನಾಲಗೆಯು ಸಿದ್ಧವಾಗಿರುವುದು. ಸ್ಮರಣೆಮಾಡಲು ಮನಸ್ಸು ಪ್ರವರ್ತಿಸುವುದು. ಆಷ್ಟಾದರೂ ಈ ಕಾರ್ಯಗಳಿಂದ ಶಿವಾನುಗ್ರಹವನ್ನು ಪಡೆಯದೆ ಘೋರವಾದ ನರಕಕ್ಕೆ ಬೀಳುತ್ತಲಿರುವರು. ಅಯ್ಯೋ, ಕಷ್ಟ ||೭೫೧-೭೫೨-೭೫೩-೭೫೪-೭೫೫-೭೫೬-೭೫೭||

ಅಯ್ಯೋ! ಅಜ್ಞಾನಿಗಳಾದ ಕೆಲವರು ಶೈವಧರ್ಮವನ್ನು ಅವಲಂಬಿಸದೆ ನಾಸ್ತಿಕರಾಗಿದ್ದು, ಬೆಂಕಿಯಲ್ಲಿ ಪತಂಗದ ಹುಳುಗಳು ಬೀಳುವಂತೆ, ಕೊನೆಯಲ್ಲಿ ನರಕಕ್ಕೆ ಈಡಾಗುವರು. ||೭೫೮||

ಶಿವಪ್ರೀತಿಕರಗಳಾದ ಆಚಾರಗಳಿಂದ ದೂರರಾದವರಿಗೆ ಎಂದಿಗೂ ನರಕ ವಾಸವು ತಪ್ಪುವುದಿಲ್ಲ. ಇದು ನಿಜ. ವಿಷ್ಣುವೇ ಆಗಲಿ, ಬ್ರಹ್ಮನೇ ಆಗಲಿ, ಶಿವ ಧರ್ಮಾನುಯಾಯಿಯಾಗದಿದ್ದರೆ ಅವನಿಗೂ ನರಕವಾಸವು ತಪ್ಪುವುದಿಲ್ಲ ಇದು ನಿಜ. ||೭೫೯-೭೬೦||

ಶೈವಧರ್ಮರತಾ ಮರ್ತ್ಯಾ ಭಿತ್ವಾಂತಃಸೂರ್ಯಮಂಡಲಂ ।
ಪ್ರಯಾಂತಿ ಶಿವಸಾಯುಜ್ಯಂ ಸ್ವೇಷ್ಟಬಂಧುಸಮನ್ವಿತಾಃ ॥೭೬೧॥

ಮುನೇ ಚರಮದೇಹಾನಾಂ ಶೈವಾಚಾರರತಾತ್ಮನಾಂ ।
ಮಹೇಶ್ವರಪ್ರಸಾದೇನ ಮುಕ್ತಿರ್ಭವತಿ ವಸ್ತುತಃ ॥೭೬೨॥

ಮಲ್ಲಿಂಗಪೂಜನಂ ಶ್ರೌತಂ ಮೋಕ್ಷದಂ ಸುಲಭಂ ಮುನೇ ।
ಕೃತಂ ಯೇನ ಪ್ರಯತ್ನೇನ ಸ ಮುಕ್ತೋ ಭವತಿ ಧ್ರುವಂ ॥೭೬೩॥

ಮೃಲ್ಲಿಂಗಪೂಜನಂ ಶ್ರೌತಂ ಸರ್ವಕಾಮಪ್ರದಂ ಮುನೇ
ಕೃತಂ ಯೇನ ಪ್ರಯತ್ನೇನ ಸ ಮುಕ್ತೋ ಭವತಿ ಧ್ರುವಂ ॥೭೬೪॥

ಮೃಲ್ಲಿಂಗಪೂಜಾಮಾತ್ರೇಣ ಸದ್ಯಸ್ತುಷ್ಯತಿ ಶಂಕರಃ ।
ಸಂತುಷ್ಟಸ್ಸ ದದಾತ್ಯೇವ ಭುಕ್ತಿಂ ಮುಕ್ತಿಂ ಚ ವಸ್ತುತಃ ॥೭೬೫॥

ಮೃಲ್ಲಿಂಗಪೂಜನಂ ಶ್ರೌತಂ ರಾಜ್ಯಂ ಸ್ವರ್ಗಾಪವರ್ಗದಂ
ತತ್ಕಲ್ಪಲತಿಕೇವೇಷ್ಟಂ ಕಿಂ ಕಿಂ ನೈವ ಪ್ರಯಚ್ಛತಿ ॥೭೬೬॥

---

ಶೈವಧರ್ಮದಲ್ಲಿ ಮುಂದುವರಿದಿರುವವರು ಸೂರ್ಯಮಂಡಲವನ್ನು ಭೇದಿಸಿಕೊಂಡು, ಇಷ್ಟಬಂಧುಗಳೊಡನೆ ಶಿವಸಾಯುಜ್ಯವನ್ನು ಹೊಂದುವರು. ಶೈವಾಚಾರದಲ್ಲಿ ಆಸಕ್ತರಾದವರಿಗೆ ಮಹೇಶ್ವರಾನುಗ್ರಹದಿಂದ ಅದೇ ಕೊನೆಯ ದೇಹವಾಗಿ ಮುಂದೆ ಜನ್ಮ ಪ್ರಾಪ್ತಿಯಿಲ್ಲದ ಮೋಕ್ಷವೇ ಲಭಿಸುವುದು. ಇದು ನಿಜ ॥೭೬೧-೭೬೨॥

ಮೃತ್ತಿಕಾಲಿಂಗಾರಾಧನೆಯು ಪ್ರತ್ಯಕ್ಷವಾದುದು. ಭಕ್ತರಿಗೆ ಸಕಲೇಷ್ಟಾರ್ಥಗಳನ್ನೂ ಒದಗಿಸಿ ಅಂತ್ಯದಲ್ಲಿ ಮೋಕ್ಷವನ್ನು ಅನುಗ್ರಹಿಸುವುದು. ಯಾರು ಈ ಮೃಲ್ಲಿಂಗಪೂಜೆಯನ್ನು ಭಕ್ತಿಯಿಂದಾಚರಿಸುವರೋ ಅವರು ನಿಜವಾಗಿಯೂ ಮುಕ್ತರೆನಿಸುವರು. ॥೭೬೩-೭೬೪॥

ಕೇವಲ ಮೃನ್ಮಯಲಿಂಗಾರಾಧನೆಯಿಂದಲೇ ಶಂಕರನು ತೃಪ್ತಿಗೊಳ್ಳುವನು. ಆದರಿಂದ ಭಕ್ತನಿಗೆ ಭುಕ್ತಿಯೂ, ಮುಕ್ತಿಯೂ ಅನಾಯಾಸವಾಗಿ ಲಭಿಸುವುದು. ಅಷ್ಟೇ ಅಲ್ಲ. ಆ ಮೃಲ್ಲಿಂಗಪೂಜೆಯು ಕಲ್ಪಲತೆಯಂತೆ ಭಕ್ತನು ಕೇಳಿದ ರಾಜ್ಯಾದಿ ಸಕಲ ಇಷ್ಟಾರ್ಥಗಳನ್ನೂ ನೆರವೇರಿಸುವುದು. ॥೭೬೫-೭೬೬॥

ಶಿವೈಕಶರಣಾಶ್ಶೈವಾಃ ಶಿವಲಿಂಗಾರ್ಚನಪ್ರಿಯಾಃ ।
ಭುಕ್ತ್ವಾ ಸ್ವಾಭೀಪ್ಸಿತಾನ್ ಭೋಗಾನಂತೇ ಮುಕ್ತಾ ಭವಂತಿ ಚ॥೭೬೭॥

ಶೈವೇಭ್ಯ ಏವ ದಾಸ್ಯಾಮಿ ಮುಕ್ತಿಮಿತ್ಯಾಹ ಶಂಕರಃ ।
ಅತೋ ಮುನೇ ತದನ್ಯಾನಾಂ ಮುಕ್ತಿರತ್ಯಂತದುರ್ಲಭಾ ॥೭೬೮॥

ಯೇನ ಚೀರ್ಣಂ ಪ್ರಯತ್ನೇನ ಶ್ರೌತಂ ಪಾಶುಪತಂ ವ್ರತಂ ।
ತೇನ ಲಬ್ಧಾ ಮುಕ್ತಿಕಾಂತಾ ಮಹಾದೇವಪ್ರಸಾದತಃ ॥೭೬೯॥

ಯೇನ ಪಂಚಾಕ್ಷರೋ ಜಪ್ತೋ ಭಸ್ಮೋದ್ಧೂಲನಪೂರ್ವಕಂ ।
ತೇನ ಲಬ್ಧಾ ಮುಕ್ತಿಕಾಂತಾ ಮಹಾದೇವಪ್ರಸಾದತಃ ॥೭೭೦॥

ಯೇನಾರ್ಚಿತೋ ಮಹಾದೇವೋ ಭಸ್ಮೋದ್ಧೂಲನಪೂರ್ವಕಂ ।
ತೇನ ಲಬ್ಧಾ ಮುಕ್ತಿಕಾಂತಾ ಮಹಾದೇವಪ್ರಸಾದತಃ ॥೭೭೧॥

ಯೇನ ಸ್ಮೃತೋ ಮಹಾದೇವೋ ಭಸ್ಮೋದ್ಧೂಲನಪೂರ್ವಕಂ ।
ತೇನ ಲಬ್ಧಾ ಮುಕ್ತಿಕಾಂತಾ ಮಹಾದೇವಪ್ರಸಾದತಃ ॥೭೭೨॥

ಯೇನ ಧ್ಯಾತೋ ಮಹಾದೇವೋ ಭಸ್ಮೋದ್ಧೂಲನಪೂರ್ವಕಂ ।
ತೇನ ಲಬ್ಧಾ ಮುಕ್ತಿಕಾಂತಾ ಮಹಾದೇವಪ್ರಸಾದತಃ ॥೭೭೩॥

ಶೈವರಿಗೆ ಶಿವನೇ ಮುಖ್ಯರಕ್ಷಕನು. ಶಿವಾರ್ಚನೆಯೇ ಅವರ ಪ್ರೀತಿಯ ಕಾರ್ಯ. ಆದರಿಂದಲೇ ಅವರು ಸಕಲ ಭೋಗಭಾಗ್ಯಗಳನ್ನೂ ಹೊಂದಿ ಕಡೆಗೆ ಮುಕ್ತಿಯನ್ನು ಪಡೆಯುವರು. ಶಂಕರನು ತನ್ನ ಭಕ್ತರಿಗೆ ನಿಜವಾಗಿಯೂ ಮುಕ್ತಿಯನ್ನು ಅನುಗ್ರಹಿಸುವೆನೆಂದು ವರವಿತ್ತಿರುವನು. ಆದ್ದರಿಂದ ಶೈವೇತರರಿಗೆ ಮೋಕ್ಷಪ್ರಾಪ್ತಿಯಾಗುವುದು ಅತ್ಯಂತ ದುರ್ಲಭವೆಂದೇ ನನ್ನ ಅಭಿಪ್ರಾಯ. ॥೭೬೭-೭೬೮॥

ಯಾರು ಪಾಶುಪತವ್ರತವನ್ನು ಸ್ವೀಕರಿಸಿಗೊಳಿಸಿರುವರೋ, ಯಾರು ಭಸ್ಮೋದ್ಧೂಲನಪೂರ್ವಕವಾಗಿ ಶಿವಪಂಚಾಕ್ಷರೀಮಂತ್ರವನ್ನು ಪಠಿಸಿರುವರೋ ಅಂತಹವರಿಗೆ ಈಶ್ವರಾನುಗ್ರಹದಿಂದ ಮೋಕ್ಷವು ಲಭಿಸುವುದು. ॥೭೬೯-೭೭೦॥

ಭಸ್ಮಲೇಪನ ಮಾಡಿಕೊಂಡು, ಮಹಾದೇವನನ್ನು ಸ್ಮರಿಸಿದವರಿಗೂ ಅರ್ಚಿಸಿದವರಿಗೂ, ಧ್ಯಾನಿಸಿದವರಿಗೂ. ಶಿವಾನುಗ್ರಹದಿಂದ ಮುಕ್ತಿಯು ದೊರಕುವುದು.

ಬಹುನೋಕ್ತೇನ ಕಿಂ ವಾಕ್ಯಂ ಸತ್ಯಮೇತನ್ಮುನೇ ಶೃಣು ।
ಸರ್ವಾನ್ ದೇವಾನ್ಪರಿತ್ಯಜ್ಯ ಶಿವಃ ಪೂಜ್ಯೋ ಮುಮುಕ್ಷುಭಿಃ ॥೭೭೪॥

ಇತ್ಯುಕ್ತಂ ತದ್ವಚಃ ಶ್ರುತ್ವಾ ವಸಿಷ್ಠೋ ಹೃಷ್ಟಮಾನಸಃ ।
ಸಶಿಷ್ಯಃ ಸ್ವಾಶ್ರಮಾಭ್ಯಾಶಂ ಯಮೇನ ಪ್ರೇರಿತೋ ಯಯೌ ॥೭೭೫॥

॥ ಅಗಸ್ತ್ಯ ಉವಾಚ ॥

ತತಃ ಪರಂ ಯಮೇನೋಕ್ತಂ ವಚಃ ಶ್ರುತ್ವಾಖಿಲಾರ್ಥದಂ ।
ವಸಿಷ್ಠಶಿಷ್ಯಃ ಶತ್ಯಂತೋ ಲಿಂಗಪೂಜಾಪರೋಽಭವತ್ ॥೭೭೬॥

ಸ ಕೃತ್ವಾ ಮೃನ್ಮಯಂ ಲಿಂಗಂ ಸರ್ವಾಭೀಷ್ಟಪ್ರದಾಯಕಂ ।
ಬಿಲ್ವಪತ್ರೈರ್ಭಸ್ಮನಾ ಚ ಪೂಜಯಾಮಾಸ ಭಕ್ತಿತಃ ॥೭೭೭॥

ತತೋ ಮೃನ್ಮಯಲಿಂಗಸ್ಯ ಪೂಜಾಂ ಕೃತ್ವಾ ಶಿವಂ ಸ್ಮರನ್ ।
ತ್ಯಕ್ತದೇಹಃ ಶಿವಂ ಪ್ರಾಪ ಸರ್ವದೇವಶಿಖಾಮಣಿಂ ॥೭೭೮॥

ಅತೋ ಮೃನ್ಮಯಲಿಂಗಸ್ಯ ಪೂಜನಂ ಸರ್ವಕಾಮದಂ ।
ತುಷ್ಟೋ ಭವತಿ ಗೌರೀಶೋ ಯತೋ ಮೃಲ್ಲಿಂಗಪೂಜಯಾ ॥೭೭೯॥

---

ನಿಜ. ಒಟ್ಟಿನಲ್ಲಿ ಎಲೈ ವಸಿಷ್ಠಮಹರ್ಷಿಯೇ, ಮೋಕ್ಷಾಪೇಕ್ಷಿಗಳಾದವರು ಸಕಲ ದೇವತೆಗಳನ್ನೂ ದೂರಮಾಡಿ, ಶಂಕರನನ್ನು ಶರಣುಹೊಂದುವುದು ಲೇಸು.'' ॥೭೭೧-೭೭೨-೭೭೩-೭೭೪-೭೭೫॥

ಎಂದು ಹೇಳಿದ ಯಮನ ಮಾತುಗಳನ್ನು ಕೇಳಿ ವಸಿಷ್ಠಮಹರ್ಷಿಯು ಶಿಷ್ಯಸಮೇತನಾಗಿ ಯಮನ ಅನುಜ್ಞೆಯನ್ನು ಪಡೆದು ಸ್ವಾಶ್ರಮಕ್ಕೆ ತೆರಳಿದನು. ಆ ಋಷಿಯ ಶಿಷ್ಯನಾದರೋ ಯಮನವಾಣಿಯನ್ನು ಸಕಲಾರ್ಥಸಾಧನವೆಂದು ತಿಳಿದು, ಅಲ್ಲಿಂದ ಶಿವಪೂಜಾಪರಾಯಣನಾಗಿರಲು ಮನಸ್ಸು ಮಾಡಿದನು. ॥೭೭೬॥

ಹಾಗೆಯೇ ಸರ್ವಾಭೀಷ್ಟಪ್ರದವಾದ ಮೃತ್ತಿಕಾಲಿಂಗವನ್ನು ನಿರ್ಮಿಸಿಕೊಂಡು, ಅದನ್ನು ಬಿಲ್ವಪತ್ರೆ, ಭಸ್ಮ ಇವುಗಳಿಂದ ಪೂಜಿಸಿ, ಬಾರಿಬಾರಿಗೂ ಶಂಕರನನ್ನೇ ಧ್ಯಾನಿಸುತ್ತಾ, ಕೊನೆಗೆ ದೇಹತ್ಯಾಗ ಮಾಡಿ, ದೇವೋತ್ತಮನಾದ ಶಂಕರನ ಸಾನ್ನಿಧ್ಯವನ್ನು ಪಡೆದನು. ॥೭೭೭-೭೭೮॥

ಆದ್ದರಿಂದ ಸರ್ವಾಭೀಷ್ಟಪ್ರದವಾದ ಮೃಲ್ಲಿಂಗದ ಆರಾಧನೆಯಿಂದ ಶಂಕರನು

ಸಂಪೂಜ್ಯ ಮೃನ್ಮಯಂ ಲಿಂಗಂ ಯೋ ನಿತ್ಯಮನುಮೋದತೇ ।
ತದ್ದ್ವಾರಿ ಮತ್ತಮಾತಂಗಾಸ್ತಿಷ್ಠಂತ್ಯೇವಾಮಿತಾ ಮುನೇ ॥೨೮೦॥

ಮುನೇ ಪಾರ್ಥಿವಲಿಂಗಸ್ಯ ಪೂಜನಂ ಶಂಕರಪ್ರಿಯಂ ।
ಧರ್ಮಾರ್ಥಕಾಮಮೋಕ್ಷಾಣಾಮಚಿರೇಣೈವ ದಾಯಕಂ ॥೨೮೧॥

ಭಸ್ಮಗೋಮಯವಾರ್ಕ್ಷಾದಿ ಲಿಂಗಾನ್ಯಪಿ ಸನಾತನ ।
ಪೂಜನೀಯಾನಿ ಯತ್ನೇನ ಧನಧಾನ್ಯಾದಿವಾಂಛಿಭಿಃ ॥೨೮೨॥

ಏಕೈಕಮಪಿ ತಲ್ಲಿಂಗಂ ಧನಧಾನ್ಯಪ್ರದಂ ಮುನೇ
ಮೋಕ್ಷದಂ ಚ ತಥಾಪ್ಯುಕ್ತಫಲಂ ಭವತಿ ತತ್ಕ್ಷಣೇ ॥೨೮೩॥

ಮುನೇ ಶಿವಾರ್ಚನಂ ಯಸ್ಮಾಚ್ಚತುರ್ವರ್ಗಫಲಪ್ರದಂ ।
ತಸ್ಮಾದವಶ್ಯಂ ತತ್ಕಾರ್ಯಂ ಚತುರ್ವರ್ಗಫಲಾರ್ಥಿಭಿಃ ॥೨೮೪॥

ಮುನೇ ಭಸ್ಮಾದಿಲಿಂಗಾನಿ ಮೋಕ್ಷದಾನ್ಯಪಿ ವಸ್ತುತಃ ।
ಭವಂತಿ ಭಕ್ತಾನುದ್ಧರ್ತುಂ ಧನಧಾನ್ಯಾನ್ನದಾನ್ಯಪಿ ॥೨೮೫॥

ತೃಪ್ತನಾಗುವನು. ಯಾವನು ನಿತ್ಯವೂ ಈ ವ್ರತವನ್ನಾಚರಿಸುವನೋ, ಅವನು ಗಜಾಂತವಾದ ಐಶ್ವರ್ಯವನ್ನು ಪಡೆದು ಸುಖಿಸುವನು. ॥೨೭೯-೨೮೦॥

ಎಲೈ ಮಹರ್ಷಿಯೇ, ಮೃತ್ತಿಕಾಲಿಂಗದ ಆರಾಧನೆಯು ಶಂಕರನಿಗೆ ಅತಿಪ್ರಿಯವಾದದ್ದು ಮತ್ತು ಧರ್ಮಾದಿಪುರುಷಾರ್ಥಗಳನ್ನು ಒಡನೆಯೇ ಒದಗಿಸಬಲ್ಲುದು. ಇದರಂತೆಯೇ ಭಸ್ಮ, ಗೋಮಯ, ವೃಕ್ಷ ಇವುಗಳಿಂದ ನಿರ್ಮಿತಗಳಾದ ಶಿವಲಿಂಗಗಳೂ ಪೂಜ್ಯವಾದವುಗಳೇ. ಇವುಗಳ ಆರಾಧನೆಯಿಂದಲೂ ಭಕ್ತರು ಧನಧಾನ್ಯಾದಿ ಫಲಗಳನ್ನು ಸಂಪಾದಿಸಬಹುದು. ॥೨೮೧-೨೮೨॥

ಮೇಲೆ ಹೇಳಿದ ಒಂದೊಂದು ಲಿಂಗವೂ ಧನಧಾನ್ಯಪ್ರದವಾದವು. ಮತ್ತು ಮುಕ್ತಿದಾಯಕವಾದುದು. ಒಟ್ಟಿನಲ್ಲಿ ಶಿವಾರ್ಚನೆಯೇ ಮೋಕ್ಷಪ್ರದವಾದುದು. ಆದ್ದರಿಂದ ಭಕ್ತರು ಧರ್ಮಾದಿಚತುರ್ವಿಧಪುರುಷಾರ್ಥಗಳನ್ನು ಪಡೆಯುವರು ॥೨೮೩-೨೮೪॥

ವಾಸ್ತವವಾಗಿ ಎಲ್ಲಾ ಶಿವಲಿಂಗಗಳೂ ಧನಧಾನ್ಯಪ್ರದವಾಗಿ ಭಕ್ತಾನುಷ್ಠಾನಕ್ಕೆ ಯೋಗ್ಯವಾದವುಗಳು ತನ್ನನ್ನು ಆರಾಧನೆಮಾಡಿ ತೃಪ್ತಿಪಡಿಸಿದವರಿಗೆ

ಶಿವೋ ದದಾತಿ ವಿಷ್ಣುತ್ವಂ ಸಂತುಷ್ಟೋ ಲಿಂಗಪೂಜಯಾ ।
ತಥಾ ಬ್ರಹ್ಮತ್ವಮಿಂದ್ರತ್ವಂ ದದಾತ್ಯೇವ ಮಹೇಶ್ವರಃ ॥೨೬೬॥

ವಿನಾ ತಪೋಭಿರ್ದಾನೈಶ್ಚ ಕೇವಲಂ ಶಿವಪೂಜಯಾ ।
ಮುನೇ ಭವಂತ್ಯಭೀಷ್ಟಾನಿ ಶ್ರೀಮಹೇಶಪ್ರಸಾದತಃ ॥೨೬೭॥

ಯತ್ಪಾದಪದ್ಮಮಭ್ಯರ್ಚ್ಯ ಸ್ವನೇತ್ರಾಬ್ಜೇನ ಕೇಶವಃ ।
ಚಕ್ರಂ ಪ್ರಾಪ ಸ ಗೌರೀಶಃ ಪೂಜನೀಯೋ ಮುಮುಕ್ಷುಭಿಃ ॥೨೬೮॥

ಸ್ತುವಂತಿ ಯಂ ಸದಾ ವೇದವೇದಾಂತಾಶ್ಚ ಸಸಂಹಿತಾಃ ।
ಸ ದೇವದೇವೋ ಗೌರೀಶಃ ಪೂಜನೀಯಃ ಪ್ರಯತ್ನತಃ ॥೨೬೯॥

ಯಮಾಹುರ್ಗಿರಿಜಾನಾಥಂ ಯಮಾಹುರ್ಮದನಾಂತಕಂ ।
ಸ ದೇವದೇವೋ ಗೌರೀಶಃ ಪೂಜನೀಯಃ ಪ್ರಯತ್ನತಃ ॥೨೭೦॥

ಯಮಾಹುರ್ವಿಷ್ಣುಜನಕಂ ಯಮಾಹುರ್ಜನಕಂ ವಿಧೇಃ ।
ಸ ದೇವದೇವೋ ಗೌರೀಶಃ ಪೂಜನೀಯಃ ಪ್ರಯತ್ನತಃ ॥೨೭೧॥

ಯಮಾಹುಃ ಸ್ಕಂದಜನಕಂ ಯಮಾಹುಸ್ಸರ್ವಗಂ ಪ್ರಭುಂ ।
ಸ ದೇವದೇವೋ ಗೌರೀಶಃ ಪೂಜನೀಯಃ ಪ್ರಯತ್ನತಃ ॥೨೭೨॥

ಶಂಕರನು ವಿಷ್ಣು, ಬ್ರಹ್ಮ, ಇಂದ್ರ ಇವರ ಪದವಿಯನ್ನು ಕೊಡುವನು. ॥೨೬೫-೨೬೬॥

ತಪಸ್ಸು, ದಾನ ಇವುಗಳನ್ನು ಮಾಡದಿದ್ದರೂ ಕೇವಲ ಈಶ್ವರಾರಾಧನೆಯೇ ಭಕ್ತರ ಇಷ್ಟಾರ್ಥಗಳನ್ನು ಸಲ್ಲಿಸುವುದು. ವಿಷ್ಣುವು ತನ್ನ ನೇತ್ರಕಮಲಗಳಿಂದ ಶಂಕರನ ಪಾದಗಳನ್ನರ್ಚಿಸಿ, ಸುದರ್ಶನ ಚಕ್ರವನ್ನು ಸಂಪಾದಿಸಿದನು. ಅಂತಹ ಪರಶಿವನನ್ನು ಮೋಕ್ಷಾರ್ಥಿಗಳು ತಪ್ಪದೆ ಪೂಜಿಸಬೇಕಲ್ಲವೆ! ॥೨೬೭-೨೬೮॥

ಯಾರನ್ನು ವೇದವೇದಾಂತಗಳೂ, ಸಂಹಿತೆಗಳೂ ವಿಧವಿಧವಾಗಿ ಸ್ತುತಿಸುತ್ತಿವೆಯೋ, ಯಾರನ್ನು ಗೌರೀಪತಿ. ಮದನಾಂತಕನೆಂದು ಹೊಗಳುವರೋ, ಅಂತಹ ದೇವದೇವನನ್ನು ಸದಾ ಪೂಜಿಸಬೇಕು. ॥೨೬೯-೨೭೦॥

ವಿಷ್ಣು, ಬ್ರಹ್ಮ, ಸ್ಕಂದ ಮುಂತಾದವರಿಗೆ ಜನಕನೆನಿಸಿ, ಸರ್ವವ್ಯಾಪಿಯಾಗಿರುವ ವಿಶ್ವವ್ಯಾಪಿಯೂ ವಿಶ್ವಾಧಿಕನೂ ಎನಿಸಿರುವ ರುದ್ರನನ್ನು ಸರ್ವದಾ ಪೂಜಿಸ

ಮುನೇ ವಿಶ್ವಾಧಿಕಂ ರುದ್ರಂ ಯಮಾಹುಃ ಶ್ರುತಯೋಽಖಿಲಾಃ ।
ಸ ದೇವದೇವೋ ಗೌರೀಶಃ ಪೂಜನೀಯಃ ಪ್ರಯತ್ನತಃ ॥೭೯೩॥

ಮುನೇ ವಿಶ್ವಾಧಿಕಂ ರುದ್ರಮಭ್ಯರ್ಚ್ಯ೯ಂ ಸರ್ವಕಾಮದಂ ।
ಪರಿತ್ಯಜ್ಯಾರ್ಚಯಂತ್ಯನ್ಯಾನಮರಾನ್ ಪಾಪಿನೋ ನರಾಃ ॥೭೯೪॥

ಕೋ ನು ವಿಶ್ವಾಧಿಕಾದ್ರುದ್ರಾದನ್ಯಂ ಪೂಜಯತಿ ಭ್ರಮಾತ್ ।
ಋತೇ ಮಹಾಪಾತಕಿನಂ ಪಾಪಿಷ್ಠಂ ನರಕಾಶ್ರಯಂ ॥೭೯೫॥

ಸರ್ವದೇವೋತ್ತಮಂ ಸಾಂಬಂ ಯೋ ನಾರ್ಚಯತಿ ಸಂತತಂ ।
ಸ ದುರಾತ್ಮಾ ಸ ಪಾಪಿಷ್ಠಃ ಸ ಸುರಾಪೀ ಸ ಪುಲ್ಕಸಃ ॥೭೯೬॥

ಯೋಽನ್ಯಾಮರಸಮತ್ವೇನ ಜಾನಾತಿ ಶಿವಮೀಶ್ವರಂ ।
ಸ ದುರಾತ್ಮಾ ಸ ಪಾಪಿಷ್ಠಃ ಸ ಸುರಾಪೀ ಸ ಪುಲ್ಕಸಃ ॥೭೯೭॥

ಶಿವೇನ ಸಹ ಯೋ ಮೋಹಾತ್ಸುರಮನ್ಯಂ ಪ್ರಪೂಜಯೇತ್ ।
ಸ ದುರಾತ್ಮಾ ಸ ಪಾಪಿಷ್ಠಃ ಸ ಸುರಾಪೀ ಸ ಪುಲ್ಕಸಃ ॥೭೯೮॥

ಶಿವಪೀಠೇ ಶಿವಾದನ್ಯಂ ಯಃ ಸ್ಥಾಪಯತಿ ಮೋಹತಃ ।
ಸ ದುರಾತ್ಮಾ ಸ ಪಾಪಿಷ್ಠಃ ಸ ಸುರಾಪೀ ಸ ಪುಲ್ಕಸಃ ॥೭೯೯॥

ಬೇಕು. ಅದರಿಂದಲೇ ಭಕ್ತರ ಸರ್ವೇಷ್ಟಾರ್ಥಗಳೂ ಸಿದ್ಧಿಸುವುವು. ಹೀಗಿರುವಾಗ ಪಾಪಿಮಾನವರು ಇಂತಹ ಪರಶಿವನನ್ನು ಬಿಟ್ಟು ಇತರ ದೇವತೆಗಳನ್ನು ಪೂಜಿಸಲು ಹೋಗುವರು ॥೭೮೯-೭೯೦-೭೯೧-೭೯೨-೭೯೩-೭೯೪॥

ಜಗತ್ಪತಿಯಾದ ಪರಶಿವನನ್ನು ಬಿಟ್ಟು ದೇವತಾಂತರವನ್ನು ಪೂಜಿಸುವವನು ನರಕಭಾಗಿಯಾಗುವ ಮಹಾಪಾಪಿಯೊಬ್ಬನೇ ನಿಜ. ದೇವದೇವೋತ್ತಮನಾದ ಸಾಂಬನನ್ನು ಪೂಜಿಸದವನು ದುಷ್ಟನು, ಪಾಪಿಯು, ಮದ್ಯಪಾಯಿಯು ಅಥವಾ ಚಂಡಾಲನು. ॥೯೫-೯೬॥

ಲೋಕೇಶ್ವರನಾದ ಶಂಕರನನ್ನು ಇತರ ದೇವತೆಗಳಿಗೆ ಸಮನೆಂದು ತಿಳಿದು ಇತರ ದೇವತೆಗಳ ಜೊತೆಯಲ್ಲಿ ಶಂಕರನನ್ನು ಪೂಜಿಸುವವನೂ, ಶಿವಪೀಠದಲ್ಲಿ ಬೇರೊಂದು ದೇವರನ್ನಿಟ್ಟು ಆರಾಧಿಸುವವನೂ, ವಿಷ್ಣ್ವಾದಿದೇವತೆಗಳ ಸಾಮ್ಯ

ವಿಷ್ಣ್ವಾದಿಸುರತುಲ್ಯತ್ವಂ ಯೇ ವದಂತಿ ಮಹೇಶ್ವರೇ ।
ತೇ ಸರ್ವೇ ಜಾರಜಾ ಏವ ತಜ್ಜ್ಞನಸ್ಯಶ್ಚ ಜಾರಜಾಃ ॥೮೦೦॥

ದೇವೋತ್ತಮಂ ಮಹಾದೇವಮನ್ಯಥಾ ಪ್ರವದಂತಿ ಯೇ ।
ತೇ ಸರ್ವೇ ಜಾರಜಾ ಏವ ತಜ್ಜ್ಞನಸ್ಯಶ್ಚ ಜಾರಜಾಃ ॥೮೦೧॥

ಉದ್ಧೂಳನಂ ತ್ರಿಪುಂಡ್ರಂ ಚ ನ ಧೃತಂ ಯೈರ್ದುರಾತ್ಮಭಿಃ ।
ತೇ ಸರ್ವೇ ಜಾರಜಾ ಏವ ತಜ್ಜ್ಞನಸ್ಯಶ್ಚ ಜಾರಜಾಃ ॥೮೦೨॥

ರುದ್ರಾಕ್ಷಾ ನ ಧೃತಾ ಯೈಶ್ಚ ರುದ್ರಾಧ್ಯಾಯಪರಾ ನ ಯೇ ।
ತೇ ಸರ್ವೇ ಜಾರಜಾ ಏವ ತಜ್ಜ್ಞನಸ್ಯಶ್ಚ ಜಾರಜಾಃ ॥೮೦೩॥

ಶಿವಲಿಂಗಾರ್ಚನೇ ಪ್ರೀತಿರ್ನ ಯೇಷಾಂ ಕಲುಷಾತ್ಮನಾಂ ।
ತೇ ಸರ್ವೇ ಜಾರಜಾ ಏವ ತಜ್ಜ್ಞನಸ್ಯಶ್ಚ ಜಾರಜಾಃ ॥೮೦೪॥

ಪಂಚಾಕ್ಷರಜಪೇ ಪ್ರೀತಿರ್ನ ಯೇಷಾಂ ಕಲುಷಾತ್ಮನಾಂ ।
ತೇ ಸರ್ವೇ ಜಾರಜಾ ಏವ ತಜ್ಜ್ಞನಸ್ಯಶ್ಚ ಜಾರಜಾಃ ॥೮೦೫॥

ಶಿವಾರ್ಚನಪರಾ ಧನ್ಯಾ ಮಾನ್ಯಾಃ ಪುಣ್ಯೈಕಮೂರ್ತಯಃ ।
ಯತೋಽನಂತತಪೋರೂಪಶಿವಾಚಾರರತಾಃ ಸ್ಮೃತಾಃ ॥೮೦೬॥

ವನ್ನು ಶಂಕರನಿಗೆ ಹೇಳುವವನೂ, ಜಾರಜರಾದ ಮಾತಾಪಿತೃಗಳಲ್ಲಿ ಜನಿಸಿದವನೆಂದು ತಿಳಿಯಬೇಕು ಮತ್ತು ಅವರೆಲ್ಲ ದುಷ್ಟಪಾಪಿಷ್ಠಾದಿಗಳ ಗುಂಪಿಗೆ ಸೇರಿದವರು. ॥೭೯೭-೭೯೮-೭೯೯-೮೦೦॥

ದೇವಶ್ರೇಷ್ಠನಾದ ಮಹಾದೇವನನ್ನು ಅನ್ಯಥಾ ತಿಳಿಯುವವರೂ, ಭಸ್ಮೋದ್ಧೂಲನ ಭಸ್ಮತ್ರಿಪುಂಡ್ರಧಾರಣೆ ಇವುಗಳಿಲ್ಲದವರೂ, ರುದ್ರಾಕ್ಷಾಭರಣವನ್ನು ಕಿತ್ತೊಗೆದು ರುದ್ರಾಧ್ಯಾಯವನ್ನು ಜಪಿಸದಿರುವವರೂ, ಶಿವಲಿಂಗಾರ್ಚನೆಯಲ್ಲಿ ಅಭಿಮಾನವಿಲ್ಲದ ಪಾಪಿಗಳೂ, ಪಂಚಾಕ್ಷರಜಪದಲ್ಲಿ ಅನಾಸಕ್ತರಾದ ಕಲ್ಮಷಹೃದಯರೂ, ವ್ಯಭಿಚಾರದಿಂದ ಜನಿಸಿದ ಮಾತಾಪಿತೃಗಳ ವಂಶೀಯರೆಂದು ತಿಳಿಯಬೇಕು. ॥೮೦೧-೮೦೨-೮೦೩-೮೦೪-೮೦೫॥

ಯಾರು ಶಿವಾರ್ಚನೆಯಲ್ಲಿ ಮನಸ್ಸಿಡುವರೋ ಅವರೇ ಧನ್ಯರು ಮತ್ತು ಪುಣ್ಯಪುರುಷರು ಏಕೆಂದರೆ ಶೈವಧರ್ಮಾಸಕ್ತಿಯು ಜನಿಸಬೇಕಾದರೆ ಅನೇಕ ತಪಸ್ಸುಗಳ

ಭಾಗ್ಯಭಾಜೋ ಮಹಾದೇವಂ ಭಜಂತಿ ಭವಭೀರವಃ ।
ಭಜತಾಂ ಶ್ರೀಮಹಾದೇವಂ ಭವಬಂಧೋ ನ ಸರ್ವಥಾ ॥೮೦೭॥

ಜನ್ಮಮೃತ್ಯುಜರಾರೋಗಾಃ ನಶ್ಯಂತಿ ಶಿವಪೂಜಯಾ ।
ತಸ್ಮಾದತಿಪ್ರಯತ್ನೇನ ಕರ್ತವ್ಯಂ ಶಿವಪೂಜನಂ ॥೮೦೮॥

ಶಿವಾರ್ಚನಪರೋ ಮರ್ತ್ಯೋ ನ ಬಿಭೇತಿ ಯಮಾದಪಿ ।
ಕಿಂ ಪುನಃ ಜನ್ಮಮರಣಜರಾರೋಗಾದಿಭಿರ್ಮುನೇ ॥೮೦೯॥

ಯತಶ್ಚರಮದೇಹಾನಾಂ ಶಿವಭಕ್ತಿಃ ಪ್ರಜಾಯತೇ ।
ತತೋ ಜನ್ಮಜರಾದಿಭ್ಯೋ ನ ಬಿಭೇತಿ ಶಿವಾರ್ಚಕಃ ॥೮೧೦॥

ಮಹದ್ಭಾಗ್ಯಂ ಶಾಂಭವಾನಾಂ ಶಂಭುಸಂಸಕ್ತಚೇತಸಾಂ ।
ಯತಃ ಪುನರ್ನ ಜನ್ಮಾದಿ ಭಯಂ ತೇಷಾಂ ಮಹಾತ್ಮನಾಂ ॥೮೧೧॥

ಯಸ್ಯ ಶೈವೇ ಭವಾಭೇದಬುದ್ಧಿರ್ಭವತಿ ಭಾಗ್ಯತಃ ।
ಸ ಧನ್ಯಃ ಕೃತಕೃತ್ಯಶ್ಚ ಮಾನ್ಯಸ್ಸರ್ವಾಮರೈರಪಿ । ॥೮೧೨॥

ಆಚರಣೆಯಿಂದ ಪುಣ್ಯವನ್ನು ಸಂಪಾದಿಸಿರಬೇಕು. ಯಾರು ಭಯಭಕ್ತಿಯಿಂದ ಸಂಸಾರದ ದುಃಖವನ್ನು ನಾಶಗೊಳಿಸುವ ಪರಶಿವನನ್ನು ಆರಾಧಿಸುವರೋ ಅಂತಹವರು ಸಂಪೂರ್ಣವಾದ ಭವಬಂಧನದಿಂದ ಮುಕ್ತರಾಗಿ ಮೋಕ್ಷವನ್ನು ಪಡೆಯುವರು. ॥೮೦೬-೮೦೭॥

ಈಶ್ವರಾರಾಧನೆಯಿಂದ ಮಾನವರ ಜನನ, ಮರಣ, ರೋಗ, ಮುಪ್ಪು ಮುಂತಾದ ದುಃಖಗಳು ನಾಶವಾಗುವುವು. ಶಿವಾರ್ಚನಪರನಾದ ಮಾನವನು ಯಮನಿಗೂ ಹೆದರಬೇಕಾಗಿಲ್ಲವೆಂದ. ಹೇಳುವಾಗ ಇನ್ನು ಜನನಮರಣಾದಿಗಳಿಗೆ ಹೆದರತಕ್ಕದ್ದೇನಿದೆ? ಅಂತ್ಯಕಾಲದಲ್ಲಿ ಶಿವಭಕ್ತಿಯೊದಗಿದರಂತೂ ಅಲ್ಲಿಂದ ಮುಂದೆ ಎಂದೂ ಅವರು ಜನನಮರಣಾದಿ ದುಃಖಗಳಿಗೆ ಸಿಲುಕಲಾರರು. ॥೮೦೮-೮೦೯-೮೧೦॥

ಪರಶಿವಸನ್ನಿಧಿಯಲ್ಲಿ [illegible] ಮನಸ್ಸುಳ್ಳ ಶಾಂಭವರ ಜನ್ಮವಂತೂ ಬಹು ಪವಿತ್ರವಾದುದು. ಏಕೆಂದರೆ ಅವರಿಗೆ ಎಂದೂ ಪುನರ್ಜನ್ಮದ ಭಯವೇ ಕಾಣುವುದಿಲ್ಲ. ಯಾವನಿಗೆ ನಿಜವಾದ ಶೈವನಲ್ಲಿ ಈಶ್ವರಬುದ್ಧಿಯೂ ಭಯಭಕ್ತಿಗಳೂ

ಧನ್ಯಾನಾಂ ಶಿವಭಕ್ತಾನಾಂ ಮುಕ್ತಿರ್ನಿರ್ಮಲಚೇತಸಾಂ ।
ಯದ್ಭಾಗ್ಯಂ ತಾದೃಶಂ ಭಾಗ್ಯಂ ಅಮರ್ತ್ಯೈರಪ್ಯಪೇಕ್ಷಿತಂ ॥೮೧೨॥

ಪುರಾತ್ರೈವಾರ್ಭಕಃ ಕಶ್ಚಿದ್ದರಿದ್ರೋ ವ್ಯಾಧಿಪೀಡಿತಃ ।
ಸ ಮುನ್ಯುಪದಿಷ್ಟೋಽತ್ರ ಚಕ್ರೇ ಮೃಲ್ಲಿಂಗಪೂಜನಂ ॥೮೧೪॥

ಸ ತತೋ ವ್ಯಾಧಿನಿರ್ಮುಕ್ತೋ ಯಯೌ ರತ್ನಧನೇಶ್ವರಂ ।
ತೇನ ಸಂಪೂಜಿತೋ ರಾಜ್ಞಾ ಸ ನಿತ್ಯ ಶಿವಪೂಜಕಃ ॥೮೧೫॥

ತಸ್ಯ ರತ್ನಧನೇಶಸ್ಯ ಜ್ಯೇಷ್ಠಪುತ್ರೋ ವಿಶಾರದಃ ।
ನಾನಾರೋಗಸಮಾಕ್ರಾಂತೋ ದುಃಖಿತಸ್ಸ್ಥಿತೋ ಮುನೇ ॥೮೧೬॥

ಸ ರಾಜಾ ತಾದೃಶಂ ಪುತ್ರಂ ಸ್ಮೃತ್ವಾ ಸ್ಮೃತ್ವಾ ಪುನಃಪುನಃ ।
ದುಃಖಸಂವಿಗ್ನಹೃದಯಃ ಸಜಾತೋಽಭೂತ್ತದಾ ಮುನೇ ॥೮೧೭॥

ತಂ ತಾದೃಶಂ ವಿಲೋಕ್ಯಾಥ ಸ ಪುನ ಶಿವಪೂಜಕಃ ।
ಕಿಂ ಕ್ಲಿಶ್ಯಸೇ ನೃಪಶ್ರೇಷ್ಠ ಕಿಮಾ[illegible] ಸಾದರಂ ॥೮೧೮॥

ಉಂಟಾಗುವುದೋ ಅವನೇ ಧನ್ಯನು ಅವನೇ ಕೃತಾರ್ಥನು ಮತ್ತು ಸೇವಪೂಜ್ಯನೂ ಅವನೇ ॥೮೧೧-೮೧೨॥

ಈಶ್ವರಭಕ್ತಿಯಿಂದ ಧನ್ಯರಾಗಿ ನಿರ್ಮಲಮನಸ್ಕರಾದವರಿಗೆ ಒದಗುವ ಭಾಗ್ಯವು ದೇವತೆಗಳಿಗೂ ದೊರಕಲಾರದು. ಹಿಂದೆ ಒಬ್ಬ ಬಡಹುಡುಗನು ವ್ಯಾಧಿಪೀಡಿತನಾಗಿ ಇಲ್ಲಿ ನರಳುತ್ತಿದ್ದಾಗ, ನನ್ನ ಉಪದೇಶದಂತೆ ಆತನು ಮೃಲ್ಲಿಂಗಾರ್ಚನೆಯನ್ನು ಮಾಡಿದನು ॥೮೧೩-೮೧೪॥

ಒಡನೆಯೇ ಆ ಬಾಲನು ವ್ಯಾಧಿನಿರ್ಮುಕ್ತನಾಗಿ, ರಾಜನಾದ ರತ್ನಧನೇಶ್ವರನ ಸಮೀಪಕ್ಕೆ ಹೋದನು. ಅಲ್ಲಿ ರಾಜನಿಂದ ಪೂಜಿತನಾಗಿರಲು, ಆ ರಾಜನ ಹಿರಿಯಮಗನೊಬ್ಬನು ನಾನಾ ವ್ಯಾಧಿಪೀಡಿತನಾಗಿ ದುಃಖದ ಕಾಲಕಳೆಯುತ್ತಿದ್ದನು. ॥೮೧೫-೮೧೬॥

ಅಂತಹ ಮಗನನ್ನು ನೋಡುತ್ತ ನೋಡುತ್ತ ರಾಜನು ಮನಸ್ಸಿನಲ್ಲಿಯೇ ಕೊರಗಿ ಕಣ್ಣೀರು ಬಿಡುತ್ತಿದ್ದನು. ಆಗ ಆ ರಾಜನನ್ನು ಕುರಿತು ಈ ಬಾಲಕನು

॥ ರತ್ನಧನೇಶ್ವರ ಉವಾಚ ॥

ಇತಿ ತದ್ವಚನಂ ಶ್ರುತ್ವಾ ಸ ರಾಜಾ ಗದ್ಗದಧ್ವನಿಃ ।
ಮುಂಚನ್ ಬಾಷ್ಪಾಣಿ ಬಹುಧಾ ತಮಾಹ ಶಿವಪೂಜಕಂ ॥೪೧೯॥

ಶೈವೋತ್ತಮ ಮಮಾಸ್ತ್ಯೇಕಃ ಪುತ್ರೋ ಜ್ಯೇಷ್ಠೋ ವಿಶಾರದಃ ।
ಸ ನಾನಾರೋಗಸಂಕ್ರಾಂತಸ್ತಿಷ್ಠತಿ ಪ್ರಿಯಕೃತ್ತಮಃ ॥೪೨೦॥

ಸ ಪೂರ್ವಮಭವತ್ಪುತ್ರಃ ಸರ್ವಶತ್ರುನಿಬರ್ಹಣಃ ।
ತಮದ್ಯ ರಾಜಯಕ್ಷ್ಮಾದಿ ನಾನಾರೋಗಾಸ್ಸಮಾವೃತಾಃ ॥೪೨೧॥

ದತ್ತಾನಿ ಸುರವೈದ್ಯಾಭ್ಯಾಮೌಷಧಾನಿ ಸಹಸ್ರಶಃ ।
ತಥಾಪಿ ತಸ್ಯ ತೇ ರೋಗಾ ನ ನಶ್ಯಂತ್ಯತಿದುಃಖದಾಃ ॥೪೨೨॥

ಧನ್ವಂತರಿಃ ಸಮಾಗತ್ಯ ದದಾವೌಷಧಮಾದರಾತ್ ।
ತಥಾಪಿ ತಸ್ಯ ತೇ ರೋಗಾ ವೃದ್ಧಿಂ ಯಾಂತಿ ಕ್ಷಣೇ ಕ್ಷಣೇ ॥೪೨೩॥

---

"ಅಯ್ಯಾ ರಾಜನೇ, ನೀನು ಏತಕ್ಕಾಗಿ ದುಃಖಿಸುತ್ತಿರುವೆ ? ಏನು ಕಷ್ಟ ಒದಗಿದೆ" ಎಂದು ಪ್ರಶ್ನಿಸಿದನು. ||೪೧೭-೪೧೮||

ಆಗ ರಾಜನು ಬಾಲಕನನ್ನು ನೋಡಿ ಕುಗ್ಗಿದ ಧ್ವನಿಯುಳ್ಳವನಾಗಿ ಕಣ್ಣೀರು ಸುರಿಸುತ್ತಾ ಆ ಶಿವಪೂಜಕನಾದ ಬಾಲಕನನ್ನು ಕುರಿತು ಹೀಗೆಂದನು. "ಎಲೈ ಶೈವೋತ್ತಮನೇ, ನನಗೆ ವಿಶಾರದನೆಂಬ ಹೆಸರಿನ ಪ್ರೀತಿಪಾತ್ರನಾದ ಜ್ಯೇಷ್ಠಪುತ್ರನೊಬ್ಬನಿರುವನು. ಆತನು ಸದಾ ಅನೇಕ ರೋಗಗಳಿಂದ ನರಳುತ್ತಾ ಬಹು ದುಃಖಪಡುತ್ತಿರುವನು. ||೪೧೯-೪೨೦||

ಈತನು ಮೊದಲು ಸರ್ವಶತ್ರುನಾಶಕನಾಗಿ ಬಹಳ ಬಲಿಷ್ಠನಾಗಿದ್ದನು. ಅಂತಹವನನ್ನು ಈಗ ಕ್ಷಯರೋಗವೇ ಮೊದಲಾದ ಅನೇಕ ವ್ಯಾಧಿಗಳು ಆವರಿಸಿವೆ. ಸುರವೈದ್ಯರೆನಿಸಿದ ಅಶ್ವಿನೀದೇವತೆಗಳಿಂದಲೂ, ಔಷಧಿಯನ್ನು ಕೊಡಿಸಿದುದಾಯಿತು. ಆದರೂ ವ್ಯಾಧಿಯು ನಾಶವಾಗಲಿಲ್ಲ ||೪೨೧-೪೨೨||

ಸಾಕ್ಷಾತ್ ಧನ್ವಂತರಿಯೇ ಬಂದು ಔಷಧಿಯನ್ನು ಕೊಟ್ಟರೂ ಅದು ಕಡಿಮೆಯಾಗದೆ ಕ್ಷಣಕ್ಷಣಕ್ಕೂ ವೃದ್ಧಿಯಾಯಿತು. ಮೂರು ಲೋಕಗಳಲ್ಲಿರುವ ಔಷಧಿಗಳ

ಯಾವಂತಿ ಸಂತ್ಯೌಷಧಾನಿ ಪಾತಾಳಾದಿಜಗತ್ತ್ರಯೇ ।
ತಾವಂತಿ ಭಕ್ಷಿತಾನ್ಯೇವ ತಥಾಪಿ ನ ಸುಖೀ ಸುತಃ ॥೮೨೪॥

ದಿನೇ ದಿನೇ ತನುಕ್ಷೀಣಾ ಜಾಯತೇ ತಸ್ಯ ಶಾಂಭವ ।
ತದ್ದುಃಖೇನೈವ ಸತತಂ ದುಃಖಿತೋಽಸ್ಮ್ಯಹಮೀದೃಶಃ ॥೮೨೫॥

ಸೂರ್ಯಾದಯೋ ಗ್ರಹಾಸ್ಸರ್ವೇ ಜಪಹೋಮಾದಿಭಿಃ ಪುರಾ ।
ಸಮ್ಯಗಾರಾಧಿತಾ ಏವ ತಥಾಪಿ ನ ಸುಖೀ ಸುತಃ ॥೮೨೬॥

ಆಯುರ್ದಾನಾದಿದಾನಾನಿ ಕೃತಾನಿ ಬಹುಧಾ ಮಯಾ ।
ತಥಾಪಿ ನಾಮಯಾಶ್ಶಾಂತಾಸ್ತತೋ ನ ಸ ಸುಖೀ ಸುತಃ ॥೮೨೭॥

ಅಧುನಾ ವಾ ದಿನಾಂತೇ ವಾ ಮರಿಷ್ಯತಿ ವಿಶಾರದಃ ।
ತಸ್ಮಿನ್ ಮೃತೇ ಪುತ್ರಶೋಕಾತ್ತ್ಯಸುಸ್ತ್ಯಕ್ಷ್ಯಾಮ್ಯಹಂ ಧ್ರುವಂ॥೮೨೮॥

ವಿಶಾರದಸಮಃ ಪುತ್ರೋ ನ ಭೂತೋ ನ ಭವಿಷ್ಯತಿ ।
ತಸ್ಮಿನ್ ಮೃತೇ ಮಮ ಪ್ರಾಣಾ ಗಮಿಷ್ಯಂತ್ಯೇವ ತತ್ಕ್ಷಣೇ ॥೮೨೯॥

ನ್ನೆಲ್ಲಾ ಕುಡಿಸಿದುದಾಯಿತು. ನನ್ನ ಮಗನು ಮಾತ್ರ ಆರೋಗ್ಯಶಾಲಿಯಾಗಲಿಲ್ಲ. ||೮೨೩-೮೨೪||

ಮಗನ ಶರೀರವು ದಿನದಿನಕ್ಕೂ ಕ್ಷೀಣವಾಗುತ್ತಿದೆ. ಅದೇ ದುಃಖದಿಂದ ನಾನು ಬಹುವಾಗಿ ಕೊರಗುತ್ತಿರುವೆನು. ಸೂರ್ಯಾದಿನವಗ್ರಹಗಳನ್ನೆಲ್ಲಾ ಜಪ ಹೋಮಾದಿಗಳಿಂದ ಆರಾಧಿಸಿದುದಾಯಿತು. ಅಷ್ಟಾದರೂ ನನ್ನ ಮಗನು ಆರೋಗ್ಯ ಶಾಲಿಯಾಗಲಿಲ್ಲ. ||೮೨೫-೮೨೬||

ನನ್ನ ಆಯುಸ್ಸನ್ನೂ ಅವನಿಗಾಗಿ ಧಾರೆಯೆರೆದೆನು. ಆದರೂ ಅವನ ವ್ಯಾಧಿಗಳು ಶಾಂತವಾಗಲಿಲ್ಲ. ಈಗಲೋ ಸಾಯಂಕಾಲಕ್ಕೋ ವಿಶಾರದನು ಸಾಯು ವಂತಿರುವನು. ಅವನೇನಾದರೂ ಮೃತನಾದರೆ ಒಡನೆಯೇ ದುಃಖದಿಂದ ನಾನೂ ಮೃತಿಹೊಂದುವೆನು. ||೮೨೭-೮೨೮||

ವಿಶಾರದನಂತಹ ಸುಪುತ್ರನು ಹಿಂದೆಯೂ ಜನಿಸಿಲ್ಲ. ಮುಂದೆಯೂ ಜನಿಸ ಲಾರನು. ಈತನು ಮೃತನಾದೊಡನೆಯೇ ನನ್ನ ಪ್ರಾಣಗಳೂ ಹೊರಟುಹೋಗು ವುವು. ಈತನ ಮರಣವಾರ್ತೆಯನ್ನು ಕೇಳಿ ನನ್ನ ಶತ್ರುಗಳೆಲ್ಲರೂ ನನ್ನ ಮೇಲೆ

ತಸ್ಮಿನ್ ಮೃತೇ ಶತ್ರವೋ ಮೇ ಪ್ರಬಲಾ ಮದವಿಹ್ವಲಾಃ ।
ಸಸೈನ್ಯಂ ಮಾಂ ಹನಿಷ್ಯಂತಿ ಹರಿಷ್ಯಂತಿ ಚ ಮದ್ಧನಂ ॥೬೩೦॥

॥ ಅಗಸ್ತ್ಯ ಉವಾಚ ॥

ಏವಂ ಬ್ರುವಾಣಂ ರಾಜಾನಮುವಾಸಂ ಸ ಶಿವಾರ್ಚಕಃ ।
ಪ್ರಾಹ ಧೈರ್ಯಂ ಸಮಾಶ್ರಿತ್ಯ ಮಾಂ ಭೈಷೀರಿತಿ ಸಾದರಂ ॥೬೩೧॥

॥ ಶಿವಾರ್ಚಕ ಉವಾಚ ॥

ರಾಜನ್ ತದ್ರೋಗಶಾಂತ್ಯರ್ಥಂ ಕುರು ಮೃಲ್ಲಿಂಗಪೂಜನಂ ।
ಸೇವಾಂ ಕರೋತು ಯತ್ನೇನ ಭಕ್ತ್ಯಾ ಮೃಲ್ಲಿಂಗಪೂಜನಂ ॥೬೩೨॥

ಲಕ್ಷಂ ಮೃಣ್ಮಯಲಿಂಗಾನಾಂ ಯದಿ ಕುರ್ಯಾತ್ಸ ಪೂಜನಂ ।
ತದಾ ಸ ಸರ್ವರೋಗೇಭ್ಯೋ ಮುಚ್ಯತೇ ನಾತ್ರ ಸಂಶಯಃ ॥೬೩೩॥

ಕಿಮೌಷಧಜಪೈರ್ಹೋಮೈಃ ಕಿಂ ದಾನೈಃ ಕಿಂ ಗ್ರಹಾರ್ಚನೈಃ ।
ಕಿಮನ್ಯೈರಪ್ಯುಪಾಯೈಶ್ಚ ವಿನಾ ಮೃತ್ಯುಂಜಯಾರ್ಚನಂ ॥೬೩೪॥

ದಂಡೆತ್ತಿ ಬಂದು ಸೈನ್ಯಸಮೇತನಾಗಿ ನನ್ನನ್ನು ಕೊಂದು ನನ್ನ ಹಣವನ್ನೆಲ್ಲಾ ದೋಚಿಕೊಂಡು ಹೋಗುವರು.” ॥೬೨೯-೬೩೦॥

ಹೀಗೆ ಹೇಳುತ್ತಿದ್ದ ರಾಜನನ್ನು ನೋಡುತ್ತಾ ಆ ಶಿವಾರ್ಚಕಬಾಲನು “ಅಯ್ಯಾ ರಾಜನೇ, ನೀನು ಹೆದರಬೇಡ ಈ ವ್ಯಾಧಿಯು ನಿವಾರಣೆಯಾಗಬೇಕಾದರೆ ಒಂದು ಉಪಾಯವನ್ನು ಹೇಳುವೆನು ಕೇಳು. ಮೃತ್ತಿಕೆಯಿಂದ ಶಿವಲಿಂಗವನ್ನು ನಿರ್ಮಿಸಿ ಶಿವಾರಾಧನೆಮಾಡು. ಭಕ್ತಿಯಿಂದ ಆ ಶಿವಲಿಂಗವನ್ನು ಸೇವಿಸು. ॥೬೩೧-೬೩೨॥

ವಿಧಿವತ್ತಾಗಿ ಒಂದುಲಕ್ಷ ಮೃಲ್ಲಿಂಗಾರ್ಚನೆ ಮಾಡಿದುದೇ ಆದರೆ ಸಕಲ ವ್ಯಾಧಿಗಳೂ ನಾಶವಾಗುವುವು. ಯಾವ ಔಷಧಿಗಳಾಗಲಿ, ಜಪಹೋಮಾದಿಗಳಾಗಲಿ, ದಾನಧರ್ಮಗಳಾಗಲಿ, ಮತ್ತಾವ ಉಪಾಯಗಳಾಗಲಿ ಬೇಕಿಲ್ಲ ಮೃತ್ಯುಂಜಯಾರ್ಚನೆಯೊಂದೇ ಸಾಕು ॥೬೩೩-೬೩೪॥

ಸದ್ಯಸ್ಸಿದ್ಧ್ಯಂತ್ಯಭೀಷ್ಟಾನಿ ಕೃತೇ ಮೃತ್ಯುಂಜಯಾರ್ಚನೇ ।
ಮೃತ್ಯುಂಜಯಾರ್ಚನಾಸಾಧ್ಯಂ ನ ಕಿಂಚಿದಪಿ ಭೂಪತೇ ॥೮೩೫॥

ಮೃತ್ಯುಂ ತರಂತಿ ತೇ ಮರ್ತ್ಯಾ ಯೇ ಮೃತ್ಯುಂಜಯಪೂಜಕಾಃ ।
ಮರ್ತ್ಯಾ ಮೃತ್ಯುವಶಂ ಯಾಂತಿ ತ್ಯಕ್ತಮೃತ್ಯುಂಜಯಾರ್ಚನಾಃ ॥೮೩೬॥

ಮೃತ್ಯುಂಜಯಮನಭ್ಯರ್ಚ್ಯ ಯೋ ಮೃತ್ಯುಂ ತರ್ತುಮಿಚ್ಛತಿ
ಸ ಮೂರ್ಖ ಇತಿ ವಿಜ್ಞೇಯಃ ಸತ್ಯಂ ಸತ್ಯಂ ನ ಸಂಶಯಃ ॥೮೩೭॥

ದೀರ್ಘಾಯುಷೋ ಭವಿಷ್ಯಂತಿ ಕೃತಮೃತ್ಯುಂಜಯಾರ್ಚನಾಃ
ಅಲ್ಪಾಯುಷೋ ಭವಿಷ್ಯಂತಿ ತ್ಯಕ್ತಮೃತ್ಯುಂಜಯಾರ್ಚನಾಃ ॥೮೩೮॥

ಮೃತ್ಯುಂಜಯಾರ್ಚನಂ ಕಾರ್ಯಂ ಮೃಲ್ಲಿಂಗೇ ಸರ್ವಕಾಮದೇ ।
ತತ್ರ ಸಂಪ್ರೀತಿರತ್ಯಂತಂ ಶಂಭೋಃ ಸ್ಯಾನ್ನಾತ್ರ ಸಂಶಯಃ ॥೮೩೯॥

ರಾಜನ್ನಾಯುಸ್ತಥಾರೋಗ್ಯಮೈಶ್ವರ್ಯಮತುಲಂ ಬಲಂ ।
ಜ್ಞಾನಂ ನಿರ್ವಾಣಮಪ್ಯಂತೇ ಪ್ರಾಪ್ಯಂ ಮೃಲ್ಲಿಂಗಪೂಜಯಾ ॥೮೪೦॥

ಮೃತ್ಯುಂಜಯನನ್ನು ಆರಾಧಿಸುವುದರಿಂದ ಸಕಲಾಭೀಷ್ಟಗಳೂ ಒಡನೆಯೇ ಸಿದ್ಧಿಸುವುವು. ಇದರಿಂದ ಸಾಧ್ಯವಾಗದ ಕಾರ್ಯವೊಂದೂ ಇರುವುದಿಲ್ಲ. ಮೃತ್ಯುಂ

ಮೃತ್ಯುವಿಗೆ ತುತ್ತಾಗುವರು. ॥೮೩೫-೮೩೬॥

ಮೃತ್ಯುಂಜಯನಾರಾಧನೆಮಾಡದೆ ಮೃತ್ಯುವನ್ನು ದಾಟುವವನು ಮೂರ್ಖನೆನಿಸಿಕೊಳ್ಳುವನು. ಮೃತ್ಯುಂಜಯಾರಾಧನೆಯಿಂದ ದೀರ್ಘಾಯುಸ್ಸು, ಮೃತ್ಯುಂಜಯನನ್ನು ಆರಾಧಿಸದಿದ್ದರೆ ಆಯುಸ್ಸಿನ ಕ್ಷೀಣತೆಯೂ ಉಂಟಾಗುವುದು. ॥೮೩೭-೮೩೮॥

ಮೃತ್ತಿಕಾಲಿಂಗದಲ್ಲಿ ಸರ್ವಕಾಮಪ್ರದನಾದ ಮೃತ್ಯುಂಜಯನನ್ನು ಪೂಜಿಸುವುದರಿಂದ ಶಂಕರನು ಸುಪ್ರೀತನಾಗಿ, ತನ್ನ ಭಕ್ತರಿಗೆ ಆಯುಸ್ಸು, ಆರೋಗ್ಯ, ಐಶ್ವರ್ಯ, ಸುಜ್ಞಾನ, ಮೋಕ್ಷ ಮುಂತಾದ ಫಲಗಳನ್ನು ಅನುಗ್ರಹಿಸುವನು. ॥೮೩೯-೮೪೦॥

ಮೃಲ್ಲಿಂಗಪೂಜನಂ ಕೃತ್ವಾ ವಿಧಿವದ್ಭಕ್ತಿಪೂರ್ವಕಂ ।
ಭುಕ್ತ್ವಾ ಭೋಗಾನ್ಯಥಾಕಾಮಂ ಶಿವಂ ಯಾಂತಿ ಚ ಭೂಪತೇ ॥೮೪೧॥

ಮೃಲ್ಲಿಂಗಾರ್ಚನಮಾತ್ರೇಣ ಸೋಮಸ್ಸೋಮಾರ್ಧಶೇಖರಃ ।
ಸಂತುಷ್ಟಸ್ಸಕಲಾಭೀಷ್ಟಾನ್ ದಾಸ್ಯತ್ಯೇವ ನ ಸಂಶಯಃ ॥೮೪೨॥

ಮೃಲ್ಲಿಂಗಪೂಜನಂ ರಾಜನ್ ಕರೋತ್ವದ್ಯ ಸುತಸ್ತವ ।
ಅದ್ಯೈವ ರೋಗನಿರ್ಮುಕ್ತೋ ಭವಿಷ್ಯತಿ ನ ಸಂಶಯಃ ॥೮೪೩॥

ವಿನಶ್ಯಂತ್ಯಾಮಯಾ ರಾಜನ್ ಮೃತ್ತಿಕಾಲಿಂಗಪೂಜಯಾ ।
ವಿಶ್ವಾಸಂ ಕುರು ಮದ್ವಾಕ್ಯೇ ನಾಹಮಸ್ಮಿ ಪ್ರತಾರಕಃ ॥೮೪೪॥

॥ ಅಗಸ್ತ್ಯ ಉವಾಚ ॥

ಮೃಲ್ಲಿಂಗಪೂಜನಂ ಕೃತ್ವಾಪ್ಯಯಂ ಚೇದ್ರೋಗವಾನ್ ಭವೇತ್ ।
ತದಾ ಕಥಂ ಪ್ರಮಾಣಂ ಸ್ಯುರ್ವೇದಾಸ್ತದ್ವದ ಭೂಪತೇ ॥೮೪೫॥

ಇತಿ ತದ್ವಚನಂ ಶ್ರುತ್ವಾ ಸ ಭೂಪೋ ಹೃಷ್ಟಮಾನಸಃ ।
ಉಪವೇಶ್ಯ ಸುತಂ ಯತ್ನಾದ್ಭಸ್ಮಸ್ನಾನಮಕಾರಯತ್ ॥೮೪೬॥

---

ಎಲೈ ರಾಜನೇ, ವಿಧಿವತ್ತಾಗಿ ಮೃಲ್ಲಿಂಗಾರಾಧನೆ ಮಾಡುವುದರಿಂದ ಈಶ್ವರನು ತೃಪ್ತನಾಗಿ ತನ್ನ ಆರಾಧಕರಿಗೆ ಸಕಲವಿಧವಾದ ಸನ್ಮಂಗಳಗಳನ್ನೂ ದಯ ಪಾಲಿಸುವನಲ್ಲದೆ ಮುಕ್ತಿಯನ್ನಿತ್ತು ಸರ್ವೇಷ್ಟಾರ್ಥಪ್ರದನಾಗುವನು. ||೮೪೧-೮೪೨||

ರಾಜನೇ, ನಿನ್ನ ಪುತ್ರನು ಈಗಲೇ ಮೃಲ್ಲಿಂಗಾರಾಧನೆಮಾಡಲಿ. ಅದರಿಂದ ಸಕಲ ವ್ಯಾಧಿನಿರ್ಮುಕ್ತನಾಗುವನು. ಇದನ್ನು ನಿಜವೆಂದು ತಿಳಿ. ನನ್ನ ಮಾತು ಕೇವಲ ಹೊಗಳಿಕೆಯಿಂದ ಕೂಡಿದುದೆಂದು ಭಾವಿಸಬೇಡ. ||೮೪೩-೮೪೪||

ಮೃಲ್ಲಿಂಗಾರಾಧನೆಯನ್ನು ಮಾಡಿದರೂ ನಿನ್ನ ಮಗನಿಗೆ ರೋಗವು ನಿವಾರಣೆ ಯಾಗದಿದ್ದರೆ, ವೇದದ ಮಾತುಗಳನ್ನು ನಾವು ನಂಬುವುದು ಹೇಗೆ? ಅದು ಉಳ್ಳಾದೀತು." ಎಂದು ಹೇಳಿದ ಆ ಶೈವಬಾಲಕನ ಮಾತುಗಳನ್ನು ಕೇಳಿ, ಆ ರಾಜನು ಸಂತೋಷದಿಂದ ಮಗನಿಗೆ ಮೊದಲು ಕಷ್ಟಪಟ್ಟು ಭಸ್ಮಸ್ನಾನಮಾಡಿಸಿ ದನು. ||೮೪೫-೮೪೬||

ಲಕ್ಷಂ ಮೃನ್ಮಯಲಿಂಗಾನಾಂ ಕಾರಯಾಮಾಸ ಸಾದರಂ ।
ಶಿವಪೂಜನಸಾಮಗ್ರೀಂ ಸ ಸಂಪಾದ್ಯೈವ ಭೂಪತಿಃ ॥೪೪೭॥

ವ್ಯಾಘ್ರಾಜಿನೇ ಸಂನಿವೇಶ್ಯ ತಮಶಕ್ತಂ ಸುತಂ ತದಾ ।
ಉದ್ಧೂಲನತ್ರಿಪುಂಡ್ರಾಭ್ಯಾಂ ರುದ್ರಾಕ್ಷೈಶ್ಚ ವಿಭೂಷಿತಂ ॥೪೪೮॥

ಉಪವೇಶ್ಯ ತಮಶಕ್ಯಂ ಪುತ್ರಂ ಧೃತ್ವಾ ಸ ಪಾರ್ಶ್ವತಃ ।
ಪುತ್ರೇಣ ಕಾರಯಾಮಾಸ ಮೃತ್ತಿಕಾಲಿಂಗಪೂಜನಂ ॥೪೪೯॥

ಸ ಕೋಮಲೈರ್ಬಿಲ್ವಪತ್ರೈರಪಿತೈರತಿಶೋಭನೈಃ ।
ಪುಷ್ಪೈರ್ನಾನಾವಿಧೈರೀಶಂ ಮೃಲ್ಲಿಂಗೇಷು ಸಮರ್ಚಯತ್ ॥೪೫೦॥

ಧೂಪಯಾಮಾಸ ಗೌರೀಶಂ ಸ ತತೋಽಗುರುರಾಶಿಭಿಃ ।
ದೀಪಯಾಮಾಸ ಸ ತತಃ ಶಿವಂ ಕರ್ಪೂರರಾಶಿಭಿಃ ॥೪೫೧॥

ನೈವೇದ್ಯಂ ಚ ದದೌ ಶಂಭೋಃ ಕ್ಷೀರಾನ್ನಾಪೂಪರಾಶಿಭಿಃ ।
ಪುನಸ್ಸುವರ್ಣಪುಷ್ಪಾದ್ಯೈಃ ಪೂಜಯಾಮಾಸ ಶಂಕರಂ ॥೪೫೨॥

ಮೃನ್ಮಯಲಿಂಗಗಳನ್ನು ಲಕ್ಷಸಂಖ್ಯೆಯಲ್ಲಿ ನಿರ್ಮಾಣಮಾಡಿಸಿ, ರಾಜನು ಶಿವಪೂಜಾಸಾಮಗ್ರಿಯನ್ನು ಬಹುಸಂಖ್ಯೆಯಲ್ಲಿ ಒದಗಿಸಿಕೊಂಡನು. ಹಾಗೆಯೇ ಕೇವಲ ಅಶಕ್ತನಾದ ತನ್ನ ಮಗನನ್ನು ಹುಲಿಯಚರ್ಮದ ಮೇಲೆ ಕುಳ್ಳಿರಿಸಿ, ಭಸ್ಮತ್ರಿಪುಂಡ್ರಾದಿಗಳಿಂದಲೂ, ರುದ್ರಾಕ್ಷಿಯ ಸರಗಳಿಂದಲೂ ಅಲಂಕರಿಸಿದನು. ||೪೪೭-೪೪೮||

ಹಾಗೆಯೇ ತಾನೂ ಅವನ ಪಕ್ಕದಲ್ಲಿಯೇ ಕುಳಿತುಕೊಂಡು, ಮಗನಿಂದ ಮೃತ್ತಿಕಾಲಿಂಗಾರ್ಚನೆ ಮಾಡಿಸಿದನು. ಕೋಮಲವಾದ ಬಿಲ್ವಪತ್ರೆ, ಸುಗಂಧಮಯವಾದ ಪುಷ್ಪಗಳು ಇವುಗಳಿಂದ ಪರಶಿವನನ್ನು ನಾನಾರೀತಿಯಿಂದ ವಿಧಿವತ್ತಾಗಿ ಪೂಜಿಸಿದನು. ||೪೪೯-೪೫೦||

ಅಗರುವಿನಿಂದ ಧೂಪವನ್ನೂ, ಕರ್ಪೂರರಾಶಿಗಳಿಂದ ದೀಪವನ್ನೂ, ಕ್ಷೀರಾನ್ನ, ಅಪೂಪ ಮುಂತಾದುವುಗಳಿಂದ ನೈವೇದ್ಯವನ್ನೂ ಸುವರ್ಣಪುಷ್ಪಾದಿಗಳಿಂದ ಅರ್ಚನೆಯನ್ನೂ ನೆರವೇರಿಸಿ ಮಹಾದೇವನನ್ನು ವಿಶೇಷವಾಗಿ ತೃಪ್ತಿಪಡಿಸಿದನು ||೪೫೧-೪೫೨||

ತತಃ ಪೂರ್ವಮಶಕ್ತೋಽಪಿ ಮರಣಾಯೋನ್ಮುಖೋಽಪಿ ಸಃ ।
ತದಾ ಸತ್ವರಮುತ್ಥಾಯ ಚಕ್ರೇ ಶಂಭೋಃ ಪ್ರದಕ್ಷಿಣಾನ್

ಪ್ರಣನಾಮ ತತಶ್ಶಂಭುಂ ಬಹುವಾರಂ ಸ ಯತ್ನತಃ ।
ಮೂರ್ಧನ್ಯಂಜಲಿಮಾದಾಯ ದಧ್ಯೌ ಚ ಸ ಮಹೇಶ್ವರಂ ॥೮೫೪॥

ಕೃತಪ್ರಣಾಮಮೀಶಾಯ ಸುತಂ ರತ್ನಧನೇಶ್ವರಃ ।
ವಿಲೋಕ್ಯ ಹರ್ಷಸಂಪನ್ನಶ್ಚಂದ್ರೋದಯ ಇವಾಂಬುಧಿಃ ॥೮೫೫॥

ಮೃಲ್ಲಿಂಗಪೂಜಯಾ ಸದ್ಯೋ ಮುಕ್ತರೋಗೋ ವಿಶಾರದಃ ।
ಪುನಸ್ಸಂಪೂಜಯಾಮಾಸ ಬಿಲ್ವಪತ್ರಾದಿಭಿಶ್ಶಿವಂ ॥೮೫೬॥

ವಿಶಾರದಂ ಸಮಾಲಿಂಗ್ಯ ರತ್ನಕೋಶಧನೇಶ್ವರಃ ।
ಆಘ್ರಾಯಾಘ್ರಾಯ ಮೂರ್ಧಾನಮಾನಂದಾಶ್ರೂಣ್ಯಮುಂಚತ ॥೮೫೭॥

ವಿಶಾರದಸ್ಯ ಜನನೀ ಸುತಮಾಲಿಂಗ್ಯ ಸಾದರಂ ।
ಸಂತೋಷಂ ಪರಮಂ ಪ್ರಾಪ ಜಾತಃ ಪುತ್ರೋಽಧುನೇತಿ ಸಾ ॥೮೫೮॥

ಆ ವಿಶಾರದನು ಎಷ್ಟೇ ಅಶಕ್ತನಾಗಿದ್ದರೂ, ಮರಣೋನ್ಮುಖನಾಗಿದ್ದರೂ, ಒಡನೆಯೇ ಎದ್ದು ಶಂಕರನಿಗೆ ಪ್ರದಕ್ಷಿಣೆಮಾಡಿ ನಮಸ್ಕಾರಮಾಡಿದನು. ಹಾಗೆಯೇ ಶಂಕರನಿಗೆ ಪದೇಪದೇ ವಂದಿಸಿ ತಲೆಯಮೇಲೆ ಅಂಜಲಿಯಿಟ್ಟು ಹೀಗೆ ಧ್ಯಾನ ಮಾಡಿದನು. ॥೮೫೩-೮೫೪॥

ಮಗನು ಶಂಕರನಿಗೆ ಪ್ರದಕ್ಷಿಣೆ ಮಾಡಿದ್ದನ್ನು ನೋಡಿದೊಡನೆಯೇ ರಾಜನು ಚಂದ್ರೋದಯದಿಂದ ಸಮುದ್ರವು ಉಕ್ಕುವಂತೆ ಸಂತೋಷದಿಂದ ಉಬ್ಬಿಹೋದನು. ವಿಶಾರದನು ಆ ಶಿವಾರ್ಚನೆಯಿಂದ ಸಕಲರೋಗಮುಕ್ತನಾಗಿ ಪದೇಪದೇ ಶಿವಲಿಂಗವನ್ನು ಬಿಲ್ವಪತ್ರಾದಿಗಳಿಂದ ಪೂಜಿಸುತ್ತಿದ್ದನು. ॥೮೫೫-೮೫೬॥

ತಂದೆಯಾದ ರತ್ನಕೋಶೇಶ್ವರನು ಮಗನನ್ನು ಆಲಿಂಗಿಸಿಕೊಂಡು, ಪ್ರೀತಿಯಿಂದ ತಲೆಯನ್ನು ಆಘ್ರಾಣಿಸಿದನು. ತಾಯಿಯಾದರೋ ಪುತ್ರನನ್ನು ಅಪ್ಪಿಕೊಂಡು ಆಗ ಮತ್ತೆ ಮಗನು ಹುಟ್ಟಿದಂತೆ ಭಾವಿಸಿ ಸಂತೋಷಪಟ್ಟಳು. ॥೮೫೭-೮೫೮॥

ಸುಹೃದಸ್ಸುಖಿನೋ ಜಾತಾಃ ಸರ್ವೇ ವೈಶಾರದಾಸ್ತದಾ ।
ಶತ್ರವೋ ದುಃಖಿನೋ ಜಾತಾಸ್ತದಾ ವೈಶಾರದಾನುಸೇ ॥೮೫॥

ಯದಾ ಶಿವಪ್ರದಕ್ಷಿಣಾರ್ಥಮುತ್ಥಿತಃ ಸ ವಿಶಾರದಃ ।
ತದಾ ಶತ್ರುಕಿರೀಟಾನಿ ಪತಿತಾನಿ ಸಭಾಸ್ಥಲೇ ॥೮೬॥

ತದಾ ಶತ್ರುಸಭಾಸ್ಥಾನಂ ಜಜ್ವಾಲಾಭೌಮವಹ್ನಿನಾ ।
ಛಿನ್ನಾನಿ ಕಂಠಸೂತ್ರಾಣಿ ತಚ್ಛತ್ರುಸ್ತ್ರೀಗಲಾಧತಃ ॥೮೭॥

ತದಾ ಸಾಮಂತಭೂಪಾಲಾ ಮುಕ್ತರೋಗಂ ವಿಶಾರದಂ ।
ಗಜರತ್ನಾಶ್ವರತ್ನಾದ್ಯೈರುಪತಸ್ಥುರ್ಯಥೋಚಿತಂ ॥೮೮॥

॥ ಅಗಸ್ತ್ಯ ಉವಾಚ ॥

ಇತ್ಥಂ ಪಾರ್ಥಿವಲಿಂಗಾನಾಂ ಪೂಜಯಾ ಸವಿಶಾರದಃ ।
ಮುಕ್ತರೋಗೋ ಬಲಂ ತೇಜಃ ಸೌಭಾಗ್ಯಂ ಚಾಪ ಸತ್ವರಂ ॥೮೯॥

ವಿನೈವೋಷಧಪಥ್ಯಾಭ್ಯಾಂ ಕೇವಲಂ ಶಿವಪೂಜಯಾ ।
ಮುಕ್ತರೋಗಂ ಸುತಂ ವೀಕ್ಷ್ಯ ತತ್ಪಿತಾಭೂತ್ಪ್ರಹರ್ಷಿತಃ

ಸ್ನೇಹಿತರು ಇವನನ್ನು ನೋಡಿ ಸಂತೋಷಪಟ್ಟರು. ಶೂರರಾದ ಶತ್ರುಗಳು ಇವನು ಬದುಕಿದ್ದಕ್ಕಾಗಿ ದುಃಖಿಸಿದರು. ಯಾವಾಗ ವಿಶಾರದನು ಶಿವಪ್ರದಕ್ಷಿಣೆಗಾಗಿ ಎದ್ದು ನಿಂತನೋ, ಆಗಲೇ ಶತ್ರುಕಿರೀಟಗಳು ತಲೆಯಿಂದ ಸಭೆಯಲ್ಲಿ ಜಾರಿಬಿದ್ದವು. ॥೮೫-೮೬॥

ಭೂಮಿಯಲ್ಲಿ ಕಂಡುಬರದಿರುವ ಅಗ್ನಿಯಿಂದ ಶತ್ರುಸಭಾಸ್ಥಾನವೆಲ್ಲ ಉರಿಯಲಾರಂಭಿಸಿತು. ಅವರ ಸ್ತ್ರೀಯರ ಮಂಗಳಸೂತ್ರಗಳೆಲ್ಲಾ ಹರಿದು ಕತ್ತಿಗೆಯಿಂದ ಜಾರಲಾರಂಭಿಸಿದುವು. ಅಧೀನರಾಜರೆಲ್ಲರೂ ರೋಗದಿಂದ ನಿರ್ಮುಕ್ತನಾದ ವಿಶಾರದನಿಗೆ ಗಜರತ್ನಾದಿ ಕಾಣಿಕೆಗಳನ್ನು ಬಹುವಾಗಿ ತಂದೊಪ್ಪಿಸಿದರು. ॥೮೭-೮೮॥

ಹೀಗೆ ವಿಶಾರದನು ಕೇವಲ ಪಾರ್ಥಿವಲಿಂಗಾರಾಧನೆಯಿಂದಲೇ ಎಲ್ಲಾ ರೋಗ ಬಾಧೆಯನ್ನೂ ಕಳೆದುಕೊಂಡು, ಬಲ, ತೇಜಸ್ಸು, ಸೌಭಾಗ್ಯ ಇವುಗಳನ್ನು ಪಡೆದನು.

ತತಸ್ಸೌಭಾಗ್ಯಸಂಪನ್ನಸ್ತುಷ್ಟೋ ರತ್ನಧನೇಶ್ವರಃ ।
ದದಾವಗಣಿತಂ ದ್ರವ್ಯಂ ತಸ್ಮೈ ಶೈವಾಯ ಸಾದರಂ ॥೮೬೫॥

ದದೌ ಗಜಾನುತ್ತಮಾಶ್ವಾನ್ ದದೌ ಗ್ರಾಮಾಂಶ್ಚ ಕೋಟಿಶಃ ।
ರತ್ನಾನ್ಯಪಿ ದದೌ ಭಕ್ತ್ಯಾ ಪುತ್ರದಸ್ತ್ವಮಿತಿ ಸ್ತುವನ್ ॥೮೬೬॥

ತದಾ ಪ್ರಭೃತಿ ಯತ್ನೇನ ಪಿತ್ರಾ ಸಹ ವಿಶಾರದಃ ।
ನಿತ್ಯಂ ಪಾರ್ಥಿವಲಿಂಗಾನಾಂ ಸಹಸ್ರಂ ಸಮಪೂಜಯತ್ ॥೮೬೭॥

ವಿಶಾರದಸ್ಯ ಮೃಲ್ಲಿಂಗಪೂಜಯೈವ ದಿನೇ ದಿನೇ ।
ಪ್ರವೃದ್ಧಕಾಂತಿರಭವನ್ಮನೇ ನಕ್ಷತ್ರರಾಡಿವ ॥೮೬೮॥

ನಿಹತಾ ಶತ್ರುನಿಚಯಾಸ್ತೇನೈವ ಬಲಿನಾ ತತಃ ।
ಶತ್ರುರಾಷ್ಟ್ರಾಣಿ ಸರ್ವಾಣಿ ತೇನಾಕ್ರಾಂತಾನಿ ತೇಜಸಾ ॥೮೬೯॥

ತತಸ್ಸ ಕಾರಯಾಮಾಸ ಭಕ್ತ್ಯಾ ರತ್ನಶಿವಾಲಯಂ ।
ಸಪ್ರಾಸಾದಂ ಮಣಿಪ್ರಖ್ಯಂ ಸಪ್ರಾಕಾರಂ ಸಗೋಪುರಂ ॥೮೭೦॥

ಯಾವ ಔಷಧಿ ಪಥ್ಯಗಳೂ ಇಲ್ಲದೆ ಆರೋಗಿಯಾದ ಮಗನನ್ನು ನೋಡಿ ಮಗನು ಬಹಳವಾಗಿ ಹರ್ಷಿತನಾದನು. ॥೮೬೩-೮೬೪॥

ಅನಂತರ ಸಕಲ ಸಂಪದ್ಯುಕ್ತನಾದ ರತ್ನಧನೇಶ್ವರನು ಶಿವಾರ್ಚಕನಿಗೆ ಅಗಣಿತವಾದ ದ್ರವ್ಯರಾಶಿಯನ್ನೂ ಆನೆ, ಕುದುರೆ, ಗ್ರಾಮ, ರತ್ನರಾಶಿ ಮೊದಲಾದು ವುಗಳನ್ನೂ ದಾನವಾಗಿ ಕೊಟ್ಟು ತನ್ನ ಮಗನನ್ನು ಬದುಕಿಸಿಕೊಟ್ಟವನು ನೀನು ಎಂದು ಬಹುವಾಗಿ ಹೊಗಳಲಾರಂಭಿಸಿದನು. ॥೮೬೫-೮೬೬॥

ಅಲ್ಲಿಂದ ಮುಂದೆ ಆ ವಿಶಾರದನು ತನ್ನ ತಂದೆಯೊಡಗೂಡಿ ಪ್ರತಿದಿನವೂ ಒಂದೊಂದು ಸಾವಿರ ಮೃತ್ತಿಕಾಲಿಂಗಗಳ ಆರಾಧನೆಯಿಂದ ಕಾಲಕಳೆಯುತ್ತಿದ್ದನು. ಇದರಿಂದ ಅವನ ಕಾಂತಿಯು ಚಂದ್ರನ ಕಲೆಯಂತೆ ದಿನದಿನಕ್ಕೂ ವೃದ್ಧಿಹೊಂದು ತ್ತಿದ್ದಿತು. ಕ್ರಮೇಣ ಆ ವಿಶಾರದನು ಸಕಲ ಶತ್ರುಗಳನ್ನೂ ಸದೆಬಡಿದು, ಅವರ ದೇಶಕೋಶಗಳನ್ನೆಲ್ಲಾ ಆಕ್ರಮಿಸಿಕೊಂಡನು. ॥೮೬೭-೮೬೮-೮೬೯॥

ವಿಶಾರದನು ತನ್ನ ನಗರದಲ್ಲಿ ಒಂದು ರತ್ನಲಿಂಗದಿಂದ ಕೂಡಿದ ಶಿವಾಲಯ ವನ್ನು ಕಟ್ಟಿಸಿದನು. ಅದಕ್ಕೆ ರತ್ನಖಚಿತವಾದ ಪ್ರಾಕಾರವನ್ನೂ, ಉಪ್ಪರಿಗೆಯನ್ನೂ,

ತತ್ರ ಸಂಸ್ಥಾಪಯಾಮಾಸ ರತ್ನಲಿಂಗಮನುತ್ತಮಂ ।
ತತೋತ್ಸವಾನ್ ಪ್ರಯತ್ನೇನ ಕಾರಯಾಮಾಸ ಸಂತತಂ ॥೮೭೧॥

ಶಿವಭಕ್ತಿಃ ಪ್ರವೃದ್ಧಾಸೀತ್ತದಾ ಪ್ರಭೃತಿ ಭೂಪತೇಃ ।
ತಯಾ ಭಕ್ತ್ಯಾ ಮಹಾದೇವಂ ಪೂಜಯಾಮಾಸ ಸಂತತಂ ॥೮೭೨॥

ಯಥಾ ಯಥಾ ಪ್ರವೃದ್ಧಾಸೀತ್ತಸ್ಯ ಭಕ್ತಿರ್ಮಹೇಶ್ವರೇ ।
ತಥಾ ತಥಾ ಪ್ರವೃದ್ಧೋಭೂತ್ಸಸಂಪದ್ಭಿರ್ಬಲೇನ ಚ ॥೮೭೩॥

ದಿನೇ ದಿನೇ ಕಲಾವೃದ್ಧಿರ್ಯಥಾ ಚಂದ್ರಸ್ಯ ಜಾಯತೇ ।
ತಥಾ ತಸ್ಯಾಭವದ್ರಾಜ್ಞಃ ಶಿವೇ ಭಕ್ತಿಶ್ಶಿವಪ್ರದಾ ॥೮೭೪॥

ಶತ್ರೂಣಾಮಪ್ರಧೃಷ್ಯೋಭೂತ್ಸೌಮ್ಯೋಭೂತ್ಸ್ವಜನಸ್ಯ ಸಃ
ಬಲೈಶ್ವರ್ಯಸಮೃದ್ಧೋಪಿ ವಿನಯೇನ ಸ್ಥಿತಸ್ಸದಾ ॥೮೭೫॥

ಅತೋಯಂ ಕಾಮಮುದ್ದಿಶ್ಯ ಯಶ್ಶಿವಂ ಪೂಜಯಿಷ್ಯತಿ ।
ಸ ತಂ ಕಾಮಮವಾಪ್ನೋತಿ ತತೋಧಿಕಮಪಿ ಧ್ರುವಂ ॥೮೭೬॥

ಗೋಪುರವನ್ನೂ ನಿರ್ಮಾಣಮಾಡಿಸಿದನು. ಅಲ್ಲಿ ಪ್ರತಿದಿನವೂ ಮಹೇಶ್ವರನಿಗೆ ಉತ್ಸವಾದಿಗಳು ನಡೆಯುವಂತೆ ಏರ್ಪಡಿಸಿದನು. ಅಂದಿನಿಂದ ರಾಜನಿಗೆ ಈಶ್ವರನಲ್ಲಿ ಭಕ್ತಿಯು ದಿನದಿನಕ್ಕೂ ಹೆಚ್ಚುತ್ತಾ ಬಂದಿತು. ಹೀಗೆ ಆ ರಾಜನು ನಿತ್ಯವೂ ಶಿವಾರಾಧನೆಯಲ್ಲಿ ಆಸಕ್ತನಾಗಿದ್ದನು. ॥೮೭೦-೮೭೧-೮೭೨॥

ಚಂದ್ರನಲ್ಲಿ ಕಲೆಯು ದಿನದಿನಕ್ಕೂ ವೃದ್ಧಿಯಾಗುವಂತೆ, ವಿಶಾರದರಾಜನಿಗೆ ಶಿವಭಕ್ತಿಯು ವೃದ್ಧಿಯಾಗುತ್ತಾ ಬಂದಿತು. ಭಕ್ತಿ ಹೆಚ್ಚಿದಹಾಗೆಲ್ಲಾ, ಅವನ ಸಂಪತ್ತೂ ಶಕ್ತಿಯೂ ಹೆಚ್ಚುತ್ತ ಬಂದಿತು. ॥೮೭೩-೮೭೪॥

ಶತ್ರುಗಳಿಗೆ ಭಯಂಕರನಾಗಿಯೂ, ಸ್ವಜನರಿಗೆ ಸೌಮ್ಯನಾಗಿಯೂ ಕಾಣುತ್ತಿದ್ದನು. ವಿಶಾರದನಿಗೆ ಬಲ, ಐಶ್ವರ್ಯ ಇವು ಹೆಚ್ಚಿದಷ್ಟೂ ವಿನಯವು ಕಮ್ಮಿಯಾಗುತ್ತಿರಲಿಲ್ಲ. ಆದ್ದರಿಂದ ಭಕ್ತನು ಎಷ್ಟು ಫಲಕ್ಕೋಸ್ಕರ ಶಿವನನ್ನು ಆರಾಧಿಸುವನೋ ಅವನು ಅದಕ್ಕಿಂತಲೂ ಹೆಚ್ಚಿನ ಫಲವನ್ನೇ ಹೊಂದುವನು. ಇದರಲ್ಲಿ ಸಂಶಯವಿಲ್ಲ. ॥೮೭೫-೮೭೬॥

ಯೇಽರ್ಚಯಂತಿ ಮಹಾದೇವಂ ಸಾವಧಾನೇನ ಸಂತತಂ ।
ತೇ ಸಮೃದ್ಧಾ ಭವಂತ್ಯೇವ ಪುತ್ರದಾರಧನಾದಿಭಿಃ ॥೮೭॥

ಅಪ್ರಾಪ್ಯಂ ನಾಸ್ತಿ ದೈವೇಂದ್ರ ಶ್ರೀಮಹಾದೇವಪೂಜಯಾ ।
ಶ್ರೀಮಹಾದೇವಮಾರಾಧ್ಯ ಕೋ ವಾ ನ ಸುಖಮೇಧತೇ ॥೮೮॥

ನಿತ್ಯಮವ್ಯಭಿಚಾರಿಣ್ಯಾ ಭಕ್ತ್ಯಾ ಪೂಜ್ಯೋ ಮಹೇಶ್ವರಃ ।
ದುರ್ಲಭಾ ತಾದೃಶೀ ಭಕ್ತಿರ್ಯಾ ಶಶ್ವತ್ಸರ್ವಾರ್ಥದಾಯಿನೀ ॥೮೯॥

ಕಿಂ ಕಾಮಧೇನುಭಿರ್ವಿಪ್ರ ಕಿಂ ಕಲ್ಪತರುಕೋಟಿಭಿಃ ।
ಯದಿ ಭಕ್ತಿರ್ಮಹಾದೇವೇ ನಿತ್ಯಮವ್ಯಭಿಚಾರಿಣೀ ॥೯೦॥

ತದೇಂದ್ರೋಪೇಂದ್ರಚಂದ್ರಾದ್ಯಾ ಗಣನೀಯಾ ನ ಸರ್ವಥಾ ।
ಸಂಪ್ರಾಪ್ಯ ಶಾಂಭವೀಂ ಭಕ್ತಿಂ ಗಣಯಿಷ್ಯತಿ ಕೋಽಸುರಾನ್ ॥೯೧॥

ಶಿವೇತರಾಮರಾಃ ಸರ್ವೇ ಯತಶ್ಶಂಕರಕಿಂಕರಾಃ ।
ದೇವೋತ್ತಮಂ ಮಹಾದೇವಮಾಶ್ರಿತ್ಯಾಪ್ಯನ್ಯದೈವತಂ ॥೯೨॥

ಯಾರು ಸಾವಧಾನಮನಸ್ಸಿನಿಂದ ಕೂಡಿ ಪರಶಿವನನ್ನೇ ಸಂತತವಾಗಿ ಧ್ಯಾನಿಸುವರೋ, ಅಂತಹವರು ಪುತ್ರ, ಪತ್ನಿ, ಧನಾದಿಗಳೊಡನೆ ಸುಖವನ್ನು ಅನುಭವಿಸುವರು. ಒಟ್ಟಿನಲ್ಲಿ ಮಹಾದೇವನ ಆರಾಧನೆಯಿಂದ ಹೊಂದಲಾಗದ ಸುಖವೇ ಇಲ್ಲ. ಮಹಾದೇವನನ್ನು ಪೂಜಿಸಿದವರು ಯಾರು ತಾನೆ ಕಷ್ಟಕ್ಕೆ ಸಿಕ್ಕುವರು ? ||೮೭-೮೮||

ನಿರ್ದೋಷವಾದ ಅಂದರೆ ಸ್ಥಿರಭಕ್ತಿಯುಳ್ಳ ಮನಸ್ಸಿನಿಂದ ಕೂಡಿ ಪರಶಿವನನ್ನು ಪೂಜಿಸಬೇಕು. ಅದರಿಂದ ಸರ್ವಾರ್ಥಗಳೂ ಸಿದ್ಧಿಸುವುವು. ಆದರೆ ಅಂತಹ ಜ್ಞಾನವು ಲಭಿಸುವುದು ಕಷ್ಟ. ನಿರ್ದುಷ್ಟವಾದ ಶಿವಭಕ್ತಿಯೊಂದಿದ್ದರೆ ಕಾಮಧೇನು, ಕಲ್ಪವೃಕ್ಷ ಇವುಗಳು ಕೋಟಿಗಟ್ಟಲೆಯಲ್ಲಿದ್ದರೂ ಪ್ರಯೋಜನವಿಲ್ಲ. ಅವೆಲ್ಲಕ್ಕಿಂತಲೂ ಹೆಚ್ಚಿನ ಫಲವನ್ನು ಈ ಶಿವಭಕ್ತಿಯು ಕೊಡುವುದು. ||೮೯-೯೦||

ಈಶ್ವರನಲ್ಲಿ ಸ್ಥಿರವಾದ ಭಕ್ತಿಯಿಟ್ಟಿರುವವರಿಗೆ ಇಂದ್ರ, ಚಂದ್ರ, ಉಪೇಂದ್ರ ಮುಂತಾದ ದೇವತೆಗಳ ಗಣನೆಯೇ ಇರುವುದಿಲ್ಲ. ಅವರಿಗೆ ಈತನು ಲಕ್ಷ್ಯಮಾಡಬೇಕಾದುದೂ ಇಲ್ಲ. ಏಕೆಂದರೆ, ಶಿವನನ್ನು ಬಿಟ್ಟುಳಿದ ದೇವತೆಗಳೆಲ್ಲರೂ ಈಶ್ವರನ

ಕಸ್ಸಮಾರಾಧಯೇತ್ಪ್ರಾಜ್ಞೋ ಧನೀವ ನಿಧನಂ ನರಂ ।
ಯೇಭಿವಾಂಛಂತಿ ಸತತಮೈಹಿಕಾಮುಷ್ಮಿಕಂ ಫಲಂ ॥೮೮೩॥

॥ ದಧೀಚಿರುವಾಚ ॥

ತೇಷಾಂ ಸದಾಶಿವಾದನ್ಯಃ ಪೂಜ್ಯೋ ನ ಭವತಿ ಧ್ರುವಂ ॥೮೮೪॥

ಏವಮುಕ್ತ್ವಾ ಸ್ಥಿತೋಽಗಸ್ತ್ಯಃ ಸನಾತನಮುನಿಂ ಪ್ರತಿ ।
ಇತಿ ತದ್ವಚನಂ ಶ್ರುತ್ವಾ ಸ ಸಂತುಷ್ಟೋಽಭವನ್ನೃಪ ॥೮೮೫॥

॥ ಸದಾಶಿವ ಉವಾಚ ॥

ಅತಸ್ಸದಾಶಿವೋ ನಿತ್ಯಂ ಸರ್ವಭಾವೇನ ಸಜ್ಜನೈಃ ।
ಪೂಜನೀಯೋ ಭುಕ್ತಿಮುಕ್ತಿಫಲಂ ಕಾಂಕ್ಷಿಭಿರಾದರಾತ್ ॥೮೮೬॥

ಏವಮುಕ್ತ್ವಾ ಸ್ಥಿತೋ ದೇವಿ ದಧೀಚಿರ್ನೃಪತಿಂಪ್ರತಿ ।
ಏತಸ್ಮಿನ್ನಂತರೇ ಭಾನುರಸ್ತಾದ್ರಿಂ ಸಮುಪಾಗತಃ ॥೮೮೭॥

ಕಿಂಕರರೇ ತಾನೇ! ಮಹಾದೇವನಾದ ಪರಶಿವನನ್ನು ಆಶ್ರಯಿಸಿದ ಮೇಲೆ ಎಲ್ಲಾ ದೇವತೆಗಳೂ ತಾವೇ ಸ್ವಾಧೀನರಾಗುವರಲ್ಲವೆ! ॥೮೮೧-೮೮೩॥

ಹಾಗಿರುವಾಗ ಯಾವನು ತಾನೇ ಇತರ ದೇವತೆಗಳನ್ನು ಭಜಿಸಿಯಾನು? ಧನಿಕನು ಎಂದಾದರೂ ಬಡವನ ಸ್ನೇಹವನ್ನು ಬಯುಸುವನೇ? ಆದ್ದರಿಂದ ಯಾವನೇ ಆಗಲಿ ಈಶ್ವರಾರಾಧನೆಯನ್ನು ಬಿಟ್ಟು ಇತರ ದೇವತೆಗಳನ್ನು ಆರಾಧಿಸಲು ಯತ್ನಿಸಬಾರದು" ಎಂದು ಅಗಸ್ತ್ಯಮಹರ್ಷಿಯು ಸನಾತನ ಮುನಿಗೆ ಶಿವಪೂಜಾ ಮಹಿಮೆಯನ್ನು ವಿವರಿಸಿ ಹೇಳಲು, ಆಗ ಸನಾತನ ಮುನಿಯು ಅತ್ಯಂತ ಸಂತುಷ್ಟನಾದನು ॥೮೮೪-೮೮೫॥

ಆದ್ದರಿಂದ ಎಲೈ ರಾಜನೇ, ಸದಾಶಿವನನ್ನು ಸರ್ವದಾ ದೃಢಚಿತ್ತನಾಗಿ ಪೂಜಿಸಬೇಕು. ಭುಕ್ತಿ ಮುಕ್ತಿ ಇವುಗಳನ್ನು ಅಪೇಕ್ಷಿಸುವವರು ಇದೇ ರೀತಿ ಮಹಾದೇವನನ್ನು ಪೂಜಿಸುವರು" ಎಂದು ದಧೀಚಿಮಹರ್ಷಿಯು ಆ ರಾಜನಿಗೆ ಶಿವಮಹಿಮೆಯನ್ನು ವಿವರಿಸುತ್ತಿರುವಾಗಲೇ ಸೂರ್ಯನು ಅಸ್ತಾಚಲವನ್ನೈದಿದನು ಎಂದು ಪರಶಿವನು ಪಾರ್ವತಿಗೆ ಶ್ರೈವೇತಿಹಾಸಗಳನ್ನು ಬೋಧಿಸುತ್ತಾ, ॥೮೮೬-೮೮೭॥

ಪ್ರದೋಷಪೂಜಾರತಚಿತ್ತವೃತ್ತಿ
ರ್ದಧೀಚಿರಾರ್ಯೈಃ ಸಕಲಾಮರೇಶಂ ।
ಸಮರ್ಚಯಾಮಾಸ ನಿಶಾಮುಖೇ ಮಾಂ
ಮಧ್ಯಾರ್ಜುನೇಶಂ ನೃಪತಿಶ್ಚ ಸಾದರಂ ॥೮೫॥

ಇತಿ ಶ್ರೀಶಿವರಹಸ್ಯೇ ಉಗ್ರಾಖ್ಯೇ ಸಪ್ತಮಾಂಶೇ ಪೂರ್ವಾರ್ಧೇ
ಮಧ್ಯಾರ್ಜುನೇಶಕ್ಷೇತ್ರಮಹಿಮಾವರ್ಣನಂ ನಾಮ
ಸಪ್ತವಿಂಶೋಽಧ್ಯಾಯಃ

ಎಲೌ ದೇವಿಯೇ, ದಧೀಚಿಮಹರ್ಷಿಯು ಆ ರಾಜನೊಡಗೂಡಿ, ಅದೇ ಪ್ರದೋಷಕಾಲದಲ್ಲಿ ದೃಢಮನಸ್ಸಿನಿಂದ ಮಧ್ಯಾರ್ಜುನೇಶ್ವರನೆಂದು ಹೆಸರುಪಡೆದಿರುವ ನನ್ನನ್ನು ಬಹು ಭಯಭಕ್ತಿಯಿಂದ ಪೂಜಿಸಿ ಧನ್ಯನಾದನು" ಎಂದು ಸಂತೋಷದಿಂದ ಹೇಳಿ ಸುಮ್ಮನಾದನೆಂದು ಯಾಜ್ಞವಲ್ಕ್ಯ ಮಹರ್ಷಿಯು ಜನಕ ರಾಜನಿಗೆ ಮಧ್ಯಾರ್ಜುನೇಶ್ವರಕ್ಷೇತ್ರಮಹಿಮೆಯನ್ನು ವಿವರಿಸಿದನು. ॥೮೮॥

ಇಲ್ಲಿಗೆ ಶ್ರೀಶಿವರಹಸ್ಯದ ಉಗ್ರನಾಮಕವಾದ ಏಳನೆಯ ಅಂಶದ ಪೂರ್ವಾರ್ಧದಲ್ಲಿ
ಮಧ್ಯಾರ್ಜುನೇಶ ಕ್ಷೇತ್ರಮಹಿಮಾವರ್ಣನೆಯೆಂಬ ಇಪ್ಪತ್ತೇಳನೆಯ
ಅಧ್ಯಾಯವು ಮುಗಿದುದು

|| ಶ್ರೀಃ ||

|| ಶ್ರೀ ಶಿವಾಯನಮಃ ||

# ಅಥ ಶ್ರೀ ಶಿವರಹಸ್ಯೇ

## ಉಗ್ರಾಖ್ಯೇ

### ಸಪ್ತಮಾಂಶೇ ಪೂರ್ವಾರ್ಧೇ

### ಅಷ್ಟಾವಿಂಶೋಽಧ್ಯಾಯಃ

|| ಶ್ರೀ ಪಾರ್ವತ್ಯುವಾಚ ||

ಪ್ರದೋಷಪೂಜನಂ ಕೃತ್ವಾ ಸ ಭೂಪಾಲಃ ಪ್ರಭೋ ತತಃ ।
ಕಿಂ ಚಕಾರ ದಧೀಚಿಶ್ಚ ಕಿಂ ಚಕಾರ ವದಸ್ವ ಮೇ ॥೧॥

ಪ್ರದೋಷಪೂಜನಂ ಕೃತ್ವಾ ದಧೀಚಿರ್ಮುನಿಪುಂಗವಃ ।
ಸ್ವಾಶ್ರಮಂ ಗಂತುಮುದ್ಯುಕ್ತಸ್ತದಾ ತಂ ಪ್ರಾಹ ಭೂಪತಿಃ ॥೨॥

|| ರಾಜೋವಾಚ ||

ಅಗಸ್ತ್ಯವಚನಂ ಶ್ರುತ್ವಾ ಕಿಂ ಚಕಾರ ಸನಾತನಃ ।
ತತ್ಸರ್ವಮವಿಶೇಷೇಣ ವದ ಶಾಂಭವಸತ್ತಮ ॥೩॥

## ಇಪ್ಪತ್ತೆಂಟನೆಯ ಅಧ್ಯಾಯ

ಪಾರ್ವತಿಯು ಪರಶಿವನನ್ನು ಕುರಿತು "ಪ್ರಭುವೇ, ಆ ರಾಜನು ಪ್ರದೋಷ ಪೂಜಾನಂತರದಲ್ಲಿ ಮಾಡಿದ ಕಾರ್ಯವೇನು? ದಧೀಚಿ ಮಹರ್ಷಿಯ ಮುಂದಿನ ಉದ್ಯಮವೇನಾಯಿತು? ಎಂಬುದನ್ನು ತಿಳಿಸಬೇಕು" ಎಂದು ಪ್ರಾರ್ಥಿಸಲು ಆಗ ಸದಾಶಿವನು ಹೀಗೆಂದನು. "ದೇವಿಯೇ, ಕೇಳು. ದಧೀಚಿಮಹರ್ಷಿಯು ಹಾಗೆ ಪ್ರದೋಷಪೂಜೆಯನ್ನು ಸಾಂಗಗೊಳಿಸಿ, ತನ್ನ ಆಶ್ರಮವನ್ನು ಕುರಿತು ಪ್ರಯಾಣ ಮಾಡಲು ಹೊರಟಾಗ, ರಾಜನು ಅವನನ್ನು ಕುರಿತು, ॥೧-೨॥

"ಮಹರ್ಷಿಯೇ, ಶಾಂಭವಾಗ್ರೇಸರನೇ, ಸನಾತನನು ಆಗಸ್ತ್ಯರ ಮಾತನ್ನು ಕೇಳಿ ಮುಂದೇನು ಮಾಡಿದನು ಎಂಬುದನ್ನು ವಿಸ್ತಾರವಾಗಿ ನನಗೆ ತಿಳಿಸಬೇಕು"

ಇತಿ ತದ್ವಚನಂ ಶ್ರುತ್ವಾ ದಧೀಚಿರ್ಮುನಿಪುಂಗವಃ ।
ಸನಾತನಸ್ಯ ವೃತ್ತಾಂತಂ ಪುನರ್ವಕ್ತುಂ ಸಮಾರಭೇ ॥೪॥

॥ ದಧೀಚಿರುವಾಚ ॥

ಶ್ರುತ್ವಾಗಸ್ತ್ಯವಚಸ್ಸಮ್ಯಕ್ಪ್ರಹೃಷ್ಟಃ ಸ ಸನಾತನಃ ।
ಕೃತಾಂಜಲಿಪುಟೋ ಭೂತ್ವಾ ಪ್ರಾಹಾಗಸ್ತ್ಯಂ ತತೋ ನೃಪ ॥೫॥

ಸಂಶ್ರುತಂ ಶಿವಲಿಂಗಾನಾಂ ಮಾಹಾತ್ಮ್ಯಂ ಭುಕ್ತಿಮುಕ್ತಿದಂ ।
ಪುನಶ್ಚ ಶ್ರೋತುಮಿಚ್ಛಾಮಿ ಶ್ರೀಮಹಾದೇವವೈಭವಂ ॥೬॥

॥ ದಧೀಚಿರುವಾಚ ॥

ಇತಿ ತದ್ವಚನಂ ಶ್ರುತ್ವಾ ಹೃಷ್ಟೋಗಸ್ತ್ಯಸ್ತತಃ ಪರಂ ।
ಶಿವಾರ್ಚನಸ್ಯ ಮಾಹಾತ್ಮ್ಯಂ ಮುದಾ ವಕ್ತುಂ ಸಮಾರಭೇ ॥೭॥

॥ ಅಗಸ್ತ್ಯ ಉವಾಚ ॥

ಸರ್ವಭಾವೇನ ಸತತಂ ಪೂಜನೀಯೋ ಮಹೇಶ್ವರಃ ।
ದದಾತಿ ಪೂಜಿತಶ್ಶಂಭುಃ ಭುಕ್ತಿಂ ಮುಕ್ತಿಂ ಚ ಸರ್ವಥಾ ॥೮॥

ಎಂದು ಕೇಳಿಕೊಳ್ಳಲು ಆಗ ದಧೀಚಿಮಹರ್ಷಿಯು ರಾಜನಿಗೆ ಸನಾತನನ ವೃತ್ತಾಂತವನ್ನು ಈ ರೀತಿ ಬೋಧಿಸತೊಡಗಿದನು. ॥೩-೪॥

"ರಾಜನೇ, ಸನಾತನನು ಹಾಗೆ ಅಗಸ್ತ್ಯಮಹರ್ಷಿಗಳ ಮಾತನ್ನು ಕೇಳಿ ಸಂತೋಷಪಟ್ಟು, ಮತ್ತೆ ಅಗಸ್ತ್ಯಮಹರ್ಷಿಯನ್ನು ಕುರಿತು 'ಸ್ವಾಮಿ, ಐಹಿಕ ಮತ್ತು ಆಮುಷ್ಮಿಕ ಸುಖಗಳನ್ನು ಒದಗಿಸುವ ಶಿವಲಿಂಗ ಮಹಿಮೆಯನ್ನು ಕೇಳಿ ಆನಂದಪಟ್ಟೆನು. ಇನ್ನೂ ಮಹಾದೇವನ ವೈಭವವನ್ನು ಕೇಳ ಬಯಸುವೆನು, ದಯೆಯಿಂದ ಹೇಳಬೇಕು.' ಎಂದು ಪ್ರಾರ್ಥಿಸಿದನು. ॥೫-೬॥

ಆಗ ಅಗಸ್ತ್ಯಮಹರ್ಷಿಯು ಪ್ರೀತಿಯಿಂದ ಮತ್ತೆ ಆ ಸನಾತನನಿಗೆ ಶಿವಾರ್ಚನೆಯ ಮಹಿಮೆಯನ್ನು ಹೀಗೆ ವಿವರಿಸಲಾರಂಭಿಸಿದನು ಸಕಲ ವಿಧವಾದ ಭಕ್ತಿಮಾರ್ಗಗಳಿಂದಲೂ ನಾವು ಮಹಾದೇವನನ್ನೇ ಪೂಜಿಸಬೇಕು. ಅದರಿಂದಲೇ ಐಹಿಕವಾದ ಸೌಖ್ಯವನ್ನೂ, ಮುಕ್ತಿಯನ್ನೂ ಪಡೆಯಬಹುದು. ॥೭-೮॥

ಶಿವಲಿಂಗೇ ಸದಾ ಭಕ್ತ್ಯಾ ಪೂಜಿತಃ ಶ್ರೀಮಹೇಶ್ವರಃ ।
ಪ್ರಸೀದತಿ ಪ್ರಸನ್ನಸ್ಸನ್ ಅಭೀಷ್ಟಾನಿ ಪ್ರಯಚ್ಛತಿ ॥೯॥

ಮಹಾದೇವೇ ಸುರಾಧೀಶೇ ಪ್ರಸನ್ನೇ ಸತಿ ಶಂಕರೇ ।
ಇಂದ್ರೋಪೇಂದ್ರಾದಿದೇವಾನಾಂ ಮತ್ರ್ಯೋಽಪ್ಯರ್ಚ್ಯೋಽ ಭವಿಷ್ಯತಿ॥೧೦॥

ಸರ್ವಸಂಪತ್ಪ್ರವೃದ್ಧ್ಯರ್ಥಂ ದುಃಖನಾಶಾಯ ಚಾನ್ವಹಂ ।
ಕರ್ತವ್ಯಮಿತಿ ಯತ್ನೇನ ಮಹೇಶಸ್ಯೈವ ಪೂಜನಂ ॥೧೧॥

ಪುರಾ ಗಜಾಸುರೋ ನಾಮ ರಾಕ್ಷಸೋ ಲೋಕಕಂಟಕಃ ।
ಚಕಾರ ಸರ್ವಲೋಕಾನಾಂ ಪೀಡಾಮತ್ಯಂತದಾರುಣಾಂ ॥೧೨॥

ಶರೀರಮಭವತ್ತಸ್ಯ ಯೋಜನಾರ್ಬುದಮಾಯತಂ ।
ತಸ್ಯ ಸ್ವರ್ಗಾದಿಲೋಕೇಷು ಸರ್ವತ್ರಾಪ್ಯಹತಾ ಗತಿಃ ॥೧೩॥

ಕದಾಚಿದ್ಯಾತಿ ಸಃ ಸ್ವರ್ಗಂ ಸತ್ಯಲೋಕಂ ಕದಾಚನ ।
ಕದಾಚಿದ್ಯಾತಿ ವೈಕುಂಠಂ ವೈಕುಂಠಾದಿಭಯಪ್ರದಃ ॥೧೪॥

ಪರಶಿವನನ್ನು ಶಿವಲಿಂಗದಲ್ಲಿಯೇ ಪೂಜಿಸಬೇಕು. ಅದರಿಂದಲೇ ಆತನು ಪ್ರಸನ್ನನಾಗುವನು. ಮಹಾದೇವನೊಬ್ಬನು ಸುಪ್ರೀತನಾದರೆ ಇತರ ಇಂದ್ರಾದಿದೇವತೆಗಳೆಲ್ಲರೂ, ಈ ಮಹೇಶ್ವರನ ಭಕ್ತನಿಗೆ ಭಕ್ತರಾಗುವರು ॥೯-೧೦॥

ಈಶ್ವರಾರಾಧನೆಯಿಂದ ಸಕಲ ಸಂಪತ್ತುಗಳು ವೃದ್ಧಿಯಾಗುವುವಲ್ಲದೆ ಪ್ರತಿದಿನವೂ ಒದಗುವ ವಿಪತ್ತುಗಳು ನಾಶವಾಗುವುವು. ಅದಕ್ಕಾಗಿ ಮಹೇಶಾರಾಧನೆ ನಡೆಸಬೇಕು. ಹಿಂದೆ ಗಜಾಸುರನೆಂಬ ರಾಕ್ಷಸನು ಲೋಕಕಂಟಕನಾಗಿದ್ದು ಸಕಲ ಲೋಕಗಳಿಗೂ ಅತಿಶಯವಾದ ಪೀಡೆಯನ್ನುಂಟುಮಾಡುತ್ತಿದ್ದನು ॥೧೧-೧೨॥

ಅವನ ದೇಹವು ಯೋಜನಗಟ್ಟಲೆಯಷ್ಟು ಉನ್ನತವಾಗಿದ್ದಿತು. ಸ್ವರ್ಗಾದಿ ಲೋಕಗಳಲ್ಲಿ ಅವನ ನಡೆಯು ಅಪ್ರತಿಹತವಾಗಿತ್ತು. ಆತನು ಸ್ವರ್ಗ, ಸತ್ಯ, ವೈಕುಂಠ ಮುಂತಾದ ಲೋಕಗಳಿಗೆ ತನ್ನ ಮನಬಂದಾಗ ಹೋಗುತ್ತಿದ್ದನು. ॥೧೩-೧೪॥

ಕದಾಚಿದ್ದುರ್ಮದೋ ದುಷ್ಟೋ ಲೀಲಯಾ ಸ ಗಜಾಸುರಃ ।
ಗತ್ವಾ ವೈಕುಂಠಮನಘಂ ದದರ್ಶ ಕಮಲಾಪತಿಂ ॥೧೫॥

ತತಸ್ಸಮಾಗತಂ ವೀಕ್ಷ್ಯ ಕಂಪಯನ್ ಕಮಲಾಪತಿಃ ।
ಗದಾಂ ಜಗ್ರಾಹ ಬಲವಾನ್ ಸನ್ನಿವರ್ತಯಿತುಂ ತದಾ ॥೧೬॥

ಗದಾಽಪಾಣಿಂ ಸಮಾಲೋಕ್ಯ ಕುಪಿತಸ್ಸ ಗಜಾಸುರಃ ।
ವಿಷ್ಣುಂ ಜಗ್ರಾಹ ತುಂಡೇನ ಸಗದಂ ಕಮಲಾನ್ವಿತಂ ॥೧೭॥

ಸ ಚಕ್ರವದ್ಭ್ರಾಮಯಿತ್ವಾ ತಂ ಹರಿಂ ಗಗನಾಂತರೇ ।
ಪಾತಯಾಮಾಸ ಭೂಪೃಷ್ಠೇ ದಾರುಣೇ ಪ್ರಸ್ತರಾನ್ವಿತೇ ॥೧೮॥

ತತೋ ಬ್ರಹ್ಮಾದಿದೇವಾಂಶ್ಚ ಪಾತಯಾಮಾಸ ಕೋಪತಃ ।
ತತಸ್ಸುಖೇನ ವೈಕುಂಠೇ ಕಿಯತ್ಕಾಲಂ ಸ ಸಂಸ್ಥಿತಃ ॥೧೯॥

ತತೋ ವಿಷ್ಣುಮುಖಾಸ್ಸರ್ವೇ ದೇವಾಃ ಸಂಕ್ಷುಬ್ಧಮಾನಸಾಃ ।
ಚುಕ್ರುಶುಸ್ತತ್ರ ಚಾನ್ಯೋನ್ಯಂ ಗಜಾಸುರಪರಾಹತಾಃ ॥೨೦॥

ಒಂದುಸಾರಿ ಆ ಗಜಾಸುರನು ಕೊಬ್ಬಿದವನಾಗಿ ವೈಕುಂಠವನ್ನು ಹೊಂದಿ, ಅಲ್ಲಿದ್ದ ಲಕ್ಷ್ಮೀಪತಿಯಾದ ವಿಷ್ಣುವನ್ನು ನೋಡಿದನು. ಆಗ ವಿಷ್ಣುವು ಎದುರಿಗೆ ಬಂದ ಗಜಾಸುರನನ್ನು ನೋಡಿ, ಅವನನ್ನು ಹಿಂದುರಿಗಿಸಲು ಕೋಪದಿಂದ ಗದೆಯನ್ನು ಹಿಡಿದುಕೊಂಡನು. ॥೧೫-೧೬॥

ಅದನ್ನು ನೋಡಿದೊಡನೆಯೇ ಗಜಾಸುರನಿಗೆ ಕೋಪಹೆಚ್ಚಿತು. ಒಡನೆಯೇ ತನ್ನ ಸೊಂಡಲಿನಿಂದ ಲಕ್ಷ್ಮಿಯೊಡಗೂಡಿದ ಗದಾಪಾಣಿಯಾದ ಆ ವಿಷ್ಣುವನ್ನು ಹಿಡಿದು, ಚಕ್ರದಂತೆ ಆವನನ್ನು ಅಂತರಿಕ್ಷದಲ್ಲಿ ತಿರುಗಿಸಿ, ಬಂಡೆಯಿರುವ ಭೂಭಾಗಕ್ಕೆ ಎಸೆದುಬಿಟ್ಟನು. ॥೧೭-೧೮॥

ಹಾಗೆಯೇ ಬ್ರಹ್ಮಾದಿದೇವತೆಗಳನ್ನೂ ಅವರವರ ಸ್ಥಾನದಿಂದ ಕಿತ್ತೊಗೆದನು. ಅಲ್ಲಿಂದ ಆತನು ವೈಕುಂಠದಲ್ಲಿಯೇ ವಾಸಮಾಡುತ್ತಾ ಸುಖವಾಗಿ ಕಾಲಕಳೆಯುತ್ತಿದ್ದನು. ಇತ್ತ ಬ್ರಹ್ಮಾದಿದೇವತೆಗಳು ಗಜಾಸುರನಿಂದ ಸೋತು ಬಹಳವಾಗಿ ಹೆದರಿ ಪರಸ್ಪರವಾಗಿ ಗೋಳಾಡಲಾರಂಭಿಸಿದರು. ॥೧೯-೨೦॥

ತದಾ ಗೋರೂಪಮಾಸಾದ್ಯ ಭೂಶ್ಚ ಭೂಭಾರಕರ್ಷಿತಾ ।
ದೃಷ್ಟ್ವೋಪೇಂದ್ರಾದಿದೇವಾಂಶ್ಚ ಚುಕ್ರೋಶಾಶು ಸಮಾವೃತಾ ॥೨೦॥

ಅಶ್ರುಸಂಕೀರ್ಣನಯನಾ ರುದತೀ ಖಿನ್ನನಿಃಸ್ವನಾ ।
ಉಪೇಂದ್ರಾದಿಕಾನ್ ದೇವಾನ್ ಗೌರುವಾಚ ತತಃ ಪರಂ ॥೨೧॥

॥ ಭೂಮಿರುವಾಚ ॥

ಅವಸ್ಥೇಯಮಿಯಂ ದೇವಾ ಭವತಾಮಪಿ ದುಃಖದಾ ।
ದುಃಖಸಾಗರಮಗ್ನಾಯಾಃ ಕಾ ವಾರ್ತಾತಃ ಪರಂ ಮಮ ॥೨೩॥

ಕ್ವ ಕರ್ತವ್ಯಂ ಹರೀಂದ್ರಾದ್ಯಾ ಮಯಾ ದುಃಖನಿವೇದನಂ ।
ನ ದೃಶ್ಯತೇ ಮಯಾ ಕೋಽಪಿ ಸುಖೀ ದುಃಖಪ್ರಶಾಮಕಃ ॥೨೪॥

ಭವತ್ಸು ದುಃಖಿತೇಷ್ವೇವ ಕೃತೇ ದುಃಖನಿವೇದನೇ ।
ದುಃಖಶಾಂತಿಃ ಕಥಂ ಭೂಯಾದ್ದುಃಖಾರ್ತಾಯಾ ಮಮಾಧುನಾ॥೨೫॥

ಉಪಸ್ಥಿತೋಧುನಾ ದೇವಾ ವಿಷಮಃ ಕಾಲ ಈದೃಶಃ ।
ನ ಲಭ್ಯತೇ ಸುಖೀ ಕೋಽಪಿ ಯತೋ ದುಃಖಂ ನಿವೇದಿತುಂ ॥೨೬॥

---

ಭೂದೇವಿಯಾದರೋ ದುಷ್ಟ ರಾಕ್ಷಸರ ಭಾರವನ್ನು ಸಹಿಸಲಾರದೆ, ಗೋರೂಪವನ್ನು ಧರಿಸಿ, ಇಂದ್ರೋಪೇಂದ್ರಾದಿ ದೇವತೆಗಳ ಸಮೀಪಕ್ಕೆ ಬಂದು, ಕಣ್ಣೀರಿಡುತ್ತಾ ಕುಗ್ಗಿದ ಧ್ವನಿಯುಳ್ಳವಳಾಗಿ ಹೀಗೆ ಮಾತನಾಡಿದಳು. ॥೨೧-೨೨॥

" ದೇವತೆಗಳಿರಾ, ಈಗ ನಾನು ದುಃಖಸಾಗರದಲ್ಲಿ ಮುಳುಗಿಹೋಗಿರುವೆನು. ನಿಮಗೂ ಸಹ ಅದೇ ಕಷ್ಟವು ತಪ್ಪಲಿಲ್ಲವಲ್ಲ! ಇನ್ನು ನಾನೆಲ್ಲಿಗೆ ಹೋಗಲಿ? ವಿಷ್ಣು, ಇಂದ್ರ ಮೊದಲಾದ ದೇವಶ್ರೇಷ್ಠರಾದ ನೀವೇ ಹೀಗೆ ವ್ಯಥೆಪಡುತ್ತಿರುವಾಗ, ಇನ್ನು ನನ್ನ ದುಃಖವನ್ನು ನಿವಾರಣೆಮಾಡುವವನು ಮತ್ತೆಲ್ಲಿ ದೊರಕುವನು? ಎಲ್ಲಿಯೂ ಕಾಣನಲ್ಲಾ! ॥೨೩-೨೪॥

ನೀವೇ ಇಷ್ಟು ದುಃಖಿತರಾಗಿರುವಾಗ ನಿಮ್ಮಲ್ಲಿ ನನ್ನ ದುಃಖವನ್ನು ಹೇಳಿಕೊಳ್ಳುವುದರಿಂದ ಶಾಂತಿಯೊದಗುವುದೆ? ಅಂತೂ ದೇವತೆಗಳಿಗೆಲ್ಲಾ ಕಷ್ಟಕರವಾದ ವಿಷಮಕಾಲವು ಈಗ ಒದಗಿದೆ ಈ ಕಾಲದಲ್ಲಿ ಸುಖಿಯಾಗಿರುವ ದೇವತೆಯೊಬ್ಬನನ್ನೂ ಕಾಣೆನಲ್ಲಾ! ॥೨೫-೨೬॥

ಶಿವೋऽಸ್ತಿ ಪರಮಾನಂದಃ ಸಚ್ಚಿದಾನಂದಲಕ್ಷಣಃ ।
ನ ದೃಶ್ಯತೇ ಸ ಸರ್ವೇಷಾಂ ಭಕ್ತಾನಾಂ ದುಃಖಶಾಮಕಃ ॥೨೭॥

ಭವದ್ಭಿರಪರಾಧೋऽದ್ಯ ಕಃ ಕೃತಃ ಶ್ರೀಮಹೇಶ್ವರೇ ।
ಯೇನೈಕದೇವ ಭವತಾಮಧಿಕಾರಾ ಗತಾಃ ಸುರಾಃ ॥೨೮॥

ಪ್ರಾಯಶಃ ಶ್ರೀ ಮಹಾದೇವೋ ಭವತ್ಸ್ವದ್ಯ ಪರಾಙ್ಮುಖಃ ।
ಅನ್ಯಥಾ ದುರವಸ್ಥೇಯಮೀದೃಶೀ ಭವತಾಂ ಕಥಂ ॥೨೯॥

ಅಶುಭಂ ಜಾಯತೇ ತೇಷಾಂ ಯೇಷಾಮೀಶಃ ಪರಾಙ್ಮುಖಃ
ಶುಭಾನಿ ತೇಷಾಮೇಷಾಂ ಸ್ಯಾತ್ಪ್ರಸನ್ನಃ ಶ್ರೀ ಮಹೇಶ್ವರಃ ॥೩೦॥

ಅಧಿಕಾರಾಃ ಪುರಾ ಪ್ರಾಪ್ತಾ ಭವದ್ಭಿರ್ಯತ್ಪ್ರಸಾದತಃ ।
ತಮೇವ ಸರ್ವಭಾವೇನ ಭಜಧ್ವಂ ಶ್ರೀ ಮಹೇಶ್ವರಂ ॥೩೧॥

ಕಿಮರ್ಥಂ ಕ್ರಿಯತೇ ದುಃಖಂ ಶರಣ್ಯೇ ಸತಿ ಶಂಕರೇ ।
ಸ ಸಚ್ಚಿದಾನಂದಘನಃ ಕೃಪಾನಿಧಿರುದಾರಧೀಃ ॥೩೨॥

ಆದರೆ ನಮ್ಮೆಲ್ಲರಿಗೂ ಶ್ರೇಷ್ಠನೆನಿಸಿ, ಸಚ್ಚಿದಾನಂದರೂಪಿಯಾಗಿರುವ ಪರಶಿವನೊಬ್ಬನು ಪ್ರತ್ಯೇಕನಾಗಿರುವನು. ಅವನೇ ಭಕ್ತರಕ್ಷಕನು. ಮತ್ತು ಸುಖಕರನು. ನೀವು ಯಾರೂ ಪರಶಿವನಿಗೆ ಅಪರಾಧಿಗಳಲ್ಲ. ಆದ್ದರಿಂದ ನೀವೆಲ್ಲರೂ ಒಟ್ಟಾಗಿ ಹೋಗಿ ಏತಕ್ಕಾಗಿ ಶಿವನನ್ನು ನೋಡಬಾರದು ? ॥೨೭-೨೮॥

ಪ್ರಾಯಶಃ ಮಹಾದೇವನು ಈಗ ನಿಮಗೆ ವಿರುದ್ಧನಾಗಿಲ್ಲ. ಹಾಗಿದ್ದರೆ ಈಗ ನಿಮಗೆ ಇನ್ನೂ ಕಷ್ಟಸ್ಥಿತಿಯೊದಗುತ್ತಿತ್ತು. ಮಹೇಶ್ವರನ ಅನುಗ್ರಹದಿಂದ ಶುಭಪರಂಪರೆಯು ದೊರಕುವಂತೆ, ಅವನ ಆಗ್ರಹದಿಂದ ಅಶುಭಗಳೂ ವೃದ್ಧಿ ಹೊಂದುತ್ತವೆ. ॥೨೯-೩೦॥

ನೀವು ಯಾವ ಪರಶಿವನ ಅನುಗ್ರಹದಿಂದ ಈ ಅಧಿಕಾರಗಳನ್ನು ಹಿಂದೆ ಪಡೆದರೋ ಈಗ ಅಂತಹ ಪರಶಿವನನ್ನೇ ಶರಣು ಹೊಂದಿರಿ ನಿಮಗೆಲ್ಲಾ ರಕ್ಷಕನಾದ ಶಂಕರನು ಸಚ್ಚಿದಾನಂದರೂಪಿಯಾಗಿ, ಉದಾರಸ್ವಭಾವದಿಂದಿರುವಾಗ ಏತಕ್ಕಾಗಿ ವ್ಯಥೆಪಡುತ್ತಿರುವಿರಿ." ॥೩೧-೩೨॥

॥ ಅಗಸ್ತ್ಯ ಉವಾಚ ॥

ಇತಿ ತದ್ವಚನಂ ಶ್ರುತ್ವಾ ಸರ್ವದುಃಖವಿನಾಶಕಂ ।
ವಿಷ್ಣುಬ್ರಹ್ಮಾದಯೋ ದೇವಾ ಹಿಮವಂತಂ ಯಯುಸ್ತದಾ ॥೩೩॥

ವಿಷ್ಣ್ವಾದೀನ್ ಹಿಮವಾನ್ ದೃಷ್ಟ್ವಾ ಕೃತ್ವಾರ್ಘ್ಯಾದಿಕಮಾದರಾತ್ ।
ವ್ಯಗ್ರಚಿತ್ತಾನ್ ಸ ಪಪ್ರಚ್ಛ ವೈಯಗ್ರ್ಯಂ ಕಿಮಭೂದಿತಿ ॥೩೪॥

॥ ದೇವಾ ಊಚುಃ ॥

ವಯಂ ಸರ್ವೇಽಪ್ಯೇಕದೈವ ಗಜಾಸುರಪರಾಹತಾಃ ।
ಅಸ್ಮಾಕಮಧಿಕಾರಾಶ್ಚ ಹೃತಾಸ್ತೇನೈಕದೈವ ಹಿ

ಕಥಂ ವಾ ಪುನರಸ್ಮಾಕಮಧಿಕಾರಾನ್ಮಹೇಶ್ವರಃ ।
ಕೃತ್ವಾ ಪೂರ್ವವದೇವಾಸ್ಮಾನ್ ಪಾಲಯಿಷ್ಯತಿ ತದ್ವದ ॥೩೬॥

ಅಗಸ್ತ್ಯ ಉವಾಚ

ಕಥಂ ವಾ ಶ್ರೀ ಮಹಾದೇವಃ ಶೀಘ್ರಂ ಸಿದ್ಧಿಂ ಪ್ರಯಚ್ಛತಿ ।
ಸರ್ವಸಿದ್ಧಿಕರೋ ಧರ್ಮಃ ಕೋ ವಾ ತದ್ವದ ಸಾದರಂ ॥೩೭॥

ಎಂದು ಹೇಳಿದ ಭೂದೇವಿಯ ಮಾತುಗಳನ್ನು ಕೇಳಿ, ವಿಷ್ಣುಬ್ರಹ್ಮಾದಿ ದೇವತೆಗಳೆಲ್ಲರೂ ಹಿಮವಂತನನ್ನು ಕುರಿತು ಪ್ರಯಾಣಮಾಡಿದರು. ಹಾಗೆ ಬಂದ ವಿಷ್ಣ್ವಾದಿ ದೇವತೆಗಳಿಗೆ ಅರ್ಘ್ಯಪಾದ್ಯಾದಿಗಳನ್ನಿತ್ತು, ಹೀಗೆ ಅಕಸ್ಮಾತ್ತಾಗಿ ಬರಲು ಉಂಟಾದ ಮನಃಕಷಾಯವೇನೆಂಬುದಾಗಿ ಪ್ರಶ್ನಿಸಿದನು. ॥೩೩-೩೪॥

ಆಗ ದೇವತೆಗಳು ಹೀಗೆಂದರು "ಹಿಮವಂತರಾಜನೇ, ಗಜಾಸುರನೆಂಬ ದುಷ್ಟರಾಕ್ಷಸನೊಬ್ಬನು ನಮ್ಮೆಲ್ಲರನ್ನೂ ಸೋಲಿಸಿ, ನಮ್ಮ ಅಧಿಕಾರಗಳನ್ನು ನಮ್ಮಿಂದ ಕಸಿದುಕೊಂಡಿರುವನು. ಈ ಕಾಲದಲ್ಲಿ ಮತ್ತೆ ನಮ್ಮ ಅಧಿಕಾರವನ್ನು ಅವರಿಂದ ಹಿಂದಿರುಗಿಸಿ ಕೊಡಲು ಮಹೇಶ್ವರನೊಬ್ಬನೇ ಸಮರ್ಥನು. ಆ ಶಂಕರನು ಹೇಗೆ ಕೊಡಿಸುತ್ತಾನೆಯೋ ನಮಗೆ ಅದು ತಿಳಿಯದು ॥೩೫-೩೬॥

ನಾವು ಯಾವ ಧರ್ಮದಿಂದಿದ್ದರೆ ಶಂಕರನು ಸುಪ್ರೀತನಾಗಿ ನಮಗೆ ಅನು ಗ್ರಹಮಾಡುವನು? ಸರ್ವಸಿದ್ಧಿಯನ್ನೂ ಒದಗಿಸುವ ಧರ್ಮವಾವುದು? ಸರ್ವತ

ಇತಿ ತದ್ವಚನಂ ಶ್ರುತ್ವಾ ಹಿಮವಾನ್ ಶಂಕರಪ್ರಿಯಃ ।
ಸರ್ವಸಿದ್ಧಿಕರಂ ಧರ್ಮಂ ಮುನೇ ವಕ್ತುಂ ಸಮಾರಭೇ ॥೩೮॥

॥ ಹಿಮವಾನುವಾಚ ॥

ಭೋ ವಿಷ್ಣುಪ್ರಮುಖಾ ದೇವಾ ಭವಂತಃ ಪಾರ್ವತೀಪತಿಂ ।
ಪೂಜಯಧ್ವಂ ಪ್ರಯತ್ನೇನ ಶಿವಲಿಂಗಸ್ವರೂಪಿಣಂ ॥೩೯॥

ಪೂಜಿತಃ ಶ್ರೀ ಮಹಾದೇವಃ ಶಿವಲಿಂಗೇ ಶಿವಾತ್ಮಕೇ ।
ದಾಸ್ಯತ್ಯಭೀಷ್ಟಾನಖಿಲಾನ್ ಭವದ್ಭ್ಯೋ ಭಗವಾನ್ ಶಿವಃ ॥೪೦॥

ಶ್ರೌತಾನಿ ಶಿವಲಿಂಗಾನಿ ಸಂತಿ ನಾನಾವಿಧಾನಿ ತು ।
ತಥಾಪಿ ತೇಷು ಮೃಲ್ಲಿಂಗಂ ಶೀಘ್ರಂ ಸರ್ವಾರ್ಥಸಿದ್ಧಿದಂ ॥೪೧॥

ತತೋ ಭವಂತೋ ಯತ್ನೇನ ಮೃಲ್ಲಿಂಗಂ ಭಕ್ತಿಪೂರ್ವಕಂ ।
ಪೂಜಯಧ್ವಂ ವಿಧಾನೇನ ಭಸ್ಮಸ್ನಾನಪುರಸ್ಸರಂ ॥೪೨॥

ರಾಜನೇ, ಅದನ್ನು ನಮಗೆ ತಿಳಿಯಹೇಳುವೆಯಾ!" ಎಂದು ಕೇಳಿಕೊಂಡ ದೇವತೆಗಳಿಗೆ ಉತ್ತರವಾಗಿ, ಶಂಕರಪ್ರಿಯನಾದ ಹಿಮವಂತನು ಸರ್ವಸಿದ್ಧಿಪ್ರದವಾದ ಶಿವಧರ್ಮವನ್ನು ವಿವರಿಸಿ ಹೇಳಲುಪಕ್ರಮಿಸಿದನು. ॥೩೭-೩೮॥

ಎಲೈ ವಿಷ್ಣುಮುಖರಾದ ದೇವತೆಗಳಿರಾ, ನೀವು ಈಗ ಪ್ರಯತ್ನಪೂರ್ವಕವಾಗಿ ಶಿವಲಿಂಗಸ್ವರೂಪಿಯಾದ ಪರಶಿವನನ್ನು ಭಕ್ತಿಯಿಂದ ಪೂಜಿಸಿರಿ. ಶಿವಾತ್ಮಕವಾದ ಶಿವಲಿಂಗದ ಆರಾಧನೆಯಿಂದ ಮಹಾದೇವನು ಸುಪ್ರೀತನಾಗಿ ನಿಮಗೆ ಸಕಲ ಅಭೀಷ್ಟಗಳನ್ನೂ ಒದಗಿಸುವನು. ॥೩೯-೪೦॥

ದೇವತೆಗಳಿರಾ, ಶಿವಲಿಂಗಗಳು ನಾನಾವಿಧಗಳಾಗಿ ಉಕ್ತವಾಗಿವೆ. ಅವೆಲ್ಲವೂ ಶ್ರುತಿಸಂಮತಗಳೇ. ಆದರೆ ಮೃನ್ಮಯಲಿಂಗವು ಮಾತ್ರ ಸರ್ವಾರ್ಥಸಿದ್ಧಿಪ್ರದವಾದುದು. ಆದ್ದರಿಂದ ನೀವು ಈಗಲೇ ಸರ್ವಪ್ರಯತ್ನದಿಂದಲೂ, ಭಕ್ತಿಪೂರ್ವಕವಾಗಿ ಮೃನ್ಮಯಲಿಂಗವನ್ನು ಭಸ್ಮಸ್ನಾನದಿಂದ ಅರ್ಚನೆಮಾಡಿರಿ. ॥೪೧-೪೨॥

ಕುರ್ವಂತ್ವಷ್ಟಾಂಗುಲಂ ಲಿಂಗಮಥವಾ ದ್ವಾದಶಾಂಗುಲಂ।
ದ್ವಾತ್ರಿಂಶದಂಗುಲಂ ವಾಪಿ ಶುದ್ಧಶೋಧಿತಮೃತ್ಸ್ನಯಾ ॥೪೩॥

ಲಿಂಗಂ ಷಡಂಗುಲಾನ್ನ್ಯೂನಂ ನ ಕರ್ತವ್ಯಂ ಕದಾಚನ।
ತತೋಽಧಿಕಂ ತು ಕರ್ತವ್ಯಂ ಸ್ವಸ್ವಶಕ್ತ್ಯನುರೋಧತಃ ॥೪೪॥

ಅಖಂಡಬಿಲ್ವಪತ್ರಾಣಿ ಕೋಮಲಾನಿ ನವಾನ್ಯಪಿ।
ಸಂಪಾದ್ಯ ಶ್ರೀ ಮಹಾದೇವಂ ಯೇಽರ್ಚಯಂತಿ ಪ್ರಯತ್ನತಃ ॥೪೫॥

ಅನನ್ಯಶರಣಾಸ್ಸಂತಃ ಪೂಜಯಧ್ವಂ ಮಹೇಶ್ವರಂ।
ಭಸ್ಮರುದ್ರಾಕ್ಷಪೂತಾಂಗಾಃ ಶಿವನಾಮ್ನ್ಯೈವ ಸಾದರಂ ॥೪೬॥

ಅನನ್ಯಾಃ ಶ್ರೀ ಮಹಾದೇವಂ ಯೇಽರ್ಚಯಂತಿ ಪ್ರಯತ್ನತಃ।
ತೇಷಾಮಭೀಷ್ಟಾನಖಿಲಾನ್ ಪ್ರಯಚ್ಛತಿ ಸದಾಶಿವಃ ॥೪೭॥

ಅತೋಽನನ್ಯಾ ಭವಂತೋಽಪಿ ಭಜಧ್ವಂ ಶ್ರೀ ಮಹೇಶ್ವರಂ।
ಭವತಾಮಪಿ ಸುಪ್ರೀತೋ ಭವಿಷ್ಯತಿ ಮಹೇಶ್ವರಃ ॥೪೮॥

ಶುದ್ಧವಾದ ಮೃತ್ತಿಕೆಯಿಂದ ಎಂಟು, ಹನ್ನೆರಡು ಅಥವಾ ಮೂವತ್ತೆರಡು ಅಂಗುಲಗಳಷ್ಟು ಎತ್ತರದ ಶಿವಲಿಂಗವನ್ನು ನಿರ್ಮಾಣಮಾಡಿಕೊಳ್ಳಿರಿ. ಅಂಗುಲ ಮಾನದಲ್ಲಿ ಲಿಂಗವು ಎಂದೂ ಆರಂಗುಲಕ್ಕೆ ಕಮ್ಮಿಯಿರಕೂಡದು. ಮೂವತ್ತೆರಡಕ್ಕೆ ಮೀರಿರಬಾರದು. ಅವರ ಶಕ್ತ್ಯನುಸಾರವಾಗಿ ಅಂಗುಲಮಾನದಿಂದ ಮೃಲ್ಲಿಂಗವನ್ನು ನಿರ್ಮಿಸಿಕೊಳ್ಳಬೇಕು ॥೪೩-೪೪॥

ಆದಕ್ಕೆ ಕೋಮಲವಾದ ಮತ್ತು ಭಿನ್ನವಾಗದ ಬಿಲ್ವಪತ್ರೆಗಳನ್ನು ತಂದು ಶಿವನಾಮಗಳನ್ನುಚ್ಚರಿಸುತ್ತಾ, ಅನನ್ಯ ಮನಸ್ಕರಾಗಿ ಭಕ್ತಿಯಿಂದ ಪೂಜಿಸಿರಿ. ಮೊದಲು ನಿಮ್ಮ ದೇಹವನ್ನು ಭಸ್ಮರುದ್ರಾಕ್ಷಿಮಾಲೆಗಳಿಂದ ಪವಿತ್ರಗೊಳಿಸಿರಿ. ॥೪೫-೪೬॥

ಅನನ್ಯ ಶರಣರಾಗಿ ಯಾರು ಮಹಾದೇವನನ್ನೇ ಭಕ್ತಿಯಿಂದರ್ಚಿಸುವರೋ, ಅವರು ಸಕಲ ಇಷ್ಟಾರ್ಥಗಳನ್ನೂ ಅನಾಯಾಸವಾಗಿ ಪಡೆಯುವರು. ಆದ್ದರಿಂದ ನೀವು ಮತ್ತಾರನ್ನೂ ಆಶ್ರಯಿಸದೆ ಶಂಕರನನ್ನೇ ಮೊರೆಹೋಗಿರಿ. ನಿಮಗೆ ಮಹೇಶ್ವರನು ವರಪ್ರದನಾಗುವನು ” ॥೪೭-೪೮॥

|| ಅಗಸ್ತ್ಯ ಉವಾಚ ||

ಇತಿ ತದ್ವಚನಂ ಶ್ರುತ್ವಾ ವಿಷ್ಣುಬ್ರಹ್ಮಪುರೋಗಮಾಃ ।
ಪ್ರಹೃಷ್ಟಹೃದಯಾಃ ಪ್ರಾಹುರ್ಹಿಮವಂತಂ ಶಿವಾರ್ಚಕಂ ||೪೯||

|| ದೇವಾ ಊಚುಃ ||

ಅಸ್ಮಾಕಂ ಶ್ರೀ ಮಹೇಶಾನ್ಯಃ ಪೂಜ್ಯೋಽಸ್ತೀತಿ ಕಿಂ ಮತಿಃ ।
ಭವಾನೋ ಯೇನ ನಾಸನ್ಯಾಃ ಶಿವಾನ್ಯೋಽರ್ಚ್ಯೋಽಸ್ತಿ ಕಿಂ ಸುರೈಃ ||೫೦||

ಅಸ್ಮಾಕಮಾಪದುದ್ಧರ್ತಾ ಸಂಪದ್ದಾತಾ ಚ ಶಂಕರಃ ।
ಕಶ್ಚಿನ್ನಾನ್ಯೋಽಸ್ಮದಾರಾಧ್ಯೋ ದುರಾರಾಧ್ಯೋ ದುರಾತ್ಮನಾಂ ||೫೦||

ಅಸ್ಮಾಕಂ ಪ್ರಭುರಾರಾಧ್ಯಃ ಪಿತಾ ಮಾತಾ ಸುತಾ ಸುಹೃತ್ ।
ಭ್ರಾತಾ ಚ ಭಗವಾನೇಕೋ ಭವಾನೀಪ್ರಾಣವಲ್ಲಭಃ ||೫೨||

ಮಹಾಪದ್ದುಃಖಮತ್ತೇಭಕುಂಭನಿರ್ಭೇದನಕ್ಷಮಃ ।
ಭಗವಾನ್ ಶಂಭುರೇವೈಕಸ್ತದನ್ಯೋಽರ್ಚ್ಯೋ ನ ಸರ್ವಥಾ

ಎಂದ ಹಿಮವಂತನ ಮಾತುಗಳನ್ನು ಕೇಳಿ ದೇವತೆಗಳು ಮತ್ತೆ ಹೀಗೆಂದರು "ಎಲೈ ಹಿಮವಂತನೇ, ದೇವತೆಗಳಾದ ನಮಗೆ ಶಂಕರನನ್ನು ಬಿಟ್ಟರೆ ರಕ್ಷಕರು ಮತ್ತಾರಿರುವರು? ಒಂದುವೇಳೆ ಮತ್ತೊಬ್ಬನಿರುವನೆಂಬ ಭಾವನೆಯಿರುವುದಾದರೆ ಅದು ಶುದ್ಧ ತಪ್ಪು. ದೇವತೆಗಳಿಗೆ ಪೂಜ್ಯದೇವತೆಯೆಂದರೆ ಶಂಕರನೊಬ್ಬನೇ. ||೪೯-೫೦||

ನಮ್ಮ ಆಪತ್ತನ್ನು ನಿವಾರಿಸಿ, ನಮಗೆ ಸಂಪತ್ತನ್ನನುಗ್ರಹಿಸುವವನು ಪರಶಿವನೊಬ್ಬನೇ. ಅವನು ಎಂದೂ ದುಷ್ಟರಿಗೆ ವಶನಾಗನು. ನಮಗಾದರೋ, ತಾಯಿ, ತಂದೆ, ಅಣ್ಣ, ತಮ್ಮ, ಮಕ್ಕಳು, ಸ್ನೇಹಿತರು ಎಲ್ಲರೂ ಭವಾನೀಪತಿಯಾದ ಶಂಕರನೇ ಎಂಬ ಭಾವನೆಯಿದೆ. ||೫೧-೫೨||

ದೊಡ್ಡ ವಿಪತ್ತೆಂಬ ಮದ್ದಾನೆಯ ಕುಂಭವನ್ನು ಭೇದಿಸುವ ಸಿಂಹವೆಂದರೆ ಪರಶಿವನೊಬ್ಬನೇ. ಅವನೇ ಸಕಲರಿಗೂ ಪೂಜ್ಯನು. ಅವನನ್ನೇ ಈಗ ನೀನು

|| ಅಗಸ್ತ್ಯ ಉವಾಚ ||

ಇತ್ಯುಕ್ತ್ವಾ ತೇ ಸುರಾಸ್ಸರ್ವೇ ತತ್ರೈವ ಗಿರಿಗಹ್ವರೇ ।
ಮುನೇ ಪಾರ್ಥಿವಲಿಂಗಾನಾಂ ಪೂಜಾಂ ಕರ್ತುಂ ಸಮುದ್ಯತಾಃ ||೫೪||

ತತಃ ಪಾರ್ಥಿವಲಿಂಗಾನಿ ಕೃತ್ವಾ ವಿಧಿವದಾದರಾತ್ ।
ಬಿಲ್ವಪತ್ರಪ್ರಸೂನಾದ್ಯೈಶ್ಚಕ್ರುಃ ಪೂಜಾಂ ಯಥಾಕ್ರಮಂ ||೫೫||

ಏವಮೇವ ಸುರಾಸ್ಸರ್ವೇ ತ್ರಿಕಾಲಂ ವತ್ಸರಾವಧಿ ।
ಪೂಜಾಂ ಕೃತ್ವಾ ಸ್ಥಿತಾಸ್ತತ್ರ ಕೃತಪಾಶುಪತವ್ರತಾಃ ||೫೬||

ತತಶ್ಶ್ರೀಮಾನ್ಮಹಾದೇವೋ ಬ್ರಹ್ಮವಿಷ್ಣ್ವಾದಿಪೂಜಿತಃ ।
ಕೃತವ್ರತಾನಾಂ ದೇವಾನಾಂ ಪ್ರತ್ಯಕ್ಷೋಽಭೂತ್ಕೃಪಾನಿಧಿಃ ||೫೭||

ದೇವದೇವಮುಮಾಕಾಂತಂ ನಾನಾಭರಣಭೂಷಿತಂ ।
ಅಚಿಂತ್ಯವಿಭವಂ ಶುದ್ಧಮನಿರ್ದೇಶ್ಯಮನಾಮಯಂ ||೫೮||

ಸೋಮಸೂರ್ಯಾಗ್ನಿನಯನಮನಂತಗುಣಸೇವಿತಂ ।
ಅನಂತಸೋಮಸೂರ್ಯಾಗ್ನಿಪ್ರಭಾಧಿಕಮಹಾಪ್ರಭಂ ||೫೯||

ಕರ್ಪೂರಗಿರಿಸಂಕಾಶಮಹಾವೃಷಭಸಂಸ್ಥಿತಂ ।
ಕರ್ಪೂರಗೌರಂ ಸರ್ವೇಶಂ ವಿಷ್ಣ್ವಾದ್ಯಾ ದದೃಶುಶ್ಶಿವಂ ||೬೦||

---

ಹೇಳಿದಂತೆ ಅರ್ಚನೆಮಾಡುವೆವು ಎಂದು ಸಕಲ ದೇವತೆಗಳೂ ಪಾರ್ಥಿವಲಿಂಗ ಪೂಜೆಗಾಗಿ ತ್ವರೆಪಡುತ್ತಾ ಹೊರಟರು ||೫೩-೫೪||

ವಿಧಿವತ್ತಾಗಿ ಪಾರ್ಥಿವಲಿಂಗವನ್ನು ಅವರು ಮಾಡಿಕೊಂಡು ಅದನ್ನು ಬಿಲ್ವಪತ್ರಾದಿಸಾಮಗ್ರಿಗಳಿಂದ ತ್ರಿಕಾಲದಲ್ಲಿಯೂ ಆರಾಧಿಸುತ್ತಾ, ಎಲ್ಲ ದೇವತೆಗಳೂ ಪಾಶುಪತವ್ರತವಿಧಾನದಿಂದ ಒಂದುವರ್ಷಪರ್ಯಂತ ಶಿವಾರಾಧನೆ ಮಾಡಿದರು. ||೫೫-೫೬||

ಹೀಗೆ ದೇವತೆಗಳು ಭಕ್ತಿಯಿಂದ ವ್ರತವನ್ನು ಮುಗಿಸಲು ಅದರಿಂದ ಸಂತುಷ್ಟನಾದ ಪರಶಿವನು ದೇವತೆಗಳಿಗೆ ಪ್ರತ್ಯಕ್ಷನಾದನು. ಶಂಕರನಾದರೋ ಅಚಿಂತ್ಯಮಹಿಮನು, ದೇವದೇವನು, ಪಾರ್ವತೀಪತಿಯು, ನಾನಾವಿಧವಾದ ಆಭರಣಗಳಿಂದ ಅಲಂಕೃತನಾದವನು, ಆತನಿಗೆ ಸೂರ್ಯಚಂದ್ರಾಗ್ನಿಗಳೇ ನೇತ್ರತ್ರಯಗಳು. ಆವನ ಮಹಿಮೆಯನ್ನಾಗಲಿ, ಗುಣವನ್ನಾಗಲಿ, ಕ್ರಿಯೆಯನ್ನಾಗಲಿ, ಸುಲಭವಾಗಿ ತಿಳಿಯಲಾಗುವುದಿಲ್ಲ. ಅಸಂಖ್ಯಾತರಾದ ಸೂರ್ಯಚಂದ್ರಾಗ್ನಿಗಳ ಸಮೂಹದಂತೆ ವಿರಾಜಿ

|| ದೇವಾ ಊಚುಃ ||

ತತಃ ಪ್ರಣಮ್ಯ ಬಹುಧಾ ಪೂಜಯಿತ್ವಾ ಚ ಶಂಕರಂ ।
ಸ್ತೋತುಮಾರೇಭಿರೇ ಭಕ್ತ್ಯಾ ವಿಷ್ಣುಬ್ರಹ್ಮಾದಯಸ್ಸುರಾಃ ॥೬೧॥

ಜಯ ಜಯ ಶಂಭೋ ಗಿರಿಜಾಬಂಧೋ ।
ಜಯ ಜಯ ಶಂಭೋ ಭೂತಪತೇ ॥೬೨॥

ನಾಮ್ನೈವೋತ್ತಮ ತವ ಹರ ವಿಮಲಂ
ಮಂಗಲದಾಯಕಮಂಗಲದಂ ।
ಗಿರಿಶ ಮಹಾಪಜ್ಜಲಧೇರಸ್ಮಾ
ನುದ್ಧರ ಧೀರಕೃಪಾಜಲಧೇ ॥೬೩॥

ಶಿವಸುರನಾಯಕ ಮಂಗಲವಿಗ್ರಹ
ಕುರುಕುರು ಮಂಗಲಮಾಶು ವಿಭೋ ।
ಗಿರಿಶ ಮಹಾಪಜ್ಜಲಧೇರಸ್ಮಾ
ನುದ್ಧರ ಧೀರಕೃಪಾಜಲಧೇ ॥೬೪॥

---

ಸುತ್ತಿರುವನು, ಪರಶಿವನವಾಹನವಾದ ವೃಷಭವಾದರೋ ಕರ್ಪೂರಪರ್ವತದಂತೆ ಶುಭ್ರವಾಗಿರುವುದು. ಕರ್ಪೂರರಾಶಿಯಂತೆ ಧಾವಳ್ಯದಿಂದ ಪ್ರಕಾಶಿಸುವ ಇಂತಹ ಪರಶಿವನು ದೇವತೆಗಳ ಕಣ್ಣಿಗೆ ಆಗ ಗೋಚರನಾದನು. ||೫೭-೫೮-೫೯-೬೦||

ಅನಂತರ ವಿಷ್ಣುಬ್ರಹ್ಮಾದಿದೇವತೆಗಳೆಲ್ಲರೂ ಶಂಕರನನ್ನು ಪೂಜಿಸಿ, ಭಕ್ತಿಯಿಂದ ಈರೀತಿ ಸ್ತುತಿಸಲಾರಂಭಿಸಿದರು. " ಪರಶಿವನೇ, ಗೌರೀರಮಣನೇ, ಸಕಲ ಪ್ರಾಣಿವರ್ಗಕ್ಕೂ ಒಡೆಯನಾದವನೇ, ಗಿರೀಶನೇ, ಶಂಕರನೇ, ಮಹತ್ತಾದ ವಿಪತ್ತಿಗೆ ಸಿಕ್ಕಿರುವ ನಮ್ಮನ್ನು ಕಷ್ಟಸಾಗರದಿಂದ ಉದ್ಧರಿಸು. ||೬೧-೬೨||

ಮಹಾದೇವನೇ, ನಿನ್ನ ಪವಿತ್ರನಾಮಸ್ಮರಣೆಯೇ ಭಕ್ತರಿಗೆ ಸಕಲ ಸನ್ಮಂಗಳನ್ನೂ ಒದಗಿಸಿಕೊಡುವುದಲ್ಲವೆ! ಅಂತಹ ಕೃಪಾಜಲಧಿಯಾದ ನೀನು ನಮ್ಮನ್ನು ಭವಸಾಗರದಿಂದ ಉದ್ಧರಿಸು. ||೬೩||

ಸಕಲ ದೇವತೆಗಳಿಗೂ ಅಧಿನಾಯಕನೆನಿಸಿ, ಮಂಗಳಕರವಾದ ಶರೀರವುಳ್ಳ ಮಹಾದೇವನೇ, ನಮಗೆ ಜಾಗ್ರತೆಯಾಗಿ ಸಕಲ ಸನ್ಮಂಗಳಗಳನ್ನೂ ಕರುಣಿಸು. ||೬೪||

ಶರಣಂ ಯಾಮುಶ್ಚರಣದ್ವಂದ್ವಂ
ತವ ಕಮಲಾಮಲಮನುವೇಲಂ ।
ಗಿರಿಶ ಮಹಾಪಜ್ಜಲಧೇರಸ್ಮಾ
ನುದ್ಧರ ಧೀರಕೃಪಾಜಲಧೇ ॥೬೫॥

ತವ ಪದಕಮಲಾದಮಲಾದನ್ಯತ್
ಚಿಂತಿತಮಪಿ ನಹಿ ಚೇತಸಿ ಶಂಭೋ ।
ಗಿರಿಶ ಮಹಾಪಜ್ಜಲಧೇರಸ್ಮಾ
ನುದ್ಧರ ಧೀರಕೃಪಾಜಲಧೇ ॥೬೬॥

ಶಿವ ವಯಮಶಿವಂ ನ ಭಜಾಮಸ್ತ್ವಯಿ
ಸತಿ ಸಶಿವೇ ಶಿವ ಶಿವಮೂರ್ತೇ ।
ಗಿರಿಶ ಮಹಾಪಜ್ಜಲಧೇರಸ್ಮಾ
ನುದ್ಧರ ಧೀರಕೃಪಾಜಲಧೇ ॥೬೭॥

ಭಗವನ್ ಭವತಾ ಭವತಾಪಹೃತಾ
ನ ಹೃತಂ ದುರಿತಂ ಕಿಂ ನು ಕೃತಂ ।
ಗಿರಿಶ ಮಹಾಪಜ್ಜಲಧೇರಸ್ಮಾ
ನುದ್ಧರ ಧೀರಕೃಪಾಜಲಧೇ ॥೬೮॥

ಮಹೇಶ್ವರನೇ, ಕಮಲದಂತೆ ಮೃದುವಾಗಿರುವ ನಿನ್ನ ಪಾದಪದ್ಮಗಳನ್ನು ನಾವು ಈಗ ಶರಣುಹೊಂದಿರುವೆವು. ಮಹಾದೇವನೇ, ನಮ್ಮ ಕಷ್ಟಪರಂಪರೆಗಳನ್ನೆಲ್ಲಾ ಈಗಲೇ ಪರಿಹರಿಸು. ||೬೫||

ಶಂಭುವೇ, ನಿನ್ನ ಪಾದಕಮಲವನ್ನು ಬಿಟ್ಟು ಮತ್ತಾವ ದೇವರನ್ನೂ ನಾವು ಮನಸ್ಸಿನಲ್ಲಿಯೂ ಸ್ಮರಿಸುವುದಿಲ್ಲ. ಅಂತಹ ನಮ್ಮನ್ನು ಈಗ ಕಷ್ಟದಿಂದ ಪಾರುಮಾಡು. ||೬೬||

ಮಹಾದೇವನೇ, ಪಾರ್ವತೀರಮಣನೆನಿಸಿದ ನೀನಿರಲಾಗಿ ನಾವು ಅಮಂಗಳವನ್ನು ಪಡೆಯುವಂತಹ ಸಂಭವವೇ ಇಲ್ಲವಷ್ಟೆ. ಸಂಸಾರದ ತಾಪಗಳನ್ನೆಲ್ಲಾ ಪರಿಹರಿಸುವ ನೀನು ಇನ್ನೂ ನಮ್ಮ ದುರಿತರಾಶಿಯನ್ನು ಏತಕ್ಕಾಗಿ ದೂರಮಾಡಿಲ್ಲ? ಪರಶಿವನೇ, ಅನುಗ್ರಹಮಾಡಿ ನಮ್ಮ ಪಾಪವನ್ನು ಪರಿಹರಿಸು. ||೬೭-೬೮||

ಸಕೃದಪಿ ತವ ಹರ ನಾಮಸ್ಮರಣಂ
ಕೃತಮಘಕುಲಹರಮತಿಶುಭದಂ ।
ಗಿರಿಶ ಮಹಾಪಜ್ಜಲಧೇರಸ್ಮಾ
ನುದ್ಧರ ಧೀರಕೃಪಾಜಲಧೇ ॥೬೯॥

ಸ್ಮೃತಮಪಿ ಹರ ತವ ಚರಣದ್ವಂದ್ವಂ
ಹರತಿ ವಿಷಾದಂ ಕಿಮು ದೃಷ್ಟಂ ।
ಗಿರಿಶ ಮಹಾಪಜ್ಜಲಧೇರಸ್ಮಾ
ನುದ್ಧರ ಧೀರಕೃಪಾಜಲಧೇ ॥೭೦॥

ಭವ ಭವದೀಯಾನಸ್ಮಾನನಿಶಂ
ಕುರು ಗತದುಃಖಾನತಿದುಃಖಾನ್ ।
ಗಿರಿಶ ಮಹಾಪಜ್ಜಲಧೇರಸ್ಮಾ
ನುದ್ಧರ ಧೀರಕೃಪಾಜಲಧೇ ॥೭೧॥

ಹರ ಯದ್ಯಸ್ಮತ್ಕೃತಮಪರಾಧಂ
ವಿವಿಧಂ ಕೃಪಯಾ ಹರಸಿ ತದಾ ।
ಗಿರಿಶ ಮಹಾಪಜ್ಜಲಧೇರಸ್ಮಾ
ನುದ್ಧರ ಧೀರಕೃಪಾಜಲಧೇ ॥೭೨॥

---

ಹರನೇ, ನಿನ್ನ ನಾಮಸ್ಮರಣೆಯೆಂಬುದು ಭಕ್ತರ ಸಕಲ ಪಾಪರಾಶಿಯನ್ನೂ ಪರಿಹರಿಸತಕ್ಕುದು ಮತ್ತು ಶುಭವನ್ನುಂಟುಮಾಡತಕ್ಕುದು. ನಿನ್ನ ಪಾದಕಮಲಗಳನ್ನು ಸ್ಮರಿಸಿದೊಡನೆಯೇ ಭಕ್ತರ ಸಕಲ ವ್ಯಥೆಯೂ ಮಾಯವಾಗುವುದೆಂಬುದನ್ನು ನಾವು ಪ್ರತ್ಯಕ್ಷವಾಗಿ ನೋಡಿರುವೆವು. ಅಲ್ಲವೇ ? ಮಹಾದೇವನೇ, ಅಂತಹ ನೀನು ನಮ್ಮನ್ನುದ್ಧರಿಸು. ॥೬೯-೭೦॥

ಸ್ವಾಮಿಯೇ, ನಾವೆಲ್ಲಾ ನಿನ್ನವರು. ಸದಾ ನಿನ್ನನ್ನೇ ನಂಬಿರುವೆವು. ಪ್ರಕೃತ ನಮಗೆ ಕಷ್ಟಬಂದೊದಗಿದೆ. ಅವನ್ನು ಜಾಗ್ರತೆ ಪರಿಹರಿಸು. ನಾವು ನಿನ್ನ ವಿಷಯದಲ್ಲಿ ಹಿಂದೆ ಎಷ್ಟೋ ಅಪರಾಧಗೈದಿದ್ದರೂ ಅದನ್ನೆಲ್ಲಾ ಕ್ಷಮಿಸಿ ನಮ್ಮನ್ನು ರಕ್ಷಿಸಿರುವೆಯಲ್ಲವೆ ! ಮಹಾದೇವನೇ, ನಮ್ಮ ಕಷ್ಟಗಳನ್ನೆಲ್ಲಾ ಪರಿಹರಿಸಿ ಕಾಪಾಡು. ॥೭೧-೭೨॥

ಸುತಮುಪರಾಧಿನಮಪಿ ಕೃತಶಿಕ್ಷಂ
ಜನಕಃ ಪಾಲಯತೀಶ ತಥಾ ।
ಗಿರಿಶ ಮಹಾಪಜ್ಜಲಧೇರಸ್ಮಾ
ನುದ್ಧರ ಧೀರಕೃಪಾಜಲಧೇ ॥೭೩॥

ನ ಸುತಾ ವಯಮಪಿ ತವ ಕಿಂ ಶಂಭೋ
ಜನಕಃ ಸ ಭವಾನಸ್ಮಾಕಂ ।
ಗಿರಿಶ ಮಹಾಪಜ್ಜಲಧೇರಸ್ಮಾ
ನುದ್ಧರ ಧೀರಕೃಪಾಜಲಧೇ ॥೭೪॥

ಜಗತಾಮೇಕೋ ಜನಕಸ್ತ್ವಮತೋ
ವಯಮಪಿ ಜಗತೋ ನ ಹಿ ಭಿನ್ನಾಃ ।
ಗಿರಿಶ ಮಹಾಪಜ್ಜಲಧೇರಸ್ಮಾ
ನುದ್ಧರ ಧೀರಕೃಪಾಜಲಧೇ ॥೭೫॥

ಭವತಾ ಸೃಷ್ಟಾಸ್ಸಕಲಾ ಲೋಕಾ
ವಯಮಪಿ ತದ್ವದ್ಧರಸೃಷ್ಟಾಃ ।
ಗಿರಿಶ ಮಹಾಪಜ್ಜಲಧೇರಸ್ಮಾ
ನುದ್ಧ ರಧೀರಕೃಪಾಜಲಧೇ ॥೭೬॥

ಮಹಾದೇವನೇ, ಮಗನು ತಪ್ಪಿತಸ್ಥನಾದರೂ ತಂದೆಯು ಅವನ ತಪ್ಪುಗಳನ್ನು ಮನ್ನಿಸಿ ರಕ್ಷಿಸುವನಲ್ಲವೆ? ಅದೇರೀತಿ ನೀನೂ ಸಹ ನಮ್ಮ ಅಪರಾಧಗಳನ್ನು ಮನ್ನಿಸು. ನಮ್ಮನ್ನು ಕಷ್ಟಸಾಗರದಿಂದ ಉದ್ಧರಿಸು. ॥೭೩॥

ಗಿರಿಶನೇ, ನಾವು ನಿನಗೆ ಮಕ್ಕಳಲ್ಲವೆ! ನೀನು ನಮಗೆ ತಂದೆಯಂತಲ್ಲವೆ? ಜಗತ್ತಿಗೇ ನೀನು ಜನಕನಾಗಿರುವಾಗ ನಾವೂ ನಿನ್ನ ಪುತ್ರರಾಗಲಿಲ್ಲವೆ? ಜಗತ್ತನ್ನು ಬಿಟ್ಟು ನಾವೆಂದಿಗೂ ಬೇರೆಯಾಗುವೆವೆ? ಒಟ್ಟಿನಲ್ಲಿ ಮಹಾದೇವನೇ, ನಮ್ಮನ್ನು ಆಪತ್ಸಮುದ್ರದಿಂದ ಈಗ ಉದ್ಧರಿಸಿ ಕಾಪಾಡು. ॥೭೪ ೭೫॥

ನೀನು ಸಕಲ ಲೋಕಗಳನ್ನೂ ಸೃಷ್ಟಿಮಾಡಿರುವೆ. ಹಾಗೆಯೇ ನಾವೂ

ಭವತಾ ಸೃಷ್ಟಂ ಜಗದಿವ ಸೃಷ್ಟ್ವಾ
ನಸ್ಮಾನಪಿ ಭವ ಪಾಲಯ ನಿತ್ಯಂ ।
ಗಿರಿಶ ಮಹಾಪಜ್ಜಲಧೇರಸ್ಮಾ
ನುದ್ಧರ ಧೀರಕೃಪಾಜಲಧೇ ॥೭೭॥

ದೇವ ಗಜಾಸುರಪರಿಹೃತವಿಭವಾ
ನಭಯದ ಸಭಯಾನವ ಸದಯಂ ।
ಗಿರಿಶ ಮಹಾಪಜ್ಜಲಧೇರಸ್ಮಾ
ನುದ್ಧರ ಧೀರಕೃಪಾಜಲಧೇ ॥೭೮॥

ನಿರುಪಾಧಿಕ ಕರುಣಾಪಾರಾ
ವಾರಸ್ತ್ವಮತೋ ಹರ ಸುರದುಃಖಂ ।
ಗಿರಿಶ ಮಹಾಪಜ್ಜಲಧೇರಸ್ಮಾ
ನುದ್ಧರ ಧೀರಕೃಪಾಜಲಧೇ ॥೭೯॥

ಶರಣಂ ಭವ ಭವ ಭವ ಶರಣಂ
ಭವ ಶರಣಂ ಭವ ಕರುಣಾಬ್ಧೇ ।
ಗಿರಿಶ ಮಹಾಪಜ್ಜಲಧೇರಸ್ಮಾ
ನುದ್ಧರ ಧೀರಕೃಪಾಜಲಧೇ ॥೮೦॥

---

ನಿನ್ನಿಂದಲೇ ಸೃಷ್ಟರಾಗಿರುವೆವು. ಜಗತ್ತಿನಲ್ಲಿ ಸೃಷ್ಟವಾದ ವಸ್ತುಗಳನ್ನೆಲ್ಲಾ ನೀನು ಸಂರಕ್ಷಿಸುವಂತೆ, ನಮ್ಮನ್ನೂ ಏತಕ್ಕಾಗಿ ಕಷ್ಟದಿಂದ ಉದ್ಧರಿಸಬಾರದು ? ॥೭೬-೭೭॥

ಪಾರ್ವತೀಶನೇ, ಗಜಾಸುರನೆಂಬ ರಾಕ್ಷಸನಿಗೆ ಸೋತು ನಾವೆಲ್ಲರೂ ಭಯ ಭ್ರಾಂತರಾಗಿರುವೆವು. ಅಂತಹ ನಮ್ಮನ್ನು ಭಯರಹಿತರನ್ನಾಗಿ ಮಾಡು. ನೀನು ಸರ್ವೋಪಾಧಿವಿನಿರ್ಮುಕ್ತನು. ದಯಾಸಾಗರನು. ಆದ್ದರಿಂದ ದೇವತೆಗಳಾದ ನಮಗೆ ಒದಗಿರುವ ದುಃಖರಾಶಿಯನ್ನು ಕೂಡಲೇ ನಿವಾರಣೆಮಾಡು. ॥೭೮-೭೯॥

ಭವನೇ, ಶಂಕರನೇ, ದಯಾಸಾಗರನೇ, ನೀನು ನಮಗೆ ರಕ್ಷಕನಾಗು. ನಿನ್ನನ್ನು ಬಿಟ್ಟು ನಾವು ಮತ್ತಾರನ್ನೂ ಶರಣುಹೊಂದಲಾರೆವು. ಮರಣಕಾಲ

ಭವ ಭವದನ್ಯಂ ನ ವಯಂ ಯಾಮಃ
ಸಕೃದಪಿ ಶರಣಂ ಮರಣೇ ವಾ ।
ಗಿರಿಶ ಮಹಾಪಜ್ಜಲಧೇರಸ್ಮಾ
ನುದ್ಧರ ಧೀರಕೃಪಾಜಲಧೇ ॥೪೧॥

ನಹಿ ಜಾನೀಮೋ ಭವ ಭವದನ್ಯಂ
ಶಂಕರಧೀರಂ ತ್ರಾತಾರಂ ।
ಗಿರಿಶ ಮಹಾಪಜ್ಜಲಧೇರಸ್ಮಾ
ನುದ್ಧರ ಧೀರಕೃಪಾಜಲಧೇ ॥೪೨॥

॥ ಅಗಸ್ತ್ಯ ಉವಾಚ ॥

ಇತಿ ಸ್ತುತೋ ಮಹಾದೇವೋ ವಿಷ್ಣುಬ್ರಹ್ಮಪುರೋಗಮೈಃ ।
ಪ್ರಸನ್ನಸ್ತಾನುವಾಚೈವಂ ಘನಗಂಭೀರಯಾ ಗಿರಾ ॥೪೩॥

॥ ಶ್ರೀಮಹಾದೇವ ಉವಾಚ ॥

ಜಾನಾಮಿ ಭವತಾಂ ದುಃಖಂ ವಿಷ್ಣುಬ್ರಹ್ಮಪುರೋಗಮಾಃ ।
ಗಜಾಸುರಂ ಹನಿಷ್ಯಾಮಿ ಪಶ್ಯಂತ್ವದ್ಯಾಧುನಾ ದ್ರುತಂ ॥೪೪॥

ದಲ್ಲಿಯೂ ನಾವು ನಿನ್ನನ್ನೇ ಮೊರೆಹೋಗುವೆವು. ಈಗ ಬಂದಿರುವ ಕಷ್ಟರಾಶಿಯಿಂದ ನಮ್ಮನ್ನು ಪಾರುಮಾಡು. ॥೪೦-೪೧॥

ಶಂಕರನೇ, ನಮ್ಮನ್ನು ರಕ್ಷಿಸಲು ನಿನ್ನಂತಹ ಧೀರನೂ, ಸಮರ್ಥನೂ ಆದವನು ಮತ್ತಾರೂ ದೊರೆಯಲಾರರು. ಗಿರೀಶನೇ, ದಯಾಸಾಗರನೇ, ಧೀರನೇ, ನಮ್ಮನ್ನು ಆಪತ್ಸಮುದ್ರದಿಂದ ಉದ್ಧರಿಸಿ ಕಾಪಾಡು.'' ॥೪೨॥

ಎಂದು ಸಕಲ ದೇವತೆಗಳೂ ಮಹಾದೇವನನ್ನು ಪ್ರಾರ್ಥಿಸಲಾಗಿ, ಇದರಿಂದ ಸಂತುಷ್ಟನಾದ ಶಂಕರನು ಮೇಘದಂತೆ ಗಂಭೀರವಾದ ವಾಣಿಯಿಂದ ದೇವತೆಗಳನ್ನು ಕುರಿತು ಹೀಗೆಂದನು. ''ಎಲೈ ಬ್ರಹ್ಮಾದಿದೇವತೆಗಳಿರಾ, ನಿಮ್ಮ ಕಷ್ಟವು ನನಗೆ ವಿದಿತವಾಯಿತು. ಗಜಾಸುರನನ್ನು ಈಗಲೇ ಸಂಹಾರಮಾಡುವೆನು. ನೀವು ಇಲ್ಲಿಯೇ ನೋಡುತ್ತೀರಿ. ॥೪೩-೪೪॥

ಭವದ್ಭಿರ್ಯಾ ಕೃತಾ ಪೂಜಾ ಸ್ತುತಿಶ್ಚೇಯಂ ಚ ಯಾ ಕೃತಾ ।
ಏತಾಭ್ಯಾಂ ಸ್ತುತಿಪೂಜಾಭ್ಯಾಂ ತುಷ್ಟೋಽಸ್ಮ್ಯಹಮುಮಾಪತಿಃ ॥೮೫॥

ಭವತ್ಕೃತೇನ ಸ್ತೋತ್ರೇಣ ಯೋ ಮಾಂ ಸ್ತೋಷ್ಯತಿ ಸಾದರಂ ।
ಸ ದುಃಖಸಾಗರಂ ಶೀಘ್ರಂ ತರಿಷ್ಯತಿ ನ ಸಂಶಯಃ ॥೮೬॥

ಅಗಸ್ತ್ಯ ಉವಾಚ

ಇತ್ಯುಕ್ತ್ವಾಮರವೃಂದೇಷು ಪಶ್ಯತ್ಸ್ವೇವ ಮಹೇಶ್ವರಃ ।
ಶೂಲಂ ಗಜಾಸುರಂ ಹಂತುಂ ಪ್ರೇಷಯಾಮಾಸ ಸತ್ವರಂ ॥೮೭॥

ತತೋ ಗಜಾಸುರಂ ಮತ್ತಂ ಶೂಲೋ ವೈಕುಂಠವಾಸಿನಂ ।
ಪ್ರವಿಶ್ಯ ಪಾತಯಾಮಾಸ ಭೂಪತಿಂ ಶೈಲಮಿವೋನ್ನತಂ ॥೮೮॥

ಗಜಾಸುರಸ್ತತೋ ಭೂಮೌ ಪಪಾತೋನ್ನತಶೈಲವತ್ ।
ತದಾ ಚಕಂಪೇ ವಸುಧಾ ಸಶೈಲವನಕಾನನಾ ॥೮೯॥

ಗಜಾಸುರೋ ಯದಾ ಭೂಮೌ ಅಪತಚ್ಛೂಲಸಂಹತಃ ।
ಗರ್ತೋ ಮಹಾನಭೂದ್ಭೂಮೌ ಸಮುದ್ರಾಸ್ಸಪ್ತಸಂಯುತಾಃ ॥೯೦॥

ದೇವತೆಗಳಿರಾ, ನೀವು ಮಾಡಿದ ಪೂಜೆಯಿಂದಲೂ, ಸ್ತುತಿಸಿದ ಸ್ತೋತ್ರದಿಂದಲೂ ನಾನು ಈಗ ಸಂತುಷ್ಟನಾಗಿರುವೆನು. ನೀವು ಮಾಡಿದ ಸ್ತುತಿವಚನಗಳಿಂದ ಯಾವನು ನನ್ನನ್ನು ಸ್ತೋತ್ರಮಾಡುವನೋ, ಅವನು ತನ್ನ ದುಃಖಸಾಗರದಿಂದ ನಿಜವಾಗಿಯೂ ದೂರನಾಗುವನು. ಇದರಲ್ಲಿ ಸಂಶಯವಿಲ್ಲ" ||೮೫-೮೬||

ದೇವತೆಗಳು ಹಾಗೆ ಶಂಕರನನ್ನು ಪ್ರಾರ್ಥಿಸಿದೊಡನೆಯೇ ಶಂಕರನು ಆ ಗಜಾಸುರನನ್ನು ಕೊಲ್ಲಲು ತನ್ನ ಶೂಲವನ್ನು ಕಳುಹಿಸಿದನು. ಗಜಾಸುರನು ವೈಕುಂಠಲೋಕದಲ್ಲಿ ಮತ್ತನಾಗಿ ವಾಸಿಸುತ್ತಿದ್ದನು. ಶೂಲವು ವೈಕುಂಠಲೋಕವನ್ನು ಪ್ರವೇಶಿಸಿ, ಪರ್ವತದಂತೆ ಉನ್ನತನಾಗಿದ್ದ ಆ ಗಜಾಸುರನನ್ನು ಹೊಡೆದು ಭೂಮಿಗೆ ಕೆಡವಿತು. ||೮೭-೮೮||

ಕೂಡಲೇ ಆ ರಕ್ಕಸನು ದೊಡ್ಡಪರ್ವತದಂತೆ ಭೂಮಿಗೆ ಬಿದ್ದನು. ಆದರಿಂದ ಅಖಂಡಭೂಮಿಯು ನಡುಗಿಹೋಯಿತು. ಅಲ್ಲದೆ ಆ ದೇಹವು ಬಿದ್ದಕಡೆ ದೊಡ್ಡ ಹಳ್ಳವಾಯಿತು. ಅಲ್ಲಿಯೇ ಸಪ್ತಸಮುದ್ರಗಳೂ ನೆಲಸುವಷ್ಟು ವಿಶಾಲಪ್ರದೇಶವಾಯಿತು. ||೮೯-೯೦||

ಭುವನೇಕಾರ್ಣವಾಂ ದೃಷ್ಟ್ವಾ ಭೀತಾಂಶ್ಚ ವಿಬುಧಾನ್ ಹರಃ ।
ಶೂಲಾತ್ತಮಸುರಂ ಭಿತ್ವಾ ದಧಾರ ಗಗನಾಂತರೇ ॥೯೦॥

ತದಾ ಸಾದ್ರಾರ್ದ್ರ ಭವತ್ಕೃತ್ತಿಃ ಕ್ಷಣಂ ವಸ್ತ್ರವದೀಶ್ವರೇ ।
ತದಾ ತಚ್ಛಾಯಯಾ ಸರ್ವಾ ಸಚ್ಛಾಯಾ ಭೂರಭೂನ್ಮುನೇ ॥೯೨॥

ತತಸ್ಸಮಾಭವದ್ಭೂಮಿಸ್ತತಶ್ಛಿತ್ವಾ ಗಜಾಸುರಂ ।
ಖಂಡಶಶ್ಚ ತತಃ ಕೃತ್ವಾ ಪ್ರತಿದಿಕ್ಷು ವಿನಿಕ್ಷಿಪತ್ ॥೯೩॥

ತತೋ ವಿಷ್ಣ್ವಾದಯೋ ದೇವಾ ಕೃತಾಂಜಲಿಪುಟಾಶ್ಶಿವಂ ।
ತುಷ್ಟುವುರ್ಹೃಷ್ಟಹೃದಯಾಃ ಶಿಪಿವಿಷ್ಟಮಭೀಷ್ಟದಂ ॥೯೪॥

॥ ದೇವಾ ಊಚುಃ ॥

ನಮೋ ನಮಶ್ಶರಣ್ಯಾಯ ವರೇಣ್ಯಾಯ ನಮೋನಮಃ ।
ನಮೋ ನಮೋ ಮಹೇಶಾಯ ಮಹೇಶ್ವಾಸಾಯ ತೇ ನಮಃ ॥೯೫॥

ನಮೋ ನಮೋ ಗಿರೀಶಾಯ ಗಿರಿಶಾಯ ನಮೋ ನಮಃ ।
ನಮೋ ನಮೋ ವಿರೂಪಾಯ ಸುರೂಪಾಯ ನಮೋನಮಃ ॥೯೬॥

---

ಅಷ್ಟು ದೊಡ್ಡ ಹಳ್ಳವನ್ನು ನೋಡಿ ದೇವತೆಗಳೆಲ್ಲರೂ ನಡುಗಿಹೋದರು. ಅದನ್ನು ನೋಡಿ, ಶಂಕರನು ಮತ್ತೆ ಆ ರಕ್ಕಸನ ದೇಹವನ್ನು ತನ್ನ ತ್ರಿಶೂಲದಿಂದ ಎತ್ತಿ ಮೇಲೆ ಹಿಡಿಯಲು, ಆದರ ನೆರಳಿನಿಂದ ಭೂಮಿಯೆಲ್ಲವೂ ಮುಚ್ಚಿಹೋಯಿತು. ಆರಾಕ್ಷಸನ ಚರ್ಮವಾದರೋ ವಸ್ತ್ರದಂತೆ ಮೃದುವಾಗಿ ವಿಶಾಲವಾಗಿದ್ದಿತು. ॥೯೧-೯೨॥

ಹಾಗೆ ರಾಕ್ಷಸನ ದೇಹವನ್ನು ಮೇಲೆತ್ತಿದೊಡನೆಯೇ, ಭೂಮಿಯು ಮೊದಲಿನಂತೆಯೇ ಸಮಾಕಾರವಾಯಿತು. ಶಂಕರನು ತಕ್ಷಣವೇ ಆ ಗಜಾಸುರನ ದೇಹವನ್ನು ಚೂರುಚೂರಾಗಿ ಕತ್ತರಿಸಿ, ದಿಕ್ಕುದಿಕ್ಕಿಗೆ ಎಸೆದುಬಿಟ್ಟನು. ಇದನ್ನು ನೋಡಿ ಬ್ರಹ್ಮಾದಿದೇವತೆಗಳು ಸಂತೋಷಪಟ್ಟು ಪರಮೇಶ್ವರನನ್ನು ಈ ರೀತಿಯಾಗಿ ಸ್ತುತಿಸತೊಡಗಿದರು. ॥೯೩-೯೪॥

"ಮಹಾದೇವನೇ, ನೀನು ಸರ್ವರಕ್ಷಕನು, ಸರ್ವಶ್ರೇಷ್ಠನು, ಜಗತ್ಪಾಲಕನು, ಜಗತ್ತನ್ನು ಹೆದರಿಸುವ ಧನುಸ್ಸುಳ್ಳವನು, ಗಿರಿಯಲ್ಲಿ ನಿದ್ರಿಸುವವನು, ಸಮಸ್ತ

ನಮೋ ನಮೋ ವಿದೂರಾಯ ದೂರಸ್ಥಾಯ ನಮೋನಮಃ ।
ನಮೋ ನಮೋ ವಿನಾದಾಯ ಸನಾದಾಯ ನಮೋನಮಃ ॥೯೭॥

ನಮೋ ನಮೋ ಹ್ಯಮಾಯೇಶ ಮೋಹಮಾಯ ನಮೋನಮಃ ।
ನಮೋ ನಮಸ್ತಾಪಸಾಯ ತಾಪಸಾಯ ನಮೋನಮಃ ॥೯೮॥

ನಮೋ ನಮೋಽಸ್ತು ಮೌಂಜಾಯ ಮೌಂಜಾಯಾಸ್ತು ನಮೋನಮಃ ।
ನಮೋ ನಮಸ್ತೇ ಸೌಭಾಗ್ಯಾಯ ಸೌಮ್ಯಾಯಾಸ್ತು ನಮೋನಮಃ ॥೯೯॥

ನಮೋ ನಮಸ್ತೇ ಪಾರಾಯ ಸುಪಾರಾಯ ನಮೋನಮಃ ।
ನಮೋಽಸ್ತು ತೇ ಮಹಾಪಾರಪಾರವಿಂದಾಯ ತೇ ನಮಃ ॥೧೦೦॥

ನಮೋ ನಮಸ್ತೇ ರುದ್ರಾಯ ಚೇಕಿತಾಯ ನಮೋನಮಃ ।
ನಮೋನಮಃ ಪರೇಶಾಯ ಪರಮೇಶಾಯ ತೇ ನಮಃ ॥೧೦೧॥

ನಮೋ ನಮಶ್ಶಂಕರಾಯ ವೃಷಾರೂಢಾಯ ತೇ ನಮಃ ।
ನಮೋ ನಮೋಗ್ರಶಸ್ತ್ರಾಯ ಶೂಲಹಸ್ತಾಯ ತೇ ನಮಃ ॥೧೦೨॥

---

ಪರ್ವತಗಳಿಗೂ ಒಡೆಯನು, ವಿಕಾರವಾದ ಆಕಾರವುಳ್ಳವನು, ಭಕ್ತರಿಗೆ ಸುಂದರ ರೂಪಿಯಾದವನು, ಇಂತಹ ನಿನಗೆ ನಮಸ್ಕಾರ. ||೯೫-೯೬||

ಶತ್ರುಗಳಿಗೆ ದೂರದಲ್ಲಿಯೂ, ಭಕ್ತರಿಗೆ ಸಮೀಪದಲ್ಲಿಯೂ ಇದ್ದು, ಶಬ್ದ ರೂಪಿಯಾಗಿಯೂ, ನಿಶ್ಶಬ್ದರೂಪದಿಂದಲೂ ತೋರಿಬರುವ ಮಹಾದೇವನೇ ನಿನಗೆ ವಂದನೆ. ಮಾಯಾತೀತನೂ, ಮಾಯಾವಿಶಿಷ್ಟನೂ ಆಗಿ ಕೇವಲ ತಪಸ್ವಿ ಯಂತೆಯೂ, ತಪೋರೂಪದಿಂದಲೂ ತೋರಿಬರುವ ಮಹೇಶ್ವರನೇ, ನಿನಗೆ ನಮ ಸ್ಕಾರ. ||೯೭-೯೮||

ಮುಂಜತೃಣರೂಪದಿಂದಿರುವ, ಸೌಭಾಗ್ಯವಿಶಿಷ್ಟನಾಗಿ ಸೌಮ್ಯರೂಪದಿಂದಿರುವ ಶಂಕರನೇ, ನಿನಗೆ ಶರಣು. ದುಃಖದಿಂದ ಪಾರುಮಾಡುವ, ಪಾರುಮಾಡಿಸುವ ಸಾಮರ್ಥ್ಯವುಳ್ಳ, ಸಮಸ್ತವಿದ್ಯೆಯ ಕೊನೆಯನ್ನೂ ಅರಿತಿರುವ ನಿನಗೆ ವಂದನೆ. ||೯೯-೧೦೦||

ಭಯಂಕರಸ್ವರೂಪನೂ, ಚೇಕಿತಾನನೂ (ಸರ್ವಜ್ಞನಾದವನು) ಪರಶಿವನೂ ಲೋಕಕಲ್ಯಾಣಕರನೂ, ವೃಷಭಾರೂಢನೂ, ಉಗ್ರಶಸ್ತ್ರಧಾರಿಯೂ, ತ್ರಿಶೂಲಪಾ ಣಿಯೂ ಆದ ಮಹಾದೇವನಿಗೆ ನಮಸ್ಕಾರ. ||೧೦೧-೧೦೨||

ನಮಃ ಕರ್ಪೂರಗೌರಾಯ ನಮೋಽನಂತೇಂದುತೇಜಸೇ ।
ನಮೋ ಡಮರುಹಸ್ತಾಯ ಮೃಗಹಸ್ತಾಯ ತೇ ನಮಃ ॥೧೦೩॥

ನಮೋ ದೇವಾಧಿದೇವಾಯ ದೇವಾಧೀಶಾಯ ತೇ ನಮಃ ।
ನಮೋ ಭಸ್ಮವಿಭೂಷಾಯ ಸರ್ವಭೂಷಾಯ ತೇ ನಮಃ ॥೧೦೪॥

ನಮೋ ನಿಷ್ಕಲರೂಪಾಯ ನಿರ್ಗುಣಾಯ ನಮೋನಮಃ ।
ನಮೋಽಮೇಯಸ್ವರೂಪಾಯ ಮಾನಾತೀತಾಯ ತೇ ನಮಃ ॥೧೦೫॥

ನಮಶ್ಶಾಂತಸ್ವರೂಪಾಯ ವೇದವೇದ್ಯಾಯ ತೇ ನಮಃ ।
ನಮಃ ಕಲ್ಯಾಣರೂಪಾಯ ಕಲ್ಯಾಣಾಯ ನಮೋನಮಃ ॥೧೦೬॥

ನಮೋ ನಮೋಽಮಿತಾಕ್ಷಾಯ ಜಿತಾಕ್ಷಾಯ ನಮೋನಮಃ ।
ನಮೋ ನಮಸ್ಸಮಾಕ್ಷಾಯ ವಿರೂಪಾಕ್ಷಾಯ ತೇ ನಮಃ ॥೧೦೭॥

ನಮಶ್ಶಿವಾಸಮೇತಾಯ ಶಿವರೂಪಾಯ ತೇ ನಮಃ ।
ನಮಶ್ಶಿವಾಯ ಶುದ್ಧಾಯ ನಮಶ್ಶಿವತರಾಯ ಚ ॥೧೦೮॥

ಕರ್ಪೂರದಂತೆ ಶುಭ್ರನಾಗಿಯೂ, ಸರ್ಪ, ಚಂದ್ರ, ಅಗ್ನಿ ಇವುಗಳ ಸ್ವರೂಪನಾಗಿಯೂ, ಡಮರುಗ, ಜಿಂಕೆ, ಮುಂತಾದ ಪ್ರಾಣಿಗಳನ್ನು ಕೈಯಲ್ಲಿ ಧರಿಸಿದವನೂ, ದೇವಾಧಿದೇವನೂ, ಭಸ್ಮಭೂಷಿತನೂ, ನಾಗಾಭರಣನೂ ಆಗಿರುವ ಮಹಾದೇವನಿಗೆ ಶಿರಸಾ ವಂದಿಸುವೆವು. ॥೧೦೩-೧೦೪॥

ಕಲಾರಹಿತನೂ, ಗುಣರಹಿತನೂ, ಮಾನಾತೀತನೂ, ಅಪರಿಚ್ಛಿನ್ನ ಆಕಾರ ವಿಶಿಷ್ಟನೂ ಆದ ಶಾಂತಮೂರ್ತಿಯೇ, ನೀನು ಕೇವಲ ವೇದಗೋಚರನಲ್ಲವೆ? ಸಕಲಕಲ್ಯಾಣಸ್ವರೂಪನೇ ನೀನಾಗಿರುವೆ ಇಂತಹ ನಿನಗೆ ನಮಸ್ಕಾರಗಳು. ॥೧೦೫-೧೦೬॥

ಸಹಸ್ರಾರು ನೇತ್ರಗಳುಳ್ಳವನೂ, ಇಂದ್ರಿಯಗಳನ್ನು ಜಯಿಸಿರುವವನೂ, ಭಕ್ತರಲ್ಲಿ ಸಮದೃಷ್ಟಿಯುಳ್ಳವನೂ, ತ್ರಿನಯನನೂ ಆದ ಪರಶಿವನೇ, ನಿನಗೆ ವಂದನೆ. ಪಾರ್ವತೀಸಹಿತನಾಗಿ, ಮಂಗಳರೂಪದಿಂದಿರುವ ಶಿವಸ್ವರೂಪನೂ, ಜ್ಞಾನಸ್ವರೂಪನೂ, ಮಂಗಳಸ್ವರೂಪನೂ ಆದ ಮಹೇಶ್ವರನಿಗೆ ನಮಸ್ಕಾರ" ॥೧೦೭-೧೦೮॥

॥ ಅಗಸ್ತ್ಯ ಉವಾಚ ॥

ಇತಿ ಸ್ತುತ್ವಾ ಮಹಾದೇವಂ ಪ್ರಣಮ್ಯ ಚ ಮುಹುರ್ಮುಹುಃ ।
ಪುಷ್ಪಾದ್ಯೈರ್ಪೂಜಯಾಮಾಸುರ್ಬ್ರಹ್ಮವಿಷ್ಣುಪುರೋಗಮಾಃ॥೧೦೯॥

ದೇವತಾಸಾರ್ವಭೌಮೇನ ಮಹಾದೇವೇನ ತೇ ಸುರಾಃ ।
ನಿರೀಕ್ಷಿತಾಸ್ಸಾನುಮೋದಂ ತುಷ್ಟುವುಃ ಪುನರೀಶ್ವರಂ ॥೧೧೦॥

॥ ದೇವಾ ಊಚುಃ ॥

ಸರ್ವೇಽಪ್ಯನುಗೃಹಿತಾಸ್ಸ್ಮೋ ವಯಮೀಶ ತ್ವಯಾಧುನಾ ।
ಕಟಾಕ್ಷವೀಕ್ಷಣೇನೇಶ ವೀಕ್ಷಿತಾಸ್ಸ್ಮೋ ಯತೋ ವಯಂ ॥೧೧೧॥

ಧನ್ಯಾಃ ಕೃತಾ ವಯಂ ಸರ್ವೇ ತ್ವಯಾ ದೇವೋತ್ತಮ ಪ್ರಭೋ ।
ಯತಸ್ತ್ವಯಾ ವಯಂ ಸರ್ವೇ ಸಾನುಮೋದಂ ನಿರೀಕ್ಷಿತಾಃ ॥೧೧೨॥

ದೀನೇಷ್ವನನ್ಯಶರಣೇಷ್ವಸ್ಮಾಸು ಗಿರಿಜಾಪತೇ ।
ಕೃತಮದ್ಯ ತ್ವಯಾ ಶಂಭೋ ಸಾನುಮೋದಂ ನಿರೀಕ್ಷಣಂ ॥೧೧೩॥

ಜಾತಾಃ ಕೃತಾರ್ಥಾ ಮುನಯಸ್ತ್ವಯಾ ಯೇ ಯೇ ನಿರೀಕ್ಷಿತಾಃ ।
ಜಾತಾಃ ಕೃತಾರ್ಥಾ ವಯಮಪ್ಯತಸ್ತವನಿರೀಕ್ಷಣಾತ್ ॥೧೧೪॥

---

ಹೀಗೆ ಸಕಲ ದೇವತೆಗಳೂ ಮಹಾದೇವನನ್ನು ಪುಷ್ಪಾದಿಗಳಿಂದ ಪೂಜಿಸಿ, ವಿಧವಿಧವಾಗಿ ಸ್ತುತಿಸಿದರು. ಇವರ ಸ್ತುತಿಗೆ ಮೆಚ್ಚಿದ ಮಹಾದೇವನು ಇವರನ್ನು ಸಂತೋಷದಿಂದ ಮತ್ತೊಂದು ಸಾರಿ ನೋಡಲು ದೇವತೆಗಳು ಅನುಗೃಹೀತರಾಗಿ ಮತ್ತೆ ಹೀಗೆ ಸ್ತುತಿಸಲಾರಂಭಿಸಿದರು. ||೧೦೯-೧೧೦||

“ಪರಶಿವನೇ, ನಾವು ನಿನ್ನ ದಯೆಯಿಂದ ಉದ್ಧಾರವಾದೆವು. ನಿನ್ನ ಕಟಾಕ್ಷಪಾತದಿಂದ ನಾವೆಲ್ಲಾ ಇಂದು ಧನ್ಯರೆನಿಸಿದೆವು ನಿನ್ನ ದಯೆಯಿಂದ ನಾವೆಲ್ಲಾ ಶ್ರೇಷ್ಠರೆನಿಸಿ, ನಿನ್ನ ದಯಾದೃಷ್ಟಿಗೆ ಇಂದು ಪಾತ್ರರಾಗಿರುವೆವು. ೧೧೧-೧೧೨||

ದೀನರೂ, ಅನನ್ಯಗತಿಕರೂ ಆದ ನಮ್ಮನ್ನು ನೀನು ದಯೆಯಿಂದ ನೋಡಿದೆಯಲ್ಲವೇ! ಇದರಿಂದಲೇ ನಾವು ಕೃತಾರ್ಥರಾದೆವು. ಅದೂ ಅಲ್ಲದೆ ನಿನ್ನನ್ನು ದರ್ಶನಮಾಡಿದ ಈ ಮುನಿಗಳೂ, ನಾವೂ ಇಂದು ಪವಿತ್ರಾತ್ಮರೆನಿಸಿಕೊಂಡಿದ್ದೇವೆ. ||೧೧೩-೧೧೪||

ಅನೇನ ಶ್ರೀವಿರೂಪಾಕ್ಷವೀಕ್ಷಣೇನೈವ ಸರ್ವದಾ ।
ಅಗ್ರೇಪಿ ಕ್ಷೇಮಮಸ್ಮಾಕಂ ಭವಿಷ್ಯತಿ ನ ಸಂಶಯಃ ॥೧೧೫॥

ಕ್ಷೇಮಮೂರ್ತೇ ವಿರೂಪಾಕ್ಷ ಮೋಕ್ಷದಾನವಿಚಕ್ಷಣ ।
ಪ್ರಾಪ್ತವ್ಯಂ ಕ್ಷೇಮಮೇವಾಗ್ರೇ ಶ್ರೀವಿರೂಪಾಕ್ಷಕೀರ್ತನಾತ್ ॥೧೧೬॥

॥ ಅಗಸ್ತ್ಯ ಉವಾಚ ॥

ಇತ್ಯುಕ್ತ್ವಾ ಪ್ರಣತಾ ದೇವಾ ಶ್ರೀಮಹಾದೇವಪಾದುಕೇ ।
ರತ್ನೈಃ ಸಂಪೂಜಯಾಮಾಸುಃ ಸಾದರಂ ಶಿವಪಾದುಕೇ ॥೧೧೭॥

ದಿವ್ಯರತ್ನಸಮಾಕೀರ್ಣೇ ಶ್ರೀಮಹಾದೇವಪಾದುಕೇ ।
ದೇವಾಸ್ಸ್ವಸ್ವಕಿರೀಟೇಷು ನಿಧಾಯ ನನೃತುರ್ಮುದಾ ॥೧೧೮॥

ವಿಷ್ಣುಸ್ಸ್ವನೇತ್ರೇ ಸಂಪೂಜ್ಯ ಶ್ರೀಮಹಾದೇವಪಾದುಕೇ ।
ದೇವಾಸ್ಸ್ವಸ್ವಕಿರೀಟೇಷು ನಿಧಾಯ ನನೃತುರ್ಮುದಾ ॥೧೧೯॥

ತತೋ ಬ್ರಹ್ಮಾದಯೋ ದೇವಾ ನೇತ್ರೇ ಸಂಯೋಜ್ಯ ಪಾದುಕೇ ।
ತತಃ ಕಿರೀಟೇ ಸಂಯೋಜ್ಯ ನನೃತುಸ್ತೇ ಯಥಾಕ್ರಮಂ ॥೧೨೦॥

ಪರಶಿವನ ದರ್ಶನಲಾಭದಿಂದ ನಮಗೆ ಮುಂದೆಯೂ ಶುಭವುಂಟಾಗುವುದು. ವಿರೂಪಾಕ್ಷನೇ, ಮೋಕ್ಷಪ್ರದನೇ, ಪರಶಿವನೇ, ನಿನ್ನ ನಾಮಕೀರ್ತನದಿಂದಲೇ ಮುಂದೆ ನಮಗೆ ಸಕಲ ಸನ್ಮಂಗಳಗಳೂ ಲಭಿಸುವುವು" ॥೧೧೫-೧೧೬॥

ಹೀಗೆ ಹೇಳಿ ದೇವತೆಗಳು ಮಹಾದೇವನ ದಿವ್ಯ ಹಾವುಗೆಗಳನ್ನು ರತ್ನಾಭರಣಾದಿಗಳಿಂದ ಪೂಜಿಸಿ, ಅನಂತರ ಆದಿವ್ಯಪಾದುಕೆಗಳನ್ನು ತಮ್ಮ ತಲೆಯಮೇಲಿರುವ ಕಿರೀಟಗಳಲ್ಲಿ ಇಟ್ಟುಕೊಂಡರು ॥೧೧೭-೧೧೮॥

ವಿಷ್ಣುವೂ ಆ ಪಾದುಕೆಗಳನ್ನು ನನ್ನ ನೇತ್ರಕಮಲಗಳಿಂದ ಪೂಜಿಸಿ, ತನ್ನ ಕಿರೀಟದ ಮೇಲಿಟ್ಟುಕೊಂಡು ನಾಟ್ಯಮಾಡಿದನು. ಅದೇರೀತಿ ಬ್ರಹ್ಮಾದಿಗಳು ಮಹಾದೇವನ ಹಾವುಗೆಗಳನ್ನು ತಮ್ಮ ತಮ್ಮ ಶಿರಸ್ಸಿನಮೇಲಿಟ್ಟುಕೊಂಡು ನರ್ತನ ಮಾಡಿದರು. ॥೧೧೯-೧೨೦॥

ತತಃ ಪರಂ ಮಹಾದೇವೋ ವಿಷ್ಣ್ವಾದಿಭ್ಯೋ ಯಥಾಕ್ರಮಂ ।
ದತ್ವಾಧಿಕಾರಾನ್ ಪ್ರಣತಾನ್ ಪ್ರೇಷಯಾಮಾಸ ತಾನ್ ಸುರಾನ್ ॥೧೨೧॥

ತತಃ ಸ್ವಯಮುಮಾಯುಕ್ತೋ ಯುಕ್ತೋ ನಾನಾವಿಧೈರ್ಗಣೈಃ ।
ಸುಪ್ರಾಪಂ ಪ್ರಾಪ ಕೈಲಾಸಮಪ್ರಾಪ್ಯಮಿತರೈಸ್ಸುರೈಃ ॥೧೨೨॥

ತತೋ ವಿಷ್ಣ್ವಾದಯಸ್ಸರ್ವೇ ಕೀರ್ತಯಂತೋ ಮಹೇಶ್ವರಂ ।
ಶಿವಪ್ರಸಾದಲಬ್ಧಾನಿ ಸ್ವಸ್ವಸ್ಥಾನಾನಿ ಸಂಯಯುಃ ॥೧೨೩॥

ದೇವೈರ್ಮೃನ್ಮಯಲಿಂಗಾನಿ ಪೂಜಿತಾನಿ ಯತೋ ಮುನೇ ।
ತತಶ್ಶಿವಃ ಪ್ರಸನ್ನೋಽಭೂದ್ಬಭೂವುಶ್ಚ ಹತಾರಯಃ ॥೧೨೪॥

ತತಃ ಪ್ರಾಪ್ತಪದಾಶ್ಚಾಸನ್ ಮಹಾದೇವಪ್ರಸಾದತಃ ।
ದದೃಶುಶ್ಚ ಮಹಾದೇವಂ ದೇವಾ ಮೃಲ್ಲಿಂಗಪೂಜಯಾ ॥೧೨೫॥

ಮೃಲ್ಲಿಂಗಪೂಜನಂ ಧನ್ಯಂ ಯಶಸ್ಯಂ ಭುಕ್ತಿಮುಕ್ತಿದಂ ।
ಸರ್ವವೇದಶ್ರುತಂ ಪುಣ್ಯಂ ಮಹಾಪಾತಕನಾಶನಂ ॥೧೨೬॥

---

ಅನಂತರ ಮಹಾದೇವನು ವಿಷ್ಣ್ವಾದಿದೇವತೆಗಳಿಗೆ ಅವರವರ ಅಧಿಕಾರಗಳನ್ನು ಅವರಿಗೇ ಕೊಡಿಸಿ ಕಳುಹಿಸಿಕೊಟ್ಟನು. ಅವರೆಲ್ಲರೂ ಭಕ್ತಿಯಿಂದ ಪುನಃಪುನಃ ವಂದಿಸುತ್ತಾ ಸ್ವಸ್ಥಾನಗಳಿಗೆ ತೆರಳಲು, ಪಾರ್ವತೀ ಸಹಿತನಾದ ಶಂಕರನು ಯಾವ ದೇವತೆಗಳಿಗೂ ಸುಲಭವಾಗಿ ದೊರಕದ ತನ್ನ ಕೈಲಾಸವನ್ನು ಕುರಿತು ಪ್ರಯಾಣ ಮಾಡಿದನು. ॥೧೨೧-೧೨೨॥

ಶಿವಪ್ರಸಾದಲಬ್ಧವಾದ ತಮ್ಮ ತಮ್ಮ ಅಧಿಕಾರಗಳಿಗೆ ಎಂದಿನಂತೆ ಸಕಲ ದೇವತೆಗಳೂ ಶಿವನನ್ನೇ ಸ್ಮರಿಸುತ್ತಾ ಪ್ರಯಾಣಮಾಡಿದರು. ಇಷ್ಟು ದುಃಖವು ಅವರಿಗೆ ಪರಿಹಾರವಾಗಲು ಅವರು ಮಾಡಿದ ಮೃನ್ಮಯಲಿಂಗಾರ್ಚನೆಯೇ ಮೂಲ ಕಾರಣವಾಯಿತು ಇದರಿಂದ ಅವರ ಶತ್ರುಗಳೆಲ್ಲಾ ನಿರ್ನಾಮರಾದರು.॥೧೨೩-೧೨೪॥

ಅಲ್ಲದೆ ಅವರು ತಮ್ಮ ಹಿಂದಿನ ಸ್ಥಾನವನ್ನು ಮತ್ತೆ ಪಡೆದುದೂ ಶಿವನನ್ನು ದರ್ಶನಮಾಡಿದುದೂ ಮೃನ್ಮಯಲಿಂಗಾರಾಧನೆಯಿಂದಲೇ. ಆದ್ದರಿಂದ ಲೋಕದಲ್ಲಿ ಮೃನ್ಮಯಲಿಂಗಾರಾಧನೆಯೆಂಬುದು ಅತ್ಯಂತ ಶ್ರೇಷ್ಠವಾದುದು. ಸರ್ವಪಾಪನಿವಾರಕವೆನಿಸಿ, ಸಕಲವೇದಪ್ರತಿಪಾದ್ಯಮಾನವೆನಿಸಿದೆ. ॥೧೨೫-೧೨೬॥

ಮಹಾದೇವಾರ್ಚನಸ್ಥಾನಾನ್ಯನೇಕಾನಿ ಮಹೇಶ್ವರ ।
ತೇಷು ಶ್ರೇಷ್ಠತಮಂ ಸ್ಥಾನಂ ಶಿವಲಿಂಗಂ ಶಿವಾರ್ಚನೇ ॥೧೨೭॥

ಅಲಾಭೇ ಶಿವಲಿಂಗಸ್ಯ ಶಾಂಕರಂ ಶಂಕರಾರ್ಚನಂ ।
ಕರ್ತವ್ಯಂ ತದಭಾವೇ ತು ಪೃಥಿವ್ಯಾಂ ಪಾವಕೇಽಪ್ಸು ವಾ ॥೧೨೮॥

ಪೂರ್ವಪೂರ್ವಸ್ಥಾನಲಾಭೇ ತತ್ರೈವ ಶಿವಮರ್ಚಯೇತ್ ।
ಪೂರ್ವಪೂರ್ವತಮಂ ಸ್ಥಾನಂ ಯತೋ ಮೃತ್ಯುಜಯಂ ಪ್ರಿಯಂ ॥೧೨೯॥

ಅಪೋ ನ ಪರಿಚಿಕ್ಷೀತ ತತ್ರಕೃತ್ವಾ ಶಿವಾರ್ಚನಂ ।
ಕರ್ತವ್ಯಮಿತಿಯತ್ನೇನ ವತ್ಸರಾಂತಮಿದಂ ವ್ರತಂ ॥೧೩೦॥

ವತ್ಸರಾಂತೇ ತಾರಮಂತ್ರೈಸ್ತಿಲೈಃ ಕಾರ್ಯಂ ಶಿವಾರ್ಚನಂ ।
ತಿಲಹೋಮೋಽಪಿ ಕರ್ತವ್ಯಃ ಸಹಸ್ರತ್ರಯಮಾಸ್ತಿಕೈಃ ॥೧೩೧॥

ಶಾಂಕರೇಷ್ವಪಿ ವಿಪ್ರಶ್ಚೇಲ್ಲಭ್ಯತೇ ಶಂಕರಾರ್ಚನೇ ।
ತತ್ರೈವ ಕಾರ್ಯಂ ಯತ್ನೇನ ಶ್ರೀಮಹಾದೇವಪೂಜನಂ ॥೧೩೨॥

ಮಹಾದೇವನನ್ನು ಪೂಜಿಸುವ ಸ್ಥಾನಗಳು ಬಹಳವಾಗಿವೆ. ಅವುಗಳಲ್ಲಿ ಅತ್ಯಂತ ಶ್ರೇಷ್ಠವಾದುದು ಶಿವಲಿಂಗವೇ. ಒಂದುವೇಳೆ ಶಿವಲಿಂಗವು ಅರ್ಚನೆಗೆ ದೊರೆಯದಿದ್ದರೆ, .ಶಿವಧರ್ಮವನ್ನರಿತ ಶಿವರೂಪಿಯಾದ ಶಾಂಭವನು (ಚರಲಿಂಗ) ಪೂಜಾಸ್ಥಾನನು. ಒಂದುವೇಳೆ ಅವನೂ ದೊರೆಯದಿದ್ದರೆ, ಭೂಮಿ, ಅಗ್ನಿ, ನೀರು ಇವುಗಳಲ್ಲಿಯಾದರೂ ಶಂಕರನನ್ನು ಪೂಜಿಸಬಹುದು. ॥೧೨೭-೧೨೮॥

ಇವರಲ್ಲಿ ಮೊದಲು ಮೊದಲು ಹೇಳಿದ ವಸ್ತುಗಳಲ್ಲಿ ಶಿವನನ್ನು ಪೂಜಿಸುವುದು ಶ್ರೇಷ್ಠವಾದುದೆಂದು ತಿಳಿಯಬೇಕು. ನೀರನ್ನು ಎಂದೂ ಪರೀಕ್ಷಿಸಬಾರದು. ಅಲ್ಲಿಯೇ ಶಿವಾರ್ಚನೆಮಾಡುವುದು ಶ್ರೇಷ್ಠತಮವಾದುದು. ಈ ವ್ರತವನ್ನು ಒಂದು ವತ್ಸರಪರ್ಯಂತ ಮಾಡಬೇಕು. ॥೧೨೯-೧೩೦॥

ವರ್ಷದ ಕೊನೆಯಲ್ಲಿ ರುದ್ರದೇವತಾಕವಾದ ಮಂತ್ರಗಳಿಂದ ಈಶ್ವರಾರ್ಚನೆಯನ್ನು ತಿಲಾಕ್ಷತೆಗಳಿಂದ ನಡೆಸಬೇಕು. ಹಾಗೆಯೇ ರುದ್ರಮಂತ್ರದಿಂದ ಮೂರು ಸಾವಿರ ಸಂಖ್ಯೆ ತಿಲಹೋಮವನ್ನೂ ನಡೆಸಬೇಕು ಶಾಂಭವಶ್ರೇಷ್ಠನಾದ ವಿಪ್ರ

ತದಭಾವೇ ಕ್ಷತ್ರಿಯಾದ್ಯಾಃ ಶಾಂಕರಾಶ್ಶಿವಸಂಮತಾಃ ।
ಪೂಜಾಸ್ಥಾನಾನಿ ವಿಪ್ರೇಂದ್ರ ಸಾಂಬಸ್ಯ ಪರಮಾತ್ಮನಃ ॥೧೩೩॥

ಶಾಂಕರೇಷು ಕೃತಾ ಪೂಜಾ ಶಂಕರಸ್ಯೈವ ಪೂಜನಂ ।
ತಸ್ಮಾತ್ಪ್ರಿಯತಮಾ ವಿಪ್ರ ಶಾಂಕರಾಃ ಶಂಕರಸ್ಯ ತೇ ॥೧೩೪॥

ಶಾಂಕರೇ ಯದ್ಧನಂ ದತ್ತಂ ತದ್ದತ್ತಂ ಶಂಕರೇ ಮುನೇ ।
ಶಾಂಕರೇ ಪೂಜಿತೇ ಸಾಕ್ಷಾತ್ಪೂಜಿತಃ ಶಂಕರೋ ಯತಃ ॥೧೩೫॥

ಶಿವಪ್ರೇಮಾಸ್ಪದಸ್ಥಾನಂ ಶಿವಭಕ್ತೋ ಯತೋ ಮುನೇ ।
ತತಸ್ತತ್ರ ಕೃತಾಪೂಜಾ ಶಿವಪೂಜೇತಿ ಮನ್ಮಹೇ ॥೧೩೬॥

ಪುರಾ ವಿಷ್ಣುಃ ಸುರೈಸ್ಸಾಕಂ ಮುರಶತ್ರುಭಯಾರ್ದಿತೈಃ ।
ಯಯೌ ಘೋರಂ ಸುರಂ ಹಂತುಂ ಪ್ರಾಪ್ತಚಕ್ರೋ ಮಹೇಶ್ವರಾತ್ ॥೧೩೭॥

ತತೋ ಗಚ್ಛನ್ ಪಥಿ ಪ್ರಾಪ್ತಃ ಶಿವಲಿಂಗಸ್ಯ ಪೂಜಕಃ ।
ಶಿವಲಿಂಗಮಲಬ್ಧ್ವಾಂತಃ ದುಃಖಿತೋಭೂತ್ಸುರೈಸ್ಸಹ ॥೧೩೮॥

---

ನೊಬ್ಬನು ದೊರೆತೊಡನೆಯೇ, ಶ್ರೀಮಹಾದೇವಾರ್ಚನೆಯನ್ನು ನೆರವೇರಿಸಬಹುದು. ॥೧೩೧-೧೩೨॥

ಹಾಗೆ ಬ್ರಾಹ್ಮಣನು ದೊರೆಯದಿದ್ದರೆ, ಶಿವಸ್ವರೂಪಿಗಳಾದ ಕ್ಷತ್ರಿಯಾದಿ ಜಾತಿಯ ಶಾಂಭವರೂ ಪೂಜ್ಯರೆನಿಸುವರು ಶಾಂಭವರನ್ನು ಪೂಜಿಸುವುದು ಶಂಕರನನ್ನು ಪೂಜಿಸಿದಂತೆಯೇ ; ಅದಕ್ಕಿಂತಲೂ ಹೆಚ್ಚೆಂದೇ ಹೇಳಬಹುದು. ಏಕೆಂದರೆ, ಅಂತಹ ಶಾಂಭವರು ಭಕ್ತವತ್ಸಲನಾದ ಶಂಕರನಿಗೆ ಅತ್ಯಂತ ಪ್ರೀತಿಪಾತ್ರರು. ॥೧೩೩-೧೩೪॥

ಶಾಂಭವರನ್ನು ಪೂಜಿಸಿದರೂ, ಅವರಿಗೆ ಯಾವ ವಸ್ತುವನ್ನರ್ಪಿಸಿದರೂ ಶಂಭುವಿಗೆ ಪ್ರೀತಿಯಾಗುವುದು ಈಶ್ವರನಿಗೆ ತನ್ನ ಭಕ್ತರೆಂದರೆ ಅತ್ಯಂತ ಪ್ರೀತಿ. ಅಂತಹವರನ್ನು ತೃಪ್ತಿಪಡಿಸುವುದರಿಂದ ಪರಶಿವನು ನಿಜವಾಗಿಯೂ ತುಷ್ಟನಾಗುವನು. ॥೧೩೫-೧೩೬॥

ಹಿಂದೆ ವಿಷ್ಣುವು ದೇವತೆಗಳೊಡಗೂಡಿ, ಮುರನೆಂಬ ರಾಕ್ಷಸನ ಹಿಂಸೆಯನ್ನು ತಾಳಲಾರದೆ, ಶಂಕರನನ್ನು ಪೂಜಿಸಿ, ಅವನ ಅನುಗ್ರಹದಿಂದ ಚಕ್ರಾಯುಧ

ತದಾ ದೈವವಶಾತ್ಕಶ್ಚಿಚ್ಛಾಂಕರೋ ಭಸ್ಮಭೂಷಣಃ ।
ಶಿವಲಿಂಗಾಂಕಿತತನುರ್ದೃಷ್ಟೋ ವಿಷ್ಣ್ವಾದಿಭಿಸ್ಸುರೈಃ ॥೧೩೯॥

ತಂ ದೃಷ್ಟ್ವಾ ಶಾಂಕರಂ ವಿಷ್ಣುಃ ಪ್ರಣಮ್ಯ ಮುಹುರಾದರಾತ್ ।
ಸಂತೋಷಂ ಪರಮಂ ಜಗ್ಮುಸ್ತತೋ ವಿಷ್ಣ್ವಾದಯಸ್ಸುರಾಃ॥೧೪೦॥

॥ ವಿಷ್ಣುರುವಾಚ ॥

ಶಾಂಕರಂ ಪೂಜಯಾಮಾಸ ಶಿವಲಿಂಗಧಿಯಾ ತದಾ ।
ತಮರ್ಚಯಿತ್ವಾ ವಿಧಿವಚ್ಛಾಂಕರಂ ಹರಿರಬ್ರವೀತ್ ॥೧೪೧॥

ಕುತಸ್ಸಮಾಗತಶ್ಶೈವಃ ಕುತ್ರ ವಾ ಗಂತುಮುದ್ಯಮಃ ।
ಭೂತಿಭೂಷಿತದೇಹಸ್ಯ ರುದ್ರಾಕ್ಷಾಭರಣಸ್ಯ ತೇ ॥೧೪೨॥

ದರ್ಶನಂ ಜಾತಮಸ್ಮಾಕಂ ಸರ್ವಮಂಗಳದಾಯಕಂ ।
ಪ್ರಯಾಣಕಾಲೇ ಶೈವಸ್ಯ ದರ್ಶನಂ ದುರ್ಲಭಂ ಯತಃ ॥೧೪೩॥

ಪ್ರಯಾಣಕಾಲೇ ಯಃ ಪಶ್ಯೇದ್ಭೂತಿರುದ್ರಾಕ್ಷಭೂಷಣಂ ।
ತಸ್ಯ ಸಿಧ್ಯಂತಿ ಕಾರ್ಯಾಣಿ ಮಂಗಲಂ ಚ ಪದೇಪದೇ ॥೧೪೪॥

ವನ್ನು ಪಡೆದನು. ದಾರಿಯಲ್ಲಿ ಬರುಬರುತ್ತಾ, ಶಿವಪೂಜೆಗೆ ಯಾವ ಶಿವಲಿಂಗವನ್ನೂ ಕಾಣದೆ ದುಃಖಿತನಾದನು. ॥೧೩೭-೧೩೮॥

ಅಷ್ಟರಲ್ಲಿಯೇ ಅಕಸ್ಮಾತ್ತಾಗಿ, ಭಸ್ಮರುದ್ರಾಕ್ಷಿಗಳಿಂದಲಂಕೃತನಾಗಿ, ಶಿವಲಿಂಗವನ್ನು ದೇಹದಲ್ಲಿ ಧರಿಸಿಕೊಂಡಿರುವ ಶಾಂಭವನೊಬ್ಬನು ಎದುರಿಗೆ ಬಂದನು. ಅವನನ್ನು ನೋಡಿ ಸಕಲ ದೇವತೆಗಳೂ ಆಶ್ಚರ್ಯಪಟ್ಟರು. ವಿಷ್ಣುವು ಒಡನೆಯೇ ಅವನಿಗೆ ಸಾಷ್ಟಾಂಗ ನಮಸ್ಕಾರಮಾಡಿದನು. ॥೧೩೯-೧೪೦॥

ಮತ್ತು ಅವನೇ ಶಿವಲಿಂಗವೆಂಬ ಭಾವನೆಯಿಂದ ವಿಧಿವತ್ತಾಗಿ ಅವನನ್ನು ಅರ್ಚಿಸಿ, ಹೀಗೆಂದನು. "ಎಲೈ ಶಿವರೂಪಿಯೇ, ತಾವು ಎಲ್ಲಿಗೆ ದಯಮಾಡಿಸುತ್ತಿರುವಿರಿ? ಎಲ್ಲಿಂದ ಪ್ರಯಾಣಹೊರಟಿರಿ? ವಿಭೂತಿ ರುದ್ರಾಕ್ಷಿಗಳಿಂದ ಅಲಂಕೃತರಾದ ತಾವು ಇಲ್ಲಿಗೆ ಬಂದ ಉದ್ದೇಶವೇನು? ॥೧೪೧-೧೪೨॥

ನಿನ್ನ ದರ್ಶನವು ನಮಗೆ ಸಕಲ ಸನ್ಮಂಗಳಗಳನ್ನೂ ಒದಗಿಸುವುದು. ಪ್ರಯಾಣಕಾಲದಲ್ಲಿ ಭೂತಿರುದ್ರಾಕ್ಷಿಧಾರಿಯಾದ ಶೈವನು ಎದುರಿಗೆ ಬಂದರೆ

ಯದೇತಚ್ಛಕುನಂ ಜಾತಂ ಶೈವ ತ್ವದ್ದರ್ಶನಾತ್ಮಕಂ ।
ತದೇವ ಬಲಮಸ್ಮಾಕಂ ಮುರವೈರಿನಿಬರ್ಹಣೇ ॥೧೪೫॥

ವಿನಾ ಭಾಗ್ಯೇನ ಮಹತಾ ಶೈವಾನಾಂ ದರ್ಶನಂ ಕುತಃ ।
ಭಾಗ್ಯೇನಾಸ್ಮಾಕಮಭವತ್ತವ ಶೈವಸ್ಯ ದರ್ಶನಂ ॥೧೪೬॥

ಯಸ್ಮಿನ್ ಸಮರ್ಚಿತೇ ಶೈವೇ ತುಷ್ಟೋ ಭವತಿ ಶಂಕರಃ ।
ಸ ಶೈವಸ್ತ್ವಂ ಪುಣ್ಯಮೂರ್ತಿರ್ಭೂತಿರುದ್ರಾಕ್ಷಭೂಷಣಃ ॥೧೪೭॥

ರುದ್ರಾಕ್ಷವಲಯೋ ಯಸ್ಮಾದ್ಭೂತಿಮಾನ್ ಸ ಶಿವಾಲಯಃ ।
ತಸ್ಮಿನ್ ದೃಷ್ಟೇ ಮಂಗಳಾನಿ ಭವಿಷ್ಯಂತಿ ಪದೇಪದೇ ॥೧೪೮॥

ಧನ್ಯಾಃ ಕೃತಾ ವಯಂ ಶೈವ ತ್ವಯಾ ದರ್ಶನದಾನತಃ ।
ಶಕುನಂ ಚ ತ್ವಯಾ ದತ್ತಮದ್ಯ ದರ್ಶನದಾನತಃ ॥೧೪೯॥

॥ ಶೈವ ಉವಾಚ ॥

ಭಕ್ತೋಽಸಿ ದೇವದೇವಸ್ಯ ಮಹಾದೇವಸ್ಯ ಕೇಶವ ।
ಶಿವಪೂಜಾ ಯತೋ ನಿತ್ಯಂ ಕ್ರಿಯತೇ ಸಾವಧಾನತಃ ॥೧೫೦॥

---

ಪ್ರಯಾಣ ಹೊರಟವರ ಸಕಲ ಕಾರ್ಯಗಳೂ ಮಂಗಳಪ್ರದವಾಗಿರುತ್ತವೆ. ಆದರೆ ಅಂತಹವರ ದರ್ಶನವು ಅತಿದುರ್ಲಭ. ॥೧೪೩-೧೪೪॥

ನಮಗೆ ಈಗ ನಿನ್ನ ದರ್ಶನವಾದುದು ಶುಭಶಕುನವಾದಂತೆಯೇ ಸರಿ. ಇನ್ನು ಮುರನೆಂಬ ರಾಕ್ಷಸನನ್ನು ನಾನು ನಾಶಮಾಡಿದಂತೆಯೇ ತಿಳಿಯುವೆನು. ಪೂರ್ವಜನ್ಮಾರ್ಜಿತಸುಕೃತದಿಂದಲ್ಲದೇ ಶೈವಸಂದರ್ಶನವು ದೊರಕಲಾರದು. ಇದರಿಂದ ನಾವು ಭಾಗ್ಯಶಾಲಿಗಳೇ ನಿಜ ॥೧೪೫-೧೪೬॥

ಯಾರನ್ನು ಆರಾಧಿಸಿದರೆ ಶಿವನು ಸುಪ್ರೀತನಾಗುವನೋ, ಅಂತಹ ಭೂತಿ ರುದ್ರಾಕ್ಷಭೂಷಣನಾದ ನೀನೇ ಧನ್ಯನು. ಪವಿತ್ರನು. ಯಾವನು ರುದ್ರಾಕ್ಷಿಗಳನ್ನು ಧರಿಸಿ, ವಿಭೂತಿಯನ್ನು ಇಟ್ಟಿರುವನೋ ಅವನ ದೇಹವು ಶಿವಾಲಯಸದೃಶ ವಾದದ್ದು. ಅವನ ದರ್ಶನದಿಂದಲೇ ಮಾನವನಿಗೆ ಸಕಲ ಸನ್ಮಂಗಳಗಳೂ ದೊರೆಯುವುವು. ॥೧೪೭-೧೪೮॥

ಶೈವನೇ, ನಿನ್ನ ದರ್ಶನದಿಂದ ನಾವು ಈಗ ಧನ್ಯರಾಗಿರುವೆವು. ಅದೆಲ್ಲ

ಅತಃ ಪದೇಪದೇ ವಿಷ್ಣೋ ವಿಜಯಸ್ತೇ ಭವಿಷ್ಯತಿ ।
ಜಯೋ ನ ದುರ್ಲಭೋ ವಿಷ್ಣೋ ಶಿವೈಕಶರಣಸ್ಯ ತೇ ॥೧೫೧॥

ವಿಜಯೀಭವ ಸರ್ವತ್ರ ಶಿವಪೂಜಾಪರೋ ಭವ ।
ಶಿವೈಕಶರಣಾನಾಂ ತು ವಿಜಯೋ ನೈವ ದುರ್ಲಭಃ ॥೧೫೨॥

ಶಿವೈಕಶರಣಾನಾಂ ಚೇದಜಯಃ ಸ್ಯಾತ್ತದಾ ಹರೇ ।
ಶಿವಪ್ರಸಾದಲಭ್ಯೋಽಯಂ ಜಯಃ ಕಸ್ಯ ಭವಿಷ್ಯತಿ ॥೧೫೩॥

ಯಶ್ಶಿವಾನುಗೃಹೀತಸ್ಸ್ಯಾತ್ತಸ್ಯೈವ ವಿಜಯೋ ಹರೇ ।
ಶಿವಾನನುಗೃಹೀತಾನಾಂ ಭವತ್ಯಪಜಯೋ ಧ್ರುವಂ ॥೧೫೪॥

ಶಿವಪ್ರಸಾದಲಬ್ಧೇನ ಚಕ್ರೇಣಾನೇನ ಕೇಶವ ।
ಕುರು ಶತ್ರುಕ್ಷಯಂ ಶೀಘ್ರಂ ಲಭಸ್ವ ವಿಜಯಂ ತತಃ ॥೧೫೫॥

ಮುಂದಿನ ನನ್ನ ಉದ್ಯಮಕ್ಕೆ ಶುಭಶಕುನವಾದಂತಾಯಿತು" ಎಂದು ವಿಷ್ಣುವು ಸ್ತುತಿಸಲು, ಆಗ ಶೈವನು ವಿಷ್ಣುವಿನೊಡನೆ ಹೀಗೆಂದನು. "ಕೇಶವನೇ, ನೀನು ನಿಜವಾದ ಈಶ್ವರಭಕ್ತನು. ಏಕೆಂದರೆ ನೀನು ತಪ್ಪದೆ ನಿತ್ಯವೂ ಈಶ್ವರನನ್ನೇ ಆರಾಧಿಸುತ್ತಿರುವೆ. ||೧೪೯-೧೫೦||

ಆದ್ದರಿಂದಲೇ ನಿನಗೆ ಸರ್ವಕಾರ್ಯದಲ್ಲಿಯೂ ಜಯವು ಅನಾಯಾಸವಾಗಿ ಲಭಿಸುವುದು. ಶಿವಶರಣನಾದ ನಿನಗೆ ಸರ್ವತ್ರ ವಿಜಯವಾಗಲಿ. ಸದಾ ಶಿವಾರಾಧನೆಯಿಂದ ಕಾಲಕಳೆಯುವವನಿಗೆ ಜಯವು ಸರ್ವದಾ ಸಿದ್ಧವೆಂದೇ ತಿಳಿ. ||೧೫೧-೧೫೨||

ಪರಶಿವನನ್ನೇ ನಂಬಿ ಪೂಜಿಸುತ್ತಿರುವವರಿಗೆ ಸೋಲುಂಟಾಗುವುದಾದರೆ, ಶಿವಪ್ರಸಾದದಿಂದ ದೊರೆಯುವ ಜಯವು ಯಾರಿಗೆ ಲಭಿಸೀತು? ಲೋಕದಲ್ಲಿ ಜಯವಾಗುವುದೆಂದರೆ ಶಿವಾನುಗ್ರಹವನ್ನು ಪಡೆದವರಿಗೆ ಮಾತ್ರವೇ. ಶಿವದ್ವೇಷಿಗಳಿಗೆ ಅಪಜಯವೇ ಸಿದ್ಧವಾದುದು. ||೧೫೩-೧೫೪||

ಈಶ್ವರಾನುಗ್ರಹದಿಂದ ಲಬ್ಧವಾದ ಈ ಚಕ್ರದ ಸಹಾಯದಿಂದ ಶತ್ರುಕ್ಷಯ ಮಾಡಿ, ವಿಜಯವನ್ನು ಗಳಿಸು. ಈಶ್ವರಭಕ್ತನಾಗಿಯೂ, ಶುದ್ಧಮನಸ್ಸಿನವ

ಶಿವಭಕ್ತಾನುಲಮತೇ ಶಿವಭಕ್ತಾರ್ಚನಪ್ರಿಯ ।
ಶಿವಾರ್ಚನವ್ರತಶ್ರೀಶ ವಿಜಯೀ ಭವ ಕೇಶವ ॥೧೫೬॥

॥ ಆಗಸ್ತ್ಯ ಉವಾಚ ॥

ಇತ್ಯುಕ್ತ್ವಾ ಶಾಂಭವೋ ಭೂಯಃ ಪೂಜಿತೋ ವಿಷ್ಣುನಾ ತತಃ ।
ಇಂದ್ರಾದಿಭಿಶ್ಚ ಯತ್ನೇನ ಪೂಜಿತಃ ಪ್ರಯಯೌ ಮುನೇ ॥೧೫೭॥

ತಸ್ಮಾತ್ಸರ್ವಪ್ರಯತ್ನೇನ ಶಿವಪೂಜಾ ದ್ವಿಜಾತಿಭಿಃ ।
ಕರ್ತವ್ಯಾಪ್ರಮಾದೇನ ಪ್ರಮಾದಾತ್ಪತಿತೋ ಭವೇತ್ ॥೧೫೮॥

ಶಿವಲಿಂಗಾರ್ಚನಂ ಶ್ರೌತಂ ಮನಸಾಪಿ ನ ಲಂಘಯೇತ್ ।
ಶ್ರುತ್ಯಾ ವಿಧೀಯತೇ ಯಸ್ಮಾತ್ತತ್ತ್ಯಾಗೀ ಪತಿತೋ ಭವೇತ್ ॥೧೫೯॥

ರುದ್ರಾಕ್ಷಧಾರಣಂ ಶ್ರೌತಂ ಮನಸಾಪಿ ನ ಲಂಘಯೇತ್ ।
ಶ್ರುತ್ಯಾ ವಿಧೀಯತೇ ಯಸ್ಮಾತ್ತತ್ತ್ಯಾಗೀ ಪತಿತೋ ಭವೇತ್ ॥೧೬೦॥

ಪಂಚಾಕ್ಷರಜಪಂ ಶ್ರೌತಂ ಮನಸಾಪಿ ನ ಲಂಘಯೇತ್ ।
ಶ್ರುತ್ಯಾ ವಿಧೀಯತೇ ಯಸ್ಮಾತ್ತತ್ತ್ಯಾಗೀ ಪತಿತೋ ಭವೇತ್ ॥೧೬೧॥

ರುದ್ರಾಧ್ಯಾಯಜಪಂ ಶ್ರೌತಂ ಮನಸಾಪಿ ನ ಲಂಘಯೇತ್ ।
ಶ್ರುತ್ಯಾ ವಿಧೀಯತೇ ಯಸ್ಮಾತ್ತತ್ತ್ಯಾಗೀ ಪತಿತೋ ಭವೇತ್ ॥೧೬೨॥

---

ನಾಗಿಯೂ, ಈಶ್ವರಭಕ್ತರನ್ನು ಅರ್ಚಿಸುವವನಾಗಿಯೂ, ಸದಾ ಶಿವವ್ರತಾಸಕ್ತನಾಗಿಯೂ ಇರುವ ಲಕ್ಷ್ಮೀಪತಿಯೇ, ನೀನು ಜಯಶೀಲನಾಗು. ॥೧೫೫-೧೫೬॥

ಹೀಗೆ ಶಾಂಭವನು ವಿಷ್ಣುವಿನಿಂದ ಸ್ತುತ್ಯನಾಗಿ, ಇಂದ್ರಾದಿಗಳಿಂದಲೂ ಪೂಜಿತನಾಗಿ, ಮುಂದಕ್ಕೆ ಪ್ರಯಾಣಮಾಡಿದನು. ಆದ್ದರಿಂದ ಎಲೈ ಮುನಿಯೇ, ದ್ವಿಜರಾದವರು, ತಪ್ಪದೆ ಸರ್ವಪ್ರಯತ್ನದಿಂದಲೂ ಶಿವಾರಾಧನೆಯನ್ನು ನಡೆಸಬೇಕು. ಹಾಗೆ ಮಾಡದಿದ್ದರೆ ಅವರು ಪತಿತರಾಗುವರು. ॥೧೫೭-೧೫೮॥

ಶ್ರುತಿಪ್ರತಿಪಾದಿತವಾದ ಶಿವಲಿಂಗಾರ್ಚನೆ, ರುದ್ರಾಕ್ಷಧಾರಣೆ ಇವು ಬಹು ಪವಿತ್ರವಾದ ಕರ್ಮಗಳು ಇವುಗಳನ್ನು ಮನಸ್ಸಿನಲ್ಲಿಯೂ ತಿರಸ್ಕರಿಸಕೂಡದು. ಹಾಗೆ ಮಾಡಿದರೆ ಮನುಷ್ಯನು ಪತಿತನಾಗುವನು. ॥೧೫೯-೧೬೦॥

ಶಿವಪಂಚಾಕ್ಷರೀ ಜಪ, ರುದ್ರಾಧ್ಯಾಯಪಾರಾಯಣ ಇವು ಶ್ರುತ್ಯುಕ್ತವಾದ

ದ್ವಿಜಾನಾಂ ಶಿವಪೂಜೈವ ಕರ್ತವ್ಯಾ ಯತ್ನಪೂರ್ವಕಂ ।
ಸರ್ವಶ್ರುತಿಶ್ರುತಾ ನಿತ್ಯಾ ಸಾ ಯತಸ್ಸರ್ವಕಾಮದಾ ॥೧೬೩॥

ತ್ಯಕ್ತ್ವಾ ಶಿವಾರ್ಚನಂ ಮೋಹಾತ್ ಶಿವಾಽನ್ಯಂ ಯೋಽರ್ಚಯಿಷ್ಯತಿ ।
ಸ ಘೋರನರಕಾವಾಸಂ ಲಭತೇ ಪಿತೃಭಿಸ್ಸಹ ॥೧೬೪॥

ಶ್ರುತಂ ಚ ಸಾಮಶಾಖಾಯಾಂ ರುದ್ರೋ ಬ್ರಾಹ್ಮಣದೈವತಂ ।
ತ್ವಂ ದೇವೇಷು ಬ್ರಾಹ್ಮಣೋಸಿ ರುದ್ರೋ ಬ್ರಾಹ್ಮಣದೈವತಂ॥೧೬೫॥

ರುದ್ರಮೇವೋಪಧಾವೇತ ಬ್ರಾಹ್ಮಣೋ ಬ್ರಾಹ್ಮಣಪ್ರಿಯಂ ।
ರುದ್ರಮೇವೋಪಧಾವೇತ ರುದ್ರಾನ್ಯಂ ನೋಪಧಾವತೇ ॥೧೬೬॥

ಸ್ವಾಂ ದೇವತಾಮತಿಕ್ರಮ್ಯ ರುದ್ರಾನ್ಯಂ ಚ ಯಜೇತ ಯಃ ।
ಸ ಪಾಪೀ ಸ್ಯಾತ್ಪರಾಂ ಸಿದ್ಧಿಂ ನ ಲಭತ್ಯೇವ ಸರ್ವಥಾ ॥೧೬೭॥

ಕರ್ಮಗಳು ಇವುಗಳನ್ನು ಮನಸ್ಸಿನಲ್ಲಿಯೂ ಮಾರಬಾರದು. ಹಾಗೆ ಮಾರಿದವರು ಪತಿತರಾಗುವರು. ॥೧೬೧-೧೬೨॥

ದ್ವಿಜರಿಗೆ ಶಿವಪೂಜೆಯೆಂಬುದು ಅವಶ್ಯಕರ್ತವ್ಯ ಕರ್ಮವೆಂದು ಸಕಲಶ್ರುತಿಗಳೂ ವಿವರಿಸುತ್ತಿವೆ. ಅಂತಹ ಇಷ್ಟಾರ್ಥಪ್ರದವಾದ ಶಿವಾರ್ಚನೆಯನ್ನು ಬಿಟ್ಟು ಅನ್ಯದೇವತಾರ್ಚನೆ ಮಾಡುವವನು ಘೋರನರಕದಲ್ಲಿ ಅವನ ಪಿತೃಪರಂಪರೆಯೊಡನೆ ದುಃಖಾನುಭವಮಾಡುವನು. ॥೧೬೩-೧೬೪॥

ರುದ್ರನೇ ಬ್ರಾಹ್ಮಣನಿಗೆ ಪೂಜ್ಯದೇವತೆಯೆಂದು ಸಾಮವೇದವು ಘೋಷಿಸುತ್ತಿದೆ. ನೀನು ದೇವತೆಗಳಲ್ಲಿ ಬ್ರಾಹ್ಮಣನೆನಿಸಿರುವೆ. ರುದ್ರನು ಬ್ರಾಹ್ಮಣರ ದೇವತೆಯು. ಆದ್ದರಿಂದ ಬ್ರಾಹ್ಮಣನಾದವನು ತನಗೆ ಪ್ರಿಯನಾದ ಶ್ರೀ ರುದ್ರನನ್ನೇ ಯಾವಾಗಲೂ ಸೇವಿಸಬೇಕು. ಇತರದೇವತೆಗಳಲ್ಲಿ ಅಷ್ಟು ಪ್ರಾಮುಖ್ಯವನ್ನು ತೋರಿಸಬೇಕಾದುದಿಲ್ಲ ॥೧೬೫-೧೬೬॥

ತನ್ನ ಮುಖ್ಯ ಆರಾಧ್ಯದೇವತೆಯಾದ ರುದ್ರನನ್ನು ಬಿಟ್ಟು ಬ್ರಾಹ್ಮಣನಾದವನು ಮತ್ತೊಂದು ದೇವರನ್ನು ಅರ್ಚಿಸಿದುದೇ ಆದರೆ, ಆತನು ಮಹಾಪಾಪಿಯೆನಿಸುವನು ಆತನಿಗೆ ಯಾವ ಸಿದ್ಧಿಯೂ ಲಭಿಸಲಾರದು. ಇದಕ್ಕೆ ನಿದರ್ಶನವಾಗಿ

ಪುರಾ ಕಶ್ಚಿದಭೂದ್ರಾಜಾ ಪುಣ್ಯಮೂರ್ತಿರಿತಿ ಶ್ರುತಃ ।
ಅರ್ಥತೋಽಪಿ ನ ನಾಮ್ನೈವ ಪುಣ್ಯಮೂರ್ತಿಃ ಸ ಭೂಪತಿಃ ॥೧೬೮॥

ತಸ್ಮಿಂಭಾಸತಿ ಭೂಲೋಕೇ ಸರ್ವೇ ಪುಣ್ಯವತೋ ಜನಾಃ ।
ಸರ್ವೇ ಸ್ವಧರ್ಮನಿರತಾ ಬಭೂವುಸ್ಸರ್ವದಾ ಮುನೇ ॥೧೬೯॥

ಸ ಪುಣ್ಯಮೂರ್ತಿರಾಲೋಕ್ಯ ವೇದಶಾಸ್ತ್ರಾಣಿ ಸರ್ವದಾ ।
ಶೈವಧರ್ಮರತೋ ಜಾತಃ ಪೂರ್ವಜನ್ಮತಪೋಬಲಾತ್ ॥೧೭೦॥

ಸ್ವಯಮುದ್ಧೂಳ್ಯ ಸರ್ವಾಂಗಂ ಕೃತ್ವಾ ರುದ್ರಾಕ್ಷಧಾರಣಂ ।
ಶಿವಲಿಂಗಾರ್ಚನಂ ಕೃತ್ವಾ ತಿಷ್ಠತ್ಯಾಸಾಯಮನ್ವಹಂ ॥೧೭೧॥

ಪ್ರದೋಷಕಾಲೇ ಗೌರೀಶಂ ಶಿವಲಿಂಗಸ್ವರೂಪಿಣಂ ।
ಸಂಪೂಜ್ಯ ವಿಧಿವದ್ರಾತ್ರೌ ಭುಂಕ್ತೇ ನಿತ್ಯಂ ಸ ಭೂಪತಿಃ ॥೧೭೨॥

ಶಿವಲಿಂಗಾರ್ಚನಂ ಕುರ್ವನ್ ಶೃಣ್ವನ್ ಶಿವಕಥಾಶ್ಶುಭಾಃ ।
ಭೂಪತಿಃ ಕ್ಷುತ್ಪಿಪಾಸಾಭ್ಯಾಮನಾಕ್ರಾಂತೋ ಬಭೂವ ಸಃ ॥೧೭೩॥

ಹಿಂದೆ ಪುಣ್ಯಮೂರ್ತಿಯೆಂಬ ಒಬ್ಬ ರಾಜನಿದ್ದನು. ಆತನು ಕೇವಲ ಹೆಸರಿನಿಂದಲ್ಲದೆ ಕಾರ್ಯದಿಂದಲೂ ಆ ಹೆಸರಿಗೆ ಒಪ್ಪುವಂತಿದ್ದನು. ||೧೬೭-೧೬೮||

ಆ ರಾಜನು ಭೂಲೋಕವನ್ನು ಧರ್ಮದಿಂದ ಆಳುತ್ತಿರಲು, ಅಲ್ಲಿರುವ ಜನರೆಲ್ಲರೂ ಸ್ವಧರ್ಮನಿರತರಾಗಿ ಸುಖದಿಂದಿದ್ದರು ಆ ಪುಣ್ಯಮೂರ್ತಿರಾಜನಾದರೋ ಸಕಲ ವೇದಶಾಸ್ತ್ರಾರ್ಥಗಳನ್ನೂ ಚೆನ್ನಾಗಿ ತಿಳಿದು, ಸರ್ವದಾ ಶೈವಧರ್ಮಾಚರಣೆಯಿಂದ ಪೂರ್ವಜನ್ಮದ ತಪಃಫಲವಾಗಿ ಪುಣ್ಯಶರೀರಿಯಾಗಿದ್ದನು. ||೧೬೯-೧೭೦||

ಆತನು ನಿತ್ಯವೂ ತನ್ನ ಅವಯವಗಳನ್ನು ಭಸ್ಮದಿಂದ ಲೇಪಿಸಿಕೊಂಡು ರುದ್ರಾಕ್ಷಿಯನ್ನು ಧರಿಸಿ ಸಾಯಂಕಾಲದವರೆಗೂ ಶಿವಾರ್ಚನೆಯಲ್ಲಿಯೇ ಕಾಲ ಕಳೆಯುತ್ತಿದ್ದನು ಪ್ರದೋಷಕಾಲದಲ್ಲಿ ಶಿವಲಿಂಗಸ್ವರೂಪಿಯಾದ ಪರಶಿವನನ್ನು ಮತ್ತೆ ಪೂಜಿಸಿ ರಾತ್ರಿ ಭೋಜನಮಾಡಿ ನಿದ್ರಿಸುತ್ತಿದ್ದನು ||೧೭೧-೧೭೨||

ಹೀಗೆ ಆ ರಾಜನು ಶಿವಲಿಂಗಾರ್ಚನೆಮಾಡುತ್ತಾ, ಶಿವಚರಿತೆಗಳನ್ನು ಕೇಳುತ್ತಾ, ಹಸಿವು ಬಾಯಾರಿಕೆಗಳಿಗೆ ಅಧೀನನಾಗದೇ ಇದ್ದನು ಶಿವನಾಮಗಳನ್ನು

ಶಿವನಾಮಾನ್ಯನಾಮಾನಿ ಸ ನ ಶುಶ್ರಾವ ಭೂಪತಿಃ ।
ಶಿವಲಿಂಗಾನ್ಯಪೂಜಾಪಿ ನ ಕೃತಾ ತೇನ ಸರ್ವಥಾ ॥೧೭೪॥

ಶಾಂತಸತ್ತ್ವಾಃ ಸ್ಥಿತಾಸ್ತಸ್ಯ ರೂಪಲಾವಣ್ಯಶೋಭನಾಃ ।
ತಾಭಿಸ್ಸ ಕಾರಯಾಮಾಸ ನೃತ್ಯಂ ನಿತ್ಯಂ ಶಿವಾಂಗಣೇ ॥೧೭೫॥

ಸ ರತ್ನೈಃ ಕಾರಯಾಮಾಸ ಶಿವಸ್ಥಾನಂ ಮನೋಹರಂ ।
ಸ ತತ್ರ ಸ್ಥಾಪಯಾಮಾಸ ರತ್ನಲಿಂಗಂ ಮನೋಹರಂ ॥೧೭೬॥

ಸ ರತ್ನೈರಮಿತೈಃ ಪುಷ್ಪೈರ್ಬಿಲ್ವಪತ್ರೈಶ್ಚ ಕೋಮಲೈಃ ।
ತದ್ರತ್ನಲಿಂಗಮಭ್ಯರ್ಚ್ಯ ಧೂಪಾದ್ಯೈಶ್ಚ ಸಮರ್ಚಯೇತ್ ॥೧೭೭॥

ಶಿವಪೂಜಾರತೋ ಭೂತ್ವಾ ಸ ಯಾವತ್ಸಂಸ್ಥಿತೋ ಭುವಿ ।
ತಾವನ್ನ ಭೂದ್ಭುಪಿ ಭಯಂ ದುರ್ಭಿಕ್ಷಾದಿಕೃತಂ ಮುನೇ ॥೧೭೮॥

ಪಿತ್ರಾ ನ ಪುತ್ರಮರಣಂ ದೃಷ್ಟಂ ತಸ್ಮಿನ್ ಸತಿ ದ್ವಿಜ ।
ನಾರೀ ನ ವಿಧವಾ ಜಾತಾ ತಸ್ಮಿನ್ಪಾಪತಿ ಭೂತಲೇ ॥೧೭೯॥

ಬಿಟ್ಟು ಮತ್ತಾವ ದೇವತಾನಾಮಗಳನ್ನಾಗಲಿ, ಶಿವಲಿಂಗವನ್ನು ಬಿಟ್ಟು ಮತ್ತಾವ ದೇವತಾಮೂರ್ತಿಯನ್ನಾಗಲಿ ಆತನು ಪೂಜಿಸುತ್ತಿರಲಿಲ್ಲ ॥೧೭೩-೧೭೪॥

ಶಾಂತಸ್ವಭಾವದವರೂ, ರೂಪಲಾವಣ್ಯಯುತರೂ ಆದ ತನ್ನ ಪತ್ನಿಯರಿಂದ ನಿತ್ಯವೂ ಶಿವಾಲಯದಲ್ಲಿ ನರ್ತನವಮಾಡಿಸುತ್ತಿದ್ದನು ಶಿವಾಲಯವನ್ನಾದರೋ, ರತ್ನಾಭರಣಗಳಿಂದ ಅಲಂಕರಿಸಿದ್ದನು. ಅದರಲ್ಲಿ ರತ್ನಮಯವಾದ ಶಿವಲಿಂಗವನ್ನಿಟ್ಟು ಪೂಜಿಸುತ್ತಿದ್ದನು ॥೧೭೫-೧೭೬॥

ಶಿವಲಿಂಗಕ್ಕೆ ಅನಂತವಾದ ರತ್ನಗಳನ್ನೂ, ಬಿಲ್ವಪತ್ರೆಗಳನ್ನೂ ಕೋಮಲವಾದ ಪುಷ್ಪಗಳನ್ನೂ ಸಮರ್ಪಿಸುತ್ತಿದ್ದನು. ಧೂಪದೀಪಾದಿಗಳಿಂದ ಸೇವಿಸುತ್ತಿದ್ದನು. ಅವನು ಆರೀತಿ ಶಿವಾರ್ಚನೆಮಾಡುತ್ತಾ ಭೂಮಂಡಲವನ್ನು ಆಳುತ್ತಿರುವಾಗ ಅವನ ರಾಜ್ಯದಲ್ಲಿ ಎಂದೂ ದುರ್ಭಿಕ್ಷಾದಿಗಳೂ ಶತ್ರುಗಳ ಭಯವಾಗಲಿ ಕಂಡುಬರುತ್ತಿರಲಿಲ್ಲ. ॥೧೭೭-೧೭೮॥

ಅವನ ರಾಜ್ಯದಲ್ಲಿ ತಂದೆಯು ಪುತ್ರಮರಣದಿಂದ ಎಂದೂ ದುಃಖವನ್ನು ಕಾಣುತ್ತಿರಲಿಲ್ಲ ನಾರಿಯರು ವೈಧವ್ಯದುಃಖಕ್ಕೆ ಈಡಾಗುತ್ತಿರಲಿಲ್ಲ. ಹೀಗಿರಲು

ತಸ್ಮಿನ್ನೇವಂ ಸ್ಥಿತೇ ಭೂಪೇ ಕಶ್ಚಿತ್ ಷೋಡಶವಾರ್ಷಿಕಃ ।
ಮೃತಸ್ಸತ್ಯೇವ ಪಿತರಿ ಸರ್ವವಿದ್ಯಾವಿಶಾರದಃ । ॥೧೮೦॥

ತತಸ್ತಂ ಪುತ್ರಮಾದಾಯ ಮೃತಮೇವ ಹಿ ತತ್ಪಿತಾ ।
ತಸ್ಯೈವ ನೃಪತೇರ್ದ್ವಾರಿ ಸಕುಟುಂಬೋ ರುದನ್ ಸ್ಥಿತಃ ॥೧೮೧॥

ತತಸ್ತದ್ರೋದನಂ ಶ್ರುತ್ವಾ ಪುಣ್ಯಮೂರ್ತಿಃ ಕೃಪಾನಿಧಿಃ ।
ತಮುಕ್ತ್ವಾ ಮಾ ರುದಸ್ವೇತಿ ಕ್ಷಣಂ ಚಿಂತಾಪರೋಽಭವತ್ ॥೧೮೨॥

ತತಸ್ಸಭೂಪತಿಃ ಕ್ರುದ್ಧೋ ಯಮಂ ಸಸ್ಮಾರ ತತ್ಕ್ಷಣೇ ।
ಸ ಯಮೋಽಪಿ ಭಯಗ್ರಸ್ತಸ್ತಂ ಪಾಪಂ ನೃಪತಿಂ ಮುನೇ ॥೧೮೩॥

ತಮಾಗತಂ ಕಂಪಮಾನಂ ಯಮಂ ಸಂಪ್ರೇಕ್ಷ್ಯ ಭೂಪತಿಃ ।
ಕುಟಿಲಾಲಕತಾಮ್ರಾಕ್ಷೋ ಮಮ ಮಾಹೋಗ್ರಶಾಸನಃ ॥೧೮೪॥

॥ ರಾಜಾ ಉವಾಚ ॥

ಪುತ್ರಃ ಪಿತರಿ ಸತ್ಯೇವ ಕಥಂ ವಾತ್ರ ಮೃತೋ ಯಮ ।
ಏತಸ್ಯ ಮರಣೇ ಹೇತುಃ ಕೋ ವಾ ತದ್ವದ ಸತ್ವರಂ ॥೧೮೫॥

ಒಂದುಸಾರಿ ಹದಿನಾರು ವರ್ಷದ ಮಗನೊಬ್ಬನು ಹೆಚ್ಚು ವಿದ್ಯಾವಂತನಾಗಿದ್ದು ತಂದೆಯು ಬದುಕಿರುವಾಗಲೇ ಮೃತನಾದನು. ॥೧೭೯-೧೮೦॥

ಆ ಸತ್ತಮಗನನ್ನು ಎತ್ತಿಕೊಂಡು ಬಂದು ತಂದೆಯು ರಾಜನ ಅರಮನೆಯ ಮುಂಭಾಗದಲ್ಲಿಟ್ಟು, ಪತ್ನಿಯೊಡನೆ ಗಟ್ಟಿಯಾಗಿ ರೋದಿಸಲಾರಂಭಿಸಿದನು. ಆ ರೋದನವನ್ನು ಪುಣ್ಯಮೂರ್ತಿಯು ಕೇಳಿ, ಅವರನ್ನು ಸಮಾಧಾನಪಡಿಸುತ್ತಾ ಬಹುವಾಗಿ ಯೋಚಿಸಿದನು. ॥೧೮೧-೧೮೨॥

ಅನಂತರ ರಾಜನು ಯಮನಮೇಲೆ ಬಹಳವಾಗಿ ಕೋಪಿಸಿಕೊಂಡು ಯಮನನ್ನು ಸ್ಮರಿಸಿಕೊಂಡನು ಯಮನಾದರೋ ಭಯದಿಂದ ನಡುಗುತ್ತಾ ರಾಜನ ಎದುರಿಗೆ ಬಂದುನಿಲ್ಲಲು, ಕೋಪದಿಂದ ಕೆದರಿದ ಮುಂಗೂದಲುಳ್ಳ ಮತ್ತು ಕೆಂಪಾದ ಕಣ್ಣುಗಳುಳ್ಳ ಆ ರಾಜನು ಯಮನನ್ನು ಕುರಿತು ಹೀಗೆಂದನು. ॥೧೮೩-೧೮೪॥

“ಯಮನೇ, ತಂದೆಯು ಎದುರಿಗೆ ಈ ಮಗನು ಏತಕ್ಕಾಗಿ ಸತ್ತನು? ಇದಕ್ಕೆ

ತ್ವಯಾಸ್ಯ ಮರಣಂ ಕಾಲ ನ ಜ್ಞಾತಮಿತಿ ಸ ಧ್ರುವಂ ।
ಅಕಾಲೇ ಕಾಲ ಬಾಲೋಽಯಂ ಕಥಂ ನೀತಸ್ತ್ವಯಾ ವದ ॥೧೮೬॥

ಮತ್ಪ್ರಜಾಸ್ವೇವಮನ್ಯಾಯೋ ಪ್ರವೃತ್ತಿರ್ಯದಿ ತೇ ಯಮ ।
ತದಾ ತವಾಧಿಕಾರೋಽಯಂ ನ ಸ್ಥಾಸ್ಯತ್ಯೇವ ಸರ್ವಥಾ ॥೧೭೭॥

ಕಾಲಮೃತ್ಯುಂ ಜಯಿಷ್ಯಾಮಿ ಶ್ರೀಮೃತ್ಯುಂಜಯಪೂಜಯಾ ।
ಅಕಾಲಮೃತ್ಯುಂ ಜೇಷ್ಯಾಮೀತ್ಯತ್ರ ಕಾಲ ಕಿಮದ್ಭುತಂ ॥೧೮೮॥

ಅಧುನಾ ಪಾರ್ಥಿವಂ ಲಿಂಗಂ ಸಮಭ್ಯರ್ಚ್ಯ ಯಥಾವಿಧಿ ।
ಯಮ ಸಾಕ್ಷಾತ್ಕರಿಷ್ಯೇಽಹಂ ಮೃತ್ಯುಂಜಯಮುಮಾಪತಿಂ ॥೧೮೯॥

ಮೃತ್ಯುಂಜಯಮುಮಾಕಾಂತಂ ಪ್ರತ್ಯಕ್ಷೀಕೃತ್ಯ ಸತ್ವರಂ ।
ತವಾಧಿಕಾರಮನ್ಯಸ್ಮೈ ದಾಪಯಿಷ್ಯಾಮ್ಯಹಂ ಯಮ ॥೧೯೦॥

ಮಾಮನ್ಯತುಲ್ಯಂ ಮತ್ವಾ ತಂ ಯಮಮಾನ್ಯಾಯ್ಯಂ ಕರೋಷಿ ಕಿಂ ।
ಜ್ಞಾತ ಏವ ನ ಕಿಂ ಕಾಲ ಪ್ರಭಾವಶ್ಶಾಂಕರಸ್ಯ ಮೇ ॥೧೯೧॥

ಬಹುಭಿಶ್ಶಾಂಕರೈಃ ಪೂರ್ವಮುಪೇಂದ್ರಾದಿದಿವೌಕಸಾಂ ।
ಅಧಿಕಾರಾಃ ಕ್ಷಣಾರ್ಧೇನ ಕ್ರೂರೈರ್ದೂರೀಕೃತಾ ಯಮ ॥೧೯೨॥

ಕಾರಣವೇನು? ನಿನಗೆ ತಿಳಿಯದೆ ಇವನ ಮರಣವು ಸಂಭವಿಸಿಲ್ಲ ಅಕಾಲದಲ್ಲಿ ಮೃತನಾದ ಈತನನ್ನು ನೀನು ಕೊಂಡೊಯ್ದುದು ಹೇಗೆ? ಹೇಳು. ||೧೮೫-೧೮೬||

ನನ್ನ ಪ್ರಜೆಗಳಲ್ಲಿ ಮಾತ್ರ ನೀನು ಅನ್ಯಾಯದಿಂದ ವರ್ತಿಸಬೇಡ. ಹಾಗೆ ನಡೆದೆಯಾದರೆ ನಿನಗೆ ಅಧಿಕಾರವು ತಪ್ಪಿಹೋಗುವುದು ಶ್ರೀ ಮೃತ್ಯುಂಜಯಾರಾಧನೆಯಿಂದ ಕಾಲಮೃತ್ಯು ಮತ್ತು ಅಕಾಲಮೃತ್ಯುವಿನ ಭಯವನ್ನು ನಾನು ಜಯಿಸಿರುವೆನು. ||೧೮೭-೧೮೮||

ನಾನು ಈಗಲೇ ಪಾರ್ಥಿವಲಿಂಗಾರಾಧನೆ ಮಾಡಿ ಈಶ್ವರನನ್ನು ಪ್ರತ್ಯಕ್ಷ ಮಾಡಿಕೊಳ್ಳುವೆನು. ಆಗಲೇ ಪರಶಿವನಲ್ಲಿ ನಿನ್ನ ಈ ಅನ್ಯಾಯವರ್ತನೆಯನ್ನು ಹೇಳಿ ನಿನ್ನ ಅಧಿಕಾರವನ್ನು ಮತ್ತೊಬ್ಬನಿಗೆ ಕೊಡಿಸಿಬಿಡುವೆನು. ||೧೮೯-೧೯೦||

ಯಮಧರ್ಮನೆ, ನಾನು ಸರ್ವಸಾಮಾನ್ಯನೆಂದು ಭಾವಿಸಿ ಅನ್ಯಾಯಕಾರ್ಯವನ್ನು ಪ್ರದರ್ಶಿಸಬೇಡ ಈಶ್ವರನ ಶಕ್ತಿಯನ್ನು ನೀನು ಅರಿಯೆಯಾ ಹಿಂದೆ

ಶಾಂಕರಾಣಾಮಶಕ್ಯಾರ್ಥೋ ನಾಸ್ತಿ ಲೋಕತ್ರಯೇಽಸ್ಮತಃ ।
ಯಮಾಧಿಕಾರವ್ಯತ್ಯಾಸಂ ಕರಿಷ್ಯೇ ತವ ಸರ್ವಥಾ ॥೧೯೩॥

ಮನೋಪೇಂದ್ರಾದಯೋಽಸ್ಮದ್ಯ ಗಣನೀಯಾ ನ ವಸ್ತುತಃ ।
ಏತಾದೃಶಸ್ಯ ಮೇ ಕಾಲ ಗಣನೀಯೋಽಸಿ ಕಿಂ ಭವಾನ್ ॥೧೯೪॥

॥ ಅಗಸ್ತ್ಯ ಉವಾಚ ॥

ಇತಿ ತದ್ವಚನಂ ಶ್ರುತ್ವಾ ಕೃತಾಂತಃ ಕಂಪಮಾವಹನ್ ।
ಕೃತಾಂಜಲಿಪುಟೋ ಭೂತ್ವಾ ಪ್ರಾಹ ವಾಚಂ ವಿಚಕ್ಷಣಃ ॥೧೯೫॥

॥ ಯಮ ಉವಾಚ ॥

ಪುಣ್ಯಮೂರ್ತೇ ತ್ವಯೋಕ್ತಂ ಯತ್ತತ್ಸರ್ವಂ ಸತ್ಯಮೇವ ಹಿ ।
ಶಾಂಕರಾಣಾಮಶಕ್ಯಾರ್ಥೋ ನ ಭವಿಷ್ಯತಿ ಸರ್ವಥಾ ॥೧೯೬॥

ಮಯಾ ಮರಣಮೇತಸ್ಯ ಜ್ಞಾಯತೇ ನಾತ್ರ ಸಂಶಯಃ ।
ಮರಣೇ ಹೇತುರಪ್ಯಸ್ಯ ಜ್ಞಾಯತೇ ಸ ಮಯೋಚ್ಯತೇ ॥೧೯೭॥

ಶಾಂಭವರನೇಕರು ವಿಷ್ಣುವೇ ಮೊದಲಾದ ದೇವತೆಗಳ ಅಧಿಕಾರವನ್ನು ಕೋಪದಿಂದ ಕ್ಷಣಾರ್ಧದಲ್ಲಿ ದೂರೀಕರಿಸಿರುವರು. ನಿನಗೆ ಇದು ತಿಳಿಯದೆ? ॥೧೯೧-೧೯೨॥

ಶಾಂಭವರಿಗೆ ಅಸಾಧ್ಯವಾದ ಕಾರ್ಯವೊಂದೂ ಕಂಡುಬರುವುದಿಲ್ಲ. ಎಲೈ ಯಮನೇ, ನನ್ನ ಸಾಮರ್ಥ್ಯದಿಂದ ಈಗಲೇ ನಿನ್ನ ಅಧಿಕಾರದಲ್ಲಿ ವ್ಯತ್ಯಾಸಮಾಡುವೆನು. ವಿಷ್ಣುವೇ ಮೊದಲಾದ ದೇವತೆಗಳನ್ನೂ ನಾನು ಲಕ್ಷಿಸುವವನಲ್ಲ. ಹೀಗಿರುವಾಗ ನೀನು ನನಗೆ ಯಾವ ಲಕ್ಷ್ಯನು?" ॥೧೯೩-೧೯೪॥

ಎಂದು ಹೇಳಿದ ಪುಣ್ಯಮೂರ್ತಿರಾಜನ ಮಾತುಗಳನ್ನು ಕೇಳಿ ಯಮನು ಹೆದರಿ ನಡುಗುತ್ತಾ ಅಂಜಲಿಬದ್ಧನಾಗಿ ಹೀಗೆಂದನು. "ಎಲೈ ಪುಣ್ಯಮೂರ್ತಿಯೇ, ನೀನು ಹೇಳಿದ ಮಾತೆಲ್ಲಾ ನಿಜ ಶಾಂಭವರಿಗೆ ಅಸಾಧ್ಯವಾದ ಕಾರ್ಯವು ಯಾವುದೂ ಕಾಣುವುದಿಲ್ಲ. ॥೧೯೫-೧೯೬॥

ರಾಜನೇ, ಇವನು ಮೃತನಾಗಿರುವುದು ನನಗೆ ಗೊತ್ತು ಇದಕ್ಕೆ ಕಾರಣವನ್ನು ಹೇಳುವೆನು ಕೇಳು. ಈ ನಗರದಲ್ಲಿ ಒಬ್ಬ ಬ್ರಾಹ್ಮಣನಿರುವನು. ಆತನು

ಭೂಪಾಸ್ಮಿನ್ ನಗರೇ ವಿಪ್ರಃ ಕಶ್ಚಿದಾಸೀದಶಾಂಕರಃ ।
ಸ ಶಿವಾರ್ಚನರತೋ ಜಾತೋಽದ್ಯೈವ ಭ್ರಮಾವೃತಃ ॥೧೯೮॥

ಊರ್ಧ್ವಪುಂಡ್ರಂ ಮೃದಾ ಕೃತ್ವಾ ಶ್ರೌತಧರ್ಮವಿವರ್ಜಿತಃ ।
ತಿಷ್ಠತ್ಯತ್ರಾತ ಏವಾತ್ರ ಜಾತೋ ಧರ್ಮವಿಪರ್ಯಯಃ ॥೧೯೯॥

ಯಸ್ಮಿನ್ ದೇಶೇ ಭವೇದ್ವಿಪ್ರಃ ಶ್ರೌತಧರ್ಮವಿವರ್ಜಿತಃ ।
ತಸ್ಮಿನ್ ದೇಶೇ ಮರಿಷ್ಯಂತಿ ಪುತ್ರಾಃ ಪಿತರಿ ಸತ್ಯಪಿ ॥೨೦೦॥

ಅನ್ಯಾನ್ಯಪಿ ಭಯಾನ್ಯೇವಂ ಶ್ರೌತಧರ್ಮವಿಪರ್ಯಯೇ ।
ಭವಿಷ್ಯಂತಿ ನ ಸಂದೇಹೋ ದುರ್ಭಿಕ್ಷಾದೀನ್ಯಪಿ ಪ್ರಭೋ ॥೨೦೧॥

ಯಸ್ಮಿನ್ದೇಶೇ ಭವೇದ್ಭೂಪ ಶ್ರೌತಧರ್ಮವಿಪರ್ಯಯಃ ।
ತದ್ದೇಶನಾಶೋ ಬಹುಧಾ ಭವತ್ಯೇವ ನ ಸಂಶಯಃ ॥೨೦೨॥

ವ್ಯಾಧಿವೃದ್ಧಿರನಾರೋಗ್ಯಂ ಪ್ರಜಾಪೀಡಾಪ್ರಜಾಕ್ಷಯಃ ।
ಕ್ಷತಿಶ್ಚ ಜಾಯತೇ ರಾಜನ್ ಶ್ರೌತಧರ್ಮವಿಪರ್ಯಯೇ ॥೨೦೩॥

ಅಲ್ಪಾಯುಷ್ಯಮನಾವೃಷ್ಟಿಶ್ಚೋರವೃದ್ಧಿರ್ಧನಕ್ಷಯಃ ।
ಹಾನಿಶ್ಚ ಭವತಿ ಸ್ವಾಮಿನ್ ಶೈವಧರ್ಮವಿಪರ್ಯಯೇ ॥೨೦೪॥

---

ಈಶ್ವರನನ್ನು ಅರ್ಚಿಸದೆ ಅಜ್ಞಾನದಿಂದ ಬೇರೆಬೇರೆ ದೇವತೆಗಳನ್ನು ಪೂಜಿಸುತ್ತಿದ್ದಾನೆ. ॥೧೯೭-೧೯೮॥

ಅಲ್ಲದೆ ಮಣ್ಣಿನಿಂದ ಊರ್ಧ್ವತ್ರಿಪುಂಡ್ರವನ್ನಿಟ್ಟು, ಶ್ರುತ್ಯುಕ್ತವಾದ ಧರ್ಮಗಳನ್ನು ದೂರಮಾಡಿ ಧರ್ಮಭ್ರಷ್ಟನಾಗಿರುವನು. ಯಾವ ದೇಶದಲ್ಲಿ ಬ್ರಾಹ್ಮಣನು ಶ್ರೌತಧರ್ಮವಿವರ್ಜಿತನಾಗಿ ಜೀವಿಸುವನೋ, ಅಂತಹ ದೇಶದಲ್ಲಿ ತಂದೆಯು ಎದುರಿಗೆ ಮಗನ ಮರಣವು ಸಂಭವಿಸುವುದು. ॥೧೯೯-೨೦೦॥

ಮತ್ತು ಶ್ರುತಿಧರ್ಮಗಳು ಲೋಪವಾದೆಡೆಯಲ್ಲಿ, ದುರ್ಭಿಕ್ಷವೇ ಮೊದಲಾದ ಅನೇಕ ಭಯಗಳು ಸಂಭವಿಸುವುವು. ಅಲ್ಲದೆ ಆ ದೇಶವೇ ಕೊನೆಗೆ ನಾಶವಾಗುವುದು. ಇದರಲ್ಲಿ ಸಂಶಯವಿಲ್ಲ. ॥೨೦೧-೨೦೨॥

ವೇದಧರ್ಮ ಬಾಹಿರವಾದ ದೇಶದಲ್ಲಿ ವ್ಯಾಧಿ, ಪ್ರಜಾಪೀಡೆ, ಪ್ರಜಾಕ್ಷಯ,

ಅಶೈವೈಸ್ಸಹ ಸಂವಾಸಂ ಯೇ ಕರಿಷ್ಯಂತಿ ಮೋಹತಃ ।
ತೇಷಾಂ ಭವತ್ಯನಾಯುಷ್ಯಂ ಪಾಪವೃದ್ಧಿಶ್ಚ ಜಾಯತೇ ॥೨೦೫॥

ಪಾಪಭೂತೇರಶೈವಸ್ಯ ದರ್ಶನಸ್ಪರ್ಶನಾದಿಕಂ ।
ಯೇ ಕರಿಷ್ಯಂತಿ ಮೋಹೇನ ತೇಷಾಮಾಪದ್ಭವಿಷ್ಯತಿ ॥೨೦೬॥

ವರಂ ಮದ್ಯಪಸಂಸರ್ಗೋ ವರಮಂತ್ಯಜಸಂಗಮಃ ।
ಶೈವಧರ್ಮಪರಿಭ್ರಷ್ಟಸಂಗಮೋ ನ ವರಂ ನೃಪ ॥೨೦೭॥

ವರಂ ಪಿತೃಘ್ನಸಂಸರ್ಗೋ ವರಂ ಮಾತೃಘ್ನಸಂಗಮಃ ।
ಶೈವಧರ್ಮಪರಿಭ್ರಷ್ಟಸಂಗಮೋ ನ ವರಂ ನೃಪ ॥೨೦೮।

ಅಶೈವಃ ಪಾಪಿನಾಂ ಶ್ರೇಷ್ಠೋ ನ ದ್ರಷ್ಟವ್ಯಃ ಕದಾಚನ ।
ದೈವಾದ್ದೃಷ್ಟೋ ಯದಿ ತದಾ ಸಚೇಲಂ ಸ್ನಾನಮಾಚರೇತ್ ॥೨೦೯॥

ಅಶೈವಾದುತ್ತಮೋ ಜ್ಞೇಯಶ್ಚಂಡಾಲೋಽಪಿ ನ ಸಂಶಯಃ ।
ಚಂಡಾಲದರ್ಶನೇ ಯಸ್ಮಾತ್ಸ್ನಾನಂ ನ ವಿಹಿತಂ ನೃಪ ॥೨೧೦॥

---

ಆಯುಃಕ್ಷೀಣತೆ, ಅನಾವೃಷ್ಟಿ, ಶತ್ರುವೃದ್ಧಿ. ಚೋರಬಾಧೆ, ಧನನಾಶ ಮುಂತಾದ ತೊಂದರೆಗಳೆಲ್ಲಾ ಸಂಭವಿಸುವುವು. ||೨೦೩-೨೦೪||

ಯಾರು ಅಜ್ಞಾನದಿಂದ ಶೈವೇತರರೊಡನೆ ಸ್ನೇಹ ಬೆಳೆಸುವರೋ, ಅವರು ಅಲ್ಪಾಯುಷ್ಮಂತರಾಗಿಯೂ, ಪಾಪಿಗಳಾಗಿಯೂ ಆಗುವರು. ಅಂತಹವರ ದರ್ಶನ ಸ್ಪರ್ಶನಾದಿಗಳೂ ಆಪತ್ಕರಗಳು. ||೨೦೫-೨೦೬||

ಮದ್ಯಪಾಯಿ, ಚಂಡಾಲ, ಮಾತಾಪಿತೃಗಳನ್ನು ಕೊಂದವನು, ಇಂತಹವರ ಸಂಸರ್ಗವನ್ನಾದರೂ ಮಾಡಬಹುದು ಶೈವಧರ್ಮ ಬಾಹಿರನಾದವನ ಸ್ನೇಹವನ್ನು ಎಂದಿಗೂ ಮಾಡಬಾರದು. ಅದು ಶ್ರೇಯಸ್ಕರವಲ್ಲ. ||೨೦೭-೨೦೮||

ಪಾಪಿಗಳಲ್ಲೆಲ್ಲಾ ಪರಮಪಾಪಿಯೆನಿಸಿದವನು ಅಶೈವನು. ಇವನಿಗಿಂತಲೂ ಚಂಡಾಲನು ಶ್ರೇಷ್ಠನು. ಏಕೆಂದರೆ ಚಂಡಾಲದರ್ಶನವಾದರೆ ಸಚೇಲಸ್ನಾನ ಮಾಡಬೇಕಿಲ್ಲ. ಅಶೈವನ ದರ್ಶನಕ್ಕಾಗಿ ಸ್ನಾನಮಾಡಬೇಕೆಂಬ ನಿಯಮವಿದೆ. ||೨೦೯-೨೧೦||

ಯದೀಚ್ಛಸಿ ಪ್ರಜಾಕ್ಷೇಮಂ ಸ್ವಸ್ಯಾಪಿ ಕ್ಷೇಮಮುನ್ನಹಂ ।
ಅಶ್ವೈವಮತಿಯತ್ನೇನ ಹನ ಶೀಘ್ರಂ ನರಾಧಿಪ ॥೨೧೧॥

ಅಶ್ವೈವೋ ಯದಿ ಶಸ್ತ್ರೇಣ ಖಂಡಶಶ್ಛಿದ್ಯತೇ ತದಾ ।
ಅಸ್ಯ ದ್ವಿಜಶಿಶೋಃ ಪ್ರಾಣಾಸ್ಸಮಾಯಾಸ್ಯಂತಿ ಸತ್ವರಂ ॥೨೧೨॥

॥ ಅಗಸ್ತ್ಯ ಉವಾಚ ॥

ಶ್ವೈವೋಽಯಂ ಬಾಲಕೋ ರಾಜನ್ ಅಶ್ವೈವನಿಧನೇ ಕೃತೇ ।
ಉತ್ಥಾಸ್ಯತಿ ನ ಸಂದೇಹಶ್ಶಪಥಃ ಕ್ರಿಯತೇ ಶಿವೇ ॥೨೧೩॥

ಇತಿ ತದ್ವಚನಂ ಶ್ರುತ್ವಾ ಸ ರಾಜಾ ದೃಢನಿಶ್ಚಯಃ ।
ತದ್ವೈವಾನಾಯಯಾಮಾಸ ಭಟೈಸ್ತಾಡನಪೂರ್ವಕಂ ॥೨೧೪॥

ಅಶ್ವೈವಂ ತಂ ತದಾ ಭೂಪೋ ಯಮೋ ಪಶ್ಯತಿ ಸತ್ವರಂ ।
ಅಶ್ವೈವಂ ಛೇದಯಾಮಾಸ ಖಂಡಶಃ ಕಲುಷಾಕೃತಂ ॥೨೧೫॥

ಅಶ್ವೈವಶ್ಯಸ್ತ್ರಸಂಛನ್ನೋ ಯದೈವಾಭೂತ್ತದಾ ಮುನೇ ।
ಸಪ್ರಾಣಸ್ಸಮಭೂಚ್ಛೀಘ್ರಂ ಸ ಏವ ದ್ವಿಜಬಾಲಕಃ ॥೨೧೬॥

ನೀನು ನಿಜವಾಗಿ ಪ್ರಜಾಕ್ಷೇಮವನ್ನು ಬಯಸುವುದಾದರೆ ಅಶ್ವೈವನಾಗಿರುವ ಆ ವಿಪ್ರನನ್ನು ಕೊಂದುಹಾಕು. ಅವನನ್ನು ಕತ್ತಿಯಿಂದ ಚೂರುಚೂರಾಗಿ ಕತ್ತರಿಸಿದರೆ ಆಗ ಈ ದ್ವಿಜಪುತ್ರನು ಜೀವಂತನಾಗುವನು. ॥೨೧೧-೨೧೨॥

ಪಾಪಿಯಾದ ಆತನು ಮೃತನಾದೊಡನೆಯೇ ಈ ಬಾಲಕನು ಎದ್ದು ಕುಳಿತುಕೊಳ್ಳುವನು. ಇದು ನಿಜ. ಪ್ರಮಾಣಪುರಸ್ಸರವಾಗಿ ಹೇಳುತ್ತೇನೆ." ಎಂದು ಯಮನು ಹೇಳಲು ಒಡನೆಯೇ ರಾಜನು ಸೇವಕರ ಮೂಲಕ ಆ ದುಷ್ಟವಿಪ್ರನನ್ನು ಎಳೆಸಿದನು. ॥೨೧೩-೨೧೪॥

ಯಮನ ಎದುರಿಗೆ ರಾಜನು ಆ ಅಶ್ವೈವನನ್ನು ಕತ್ತಿಯಿಂದ ಚೂರುಚೂರಾಗಿ ಕತ್ತರಿಸಿದನು. ಹಾಗೆ ಮಾಡಿದೊಡನೆಯೇ ಮೃತನಾಗಿದ್ದ ಈ ಬ್ರಾಹ್ಮಣ ಪುತ್ರನು ಜೀವಿಯಾಗಿ ಎದ್ದು ಕುಳಿತನು. ॥೨೧೫-೨೧೬॥

॥ ರಾಜಾ ಉವಾಚ ॥

ತತಃ ಪ್ರಧಾನಮಾಹೂಯ ಸ ರಾಜಾ ಧರ್ಮತತ್ಪರಃ ।
ಕೃತಾಂತೇ ಶೃಣ್ವತಿ ತದಾ ಪ್ರಾಹ ಲೋಕಹಿತಂ ವಚಃ ॥೨೧೭॥

ಭವಿಷ್ಯಂತ್ಯತ್ರ ಯೇ ಕೇಚಿದುದ್ಧೂಲನವಿವರ್ಜಿತಾಃ ।
ತೇಷಾಂ ಶಿರಾಂಸಿ ತಸ್ಮಾತ್ತ್ವ್ರೈಶ್ಛೇದನೀಯಾನಿ ಯತ್ನತಃ ॥೨೧೮॥

ಭವಿಷ್ಯಂತ್ಯತ್ರ ಯೇ ಕೇಚಿದೂರ್ಧ್ವಪುಂಡ್ರಧರಾ ನರಾಃ ।
ತೇಷಾಂ ಶಿರಾಂಸಿ ತಸ್ಮಾತ್ತ್ವ್ರೈಶ್ಛೇದನೀಯಾನಿ ಯತ್ನತಃ ॥೨೧೯॥

ಭವಿಷ್ಯಂತ್ಯತ್ರ ಯೇ ಕೇಚಿತ್ತ್ರಿಪುಂಡ್ರಾನಂಕಿತಾ ದ್ವಿಜಾಃ ।
ತೇಷಾಂ ಶಿರಾಂಸಿ ತಸ್ಮಾತ್ತ್ವ್ರೈಶ್ಛೇದನೀಯಾನಿ ಯತ್ನತಃ ॥೨೨೦॥

ಭವಿಷ್ಯಂತ್ಯತ್ರ ಯೇ ಕೇಚಿದ್ರುದ್ರಾಕ್ಷಾನಂಕಿತಾ ದ್ವಿಜಾಃ ।
ತೇಷಾಂ ಶಿರಾಂಸಿ ತಸ್ಮಾತ್ತ್ವ್ರೈಶ್ಛೇದನೀಯಾನಿ ಯತ್ನತಃ ॥೨೨೧॥

ಭವಿಷ್ಯಂತ್ಯತ್ರ ಯೇ ಕೇಚಿಚ್ಛಿವಾನ್ಯಸುರಪೂಜಕಾಃ ।
ತೇಷಾಂ ಶಿರಾಂಸಿ ತಸ್ಮಾತ್ತ್ವ್ರೈಶ್ಛೇದನೀಯಾನಿ ಯತ್ನತಃ ॥೨೨೨॥

ಭವಿಷ್ಯಂತ್ಯತ್ರ ಯೇ ಕೇಚಿಚ್ಛಿವಾನ್ಯಾರಾಧನಪ್ರಿಯಾಃ ।
ತೇಷಾಂ ಶಿರಾಂಸಿ ತಸ್ಮಾತ್ತ್ವ್ರೈಶ್ಛೇದನೀಯಾನಿ ಯತ್ನತಃ ॥೨೨೩॥

---

ಇದರಿಂದ ಆಶ್ಚರ್ಯಪಟ್ಟ ಆ ರಾಜನು, ತನ್ನ ಮುಖ್ಯ ಮಂತ್ರಿಯನ್ನು ಕುರಿತು, ಯಮನ ಎದುರಿಗೆ ಹೀಗೆ ಲೋಕೋಪಕಾರವಾದ ಅಪ್ಪಣೆಯೊಂದನ್ನು ಮಾಡಿದನು. "ನಮ್ಮ ದೇಶದಲ್ಲಿ ಯಾರು ಭಸ್ಮೋದ್ಧೂಲನಮಾಡದೆ ವಾಸಿಸುವರೋ, ಅಂತಹವರ ಕತ್ತನ್ನು ಕೆಂಪಾಗಿ ಕಾದ ಆಯುಧಗಳಿಂದ ಕತ್ತರಿಸಿರಿ. ॥೨೧೭-೨೧೮॥

ಇನ್ನುಮೇಲೆ ನಮ್ಮ ದೇಶದಲ್ಲಿ ದ್ವಿಜರಾದವರು, ಊರ್ಧ್ವಪುಂಡ್ರವನ್ನು ಧರಿಸಿಕೊಂಡರೆ, ಭಸ್ಮತ್ರಿಪುಂಡ್ರವನ್ನು ದೂರೀಕರಿಸಿದರೆ, ರುದ್ರಾಕ್ಷಿಗಳನ್ನು ಧರಿಸದಿದ್ದರೆ, ಈಶ್ವರನನ್ನು ಬಿಟ್ಟು ದೇವತಾಂತರಗಳನ್ನು ಪೂಜಿಸಿದರೆ, ಅಥವಾ ಪೂಜಿಸಲು ಇಷ್ಟಪಟ್ಟರೆ, ಶಿವನನ್ನು ಬಿಟ್ಟು ಇತರ ದೇವತಾದರ್ಶನಕ್ಕೆ ಯತ್ನಿಸಿದರೆ ಶಂಕರನನ್ನು ಸ್ಮರಿಸದೆ ದೇವತಾಂತರ ಸ್ಮರಣಮಾಡಿದರೆ, ಶಿವಲಿಂಗಾರಾಧನೆಯನ್ನು

ಭವಿಷ್ಯಂತ್ಯತ್ರ ಯೇ ಕೇಚಿಚ್ಛಿವಾನ್ಯಾಲೋಕನಪ್ರಿಯಾಃ ।
ತೇಷಾಂ ಶಿರಾಂಸಿ ತಸ್ಮಾತ್ತ್ರೈಶ್ಛೇದನೀಯಾನಿ ಯತ್ನತಃ ॥೨೨೪॥

ಭವಿಷ್ಯಂತ್ಯತ್ರ ಯೇ ಕೇಚಿಚ್ಛಿವಾನ್ಯಸ್ಮರಣಪ್ರಿಯಾಃ ।
ತೇಷಾಂ ಶಿರಾಂಸಿ ತಸ್ಮಾತ್ತ್ರೈಶ್ಛೇದನೀಯಾನಿ ಯತ್ನತಃ ॥೨೨೫॥

ಭವಿಷ್ಯಂತ್ಯತ್ರ ಯೇ ಕೇಚಿತ್ತ್ಯಕ್ತಲಿಂಗಾರ್ಚನಾ ದ್ವಿಜಾಃ ।
ತೇಷಾಂ ಶಿರಾಂಸಿ ತಸ್ಮಾತ್ತ್ರೈಶ್ಛೇದನೀಯಾನಿ ಯತ್ನತಃ ॥೨೨೬॥

ಭವಿಷ್ಯಂತ್ಯತ್ರ ಯೇ ಕೇಚಿದ್ರುದ್ರಾಧ್ಯಯನವರ್ಜಿತಾಃ ।
ತೇಷಾಂ ಶಿರಾಂಸಿ ತಸ್ಮಾತ್ತ್ರೈಶ್ಛೇದನೀಯಾನಿ ಯತ್ನತಃ ॥೨೨೭॥

ಭವಿಷ್ಯಂತ್ಯತ್ರ ಯೇ ಕೇಚಿಚ್ಛ್ರೀರುದ್ರಜಪವರ್ಜಿತಾಃ ।
ತೇಷಾಂ ಶಿರಾಂಸಿ ತಸ್ಮಾತ್ತ್ರೈಶ್ಛೇದನೀಯಾನಿ ಯತ್ನತಃ ॥೨೨೮॥

ಭವಿಷ್ಯಂತ್ಯತ್ರ ಯೇ ಕೇಚಿತ್ಪಂಚಾಕ್ಷರಪರಾಙ್ಮುಖಾಃ ।
ತೇಷಾಂ ಶಿರಾಂಸಿ ತಸ್ಮಾತ್ತ್ರೈಶ್ಛೇದನೀಯಾನಿ ಯತ್ನತಃ ॥೨೨೯॥

ಅನ್ಯೇಷು ಶೈವಧರ್ಮೇಷು ಯೇಷಾಂ ಚಿತ್ತಂ ಪರಾಙ್ಮುಖಂ ।
ತೇಷಾಂ ಶಿರಾಂಸಿ ತಸ್ಮಾತ್ತ್ರೈಶ್ಛೇದನೀಯಾನಿ ಯತ್ನತಃ ॥೨೩೦॥

ಅಶೈವಾನಾಮವಸ್ಥಾನಂ ಮಾಸ್ತು ಭೂಮಂಡಲಾಂತರೇ ।
ಯದಿ ತೇಷಾಮವಸ್ಥಾನಂ ತದಾ ದಂಡ್ಯೋ ಭವಾನ್ಮಮ ॥೨೩೧॥

ದೂರಮಾಡಿದರೆ, ರುದ್ರಸೂಕ್ತ, ರುದ್ರಾಧ್ಯಾಯ ಮಂತ್ರಗಳನ್ನು ಪಠಿಸದೇ ಇದ್ದರೆ, ಶಿವಪಂಚಾಕ್ಷರೀ ಮಂತ್ರದಲ್ಲಿಯೂ, ಶೈವಧರ್ಮದಲ್ಲಿಯೂ ಆಸಕ್ತಿಯನ್ನು ಪಡೆಯದಿದ್ದರೆ, ಅಂತಹವರ ಶಿರಸ್ಸುಗಳನ್ನು ಕಾದಶಸ್ತ್ರದಿಂದ ಚೂರುಚೂರಾಗಿ ಕತ್ತರಿಸಿ ಹಾಕಿಬಿಡಿ. ॥೨೧೯-೨೨೦-೨೨೧-೨೨೨-೨೨೩-೨೨೪-೨೨೫-೨೨೬-೨೨೭-೨೨೮-೨೨೯-೨೩೦॥

ಇನ್ನುಮೇಲೆ ನನ್ನ ಭೂಮಂಡಲದಲ್ಲಿ ಶಿವಪೂಜಕರಲ್ಲದವರು ಇರಲೇ ಕೂಡದು. ಅಂತಹವರು ಎಲ್ಲಿದ್ದರೂ ಅವರನ್ನು ನೀವು ಶಿಕ್ಷಿಸಿರಿ ಯಾರು

ಯೇ ಕರಿಷ್ಯಂತಿ ಮೋಹೇನ ಶಿವಾನ್ಯಸುರಕೀರ್ತನಂ ।
ತೇಷಾಂ ಕಾರ್ಯಶ್ಶಿರಶ್ಛೇದೋ ದೇಹಛೇದಪುರಸ್ಸರಂ ॥೨೩೨॥

ಯೇ ಕರಿಷ್ಯಂತಿ ಮೋಹೇನ ಶಿವಾನ್ಯಸುರಪೂಜನಂ ।
ತೇಷಾಂ ಕಾರ್ಯಶ್ಶಿರಶ್ಛೇದೋ ದೇಹಛೇದಪುರಸ್ಸರಂ ॥೨೩೩॥

ಇಯಮಾಜ್ಞಾ ಮಯಾ ದತ್ತಾ ಯದ್ಯೇನಾಂ ಲಂಘಯಿಷ್ಯಸಿ ।
ತದಾ ತವ ಶಿರಶ್ಛೇದಂ ಕರಿಷ್ಯೇ ನಾತ್ರ ಸಂಶಯಃ ॥೨೩೪॥

ಅಶೈವನಾಮ ಭೂಲೋಕೇ ಯದಿ ಸಂಶ್ರೂಯತೇ ಮಯಾ ।
ತದಾ ತವ ಶಿರಶ್ಛೇದಂ ಕರಿಷ್ಯೇ ನಾತ್ರಸಂಶಯಃ ॥೨೩೫॥

ಏವಂ ಪ್ರಧಾನಮಾಜ್ಞಾಪ್ಯ ಶೈವಬುದ್ಧ್ಯಾ ಯಮಂ ತತಃ
ಪೂಜಯಾಮಾಸ ನೃಪತಿಃ ಶೈವಧರ್ಮಪರಾಯಣಃ ॥೨೩೬॥

॥ ಅಗಸ್ತ್ಯ ಉವಾಚ ॥

ಶೈವೋತ್ತಮಂ ನೃಪಂ ಮತ್ವಾ ಯಮೋಽಪಿ ನೃಪತಿಂ ತತಃ ।
ಪೂಜಯಾಮಾಸ ಪುಷ್ಪಾದ್ಯೈಃ ಶೈವೋಽಯಮಿತಿ ಸಾದರಂ ॥೨೩೭॥

---

ಪ್ರಮಾದದಿಂದಾದರೂ ಈಶ್ವರನನ್ನು ಬಿಟ್ಟು ಬೇರೆ ದೇವತೆಗಳ ನಾಮಸ್ಮರಣೆಮಾಡಿದರೂ, ಅಂತಹವರ ಕತ್ತನ್ನು ಕತ್ತರಿಸಿ ಹಾಕಿಬಿಡಿ. ॥೨೩೧-೨೩೨॥

ಯಾರು ಅಜ್ಞಾನದಿಂದ ದೇವತಾಂತರ ಪೂಜೆಯಲ್ಲಿ ನಿರತರಾಗುವರೋ, ಅವರ ದೇಹವನ್ನೂ, ಶಿರಸ್ಸನ್ನೂ ಚೂರುಚೂರಾಗಿ ಕತ್ತರಿಸಿರಿ. ಈ ನನ್ನ ಆಜ್ಞೆಯನ್ನು ಮೀರಿ ನೀನು ನಡೆದೆಯಾದರೆ, ಅಥವಾ ಭೂಲೋಕದಲ್ಲಿ ಇನ್ನುಮೇಲೆ ಅಶೈವರ ಹೆಸರು ಕೇಳಿಬಂದರೆ, ನಿನ್ನತಲೆಯನ್ನೇ ತೆಗೆದುಹಾಕುವೆನು. ಇದರಲ್ಲಿ ಸಂಶಯವಿಲ್ಲ." ॥೨೩೩-೨೩೪-೨೩೫॥

ಹೀಗೆ ತನ್ನ ಸೇನಾಪತಿಗೆ ಆಜ್ಞೆಮಾಡಿ, ಅಲ್ಲಿಯೇ ಇದ್ದ ಯಮನೂ ಶಿವಪೂಜಾಪರಾಯಣನೆಂದು ತಿಳಿದು, ಅವನನ್ನು ರಾಜನು ಬಹುವಾಗಿ ಉಪಚರಿಸಿದನು. ಯಮನೂ ಸಹ ಆ ರಾಜನು ಶೈವಶ್ರೇಷ್ಠನೆಂದರಿತು ಪ್ರೀತಿಪೂರ್ವಕವಾಗಿ ಪುಷ್ಪಾದಿಗಳಿಂದ ಪೂಜಿಸಿದನು. ॥೨೩೬-೨೩೭॥

ಪುನಸ್ಸಂಪೂಜಿತಸ್ತೇನ ನೃಪೇಣ ಸ ಯಮೋ ಮುನೇ ।
ಯಯೌ ಪ್ರಹೃಷ್ಟವದನಃ ಸ ಭೃತ್ಯೈರ್ನಿಜಮಂದಿರಂ ॥೨೩೮॥

ಗತ್ವಾ ರಾಜಹತಂ ಶೀಘ್ರಮಶ್ವೈನಂ ದುಷ್ಟಶಿಕ್ಷಕಃ ।
ಅಘೋರಯಾತನಾಮಧ್ಯೇ ಪಾತಯಾಮಾಸ ತಂ ಯಮಃ ॥೨೩೯॥

ಪಾತಯಾಮಾಸ ನರಕೇ ಯಮಸ್ತಸ್ಯ ಪಿತೄನಪಿ ।
ಅಘೋರನರಕಸ್ಥಾನೇ ಸ ತಸ್ಥೌ ಪಿತೃಭಿಸ್ಸಹ ॥೨೪೦॥

ಅತೋಽಸ್ಮಹಂ ಪ್ರಯತ್ನೇನ ಕರ್ತವ್ಯಂ ಶಿವಪೂಜನಂ ।
ಸರ್ವಾರ್ಥಸಾಧಕಂ ಯಸ್ಮಾಚ್ಛ್ರೀಮಹಾದೇವಪೂಜನಂ ॥೨೪೧॥

ಶಿವಮೇವ ಪ್ರಯತ್ನೇನ ಪೂಜಯಂತಿ ಮನೀಷಿಣಃ ।
ಶಿವಂ ಮೋಕ್ಷಪ್ರದಂ ಮತ್ವಾ ವೇದಾಂತೈರಖಿಲೈರಪಿ ॥೨೪೨॥

ವೇದವೇದಾಂತವೇದ್ಯಸ್ಯ ಮಹಾದೇವಸ್ಯಪೂಜನಂ ।
ಯೇ ಕರಿಷ್ಯಂತಿ ಯತ್ನೇನ ಧನ್ಯಾಸ್ತೇ ಇತಿ ಮನ್ಮಹೇ ॥೨೪೩॥

ಮತ್ತೆ ಯಮನು ಆ ರಾಜನಿಂದ ವಿಶೇಷವಾಗಿ ಪೂಜಿತನಾಗಿ, ಸಂತೋಷದಿಂದ ತನ್ನ ಮನೆಯನ್ನು ಸೇರಿದನು. ಹಾಗೆಯೇ ಆ ರಾಜನಿಂದ ಹತನಾಗಿದ್ದ ಅಶ್ವೈವನನ್ನು ದುಷ್ಟಶಿಕ್ಷಕನಾದ ಯಮನು ಘೋರ ನರಕದಲ್ಲಿ ಹಾಕಿಸಿದನು. ||೨೩೮-೨೩೯||

ಅಷ್ಟಲ್ಲದೆ ಅವರ ಪಿತೃಗಳನ್ನೂ ನರಕಕ್ಕೆ ಕಳುಹಿಸಿದನು. ಹಾಗೆ ಆ ಶಿವದ್ವೇಷಿಯು ತನ್ನ ಪಿತೃವರ್ಗದೊಡನೆ ಅಘೋರ ನರಕದಲ್ಲಿ ಬಹುಕಾಲ ಬಿದ್ದಿದ್ದನು. ಆದ್ದರಿಂದ ನಾವೂ ಸಹ ಸರ್ವದಾ ಸರ್ವಾರ್ಥಸಾಧಕವಾದ ಶಿವಾರ್ಚನೆಯನ್ನು ತಪ್ಪದೆ ನಡೆಸುತ್ತಿರಬೇಕು. ||೨೪೦-೨೪೧||

ಜ್ಞಾನಿಗಳೂ ಸಹ ಶಿವನೇ ಮೋಕ್ಷಪ್ರದನೆಂಬುದನ್ನು ಉಪನಿಷದ್ವಾಕ್ಯಗಳಿಂದ ತಿಳಿದು ಸರ್ವದಾ ಶಂಕರನನ್ನೇ ಪೂಜಿಸುವರು. ಯಾರು ಹಾಗೆ ಸರ್ವದಾ ವೇದ ವೇದಾಂತವೇದ್ಯನಾದ ಶಂಕರನನ್ನೇ ಆರಾಧಿಸುವರೋ, ಅವರೇ ಧನ್ಯರು ಎಂದು ನಾವು ತಿಳಿದಿರುವೆವು. ||೨೪೨-೨೪೩||

ಅನನ್ಯಾಃ ಪೂಜಯಂತೀಶಂ ಯೇ ಸಂತತಮುಮಾಪತಿಂ ।
ತ ಏವ ಧನ್ಯಾ ಮಾನ್ಯಾಶ್ಚ ಪೂಜನೀಯಾಶ್ಚ ಯತ್ನತಃ ॥೨೪೪॥

ಸರ್ವೋತ್ತಮಃ ಸರ್ವಹೇತುಃ ಸರ್ವಾರಾಧ್ಯೋ ಮಹೇಶ್ವರಃ ।
ಅತ ಏವ ಸ ಯತ್ನೇನ ಪೂಜನೀಯೋ ಮುನೀಷಿಭಿಃ ॥೨೪೫॥

ಯಮರ್ಚಯಂತ್ಯುಮಾಕಾಂತಂ ಇಂದ್ರೋಪೇಂದ್ರಾದಯಸ್ಸುರಾಃ ।
ಸ ಏವ ಪೂಜ್ಯೋ ದೇವೇಷು ದೇವದೇವೋತ್ತಮಃ ಶಿವಃ ॥೨೪೬॥

ಅತ್ಯಂತಶ್ರದ್ಧಯಾ ನಿತ್ಯಂ ಯೋಽರ್ಚಯೇತ್ಪಾರ್ವತೀಪತಿಂ ।
ಸ ಪೂಜ್ಯ ಇತಿ ವೇದೋಽಪಿ ವದತ್ಯೇವ ಸನಾತನಃ ॥೨೪೭॥

ಅತಿಪುಣ್ಯವಶಾದೇವ ಶ್ರದ್ಧಾ ಭವತಿ ಶಂಕರೇ ।
ಅತಿಪುಣ್ಯವಿಹೀನಾನಾಂ ನ ಶ್ರದ್ಧಾ ಪಾರ್ವತೀಪತೌ ॥೨೪೮॥

ಅತ್ಯಂತಶ್ರದ್ಧಯಾ ವಿಷ್ಣುಃ ಸ್ವನೇತ್ರಾಬ್ಜೇನ ಶಂಕರಂ ।
ಪೂಜಯಾಮಾಸ ಸಾ ಪೂಜಾ ಜಾತಾ ವಿಷ್ಣುತ್ವದಾಯಿನೀ ॥೨೪೯॥

---

ಯಾರು ಅನ್ಯರನ್ನು ನಂಬದೆ ಕೇವಲ ಪರಶಿವನನ್ನೇ ಸರ್ವದಾ ಆರಾಧಿಸುವರೋ ಅವರೇ ಧನ್ಯರು ಮತ್ತು ಮಾನ್ಯರು. ಮಹೇಶ್ವರನು ನಿಜವಾಗಿಯೂ ಸರ್ವಶ್ರೇಷ್ಠನು. ಸರ್ವಕ್ಕೂ ಕಾರಣನು. ಸರ್ವರಿಂದಲೂ ಪೂಜಿತನು. ಆದ್ದರಿಂದಲೇ ಪ್ರಯತ್ನಪೂರ್ವಕವಾಗಿ ಪರಶಿವನನ್ನು ಪೂಜಿಸುತ್ತಿರಬೇಕು. ||೨೪೪-೨೪೫||

ಇಂದ್ರೋಪೇಂದ್ರರೇ ಮೊದಲಾದ ದೇವತೆಗಳೂ ಸಹ ಸರ್ವದಾ ಉಮಾಕಾಂತನಾದ ಪರಶಿವನನ್ನೇ ಪೂಜಿಸುವಾಗ ಪರಶಿವನು ದೇವದೇವೋತ್ತಮನಲ್ಲವೆ! ಅಂತಹ ಪರಶಿವನನ್ನು ಯಾರು ಭಕ್ತಿಯಿಂದರ್ಚಿಸುವರೋ, ಅವರೇ ನಿಜವಾಗಿ ಪೂಜ್ಯರೆಂದು ವೇದಗಳು ಸಾರುತ್ತಿವೆ ||೨೪೬-೨೪೭||

ಶಂಕರನಲ್ಲಿ ಶ್ರದ್ಧೆಯುಂಟಾಗುವುದು ಕೇವಲ ಪುಣ್ಯಶಾಲಿಗಳಿಗೆ ಮಾತ್ರ. ಪಾಪಿಗಳಾದವರಿಗೆ ಪಾರ್ವತೀಪತಿಯಲ್ಲಿ ಶ್ರದ್ಧೆಯುಂಟಾಗುವುದಿಲ್ಲ. ವಿಷ್ಣುವು ಅತ್ಯಂತ ಭಕ್ತಿಯಿಂದ ತನ್ನ ನೇತ್ರಕಮಲದಿಂದ ಶಂಕರನನ್ನು ಪೂಜಿಸಿಯೇ ತಾನು ಸರ್ವವ್ಯಾಪಕನಾಗುವ ಸಾಮರ್ಥ್ಯವನ್ನು ಪಡೆದಿರುವನು. ||೨೪೮-೨೪೯||

ಅತೋಽತಿಶ್ರದ್ಧಯಾ ನಿತ್ಯಂ ಯೇಽರ್ಚಯಂತಿ ಮಹೇಶ್ವರಂ ।
ತೇಷಾಮಾಯುಷ್ಯಮಾರೋಗ್ಯಮಪವರ್ಗಶ್ಚ ಜಾಯತೇ ॥೨೫೦॥

ಯೇ ಪೂಜಯಂತ್ಯುಮಾಕಾಂತಂ ನಿತ್ಯಮವ್ಯಭಿಚಾರತಃ ।
ತೇಷಾಂ ಪುಣ್ಯವತಾಂ ಪುಂಸಾಂ ನಿತ್ಯಮೇವ ನಮೋನಮಃ ॥೨೫೧॥

ಪುಣ್ಯಾ ಶಿವಾ ಶಿವಃ ಪುಣ್ಯಃ ಪುಣ್ಯಂ ತಿರ್ಯಕ್ತ್ರಿಪುಂಡ್ರಕಂ ।
ಶಿವಲಿಂಗಾರ್ಚನಂ ಪುಣ್ಯಂ ಪುಣ್ಯಮಾನಂದಕಾನನಂ ॥೨೫೨॥

ಏತತ್ಪ್ರಾತಃ ಸಮುತ್ಥಾಯ ಸ್ಮರ್ತವ್ಯಂ ಪುಣ್ಯಪಂಚಕಂ ।
ಸ್ಮರಣೇನಾಸ್ಯ ಸತತಂ ಜಾಯತೇ ಪುಣ್ಯವಾನ್ನರಃ ॥೨೫೩॥

ಉಮಾಸಹಾಯಮಿತ್ಯಾದಿ ವೇದಮಂತ್ರೈಶ್ಶಿವಃ ಪ್ರಗೇ ।
ಸ್ಮರ್ತವ್ಯಂ ಸತತಂ ವಿಪ್ರೈಃ ಸರ್ವಸಿದ್ಧ್ಯರ್ಥಮಾದರಾತ್ ॥೨೫೪॥

ಶಿವಶಂಕರ ಗೌರೀಶ ವಿಶ್ವನಾಥ ಮಹೇಶ್ವರ ।
ದೇವೋತ್ತಮೇತಿ ನಾಮಾನಿ ಪ್ರಾತರ್ಜಪ್ಯಾನಿ ಸತ್ತಮೈಃ ॥೨೫೫॥

ಯಾರು ಅತಿಶ್ರದ್ಧೆಯಿಂದ ಮಹೇಶ್ವರನನ್ನು ಪೂಜಿಸುವರೋ, ಅವರಿಗೆ ಮಹಾದೇವನು ಆಯುಸ್ಸು, ಆರೋಗ್ಯ, ಮೋಕ್ಷ ಇವುಗಳನ್ನು ಒದಗಿಸುವನು ಯಾರು ನಿತ್ಯವೂ ಮಹಾದೇವನನ್ನು ಪೂಜಿಸುವರೋ, ಅಂತಹ ಪುಣ್ಯಶಾಲಿಗಳಾದ ಪುರುಷರಿಗೆ ನಿತ್ಯವೂ ನಮಸ್ಕಾರಮಾಡುವೆನು. ॥೨೫೦-೨೫೧॥

ಪಾರ್ವತೀ, ಪರಶಿವ, ಭಸ್ಮತ್ರಿಪುಂಡ್ರ, ಶಿವಲಿಂಗಾರ್ಚನ, ಶಿವಲಿಂಗವನ (ಆನಂದವನ) ಈ ಐದೂ ಪುಣ್ಯಸ್ವರೂಪಗಳು. ಈ ಪುಣ್ಯಪಂಚಕವನ್ನು ಯಾರು ಪ್ರತಿದಿನ ಪ್ರಾತಃಕಾಲದಲ್ಲಿ ಸ್ಮರಿಸುವರೋ ಅವರೇ ಪುಣ್ಯಶಾಲಿಗಳು. ॥೨೫೨-೨೫೩॥

ಬ್ರಾಹ್ಮಣರಾದವರು ಪ್ರತಿದಿನ ಪ್ರಾತಃಕಾಲದಲ್ಲಿಯೂ, ವೇದಮಂತ್ರಗಳಿಂದಲೂ, ಶಿವಸ್ತುತಿಗಳಿಂದಲೂ ಶಂಕರನನ್ನು ಧ್ಯಾನಿಸುತ್ತಿರಬೇಕು. ಪ್ರಾತಃಕಾಲದಲ್ಲಿ ಶಿವಶಂಕರ, ಗೌರೀಪತೇ, ವಿಶ್ವನಾಥ, ಮಹೇಶ್ವರ, ದೇವೋತ್ತಮ ಎಂಬ ನಾಮಗಳಿಂದ ಶಂಕರನನ್ನು ಸ್ಮರಿಸುತ್ತಿರಬೇಕು. ॥೨೫೪-೨೫೫॥

ಭವಾನೀ ಸ್ಕಂದಜನನೀ ಗೌರೀಶಂಕರವಲ್ಲಭಾ ।
ಶಿವೇತಿ ಪ್ರಾತರುತ್ಥಾಯ ಸ್ಮರ್ತವ್ಯಾ ಜಗದಂಬಿಕಾ ॥೨೫೬॥

ಪ್ರಾತಃಕಾಲಾನ್ಯಕಾಲೇಪಿ ಶಿವಶಂಭೋ ಮಹೇಶ್ವರ ।
ಮಹಾದೇವೇತಿ ನಾಮಾನಿ ಜಪನೀಯಾನಿ ಸಜ್ಜನೈಃ ॥೨೫೭॥

ಸ್ಮರ್ತವ್ಯಃ ಕೀರ್ತನೀಯಶ್ಚ ಜಪನೀಯಶ್ಚ ಶಂಕರಃ ।
ಯತಸ್ತತ್ಸ್ಮರಣಾದೀನಿ ಮುಕ್ತಿದಾನಿ ಮಹಾಮುನೇ ॥೨೫೮॥

ತನ್ಮನೋ ಯೇನ ಮನಸಾ ಸ್ಮರ್ಯತೇ ಪಾರ್ವತೀಪತಿಃ ।
ಸಾ ಜಿಹ್ವಾ ಕೀರ್ತ್ಯತೇ ಸಾಂಬಃ ಸತತಂ ಜಿಹ್ವಯಾ ಯಯಾ॥೨೫೯॥

ಸಹಸ್ತೋ ಯೇನ ಹಸ್ತೇನ ಬಿಲ್ವೈಸ್ಸಂಪೂಜ್ಯತೇ ಶಿವಃ ।
ತಚ್ಛಿರೋ ಯೇನ ಶಿರಸಾ ಪ್ರಣಾಮಃ ಕ್ರಿಯತೇ ಶಿವೇ ॥೨೬೦॥

ತೌ ಪಾದೌ ಯೌ ಶಿವಕ್ಷೇತ್ರೇ ಭಕ್ತ್ಯಾ ಪರ್ಯಟಿತೌ ಮುದಾ ।
ಸ ಪುಣ್ಯೋ ಯೇನ ವಾ ಕಾಶ್ಯಾಂ ಸ್ವಶರೀರ ಸಮರ್ಪಿತಂ ॥೨೬೧॥

---

ಪ್ರಾತಃಕಾಲದಲ್ಲಿ ಜಗನ್ಮಾತೆಯಾದ ಪಾರ್ವತಿಯನ್ನು ಭವಾನೀದೇವಿಯೇ, ಸ್ಕಂದಮಾತೆಯೇ, ಗೌರೀದೇವಿಯೇ, ಶಂಕರಪತ್ನಿಯೇ, ಶಿವೆಯೇ ಮುಂತಾದ ನಾಮಧೇಯಗಳಿಂದ ಧ್ಯಾನಿಸುತ್ತಿರಬೇಕು. ಶಿವನಾಮಸ್ಮರಣೆಗೆ ಪ್ರಾತಃಕಾಲವೇ ಬೇಕೆಂಬ ನಿಯಮವಿಲ್ಲ. ಇತರ ಕಾಲಗಳಲ್ಲಿಯೂ ಶಿವ, ಶಂಭೋ, ಮಹಾದೇವ ಮುಂತಾದ ನಾಮಗಳಿಂದ ಧ್ಯಾನಿಸಬಹುದು ಅಂತೂ ಸರ್ವಕಾಲಗಳಲ್ಲಿಯೂ ಶೈವರು ದೇವಿಯು ಮತ್ತು ಶಂಕರನ ನಾಮಸ್ಮರಣೆ ಮಾಡುತ್ತಿರಲೇಬೇಕು. ||೨೫೬-೨೫೭||

ಶಂಕರನನ್ನು ಸ್ತುತಿಸಬೇಕು ಶಿವಮಂತ್ರಗಳನ್ನು ಜಪಿಸಬೇಕು. ಅದರಿಂದಲೇ ಮುಕ್ತಿಯು ಲಭಿಸುವುದು. ಪಾರ್ವತೀಪತಿಯನ್ನು ಸ್ಮರಿಸುವ ಮನಸ್ಸೂ, ಪರಶಿವನ ನಾಮಗಳನ್ನು ಹೊಗಳುವ ನಾಲಿಗೆಯೂ, ಬಿಲ್ವಾದಿಗಳಿಂದ ಶಿವಲಿಂಗಗಳನ್ನು ಪೂಜಿಸುವ ಕೈಯೂ, ಶಂಕರನನ್ನು ವಂದಿಸುವ ಶಿರಸ್ಸೂ ಪವಿತ್ರವಾದವುಗಳು. ಅವುಗಳ ಜನ್ಮವೇ ಸಾರ್ಥಕವೆನಿಸುವುದು ||೨೫೮-೨೫೯-೨೬೦||

ಶಿವಕ್ಷೇತ್ರವಲ್ಲಿ ಸಂಚರಿಸಿದ ಕಾಲುಗಳೇ ಶ್ರೇಷ್ಠವಾದವುಗಳು. ಯಾವನು ಸ್ವಶರೀರವನ್ನು ಕಾಶೀಕ್ಷೇತ್ರದಲ್ಲಿ ತ್ಯಜಿಸುವನೋ ಅವನೇ ಸುಕೃತಿಯು. ಆದ್ದರಿಂದ

ಪದ್ಭ್ಯಾಂ ಪ್ರದಕ್ಷಿಣಾಃ ಕಾರ್ಯಾಃ ಸಾವಧಾನಂ ಶಿವಾಲಯೇ ।
ಹಸ್ತಾಭ್ಯಾಮತಿಯತ್ನೇನ ಕರ್ತವ್ಯಂ ಶಂಕರಾರ್ಚನಂ ॥೨೬೨॥

ಪ್ರಣಾಮಾಸ್ಸ್ವಶರೀರೇಣ ಕರ್ತವ್ಯಾಃ ಪಾರ್ವತೀಪ್ರಭೋಃ ।
ಶ್ರೋತ್ರಾಭ್ಯಾಮತಿಯತ್ನೇನ ಶ್ರೋತವ್ಯಾಃ ಶಾಂಕರಾಃ ಕಥಾಃ॥೨೬೩॥

ನೇತ್ರಾಭ್ಯಾಮತಿಯತ್ನೇನ ದ್ರಷ್ಟವ್ಯಃ ಪೂಜಿತಶ್ಶಿವಃ ।
ಘ್ರಾಣೇನಾಘ್ರೇಯಮನುಲಂ ಬಿಲ್ವಪತ್ರಂ ಶಿವಾರ್ಪಿತಂ ॥೨೬೪॥

ಜಿಹ್ವಯಾ ಶ್ರೀಮಹಾದೇವಃ ಕೀರ್ತನೀಯಃ ಪ್ರಯತ್ನತಃ ।
ಸ್ಪೃಷ್ಟವ್ಯಮತಿಯತ್ನೇನ ಶಿವಲಿಂಗಂ ಸಮರ್ಚಿತಂ ॥೨೬೫॥

ಧ್ಯಾತವ್ಯೋ ಮನಸಾ ನಿತ್ಯಮುಮಾದೇಹಾರ್ಧವಿಗ್ರಹಃ ।
ವೇದವೇದಾಂತಸಂವೇದ್ಯಃ ಸರ್ವದಾ ಶ್ರೀ ಸದಾಶಿವಃ ॥೨೬೬॥

ಸ್ವಾಧೀನೇ ನಯನೇ ಪ್ರಾಪ್ಯ ಯದಿ ನ ದ್ರಕ್ಷ್ಯತೇ ಶಿವಂ ।
ತದಾ ಸ ಕಿಂ ಜನ್ಮನಾಂಧೋ ವಂಧ್ಯನೇತ್ರೋ ಯತಃ ಸದಾ ॥೨೬೭॥

---

ಮನುಷ್ಯನು ತನ್ನ ಕಾಲುಗಳಿಂದ ಶಿವಾಲಯಪ್ರದಕ್ಷಿಣೆಮಾಡಬೇಕು. ಕೈಗಳಿಂದ ಶಂಕರನನ್ನು ಅರ್ಚಿಸಬೇಕು. ||೨೬೧-೨೬೨||

ದೇಹದ ಅಷ್ಟಾಂಗಗಳಿಂದಲೂ ಪಾರ್ವತೀಪತಿಯನ್ನು ವಂದಿಸಬೇಕು. ಈಶ್ವರ ಸಂಬಂಧವಾದ ಕಥೆಗಳನ್ನು ಕಿವಿಗಳಿಂದ ಕೇಳಬೇಕು. ಪೂಜಿತವಾದ ಶಿವಲಿಂಗವನ್ನು ತನ್ನ ಕಣ್ಣುಗಳಿಂದ ನೋಡಿ ಆನಂದಿಸಬೇಕು. ಶಿವನಿರ್ಮಾಲ್ಯವಾದ ಬಿಲ್ವಪತ್ರೆಯನ್ನು ಮೂಗಿನಿಂದ ವಾಸನೆ ನೋಡಬೇಕು. ನಾಲಿಗೆಯಿಂದ ಶಿವನಾಮಗಳನ್ನು ಪಠಿಸಬೇಕು. ಅರ್ಚಿತವಾದ ಶಿವಲಿಂಗವನ್ನು ಕೈಯಿಂದ ಸ್ಪರ್ಶಮಾಡಬೇಕು. ||೨೬೩-೨೬೪-||

ವೇದವೇದಾಂತಗಳಿಂದ ತಿಳಿಯಲ್ಪಡುವ, ಉಮಾಜಾನಿಯಾದ ಶಂಕರಮೂರ್ತಿಯನ್ನು ಸದಾ ಮನಸ್ಸಿನಲ್ಲಿ ಧ್ಯಾನಿಸಬೇಕು. ತನ್ನ ಕಣ್ಣುಗಳನ್ನು ತನ್ನ ಅಧೀನದಲ್ಲಿಟ್ಟುಕೊಂಡಿದ್ದರೂ ಗೌರೀಶಂಕರನನ್ನು ನೋಡದವನು, ಹುಟ್ಟುಕುರುಡನಂತೆಯೇ ಸರಿ. ಅವನ ಕಣ್ಣುಗಳಿದ್ದೂ ನಿಷ್ಫಲವೆನಿಸುವುವು. ಕೈಗಳು ಗಟ್ಟಿಯಾಗಿ

ಸಂಪ್ರಾಪ್ಯ ಹಸ್ತೌ ಸ್ವಾಧೀನೌ ಯೋ ನಾರ್ಚಯತಿ ಶಂಕರಂ ।
ಸ ದಗ್ಧಹಸ್ತೋ ವಿಜ್ಞೇಯಃ ಛಿನ್ನಹಸ್ತೋಥವಾ ಧ್ರುವಂ ॥೨೬೮॥

ಸಂಪ್ರಾಪ್ಯ ಪಾದೌ ಸ್ವಾಧೀನೌ ಯೋ ನ ಯಾತಿ ಶಿವಾಲಯಂ ।
ಸ ದಗ್ಧಪಾದೋ ವಿಜ್ಞೇಯೋ ದಗ್ಧಪಾದೋಥವಾ ಧ್ರುವಂ ॥೨೬೯॥

ಸಂಪ್ರಾಪ್ಯ ಜಿಹ್ವಾಂ ಸ್ವಾಧೀನಾಂ ಯೋ ನ ಸ್ತೌತಿ ಮಹೇಶ್ವರಂ ।
ಸ ವಿಜಿಹ್ವ ಇತಿ ಜ್ಞೇಯೋ ದಗ್ಧಜಿಹ್ವೋಥವಾ ಧ್ರುವಂ ॥೨೭೦॥

ಶ್ರೋತ್ರೇ ಲಬ್ಧ್ವಾ ಶಿವಕಥಾಂ ಯೋ ನ ಶ್ರೋಷ್ಯತಿ ಸಾದರಂ ।
ಸ ವಿಶ್ರೋತ್ರ ಇತಿ ಜ್ಞೇಯೋ ದಗ್ಧಶ್ರೋತ್ರೋಥವಾ ಧ್ರುವಂ॥೨೭೧॥

ಸ್ವಾಧೀನಂ ಮಾನಸಂ ಪ್ರಾಪ್ಯ ಯೋ ನ ಚಿಂತಯತೇ ಶಿವಂ ।
ಸ ವಿಚಿತ್ತ ಇತಿ ಜ್ಞೇಯೋ ದಗ್ಧಚಿತ್ತೋಥವಾ ಧ್ರುವಂ ॥೨೭೨॥

ಇಂದ್ರಿಯೈಃ ಷಡ್ಭಿರಪ್ಯಾರ್ಯಾಸ್ತತ್ತದಿಂದ್ರಿಯಕರ್ಮಭಿಃ ।
ಶಿವಮೇವಾತಿಯತ್ನೇನ ಪ್ರಾಪ್ನುವಂತಿ ಮುಮುಕ್ಷವಃ ॥೨೭೩॥

---

ದ್ದರೂ ಶಂಕರನನ್ನು ಅರ್ಚಿಸದಿದ್ದರೆ ಅಂತಹ ಕೈಗಳು ಸುಟ್ಟ ಕೈಗಳಂತೆಯೋ, ಮುರಿದ ಕೈಗಳಂತೆಯೂ ವ್ಯರ್ಥವೆನಿಸುವುವು. ಇದು ನಿಜ. ॥೨೬೬-೨೬೭-೨೬೮॥

ತನ್ನ ಕಾಲುಗಳು ಸ್ವಾಧೀನದಲ್ಲಿದ್ದರೂ ಶಿವಾಲಯವನ್ನು ಪ್ರದಕ್ಷಿಣೆಮಾಡದವನು ಸುಟ್ಟಕಾಲಿನವನು ಅಥವಾ ಕುಂಟನು ಎನಿಸಿಕೊಳ್ಳುವನು. ನಾಲಿಗೆ ಗಟ್ಟಿಯಾಗಿದ್ದರೂ ಮಹೇಶ್ವರನನ್ನು ಹೊಗಳದವನು ನಾಲಿಗೆಯಿಲ್ಲದವನೇ ಆಗುವನು. ॥೨೬೯-೨೭೦॥

ಕಿವಿಗಳಿದ್ದರೂ ಶಿವಕಥೆಯನ್ನಾಲಿಸದವನು ಕಿವಿಯಿಲ್ಲದವನಂತೆಯೇ ಸರಿ. ಅಥವಾ ಆ ಕಿವಿಗಳು ದಗ್ಧವಾದಂತೆ. ಅದೇರೀತಿ, ಯಾರ ಮನಸ್ಸು ಶಿವನನ್ನು ಸ್ಮರಿಸುವುದಿಲ್ಲವೋ ಆತನು ಚಿತ್ತವಿಹೀನನು ಅಥವಾ ದಗ್ಧಮನಸ್ಸಿನವನು. ॥೨೭೧-೨೭೨॥

ನಿಜವಾದ ಮೋಕ್ಷಾಭಿಲಾಷಿಗಳು, ಮನಇಂದ್ರಿಯ ಸಹಿತವಾದ ಪಂಚೇಂದ್ರಿಯಗಳಿಂದಲೂ ಸಾಕ್ಷಾಚ್ಛಿವಮೂರ್ತಿಯನ್ನೇ ಧ್ಯಾನಿಸುವರು. ಯಜ್ಞದಲ್ಲಿ ಯಜ

ಯಜಂತಿ ವಿವಿಧೈರ್ಯಜ್ಞೈಃ ಶಿವಮೇವ ಹಿ ಯಜ್ವಿನಃ ।
ಯತೋ ದೇವಾಧಿದೇವೋಽಯಂ ಯೋಗಕರ್ಮಫಲಪ್ರದಃ ॥೨೭೪॥

ಚಿಂತಯಂತಿ ಮಹಾದೇವಂ ಯೋಗಿನೋ ಯುಕ್ತಮಾನಸಾಃ ।
ಯತೋ ದೇವಾಧಿದೇವೋಽಯಂ ಯೋಗಕರ್ಮಫಲಪ್ರದಃ ॥೨೭೫॥

ಶಿವಾತ್ಪರತರಂ ನೇತಿ ಯೇ ಭಜಂತಿ ಮಹೇಶ್ವರಂ ।
ತೇ ಧನ್ಯಾಸ್ತೇ ಸದಾಚಾರಾಸ್ತೇ ಪೂಜ್ಯಾ ಧರ್ಮಮೂರ್ತಯಃ॥೨೭೬॥

ಶಿವನಾಮಮಣಿಂ ಕಂಠೇ ಸದಾ ಧೃತ್ವಾ ವಸಂತಿ ಯೇ ।
ತೇ ಧನ್ಯಾಸ್ತೇ ಸದಾಚಾರಾಸ್ತೇ ಪೂಜ್ಯಾ ಧರ್ಮಮೂರ್ತಯಃ ॥೨೭೭॥

ಧೃತ್ವಾ ವಸಂತಿ ಯೇ ಕಂಠೇ ರುದ್ರಾಕ್ಷಾಂಛಿವಭೂಷಣಾನ್ ।
ತೇ ಧನ್ಯಾಸ್ತೇ ಸದಾಚಾರಾಸ್ತೇ ಪೂಜ್ಯಾ ಧರ್ಮಮೂರ್ತಯಃ ॥೨೭೮॥

ಧೃತ್ವಾ ವಸಂತಿ ಯೇ ನಿತ್ಯಂ ತ್ರಿಪುಂಡ್ರಂ ಶಿವಭೂಷಣಂ ।
ತೇ ಧನ್ಯಾಸ್ತೇ ಸದಾಚಾರಾಸ್ತೇ ಪೂಜ್ಯಾ ಧರ್ಮಮೂರ್ತಯಃ ॥೨೭೯॥

ಅನನ್ಯಶರಣಾ ನಿತ್ಯಂ ಯೇಽರ್ಚಯಂತಿ ಮಹೇಶ್ವರಂ ।
ತೇ ಧನ್ಯಾಸ್ತೇ ಸದಾಚಾರಾಸ್ತೇ ಪೂಜ್ಯಾ ಧರ್ಮಮೂರ್ತಯಃ॥೨೮೦॥

---

ಮಾನರೆನಿಸಿಕೊಂಡವರೂ ಸಹ ನಾನಾವಿಧವಾದ ಯಜ್ಞಾಚರಣೆಗಳ ಮೂಲಕ ದೇವಾಧಿದೇವನೆನಿಸಿದ ಮಹಾದೇವನನ್ನೇ ಪೂಜಿಸುವರು. ||೨೭೩-೨೭೪||

ಯೋಗಿಗಳು ಯಮನಿಯಮಾದ್ಯಷ್ಟಾಂಗಗಳನ್ನು ಸಾಧಿಸುತ್ತಾ ಯೋಗ ಕರ್ಮಗಳಿಗೆಲ್ಲಾ ಫಲವನ್ನು ಒದಗಿಸುವ ಮಹಾದೇವನನ್ನೇ ಸದಾ ಧ್ಯಾನಿಸುವರು. ಶಿವನೆಂಬ ಶ್ರೇಷ್ಠವಸ್ತುವಿಗಿಂತ ಶ್ರೇಷ್ಠವಾದ ವಸ್ತುವು ಲೋಕದಲ್ಲಿ ಯಾವುದೂ ಇಲ್ಲವೆಂದು ಯಾರು ನಂಬಿ ಸರ್ವದಾ ಶಂಕರನನ್ನೇ ಧ್ಯಾನಿಸುತ್ತಿರುವರೋ ಅವರೇ ಧನ್ಯರು ಮತ್ತು ಧರ್ಮಮೂರ್ತಿಗಳು ||೨೭೫-೨೭೬||

ಯಾರು ಸರ್ವದಾ ಶಿವನಾಮವೆಂಬ ರತ್ನವನ್ನು ಕಂಠದಲ್ಲಿ ಧರಿಸಿರುವರೋ, ಮತ್ತು ಶಂಕರನಿಗೆ ಆಭರಣವೆನಿಸಿರುವ ರುದ್ರಾಕ್ಷಿಯ ಮಾಲೆಯನ್ನು ಕಂಠದಲ್ಲಿಯೂ, ಶಿವಭೂಷಣವಾದ ಭಸ್ಮತ್ರಿಪುಂಡ್ರವನ್ನು ಹಣೆಯಲ್ಲಿಯೂ ಧರಿಸಿ, ಅನನ್ಯಶರಣರೆಂದು

ಯೇಷಾಂ ಚಿತ್ತಮನಾಸಕ್ತ್ಯಾ ಶಿವಚಿಂತನತತ್ಪರಂ ।
ತೇ ಧನ್ಯಾಸ್ತೇ ಸದಾಚಾರಾಸ್ತೇ ಪೂಜ್ಯಾ ಧರ್ಮಮೂರ್ತಯಃ ॥೨೮೧॥

ಯೇಷಾಂ ನಿತ್ಯಮನಾಪತ್ಯಾ ಶಿವೈಕಶರಣಂ ಮನಃ ।
ತೇ ಧನ್ಯಾಸ್ತೇ ಸದಾಚಾರಾಸ್ತೇ ಪೂಜ್ಯಾ ಧರ್ಮಮೂರ್ತಯಃ ॥೨೮೨॥

ಯೇಷಾಂ ದೇವಗಣಾಧೀಶೋ ಮಹೇಶಃ ಕುಲದೈವತಂ ।
ತೇ ಧನ್ಯಾಸ್ತೇ ಸದಾಚಾರಾಸ್ತೇ ಪೂಜ್ಯಾ ಧರ್ಮಮೂರ್ತಯಃ ॥೨೮೩॥

ಯೇಷಾಂ ಸರ್ವಾರ್ಥದಂ ನಿತ್ಯಂ ವ್ರತಂ ಶಂಕರಪೂಜನಂ ।
ತೇ ಧನ್ಯಾಸ್ತೇ ಸದಾಚಾರಾಸ್ತೇ ಪೂಜ್ಯಾ ಧರ್ಮಮೂರ್ತಯಃ ॥೨೮೪॥

ಯೇಷಾಂ ಶಿವಾರ್ಚನಾದನ್ಯದ್ವ್ರತಂ ನಾಸ್ತ್ಯೇವ ಸರ್ವಥಾ ।
ತೇ ಧನ್ಯಾಸ್ತೇ ಸದಾಚಾರಾಸ್ತೇ ಪೂಜ್ಯಾ ಧರ್ಮಮೂರ್ತಯಃ ॥೨೮೫॥

ಯೇಷಾಂ ಶಿವಾನ್ಯದೇವೇಷು ಶಿವಭಕ್ತತ್ವಧೀಸ್ಸದಾ ।
ತೇ ಧನ್ಯಾಸ್ತೇ ಸದಾಚಾರಾಸ್ತೇ ಪೂಜ್ಯಾ ಧರ್ಮಮೂರ್ತಯಃ ॥೨೮೬॥

ಯೇಷಾಂ ಮಹೇಶ್ವರೇ ಸಾಂಬೇ ಸರ್ವದೇವೋತ್ತಮತ್ವಧೀಃ ।
ತೇ ಧನ್ಯಾಸ್ತೇ ಸದಾಚಾರಾಸ್ತೇ ಪೂಜ್ಯಾ ಧರ್ಮಮೂರ್ತಯಃ ॥೨೮೭॥

ಹೇಳಿಕೊಳ್ಳುತ್ತಾ ಶಂಕರನನ್ನೇ ರಕ್ಷಕನೆಂದು ನಂಬಿರುವರೋ ಅವರು ನಿಜವಾಗಿಯೂ ಧನ್ಯರು-ಮಾನ್ಯರು. ಮತ್ತು ಪವಿತ್ರರು. ಧರ್ಮಾತ್ಮರು. ||೨೭೭-೨೭೮-೨೭೯-೨೮೦||

ಯಾರ ಚಿತ್ತವು ಮತ್ತೊಂದಕ್ಕೆ ಎಡೆಗೊಡದೆ ಸದಾ ಶಿವಮೂರ್ತಿಯನ್ನು ಸ್ಮರಿಸುತ್ತಿರುವುದೋ, ಯಾರ ಮನಸ್ಸು ಶಂಕರನನ್ನೇ ಮೊರೆಹೊಕ್ಕಿರುವುದೋ, ಯಾರಿಗೆ ದೇವದೇವನಾದ ಮಹಾದೇವನು ಕುಲದೇವತೆಯೆನಿಸಿರುವನೋ, ಯಾರ ನಿತ್ಯವ್ರತವು ಶಂಕರಾರಾಧನೆಯಾಗಿರುವುದೋ, ಅಂತಹವರೇ ಧೀರರು, ಮಾನ್ಯರು, ಧರ್ಮಮೂರ್ತಿಗಳು ||೨೮೧-೨೮೨-೨೮೩-೨೮೪||

ಶಿವಾರ್ಚನೆಯನ್ನೇ ಮುಖ್ಯವಾದ ನಿತ್ಯವ್ರತವೆಂದು ಭಾವಿಸಿರುವವರೂ, ಶಿವಭಿನ್ನರಾದ ದೇವರೆಲ್ಲರೂ ಈಶ್ವರಭಕ್ತರೆಂಬ ದೃಢಭಾವವನ್ನಿಟ್ಟಿರುವವರೂ, ಮಹೇಶ್ವರನೆನಿಸಿದ ಸಾಂಬನೇ ಸರ್ವದೇವೋತ್ತಮನು ಎಂಬ ಭಾವನೆಯನ್ನಿಟ್ಟಿರು

ಯೇಷಾಂ ಚಿತ್ತಂ ಪರಾವೃತ್ತಂ ಮಹಾದೇವಾನ್ಯಪೂಜನಾತ್ ।
ತೇ ಧನ್ಯಾಸ್ತೇ ಸದಾಚಾರಾಸ್ತೇ ಪೂಜ್ಯಾ ಧರ್ಮಮೂರ್ತಯಃ ॥೨೮೮॥

ಯೇಷಾಂ ಚಿತ್ತಂ ಪರಾವೃತ್ತಂ ಮಹಾದೇವಾನ್ಯವಂದನಾತ್ ।
ತೇ ಧನ್ಯಾಸ್ತೇ ಸದಾಚಾರಾಸ್ತೇ ಪೂಜ್ಯಾ ಧರ್ಮಮೂರ್ತಯಃ ॥೨೮೯॥

ಯೇಷಾಂ ಚಿತ್ತಂ ಪರಾವೃತ್ತಂ ಮಹಾದೇವಾನ್ಯದರ್ಶನಾತ್ ।
ತೇ ಧನ್ಯಾಸ್ತೇ ಸದಾಚಾರಾಸ್ತೇ ಪೂಜ್ಯಾ ಧರ್ಮಮೂರ್ತಯಃ ॥೨೯೦॥

ಯೇಷಾಂ ಚಿತ್ತಂ ಪರಾವೃತ್ತಂ ಮಹಾದೇವಾನ್ಯನಂದನಾತ್ ।
ತೇ ಧನ್ಯಾಸ್ತೇ ಸದಾಚಾರಾಸ್ತೇ ಪೂಜ್ಯಾ ಧರ್ಮಮೂರ್ತಯಃ ॥೨೯೧॥

ಯೇಷಾಂ ಚಿತ್ತಂ ಪರಾವೃತ್ತಂ ಮಹಾದೇವಾನ್ಯಚಿಂತನಾತ್ ।
ತೇ ಧನ್ಯಾಸ್ತೇ ಸದಾಚಾರಾಸ್ತೇ ಪೂಜ್ಯಾ ಧರ್ಮಮೂರ್ತಯಃ ॥೨೯೨॥

ಯೇಷಾಂ ಪ್ರೀತಿಃ ಕ್ಷೀರಪಾನೇ ಯಥಾ ತದ್ವಚ್ಛಿವಾರ್ಚನೇ ।
ತೇ ಧನ್ಯಾಸ್ತೇ ಸದಾಚಾರಾಸ್ತೇ ಪೂಜ್ಯಾ ಧರ್ಮಮೂರ್ತಯಃ ॥೨೯೩॥

ಯೇಷಾಂ ಪ್ರೀತಿಃ ಕಲತ್ರಾದೌ ಯಥಾ ತದ್ವಚ್ಛಿವಾರ್ಚನೇ ।
ತೇ ಧನ್ಯಾಸ್ತೇ ಸದಾಚಾರಾಸ್ತೇ ಪೂಜ್ಯಾ ಧರ್ಮಮೂರ್ತಯಃ ॥೨೯೪॥

ವವರೂ, ಮಹಾದೇವನನ್ನು ಬಿಟ್ಟು ಇತರ ದೇವತೆಗಳಲ್ಲಿ ಮನಸ್ಸಿಡದವರೂ, ನಿಜವಾದ ಈಶ್ವರಭಕ್ತರು, ಅವರೇ ಧನ್ಯರು, ಮಾನ್ಯರು, ಸತ್ಯವ್ರತರು. ॥೨೮೫-೨೮೬-೨೮೭-೨೮೮॥

ಯಾರ ಮನಸ್ಸು ಮಹಾದೇವನನ್ನು ಬಿಟ್ಟು ಉಳಿದ ದೇವರುಗಳ ವಂದನೆ, ದರ್ಶನ, ಸ್ತುತಿ, ಧ್ಯಾನ ಇವುಗಳಲ್ಲಿ ನೆಲೆಯಾಗಿ ನಿಲ್ಲದೆ ಕೇವಲ ಮಹಾದೇವನ ವಂದನಾದಿಗಳಲ್ಲಿಯೇ ಸ್ಥಿರವಾಗಿ ನಿಲ್ಲುವುದೋ ಅವರೇ ಧನ್ಯರು, ಅವರೇ ಪೂಜ್ಯರು ಮಹಾತ್ಮರು ॥೨೮೯-೨೯೦-೨೯೧-೨೯೨॥

ರುಚಿಯಾದ ಕ್ಷೀರಪಾನದಲ್ಲಿ, ಪತ್ನೀಪುತ್ರಾದಿಗಳ ಸಂಪರ್ಕದಲ್ಲಿ, ಸುವರ್ಣಾಭರಣಧಾರಣಾದಿಗಳಲ್ಲಿ, ಸ್ವರ್ಗಲೋಕದ ಭೋಗವನ್ನು ಅನುಭವಿಸುವುದರಲ್ಲಿ ಜನರಿಗೆ ಎಷ್ಟು ಆಸಕ್ತಿಯಿರುವುದೋ- ಅಷ್ಟೇ ಉತ್ಸಾಹಾಸಕ್ತ್ಯಾದಿಗಳು ಶಿವಾರ್ಚನೆ

ಯೇಷಾಂ ಪ್ರೀತಿಃ ಸುವರ್ಣಾದೌ ಯಥಾ ತದ್ವಚ್ಛಿವಾರ್ಚನೇ ।
ತೇ ಧನ್ಯಾಸ್ತೇ ಸದಾಚಾರಾಸ್ತೇ ಪೂಜ್ಯಾ ಧರ್ಮಮೂರ್ತಯಃ ॥೨೯೫॥

ಯೇಷಾಂ ಪ್ರೀತಿಃ ಸ್ವರ್ಗಭೋಗೇ ಯಥಾ ತದ್ವಚ್ಛಿವಾರ್ಚನೇ ।
ತೇ ಧನ್ಯಾಸ್ತೇ ಸದಾಚಾರಾಸ್ತೇ ಪೂಜ್ಯಾ ಧರ್ಮಮೂರ್ತಯಃ ॥೨೯೬॥

ಮಹಾದೇವಾರ್ಚನೇ ಪ್ರೀತಿರ್ನೃಣಾಮತ್ಯಂತದುರ್ಲಭಾ ।
ಸುಲಭಾ ಯದಿ ಸಾ ನೄಣಾಂ ತದಾ ಮುಕ್ತಾ ಹಿ ತೇ ನರಾಃ ॥೨೯೭॥

ಯದಿ ತಪ್ತಂ ತಪೋಘೋರಂ ಸರ್ವದಾ ಜನ್ಮಕೋಟಿಭಿಃ ।
ತದಾ ಪ್ರೀತಿರ್ಮಹಾದೇವಪೂಜನೇ ಭವತಿ ಧ್ರುವಂ ॥೨೯೮॥

ಯದಿ ದೇವೋತ್ತಮತ್ವೇನ ಜ್ಞಾತ್ವಾ ದೇವೋತ್ತಮಂ ಶಿವಂ ।
ಸಮರ್ಚಯತಿ ಯತ್ನೇನ ತದಾ ಮುಕ್ತಿರ್ನ ದುರ್ಲಭಾ ॥೨೯೯॥

ಕರ್ಮಣಾ ಮನಸಾ ವಾಚಾ ನಿತ್ಯಮವ್ಯಭಿಚಾರತಃ ।
ಯಃ ಪೂಜಯೇನ್ಮಹಾರುದ್ರಂ ಸ ಮೋಕ್ಷಮಧಿಗಚ್ಛತಿ ॥೩೦೦॥

---

ಯಲ್ಲಿ ಇರುವುದಾದರೆ ಅವರೇ ಧನ್ಯರು, ಅವರೇ ಪೂಜ್ಯರು, ಅವರನ್ನೇ ಧರ್ಮಾತ್ಮರೆಂದು ಹೇಳಬೇಕು. ||೨೯೩-೨೯೪-೨೯೫-೨೯೬||

ಮಹಾದೇವನನ್ನು ಆರ್ಚಿಸಬೇಕೆಂಬ ಬುದ್ಧಿ ಹುಟ್ಟುವುದೇ ಮನುಷ್ಯರಿಗೆ ಮೊದಲು ದುರ್ಲಭ. ಆ ಬುದ್ಧಿಯು ಸುಲಭವಾಗಿ ಜನರಿಗೆ ಲಭಿಸುವುದೆಂದರೆ, ನಿಜವಾಗಿಯೂ ಆಗ ಅವರು ಮುಕ್ತರಾದಂತೆಯೇ ಸರಿ. ಅನೇಕ ಕೋಟಿ ಜನ್ಮಗಳಲ್ಲಿ ಆಚರಿಸಿದ ಘೋರತಪಸ್ಸಿನ ಪರಿಣಾಮವಾಗಿ ಜನರಿಗೆ ಮಹಾದೇವಾರಾಧನೆಯಲ್ಲಿ ಬುದ್ಧಿಯುದಯಿಸುವುದು ಇಲ್ಲವಾದರೆ ನಿಜವಾಗಿಯೂ ಅವರಿಗೆ ಶಿವಪೂಜಾಸಕ್ತಿಯು ಲಭಿಸಲಾರದು. ||೨೯೭-೨೯೮||

ಯಾರು ಪರಶಿವನನ್ನು ದೇವೋತ್ತಮನೆಂಬ ಬುದ್ಧಿಯಿಂದ ಅರ್ಚಿಸುವರೋ, ಪರಶಿವನನ್ನು ದೇವೋತ್ತಮನೆಂದೇ ಮನಃಪೂರ್ವಕವಾಗಿ ಭಾವಿಸುವರೋ, ಅಲ್ಲದೆ, ಮನಸ್ಸು, ಮಾತು, ಕಾರ್ಯ ಇವುಗಳಲ್ಲಿ ಸದಾ ಪರಶಿವನ ಸೇವೆಯನ್ನೇ ಧ್ಯೇಯವನ್ನಾಗಿ ಹೊಂದಿರುವರೋ, ಅವರೇ ಮುಮುಕ್ಷುಗಳು. ಮತ್ತು ಮೋಕ್ಷಪ್ರಾಪ್ತಿಗೆ ಅರ್ಹತೆಯನ್ನು ಪಡೆದವರು ಎಂದು ಹೇಳಬೇಕು ||೨೯೯-೩೦೦||

ಮುನೇ ಶಿವಾರ್ಚನಾದನ್ಯೋ ಮೋಕ್ಷೋಪಾಯೋ ನ ವಿದ್ಯತೇ ।
ತತಸ್ಸರ್ವಪ್ರಯತ್ನೇನ ಪೂಜನೀಯಃ ಸದಾಶಿವಃ ॥೩೦೧॥

ಸರ್ವಾತ್ಮಕೋಽಪಿ ಭಗವಾಲ್ಲಿಂಗರೂಪೀ ಸದಾಶಿವಃ ।
ಪೂಜನೀಯಃ ಪ್ರಯತ್ನೇನ ಮುನೇ ಸ್ವರ್ಗಾಪವರ್ಗದಃ ॥೩೦೨॥

ಧ್ಯಾತವ್ಯಃ ಪೂಜನೀಯಶ್ಚ ಲಿಂಗರೂಪೀ ಸದಾಶಿವಃ ।
ಯತೋ ಧ್ಯಾತಃ ಪೂಜಿತಶ್ಚ ಸರ್ವಾಭೀಷ್ಟಾನ್ ಪ್ರಯಚ್ಛತಿ ॥೩೦೩॥

ಸ್ವಾಭೀಪ್ಸಿತಾರ್ಥದೋ ದೇವಃ ಶಿವಾನ್ಯೋ ನಾಸ್ತಿ ಸರ್ವಥಾ ।
ಸತ್ಯಮೇತತ್ಪುನಸ್ಸತ್ಯಮುದ್ಧೃತ್ಯ ಭುಜಮುಚ್ಯತೇ ॥೩೦೪॥

ನ ಶಿವಾನ್ಯಃ ಪೂಜನೀಯೋ ನ ಧ್ಯಾತವ್ಯೋ ಮುಮುಕ್ಷುಭಿಃ ।
ಸತ್ಯಮೇತತ್ಪುನಸ್ಸತ್ಯಮುದ್ಧೃತ್ಯ ಭುಜಮುಚ್ಯತೇ ॥೩೦೫॥

ನ ಶಿವಾನ್ಯಃ ಕೀರ್ತನೀಯೋ ನ ಸ್ತೋತವ್ಯೋ ಮುಮುಕ್ಷುಭಿಃ ।
ಸತ್ಯಮೇತತ್ಪುನಸ್ಸತ್ಯಮುದ್ಧೃತ್ಯ ಭುಜಮುಚ್ಯತೇ ॥೩೦೬॥

ಶಿವಾರ್ಚನೆಯನ್ನು ಬಿಟ್ಟರೆ ಮೋಕ್ಷಕ್ಕೆ ಸಾಧಕವಾದುದು ಯಾವುದೂ ಇಲ್ಲ. ಸರ್ವಾತ್ಮಕನಾದ ಪರಶಿವನು ಸದಾ ಶಿವಲಿಂಗರೂಪದಲ್ಲಿರುವನು. ಆದ್ದರಿಂದ ಸ್ವರ್ಗ ಮತ್ತು ಮೋಕ್ಷ ಇವುಗಳನ್ನು ಅನುಗ್ರಹಿಸುವ ಸದಾಶಿವನನ್ನು ಸರ್ವದಾ ಪೂಜಿಸುತ್ತಿರಬೇಕು ॥೩೦೧-೩೦೨॥

ಲಿಂಗರೂಪಿಯಾದ ಸದಾಶಿವನು ಸರ್ವದಾ ಧ್ಯಾನಕ್ಕೂ, ಪೂಜೆಗೂ ಯೋಗ್ಯನಾದವನು. ಏಕೆಂದರೆ ಸದಾಶಿವನ ಧ್ಯಾನಾರ್ಚನಾದಿಗಳಿಂದ ಭಕ್ತರ ಸಕಲ ಇಷ್ಟಾರ್ಥಗಳೂ ಸಿದ್ಧಿಸುವುವು. ಅಭೀಪ್ಸಿತವಾದ ವಸ್ತುಗಳ ಪ್ರಾಪ್ತಿಗೆ ಈಶ್ವರಾರಾಧನೆಯನ್ನು ಬಿಟ್ಟರೆ ಮತ್ತಾವುದೂ ಕಾರಣವಾಗಲಾರದು. ಈ ವಿಷಯವು ಯಥಾರ್ಥವಾದುದೆಂದು ಶಪಥಪೂರ್ವಕವಾಗಿ ಕೈಯೆತ್ತಿ ಹೇಳುವೆನು. ॥೩೦೩-೩೦೪॥

ಶಂಕರನನ್ನು ಬಿಟ್ಟು ಉಳಿದ ಯಾವ ದೇವತೆಯನ್ನೂ ಧ್ಯಾನಮಾಡುವುದಾಗಲಿ, ಪೂಜಿಸುವುದಾಗಲಿ, ಸ್ತುತಿಸುವುದಾಗಲಿ ಮೋಕ್ಷಕ್ಕೆ ಸಾಧನವೆನಿಸಲಾರದು. ಮಹಾದೇವನ ಧ್ಯಾನಪೂಜಾದಿಗಳು ಆಯುರಾರೋಗ್ಯಾತಿಶಯಗಳನ್ನು ಕೊಡುವು

ಪೂಜನಂ ಕೀರ್ತನಂ ಧ್ಯಾನಂ ವಂದನಂ ತು ಶಿವಾಪತೇಃ ।
ಆಯುರಾರೋಗ್ಯ,ಸಂಪತ್ತಿ ಶುಭಸ್ವರ್ಗಾಪವರ್ಗದಂ ॥೩೦೭॥

ಪ್ರತ್ಯೇಕಂ ಪೂಜನಾದೀನಿ ಸರ್ವಾರ್ಥೇಷ್ಟಪ್ರದಾನ್ಯತಃ ।
ಪೂಜನಾದೀನಿ ಕಾರ್ಯಾಣಿ ಮಹಾದೇವಾಯ ಸರ್ವದಾ ॥೩೦೮॥

ಮನ್ಯೇ ಧನ್ಯಾಸ್ತು ನಿವೇತಿ ಜ್ಞೇಯಾಃ ಸ್ವಪ್ನೇಽಪಿ ಯೇ ಸದಾ ।
ಪೂಜಯಂತಿ ಮಹಾದೇವಂ ಶಿವಾನ್ಯಾರ್ಚನಪರಾಙ್ಮುಖಾಃ ॥೩೦೯॥

ಮನ್ಯೇ ಧನ್ಯಾಸ್ತು ನಿವೇತಿ ಜ್ಞೇಯಾಃ ಸ್ವಪ್ನೇಽಪಿ ಯೇ ಸದಾ ।
ಶಿವಯಾತ್ರಾನ್ಯಯಾತ್ರಾಯಾಮುತ್ಕಂಠಂ ಪಂಗುವೃತ್ತಯಃ ॥೩೧೦॥

ಮನ್ಯೇ ಧನ್ಯಾಸ್ತು ನಿವೇತಿ ಜ್ಞೇಯಾಃ ಸ್ವಪ್ನೇಽಪಿ ಯೇ ಸದಾ ।
ಶ್ರೀಮಹಾದೇವಯಾತ್ರಾರ್ಥಮತ್ಯುತ್ಸಾಹಾಃ ಪ್ರದರ್ಶಿತಾಃ ॥೩೧೧॥

ಶಿವಾನ್ಯನಾಮಶ್ರವಣೇ ಮಹಾಬಧಿರವೃತ್ತಯಃ ।
ಮನ್ಯೇ ಧನ್ಯಾಸ್ತು ನಿವೇತಿ ಜ್ಞೇಯಾಃ ಸ್ವಪ್ನೇಽಪಿ ಯೇ ಸದಾ ॥೩೧೨॥

ಶಿವಾನ್ಯಕೀರ್ತನೇ ಸ್ತೋತ್ರೇ ಸ್ತೋತ್ರೇ ತಮೂಕೈಕವೃತ್ತಯಃ ।
ಮನ್ಯೇ ಧನ್ಯಾಸ್ತು ನಿವೇತಿ ಜ್ಞೇಯಾಃ ಸ್ವಪ್ನೇಽಪಿ ಯೇ ಸದಾ ॥೩೧೩॥

ದಲ್ಲಿ ಸ್ಥಿರವಾದ ಮುಕ್ತಿಯನ್ನೂ ಅನುಗ್ರಹಿಸುವುದು. ಅದೂ ಅಲ್ಲದೆ, ಶಿವಪೂಜೆ, ಶಿವಸ್ತುತಿ, ಶಿವಧ್ಯಾನ, ಶಿವವಂದನ ಇವುಗಳಿಗೆ ಪ್ರತ್ಯೇಕ ಪ್ರತ್ಯೇಕವಾದ ಫಲವೂ ದೊರೆಯುವುದು. ॥೩೦೫-೩೦೬-೩೦೭-೩೦೮॥

ಎಲೈ ಋಷಿಯೇ, ಯಾರು ತಮ್ಮ ಸ್ವಪ್ನದಲ್ಲಿಯೂ ಶಿವನನ್ನು ಬಿಟ್ಟು ಅನ್ಯರನ್ನು ಪೂಜಿಸರೋ, ಮತ್ತು ಶಿವತೀರ್ಥಯಾತ್ರೆಯಲ್ಲಲ್ಲದೆ ಇತರ ಕ್ಷೇತ್ರಯಾತ್ರೆಗಳಲ್ಲಿ ಕುಂಟರಂತೆ ಆಚರಿಸುತ್ತಾ ನಿಂತಲ್ಲಿಯೇ ನಿಲ್ಲುವರೋ, ಶಿವಾನ್ಯವಾದ ದೇವತಾಶ್ರವಣದಲ್ಲಿ ಯಾರು ಕಿವುಡರಂತೆ ಕಿವಿಗೊಡುವುದಿಲ್ಲವೋ, ಮತ್ತು ಶಿವಕ್ಷೇತ್ರಯಾತ್ರೆಯಲ್ಲಿ ಯಾರು ಅತ್ಯುತ್ಸಾಹದಿಂದ ಹೊರಡುವರೋ ಅವರೇ ಧನ್ಯರೆಂದು ತಿಳಿಯುವವನಾಗು. ॥೩೦೯-೩೧೦-೩೧೧-೩೧೨॥

ಶಿವಧ್ಯಾನ ಮತ್ತು ಶಿವಕೀರ್ತನಾದಿಗಳನ್ನು ಬಿಟ್ಟು ಇತರ ದೇವತೆಗಳ ಸ್ತೋತ್ರದಲ್ಲಿ ಯಾರು ಮೂಗರಂತಿರುವರೋ. ಅವರೇ ಧನ್ಯರು. ಮಹಾದೇವಾರ್ಚನೆ

ಮಹಾದೇವಾರ್ಚನಂ ತ್ಯಕ್ತ್ವಾ ಯೋಽರ್ಚಯೇದನ್ಯದೈವತಂ ।
ತಸ್ಯ ಜನ್ಮ ವೃಥೈವೇತಿ ವಿಜ್ಞೇಯಂ ಮುನಿಸತ್ತಮ ॥೩೧೪॥

ಶ್ರೋತವ್ಯಃ ಪ್ರೇಕ್ಷಣೀಯಶ್ಚ ಕೀರ್ತನೀಯಶ್ಚ ಶಂಕರಃ ।
ತದನ್ಯಸ್ತು ನ ಸಂಪ್ರೋಕ್ತೋ ನೇಕ್ಷಣೀಯಶ್ಚ ಸರ್ವಥಾ ॥೩೧೫॥

ಯಃ ಪೂಜ್ಯಂ ಶ್ರೀಮಹಾದೇವಮನಭ್ಯರ್ಚ್ಯಾನ್ಯಮರ್ಚಯೇತ್ ।
ಸ ನಿತ್ಯಭ್ರಾಂತ ಏವೇತಿ ವಿಜ್ಞೇಯೋ ನಾತ್ರ ಸಂಶಯಃ ॥೩೧೬॥

ಯಃ ಶಿವಾರಾಧನಂ ತ್ಯಕ್ತ್ವಾ ಕರೋತ್ಯನ್ಯಸುರಾರ್ಚನಂ ।
ಸ ಕರೋತಿ ನರೋ ಮೋಹಾದ್ವ್ಯರ್ಥ್ಯೈವ ಸ್ವಾಯುಷಃ ಕ್ಷಯಂ ॥೩೧೭॥

ಯಾವತ್ಸ್ವಸ್ವಾಂತಮಭ್ರಾಂತಂ ಯಾವನ್ನೈವಾಯುಷಃ ಕ್ಷಯಃ ।
ತಾವದ್ದೇವೋತ್ತಮಸ್ಸಾಂಬಃ ಪೂಜನೀಯಃ ಸ್ವಶಕ್ತಿತಃ ॥೩೧೮॥

ಮುನೇ ಯೇ ಶಿವಮುತ್ಸೃಜ್ಯ ಕುರ್ವಂತ್ಯನ್ಯಸ್ಯ ಪೂಜನಂ ।
ತೇ ತು ಕಾಲಾಗ್ನಿನಿರ್ದಗ್ಧಾ ರುದಂತಿ ಚ ಪುನಃ ಪುನಃ ॥೩೧೯॥

ಶಿವಾನ್ಯಪೂಜಕಾ ಯೇ ಚ ಯೇ ಚ ತತ್ಕ್ಷೇತ್ರನಿಂದಕಾಃ ।
ತೇ ಸರ್ವೇಽಪಿ ಪತಂತ್ಯೇವ ನರಕೇಷು ಪುನಃ ಪುನಃ ॥೩೨೦॥

---

ಯನ್ನು ಬಿಟ್ಟು ಅನ್ಯದೇವತಾರ್ಚನೆಯಿಂದ ಕಾಲಕಳೆಯುವವನ ಜನ್ಮವು ನಿರರ್ಥಕವಾದುದೆಂದೇ ತಿಳಿಯಬೇಕು. ॥೩೧೩-೩೧೪॥

ದರ್ಶನಕ್ಕೆ, ಸ್ತುತಿಗೆ, ಅರ್ಚನೆಗೆ ಶಂಕರನೇ ಶ್ರೇಷ್ಠನೆನಿಸಿದವನು. ಹಾಗಿರುವಾಗ ಶಿವಶಂಕರನ ದರ್ಶನಾದಿಗಳಿಗೆ ಮನಗೊಡದೆ ದೇವತಾಂತರಗಳ ಅರ್ಚನಾದಿಗಳಿಂದ ಕಾಲಕಳೆಯುವವನು ನಿತ್ಯಭ್ರಾಂತನೆನಿಸಿಕೊಳ್ಳುವನು. ಅವನಿಗೆ ತಾತ್ತ್ವಿಕವಾದ ತಿಳಿವಳಿಕೆಯಿಲ್ಲವೆಂದೇ ನನ್ನ ಅಭಿಪ್ರಾಯ. ॥೩೧೫-೩೧೬॥

ಯಾವನು ಶಂಕರಾರಾಧನೆಯನ್ನು ಬಿಟ್ಟು ದೇವತಾಂತರಗಳನ್ನು ಪೂಜಿಸುವನೋ, ಅವನು ತನ್ನ ಆಯುಸ್ಸನ್ನು ವ್ಯರ್ಥವಾಗಿ ಕಳೆದುಕೊಳ್ಳುವನು. ಮಾನವನು ತಾನು ಬದುಕಿರುವವರೆಗೂ ಕಲ್ಪಾಂತಪರ್ಯಂತವೂ ದೇವಶ್ರೇಷ್ಠನಾದ ಸಾಂಬನನ್ನೇ ಯಥಾಶಕ್ತಿ ಪೂಜಿಸುತ್ತಿರಬೇಕು ॥೩೧೭-೩೧೮॥

ಶಿವಭಿನ್ನನಾದ ದೇವತೆಯನ್ನು ಪೂಜಿಸುವವರಿಗೆ ಯಮಭಟರ ಹಿಂಸೆಯು

ನಿತ್ಯಂ ಶಿವಾರ್ಚನಂ ತ್ಯಕ್ತ್ವಾ ಶಿವಾನ್ಯಂ ಯೇಽರ್ಚಯಂತಿ ತಾನ್ ।
ನರಕೇ ಪಾತಯತ್ಯೇವ ಕೃತಾಂತಃ ಕ್ರೂರಶಾಸನಃ ॥೩೨೧॥

ಶಿವಧ್ಯಾನಂ ವಿಹಾಯಾನ್ಯಮಭಿಧ್ಯಾಯಂತಿ ಯೇ ಚ ತಾನ್ ।
ನರಕೇ ಪಾತಯತ್ಯೇವ ಕೃತಾಂತಃ ಕ್ರೂರಶಾಸನಃ ॥೩೨೨॥

ನಿತ್ಯಂ ಶಿವಸ್ತುತಿಂ ತ್ಯಕ್ತ್ವಾ ಯೇ ಶಿವಾನ್ಯಂ ಸ್ತುವಂತಿ ತಾನ್ ।
ನರಕೇ ಪಾತಯತ್ಯೇವ ಕೃತಾಂತಃ ಕ್ರೂರಶಾಸನಃ ॥೩೨೩॥

ಅಶೈವಧರ್ಮಮಾಶ್ರಿತ್ಯ ಯೇ ತಿಷ್ಠಂತಿ ದ್ವಿಜಾದಯಃ ।
ನರಕೇ ಪಾತಯತ್ಯೇವ ಕೃತಾಂತಃ ಕ್ರೂರಶಾಸನಃ ॥೩೨೪॥

ಶಿವಧರ್ಮಾನ್ ಶ್ರುತಿಪ್ರೋಕ್ತಾನ್ನಾಚರಿಷ್ಯಂತಿ ಯೇ ದ್ವಿಜಾಃ ।
ತೇ ಮೃತ್ಯುಪಾಶಸಂಬದ್ಧಾಃ ಸ್ಥಾಸ್ಯಂತಿ ನರಕಾಲಯೇ ॥೩೨೫॥

ಅತೋಽದಯಂ ಯಮಂ ಜ್ಞಾತ್ವಾ ಶೈವೋ ಭೂತ್ವಾತಿಯತ್ನತಃ ।
ಯಃ ಪೂಜಯತಿ ಗೌರೀಶಂ ಸ ಮೋಕ್ಷಮಧಿಗಚ್ಛತಿ ॥೩೨೬॥

ಕುರ್ವನ್ತು ಕೋಟಿಶೋ ನಿತ್ಯಂ ಮಹೇಶಾನ್ಯಸುರಾರ್ಚನಂ ।
ತಥಾಪಿ ದುರ್ಲಭೋ ಮೋಕ್ಷೋ ವಿನಾ ಶಂಕರಪೂಜಯಾ ॥೩೨೭॥

ತಪ್ಪುವುದಿಲ್ಲ. ಅಲ್ಲದೆ ಭಸ್ಮತ್ರಿಪುಂಡ್ರ ಧಾರಣೆಯನ್ನೂ ಶಿವಾರ್ಚನೆಯನ್ನೂ ಬಿಟ್ಟವರಿಗೆ ಸದಾ ನರಕವಾಸವೇ ಗತಿ. ॥೩೧೯-೩೨೦॥

ನಿತ್ಯವೂ ಶಿವಾರ್ಚನೆಮಾಡದೆ, ಅನ್ಯದೇವತಾರ್ಚನೆ ಮಾಡುವವರೂ, ಶಿವೇತರ ದೇವತಾಧ್ಯಾನಮಾಡುವವರೂ, ಕ್ರೂರನಾದ ಯಮನ ಶಾಸನಕ್ಕೆ ಸಿಕ್ಕಿ ನರಕದಲ್ಲಿ ನೆಲಸುವರು. ॥೩೨೧-೩೨೨॥

ಶಿವಸ್ತುತಿಮಾಡದ ಮತ್ತು ಇತರ ದೇವತೆಗಳನ್ನು ಕೀರ್ತಿಸುವ, ಶಿವಧರ್ಮಾತಿರಿಕ್ತವಾದ ಧರ್ಮವನ್ನು ಪಾಲಿಸುವ, ಶಿವಧರ್ಮವನ್ನು ಅನುಷ್ಠಾನಮಾಡದಿರುವ ದ್ವಿಜಾದಿಗಳು ಯಮಪಾಶಕ್ಕೆ ಸಿಕ್ಕಿದವರಾಗಿ ಸದಾ ನರಕದಲ್ಲಿಯೇ ನೆಲಸುತ್ತಾ ವ್ಯಥೆಪಡುವರು. ॥೩೨೩-೩೨೪-೩೨೫॥

ಯಮನು ನರಕದಲ್ಲಿ ನಿರ್ದಯನಾಗಿ ಹಿಂಸೆಯನ್ನೀಯುವನೆಂದು ಭಾವಿಸಿ, ಯಾವನು ಗೌರೀಶನನ್ನು ಭಕ್ತಿಯಿಂದ ಪ್ರೀತಿಸುವನೋ, ಅವನು ಮೋಕ್ಷವನ್ನು

ಕುರ್ವನ್ತು ಕೋಟಿಶೋ ಯಾಗಾನ್ ಧರ್ಮಾಂಶ್ಚಾನ್ಯಾನ್ ಸನಾತನಾನ್ ।
ತಥಾಪಿ ಶ್ರೀವಿರೂಪಾಕ್ಷಪೂಜಾ ಮೋಕ್ಷಾಯ ಕಲ್ಪತೇ ॥೩೨೮॥

ಸುಕೃತಾಮಿತಪೂರ್ಣೋಽಪಿ ವಿನಾ ಶಂಕರಪೂಜಯಾ ।
ನ ಮುಕ್ತಿಕಾಂತಾಂ ಲಭತೇ ಸತ್ಯಂ ಸತ್ಯಂ ನ ಸಂಶಯಃ ॥೩೨೯॥

ಯಃ ಪೂಜಿತಸ್ಸ್ತುತೋ ಧ್ಯಾತೋ ವಂದಿತೋಮೇಶವಿಗ್ರಹಃ ।
ಸ ಏವ ಲಭತೇ ಧನ್ಯೋ ಮುಕ್ತಿಕಾಂತಾಕರಗ್ರಹಂ ॥೩೩೦॥

ವಿಲೋಕಯಂತಿ ಸತತಂ ಮುಕ್ತಿಕಾಂತಾಂ ಶಿವಾರ್ಚಕಾಃ ।
ಸಾಪಿ ಪಶ್ಯತಿ ಸೋತ್ಸಾಹಂ ಶಿವಾರಾಧನತತ್ಪರಾನ್ ॥೩೩೧॥

ಮುಕ್ತ್ಯಂಗನಾ ವಿಲೋಕ್ಯೈವ ಶಿವಾರಾಧನತತ್ಪರಂ ।
ನೃತ್ಯತ್ಯತ್ಯಂತಸಂತುಷ್ಟಾ ವಲ್ಲಭೋಽಯಂ ಮಮೇತಿ ಸಾ ॥೩೩೨॥

ಸ ಏವ ಸತತಂ ಧ್ಯಾತಾ ಪಾರ್ವತೀಪ್ರಾಣವಲ್ಲಭಃ ।
ಸ ಏವ ಶೈವಶ್ಶುದ್ಧಾತ್ಮಾ ಜಾಯತೇ ಮುಕ್ತಿವಲ್ಲಭಃ ॥೩೩೩॥

---

ಪಡೆಯುವನು. ಮಾನವರು ಈಶ್ವರನನ್ನು ಪೂಜಿಸದೆ, ಇತರ ದೇವತೆಗಳನ್ನು ಕೋಟಿ ಸಂಖ್ಯೆಯಲ್ಲಿ ಅರ್ಚಿಸಿದರೂ ಅವರಿಗೆ ಶಾಶ್ವತವಾದ ಮುಕ್ತಿಯು ದೊರಕುವುದಿಲ್ಲ. ಏಕೆಂದರೆ ಮುಕ್ತಿಪ್ರದವಾದದ್ದು ಶಿವಾರ್ಚನೆಯೊಂದೇ. ॥೩೨೬-೩೨೭॥

ಕೋಟಿಸಂಖ್ಯೆಯಲ್ಲಿ ಯಾಗಾದಿ ಕರ್ಮಗಳನ್ನಾಚರಿಸಿ, ಸುಕೃತರಾಶಿಯನ್ನು ಸಂಪಾದಿಸಿದರೂ ಕರ್ಮಿಗಳಿಗೆ ಮೋಕ್ಷಪ್ರಾಪ್ತಿಯಾಗುವುದಿಲ್ಲ. ಇದರಿಂದಲೇ ಮುಕ್ತಿಗೆ ಶಂಕರಾರಾಧನೆಯೇ ಮುಖ್ಯಸಾಧನವೆಂದು ತಿಳಿದುಬರುವುದು. ಯಾವನು ಈಶ್ವರ ವಿಗ್ರಹವನ್ನು ಪೂಜಿಸಿ, ಧ್ಯಾನಿಸಿ, ಸ್ತುತಿಸುವನೋ, ಅಂತಹವನೇ ಕೊನೆಗೆ ಮುಕ್ತಿ ಕಾಂತಾಪತಿಯಾಗುವನು ॥೩೨೮-೩೨೯-೩೩೦॥

ಮುಕ್ತಿಕಾಂತೆಯನ್ನು ಹೊಂದುವವರು ಶಿವಾರ್ಚಕರೇ. ಮೋಕ್ಷವು ಬಯಸುವುದೇ ಅವರನ್ನು. ಅಷ್ಟೇ ಅಲ್ಲದೆ ಮೋಕ್ಷರೂಪಿಣಿಯಾದ ಕಾಂತೆಯು ಇಂತಹ ಈಶ್ವರಾರ್ಚಕರನ್ನು ಸೇರಲು ಅತ್ಯುತ್ಸಾಹದಿಂದ ನರ್ತಿಸುವಳು. ॥೩೩೧-೩೩೨॥

ಪಾರ್ವತೀಪತಿಯಾದ ಶಂಕರನನ್ನು ಧ್ಯಾನಿಸುವವನೇ, ಶಿವಸಾರೂಪ್ಯವನ್ನು ಹೊಂದುವವನು. ಅವನೇ ಶುದ್ಧಾತ್ಮನು. ಅವನೇ ಮುಕ್ತಿವನಿತಾಕಾಂತನು, ಅವನೇ

ಸ ಏವಾತಿಪ್ರಿಯಸ್ತೇನ ಸಮಾರಾಧಿತಶಂಕರಃ ।
ಸ ಏವ ಪಸ್ತುತೋ ಲೋಕೇ ಮುಕ್ತಿಕಾಂತಾಮನೋಹರಃ ॥೩೩೪॥

ಮಹೇಶ್ವರಮುಮಾಕಾಂತಂ ಕಾಲಾಂತಕಮನಾಮಯಂ ।
ಯಃ ಪೂಜಯತಿ ತಸ್ಯೈವ ಮುಕ್ತಿರ್ನಾನ್ಯಸ್ಯ ಸರ್ವಥಾ ॥೩೩೫॥

ಸ್ನಾತ್ವಾದೌ ಭಸ್ಮನಾ ದೇಹಮುದ್ಧೂಲ್ಯಾಪಾದಮಸ್ತಕಂ ।
ಪೂಜನೀಯೋ ಮಹಾದೇವೋ ಲಿಂಗರೂಪೀ ಮುಮುಕ್ಷುಭಿಃ ॥೩೩೬॥

ಏವಮವ್ಯಭಿಚಾರೇಣ ನಿತ್ಯಮಭ್ಯರ್ಚಿತಶ್ಶಿವಃ ।
ದದಾತಿ ಭುಕ್ತಿಂ ಮುಕ್ತಿಂ ಚ ಸತ್ಯಂ ಸತ್ಯಂ ನ ಸಂಶಯಃ ॥೩೩೭॥

ಐಶ್ವರ್ಯಮತುಲಂ ಭುಕ್ತ್ವಾ ಶಿವಲಿಂಗಾರ್ಚನಾತ್ಮನೇ ।
ಪ್ರಯಾಂತಿ ಶಿವಸಾಯುಜ್ಯಂ ನಿರ್ದಗ್ಧಾಖಿಲಕಲ್ಮಷಾಃ ॥೩೩೮॥

ಕೋಟಿಶಃ ಕೃತಪಾಪೋಽಪಿ ಸಕೃದರ್ಚಿತಶಂಕರಃ ।
ಪ್ರಯಾತಿ ಶಿವಸಾಯುಜ್ಯಮುದ್ಧೃತ್ಯ ಭುಜಮುಚ್ಯತೇ ॥೩೩೯॥

---

ಈಶ್ವರ ಪ್ರಿಯಭಕ್ತನು. ಅವನೇ ಮುಕ್ತಿಗೆ ಅರ್ಹನಾದವನು. ಮುಕ್ತಿ ದೊರೆಯು ವುದೂ ಅವನಿಗೇ. ॥೩೩೩-೩೩೪॥

ಮಹೇಶ್ವರನೂ, ಉಮಾಪತಿಯೂ, ಕಾಲಕಾಲನೂ, ನಿರ್ವಿಕಾರನೂ ಆದ ಶಂಕರನನ್ನು ಯಾರು ಭಕ್ತಿಯಿಂದಾರಾಧಿಸುವರೋ ಅವರಿಗೇ ಮುಕ್ತಿಯು ದೊರಕು ವುದು. ಲಿಂಗರೂಪಿಯಾದ ಮಹಾದೇವನನ್ನು ಭಕ್ತಿಯಿಂದ ಭಸ್ಮಲಿಪ್ತಗಾತ್ರನಾಗಿ ಸ್ನಾನಾದಿಗಳಿಂದ ದೇಹಶುದ್ಧಿಯನ್ನು ಪಡೆದು ಪೂಜಿಸುವವನೇ ಮೋಕ್ಷಪ್ರಾಪ್ತಿಗೆ ಅರ್ಹನಾದವನು. ॥೩೩೫-೩೬॥

ಕ್ರಿಯಾಶುದ್ಧಿಯಿಂದ ನಿತ್ಯವೂ ಶಂಕರನನ್ನು ಪೂಜಿಸುವುದರಿಂದ ಪರಶಿವನು ನಿಜವಾಗಿಯೂ ಮುಕ್ತಿಯನ್ನು ಭಕ್ತರಿಗೆ ದಯಪಾಲಿಸುವನು. ಅವರು ಐಹಿಕಸುಖ ವನ್ನೆಲ್ಲಾ ಅನುಭವಿಸಿ, ಪರಲೋಕದಲ್ಲಿ ಶಾಶ್ವತವಾದ ಶಿವಸಾಯುಜ್ಯವನ್ನು ಸೇರುವರು. ॥೩೩೭-೩೩೮॥

ಶಿವಾರಾಧಕನು ಎಷ್ಟೇ ಅಸಂಖ್ಯಾತವಾದ ಪಾಪವನ್ನು ಗಳಿಸಿದ್ದರೂ, ಭಕ್ತಿಪೂರ್ವಕವಾಗಿ ಮಾಡಿದ ಒಂದುಸಾರಿಯ ಶಿವಪೂಜೆಯಿಂದಲೇ ಆತನು ಪಾಪ

ಶಿವಪೂಜಾಗ್ನಿಸಂದಗ್ಧಮಹಾಪಾತಕಪರ್ವತಾಃ ।
ಪೀತಾಮೃತಾಃ ಶುಚೀಭೂತಾಃ ಶಿವಂ ಯಾಂತಿ ಶಿವಾದೃತಾಃ ॥೩೪೦॥

ಸಮಭ್ಯರ್ಚ್ಯ ಮಹಾದೇವಂ ಸಕೃದಪ್ಯಹಿತಾಶಯಾಃ ।
ಲಬ್ಧ್ವೋಪೇಂದ್ರತ್ವಮಿಂದ್ರತ್ವಂ ಬ್ರಹ್ಮತ್ವಂ ಚ ಶಿವಂ ಯ[illegible] ॥೩೪೧॥

ಪುರಾ ದ್ವಿಜಾಧಮಃ ಕಶ್ಚಿತ್ ತ್ಯಕ್ತಬ್ರಾಹ್ಮಣಲಕ್ಷಣಃ ।
ಶೂದ್ರವೃತ್ತಿಂ ಸಮಾಶ್ರಿತ್ಯ ಸ್ಥಿತಃ ಸ್ವಕುಲನಿಂದಿತಃ ॥೩೪೨॥

ಸ ತತಶ್ಚೋರಧರ್ಮೇಣ ಧನಂ ಸಂಪ್ರಾಪ್ಯ ಕೋಟಿಶಃ ।
ಸದಾ ವೇಶ್ಯಾಪರೋ ಜಾತೋ ಮಧುಮಾಂಸಾಶನಸ್ತದಾ ॥೩೪೩॥

ಸ ವೇಶ್ಯಾಭುಕ್ತಶಿಷ್ಟಾಶೀ ವೇಶ್ಯಾಸಂಸಕ್ತಮಾನಸಃ ।
ಉವಾಸ ಮದನಾಕ್ರಾಂತೋ ವೇಶ್ಯಯಾ ಸಹ ಸರ್ವದಾ ॥೩೪೪॥

ಸ ಗತಃ ಸ್ವೋಪಭೋಗಾರ್ಥಂ ಪುಷ್ಪಾಣ್ಯಾನೇತುಮುತ್ಸುಕಃ ।
ಪ್ರವಿವೇಶ ಚ ಯತ್ನೇನ ಮನೋಜ್ಞಾಂ ಪುಷ್ಪವಾಟಿಕಾಂ ॥೩೪೫॥

---

ಮುಕ್ತನಾಗುವನು. ಮತ್ತು ಅಮೃತಪಾನದಿಂದ ಮತ್ತರಾಗಿ ಶಿವಾನುಗ್ರಹಕ್ಕೆ ಪಾತ್ರರೆನಿಸಿ ಆನಂದಮಯತೆಯಲ್ಲಿ ಮುಳುಗುವರು. ॥೩೩೯-೩೪೦॥

ಎಷ್ಟೇ ಅಕಾರ್ಯಕಾರಿಯಾದರೂ ಮಾನವನು ಒಂದಾವೃತ್ತಿ ಮಹಾದೇವನನ್ನು ಪೂಜಿಸಿದರೆ, ಆತನು ಇಂದ್ರ, ಬ್ರಹ್ಮ, ವಿಷ್ಣು ಇವರ ಸ್ಥಾನಗಳನ್ನು ಪಡೆಯುವನಲ್ಲದೆ ಶಿವಸನ್ನಿಧಿಯಲ್ಲಿ ಮೆರೆಯುವನು. ಇದಕ್ಕೆ ನಿದರ್ಶನವಾಗಿ ಒಂದು ಕಥೆಯುಂಟು. ಹಿಂದೆ ಒಂದುಕಾಲದಲ್ಲಿ, ಬ್ರಾಹ್ಮಣವೃತ್ತಿಯನ್ನು ಸಂಪೂರ್ಣವಾಗಿ ತ್ಯಜಿಸಿ, ಶೂದ್ರವೃತ್ತಿಯಲ್ಲಿ ಜೀವಿಸುತ್ತಿದ್ದ ಒಬ್ಬ ನೀಚಬ್ರಾಹ್ಮಣನಿದ್ದನು. ॥೩೪೧-೩೪೨॥

ಆತನು ಸದಾ ಕಳ್ಳತನದಿಂದ ಧನವನ್ನು ಗಳಿಸಿ, ಅದನ್ನು ವೇಶ್ಯಾಸಂಸರ್ಗದಿಂದ ಕಳೆಯುತ್ತಾ, ಮದ್ಯಮಾಂಸಾದಿಗಳನ್ನೂ, ತನ್ನ ಸೂಳೆಯ ಎಂಜಲನ್ನೂ ತಿನ್ನುತ್ತಾ, ಕಾಮಾತುರನಾಗಿ ಸರ್ವದಾ ಸ್ತ್ರೀ-ಸಂಭೋಗದಿಂದಲೇ ಕಾಲಕಳೆಯುತ್ತಿದ್ದನು. ॥೩೪೩-೩೪೪॥

ಒಂದುಸಾರಿ ತನ್ನ ಸುಖಸಂಪಾದನೆಗಾಗಿ ಸುಗಂಧಮಯವಾದ ಪುಷ್ಪಗಳನ್ನು ಸಂಪಾದಿಸಲು ಒಂದು ದಿವ್ಯವಾದ ಉದ್ಯಾನಕ್ಕೆ ಹೋದನು. ಅಲ್ಲಿ ಯಥೇಚ್ಛವಾಗಿ

ತತಸ್ಸಂಪಾದ್ಯ ಪುಷ್ಪಾಣಿ ಸುಗಂಧೀನಿ ಬಹೂನಿ ಚ ।
ಅಂಧಕಾರಂ ಚ ಸಂಪ್ರಾಪ್ತೇ ಮಧ್ಯೇ ಮಾರ್ಗಮುಪಾಗತಃ ॥೩೪೬॥

ತದಾ ಸಮುತ್ಥಿತೋ ವಾಯುಃ ಸ ಮೇಘೋ ವೃಕ್ಷಘಾತುಕಃ ।
ತತೋ ಬಭೂವ ವೃಷ್ಟಿಶ್ಚ ಘನಗರ್ಜತ್ಸಮನ್ವಿತಾ ॥೩೪೭॥

ತತಃ ಪರಂ ಸ ಪುಷ್ಪಾಣಿ ತ್ಯಕ್ತ್ವಾ ವೃಷ್ಟಿಜಲಾಪ್ಲುತಃ ।
ಮಮಾರ ಮಾತ್ಯಂಯಾ ತತ್ರ ಕೋಮಲಾಂಗಸ್ಸನಾತನಃ ॥೩೪೮॥

ತತ್ತ್ಯಕ್ತಾನಿ ಪ್ರಸೂನಾನಿ ಪೇತುರ್ಲಿಂಗಸ್ಯ ಮೂರ್ಧನಿ ।
ತತೋ ವೃಷ್ಟಿರಭೂಚ್ಛಾಂತಾ ತತಶ್ಶಾಂತಾಶ್ಚ ವಾಯವಃ ॥೩೪೯॥

ತತಸ್ತಂ ಮೃತಮಾಲೋಕ್ಯ ತಮಾಪುರ್ಯಮಕಿಂಕರಾಃ ।
ನೀತಶ್ಚ ತೈಃ ಸುದುರ್ವೃತ್ತೈಃ ತದೈವ ಯಮಸಂನಿಧಿಂ ॥೩೫೦॥

ತತಸ್ತಮಾಗತಂ ದೃಷ್ಟ್ವಾ ಯಮೋ ಧರ್ಮವಿಚಕ್ಷಣಂ ।
ಚಿತ್ರಗುಪ್ತಂ ವಿಲೋಕ್ಯಾಹ ಧರ್ಮಾಧರ್ಮವಿಚಾರಕಂ ॥೩೫೧॥

ಪುಷ್ಪಗಳನ್ನು ಸಂಗ್ರಹಿಸಿಕೊಂಡು ತನ್ನ ಊರಿಗೆ ಬರುವಾಗ ದಾರಿಯಲ್ಲಿಯೇ ರಾತ್ರಿಯಾಯಿತು. ಎಲ್ಲೆಲ್ಲೂ ಕಗ್ಗತ್ತಲೆ ಕವಿಯಿತು. ॥೩೪೫-೩೪೬॥

ಆಗ ದೊಡ್ಡ ಬಿರುಗಾಳಿಯೆದ್ದು, ಮರಗಳನ್ನೆಲ್ಲಾ ಉರುಳಿಸತೊಡಗಿತು. ಜೊತೆಯಲ್ಲಿಯೇ ವೇಗವಾದ ಮಳೆಯೂ ಬಂತು. ಗುಡುಗು ಸಿಡಿಲುಗಳು ಆರ್ಭಟಿಸಿದುವು. ಇವರ ವೇಗಕ್ಕೆ ಸಿಕ್ಕಿ ಆ ಬ್ರಾಹ್ಮಣನು ದಾರಿಯಲ್ಲಿಯೇ ಹೂವುಗಳನ್ನೆಸೆದು ಕೆಳಗೆ ಬಿದ್ದು, ಸತ್ತುಹೋದನು. ॥೩೪೭-೩೪೮॥

ಸ್ವಲ್ಪಹೊತ್ತಿಗೆ ಮಳೆಯೂ, ಗಾಳಿಯೂ ಶಾಂತವಾದುವು. ಆದರೆ ಇವನು ಸಂಪಾದಿಸಿ ತಂದಿದ್ದ ಹೂವುಗಳು ಅಲ್ಲಿಯೇ ಇದ್ದ ಒಂದು ಶಿವಲಿಂಗದ ಮೇಲೆ ಬಿದ್ದವು. ಇತ್ತ ಇವನು ಮೃತನಾದೊಡನೆಯೇ ಯಮದೂತರು ಬಂದು ಇವನನ್ನು ಬಂಧಿಸಿ ಯಮಸಮೀಪವನ್ನೈದಿಸಿದರು. ಯಮನು ಇವನನ್ನು ನೋಡುತ್ತಲೇ, ಚಿತ್ರಗುಪ್ತನನ್ನು ಕರೆದು ಈತನು ಮಾಡಿರುವ ಧರ್ಮಾಧರ್ಮಕಾರ್ಯಗಳನ್ನು ವಿವರಿಸಿ ಹೇಳುವವನಾಗು ಎಂದು ಆಜ್ಞಾಪಿಸುತ್ತಾ, ॥೩೪೯-೩೫೦-೩೫೧॥

|| ಯಮ ಉವಾಚ ||

ಕಿಮನೇನ ಕೃತಂ ಕರ್ಮ ಕೋಽಯಂ ಕಿಂ ಕುಲಸಂಭವಃ ।
ಕಿಮೇತಸ್ಯಾದ್ಯ ಕರ್ತವ್ಯಂ ಶಾಸನಂ ತದ್ವದಸ್ವ ಮೇ ||೩೫೨||

ಇತಿ ತದ್ವಚನಂ ಶ್ರುತ್ವಾ ಚಿತ್ರಗುಪ್ತಃ ಕೃತಾಂಜಲಿಃ ।
ಧರ್ಮಾಧರ್ಮೌ ವಿದಿತ್ವೈವ ತತ್ಕೃತಂ ಪ್ರಾಹ ತಂ ಯಮಂ ||೩೫೩||

|| ಚಿತ್ರಗುಪ್ತ ಉವಾಚ ||

ಅಯಂ ದ್ವಿಜಕುಲೋತ್ಪನ್ನೋ ದ್ವಿಜಧರ್ಮವಿವರ್ಜಿತಃ ।
ವೇಶ್ಯೋಚ್ಛಿಷ್ಟಭುಗುದ್ವೃತ್ತೋ ನಾನಾಪಾತಕಸಂಶ್ರಯಃ ||೩೫೪||

ಅನೇನ ನ ಕೃತಂ ಕರ್ಮ ಸ್ವರ್ಗಭೋಗಾದಿಸಾಧನಂ ।
ಏತತ್ಕೃತಾನಾಂ ಪಾಪಾನಾಂ ಸಂಖ್ಯಾಂ ಕರ್ತುಂ ನ ಶಕ್ಯತೇ ||೩೫೫||

ಬಹುಧಾ ಯಾತನಾನೇನ ಭೋಕ್ತವ್ಯಾ ನಾತ್ರ ಸಂಶಯಃ ।
ಅನೇನೈತಾದೃಶೇನಾಪಿ ಲಿಂಗೇ ಪುಷ್ಪಾಣಿ ಭಾಗ್ಯತಃ ||೩೫೬||

"ಈತನು ಯಾರು? ಯಾವ ಕುಲದವನು? ಈತನ ವೃತ್ತಿಯಾವುದು? ಇವನಿಗೆ ಈಗ ವಿಧಿಸಬೇಕಾದ ಶಿಕ್ಷೆಯೇನು" ಎಂದು ಯಮನು ಚಿತ್ರಗುಪ್ತನನ್ನು ಪ್ರಶ್ನಿಸಿದನು. ಆಗ ಚಿತ್ರಗುಪ್ತನು ಅವನ ಧರ್ಮಾಧರ್ಮಕಾರ್ಯಗಳನ್ನು ತಿಳಿದು ಯಮನನ್ನು ಕುರಿತು ಹೀಗೆಂದನು. ||೩೫೨-೩೫೩||

"ಯಮದೇವನೇ, ಈತನು ಬ್ರಾಹ್ಮಣವಂಶಜನು. ಆದರೆ ದ್ವಿಜಧರ್ಮದಿಂದ ದೂರನಾಗಿದ್ದನು. ಸದಾ ವೇಶ್ಯಾಲಂಪಟನಾಗಿದ್ದು, ಅವಳ ಎಂಜಲನ್ನೇ ತಿನ್ನುತ್ತಾ, ಅನೇಕ ಪಾಪಕಾರ್ಯಗಳನ್ನೆಸಗುತ್ತಾ ಜೀವಿಸಿದನು. ಈತನಿಂದ ಯಾವ ಮೋಕ್ಷ ಸಾಧಕವಾದ ಸತ್ಕಾರ್ಯಗಳೂ ನಡೆಯಲಿಲ್ಲ. ಇವನ ಪಾಪಕಾರ್ಯಗಳ ಸಂಖ್ಯೆಗೆ ಕೊನೆಯೇ ಇಲ್ಲವಾಗಿದೆ. ||೩೫೪-೩೫೫||

ಅದರ ಫಲವಾಗಿ ಈತನಿಗೆ ಅನೇಕ ನರಕಯಾತನೆಗಳನ್ನು ವಿಧಿಸಲೇಬೇಕು. ಆದರೆ ಇವನ ಅದೃಷ್ಟವಶದಿಂದ ಇವನಿಗೆ ತಿಳಿಯದಂತೆ, ಸಾಯುವ ಕಾಲದಲ್ಲಿ ಶಿವಲಿಂಗಪೂಜೆಯು ನಡೆದಿದೆ. ಅದು ಹೇಗೆಂದರೆ, ಈತನು ವನದಿಂದ ತನ್ನ

ಮಗಧಾತ್ಪೂರ್ವಮಜ್ಞಾನಾತ್ಪ್ರಾಪ್ತಿತಾಸ್ಯಯುತತ್ರಯಂ ।
ಸ್ವಭೋಗಾರ್ಥಂ ಸುಗಂಧೀನಿ ಮಲ್ಲಿಕಾಕುಸುಮಾನ್ಯಯಂ ॥೩೫೮॥

ನೀತ್ವಾ ಸ್ಥಿತಸ್ತತೋ ವೃಷ್ಟ್ಯಾ ವಾತ್ಯಾಭಿಶ್ಚ ಪ್ರಪೀಡಿತಃ ।
ಪೀಡಿತಃ ಪಾತಯಾಮಾಸ ತಾನಿ ಪುಷ್ಪಾಣ್ಯಯಂ ದ್ವಿಜಃ

ತಾನಿ ಪೇತುಸ್ತ್ವನಯೋಗಾಚ್ಛಿವಲಿಂಗಸ್ಯ ಮೂರ್ಧನಿ ।
ತತಃ ಪರಮಯಂ ಕಾಲ ನ್ಮೃತ ಏವ ಹಿ ಪೀಡಯಾ ॥೩೫೯॥

ತತಃ ಪರಂ ಯಮಭಟೈರಾನೀತೋಽಯಂ ತವಾಂತಿಕಂ ।
ಇತೋಽಧಿಕಂ ಪುರಾನೇನ ನ ಕೃತಂ ಸುಕೃತಾರ್ಜನಂ ॥೩೬೦॥

ಅನೇನ ಸುಕೃತೇನೈವ ಮುಕ್ತಿರಸ್ಯ ಭವಿಷ್ಯತಿ ॥೩೬೧॥

॥ ಅಗಸ್ತ್ಯ ಉವಾಚ ॥

ಇತಿ ತದ್ವಚನಂ ಶ್ರುತ್ವಾ ಯಮಸ್ಸಂತುಷ್ಟಮಾನಸಃ ।
ತಂ ತದಾತ್ಯಂತಯತ್ನೇನ ಪೂಜಯಾಮಾಸ ಸಾದರಂ ॥೩೬೨॥

ಪೂಜ್ಯಮಾನಂ ತಮಾಲೋಕ್ಯ ತದಾ ಯಮಸಭಾಸದಃ ।
ಯಮಮೂಚುಃ ಪ್ರಯತ್ನೇನ ಕೃತಾಂಜಲಿಪುಟಾ ಮುನೇ ॥೩೬೩॥

---

ವೇಶ್ಯೆಗಾಗಿ ಮೂವತ್ತುಸಾವಿರ ಸುಗಂಧಮಯವಾದ ಮಲ್ಲಿಗೆ ಹೂವುಗಳನ್ನು ತರುತ್ತಿದ್ದನು. ||೩೫೭-೩೫೮||

ದಾರಿಯಲ್ಲಿ ಮಳೆಗಾಳಿಯ ಹೊಡೆತಕ್ಕೆ ಸಿಕ್ಕಿಬಿದ್ದು ಸತ್ತುಹೋದನು. ಆಗ ಅವನಲ್ಲಿದ್ದ ಪುಷ್ಪಗಳೆಲ್ಲವೂ ಅಲ್ಲಿಯೇ ಇದ್ದ ಶಿವಲಿಂಗದ ಮೇಲೆ ಬಿದ್ದು ಇವನಿಂದ ಪೂಜಿಸಲ್ಪಟ್ಟಂತೆ ಕಂಡುಬಂದವು. ಎಲೈ ಯಮಧರ್ಮನೆ, ಈರೀತಿ ಈತನಿಗೆ ಮರಣ ಸಂಭವಿಸಿದೆ ||೩೫೮-೩೫೯||

ಅನಂತರ ಈತನನ್ನು ಈ ಭಟರು ನಿನ್ನ ಸಮೀಪಕ್ಕೆ ಕರೆತಂದಿರುವರು. ಇವನ ಜನ್ಮದಲ್ಲಿ ಇವಕ್ಕಿಂತ ಪುಣ್ಯಪ್ರದವಾದ ಮತ್ತಾವ ಕಾರ್ಯವೂ ನಡೆದಿಲ್ಲ. ಆದರೆ ಇಷ್ಟರಿಂದಲೇ ಈತನಿಗೆ ಮುಕ್ತಿಯೊದಗಬಹುದು." ||೩೬೦-೩೬೧||

ಹೀಗೆಂದ ಚಿತ್ರಗುಪ್ತನ ಮಾತನ್ನು ಕೇಳಿದೊಡನೆ ಯಮನು ಅವನಿಗೆ ಅತ್ಯಂತ ಭಕ್ತಿಯಿಂದ ವಂದಿಸಿ ಪೂಜಿಸಿದನು. ಹಾಗೆ ಪೂಜಿಸುತ್ತಿದ್ದ ಯಮನನ್ನು

॥ ಸಭಾಸದ ಊಚುಃ ॥

**ಯಮಾನೇನ ಕೃತಂ ಪುಣ್ಯಂ ನ ಕಿಂಚಿದಪಿ ದೃಶ್ಯತೇ ।**
**ಲಿಂಗಪೂಜಾ ತು ಯತ್ನೇನ ನ ಕೃತಾ ಮಂತ್ರಪೂರ್ವಕಂ ॥೩೬೪॥**

**ಏತಾದೃಶಸ್ಯ ದುಷ್ಟಸ್ಯ ಕ್ರಿಯತೇ ಪೂಜನಂ ತ್ವಯಾ ।**
**ಕಥಂ ಧರ್ಮಸ್ತ್ವಯಾ ಜ್ಞಾತೋ ಧರ್ಮವಿತ್ತ್ವಂ ಕಥಂ ತ್ವಯಿ ॥೩೬೫॥**

॥ ಯಮ ಉವಾಚ ॥

**ದೈವಾದ್ವಾ ಯತ್ನತೋ ವಾಪಿ ಶಿವಲಿಂಗಸ್ಯ ಮೂರ್ಧನಿ ।**
**ಪಾತಿತಾನಿ ಪ್ರಸೂನಾನಿ ಭವಂತ್ಯೇವ ಹಿ ಮುಕ್ತಯೇ ॥೩೬೬॥**

**ಶುದ್ಧಂ ಯತ್ಪಾತಯೇತ್ಪುಷ್ಪಮೇಕಂ ವಾ ಶಿವಮೂರ್ಧನಿ ।**
**ತರತ್ಯೇವ ಹಿ ಸಂಸಾರಮಂತಕಾಲೇ ಶಿವಂ ವ್ರಜೇತ್ ॥೩೬೭॥**

**ವಿವಶೇನಾಪಿ ಸಂಸ್ಪೃಷ್ಟೋ ಯಥಾ ದಹತಿ ಪಾವಕಃ ।**
**ತಥೈವ ವಿವಶೋಽಪೀಶಂ ಸಂಪೂಜ್ಯಾಂತೇ ಶಿವಂ ವ್ರಜೇತ್ ॥೩೬೮॥**

---

ನೋಡಿ, ಅವನ ಸಭೆಯಲ್ಲಿದ್ದವರೆಲ್ಲರೂ ಕೈಜೋಡಿಸಿ ನಿಂತು ಯಮನನ್ನು ಕುರಿತು ಹೀಗೆ ಪ್ರಶ್ನಿಸಿದರು. ||೩೬೨-೩೬೩||

"ಎಲೈ ಯಮನೇ, ಈತನು ಯಾವ ಪುಣ್ಯಕಾರ್ಯಗಳನ್ನೂ ನಡೆಸಿದವನಲ್ಲ. ಶಿವಪೂಜೆಯಾದರೋ ಆಕಸ್ಮಾತ್ತಾಗಿ ನಡೆದಂತಾಗಿದೆಯೇ ಹೊರತು, ತತ್ಪೂಜಾಮಂತ್ರಗಳು ಈತನ ಬಾಯಿಂದ ಬಂದಿಲ್ಲ. ಇಂತಹ ದುಷ್ಟನಲ್ಲಿ ಯಾವ ಧರ್ಮವನ್ನು ಕಂಡು ಧರ್ಮಜ್ಞನಾದ ನೀನು ಇವನಿಗೆ ಪೂಜೆಮಾಡುತ್ತಿರುವೆ?" ||೩೬೪-೩೬೫||

ಆಗ ಯಮನಿಂತೆಂದನು. ಶಿವಲಿಂಗದ ಮೇಲೆ ಮನಃಪೂರ್ವಕವಾಗಿಯೋ, ಬಲಾತ್ಕಾರದಿಂದಲೋ, ಒಬ್ಬನಿಂದ ಪುಷ್ಪಗಳು ಬೀಳಲ್ಪಟ್ಟರೆ, ಅಂತಹವನಿಗೆ ಮುಕ್ತಿ ದೊರೆಯುವುದು ನಿಜ. ಒಂದೇ ಹೂವನ್ನಾಗಲಿ ಶುದ್ಧಮನಸ್ಸಿನಿಂದ ಶಿವಲಿಂಗದ ಮೇಲೆ ಪೂಜಿಸಿದರೆ, ಆ ಪೂಜಕನ ಸಾಂಸಾರಿಕವಾದ ಸಕಲ ದುಃಖಗಳೂ ನಿವಾರಣೆಯಾಗುವುದಲ್ಲದೆ ಶಿವಲೋಕವೂ ಅವನಿಗೆ ಲಭಿಸುವುದು ||೩೬೬-೩೬೭||

ಅರಿಯದೆ ಮುಟ್ಟಿದರೂ ಬೆಂಕಿಯು ಸುಡುವಂತೆ, ತಿಳಿಯದೆ ಪೂಜಿಸಿದರೂ ಶಂಕರನು ಮುಕ್ತಿಫಲವನ್ನೀಯುವನು. ಇವನು ಎರಚಿದ ಹೂವುಗಳಲ್ಲಿ ಒಂದು

ಪ್ರಸೂನಮೇಕಮೇವಾಸ್ಮಾತ್ಪಾತಿತಂ ಶಿವಮೂರ್ಧನಿ ।
ಏತತ್ಕೃತಾಘಸಂಘಾನಿ ನಾಶಯಾಮಾಸ ತತ್ಕ್ಷಣೇ ॥೩೬೯॥

ಯಾನ್ಯನ್ಯಾನಿ ಪ್ರಸೂನಾನಿ ಪಾತಿತಾನಿ ಶಿವೋಪರಿ ।
ತಾನ್ಯಸ್ಯ ಮುಕ್ತಿಂ ದಾಸ್ಯಂತಿ ಬ್ರಹ್ಮಾದೀನಾಂ ಪದಾನ್ಯಪಿ ॥೩೭೦॥

ಅತಃ ಪರಮಯಂ ಭೂಪೋ ಭಾವಿಭೂಮಾವಯೋನಿಜಃ ।
ನವಖಂಡಾತ್ಮಿಕಾಂ ಭೂಮಿಂ ಪಾಲಯಿಷ್ಯತಿ ಧರ್ಮತಃ ॥೩೭೧॥

ಅಸ್ಯ ಪುತ್ರಾ ಭವಿಷ್ಯಂತಿ ದಶಲಕ್ಷಂ ಮಹೌಜಸಃ ।
ಶಿವಸ್ಥಾನಾನ್ಯಲಂ ಭೂಪಃ ಕಾರಯಿಷ್ಯತಿ ಭೂರಿಶಃ ॥೩೭೨॥

ಶಿವಲಿಂಗಾನ್ಯಯಂ ತೇಷು ಸ್ಥಾಪಯಿಷ್ಯತಿ ಸಾದರಂ ।
ಶಿವಾರ್ಚನಪರೋ ಭೂತ್ವಾ ಶೈವಾನಭ್ಯರ್ಚಯಿಷ್ಯತಿ ॥೩೭೩॥

ಅಯಂ ತತಃ ಪರಂ ರಾಜ್ಯಂ ಪುತ್ರೇಷು ಸ್ಥಾಪಯಿಷ್ಯತಿ ।
ತತಸ್ತೇನೈವ ದೇಹೇನ ದೇವೇಂದ್ರೋಽಪಿ ಭವಿಷ್ಯತಿ ॥೩೭೪॥

ಹೂವಿನ ಪೂಜೆಯಿಂದಲೇ ಇವನ ಸಕಲ ಪಾಪಗಳೂ ದಗ್ಧವಾದವು. ಉಳಿದ ಹೂವುಗಳ ಅರ್ಚನೆಯಿಂದ ಒದಗಿದ ಸುಕೃತವು, ಬ್ರಹ್ಮನೇ ಮೊದಲಾದ ಎಲ್ಲಾ ದೇವತೆಗಳ ಸ್ಥಾನವನ್ನೆಲ್ಲಾ ಸುಲಭವಾಗಿ ಕೊಡಿಸುವುದು. ॥೩೬೮-೩೬೯-೩೭೦॥

ಅನಂತರ ಈತನು ಮುಂದಿನ ಜನ್ಮದಲ್ಲಿ ಅಯೋನಿಜನಾಗಿ ಭೂಮಿಯಲ್ಲಿ ಅವತರಿಸಿ, ರಾಜಪದವಿಯನ್ನು ಪಡೆದು, ಒಂಬತ್ತು ಖಂಡಗಳಿಂದ ಆವೃತವಾದ ಭೂಮಂಡಲವನ್ನೇ ಧರ್ಮದಿಂದ ರಕ್ಷಿಸುವನು. ಇವನಿಗೆ ಆಗ ಹತ್ತುಲಕ್ಷ ಮಕ್ಕಳು ಜನಿಸುವರು. ಈತನು ಅನಂತರ ಅನೇಕ ಶಿವಾಲಯಗಳನ್ನು ಕಟ್ಟಿಸುವನು. ॥೩೭೧-೩೭೨॥

ಅಲ್ಲೆಲ್ಲಾ ಶಿವಲಿಂಗಗಳನ್ನು ಪ್ರತಿಷ್ಠೆಮಾಡಿಸುವನು. ಸದಾ ಶಿವಾರಾಧನೆಯಲ್ಲಿಯೇ ಕಾಲಕಳೆಯುತ್ತಾ ಅನೇಕ ಶಾಂಭವರನ್ನು ಪೂಜಿಸುವನು. ಹೀಗೆಯೇ ಅನೇಕ ಕಾಲ ಧರ್ಮದಿಂದ ರಾಜ್ಯವಾಳಿ ಕೊನೆಗೆ ಸಶರೀರನಾಗಿ ದೇವಲೋಕವನ್ನು ಸೇರಿ ದೇವೇಂದ್ರಪದವಿಯನ್ನು ಅನುಭವಿಸುವನು. ॥೩೭೩-೩೭೪॥

ತತಃ ಪರಮಯಂ ಬ್ರಹ್ಮಾ ಸ್ವಯಮೇವ ಭವಿಷ್ಯತಿ ।
ಸ್ಥಾಸ್ಯತ್ಯಯಂ ವಿಧಿರ್ಭೂತ್ವಾ ಬಹುಕಾಲಮನಾಕುಲಃ ॥೩೭೫॥

ತತೋ ವಿಷ್ಣುತ್ವಮಾಸಾದ್ಯ ಲಕ್ಷ್ಮೀನಾಥೋ ಭವಿಷ್ಯತಿ ।
ಅನೇನ ಸಹಸೋಲ್ಲಾಸಂ ಲಕ್ಷ್ಮೀಕ್ರೀಡಾಂ ಕರಿಷ್ಯತಿ ॥೩೭೬॥

ಗರುಡಾದ್ಯೈಃ ಸೇವಿತೋಽಯಂ ಬಹುಕಾಲಮನಾಕುಲಃ ।
ಸ್ವೇಚ್ಛಂ ಸ್ಥಾಸ್ಯತಿ ವೈಕುಂಠೇ ವೈಕುಂಠೇಶತ್ವಲಾಭತಃ ॥೩೭೭॥

ಗಾಣಾಪತ್ಯಂ ಚ ಲಬ್ಧ್ವಾಯಂ ತತಶ್ಶಂಕರಪೂಜಯಾ ।
ಲಬ್ಧ್ವಾ ಶಿವಪ್ರಸಾದಂ ಚ ಶಿವೇ ಲೀನೋ ಭವಿಷ್ಯತಿ ॥೩೭೮॥

ಮರಣಾತ್ಪೂರ್ವಸಮಯೇ ಶ್ರೀಮಹಾದೇವಮೂರ್ಧನಿ ।
ಪುಷ್ಪಾಣಿ ಪಾತಯಿತ್ವಾಪಿ ಮುಕ್ತೋ ಭವತಿ ಮಾನವಃ ॥೩೭೯॥

ಮರಣಾತ್ಪೂರ್ವಸಮಯೇ ಶಿವಂ ಸಂಪೂಜ್ಯ ಯತ್ನತಃ ।
ವ್ಯವಧಾನಂ ವಿನಾ ಮರ್ತ್ಯಃ ಶಿವೇ ಲೀನೋ ಭವಿಷ್ಯತಿ ॥೩೮೦॥

ಹಾಗೆಯೇ ಬ್ರಹ್ಮಪದವಿಯನ್ನು ಹೊಂದಿ, ಬಹುಕಾಲ ಬ್ರಹ್ಮನ ಕೆಲಸವನ್ನು ನಡೆಸುತ್ತಾ ಇದ್ದು, ಹಾಗೆಯೇ ಲಕ್ಷ್ಮೀಪತಿಯಾದ ವಿಷ್ಣುವಿನ ಪದವಿಯಲ್ಲಿ ನಿರತನಾಗಿ ಲಕ್ಷ್ಮೀದೇವಿಯೊಡನೆ ಕ್ರೀಡಿಸುತ್ತಾ ಸುಖದಿಂದಿರುವನು. ॥೩೭೫-೩೭೬॥

ವೈಕುಂಠದಲ್ಲಿರುವ ಗರುಡನೇ ಮೊದಲಾದ ವಿಷ್ಣುಭಕ್ತರಿಂದ ಸೇವಿತನಾಗಿ, ವೈಕುಂಠಲೋಕದಲ್ಲಿ ವಿಷ್ಣುಪದವಿಯಿಂದ ಸ್ವೇಚ್ಛೆಯಲ್ಲಿ ವಿಹರಿಸುವನು ಇದೇ ರೀತಿ ಅಲ್ಲಿ ಈಶ್ವರಪೂಜೆಮಾಡಿ ಅದರಿಂದ ಶಿವಪ್ರಸಾದವನ್ನು ಸಂಪಾದಿಸಿ, ಗಾಣಾಪತ್ಯ ಪದವಿಯಲ್ಲಿದ್ದು ಕೊನೆಗೆ ಶಿವನಲ್ಲಿಯೇ ಅಂತರ್ಭೂತನಾಗುವನು. ॥೩೭೭-೩೭೮॥

ಮೃತನಾಗುವುದಕ್ಕೆ ಮುಂಚೆ ಯಾವನೇ ಆಗಲಿ ಯಾವುದೇ ರೀತಿಯಿಂದಲಾದರೂ ಶಿವಲಿಂಗದಮೇಲೆ ಪುಷ್ಪಗಳನ್ನು ಹಾಕುವುದರಿಂದಲೇ ಆತನಿಗೆ ಮುಕ್ತಿಯು ದೊರಕುವುದು. ಹಾಗಿರುವಾಗ ಶಿವನನ್ನು ಪೂಜಿಸಿ ಮೃತನಾದವನಿಗೆ ಪುನರ್ಜನ್ಮವಿಲ್ಲದ ಶಿವಸಾಯುಜ್ಯವು ದೊರೆಯುವುದರಲ್ಲಿ ಸಂಶಯವೇನು ? ॥೩೭೯-೩೮೦॥

ಅಂತಕಾಲೇ ಬಿಲ್ವಪತ್ರೇ ಪಾತಿತೇ ಶಿವಮೂರ್ಧನಿ ।
ತದಾ ತ್ವಪ್ಯವಧಾನೇನ ಶಿವೇ ಲೀನೋ ಭವಿಷ್ಯತಿ ॥೩೮೧॥

ಮೋಕ್ಷಾತ್ಪ್ರವರ್ಗಸಮಯೇ ಬಿಲ್ವಪತ್ರೇಣ ಶಂಕರಂ ।
ಯಃ ಪೂಜಯೇತ್ ಯತ್ನೇನ ಸ ಶಿವೋ ಭವತಿ ಧ್ರುವಂ ॥೩೮೨॥

ವಿನಾ ಯಜ್ಞೈರ್ವಿನಾ ದಾನೈಸ್ತಪೋಭಿಶ್ಚ ವಿನಾ ಶಿವಂ ।
ಸಂಪೂಜ್ಯ ಬಿಲ್ವಪತ್ರೇಣ ಪ್ರಾಪ್ತಾನಂತಾಶ್ಶಿವಂ ಧ್ರುವಂ ॥೩೮೩॥

ಅನಂತಾನ್ಯಪಿ ಪಾಪಾನಿ ನಶ್ಯಂತಿ ಶಿವಪೂಜಯಾ ।
ತತಃ ಪ್ರಯಾಂತಿ ಚ ಶಿವಂ ಯಸ್ಮಿನ್ ಶಿವಪೂಜಯಾ ॥೩೮೪॥

ಅನಂತಗೋತ್ತಮಗೋದಾನಭೂದಾನಾನಾಂ ಚ ಯತ್ಫಲಂ ।
ತತೋಽನಂತಗುಣಂ ಪುಣ್ಯಂ ಶಿವಪೂಜಾವಿಧೇಃ ಫಲಂ ॥೩೮೫॥

ಅನಂತಮತ್ತಮಾತಂಗದಾನಾನಾಮಪಿ ಯತ್ಫಲಂ ।
ತತೋಽನಂತಗುಣಂ ಪುಣ್ಯಂ ಶಿವಪೂಜಾವಿಧೇಃ ಫಲಂ ॥೩೮೬॥

ಅನಂತಕನ್ಯಾರತ್ನಾದಿದಾನಾನಾಮಪಿ ಯತ್ಫಲಂ ।
ತತೋಽನಂತಗುಣಂ ಪುಣ್ಯಂ ಶಿವಪೂಜಾವಿಧೇಃ ಫಲಂ ॥೩೮೭॥

---

ಮರಣಕಾಲದಲ್ಲಿ ಶಿವಲಿಂಗದಮೇಲೆ ಬಿಲ್ವಪತ್ರೆಯನ್ನು ಎಸೆದರೂ, ಅಥವಾ ಬಿಲ್ವದಳಗಳಿಂದ ಪೂಜಿಸಿದರೂ ಅವನು ಶಿವಸಾರೂಪ್ಯವನ್ನು ಹೊಂದುವನು. ಇದರಲ್ಲಿ ಸಂಶಯವಿಲ್ಲ ॥೩೮೧-೩೮೨॥

ಅನೇಕರು ಯಜ್ಞ, ತಪಸ್ಸು, ದಾನ ಮುಂತಾದುವುಗಳನ್ನು ಆಚರಿಸದೆ ಕೇವಲ ಶಿವಾರಾಧನೆಯಿಂದಲೇ ಮುಕ್ತರಾಗಿರುವರು. ಅಲ್ಲದೆ ಹಲವರು ಇದರಿಂದ ಅನಂತವಾದ ಪಾಪಕರ್ಮಗಳನ್ನು ಕಳೆದುಕೊಂಡು ಶಿವಸನ್ನಿಧಿಯನ್ನು ಪಡೆದಿರುವರು ॥೩೮೩-೩೮೪॥

ಉತ್ತಮವಾದ ಗೋದಾನ, ಭೂದಾನ, ಗಜದಾನವೇ ಮೊದಲಾದ ಮಹಾದಾನಗಳಿಂದ ಲಭಿಸುವ ಫಲಕ್ಕಿಂತಲೂ ಅತಿಶಯವಾದ ಫಲವು ಶಿವಪೂಜಾಚರಣೆಯಿಂದಲೇ ಲಭಿಸುವುದು ॥೩೮೫-೩೮೬॥

ಕನ್ಯಾದಾನ, ರತ್ನದಾನ, ವಾಜಪೇಯಾದಿ ಮಹಾಯಜ್ಞಾಚರಣೆ ಮುಂತಾದ

ಅನಂತವಾಜಪೇಯಾದಿಯಾಗಾನಾಮಪಿ ಯತ್ಫಲಂ ।
ತತೋಽನಂತಗುಣಂ ಪುಣ್ಯಂ ಶಿವಪೂಜಾವಿಧೇಃ ಫಲಂ ॥೩೮೮॥

ಶಿವಪೂಜಾಕಲ್ಪವೃಕ್ಷಃ ಸ್ವೇಷ್ಟಾನಂತಫಲಪ್ರದಃ ।
ತತಸ್ಸಾ ಸರ್ವದಾ ಕಾರ್ಯಾ ಶಿವಪೂಜಾ ಮುಮುಕ್ಷುಭಿಃ ॥೩೮೯॥

ಶಿವಾರ್ಚನಫಲಂ ಯಾವತ್ತಾವತ್ಫಲಮನೇಕಧಾ ।
ಕೃತ್ಯೈರಪ್ಯಮಿತೈರ್ಧರ್ಮ್ಯೈರ್ನೈವ ಸಂಪ್ರಾಪ್ಯತೇ ಧ್ರುವಂ ॥೩೯೦॥

ವಿಷ್ಣುತ್ವಾದಿ ಫಲಪ್ರಾಪ್ತಿರ್ಯದರ್ಚನವಿಧೇಃ ಫಲಂ ।
ಮುಕ್ತಿಶ್ಚ ಯತ್ಫಲೇನಾನ್ಯತ್ಕಥಂ ಸ್ಯಾತ್ಸದೃಶಂ ಫಲಂ ॥೩೯೧॥

ವಿಷ್ಣುತ್ವಾದಿಪದಪ್ರಾಪ್ತಿರ್ಮುಕ್ತಿಶ್ಚ ಶಿವಪೂಜಯಾ ।
ಜಾತೋ ಬಹೂನಾಮೇಷಾತೋ ನಾನ್ಯತ್ತುಲ್ಯಫಲಪ್ರದಾ ॥೩೯೨॥

ವಿನಾಪಿ ಯಜ್ಞದಾನಾದ್ಯೈಃ ಕೇವಲಂ ಶಿವಪೂಜಯಾ ।
ಮುಕ್ತಾ ಭವಂತಿ ಮನುಜಾಸ್ತ್ಯಕ್ತಪಾತಕಪಂಜರಾಃ ॥೩೯೩॥

ಪುಣ್ಯಕರ್ಮಾಚರಣೆಗಿಂತಲೂ ಅತಿಶಯಫಲಪ್ರದವಾದದ್ದು ಶಿವಪೂಜೆಯು. ॥೩೮೭-೩೮೮॥

ಶಿವಪೂಜೆಯೆಂಬುದೇ ಒಂದು ಕಲ್ಪವೃಕ್ಷ. ಅದು ಭಕ್ತರ ಸಕಲ ಇಷ್ಟಾರ್ಥಗಳನ್ನು ತಪ್ಪದೆ ಈಡೇರಿಸುವುದು. ಆದ್ದರಿಂದಲೇ ಮೋಕ್ಷಾರ್ಥಿಗಳು ಶಿವಪೂಜೆಯನ್ನು ತಪ್ಪದೆ ನಡೆಸಬೇಕು. ಉಳಿದ ಯಾವ ದಾನಧರ್ಮಾದಿಗಳಿಂದಲೂ ಲಭಿಸದಂತಹ ಪುಣ್ಯಫಲವು ಕೇವಲ ಶಿವಾರ್ಚನೆಯಿಂದಲೇ ಲಭಿಸುವುದು. ॥೩೮೯-೩೯೦॥

ಯಾವ ಅರ್ಚನೆಯಿಂದ, ವಿಷ್ಣುತ್ವವೇ ಮೊದಲಾದ ಮುಖ್ಯ ಸ್ಥಾನಗಳ ಪ್ರಾಪ್ತಿಯೂ, ಶಾಶ್ವತವಾದ ಮುಕ್ತಿಯೂ, ಅನಾಯಾಸವಾಗಿ ದೊರಕುವುದೋ, ಅಂತಹ ಶಿವಪೂಜೆಗಿಂತಲೂ ಶ್ರೇಷ್ಠವಾದ ಅಥವಾ ಅದಕ್ಕೆ ಸಮವಾದ ಮತ್ತೊಂದು ಕರ್ಮವು ಪ್ರಪಂಚದಲ್ಲಿರುವುದೇ? ॥೩೯೧-೩೯೨॥

ಮನುಷ್ಯರು ಯಜ್ಞದಾನಾದಿಗಳನ್ನು ನಡೆಸದಿದ್ದರೂ, ಶಿವಾರಾಧನೆ ಮಾಡಿದ್ದೇ ಆದರೆ, ಆಗ ಅವರ ಪಾಪಪಂಜರವು ದಗ್ಧವಾಗಿ ಅದರಿಂದ ಅವರು ಬಿಡುಗಡೆ ಹೊಂದುವರು. ಶಿವಾರ್ಚನೆ ಮಾಡಿದವರು ಎಂತಹ ಪಾಪಿಗಳಾಗಿದ್ದರೂ,

ಪಾಪಿನೋಽಪಿ ಶಿವಂ ಯಾಂತಿ ನೂನಂ ಕೃತಶಿವಾರ್ಚನಾಃ ।
ನ ತಪೋಮೂರ್ತಯೋಽಪೀಶಂ ಯಾಂತಿ ತ್ಯಕ್ತಶಿವಾರ್ಚನಾಃ ॥೩೯೪॥

ವೃಥಾ ತಪೋ ವೃಥಾ ದಾನಂ ಧರ್ಮಾಶ್ಚ ವಿವಿಧಾ ವೃಥಾಃ ।
ಕಿಂ ತ್ವೇಕಂ ಸಾರ್ಥಕಂ ಶ್ರೌತಂ ಶ್ರೀಮಹಾದೇವಪೂಜನಂ ॥೩೯೫॥

ಶಿವೇ ದತ್ತಮಯತ್ನೇನಾಪ್ಯೇಕಂ ಬಿಲ್ವದಲಂ ನವಂ ।
ವಿನಾ ಧರ್ಮಾಂತರಾಪೇಕ್ಷಾಂ ಮೋಕ್ಷದಂ ಭವತಿ ಧ್ರುವಂ ॥೩೯೬॥

ಸಂಪ್ರಾಪ್ಯ ಮಹದೈಶ್ವರ್ಯಮಿಂದ್ರತ್ವಾದಿಪದಾನ್ಯಪಿ ।
ಬಹುಭಿಶ್ಶಿವಸಾಯುಜ್ಯಂ ಪ್ರಾಪ್ತಂ ಶಂಕರಪೂಜಯಾ ॥೩೯೭॥

ಸಕೃದಪ್ಯರ್ಚಿತೋ ಭಕ್ತ್ಯಾ ಮಹೇಶಃ ಕರುಣಾನಿಧಿಃ ।
ದದಾತ್ಯತುಲಮೈಶ್ವರ್ಯಂ ಸ್ವಸಾಯುಜ್ಯಂ ಚ ಸಾದರಂ ॥೩೯೮॥

ಸುತೇ ಪಿತೇವ ತನುತೇ ಪ್ರೀತಿಮೀಶಃ ಸ್ವಪೂಜಕೇ ।
ತತೋ ದದಾತಿ ಸುಪ್ರೀತಃ ಶಿವಸ್ತದ್ವಾಂಛಿತಂ ಫಲಂ ॥೩೯೯॥

ಶಿವಪದವನ್ನು ಹೊಂದುವರು. ತಪೋಮೂರ್ತಿಗಳೆನಿಸಿದರೂ, ಶಿವಾರ್ಚನೆಮಾಡದಿದ್ದರೆ ಅವರಿಗೆ ಮುಕ್ತಿಯು ದೊರಕಲಾರದು. ೩೯೩-೩೯೪॥

ತಪಸ್ಸು, ದಾನ, ಧರ್ಮ, ಮುಂತಾದ ಕರ್ಮಗಳೂ ಕೆಲವುವೇಳೆ ವ್ಯರ್ಥವಾದಾವು. ಶ್ರುತ್ಯುಕ್ತವಾದ ಶಿವಪೂಜೆಯಾದರೋ ಎಂದೂ ನಿರರ್ಥಕವಾಗುವುದಿಲ್ಲ. ಪರಶಿವನಲ್ಲಿ ಭಕ್ತಿಯಿಂದರ್ಪಿಸಿದ ಏಕಬಿಲ್ವಾರ್ಪಣೆಯೂ ಕೂಡ ಎಂದೂ ವ್ಯರ್ಥವಾಗದೆ, ಸಾಕ್ಷಾನ್ಮುಕ್ತಿಯನ್ನೇ ಒದಗಿಸಿಕೊಡುವುದು. ॥೩೯೫-೩೯೬॥

ಶಂಕರಾರಾಧನೆಯಿಂದ ಭಜಕರು ಈ ಲೋಕದಲ್ಲಿ ಸಕಲವಾದ ಐಶ್ವರ್ಯವನ್ನೂ ಪಡೆದು ಕೊನೆಗೆ ಶಿವಸಾಯುಜ್ಯವನ್ನು ಹೊಂದುವರು. ಕರುಣಾಸಾಗರನಾದ ಶಂಕರನು ಒಂದುಸಾರಿ ಪೂಜಿತನಾದರೂ, ತನ್ನ ಭಕ್ತರಮೇಲಿನ ವಿಶ್ವಾಸದಿಂದ ಅವರಿಗೆ ಶಿವಸಾಯುಜ್ಯವನ್ನು ಕರುಣಿಸುವನು. ॥೩೯೭-೩೯೮॥

ಶಂಕರನು ತನ್ನನ್ನು ಪೂಜಿಸುವವನನ್ನು ಮಗನನ್ನು ಪ್ರೀತಿಸುವ ತಂದೆಯಂತೆ ಅನುಗ್ರಹಿಸಿ, ಅವನ ಇಷ್ಟಾರ್ಥಗಳನ್ನೆಲ್ಲಾ ನೆರವೇರಿಸುವನು. ಶುದ್ಧವಾದ

ತೋಯೇನ ಬಿಲ್ವಪತ್ರೇಣ ಪ್ರೂತೇನೈಕೇನ ವಾ ಶಿವಂ ।
ಯಃ ಪೂಜಯತಿ ಯತ್ನೇನ ತಸ್ಯ ಮುಕ್ತಿರದೂರತಃ ॥೪೦೦॥

ಬಿಲ್ವಪತ್ರಾದಿಭಿರ್ನಿತ್ಯಂ ಯಃ ಪೂಜಯತಿ ಶಂಕರಂ ।
ಸ ವಿಷ್ಣುಪ್ರಮುಖೈರ್ದೇವೈಃ ಪೂಜ್ಯತೇ ನಾತ್ರ ಸಂಶಯಃ ॥೪೦೧॥

ಶಾಂಕರಾಸ್ಸಂತಿ ಯಾವಂತಸ್ತೇ ಸರ್ವೇ ಕೇಶವಾದಿಭಿಃ ।
ಪೂಜ್ಯಂತೇ ಸಾದರಂ ನಿತ್ಯಮುದ್ಧೃಷ್ಟಶುಚಿವಿಗ್ರಹೈಃ ॥೪೦೨॥

ಯಥಾ ಶಿವಸ್ಸದಾ ಪೂಜ್ಯೋ ವಿಷ್ಣ್ವಾದೀನಾಂ ಪ್ರಯತ್ನತಃ ।
ತಥೈವ ಸರ್ವದಾ ಪೂಜ್ಯಾಸ್ತೇಷಾಂ ಶಂಕರಪೂಜಕಾಃ ॥೪೦೩॥

ಮಹದ್ಭಾಗ್ಯಂ ಮಹದ್ಭಾಗ್ಯಂ ಶಿವಪೂಜಾರತಾತ್ಮನಾಂ ।
ಯತಸ್ತೇ ವಿಧಿವಿಷ್ಣ್ವಾದ್ಯೈಃ ಪೂಜನೀಯಾಃ ಪ್ರಯತ್ನತಃ ॥೪೦೪॥

ಕಸ್ಸಮರ್ಥೋ ಭವೇದ್ದ್ರಷ್ಟುಂ ಕ್ರೂರದೃಷ್ಟ್ಯಾ ಶಿವಾರ್ಚಕಾನ್ ।
ವಿಷ್ಣ್ವಾದಿವಂದ್ಯಪಾದಾಬ್ಜಾನ್ ಘೋರಂ ನಾರಕಿನಂ ವಿನಾ ॥೪೦೫॥

ನೀರು, ಕೋಮಲವಾದ ಬಿಲ್ವಪತ್ರೆ ಇಂತಹ ಪೂಜಾಸಾಮಗ್ರಿಗಳಿಂದ ಶಿವನನ್ನು ಪೂಜಿಸಿದವನಿಗೆ ಮುಕ್ತಿಯು ಕರಗತವಾದಂತೆಯೇ ಸರಿ ॥೩೯೯-೪೦೦॥

ಬಿಲ್ವಪತ್ರಾದಿಗಳಿಂದ ಈಶ್ವರನನ್ನು ಪೂಜಿಸಿದವನನ್ನು ವಿಷ್ಣುವೇ ಮೊದಲಾದವರು ಪೂಜಿಸುವರು. ಲೋಕದಲ್ಲಿ ಎಷ್ಟು ಜನ ಶಾಂಭವರಿರುವರೋ, ಅವರೆಲ್ಲರನ್ನೂ ವಿಷ್ಣ್ವಾದಿ ದೇವತೆಗಳು ಸದಾ ಪೂಜಿಸುವರು. ॥೪೦೧-೪೦೨॥

ವಿಷ್ಣ್ವಾದಿ ದೇವತೆಗಳಿಗೆ ಶಂಕರನು ಹೇಗೆ ಪೂಜ್ಯನೋ, ಹಾಗೆಯೇ ಶಂಕರ ಕಿಂಕರರೂ ಅವರಿಗೆ ಪೂಜ್ಯರೆನಿಸುವರು. ಈಶ್ವರಾರಾಧನೆಯಲ್ಲಿ ನಿರತರಾದವರೇ ಧನ್ಯರು. ಏಕೆಂದರೆ ಅವರು ಬ್ರಹ್ಮವಿಷ್ಣ್ವಾದಿಗಳಿಗೂ ಪೂಜ್ಯರೆನಿಸುವರಲ್ಲವೆ? ॥೪೦೩-೪೦೪॥

ವಿಷ್ಣ್ವಾದಿಗಳಿಂದ ಪೂಜಿತರಾದ ಶಿವಾರ್ಚಕರನ್ನು ಯಾವನು ತಾನೇ ಕ್ರೂರದೃಷ್ಟಿಯಿಂದ ನೋಡಬಲ್ಲನು? ಹಾಗೆ ನೋಡಿದರೆ ಅವರಿಗೆ ನರಕವು ತಪ್ಪುವುದೇ? ಅಜ್ಞಾನದಿಂದ ಹಾಗೆ ಶಿವಾರ್ಚಕರನ್ನು ಕ್ರೂರರೀತಿಯಿಂದ

ಯಃ ಪಶ್ಯೇತ್ಕ್ರೂರಯಾ ದೃಷ್ಟ್ಯಾ ಶೈವಂ ಮೋಹವಶಾದಪಿ ।
ಸ ತಿಷ್ಠತ್ಯೇವ ನರಕೇ ಯಾವದಾಚಂದ್ರತಾರಕಂ ॥೪೦೬॥

ಧನ್ಯಾಃ ಶೈವಜನಾ ಮಾನ್ಯಾಃ ಪೂಜನೀಯಾಸ್ಸುರಾದಿಭಿಃ ।
ಅತ ಏವ ಹಿ ತೇ ಸರ್ವೈಃ ಪೂಜನೀಯಾಃ ಪ್ರಯತ್ನತಃ ॥೪೦೭॥

ಧನ್ಯಂ ಧನ್ಯಂ ಮಹಾದೇವ ಪೂಜಕಸ್ಯೈವ ಜೀವನಂ ।
ಯತೋ ಜೀವನ್ನಪಿ ಸುರೈಃ ಪೂಜಿತಶ್ಶಿವಪೂಜಕಃ ॥೪೦೮॥

ತಸ್ಯೈವ ಜನಕೋ ಮಾನ್ಯೋ ಯಸ್ಯ ಪುತ್ರಶ್ಶಿವಾರ್ಚಕಃ ।
ತಸ್ಯೈವ ಜನನೀ ಮಾನ್ಯಾ ಸುಷುವೇ ಯಾ ಶಿವಾರ್ಚಕಂ ॥೪೦೯॥

ತಸ್ಯ ಧನ್ಯತರೋ ವಂಶೋ ಯಸ್ಯ ವಂಶೇ ಶಿವಾರ್ಚಕಃ ।
ತದ್ವಂಶಜನ್ಯಾ ಧನ್ಯಾ ಹಿ ಯದ್ವಂಶೇ ಶಂಕರಾರ್ಚಕಃ ॥೪೧೦॥

ಯಸ್ಯ ವಂಶೇ ಸಮುತ್ಪನ್ನಶ್ಶಂಕರಾರ್ಚನತತ್ಪರಃ ।
ತದ್ವಂಶಜನ್ಯಾಃ ಸರ್ವೇಽಪಿ ಪೂಜನೀಯಾಸ್ಸುರೈಸ್ಸದಾ ॥೪೧೧॥

ನೃತ್ಯಂತಿ ಪಿತರಸ್ತಸ್ಯ ಯಸ್ಯ ವಂಶೇ ಶಿವಾರ್ಚಕಃ ।
ರುದಂತಿ ಪಿತರಸ್ತಸ್ಯ ನ ಯದ್ವಂಶೇ ಶಿವಾರ್ಚಕಃ ॥೪೧೨॥

ಅವಲೋಕಿಸಿದರೂ, ಅವರು ಚಂದ್ರನಕ್ಷತ್ರಗಳಿರುವ ವರೆಗೂ ನರಕದಲ್ಲಿ ನೆಲಸುವರು. ॥೪೦೫-೪೦೬॥

ಶಿವಪೂಜಕರು ದೇವತೆಗಳಿಗೂ ಮಾನ್ಯರಾಗಿರುವುದರಿಂದ ಅವರು ಸರ್ವರಿಗೂ ಪೂಜ್ಯರು. ಅವರ ಜೀವನವೇ ಧನ್ಯವಾದುದು, ಅವರೇ ಕೃತಾರ್ಥರು, ದೇವಪೂಜ್ಯರೆನಿಸಿದ ಅವರಿಗಿಂತ ಉತ್ತಮರು ಮತ್ತಾರು ? ॥೪೦೭-೪೦೮॥

ಶಿವಾರ್ಚಕನನ್ನು ಹೆತ್ತ ಮಾತಾಪಿತೃಗಳೇ ಧನ್ಯರು. ಅವರ ವಂಶವೇ ಶ್ರೇಷ್ಠವಾದುದು. ಆ ವಂಶದಲ್ಲಿ ಜನಿಸಿದವರೆಲ್ಲಾ ಪವಿತ್ರರೆನಿಸುವರು. ॥೪೦೯-೪೧೦॥

ಶಿವಾರ್ಚಕನ ವಂಶದಲ್ಲಿ ಹುಟ್ಟಿದವರೆಲ್ಲ ದೇವಪೂಜ್ಯರೆನಿಸುವರು. ಅವನ ಹಿಂದಿನ ಪಿತೃವರ್ಗವೆಲ್ಲಾ ಅವನಿಂದಲೇ ತೃಪ್ತಿಹೊಂದುವುದು. ಯಾರ ವಂಶದಲ್ಲಿ

ಕದಾಚಿದಪಿ ಗೌರೀಶಂ ಪಯಸಾ ಯೋಽಭಿಷಿಂಚತಿ ।
ಸ ಪುನಸ್ತನ್ಯಪಯಸಾ ಸ್ವೋದರಂ ನಾಭಿಷಿಂಚತಿ ॥೪೧೩॥

ಸ ಏವ ಧನ್ಯಃ ಪೂತಾತ್ಮಾ ಕೃತಕೃತ್ಯಸ್ಸ ಏವ ಹಿ ।
ಯೋಽಭಿಷಿಚ್ಯ ಮಹಾದೇವಂ ಬಿಲ್ವಾದ್ಯೈಃ ಪೂಜಯಿಷ್ಯತಿ ॥೪೧೪॥

ನರಾ ಭವಂತಿ ನಿಷ್ಪಾಪಾ ದೃಷ್ಟ್ವಾಪಿ ಶಿವಪೂಜಕಂ ।
ಅತಶ್ಶಿವಾರ್ಚಕೋ ಧನ್ಯೋ ಭಾಗ್ಯವಾಂಶ್ಚ ನ ಸಂಶಯಃ ॥೪೧೫॥

ಉಪೇಂದ್ರಾದಿಕೃತಾಂ ಪೂಜಾಂ ಯದಿ ವಾಂಛತಿ ಮಾನವಃ ।
ತದಾ ಭಕ್ತ್ಯಾತಿಯತ್ನೇನ ಕರ್ತವ್ಯಂ ಶಿವಪೂಜನಂ ॥೪೧೬॥

ಶಿವಾರ್ಚನೇನ ಯಲ್ಲಭ್ಯಂ ತಲ್ಲಭ್ಯಂ ನಾನ್ಯಧರ್ಮತಃ ।
ಯದನ್ಯಧರ್ಮಲಭ್ಯಂ ಸ್ಯಾತ್ತಲ್ಲಭ್ಯಂ ಶಿವಪೂಜಯಾ ॥೪೧೭॥

ನರಾ ಭವಂತಿ ಭೂಪಾಲಾಃ ಶಂಕರಸ್ಯೈವ ಪೂಜಯಾ ।
ತ ಏವ ಲಬ್ಧ್ವಾ ವಿಷ್ಣುತ್ವಂ ಪ್ರಯಾಂತಿ ಶಿವರೂಪತಾಂ ॥೪೧೮॥

---

ಅಂತಹ ಶಿವಾರ್ಚಕನು ಜನಿಸುವುದಿಲ್ಲವೋ, ಆ ವಂಶೀಯರೆಲ್ಲಾ ದುಃಖದಿಂದ ಗೋಳಾಡುವರು ॥೪೧೧-೪೧೨॥

ಶಿವಲಿಂಗವನ್ನು ಯಾರು ಒಮ್ಮೆ ಕ್ಷೀರದಿಂದ ಅಭಿಷೇಕಮಾಡುವರೋ ಅವರು ಮತ್ತೆ ತಾಯಿಯ ಸ್ತನ್ಯವನ್ನೇ ಪಾನಮಾಡಲಾರರು. ಯಾರು ಮಹಾದೇವನಿಗೆ ಕ್ಷೀರಾಭಿಷೇಕಪುರಸ್ಸರವಾಗಿ ಬಿಲ್ವಾರ್ಚನೆಮಾಡುವರೋ ಅವರೇ ಧನ್ಯರು ; ಅವರೇ ಪವಿತ್ರಾತ್ಮರು. ॥೪೧೩-೪೧೪॥

ಶಿವಾರ್ಚಕನ ದರ್ಶನದಿಂದಲೇ ಮಾನವರು ಪಾಪವಿರಹಿತರಾಗುವರು. ಯಾರಿಗೆ ವಿಷ್ಣ್ವಾದಿದೇವತೆಗಳಿಂದ ಪೂಜೆಯನ್ನು ಸ್ವೀಕರಿಸಲು ಅಪೇಕ್ಷೆಯಿದೆಯೋ ಅಂತಹವರು ಪ್ರಯತ್ನಪೂರ್ವಕವಾಗಿ ಶಿವಾರ್ಚನೆಮಾಡಲೇಬೇಕು. ॥೪೧೫-೪೧೬॥

ಶಿವಪೂಜೆಯಿಂದ ದೊರಕುವ ಭೋಗಾದಿಗಳು ಮತ್ತಾವ ಧರ್ಮಾಚರಣೆಯಿಂದಲೂ ಲಭಿಸಲಾರದು. ಇತರ ಧರ್ಮಾನುಷ್ಠಾನಗಳಿಂದ ದೊರೆಯುವ ಸಕಲ ಸುಖಗಳೂ ಶಿವಾರ್ಚನೆಯಿಂದಲೇ ಲಭಿಸುವುವು ಶಂಕರಾರ್ಚನೆಯಿಂದಲೇ ಮಾನ

ಶಿವಾರ್ಚನಪ್ರಭಾವೋ ಯಃ ಸ ಕೇನ ಜ್ಞಾಯತೇ ಯತಃ ।
ವೇದೈರಪಿ ನ ವಿಜ್ಞಾತಃ ಸ ಪ್ರಭಾವೋಽಖಿಲಾರ್ಥದಃ ॥೪೧೯॥

ಶಿವಾರ್ಚಕಾಸ್ತ್ರಿಪುಂಡ್ರಾಂಕಾಃ ಶಿವಪಾರಿಷದೋಽಮಲಾಃ ।
ಉಪೇಂದ್ರಾದಿಶಿರೋರತ್ನರಂಜಿತಾಮಲಪಾದುಕಾಃ ॥೪೨೦॥

ನಮೋನಮಶ್ಶಾಂಭವೇಭ್ಯಃ ಶಾಂಭವೇಭ್ಯೋ ನಮೋನಮಃ ।
ನಮೋನಮಶ್ಶಾಂಭವೇಭ್ಯಃ ಪುನರ್ಭೂಯೋ ನಮೋನಮಃ ॥೪೨೦॥

ಭುವ್ಯಂತರಿಕ್ಷೇ ಪಾತಾಲೇ ಯೇ ಭವಿಷ್ಯಂತಿ ಶಾಂಭವಾಃ ।
ತೇಭ್ಯೋ ನಮೋ ನಮೋ ನಿತ್ಯಂ ನಮೋನಿತ್ಯಂ ನಮೋನಮಃ ॥೪೨೨॥

ಅಸ್ಮಾಭಿರೇತೇ ದೃಶ್ಯಂತೇ ಭಾಗ್ಯೇನ ಶಿವಪೂಜಕಾಃ ।
ಭೂರಿ ಭಾಗ್ಯಂ ವಿನಾಸ್ಮಾಕಂ ಕುತಶ್ಶಾಂಭವದರ್ಶನಂ ॥೪೨೩॥

ಯಂ ದೃಷ್ಟ್ವಾ ಶಾಂಕರಂ ದೇವಾ ವಿಷ್ಣುಬ್ರಹ್ಮಾದಯೋ ಮುದಾ ।
ಪ್ರಣಮಂತ್ಯತಿಯತ್ನೇನ ಸ ಏಷಶ್ಶಾಂಕರೋತ್ತಮಃ ॥೪೨೪॥

---

ವರು ರಾಜರಾಗಿ ಜನಿಸಿ, ಅನಂತರ ವಿಷ್ಣುಪದವಿಯನ್ನು ಹೊಂದಿ ಹಾಗೆಯೇ ಶಿವಸಾಯುಜ್ಯವನ್ನು ಹೊಂದುವರು. ॥೪೧೭-೪೧೮॥

ಶಿವಾರ್ಚನೆಯ ಪ್ರಭಾವವು ಯಾರಿಗೂ ಸಾಮಾನ್ಯವಾಗಿ ತಿಳಿಯಲಾರದು. ಸರ್ವಾರ್ಥಪ್ರದವಾದ ನಾಲ್ಕು ವೇದಗಳಿಗೂ ಅದು ಗೋಚರಿಸದಂತಿದೆ. ಶಿವಾರ್ಚಕರು ಭಸ್ಮತ್ರಿಪುಂಡ್ರವನ್ನಿಟ್ಟು ಈಶ್ವರನ ದಿವ್ಯಸಭೆಯಲ್ಲಿ ಮಂಡಿಸುವರು. ವಿಷ್ಣುವೇ ಮೊದಲಾದ ದೇವಶ್ರೇಷ್ಠರ ಕಿರೀಟಗಳಲ್ಲಿರುವ ರತ್ನಗಳ ಕಾಂತಿಯಿಂದ ಅವರ ಪಾದವು ಪ್ರಕಾಶಿತವಾಗಿರುವುದು ॥೪೧೯-೪೨೦॥

ಅನೇಕ ಪುಣ್ಯರಾಶಿಗಳಿಂದ ಶಂಭುಮೂರ್ತಿಗಳೆನಿಸಿದ ಮಹಾತ್ಮರಿಗೆ ಶತತಃ ನಮಸ್ಕಾರ ಭೂವ್ಯಂತರಿಕ್ಷಪಾತಾಳಲೋಕಗಳಲ್ಲಿರುವ ಸಮಸ್ತ ಶಾಂಭವರಿಗೂ ವಂದನೆ. ನಿತ್ಯವೂ ಅವರಿಗೆರಗುವೆನು. ॥೪೨೧-೪೨೨॥

ನಮ್ಮ ಪುಣ್ಯವಶದಿಂದ ಇಂತಹವರ ದರ್ಶನಭಾಗ್ಯವು ನಮಗೆ ದೊರೆತಿದೆ. ನಿರ್ಭಾಗ್ಯರಿಗೆ ಇದು ಎಂದೂ ದೊರೆಯುವುದಲ್ಲ. ಬ್ರಹ್ಮವಿಷ್ಣ್ವಾದಿ ದೇವತೆಗಳು

ಯಸ್ಯ ಶಾಂಕರವರ್ಯಸ್ಯ ಪಾದಾಂಬುಜರಜಃಕಣಾನ್ ।
ದದಾತಿ ಶಿರಸಾ ವಿಷ್ಣುಃ ಸ ವಿಷಶ್ಯಾಂಕರೋತ್ತಮಃ ॥೪೨೫॥

ಅನಂತಜನ್ಮಪರ್ಯಂತಂ ಯೇ ತಪೋದಾನತತ್ಪರಾಃ ।
ತೈರಂತ್ಯತನುಭಿರ್ಭಕ್ತ್ಯಾ ಕ್ರಿಯತೇ ಶಿವಪೂಜನಂ ॥೪೨೬॥

ಅನಂತದಾನಧರ್ಮಾಣಾಮನಂತತಪಸಾಮಪಿ ।
ಫಲಂ ಶ್ರುತಿಶ್ರುತಂ ಸಾಕ್ಷಾದಂತಕಾಲೇ ಶಿವಾರ್ಚನಂ ॥೪೨೭॥

ಯೇನ ಕೇನಾಪಿ ರೂಪೇಣ ಯಸ್ಯ ಕಸ್ಯಾಪಿ ದೇಹಿನಃ ।
ಯದ್ಯಂತೇ ಶಿವಪೂಜಾ ಸ್ಯಾತ್ಸ ಮುಕ್ತೋ ಭವತಿ ಧ್ರುವಂ ॥೪೨೮॥

॥ ಅಗಸ್ತ್ಯ ಉವಾಚ ॥

ಇತಿ ತದ್ವಚನಂ ಶ್ರುತ್ವಾ ತದಾ ಯಮಸಭಾಸದಃ ।
ತಂ ಪ್ರಣಮ್ಯಾತಿಯತ್ನೇನ ಚಕ್ರುಃ ಪೂಜಾಂ ವಿಧಾನತಃ ॥೪೨೯॥

ಸಹ ಇವರನ್ನು ನೋಡಿ ನಮಸ್ಕರಿಸುವರು. ಅವನಲ್ಲವೇ ಶಂಭುಮೂರ್ತಿ. ||೪೨೩-೪೨೪||

ಯಾವನ ಪಾದಧೂಳಿಯನ್ನು ವಿಷ್ಣುವೂ ಸಹ ಭಕ್ತಿಯಿಂದ ತನ್ನ ತಲೆಯಲ್ಲಿ ಧರಿಸುವನೋ ಅವನೇ ಶಾಂಕರಶ್ರೇಷ್ಠನು. ಅನೇಕ ಜನ್ಮಗಳಲ್ಲಿ ಧ್ಯಾನ, ತಪಸ್ಸು, ಅನುಷ್ಠಾನ ಮುಂತಾದುವುಗಳನ್ನು ನಡೆಸಿ, ತತ್ಫಲವಾಗಿ ಶಿವಪೂಜೆಯನ್ನು ಮಾಡಿದವರು, ಆದರಿಂದ ಪುನರ್ಜನ್ಮವಿಲ್ಲದ ಶಾಶ್ವತ ಸ್ಥಿತಿರೂಪವಾದ ಮುಕ್ತಿಯನ್ನು ಪಡೆಯುವರು ||೪೨೫-೪೨೬||

ಅನೇಕ ದಾನಧರ್ಮಗಳ ಮತ್ತು ವಿಧವಿಧವಾದ ತಪಶ್ಚರ್ಯೆಗಳ ಫಲವಾಗಿ ದೊರೆಯುವುದೆಂದರೆ ಮರಣಕಾಲದಲ್ಲಿ ಶಿವಾರ್ಚನೆಯೇ. ಇದು ವೇದಪ್ರಸಿದ್ಧವಾದುದು. ಒಟ್ಟಿನಲ್ಲಿ ಯಾವ ಕಾರಣದಿಂದಲಾದರೂ ಕೊನೆಯಲ್ಲಿ ಶಿವಪೂಜೆಯು ನಡೆದುದಾದರೆ, ಅದರಿಂದ ಶಾಶ್ವತಮುಕ್ತಿಯು ಲಭಿಸುವುದು ನಿಶ್ಚಯ "||೪೨೭-೪೨೮||

ಹೀಗೆಂದ ಯಮನ ಮಾತುಗಳನ್ನು ಕೇಳಿ, ಅವನ ಸಭೆಯಲ್ಲಿದ್ದ ಸಭ್ಯರೆಲ್ಲರೂ, ಅವನಿಗೆರಗಿ ಬಹುವಾಗಿ ಪೂಜೆಯನ್ನೆಸಗಿದರು. ಅನಂತರ ಆತನು

ತತಸ್ಸಂಜಾತೋ ಭೂಪಾಲೋ ಭುಕ್ತ್ವೇಂದ್ರಾದಿಪದಾನ್ಯಪಿ ।
ಸಂಪ್ರಾಪ ಶಿವಸಾಯುಜ್ಯಂ ಶಿವಪೂಜಾಪ್ರಭಾವತಃ ॥೪೩೦॥

ಅತೋಽನ್ವಹಂ ಪ್ರಯತ್ನೇನ ಕರ್ತವ್ಯಂ ಶಿವಪೂಜನಂ ।
ಸ್ಮರ್ತವ್ಯಶ್ಚ ಮಹಾದೇವಃ ಸಾವಧಾನೇನ ಸಂತತಂ ॥೪೩೧॥

ಇತ್ಯಗಸ್ತ್ಯವಚಶ್ಶ್ರುತ್ವಾ ತಮಗಸ್ತ್ಯಂ ಸನಾತನಃ ।
ಪ್ರಣಮ್ಯ ವಿಧಿವತ್ತಸ್ಮೈ ಚಕಾರಾಭ್ಯರ್ಚನಂ ಮುದಾ ॥೪೩೨॥

ಸ ತತಸ್ತದನುಜ್ಞಾತೋ ಶ್ರೀ ಮಧ್ಯಾರ್ಜುನನಾಯಕಂ ।
ದ್ರಷ್ಟುಂ ಯಯೌ ಬಿಲ್ವಪಾಣಿರ್ಹೃಷ್ಟಚಿತ್ತೋ ನೃಪೋತ್ತಮ ॥೪೩೩॥

ತತಸ್ಸನಾತನೋ ಭಕ್ತ್ಯಾ ಚಕಾರೋಗ್ರಂ ತಪೋನಯಾ ।
ಉದ್ಧೂಲನತ್ರಿಪುಂಡ್ರಾಭ್ಯಾಂ ಭೂಷಿತಶ್ಶಿವಪೂಜಕಃ ॥೪೩೪॥

ತತಃ ಪ್ರಸನ್ನೋ ಭಗವಾನ್ ತಸ್ಮೈ ದೇವೋತ್ತಮಶ್ಶಿವಃ ।
ಪ್ರಸನ್ನೇ ಸತಿ ಗೌರೀಶೇ ತುಷ್ಟ್ವಾವಾಭ್ಯರ್ಚ್ಯ ಶಂಕರಂ

ವರಂ ಯಯಾಚೇ ತದನು ಕಾಶೀಂ ಪ್ರಾಪಯ ಶಂಕರ ।
ವರೋಽಯಮುತ್ತಮಃ ಶಂಭೋ ನಾಹಂ ಯಾಚೇ ವರಾಂತರಂ ॥೪೩೬॥

---

ರಾಜನಾಗಿ ಹುಟ್ಟಿ ಹಾಗೆಯೇ ಇಂದ್ರಾದಿ ಪದವಿಗಳಲ್ಲಿದ್ದು ಸುಖಾನುಭವಮಾಡಿ ಕೊನೆಗೆ ಶಿವಸಾಯುಜ್ಯವನ್ನು ಪಡೆದನು. ॥೪೨೯-೪೩೦॥

ಆದ್ದರಿಂದ ನಿತ್ಯವೂ ಶಂಕರನನ್ನು ಪೂಜಿಸಬೇಕು. ಸದಾ ಸ್ಥಿರಮನಸ್ಸಿನಿಂದ ಧ್ಯಾನಿಸಬೇಕು" ಎಂದು ಹೇಳಿದ ಅಗಸ್ತ್ಯರಮಾತನ್ನು ಕೇಳಿ ಸನಾತನನು ಮತ್ತೆ ಆ ಋಷಿಗೆ ನಮಸ್ಕಾರಪೂರ್ವಕವಾಗಿ ಪೂಜೆಯನ್ನೆಸಗಿದನು. ॥೪೩೧-೪೩೨॥

ಅನಂತರ ಅಗಸ್ತ್ಯಮಹರ್ಷಿಯು ಈ ರಾಜನಿಂದ ಅನುಜ್ಞೆಪಡೆದು ಮಧ್ಯಾರ್ಜುನಕ್ಷೇತ್ರಕ್ಕೆ ಪ್ರಯಾಣಮಾಡಿದನು. ಇತ್ತ ಸನಾತನನೆಂಬ ರಾಜನು, ಭಸ್ಮೋದ್ಧೂಲನತ್ರಿಪುಂಡ್ರಗಳಿಂದ ದೇಹವನ್ನಲಂಕರಿಸಿಕೊಂಡು ಉಗ್ರತಪಸ್ಸಿಗಾರಂಭಿಸಿದನು. ॥೪೩೩-೪೩೪॥

ಆ ತಪಸ್ಸಿಗೆ ಮೆಚ್ಚಿದ ಮಹಾದೇವನು ಪ್ರತ್ಯಕ್ಷನಾದನು. ಆಗ ರಾಜನು ಶಂಕರನನ್ನು ಬಹುವಾಗಿ ಸ್ತುತಿಸಿ ವರವನ್ನು ಕೇಳಲುದ್ಯುಕ್ತನಾಗಿ ಕಾಶೀವಾಸವನ್ನು

ಇತ್ಯುಕ್ತೆಮತಿಭಕ್ತಸ್ಯ ಶ್ರುತ್ವಾ ವಚನಮೀಶ್ವರಃ ।
ತಥಾಸ್ತ್ವಿತಿ ತಮುಕ್ತ್ವೇಶಸ್ತತ್ರೈವಾಂತರ್ದಧೇ ನೃಪ ॥೪೩೭॥

ತತಸ್ಸನಾತನಃ ಪ್ರಾಪ ಕಾಶೀಂ ವಿಶ್ವೇಶ್ವರಾಶ್ರಯಾಂ ।
ಸಂಪ್ರಾಪ್ಯ ಮುಕ್ತಸ್ತತ್ರೈವ ವಿಶ್ವೇಶಾನುಗ್ರಹಾನ್ನೃಪ ॥೪೩೮॥

ಸ ಬಾಲಕೋಽಪ್ಯಗಸ್ತ್ಯಸ್ಯ ಶ್ರುತ್ವಾ ವಚನಮಾದರಾತ್ ।
ಚಕಾರ ತದನುಜ್ಞಾತೋ ಮೃತ್ತಿಕಾಲಿಂಗಪೂಜನಂ ॥೪೩೯॥

ಸ ತು ವತ್ಸರಪರ್ಯಂತಂ ಕೃತ್ವಾ ಮೃಲ್ಲಿಂಗಪೂಜನಂ ।
ಮಹದೈಶ್ವರ್ಯಮಪ್ರಾಪ್ಯ ದುಃಖಿತೋಽರಣ್ಯಮಾಶ್ರಿತಃ ॥೪೪೦॥

ತತ್ರ ಗತ್ವಾ ರುರೋದೋಚ್ಚೈಃ ಕ್ಷುತ್ಪಿಪಾಸಾತುರೋಽರ್ಭಕಃ ।
ತದಾ ತಮಾಹ ತನ್ಮಾತಾ ತತ್ರ ಗತ್ವಾ ವಿವೇಕಿನೀ ॥೪೪೧॥

ರೇರೇ ಬಾಲಕ ಮಾರೋದೀಃ ಧೈರ್ಯಮಾವಹ ಪೌರುಷಂ ।
ಅಧೈರ್ಯೇಣ ಕೃತೇ ದುಃಖೇಽಪ್ಯರ್ಥಸಿದ್ಧಿರ್ನ ಸರ್ವಥಾ ॥೪೪೨॥

ಕರುಣಿಸಬೇಕೆಂದು ಬೇಡಿಕೊಂಡನು. ಇದು ಹೊರತು ವರಾಂತರದಲ್ಲಿ ಅಪೇಕ್ಷೆಯಿಲ್ಲ ವೆಂದೂ ಸೂಚಿಸಿದನು. ||೪೩೫-೪೩೬||

ಹಾಗೆ ಕೇಳಿಕೊಂಡ ಸನಾತನನ ಕೋರಿಕೆಯನ್ನು ನೆರವೇರಿಸಿ ಮಹಾದೇವನು ಅಲ್ಲಿಯೇ ಮಾಯವಾದನು. ಅವನ ಅನುಗ್ರಹದಿಂದ ಸನಾತನನು ಕಾಶಿಯನ್ನು ಸೇರಿ, ಅಲ್ಲಿಯೂ ವಿಶ್ವೇಶಾನುಗ್ರಹವನ್ನು ಸಂಪಾದಿಸಿ ಅಲ್ಲಿಯೇ ಮುಕ್ತನಾದನು. ||೪೩೭-೪೩೮||

ಆ ಹುಡುಗನಾದರೋ ಅಗಸ್ತ್ಯಮಹರ್ಷಿಯ ವಚನವನ್ನು ಪರಿಪಾಲಿಸಿ, ಅವನ ಅಪ್ಪಣೆಯಂತೆಯೇ ಒಂದುವರ್ಷ ಪರ್ಯಂತ ಮೃನ್ಮಯವಾದ ಶಿವಲಿಂಗಾರಾಧನೆಮಾಡಿ ಯಾವ ವಿಧವಾದ ಐಶ್ವರ್ಯವನ್ನೂ ಪಡೆಯದೆ, ಉದ್ವೇಶಗೊಂಡು ಗೊಂಡಾರಣ್ಯವನ್ನು ಪ್ರವೇಶಿಸಿದನು. ||೪೩೯-೪೪೦||

ಅಲ್ಲಿ ಹಸಿವು ಬಾಯಾರಿಕೆಗಳಿಂದ ಪೀಡಿತನಾಗಿ ಗಟ್ಟಿಯಾಗಿ ಅಳಲಾರಂಭಿಸಿದನು. ಆಗ ಅವನ ತಾಯಿಯು, ಮಗನ ಸಮೀಪಕ್ಕೆ ಹೋಗಿ "ಮಗುವೇ,

ಇತಿ ತದ್ವಚನಂ ಶ್ರುತ್ವಾ ಬಾಲಸ್ತಾಮಾಹ ದುಃಖಿತಃ ।
ಕೃತಲಿಂಗಾರ್ಚನಸ್ಯಾಪಿ ಸೌಭಾಗ್ಯಂ ನ ಮಮಾಭವತ್ ॥೪೪೩॥

ಅಗಸ್ತ್ಯವಚನಂ ಶ್ರುತ್ವಾ ಮಯಾ ಯತ್ನೇನ ಸಾದರಂ ।
ಶಿವಪೂಜಾ ಕೃತಾ ಮಾತಃ ಸಾ ನಾಸೀದ್ಭಾಗ್ಯದಾಯಿನೀ ॥೪೪೪॥

ಸೌಭಾಗ್ಯಮೇವ ನ ಪ್ರಾಪ್ತಂ ಕೃತಯಾ ಶಿವಪೂಜಯಾ ।
ಮುಕ್ತಿರಂತೇ ಕಥಂ ಪ್ರಾಪ್ತಾ ಸಾ ದುರ್ಲಭತರಾ ಯತಃ ॥೪೪೫॥

ಅದಾಹಕೋಽಗ್ನಿತೂಲಸ್ಯ ಕಿಂ ಮಹಾಗಿರಿದಾಹಕಃ ।
ದಾರಿದ್ರ್ಯದಾಹಕಾ ಪೂಜಾ ಕ್ವ ಸಂಸಾರಂ ದಹಿಷ್ಯತಿ ॥೪೪೬॥

॥ ದಧೀಚಿರುವಾಚ ॥

ಇತ್ಯುಕ್ತವಂತಂ ಮೋಹೇನ ತಂ ಬಾಲಂ ಭ್ರಾಂತಚೇತಸಂ ।
ಭ್ರಾಂತಬಾಲವಚಶ್ಶ್ರುತ್ವಾ ತಮಾಹ ಜನನೀ ತದಾ ॥೪೪೭॥

ಸುದತ್ಯುವಾಚ

ರೇರೇ ಬಾಲಕ ದುರ್ವೃತ್ತ ಕಥಮೇವಂ ತ್ವಯೋಚ್ಯತೇ ।
ಏವಂ ನೈವೋಚ್ಯತೇ ಲೋಕೇ ಕೇನಾಪಿ ದ್ವಿಜಜನ್ಮನಾ ॥೪೪೮॥

ಅಳಬೇಡ, ವೃಥಾ ಭಯಪಡಬೇಡ, ಅಧೈರ್ಯದಿಂದ ಯಾವಕೆಲಸಮಾಡಿದರೂ ಅದು ಫಲಕಾರಿಯಾಗಲಾರದು" ಎಂದಳು. ||೪೪೧-೪೪೨||

ಅದನ್ನು ಕೇಳಿ ಆ ಮಗನು "ಅಯ್ಯೋ, ನಾನು ಅಗಸ್ತ್ಯಮಹರ್ಷಿಯ ಮಾತಿನಂತೆ ವರ್ಷಪರ್ಯಂತ ಶಿವಪೂಜೆ ಮಾಡಿದೆನು. ಆದರೂ ನನಗೆ ಯಾವ ಐಶ್ವರ್ಯವೂ ದೊರಕಲಿಲ್ಲ; ಇದು ನನ್ನ ದುರದೃಷ್ಟವಲ್ಲವೆ! ||೪೪೩-೪೪೪||

ಈಗ ಐಶ್ವರ್ಯವೇ ದೊರೆಯದಿರುವಾಗ, ಇನ್ನು ಮುಕ್ತಿಯು ಲಭಿಸುವುದು ಸಾಧ್ಯವೇ. ಹತ್ತಿಯನ್ನು ಸುಡಲಾರದ ಬೆಂಕಿಯು ಪರ್ವತವನ್ನು ದಹಿಸೀತೆ? ಐಶ್ವರ್ಯವನ್ನು ಕೊಡಲಾರದ ಪೂಜೆಯು ಮುಕ್ತಿಯನ್ನು ಕೊಟ್ಟೀತೆ? ನನಗೇನೋ ಅನುಮಾನವಾಗಿದೆ" ಎಂದು ಹೇಳಿದ ಮಗನ ಮಾತುಗಳನ್ನು ಕೇಳಿ ತಾಯಿಯಾದ ಸುದತಿಯು ಹೀಗೆಂದಳು. ||೪೪೫-೪೪೬-೪೪೭||

" ಎಲೈ ದುರ್ಬುದ್ಧಿಯೇ, ನೀನು ಹೀಗೆನ್ನುವುದು ಉಚಿತವಲ್ಲ. ಈ ಮಾತನ್ನು

ಬಾಲಕೋಽಸಿ ಯತೋ ಭ್ರಾಂತಸ್ತತ ಏವಂ ತ್ವಯೋಚ್ಯತೇ ।
ಅನ್ಯೇ ತು ನ ವದಂತ್ಯೇವಂ ಧೀರಾ ವಿಗತಕಲ್ಮಷಾಃ ॥೪೪೯॥

ಅವಶ್ಯಂ ಪ್ರಾಪ್ಯತೇಽಭೀಷ್ಟಂ ಶಿವಲಿಂಗಾರ್ಚನಾತ್ಸುತ ।
ಅಸ್ಮಿನ್ನರ್ಥೇ ಶ್ರುತೇರ್ಮಾನಮತ್ರ ನಾಸ್ತ್ಯೇವ ಸಂಶಯಃ ॥೪೫೦॥

ಧರ್ಮಾನ್ ಕುರ್ವಂತಿ ವಿವಿಧಾಂ ಶ್ರುತಿಪ್ರಾಮಾಣ್ಯವಾದಿನಃ ।
ಶ್ರುತಿರೇವ ಯತಸ್ಸಾಕ್ಷಾತ್ಸ್ವಯಂ ಧರ್ಮಪ್ರವರ್ತಿಕಾ ॥೪೫೧॥

ಪ್ರವರ್ತಯತಿ ಧರ್ಮೇಷು ಶ್ರುತಿರ್ಧರ್ಮಪರಾಯಣಾನ್ ।
ನಿವರ್ತಯತ್ಯಧರ್ಮೇಭ್ಯಃ ಸೈವಾಧರ್ಮಪರಾಙ್ಮುಖಾನ್ ॥೪೫೨॥

ಶ್ರುತ್ಯುಕ್ತಂ ಕರ್ಮ ಕರ್ತವ್ಯಂ ಶ್ರುತಿಪ್ರಾಮಾಣ್ಯವಾದಿಭಿಃ ।
ಶ್ರುತ್ಯುಕ್ತಂ ಕರ್ಮ ಕಾಲೇನ ಫಲಂ ದಾಸ್ಯತ್ಯಸಂಶಯಃ ॥೪೫೩॥

ಶ್ರುತ್ಯುಕ್ತಂ ಕರ್ಮ ಶುಚಿನಾ ಯದಿ ಸಾಂಗಂ ಕೃತಂ ಭವೇತ್ ।
ತದಾ ಸದ್ಯಃ ಫಲತ್ಯೇವ ತತ್ಕರ್ಮ ಶ್ರುತಿಚೋದಿತಂ ॥೪೫೪॥

---

ದ್ವಿಜನಾದವನು ಹೇಳಬಾರದು. ನೀನು ಕೇವಲ ಬಾಲಕನು. ಅಜ್ಞಾನಿಯೆನಿಸಿದ್ದೀಯೆ. ಜ್ಞಾನಿಗಳು ಎಂದೂ ಹೀಗೆ ಹೇಳುವುದಿಲ್ಲ. ಶಿವಲಿಂಗಾರ್ಚನೆಯಿಂದಲೇ ಸಕಲಾಭೀಷ್ಟಗಳೂ ಸಿದ್ಧಿಸುವುವೆಂದು ಸರ್ವರೂ ಹೇಳುವರು. ವೇದವೂ ಇದಕ್ಕೆ ನಿದರ್ಶಕವಾಗಿದೆ. ಇದರಲ್ಲಿ ನೀನು ಸಂಶಯಪಡಬೇಡ. ॥೪೪೮-೪೪೯-೪೫೦॥

ವೇದವಾಕ್ಯಗಳನ್ನು ನಂಬುವವರು, ಶ್ರುತ್ಯುಕ್ತವಾದ ವಿವಿಧ ಧರ್ಮಕಾರ್ಯಗಳಲ್ಲಿಯೂ ತೊಡಗುವರು. ಏಕೆಂದರೆ ಧರ್ಮಪ್ರವರ್ತಕವಾದದ್ದು ಶ್ರುತಿಯೇ. ಶ್ರುತಿಯು ಧರ್ಮಕಾರ್ಯಗಳಲ್ಲಿ ಆಸಕ್ತಿಯನ್ನೂ, ಪಾಪಕರ್ಮಗಳಲ್ಲಿ ಅನಾಸಕ್ತಿಯನ್ನೂ ಉಂಟುಮಾಡಿ ಜನರನ್ನು ಆಸ್ತಿಕರನ್ನಾಗಿ ಮಾಡುವುದು. ॥೪೫೧-೪೫೨॥

ವೇದಪ್ರಾಮಾಣ್ಯವಾದಿಗಳಾದ ಆಸ್ತಿಕರು ವೇದೋಕ್ತವಾದ ಕರ್ಮಗಳನ್ನು ಅನುಷ್ಠಾನಮಾಡಬೇಕು. ಆ ಕರ್ಮಗಳು, ವಿಧ್ಯುಕ್ತರೀತಿಯಲ್ಲಿ ಸಾಂಗವಾಗಿ ನಡೆದದ್ದೇ ಆದರೆ, ಅದು ವೇದೋಕ್ತವಾದ ಸಕಲ ಫಲವನ್ನು ಅವಶ್ಯಕವಾಗಿ ಕೊಟ್ಟೇ ಕೊಡುವುದು. ॥೪೫೩-೪೫೪॥

ವ್ಯಂಗಂ ಯದಿ ಭವೇತ್ಕರ್ಮ ತದಾ ನ ಫಲದಾಯಕಂ ।
ಸಾಂಗಮೇವ ಕೃತಂ ಕರ್ಮ ಶ್ರೌತಂ ಯಸ್ಮಾತ್ಫಲಪ್ರದಂ ॥೪೫೫॥

ಫಲಂ ಭವತ್ಯವಶ್ಯಂ ಹಿ ಸಾಂಗೇನ ಶ್ರೌತಕರ್ಮಣಾ ।
ಅಸ್ಮಿನ್ನರ್ಥೇ ನ ಸಂದೇಹಸ್ತತ್ರ ಮಾನಂ ಶ್ರುತಿರ್ಯತಃ ॥೪೫೬॥

ಅತಶ್ಶಿವಾರ್ಚನಂ ಶ್ರೌತಂ ಸಾಂಗಂ ಚೇತ್ಕ್ರಿಯತೇ ತದಾ ।
ಸದ್ಯಸ್ಸಮಸ್ತಸ್ವಾಭೀಷ್ಟಫಲದಂ ತದ್ಭವಿಷ್ಯತಿ ॥೪೫೭॥

ನಿಯಮಾಸ್ಸಂತಿ ಬಹವಃ ಶಿವಲಿಂಗಾರ್ಚನೇ ಶಿಶೋ ।
ತೇ ಶಿಶುತ್ವಾತ್ತ್ವಯಾ ಕರ್ತುಂ ನ ಶಕ್ಯಂತೇ ನ ಸಂಶಯಃ ॥೪೫೮॥

ವಿದಿತ್ವಾ ನಿಯಮಾಂತ್ಸರ್ವಾನ್ವಿಧಾನಂ ಚ ಶಿವಾರ್ಚನೇ ।
ಶಿವಾರ್ಚನಂ ಕುರುಷ್ವಾದ್ಯ ಶಿವಸ್ತುಷ್ಟೋ ಭವಿಷ್ಯತಿ ॥೪೫೯॥

ವ್ಯಂಗಾಪಿ ಶಿವಪೂಜಾ ಸಾ ಕಾಲೇನ ಫಲದಾ ಧ್ರುವಂ ।
ಸಾಂಗಾ ಚೇಚ್ಛಿವಪೂಜಾ ಸಾ ಸದ್ಯಃ ಸರ್ವಫಲಪ್ರದಾ ॥೪೬೦॥

ಒಂದುವೇಳೆ ಆ ಕರ್ಮವು ಅಂಗಸಹಿತವಾಗಿ ನಡೆಯದಿದ್ದರೆ, ಆಗ ಆ ಫಲವು ನಮಗೆ ಲಭಿಸಲಾರದು. ಸಾಂಗವಾಗಿ ಆಚರಿತವಾದ ಶ್ರುತಿಕರ್ಮವು ನಿಜವಾಗಿಯೂ ಫಲಕೊಡುವುದರಲ್ಲಿ ಅನುಮಾನಪಡಬೇಕಾದುದಿಲ್ಲ. ॥೪೫೫-೪೫೬॥

ಶ್ರುತ್ಯುಕ್ತವಾದ ಶಿವಾರ್ಚನೆಯು ಸಾಂಗವಾಗಿ ನಡೆದಿದ್ದರೆ, ನಿನ್ನ ಇಷ್ಟಾರ್ಥಗಳೆಲ್ಲವೂ ಸಿದ್ಧಿಸುತ್ತಿದ್ದವು. ಆ ಶಿವಾರ್ಚನೆಗೆ ಅನೇಕ ನಿಯಮಗಳಿವೆ. ನೀನು ಬಾಲಕನಾದ್ದರಿಂದ ಅವೆಲ್ಲವನ್ನೂ ನಡೆಸಲು ನಿನಗೆ ಶಕ್ತಿಯಿಲ್ಲವಾಗಿದೆ. ಅದರಿಂದಲೇ ನಿನ್ನ ಇಷ್ಟಾರ್ಥವು ನೆರವೇರಲಿಲ್ಲ ॥೪೫೭-೪೫೮॥

ಆದ್ದರಿಂದ ಈಗ ನೀನು ಶಿವಾರ್ಚನೆಯ ವಿಧಾನವನ್ನೆಲ್ಲಾ ಪೂರ್ಣವಾಗಿ ತಿಳಿದು ಸ್ವಾಮಿಯನ್ನು ಪೂಜಿಸು. ಪೂಜಾದಿಗಳಲ್ಲಿ ಒಂದೆರಡುಭಾಗ ಲೋಪವಾದರೂ, ಶಿವಪೂಜಾಫಲವು ಅಲ್ಪಕಾಲವಿಳಂಬದಿಂದ ಸಿದ್ಧಿಸುವುದು. ಸಾಂಗವಾಗಿ ನೆರವೇರಿದ ಶಿವಾರ್ಚನೆಯು ಸದ್ಯಃ ಫಲದಾಯಕವಾಗುವುದೆಂದು ತಿಳಿ. ॥೪೫೯-೪೬೦॥

ಸಾಂಗಂ ಯಃ ಕುರುತೇ ಭಕ್ತ್ಯಾ ಶಿವಲಿಂಗಾರ್ಚನಂ ಶಿಶೋ ।
ಸ ಧರ್ಮಾದಿಫಲಾಧ್ಯಕ್ಷೋ ಭವತ್ಯೇವ ನ ಸಂಶಯಃ ॥೪೬೧॥

ಯಃ ಪೂಜಯತಿ ಗೌರೀಶಂ ಲಿಂಗರೂಪಿಣಮಾಸ್ತಿಕಃ ।
ತಮೇವಾತಿಪ್ರಯತ್ನೇನ ಸೌಭಾಗ್ಯಮನುಧಾವತಿ ॥೪೬೨॥

ಪುರಾ ಶಿವಾರ್ಚನೇನೈವ ವಿಷ್ಣುನಾಮಿತತೇಜಸಾ ।
ಲಕ್ಷ್ಮೀಃ ಪ್ರಾಪ್ತಾ ತಯಾ ವಿಷ್ಣುಃ ಸುಖೀ ತಿಷ್ಠತಿ ಸರ್ವದಾ ॥೪೬೩॥

ವಿಷ್ಣೋಃ ಶಿವಪ್ರಸಾದೇನ ಮೋಕ್ಷೋಽಪ್ಯಗ್ರೇ ಭವಿಷ್ಯತಿ ।
ಯತಃ ಶಿವಾರ್ಚನಫಲಂ ಭುಕ್ತಿರ್ಮುಕ್ತಿಶ್ಚ ಶಾಶ್ವತೀ ॥೪೬೪॥

ಸರ್ವದೇವೋತ್ತಮಸ್ಸಾಂಬೋ ಭುಕ್ತಿಮುಕ್ತಿಪ್ರದಶ್ಶಿವಃ ।
ಅಪಾರಕರುಣಾಸಿಂಧುರ್ದೀನಬಂಧುಸ್ತಮರ್ಚಯ ॥೪೬೫॥

ಕಾಲತ್ರಯೇಽಪಿ ದುಃಖಾನಿ ನ ಶಿವಾಸಕ್ತಚೇತಸಾಂ ।
ಅತೋ ವಿಧಿವದಾರಾಧ್ಯಮಾರಾಧಯ ಮಹೇಶ್ವರಂ ॥೪೬೬॥

ಮಗುವೇ, ಯಾರು ಸಾಂಗವಾಗಿ ಶಿವಾರಾಧನೆಯನ್ನು ನೆರವೇರಿಸುವರೋ, ಅವರು ಧರ್ಮಕಾರ್ಯಗಳಿಗೆ ಅಧ್ಯಕ್ಷರೆನಿಸುವರು. ಲಿಂಗರೂಪಿಯಾದ ಪರಶಿವನನ್ನು ಪೂಜಿಸುವ ಭಕ್ತರನ್ನು ಸಕಲ ಸೌಭಾಗ್ಯಗಳೂ ತಾನೇ ಅನುಸರಿಸಿಕೊಂಡು ಬರುವುವು. ||೪೬೧-೪೬೨||

ಈಶ್ವರಾರ್ಚನೆಯಿಂದ ಭುಕ್ತಿ, ಮುಕ್ತಿ ಇವೆರಡೂ ಲಭಿಸುವುವು. ಅದರಿಂದಲೇ ವಿಷ್ಣುವು ಶಂಕರನನ್ನು ಅರ್ಚಿಸಿ, ಲಕ್ಷ್ಮೀದೇವಿಯನ್ನು ಪಡೆದು, ಸಕಲಸುಖವನ್ನೆಲ್ಲಾ ಅನುಭವಿಸಿದನು. ಹಾಗೆಯೇ ಮುಂದೆ ವಿಷ್ಣುವಿಗೆ ಮೋಕ್ಷವೂ ಲಭಿಸುವುದೆಂದು ತಿಳಿ. ||೪೬೩-೪೬೪||

ಪರಶಿವನು ದೇವದೇವನು, ಭುಕ್ತಿಮುಕ್ತಿಪ್ರದನು, ದಯಾಸಮುದ್ರನು, ದೀನಬಂಧುವು, ಅವನನ್ನು ಅರ್ಚಿಸಿದವರಿಗೆ ಯಾವಕಾಲಕ್ಕೂ ಸಂಸಾರದುಃಖಗಳು ಪೀಡಿಸಲಾರವು. ಆದ್ದರಿಂದ ನೀನು ಮಹಾದೇವನನ್ನು ಬಿಡದೆ ಆರಾಧಿಸುತ್ತಿರು. ಸರ್ವಪೂಜ್ಯನೆನಿಸಿದ ಮಹಾದೇವನು ನಿನ್ನ ಇಷ್ಟಾರ್ಥಗಳನ್ನು ನೆರವೇರಿಸುವನು. ||೪೬೫-೪೬೬||

ಮಹೇಶ್ವರಶ್ಚೇದ್ದುಃಖಾನಿ ನ ನಾಶಯತಿ ತೇ ತದಾ ।
ಕಃ ಸಮರ್ಥಸ್ತದನ್ಯಃ ಸ್ಯಾತ್ತವ ದುಃಖನಿವಾರಣೇ ॥೪೬೭॥

ಸರ್ವೇಷಾಮಪಿ ದುಃಖಾನಿ ವಿನಾಶಯತಿ ಶಂಕರಃ ।
ಸ ಕಿಂ ತ್ವದೀಯದುಃಖಾನಿ ನ ನಾಶಯತಿ ಶಂಕರಃ ॥೪೬೮॥

ಶಂಕರಶ್ಶಂಕರೋ ಯಸ್ಮಾದತಶ್ಶಂ ತೇ ಪ್ರಯಚ್ಛತಿ ।
ಶಂಕರಂ ಸಾವಧಾನೇನ ಸಮಾರಾಧಯ ಸಾದರಂ ॥೪೬೯॥

ಉಪೇಂದ್ರಾದಯಃ ಪೂರ್ವಂ ಸಮಭ್ಯರ್ಚ್ಯ ಮಹೇಶ್ವರಂ ।
ಜಾತಾಃ ಕೃತಾರ್ಥಾಸ್ತ್ವಂ ಭಕ್ತ್ಯಾ ಪೂಜಯಸ್ವ ಮಹೇಶ್ವರಂ ॥೪೭೦॥

ಗರ್ಭವಾಸಾದಿದುಃಖಾನಿ ಯಾನ್ಯನಂತಾನಿ ತಾನಿ ಚ ।
ಕದಾಪಿ ನ ಭವಿಷ್ಯಂತಿ ಶ್ರೀ ಮೃತ್ಯುಂಜಯಪೂಜಯಾ ॥೪೭೧॥

ವಿಶ್ವಾಸಂ ಕುರು ವಿಧ್ಯುಕ್ತಶಿವಲಿಂಗಾರ್ಚನೇ ಸುತ ।
ಕುರು ವಿಶ್ವಸ್ಯ ಸತತಂ ಶಿವಲಿಂಗಾರ್ಚನಂ ಮುದಾ ॥೪೭೨॥

ನಿನ್ನ ದುಃಖಗಳನ್ನು ಮಹೇಶ್ವರನೇ ನಾಶಗೊಳಿಸದಿದ್ದರೆ ಮತ್ತಾರಿಂದ ನಿನ್ನ ಕಷ್ಟನಿವಾರಣೆಯಾಗುವುದು? ಸರ್ವರ ದುಃಖಗಳನ್ನೂ ನಾಶಗೊಳಿಸುವ ಪರಮಾತ್ಮನು ನಿನ್ನ ಕಷ್ಟಗಳನ್ನು ಬಗೆಹರಿಸಲಾರನೇ? ॥೪೬೭-೪೬೮॥

ಸರ್ವರಿಗೂ ಸುಖಕರನಾದುದರಿಂದಲೇ ಶಂಕರನಿಗೆ ಶಂಕರನೆಂಬ ಹೆಸರು ಬಂದಿದೆ. ನೀನು ಭಕ್ತಿಯಿಂದಾರಾಧಿಸಿದರೆ ನಿಜವಾಗಿಯೂ ನಿನಗೆ ಸುಖವನ್ನೀಯುವನು. ಇಂದ್ರೋಪೇಂದ್ರಾದಿಗಳೆಲ್ಲರೂ ಶಂಕರನನ್ನು ಬಹುವಾಗಿ ಪೂಜಿಸಿ, ಅವರವರ ಇಷ್ಟಾರ್ಥಗಳನ್ನೆಲ್ಲಾ ಪಡೆದಿರುವರು. ॥೪೬೯-೪೭೦॥

ಎಲೈ ಮಗನೇ, ಮೃತ್ಯುಂಜಯನನ್ನು ಆರಾಧಿಸುವುದರಿಂದ ಜನನಮರಣಾದಿ ದುಃಖಗಳು ಎಂದೂ ಉಂಟಾಗುವುದಿಲ್ಲ. ವಿಧ್ಯುಕ್ತವಾದ ಶಿವಲಿಂಗಾರ್ಚನೆಯಲ್ಲಿ ಸರ್ವದಾ ವಿಶ್ವಾಸವನ್ನಿಡು. ಆದರಿಂದ ನಿನಗೆ ಶುಭವಾಗುವುದು. ॥೪೭೧-೪೭೨॥

ವಿಶ್ವಸ್ಯ ಭಾವಿತಾ ಭಾವಾಃ ಶಂಭುಂ ಭಕ್ತ್ಯಾರ್ಚಯಂತಿ ಯೇ ।
ಪ್ರಾಪ್ನುವಂತಿ ನ ತೇ ಭೂಯೋ ಯೋನಿಚಕ್ರಂ ದುರಾಸದಂ ॥೪೭೩॥

ಜಾಬಾಲವಿಧ್ಭಿಸ್ಸದ್ವೃತ್ತೈರ್ಜ್ಞಾತೋಽರ್ಥೋಽಯಂ ಮಯಾ ಪುರಾ।
ಅತಸ್ಸುತ ಮದುಕ್ತಾರ್ಥಃ ಶ್ರುತ್ಯುಕ್ತಾರ್ಥೋ ನ ಸಂಶಯಃ ॥೪೭೪॥

ಗತಶ್ಚೇತ್ತವ ವಿಶ್ವಾಸಃ ಶಿವಲಿಂಗಾರ್ಚನೇ ಸುತ ।
ದುಃಖಂ ಪ್ರಾಪ್ಸ್ಯಸ್ಯಸಂದೇಹಮಿಹಾಮುತ್ರಾಪಿ ಸರ್ವಥಾ ॥೪೭೫॥

ಶಿವಲಿಂಗಾರ್ಚನೇ ನಿತ್ಯೇ ಸ್ವೇಷ್ಟದೇ ಶ್ರುತಿಚೋದಿತೇ ।
ವಿಶ್ವಾಸೋ ನ ಭವೇದ್ಯಸ್ಯ ಸ ಮಹಾಪಾತಕೀ ಧ್ರುವಂ ॥೪೭೬॥

ಮಹಾಪಾತಕಯುಕ್ತಾನಾಂ ನಷ್ಟಾನಾಂ ದುಷ್ಟಚೇತಸಾಂ ।
ನ ಭವಿಷ್ಯತಿ ವಿಶ್ವಾಸಃ ಶ್ರುತ್ಯುಕ್ತೇ ಲಿಂಗಪೂಜನೇ ॥೪೭೭॥

ಯಸ್ಯ ಗ್ರಹಾಸ್ಸ್ಯುಸ್ಸತತಂ ಪ್ರತಿಕೂಲಾ ದುರಾಗ್ರಹಾಃ ।
ತಸ್ಯ ನಶ್ಯತಿ ವಿಶ್ವಾಸಃ ಶಿವಲಿಂಗಾರ್ಚನೇ ಧ್ರುವಂ ॥೪೭೮॥

---

ವಿಶ್ವಪೂಜ್ಯರಾದ ಸಕಲ ಮಹನೀಯರೂ ವಿಶ್ವೇಶ್ವರನನ್ನು ಅರ್ಚಿಸಿ ಮುಕ್ತಿ ಪಡೆದು ಮತ್ತೆ ಭೂಲೋಕದಲ್ಲಿ ಜನ್ಮವನ್ನು ತಾಳಲಿಲ್ಲ. ಈ ಜಾಬಾಲಾದಿ ತತ್ವವನ್ನು ಮಹರ್ಷಿಗಳೆಲ್ಲರೂ ಯಥಾರ್ಥವೆಂದು ತಿಳಿದು ನನಗೆ ಉಪದೇಶಿಸಿರುವರು. ಆದ್ದರಿಂದ ಎಲೈ ಮಗನೇ, ನನ್ನ ಈ ಮಾತನ್ನು ವೇದವಚನವೆಂದು ನಂಬು. ॥೪೭೩-೪೭೪॥

ಒಂದುವೇಳೆ ನೀನು ಈ ನಂಬಿಕೆಯನ್ನು ಶಿವಾರ್ಚನೆಯಲ್ಲಿಡದೇ ಹೋದರೆ, ನಿಜವಾಗಿ ನೀನು ಅತಿಶಯವಾದ ದುಃಖಕ್ಕೀಡಾಗುವೆ. ವೇದಪ್ರತಿಪಾದ್ಯಮಾನವಾದ ಈ ಶಿವಲಿಂಗಾರ್ಚನೆಯಲ್ಲಿ ಮನಸ್ಸಿಡದವನು ನಿಜವಾಗಿಯೂ ಮಹಾ ಪಾಪಿಯೆನಿಸುವನು. ॥೪೭೫-೪೭೬॥

ಮಹಾಪಾಪಿಗಳಿಗೂ, ದುಷ್ಟಕಾರ್ಯಾಸಕ್ತರಿಗೂ ಶಿವಲಿಂಗಾರ್ಚನೆಯಲ್ಲಿ ವಿಶ್ವಾಸಹುಟ್ಟುವುದಿಲ್ಲ ಯಾರಿಗೆ ಗ್ರಹಗಳು ಕ್ರೂರರಾಗಿ ದುಷ್ಫಲಗಳನ್ನು ಕೊಡುವುವೋ ಅಂತಹವರು ಶಿವಲಿಂಗಾರ್ಚನೆಯಿಂದ ಆ ಗ್ರಹಪೀಡೆಯನ್ನು ಪರಿಹರಿಸಿಕೊಳ್ಳುವರು. ॥೪೭೭-೪೭೮॥

ಶಿವಲಿಂಗಾರ್ಚನೇ ಯಸ್ಯ ವಿಶ್ವಾಸೋ ನ ಭವಿಷ್ಯತಿ।
ತಸ್ಯ ಸ್ಯಾನ್ನರಕಾವಾಸಸ್ತದ್ವಂಶಕ್ಷಯಪೂರ್ವಕಂ ॥೪೭೯॥

ಶಿವಲಿಂಗಾರ್ಚನೇ ಯಸ್ಯ ವಿಶ್ವಾಸಃ ಶ್ರುತಿಚೋದಿತೇ।
ಸ ಸವಂಶೋ ಭುಕ್ತಭೋಗಃ ಪ್ರಯಾತಿ ಶಿವಸನ್ನಿಧಿಂ ॥೪೮೦॥

ಅನುಕೂಲಾ ಗ್ರಹಾ ಯಸ್ಯಾನುಗ್ರಹೋ ಗಿರಿಜಾಪತೇಃ।
ತಸ್ಯೈವ ಶಿವಪೂಜಾಯಾಂ ವಿಶ್ವಾಸೋಽನ್ಯಸ್ಯ ನ ಧ್ರುವಂ ॥೪೮೧॥

ದುರ್ಮೇಧಯಾ ಶ್ರದ್ಧಯಾ ಚ ಮೃತ್ತಿಕಾಲಿಂಗಪೂಜನೇ।
ನ ಭವಿಷ್ಯತಿ ವಿಶ್ವಾಸಃ ಸುತರಾಂ ಸತ್ಯಮುಚ್ಯತೇ ॥೪೮೨॥

ಇತಿ ತದ್ವಚನಂ ಶ್ರುತ್ವಾ ಜ್ಞಾತ್ವಾ ಚ ನಿಯಮಾನ್ಮುನೇ।
ವಿಧಿವತ್ಪೂಜಯಾಮಾಸ ಶಿವಂ ಮೃಲ್ಲಿಂಗರೂಪಿಣಂ ॥೪೮೩॥

॥ ದಧೀಚಿರುವಾಚ ॥

ಬಿಲ್ವಪತ್ರೈಃ ಪ್ರಸೂನೈಶ್ಚ ತರುಗುಲ್ಮಲತೋದ್ಭವೈಃ।
ಕುಶಕಾಶದ್ರೋಣಪುಷ್ಪೈಃ ಪೂಜಯಾಮಾಸ ಶಂಕರಂ ॥೪೮೪॥

ಯಾರಿಗೆ ಶಿವಲಿಂಗಾರ್ಚನೆಯಲ್ಲಿ ಆದರವಿಲ್ಲವೋ ಅವರಿಗೆ ನರಕವು ಒದಗುವುದಲ್ಲದೇ ತದ್ವಂಶೀಯರೆಲ್ಲಾ ನರಕಭಾಗಿಗಳಾಗುವರು. ವಿಶ್ವಾಸದಿಂದ ಶಿವಲಿಂಗಾರ್ಚನೆಮಾಡಿದವರ ವಂಶವು ಸಕಲ ಭೋಗಭಾಗ್ಯಗಳನ್ನೂ ಅನುಭವಿಸಿ ಕೊನೆಗೆ ಶಿವಸನ್ನಿಧಿಗೈದುವುದು. ॥೪೭೯-೪೮೦॥

ಯಾರಿಗೆ ಗ್ರಹಗಳು ಅನುಕೂಲಫಲಪ್ರದರಾಗಿರುವರೋ ಅಂತಹವರಿಗೆ ಶಿವಪೂಜಾಚರಣೆಯಲ್ಲಿ ವಿಶ್ವಾಸಹುಟ್ಟುವುದು. ಯಾರು ಶ್ರದ್ಧಾಳುಗಳಲ್ಲವೋ, ಯಾರಿಗೆ ಬುದ್ಧಿಯು ದುರ್ಮಾರ್ಗದಲ್ಲಿ ಪ್ರವರ್ತಿಸುವುದೋ, ಅಂತಹವರಿಗೆ ನಿಜವಾಗಿಯೂ ಶಿವಾರ್ಚನೆಯಲ್ಲಿ ಆಸಕ್ತಿಯುದಯಿಸಲಾರದು. ಇದು ಸತ್ಯ ॥೪೮೧-೪೮೨॥

ಅನಂತರ ಆ ಹುಡುಗನು ಹೀಗೆ ಶಿವಲಿಂಗಪೂಜೆಯ ಮಹಿಮೆಯನ್ನು ತಿಳಿದು ಬಿಲ್ವಪತ್ರೆ, ಹೂವು, ಚಿಗುರು, ದರ್ಭೆ, ಕಾಶಪುಷ್ಪ, ತುಂಬೆಹೂವು ಮುಂತಾದುವುಗಳಿಂದ ಶಂಕರನನ್ನು ಮತ್ತೆ ಭಕ್ತಿಯಿಂದರ್ಚಿಸಿದನು ॥೪೮೩-೪೮೪॥

ದೂರ್ವಾರ್ಕಬೃಹತ್ಯರ್ಕಶಮೀಪ್ರಫುಲ್ಲನೀಲೋತ್ಪಲೈರಪಿ ।
ಕರವೀರೈರಪಾಮಾರ್ಗೈಃ ಪೂಜಯಾಮಾಸ ಶಂಕರಂ ॥೪೮೫॥

ತತಃ ಪ್ರಸನ್ನೋ ಗಿರಿಶೋ ನಾನಾಗಣನಿಷೇವಿತಃ ।
ತ್ರಿನೇತ್ರಃ ಪಾರ್ವತೀಯುಕ್ತೋಹ್ಯಾವಿರಾಸೀತ್ತದಗ್ರತಃ ॥೪೮೬॥

ಪ್ರಸನ್ನಂ ಪೂಜಯಾಮಾಸ ಸ ಬಾಲಃ ಪಾರ್ವತೀಪತಿಂ ।
ತತಸ್ತುಷ್ಟಾವ ರುದ್ರೇಣ ನೀಲರುದ್ರೇಣ ಚೇಶ್ವರಂ ॥೪೮೭॥

ತ್ವರಿತೇನಾಪಿ ರುದ್ರೇಣ ರುದ್ರಸೂಕ್ತೈಶ್ಚ ಶಂಕರಂ ।
ಸ್ತೋತ್ರೈಶ್ಚ ವಿವಿಧೈಃ ಸ್ತುತ್ವಾ ಪ್ರಸೀದೇತಿ ವದನ್ಮುಹುಃ ॥೪೮೮॥

ಪ್ರಣತಶ್ಶಿವಪಾದಾಬ್ಜೇ ಬ್ರಹ್ಮವಿಷ್ಣ್ವಾದಿಪೂಜಿತೇ ।
ತತಃ ಕೃತಾಂಜಲಿಪುಟಃ ಪುಷ್ಪೈರಭ್ಯರ್ಚ್ಯ ಶಂಕರಂ ॥೪೮೯॥

ಯಯಾಚೇ ಮಹದೈಶ್ವರ್ಯಂ ಮುಕ್ತಿಂ ಚ ಪ್ರಣತಃ ಪುನಃ ।
ತದ್ಯಾಚಿತಂ ದದೌ ಶಂಭುರ್ವರದ್ವಯಮಪಿ ಪ್ರಭುಃ ॥೪೯೦॥

ಶಿವಾರ್ಚನೆಗೆ ಗರಿಕೆ, ಬೃಹತಿ, ಎಕ್ಕ, ಬನ್ನಿ, ಅರಳಿದ ನೀಲೋತ್ಪಲ, ಕಣಿಗಲು, ಉತ್ತರಣೀ ಮುಂತಾದ ಪತ್ರಪುಷ್ಪಗಳನ್ನು ಪಯೋಗಿಸಿದನು. ಇವನ ಭಕ್ತಿಗೆ ಮೆಚ್ಚಿದ ಶಂಕರನು ತನ್ನ ಗಣಗಳೊಡಗೂಡಿ, ಪಾರ್ವತೀಸಮೇತನಾಗಿ ಬಾಲಕನ ಕಣ್ಣಿಗೆ ಕಾಣಿಸಿಕೊಂಡನು. ||೪೮೫-೪೮೬||

ಒಡನೆಯೇ ಪ್ರಸನ್ನನಾಗಿ ಪ್ರತ್ಯಕ್ಷನಾದ, ಪಾರ್ವತೀಪತಿಯನ್ನು ರುದ್ರಾಧ್ಯಾಯ ಮತ್ತು ರುದ್ರಸೂಕ್ತ ಇನ್ನೂ ವಿಧವಿಧವಾದ ಶಿವಸ್ತೋತ್ರವಚನಗಳಿಂದ ಬಹುವಾಗಿ ಸ್ತುತಿಸಿದನು. ಮತ್ತು ತನಗೆ ಪ್ರಸನ್ನನಾಗೆಂದು ಬಹುವಾಗಿ ಪ್ರಾರ್ಥಿಸಿದನು. ||೪೮೭-೪೮೮||

ಹಾಗೆಯೇ ಬ್ರಹ್ಮವಿಷ್ಣ್ವಾದಿಗಳಿಂದ ಪೂಜಿತವಾದ ಶಿವನ ಪಾದಗಳಿಗೆರಗಿ ಅಂಜಲಿಬದ್ಧನಾಗಿ ನಿಂತು, ಪುಷ್ಪಾದಿಗಳಿಂದ ಪೂಜಿಸಿ ಅತಿಶಯವಾದ ಐಶ್ವರ್ಯವನ್ನೂ, ಶಾಶ್ವತವಾದ ಮುಕ್ತಿಯನ್ನೂ ದಯಪಾಲಿಸಬೇಕೆಂದು ಪ್ರಾರ್ಥಿಸಿಕೊಂಡನು. ಆಗ ಶಂಕರನು ಪ್ರೀತಿಯಿಂದ ಆ ಎರಡುವರಗಳನ್ನೂ ಅನುಗ್ರಹಿಸಿದನು. ||೪೮೯-೪೯೦||

ದದಾವಾಕಲ್ಪಮಾಯುಷ್ಯಮಾರೋಗ್ಯಂ ಚ ಮಹೇಶ್ವರಃ ।
ಯತಸ್ಸಾಂಬೋ ಮಹಾದೇವೋ ವಾಂಛಿತಾರ್ಥಾಧಿಕಪ್ರದಃ ॥೪೯೧॥

ತತಸ್ತದ್ಯಾಚಿತಂ ದತ್ವಾ ದದಾವನ್ಯದಪಿ ಪ್ರಭುಃ ।
ತತಸ್ತತ್ರೈವ ಸಗಣೋ ಮಹೇಶೋಽಂತರ್ದಧೇ ನೃಪ ॥೪೯೨॥

ಸೋಽಪಿ ಬಾಲೋಽತಿಸಂತುಷ್ಟಃ ಸ್ಥಿತಸ್ತತ್ರಾತಿವಿಸ್ಮಿತಃ ।
ಸ ಜಗಾಮ ತತೋ ಮಾತ್ರೇ ಪ್ರಸಾದಂ ಶ್ರೀಮಹೇಶಿತುಃ ॥೪೯೩॥

ಸಾಪಿ ತದ್ವಚನಂ ಶ್ರುತ್ವಾ ಹೃಷ್ಟಾ ಜಾತಾ ನರಾಧಿಪ ॥೪೯೪॥

ತತಃ ಪರಂ ಚ ಸಂತುಷ್ಟಃ ಸ ಮೃಲ್ಲಿಂಗಂ ಶಿವಾತ್ಮಕಂ ।
ಪೂಜಯಾಮಾಸ ಪುಷ್ಪಾದ್ಯೈಃ ಶ್ರದ್ಧಾಭಕ್ತಿಪುರಸ್ಸರಂ ॥೪೯೫॥

ತದಾನೀಮಾಗತಸ್ತತ್ರ ಜಿತಾರಿರಿತಿ ಭೂಪತಿಃ ।
ಸ ತಂ ಶಿವಾರ್ಚಕಂ ಬಾಲಂ ದದರ್ಶೋತ್ತಮವರ್ಚಸಂ ॥೪೯೬॥

ಭಸ್ಮೋದ್ಧೂಲಿತಸರ್ವಾಂಗಂ ತ್ರಿಪುಂಡ್ರಾಂಕಿತಮಸ್ತಕಂ ।
ರುದ್ರಾಕ್ಷಮಾಲಾಭರಣಂ ತಂ ದೃಷ್ಟ್ವಾ ವಿಸ್ಮಿತೋಽಭವತ್ ॥೪೯೭॥

---

ಹಾಗೆಯೇ ಅವನಿಗೆ ಒಂದುಕಲ್ಪಪರ್ಯಂತವಾದ ಆಯುಸ್ಸನ್ನೂ, ಆರೋಗ್ಯವನ್ನೂ ಅನುಗ್ರಹಿಸಿದನು. ಭಕ್ತರು ಕೇಳದ ಅಧಿಕವಾದ ವರಗಳನ್ನೂ ಕೊಡುವ ಮಹಾದೇವನು ಅದನ್ನು ಅನುಗ್ರಹಿಸಿದುದರಲ್ಲಿ ಆಶ್ಚರ್ಯವೇನು ? ಮಹಾದೇವನು ತನ್ನ ಗಣಗಳೊಡನೆ ಬಾಲಕನು ನೋಡುತ್ತಿರುವಂತೆಯೇ ಕಣ್ಮರೆಯಾದನು. ॥೪೯೧-೪೯೨॥

ಇದನ್ನು ಕಂಡು ಆ ಬಾಲಕನು ಅತ್ಯಂತಾಶ್ಚರ್ಯಯುಕ್ತನಾಗಿ, ಶಿವಪ್ರಸಾದವನ್ನೂ, ವರವನ್ನೂ ತಾಯಿಗೆ ನಿವೇದಿಸಿದನು ತಾಯಿಯಾದರೋ ಆಶ್ಚರ್ಯಚಕಿತಳಾದಳು. ಬಳಿಕ ಆ ಬಾಲಕನು ತಪ್ಪದೆ ಮೃನ್ಮಯವಾದ ಶಿವಲಿಂಗವನ್ನೇ ಭಕ್ತಿಯಿಂದ ಪೂಜಿಸುತ್ತಾ ಕಾಲಕಳೆಯುತ್ತಿದ್ದನು. ॥೪೯೩-೪೯೪-೪೯೫॥

ಹೀಗಿರಲು ಒಂದುಸಾರಿ ಜಿತಾರಿಯೆಂಬ ರಾಜನೊಬ್ಬನು ಅಲ್ಲಿಗೆ ಬಂದು ವರ್ಚಸ್ವಿಯಾಗಿ, ಭಸ್ಮತ್ರಿಪುಂಡ್ರಾದಿಗಳಿಂದಲೂ, ರುದ್ರಾಕ್ಷಮಾಲಾಭರಣಾದಿಗ

ತತಸ್ತಂ ಶಿವಚಿಹ್ನಾಂಕಬಾಲಕಂ ಶಿವಪೂಜಕಂ ।
ದೃಷ್ಟ್ವಾ ಸ ನೃಪತಿರ್ಭಕ್ತ್ಯಾ ಪೂಜಯಾಮಾಸ ಭೂಪತೇ ॥೪೯೮॥

ತತಸ್ತಸ್ಮೈ ದದೌ ರಾಜಾ ರಾಜ್ಯಂ ಸಿಂಹಾಸನಂ ವಿನಾ ।
ತತೋ ರಾಜಾ ಯಯೌ ಭೂಪ ವೈರಿದೇಶಜಿಗೀಷಯಾ ॥೪೯೯॥

ತತಸ್ಸ ರಾಜಾ ಜಿತ್ವಾರೀನ್ ಜಿತ್ವಾ ತದ್ರಾಜ್ಯಮಂಜಸಾ ।
ಪಾಲಯಾಮಾಸ ಸತತಂ ಸಿಂಹಾಸನಮನಾಕುಲಃ ॥೫೦೦॥

ಸ ಬಾಲೋ ಮಹದೈಶ್ವರ್ಯಂ ಸಂಪ್ರಾಪ್ಯ ಮುದಿತಃ ಸದಾ ।
ತದಾ ಶಿವಂ ಪ್ರಯತ್ನೇನ ಪೂಜಯಾಮಾಸ ಸಾದರಂ ॥೫೦೧॥

ಸ ಬಾಲಕಃ ಶ್ರದ್ಧಯೈವ ಸಹಸ್ರಘಟಪೂರಿತೈಃ ।
ಪಂಚಾಮೃತೈರ್ಲಿಂಗರೂಪಮಭಿಷಿಂಚನ್ಮಹೇಶ್ವರಂ ॥೫೦೨॥

ಬಿಲ್ವಪತ್ರೈರತಿಸ್ವಚ್ಛೈಃ ಪ್ರಸೂನೈರ್ವಿವಿಧೈರಪಿ ।
ಸ ಶಿವಂ ಪೂಜಯಾಮಾಸ ಭಕ್ತಿಶ್ರದ್ಧಾಸಮನ್ವಿತಃ ॥೫೦೩॥

ಳಿಂದಲೂ ಶೋಭಿಸುತ್ತಿದ್ದ ಆ ಬಾಲಕನನ್ನು ನೋಡಿ ಅತ್ಯಾಶ್ಚರ್ಯಪಟ್ಟನು. ||೪೯೬-೪೯೭||

ಮತ್ತು ಆ ಬಾಲಕನು ಈಶ್ವರನು ಧರಿಸುವ ಸಕಲ ಲಾಂಛನಗಳನ್ನೂ ಧರಿಸುತ್ತಾ ಶಿವಪೂಜೆಮಾಡುತ್ತಿದ್ದುದನ್ನು ರಾಜನು ನೋಡಿ, ಸಂತೋಷದಿಂದ ಆವನಿಗೆ ತನ್ನ ಸಿಂಹಾಸನವೊಂದನ್ನು ಬಿಟ್ಟು ಉಳಿದ ಐಶ್ವರ್ಯವನ್ನೆಲ್ಲಾ ಸಮರ್ಪಿಸಿದನು. ಹಾಗೆ ಆವನಿಗೆ ಐಶ್ವರ್ಯವಿತ್ತು, ತಾನು ಶತ್ರುರಾಜರನ್ನೆಲ್ಲಾ ಸದೆಬಡಿದು ರಾಜ್ಯವನ್ನು ಬಹು ಚೆನ್ನಾಗಿ ರಕ್ಷಿಸುತ್ತಾ ನಿಂತನು. ||೪೯೮-೪೯೯-೫೦೦||

ಆಗ ಆ ಹುಡುಗನು ಸಂತುಷ್ಟನಾಗಿ ಶ್ರದ್ಧೆಯಿಂದ ಸಾವಿರಾರುಗಡಿಗೆಗಳಲ್ಲಿ ತುಂಬಿದ ಪಂಚಾಮೃತದ್ರವ್ಯಗಳಿಂದ ಮಹಾದೇವನಿಗೆ ಅಭಿಷೇಕಮಾಡುತ್ತಾ, ವಿಧವಿಧವಾಗಿ ಶಂಕರನನ್ನು ಪೂಜಿಸಿದನು. ||೫೦೧-೫೦೩||

ಶುಭ್ರವಾದ ಪುಷ್ಪಗಳಿಂದಲೂ, ಬಿಲ್ವಪತ್ರಗಳಿಂದಲೂ ಶಂಭುವನ್ನು ಶ್ರದ್ಧಾಭಕ್ತಿಯಿಂದ ಪೂಜಿಸಿ, ಹಾಗೆಯೇ ಶಾಂಭವರಿಗೆ (ಸಂಚರಿಸುವ ಶಂಭುಮೂರ್ತಿಗಳಿಗೆ)

ಶಾಂಕರಾನ್ ಭೋಜಯಾಮಾಸ ಕ್ಷೀರಾನ್ನೇನ ಸಕೋಟಿಶಃ ।
ಶಾಂಕರೇಭ್ಯೋ ದದೌ ಭಕ್ತ್ಯಾ ರತ್ನಾನ್ಯತ್ಯುತ್ತಮಾನಿ ಚ ॥೫೦೪॥

ಸ ಬಾಲಃ ಕಾರಯಾಮಾಸ ಶಿವಾಲಯಮನುತ್ತಮಂ ।
ತತ್ರ ಲಿಂಗಪ್ರತಿಷ್ಠಾಂ ಚ ಸ ಚಕಾರ ವಿಧಾನತಃ

ಉತ್ಸವಾನ್ ಕಾರಯಾಮಾಸ ಸ ನಿತ್ಯಂ ಶಂಕರಾಲಯೇ ।
ಚಕಾರ ರತ್ನೈರ್ವಿವಿಧೈಃ ಶ್ರೀಮಹಾದೇವಪೂಜನಂ ॥೫೦೬॥

ನಿತ್ಯಂ ಪಾರ್ಥಿವಲಿಂಗಾನಾಂ ಸಹಸ್ರಂ ಪೂಜಯನ್ ಸ್ಥಿತಃ ।
ಪುತ್ರಪೌತ್ರಾದಿವೃದ್ಧಿಶ್ಚ ಸಮಭೂತ್ತಸ್ಯ ಭೂಪತೇ ॥೫೦೭॥

ಸ ಏವಂ ಕಲ್ಪಪರ್ಯಂತಂ ಶಿವಂ ಸಂಪೂಜ್ಯ ಸಾದರಂ ।
ನಿತ್ಯಂ ಶಿವಕಥಾಂ ಶೃಣ್ವಂತ್ಸಂತೋಷೇಣ ಸ್ಥಿತೋನೃಪ ॥೫೦೮॥

ತತಸ್ಸಶಿವಮಭ್ಯರ್ಚ್ಯ ಶಿವಸ್ಮರಣಪೂರ್ವಕಂ ।
ವದನ್ ಶಿವಶಿವೇಶೇತಿ ಜಹೌ ಪ್ರಾಣಾನ್ನರಾಧಿಪ ॥೫೦೯॥

ಕ್ಷೀರಾನ್ನಭೋಜನಮಾಡಿಸಿ, ಅತ್ಯುತ್ತಮವಾದ ರತ್ನಗಳನ್ನು ದಾನವಾಗಿ ಕೊಟ್ಟನು. ||೫೦೩-೫೦೪||

ಒಂದು ಶಿವಾಲಯವನ್ನು ಕಟ್ಟಿಸಿ, ಅಲ್ಲಿ ಶಿವಲಿಂಗಪ್ರತಿಷ್ಠೆಯನ್ನು ವಿಧಿವತ್ತಾಗಿ ಮಾಡಿಸಿದನು. ನಿತ್ಯವೂ ಅದಕ್ಕೆ ವಿಧವಿಧವಾದ ರತ್ನಗಳಿಂದ ನಿತ್ಯಪೂಜೆಯು ಸಲ್ಲುವಂತೆ ಏರ್ಪಡಿಸಿದನು. ||೫೦೫-೫೦೬||

ಆ ಬಾಲಕನು ನಿತ್ಯವೂ ಸಹಸ್ರಾರು ಶಿವಲಿಂಗಗಳನ್ನು ಮೃತ್ತಿಕೆಯಿಂದ ರಚಿಸಿ ಪೂಜಿಸುತ್ತಿದ್ದನು. ಇದರಿಂದ ಆ ಬಾಲಕನು ಅಭಿವೃದ್ಧಿಹೊಂದುತ್ತಾ ಕಲ್ಪಪರ್ಯಂತವಾಗಿ ಪುತ್ರಪೌತ್ರಾದಿಗಳೊಡನೆ ಸುಖದಿಂದಿದ್ದನು. ತಪ್ಪದೆ ನಿತ್ಯವೂ ಶಿವಕಥೆಗಳನ್ನು ಕೇಳುತ್ತಾ ಆನಂದದಿಂದ ಕಾಲಕಳೆಯುತ್ತಿದ್ದನು. ||೫೦೭-೫೦೮||

ಕೊನೆಯಲ್ಲಿ ಆತನು ಶಿವನಾಮಸ್ಮರಣೆಮಾಡುತ್ತಲೇ ತನ್ನ ಪ್ರಾಣಪರಿತ್ಯಾಗ ಮಾಡಿದನು. ಮಹೇಶ್ವರನ ದಯೆಯಿಂದ ಶಿವಸನ್ನಿಧಿಯನ್ನು ಸೇರಿ ಶಿವನಲ್ಲಿಯೇ ಲೀನನಾದನು. ||೫೦೯-೫೧೦||

ತತೋ ಮಹೇಶಕೃಪಯಾ ಸಂಪ್ರಾಪ್ಯ ಶಿವಸನ್ನಿಧಿಂ ।
ಶ್ರೀಮಹಾದೇವಕೃಪಯಾ ಶಿವೇ ಲೀನೋ ಬಭೂವ ಸಃ ॥೫೧೦॥

ಏವಮೇವ ಪುರಾ ರಾಜನ್ ಬಹವಃ ಶಾಂಕರಾಶ್ರಿವಂ ।
ಸಂಪೂಜ್ಯಾಪುರ್ಮಹಾದೇವಂ ಭುಕ್ತ್ವೈಶ್ವರ್ಯಂ ಯಥೇಚ್ಛಯಾ ॥೫೧೧॥

ಶಿವಪೂಜಾಪ್ರಭಾವೇನ ನಿರಾತಂಕೇ ನಿರಾಮಯಾಃ ।
ಪ್ರಯಾಂತ್ಯೇವ ಶಿವಂ ಸಾಂಬಂ ಭುಕ್ತಭೋಗಾಶ್ಶಿವಾರ್ಚಕಾಃ ॥೫೧೨॥

ಶಿವಸಂಸಕ್ತಚಿತ್ತಾನಾಂ ಶಿವವ್ರತರತಾತ್ಮನಾಂ ।
ಇಹಾಮುತ್ರಾಪಿ ಭೂಪಾಲ ನ ದುಃಖಂ ಸತ್ಯಮುಚ್ಯತೇ ॥೫೧೩॥

ರಾಜನ್ ಶಿವವ್ರತೇ ಶ್ರದ್ಧಾ ದುರ್ಲಭಾ ದೇಹಧಾರಿಣಾಂ ।
ಸಾ ಭವೇದ್ಯದಿ ಭಾಗ್ಯೇನ ತದಾ ಮುಕ್ತಿರದೂರತಃ ॥೫೧೪॥

ಶಿವಾರ್ಚನೇ ರುದ್ರಜಪೇ ಭಸ್ಮರುದ್ರಾಕ್ಷಧಾರಣೇ ।
ಯಸ್ಯ ಶ್ರದ್ಧಾ ಭವೇನ್ನಿತ್ಯಂ ಸ ನಿರ್ವಾಣಾಂಗನಾಪತಿಃ ॥೫೧೫॥

ಶಿವಲಿಂಗಂ ಬಿಲ್ವಪತ್ರಂ ರುದ್ರಾಕ್ಷಃ ಶ್ರೌತಭಸ್ಮ ಚ ।
ಶೈವತ್ವಂ ಚೇತಿ ಪಂಚೈತೇ ಯತ್ರ ತತ್ರ ನ ಪಾಪಭೀಃ ॥೫೧೬॥

ಹೀಗೆಯೇ ಅನೇಕ ಮಹನೀಯರು ಮಹಾದೇವನನ್ನು ಪೂಜಿಸಿ, ಭುಕ್ತಿ ಮುಕ್ತಿಗಳನ್ನು ಪಡೆದಿರುವರು. ಶಿವಪೂಜಾಮಹಿಮೆಯಿಂದ ಪೂಜಕರು ಆತಂಕಾದಿ ವಿರಹಿತರಾಗಿ, ರೋಗರುಜಿನಗಳಿಲ್ಲದೆ ಶಾಂತಮಾರ್ಗದಿಂದ ಜೀವಿಸಿ, ಕೊನೆಗೆ ಶಿವಸಾಯುಜ್ಯವನ್ನು ಪಡೆಯುವರು. ||೫೧೧-೫೧೨||

ಈಶ್ವರನನ್ನೇ ಧ್ಯಾನಿಸುತ್ತಾ, ಶಿವವ್ರತದಲ್ಲಿಯೇ ಆಸಕ್ತರಾದವರಿಗೆ ಈಲೋಕ ಪರಲೋಕಗಳೆರಡರಲ್ಲಿಯೂ ದುಃಖವೊದಗುವುದಿಲ್ಲ. ಆದರೆ ಸಾಮಾನ್ಯಜನರಿಗೆ ಶಿವವ್ರತಾಸಕ್ತಿಯು ಹುಟ್ಟುವುದಿಲ್ಲ. ಹಾಗೆ ಉಂಟಾದರೆ ಅವರಿಗೆ ಮುಕ್ತಿಯು ಹಸ್ತಗತವೆಂದೇ ತಿಳಿಯಬೇಕು. ||೫೧೩-೫೧೪||

ಶಿವಾರ್ಚನೆಯಲ್ಲಿ, ರುದ್ರಮಂತ್ರಜಪದಲ್ಲಿ, ಭಸ್ಮರುದ್ರಾಕ್ಷಿಗಳನ್ನು ಧರಿಸುವುದರಲ್ಲಿ ಯಾರಿಗೆ ಅತಿಯಾದ ಶ್ರದ್ಧೆಯಿರುವುದೋ ಅವರು ಮುಕ್ತರಾಗುವರು.

ಸಾಕ್ಷಾನ್ಮುಕ್ತಿಪ್ರದಂ ಧನ್ಯಂ ಶಿವಲಿಂಗಾದಿಪಂಚಕಂ ।
ದೃಷ್ಟ್ವೈವ ವಿಲಯಂ ಯಾಂತಿ ಪಾತಕಾನಿ ಸಹಸ್ರಶಃ । ॥೫೧೭॥

ಸಂಪಾದನೀಯಂ ಯತ್ನೇನ ಶಿವಲಿಂಗಾದಿಪಂಚಕಂ ।
ಅಯಮೇವ ಪರೋ ಧರ್ಮೋ ದ್ವಿಜಾನಾಂ ನೃಪಸತ್ತಮ ॥೫೧೮॥

ದ್ವಿಜಸ್ಸನ್ಯಸ್ತ್ಯಜೇನ್ಮೋಹಾಚ್ಛಿವಲಿಂಗಾದಿಪಂಚಕಂ ।
ಸ ದೂರತಃ ಪರಿತ್ಯಾಜ್ಯಶ್ಚಂಡಾಲ ಇವ ಸರ್ವದಾ ॥೫೧೯॥

ನಿಧಾನರೂಪಂ ಸಂಪ್ರಾಪ್ಯ ಶಿವಲಿಂಗಾದಿ ಪಂಚಕಂ ।
ಯಸ್ತ್ಯಜೇನ್ಮೋಹಸಂಕ್ರಾಂತಃ ಸ ಸಂಕ್ರಾಂತೋಹಿ ಪಾತಕೈಃ ॥೫೨೦॥

ಪಂಚವಕ್ತ್ರಪ್ರಿಯತಮಂ ಶಿವಲಿಂಗಾದಿಪಂಚಕಂ ।
ಯತ್ರ ದೃಷ್ಟಂ ತತೋ ಯಾಂತಿ ದೂರತೋ ಯಮಕಿಂಕರಾಃ ॥೫೨೧॥

ಶಿವಲಿಂಗ, ಬಿಲ್ವಪತ್ರೆ, ರುದ್ರಾಕ್ಷಿ, ವಿಧ್ಯುಕ್ತವಾದ ಭಸ್ಮ, ಶಿವಧರ್ಮಾನುಸರಣೆ ಇವು ಐದು ಇದ್ದಕಡೆ ಪಾಪದ ಭಯವೇ ಬರುವುದಿಲ್ಲ. ॥೫೧೫-೫೧೬॥

ಮೇಲೆ ಹೇಳಿದ ಶಿವಲಿಂಗವೇ ಮೊದಲಾದ ಐದು ಪವಿತ್ರವಸ್ತುಗಳ ದರ್ಶನ ಮಾತ್ರದಿಂದಲೇ ಸಮಸ್ತ ಪಾಪರಾಶಿಯೂ ನಾಶವಾಗುವುದು. ಆದ್ದರಿಂದ ಪ್ರಯತ್ನ ಪಟ್ಟಾದರೂ ದ್ವಿಜರಾದವರು ಆ ಪಂಚಕವನ್ನು ಸಂಪಾದಿಸಿ ಅದನ್ನು ಸೇವಿಸು ತ್ತಿರಬೇಕು ಎಲೈ ರಾಜನೇ, ಈ ಶಿವಲಿಂಗಾದಿಪಂಚಕಸೇವನೆಯು ಅತ್ಯಂತ ಪವಿತ್ರವಾದ ಧರ್ಮ. ॥೫೧೭-೫೧೮॥

ಯಾವನು ದ್ವಿಜನಾಗಿದ್ದೂ ಅಜ್ಞಾನದಿಂದ ಶಿವಲಿಂಗಾದಿಪಂಚಕಗಳನ್ನು ದೂರಮಾಡುವನೋ ಅವನು ಚಂಡಾಲಸದೃಶನು. ಮೇಲೆ ಹೇಳಿದ ಐದುವಸ್ತು ಗಳೂ ನಿಧಿಯಂತಿರುವುವು. ಇವುಗಳನ್ನು ತ್ಯಜಿಸಿದವನು ಪರಮಪಾಪಿಯೇ ಸರಿ. ॥೫೧೯-೫೨೦॥

ಶಿವಲಿಂಗಾದಿ ಪಂಚಕವು ಪರಶಿವನಿಗೆ ಪ್ರಿಯವಾದದ್ದು. ಇವುಗಳನ್ನು ನೋಡಿದೊಡನೆಯೇ ಯಮದೂತರು ದೂರತಃ ಸರಿಯುವರು. ಇಂತಹ ಶಿವಪ್ರಿಯ ವಾದ ಪಂಚಕಗಳನ್ನು ಹೊಂದಿರುವ ಮಹಾತ್ಮರನ್ನು ಕಂಡೊಡನೆಯೇ ವಿಷ್ಣ್ವಾದಿ

ಮಹಾದೇವಪ್ರಿಯಕರಂ ಶಿವಲಿಂಗಾದಿಪಂಚಕಂ ।
ಯಸ್ಮಿನ್ ಪಶ್ಯಂತಿ ವಿಷ್ಣ್ವಾದ್ಯಾಸ್ತಂ ನಮಂತ್ಯರ್ಚಯಂತಿ ಚ ॥೫೨೨॥

ಯಸ್ಮಿನ್ ಭವತಿ ಭಾಗ್ಯೇನ ಶಿವಲಿಂಗಾದಿಪಂಚಕಂ
ಸ ಭುಕ್ತ್ವೇಷ್ಟವಿಭವಃ ಪ್ರಯಾತಿ ಶಿವರೂಪತಾಂ ॥೫೨೩॥

ಏಕೈಕಮಸ್ತಿ ಯತ್ರತ್ರ ಶಿವಲಿಂಗಾದಿಪಂಚಕಂ ।
ತನ್ಮಾತ್ರಮಪಿ ಭೂಪಾಲ ಹೇತುಸ್ಸ್ವರ್ಗಾಪವರ್ಗಯೋಃ ॥೫೨೪॥

ಶೈವಧರ್ಮಮನಾಶ್ರಿತ್ಯ ಯೋ ಮುಕ್ತಿಮಭಿವಾಂಛತಿ ।
ತಸ್ಯ ದೂರತರಾ ಮುಕ್ತಿಃ ಸ್ವಪ್ನೇಪಿ ನೃಪಸತ್ತಮ ॥೫೨೫॥

ಶೈವಧರ್ಮವಿನಿರ್ಮುಕ್ತಾಃ ಕಾಲಪಾಶನಿಯಂತ್ರಿತಾಃ ।
ಪ್ರಯಾಂತಿ ಕಾಲಸದನಂ ಕೇವಲಂ ಸ್ವಕುಲಾನ್ವಿತಾಃ ॥೫೨೬॥

ಶೈವಧರ್ಮಸಮಾಕ್ರಾಂತಶಿವಪೂಜಾರತಾತ್ಮನಾಂ ।
ಯೇ ಕುರ್ವಂತ್ಯಾನುಕೂಲ್ಯಂ ತೇ ಮುಚ್ಯಂತೇ ಪಾಪಸಂಚಯಾತ್ ॥೫೨೭॥

ಶೈವಧರ್ಮರತಾನ್ ದೃಷ್ಟ್ವಾ ಯೋಭಿನಂದತಿ ಸಾದರಂ ।
ಸ ಭಕ್ತೋ ದೇವದೇವಸ್ಯ ಮಹೇಶಸ್ಯೇತಿ ಮನ್ಮಹೇ ॥೫೨೮॥

ಸಕಲ ದೇವತೆಗಳೂ ಆತನಿಗೆ ನಮಸ್ಕರಿಸುವರು ಮತ್ತು ಆತನನ್ನು ಪೂಜಿಸುವರು. ||೫೨೧-೫೨೨||

ಯಾವನು ಈ ಐದು ವಸ್ತುಗಳನ್ನೂ ಅದೃಷ್ಟವಶದಿಂದ ಹೊಂದಿರುವನೋ ಆವನು ಸಾಕ್ಷಾಚ್ಛಿವಸ್ವರೂಪನಾಗುವನು. ಈ ಐದರಲ್ಲಿ ಒಂದೊಂದು ವಸ್ತುವೂ ಕೂಡ ಸ್ವರ್ಗ ಮತ್ತು ಮೋಕ್ಷಗಳಿಗೆ ಕಾರಣವಾಗುವುದು. ||೫೨೩-೫೨೪||

ಶೈವಧರ್ಮವಿಲ್ಲದೆ ಮುಕ್ತಿಯನ್ನು ಬಯಸುವವನಿಗೆ ಸ್ವಪ್ನದಲ್ಲಿಯೂ ಮೋಕ್ಷವು ಲಭಿಸಲಾರದು. ಶೈವಧರ್ಮವಿಹೀನರಾದವರು ಯಮಪಾಶಕ್ಕೆ ಸಿಕ್ಕಿ, ತನ್ನ ಕುಲಪರಂಪರೆಯೊಡನೆ ಯಮನ ಲೋಕವನ್ನು ಸೇರುವರು. ||೫೨೫-೫೨೬||

ಶೈವಧರ್ಮವನ್ನು ಅನುಸರಿಸುತ್ತಾ ಶಿವಪೂಜಾಧುರೀಣರಾಗಿರುವವರಿಗೆ ಯಾರು ಅನುಕೂಲಗಳನ್ನು ಕಲ್ಪಿಸುವರೋ ಆವರು ಪಾಪರಾಶಿಯಿಂದ ಬಿಡುಗಡೆ

ಯಸ್ಮಿನ್ ದೇಶೇ ಭವಿಷ್ಯಂತಿ ಶೈವಧರ್ಮರತಾ ದ್ವಿಜಾಃ ।
ಸ ಧನ್ಯಃ ಪಾವನೋ ಮಾನ್ಯೋ ಧನ್ಯಸ್ತದ್ದೇಶಪಾಲಕಃ ॥೫೨೯॥

ಭವಾನಪ್ಯತಿಧನ್ಯೋಽಸಿ ಶೈವಧರ್ಮಾಭಿರಕ್ಷಕಃ ।
ತ್ವದಧೀನೌ ಯತೋ ಭೂಪ ಧರ್ಮಾಧರ್ಮೌ ವಿನಿಶ್ಚಿತೌ ॥೫೩೦॥

ಅಶೈವಶ್ಚೇದ್ಭವೇದ್ರಾಜಾ ತದಾ ತದ್ದೇಶವಾಸಿನಃ ।
ಅಶೈವಾ ಏವ ಬಹುಧಾ ಭವಿಷ್ಯಂತಿ ನ ಸಂಶಯಃ ॥೫೩೧॥

ಅಶೈವೇನ ನರೇಂದ್ರೇಣ ಪಾಲಿತಾ ಯಾಃ ಪ್ರಜಾಸ್ಸದಾ ।
ತಾ ಯಾಂತಿ ನರಕಂ ಘೋರಮಶೈವನೃಪಸಂಯುತಾಃ ॥೫೩೨॥

ಅತೋ ಭವಾನ್ ಪ್ರಯತ್ನೇನ ಶೈವಧರ್ಮರತೋಽನಿಶಂ ।
ಶೈವಾನ್ ಪಾಲಯ ಭೂಪಾಲ ಧರ್ಮೋಽಯಂ ತವ ಮುಕ್ತಿದಃ ॥೫೩೩॥

ಆಸ್ಥಾಂ ಮಾ ಕುರು ಭೂಪಾಲ ದೇಹೇಽಸ್ಮಿನ್ನಧ್ರುವೇ ಧ್ರುವಂ ।
ಸರ್ವದಾಪ್ಯತಿಯತ್ನೇನ ಪೂಜಯಸ್ವ ಮಹೇಶ್ವರಂ ॥೫೩೪॥

ಹೊಂದುತ್ತಾರೆ. ಶೈವಧರ್ಮಾನುಯಾಯಿಗಳನ್ನು ನೋಡಿ ಯಾವನು ಸಂತೋಷ ಪಡುವನೋ ಅವನೇ ನಿಜವಾದ ಈಶ್ವರಭಕ್ತನೆನಿಸುವನು. ॥೫೨೭-೫೨೮॥

ಯಾವ ದೇಶದಲ್ಲಿ ಶೈವಧರ್ಮಾನುಯಾಯಿಗಳಿರುವರೋ ಆ ದೇಶವೇ ಅತಿ ಪವಿತ್ರವಾದುದು. ಆ ರಾಜನೇ ಧನ್ಯನೆನಿಸುವನು. ಎಲೈ ರಾಜನೇ, ಶೈವಧರ್ಮವನ್ನು ರಕ್ಷಿಸಿಕೊಂಡು ಬರುತ್ತಿರುವ ನೀನೇ ಅತ್ಯಂತ ಧನ್ಯನು ಏಕೆಂದರೆ ನಿನಗೆ ಈಗ ಧರ್ಮ, ಅಧರ್ಮ ಇವುಗಳ ಸ್ವರೂಪ ಚೆನ್ನಾಗಿ ತಿಳಿದಿದೆ. ॥೫೨೯-೫೩೦॥

ರಾಜನು ಶೈವನಲ್ಲದಿದ್ದರೆ, ಅವನ ಪ್ರಜೆಗಳೆಲ್ಲರೂ ಅಶೈವರೇ ಆಗುವರು. ಅಂತಹ ರಾಜನಿಂದ ಪಾಲಿತವಾದ ಪ್ರಜಾಕೋಟಿಯೆಲ್ಲವೂ ಘೋರವಾದ ನರಕವನ್ನು ಹೊಂದುವುದು. ॥೫೩೧-೫೩೨॥

ಎಲೈ ರಾಜನೇ, ನೀನು ಶೈವಧರ್ಮರತನೇ ಆಗಿರುವುದರಿಂದ ನಿನ್ನ ದೇಶದಲ್ಲಿರುವ ಶಿವಧರ್ಮಾನುಯಾಯಿಗಳನ್ನು ಧರ್ಮದಿಂದ ರಕ್ಷಿಸು. ಕ್ಷಣಿಕವಾದ ಈ ದೇಹದಲ್ಲಿ ಆಸೆಯನ್ನು ಬಿಡು. ಸರ್ವದಾ ಮಹೇಶ್ವರನನ್ನೇ ಆರಾಧಿಸುತ್ತಿರು. ॥೫೩೩-೫೩೪॥

ಗರ್ಭವಾಸಾದಿದುಃಖಾನಿ ಸ್ಮೃತ್ವಾ ಸ್ಮೃತ್ವಾ ಪುನಃ ಪುನಃ ।
ತದ್ದುಃಖನಾಶಕಂ ನಿತ್ಯಂ ಶಂಕರಂ ಶರಣಂ ವ್ರಜ ॥೫೩೫॥

ವಿನಾ ಮಹೇಶ್ವರಾದನ್ಯಃ ಸಂಸಾರಭಯನಾಶಕಃ ।
ನಾಸ್ತ್ಯತೋಽತ್ಯಂತಯತ್ನೇನ ಪೂಜಯಸ್ವ ಮಹೇಶ್ವರಂ ॥೫೩೬॥

ವಾಂಛಾಂ ಮಾ ಕುರು ವಿಷ್ಣುತ್ವೇ ಬ್ರಹ್ಮತ್ವೇ ವಾ ನರಾಧಿಪ ।
ಕಿಂ ತು ವಾಂಛಯ ಯತ್ನೇನ ಶಿವಸಾಯುಜ್ಯಮಾಸ್ತಿಕ ॥೫೩೭॥

ರಾಜನ್ ಪುರಾ ತ್ವಯಾ ಪ್ರಾಪ್ತಂ ವಿಷ್ಣುತ್ವಂ ಶಿವಪೂಜಯಾ ।
ಬ್ರಹ್ಮತ್ವಂ ಚ ತತಸ್ತತ್ರ ವಾಂಛಾಂ ಮಾ ಕುರು ಸರ್ವಥಾ ॥೫೩೮॥

ಅನಾದಿಭೂತೇ ಸಂಸಾರೇ ಕಿಂ ನ ಪ್ರಾಪ್ತಂ ತ್ವಯಾ ನೃಪ ।
ವಿಷ್ಣುತ್ವಾದೌ ತತೋ ವಾಂಛಾಂ ಮಾ ಕುರುಷ್ವ ಕದಾಚನ ॥೫೩೯॥

ವಿಷ್ಣುತ್ವಪ್ರಾಪಕೇ ಧರ್ಮೇ ಕ್ಷೀಣೇ ಸತಿ ನೃಪೋತ್ತಮ ।
ವಿಷ್ಣುತ್ವರಹಿತೋ ಭೂಮೌ ಪುನರ್ಮರ್ತ್ಯೋ ಭವಿಷ್ಯತಿ ॥೫೪೦॥

ಸಂಸಾರಕ್ಕೆ ಸಂಬಂಧಪಟ್ಟ ಗರ್ಭವಾಸವೇ ಮೊದಲಾದ ದುಃಖಗಳನ್ನು ಜ್ಞಾಪಿಸಿಕೊಂಡು, ಆ ದುಃಖನಾಶಕನಾದ ಮಹಾದೇವನನ್ನು ಯಾವಾಗಲೂ ಆರಾಧಿಸುತ್ತಿರು. ಸಂಸಾರದುಃಖನಾಶಕನು ಮಹೇಶ್ವರನಲ್ಲದೆ ಮತ್ತಾರೂ ಆಗಲಾರನು. ||೫೩೫-೫೩೬||

ಇನ್ನು ಮೇಲೆ ನೀನು ವಿಷ್ಣುಪದವಿಯನ್ನಾಗಲಿ, ಬ್ರಹ್ಮಸ್ಥಾನವನ್ನಾಗಲಿ ಬಯಸಬೇಡ. ಶಿವಸಾಯುಜ್ಯವನ್ನು ಹೊಂದಲು ಪ್ರಯತ್ನಿಸು. ನೀನು ಹಿಂದೆ ಶಿವಪೂಜಾಮಹಿಮೆಯಿಂದ, ವಿಷ್ಣು ಮತ್ತು ಬ್ರಹ್ಮನ ಅಧಿಕಾರದಲ್ಲಿದ್ದು ಮತ್ತೆ ಈ ಜನ್ಮವನ್ನು ತಾಳಿರುವೆ. ಅದಕ್ಕಾಗಿ ಮತ್ತೆ ಆ ಸ್ಥಾನಗಳನ್ನು ಅಪೇಕ್ಷಿಸಬೇಡ. ||೫೩೭-೫೩೮||

ಅನಾದಿಯಾದ ಈ ಸಂಸಾರದಲ್ಲಿ ನೀನು ಎಲ್ಲ ಪದವಿಯನ್ನೂ ಪಡೆದಿರುವೆ. ಆದ್ದರಿಂದಲೇ ವಿಷ್ಣುತ್ವವನ್ನು ಅಪೇಕ್ಷಿಸಬೇಡ. ವಿಷ್ಣುತ್ವವನ್ನು ಅನುಭವಿಸುವ ಸುಕೃತವು ಅನುಭವದಿಂದ ಕ್ಷೀಣಿಸಿದರೆ, ಆತನು ಮತ್ತೆ ಭೂಮಿಯಲ್ಲಿ ಜನ್ಮ ತಾಳುವನು. ||೫೩೯-೫೪೦||

ಏವಂ ಸತಿ ನೃಪಾಧೀಶ ಬ್ರಹ್ಮತ್ವಾದಿಪದೇಷ್ವಪಿ ।
ವಿನಶ್ವರೇಷ್ವತಸ್ತೇಷು ವಾಂಛಾಂ ತ್ಯಜ ವಿವೇಕತಃ ॥೫೪೧॥

ಯಂ ಪ್ರಾಪ್ಯ ಭೂರಿತಪಸಾ ಧರ್ಮೈರ್ನಾನಾವಿಧೈರಪಿ ।
ಭೂಯೋ ನೈವ ನಿವರ್ತಂತೇ ತಮರ್ಚಯ ಮಹೇಶ್ವರಂ ॥೫೪೨॥

ನಿವೃತ್ತಂ ನ ಭವತ್ಯೇವ ಯಥಾ ವಹ್ನಿಗತಂ ಹವಿಃ ।
ತಥಾ ತ್ರಿಯಂಬಕಂ ಪ್ರಾಪ್ಯ ಮಾನವೋ ನ ನಿವರ್ತತೇ ॥೫೪೩॥

ಸತಾಂ ಗತಿರ್ಮಹಾದೇವಃ ಶಾಶ್ವತೋ ಭಕ್ತವತ್ಸಲಃ ।
ಪ್ರಾಪ್ಯಃ ಪ್ರಯತ್ನೈರ್ವಿವಿಧೈಸ್ತದನ್ಯಸ್ತು ನ ತಾದೃಶಃ ॥೫೪೪॥

ಪ್ರಸನ್ನೇ ಶ್ರೀಮಹಾದೇವೇ ಪಶುಪಾಶವಿಮೋಚಕೇ ।
ಮುಕ್ತಾ ಭವಂತಿ ಪಶವೋ ಬ್ರಹ್ಮವಿಷ್ಣ್ವಾದಯೋ ನೃಪ ॥೫೪೫॥

ಬ್ರಹ್ಮವಿಷ್ಣ್ವಾದಯಸ್ಸರ್ವೇ ಪಶವಃ ಪರಿಕೀರ್ತಿತಾಃ ।
ತತ್ಪತಿಃ ಶ್ರೀಮಹಾದೇವಃ ಪಶುಪಾಶವಿಮೋಚಕಃ ॥೫೪೬॥

ಬ್ರಹ್ಮತ್ವವೇ ಮೊದಲಾದ ಸ್ಥಾನಗಳು ನಶ್ವರವಾದವುಗಳು. ಅಂತಹ ಪದವಿಗಳಲ್ಲಿ ಆಸೆಯನ್ನಿಡಬೇಡ. ಮಹೇಶ್ವರಸ್ಥಾನವನ್ನು ಅನೇಕವಿಧವಾದ ಧರ್ಮಮಾರ್ಗಗಳಿಂದ ಹೊಂದಿದವನು ಮತ್ತೆ ಎಂದೂ ಹಿಂದಿರುಗಲಾರನು. ||೫೪೧-೫೪೨||

ಅಗ್ನಿಗೆ ಅರ್ಪಿಸಿದ ಹವಿಸ್ಸು ಹೇಗೆ ಹಿಂದಿರುಗಲಾರದೋ, ಅದೇರೀತಿ ಪರಶಿವನನ್ನು ಹೊಂದಿದ ಮಾನವನು ಹಿಂದಿರುಗಲಾರನು. ಸತ್ಪುರುಷರಿಗೆ ಗತಿಪ್ರದನೂ, ಭಕ್ತವತ್ಸಲನೂ ಆದವನು ಶಂಕರನೊಬ್ಬನೇ. ಸರ್ವಪ್ರಯತ್ನದಿಂದಲೂ ನಾವು ಅವನನ್ನೇ ಸೇವಿಸಬೇಕು. ತತ್ಸದೃಶನಾದವನು ಮತ್ತೆಲ್ಲಿಯೂ ದೊರಕಲಾರನು. ||೫೪೩-೫೪೪||

ಪಶುಗಳೆನಿಸಿದ ಅಜ್ಞಾನಿಗಳ ದುಃಖಪಾಶವನ್ನು ನಾಶಪಡಿಸುವ ಪರಶಿವನು ಪ್ರಸನ್ನನಾದರೆ ವಿಷ್ಣ್ವಾದಿದೇವತೆಗಳೂ ಮುಕ್ತರೆನಿಸುವರು. ||೫೪೫||

ಬ್ರಹ್ಮ, ವಿಷ್ಣುವೇ ಮೊದಲಾದ ಸಕಲ ದೇವತೆಗಳಿಗೂ ಪಶುಗಳೆಂದು ಹೆಸರು. ಅವರಿಗೆಲ್ಲಾ ಪಶುಪತಿಯೆನಿಸಿದ ಶಂಕರನೇ ಒಡೆಯನು. ಶಂಕರನು ಸಂಸಾರವೆಂಬ

ಶಿವಸ್ಸಂಸಾರಪಾಶೇನ ವಿಷ್ಣುಬ್ರಹ್ಮಾದಿಕಾನ್ ಪಶೂನ್ ।
ಬದ್ಧ್ವಾ ಕದಾಚಿತ್ಕೃಪಯಾ ಮೋಚಯತ್ಯಪಿ ತಾನ್ ಪಶೂನ್ ॥೫೪೭॥

ಪಶೂನ್ ಸೃಷ್ಟ್ವೈವ ವಿಷ್ಣ್ವಾದೀನ್ ಪಾಲಯತ್ಯಪಿ ತಾನ್ ಪಶೂನ್ ।
ಸಂಹರಿಷ್ಯತಿ ಚಾಂತೇ ತಾನ್ ಪಶೂನ್ ಪಶುಪತಿಶ್ಶಿವಃ ॥೫೪೮॥

ಏತಾದೃಶಂ ಪಶುಪತಿಂ ನಿತ್ಯಮಾನಂದರೂಪಿಣಂ ।
ಶರಣಂ ಯಾಹಿ ಭೂಪಾಲ ಶರಣ್ಯಂ ಸುಕೃತಾತ್ಮನಾಂ ॥೫೪೯॥

ಭವಂತಿ ಪಶವೋನಿತ್ಯಂ ಯಮಜ್ಞಾತ್ವಾ ಮಹೇಶ್ವರಂ ।
ತಮಾರಾಧಯ ಭೂಪಾಲ ವಿಧಿವದ್ವಿಧಿಬೋಧಿತಂ ॥೫೫೦॥

ಹೃದಿ ಧ್ಯಾತ್ವಾ ಮಹಾದೇವಂ ಸಕೃದಪ್ಯಮಲಾಶಯಾಃ ।
ನ ಗರ್ಭನರಕಾದೀನಿ ಪ್ರಾಪ್ನುವಂತಿ ಧ್ರುವಂ ಧ್ರುವಂ ॥೫೫೧॥

ಗರ್ಭವಾಸಾದಿದುಃಖಾನಿ ತಾವದೇವ ನರಾಧಿಪ ।
ಯಾವನ್ನ ಮನಸಾ ಧ್ಯಾತಃ ಪಾರ್ವತೀಪ್ರಾಣವಲ್ಲಭಃ ॥೫೫೨॥

---

ಪಾಶದಿಂದ ವಿಷ್ಣ್ವಾದಿದೇವತೆಗಳೆಂಬ ಪಶುಗಳನ್ನು ಕಟ್ಟಿಹಾಕುವನು. ಒಂದೊಂದು ವೇಳೆ ದಯೆಯಿಂದ ಅವರನ್ನು ಬಿಡಿಸುವನು. ಪ್ರಳಯಕಾಲಪರ್ಯಂತ ಇವರನ್ನೆಲ್ಲಾ ಹೀಗೆ ರಕ್ಷಿಸಿ, ಕೊನೆಗೆ ಎಲ್ಲರನ್ನೂ ಸಂಹಾರಮಾಡಿಬಿಡುವನು. ||೫೪೬-೫೪೭-೫೪೮||

ಎಲೈ ರಾಜನೇ, ಇಂತಹ ನಿತ್ಯಾನಂದರೂಪಿಯಾದ ಪಶುಪತಿಯನ್ನು ಮೊದಲು ಶರಣುಹೊಂದು. ಸುಕೃತಿಗಳಿಗೆ ಅವನೇ ರಕ್ಷಕನು. ಆದರೆ ಅಜ್ಞಾನಿಗಳು ಅವನ ಸ್ವರೂಪವನ್ನರಿಯದೆ ಮತ್ತೆ ಮತ್ತೆ ಪಶುಗಳಾಗಿ ಜನಿಸುವರು. ನೀನು ಹಾಗಾಗದೆ ತಪ್ಪದೆ ವಿಧಿವತ್ತಾಗಿ ಪರಶಿವನನ್ನು ಪೂಜಿಸು. ||೫೪೯-೫೫೦||

ಪವಿತ್ರವಾದ ಧ್ಯೇಯವುಳ್ಳ ಮಹನೀಯರು ಸರ್ವದಾ ತಮ್ಮ ಹೃದಯ ಕಮಲದಲ್ಲಿ ಪರಶಿವನನ್ನು ಧ್ಯಾನಿಸುತ್ತಾ, ಗರ್ಭವಾಸಾದಿ ಸಕಲದುಃಖಗಳನ್ನೂ ಕಳೆದುಕೊಳ್ಳುವರು. ಪಾರ್ವತೀಪತಿಯಾದ ಪರಶಿವನನ್ನು ಧ್ಯಾನಿಸುವ ಪರ್ಯಂತ ಮನುಷ್ಯರಿಗೆ ಗರ್ಭವಾಸಾದಿ ಸಕಲ ದುಃಖಗಳೂ ಇರುವುವು. ||೫೫೧-೫೫೨||

ಪಾರ್ವತೀನಾಥ ವಿಶ್ವೇಶ ಮಹೇಶೇತಿ ಜಪಂತಿ ಯೇ ।
ತಾನಂತೇ ಮೋಚಯತ್ಯೇವ ಶಿವಃ ಸಂಸಾರಪಾಶತಃ

ಸಂಸಾರಂ ದುಸ್ತರಂ ಜ್ಞಾತ್ವಾ ಜ್ಞಾತ್ವಾ ಜನ್ಮಚ ದುಃಖದಂ ।
ಭಜಂತಿ ಶ್ರೀಮಹಾದೇವಂ ಮುನಯೋ ವೀತಕಲ್ಮಷಾಃ ॥೫೫೪॥

ಭಜ ಶಂಕರಮಾರಾಧ್ಯಂ ಯಜ ಶಂಕರಮನ್ವಹಂ ।
ಜಪ ನಾಮಾನಿ ಶೈವಾನಿ ಭಸ್ಮೋದ್ಧೂಲನಪೂರ್ವಕಂ ॥೫೫೫॥

ಅಯಮೇವೋಪದೇಶಸ್ತೇ ಕರ್ತವ್ಯೋಽಸ್ಮಾಭಿರಾದರಾತ್ ।
ಯತಶ್ಶೈವೋ ಭವಾನ್ ರಾಜನ್ ಮೋಕ್ಷಾರ್ಥೀ ಶಿವತತ್ಪರಃ॥೫೫೬॥

ಅಶಾಂಕರಾಯೋಪದೇಶೋ ನೇದೃಶಃ ಕ್ರಿಯತೇ ನೃಪ ।
ತತೋ ಧರ್ಮೋಪದೇಶಾರ್ಹಸ್ತಾದೃಶೋ ನಹಿ ವಸ್ತುತಃ ॥೫೫೭॥

ಸುಕ್ಷೇತ್ರೋಪ್ತಂ ಯಥಾ ಬೀಜಂ ಫಲತಿ ಸ್ವಾನುರೂಪಕಃ ।
ತಥಾ ಧರ್ಮೋಪದೇಶೋಽಪಿ ಶೈವೇ ಫಲತಿ ವಸ್ತುತಃ ॥೫೫೮॥

ಯಥೋಪ್ತಮೂಷರಕ್ಷೇತ್ರೇ ಬೀಜಂ ನ ಫಲದಾಯಕಂ ।
ತಥಾ ಧರ್ಮೋಪದೇಶೋಽಯಂ ಶೈವಾನ್ಯೇನ ಫಲಪ್ರದಃ ॥೫೫೯॥

ಯಾರು ಪರಶಿವನನ್ನು, ಪಾರ್ವತೀಪತಿಯೇ, ವಿಶ್ವೇಶ್ವರನೇ, ಮಹೇಶ್ವರನೇ ಎಂದು ಹೇಳುತ್ತಾ ಸರ್ವದಾ ಅವನನ್ನೇ ಜಪಿಸುತ್ತಿರುವರೋ, ಅಂತಹವರ ದುಃಖರಾಶಿಯನ್ನು ಪರಮೇಶ್ವರನು ಜಾಗ್ರತೆಯಾಗಿ ಹೋಗಲಾಡಿಸುವನು. ಸಂಸಾರವು ದುಸ್ತರವಾದುದೆಂದೂ, ಜನ್ಮಪ್ರಾಪ್ತಿಯು ದುಃಖಪ್ರದವೆಂದೂ ತಿಳಿದು, ಯಾರು ಚಿತ್ತಶುದ್ಧಿಯಿಂದ ಮಹಾದೇವನನ್ನು ಸ್ಮರಿಸುವರೋ, ಅವರೇ ಜ್ಞಾನಿಗಳು. ಅವರನ್ನೇ ಮಹರ್ಷಿಗಳೆಂದು ಕರೆಯಬೇಕು. ||೫೫೩-೫೫೪||

ಪರಮಪೂಜ್ಯನಾದ ಶಂಕರನನ್ನೇ ಸದಾ ಸೇವಿಸು ಮತ್ತು ಆರಾಧಿಸು. ಅವನ ನಾಮಗಳನ್ನೇ ಜಪಿಸು ಸದಾ ಭಸ್ಮಧಾರಿಯಾಗಿರು. ಇದೇ ಉಪದೇಶವನ್ನೇ ಶೈವನೂ, ಮೋಕ್ಷಾರ್ಥಿಯೂ ಆದ ನಿನಗೆ ಉಪದೇಶಿಸುವೆನು ||೫೫೫-೫೫೬||

ಶಿವಧರ್ಮಾನುಯಾಯಿಯಲ್ಲದವನಿಗೆ ಈರೀತಿ ಉಪದೇಶಮಾಡಬಾರದು. ಏಕೆಂದರೆ, ಆತನು ಈ ವಿಧದ ಉಪದೇಶಕ್ಕೆ ಅರ್ಹನಲ್ಲ. ಫಲವತ್ತಾದ ಭೂಮಿಯಲ್ಲಿ

ಅಶೈವಾನ್ ಸಾವಧಾನೇನ ಶಿಕ್ಷಯಸ್ವ ನರಾಧಿಪ ।
ಶೈವಾನತ್ಯಂತಯತ್ನೇನ ಪಾಲಯಸ್ವ ಸ್ವಶಕ್ತಿತಃ ॥೫೬೦॥

ಅಸ್ಮಿನ್ ಮಧ್ಯಾರ್ಜುನಕ್ಷೇತ್ರೇ ಕೃತಂ ಧರ್ಮಾನುಪಾಲನಂ ।
ಕೃತಾಮಧ್ಯಾರ್ಜುನೇಶಸ್ಯ ಪೂಜಾಪಿ ಪ್ರತಿವಾಸರಂ ॥೫೬೧॥

ಅಸ್ಮಿನ್ ಮಧ್ಯಾರ್ಜುನೇ ವಾಸೋ ದೇವಾನಾಮಪಿ ದುರ್ಲಭಃ ।
ಕ್ಷೇತ್ರಮೇತನ್ನೃಪಶ್ರೇಷ್ಠ ಶಿವಲಿಂಗಾತ್ಮಕಂ ಯತಃ ॥೫೬೨॥

ಉಷಿತ್ವೈಕದಿನಂ ವಾತ್ರ ದೃಷ್ಟ್ವಾ ಮಧ್ಯಾರ್ಜುನೇಶ್ವರಂ ।
ಸಂಪೂಜ್ಯ ಚ ಯಥಾ ಶಕ್ತ್ಯಾ ಪ್ರಯಾಂತ್ಯೇವ ಶಿವಂ ಜನಾಃ॥೫೬೩॥

ಪುರಾ ವಾಸಃ ಕೃತೋ ಭೂಪ ಶಿವಸ್ಥಾನೇಷು ಭೂರಿಶಃ ।
ತದ್ವಾಸಫಲತೋ ವಾಸಸ್ತ್ವಯಾ ಪ್ರಾಪ್ತೋತ್ರ ಭೂಪತೇ ॥೫೬೪॥

ನೀತಾನ್ಯನೇಕಜನ್ಮಾನಿ ತ್ವಯಾತ್ಯುಗ್ರತಪಾಂಸಿ ಚ ।
ಕೃತಾನಿ ಕಾಶೀಪ್ರಾಪ್ತ್ಯರ್ಥಂ ಶಿವಪೂಜಾಪುರಸ್ಸರಂ ॥೫೬೫॥

ಬಿತ್ತಿದ ಬೀಜವು ಫಲಕಾರಿಯಾಗುವಂತೆ, ಬಂಜರುಭೂಮಿಯ ಬೀಜವು ಸಫಲವಾಗಲಾರದು. ಆದರಂತೆ ಶೈವನಲ್ಲದವನಿಗೆ ಉಪದೇಶಿಸಿದ ಸದ್ವಿದ್ಯೆಯು ಫಲಪ್ರದವಾಗಲಾರದು. ||೫೫೭-೫೫೮-೫೫೯||

ಎಲೈ ರಾಜನೇ, ಶೈವರಲ್ಲದವರಿಗೆ ಶಿಕ್ಷೆಯನ್ನು ವಿಧಿಸಿ, ಶಿವಧರ್ಮಾನುಯಾಯಿಗಳಿಗೆ ರಕ್ಷಣೆಕೊಡು. ಈ ಮಧ್ಯಾರ್ಜುನಕ್ಷೇತ್ರದಲ್ಲಿ ಧರ್ಮವನ್ನು ಪಾಲಿಸುವುದೂ, ಮಧ್ಯಾರ್ಜುನೇಶ್ವರನನ್ನು ನಿತ್ಯವೂ ಪೂಜಿಸುವುದೂ ಶ್ರೇಯಸ್ಕರವು. ||೫೬೦-೫೬೧||

ಈ ಮಧ್ಯಾರ್ಜುನಕ್ಷೇತ್ರವಾಸವು ದೇವತೆಗಳಿಗೂ ದೊರೆಯಲಾರದು. ಈ ಕ್ಷೇತ್ರವೇ ಶಿವಲಿಂಗಾತ್ಮಕವಾದದ್ದು. ಇಲ್ಲಿ ಒಂದುದಿನ ವಾಸಮಾಡಿ, ಮಧ್ಯಾರ್ಜುನೇಶ್ವರನನ್ನು ಧ್ಯಾನಿಸಿ ಪೂಜಿಸಿದರೆ ಅವರು ಶಿವಪದವಿಯನ್ನು ಹೊಂದುವರು. ||೫೬೨-೫೬೩||

ರಾಜನೇ, ನೀನು ಹಿಂದೆ ಅನೇಕ ಶಿವಸ್ಥಾನಗಳಲ್ಲಿ ವಾಸಮಾಡಿರುವೆ. ಆದರ ಫಲವಾಗಿ ಈಗ ನಿನಗೆ ಈ ಕ್ಷೇತ್ರವಾಸವು ದೊರೆತಿರುವುದು. ಅನೇಕ ಜನ್ಮಗಳಲ್ಲಿ

ಅತಃ ಪರಂ ಭುಕ್ತಭೋಗಃ ಕಾಶೀಂ ವ್ರಜನಿಧಾನತಃ ।
ಮಯಾಪಿ ಗಮ್ಯತೇ ಕಾಶೀಂ ಶ್ವಃ ಪರಶ್ವೋಽಥವಾ ನೃಪ ॥೫೬೬॥

॥ ಸದಾಶಿವ ಉವಾಚ ॥

ಇತಿ ಪೀಯೂಷಸದೃಶಂ ದಧೀಚಿವಚನಂ ಶಿವೇ ।
ಶ್ರುತ್ವಾ ಸ ಧರ್ಮಮೂರ್ತಿಸ್ತಂ ಪ್ರಣಮ್ಯಾಹ ಕೃತಾಂಜಲಿಃ ॥೫೬೭॥

॥ ಧರ್ಮಮೂರ್ತಿರುವಾಚ ॥

ಕೃತಾರ್ಥೋಽಸ್ಮಿ ಮುನಿಶ್ರೇಷ್ಠ ಕೃಪಾ ಮಯಿ ಕೃತಾ ತ್ವಯಾ ।
ಯತಸ್ಸರ್ವಾರ್ಥದಾ ಪುಣ್ಯಾ ಶ್ರಾವಿತಾ ಶಾಂಕರೀ ಕಥಾ ॥೫೬೮॥

ಮುನೇ ಭವಾದೃಶಾಶ್ಶೈವಾ ಯತೋ ದೀನದಯಾಲವಃ ।
ಶ್ರಾವಿತಾ ಕಥಮೇವಾದ್ಯ ಕಥಾ ಪಾಪೌಘಹಾರಿಣೀ ॥೫೬೯॥

ಭವತಾಂ ದರ್ಶನೇನೈವ ನಷ್ಟಂ ಪಾಪವನಂ ಮಮ ।
ಪುಣ್ಯಾ ಶಿವಕಥೈಷಾತು ಮಹ್ಯಂ ಮೋಕ್ಷಂ ಪ್ರಯಚ್ಛತಿ ॥೫೭೦॥

---

ನೀನು ಕಾಶೀಕ್ಷೇತ್ರಪ್ರಾಪ್ತ್ಯರ್ಥವಾಗಿ ಉಗ್ರವಾದ ತಪಸ್ಸನ್ನಾಚರಿಸಿರುವೆ ಅದರ ಫಲವಾಗಿ ಈಗ ನೀನು ಕಾಶೀಕ್ಷೇತ್ರವನ್ನು ಸೇರು. ನಾನೂ ಸಹ ಕಾಶಿಗೆ ನಾಳೆಯೋ ನಾಡಿದ್ದೋ ಹೊರಡುವೆನು. ||೫೬೪-೫೬೫-೫೬೬||

ಹೀಗೆಂದು ಹೇಳಿದ ದಧೀಚಿಮಹರ್ಷಿಯು ಅಮೃತೋಪಮವಾದ ಮಾತುಗಳನ್ನು ಕೇಳಿ ಧರ್ಮಮೂರ್ತಿಯೆಂಬ ರಾಜನು " ಮಹರ್ಷಿಯೇ, ಈಗ ನಾನು ಧನ್ಯನಾದೆನು. ನನ್ನಮೇಲೆ ನೀನು ಕೃಪೆಮಾಡಿ, ಇಷ್ಟಾರ್ಥಪ್ರದವಾದ ಈಶ್ವರ ಮಹಿಮೆಯನ್ನು ನನಗೆ ತಿಳಿಸಿರುವೆ. ೫೬೭-೫೬೮||

ಮಹರ್ಷಿಯೇ, ನಿನ್ನಂತಹ ಶಿವಧರ್ಮಾನುಯಾಯಿಗಳೇ ದೀನರಲ್ಲಿ ದಯಾಳುಗಳು. ನಿಮ್ಮ ದರ್ಶನದಿಂದಲೇ ನನ್ನ ಪಾಪವೆಂಬ ಕಾಡು ನಷ್ಟವಾಯಿತು. ಈ ಪುಣ್ಯಪ್ರದವಾದ ಶಿವಕಥೆಯು ನನಗೆ ನಿಜವಾಗಿ ಮೋಕ್ಷವನ್ನು ಅನುಗ್ರಹಿಸುವುದು ಇದು ನಿಜ. ||೫೬೯-೫೭೦||

|| ಸದಾಶಿವ ಉವಾಚ ||

ಕದಾ ವಾಗಮ್ಯತೇ ಕಾಶ್ಯಾಂ ಜ್ಞಾಪಯಿತ್ವಾ ಪ್ರಯಾಂತು ವಃ ।
ಸತ್ಸಂಗತಿಮವಾಪ್ಯಾಹಂ ಯಾಸ್ಯಾಮ್ಯತ್ರ ನ ಸಂಶಯಃ ||೫೭೦||

ಇತ್ಯುಕ್ತ್ವಾ ಸ ನೃಪೋ ಭೂಪಃ ಶಾಂಭವಾನ್ಮುನಿಸತ್ತಮಾನ್ ।
ಪೂಜಯಾಮಾಸ ಯತ್ನೇನ ಭಕ್ತಿಶ್ರದ್ಧಾಪುರಸ್ಸರಂ ||೫೭೨||

ದಧೀಚಿಪ್ರಮುಖಾಸ್ಸರ್ವೇ ತೇನ ಭೂಪೇನ ಪೂಜಿತಾಃ ।
ಯಯುಸ್ಸ್ವಸ್ವಾಶ್ರಮಂ ದೇವಿ ಸ್ಮರಂತೋ ಮಾಮಜಂ ವಿಭುಂ ||೫೭೩||

ದಧೀಚ್ಯಾದ್ಯಾಃ ಕಿಯತ್ಕಾಲಂ ನಿದ್ರಾಂ ಕೃತ್ವಾ ತತಃ ಪರಂ ।
ಕಾಶೀಂ ಗಂತುಂ ಸಮುದ್ಯುಕ್ತಾಃ ಪ್ರಾತಃ ಸ್ನಾತ್ವಾ ಯಥಾವಿಧಿ ||೫೭೪||

ತತಶ್ಶ್ರಾದ್ಧಾದಿಕಂ ಕೃತ್ವಾ ಯಥಾಶಾಸ್ತ್ರಂ ಯಥಾಕ್ರಮಂ ।
ಪ್ರತಸ್ಥಿರೇ ತತಃ ಕಾಶೀಂ ರಾಜಧಾನೀಂ ಮಮ ಪ್ರಿಯೇ ||೫೭೫||

ರಾಜಾಪಿ ರಾಜ್ಯಂ ವಿನ್ಯಸ್ಯ ಪುತ್ರೇಷು ವಿಧಿವತ್ತತಃ ।
ಸಹೈವ ಋಷಿಭಿಃ ಕಾಶೀಂ ಸಂಪ್ರಾಪ್ಯ ವಿಧಿವಚ್ಛಿವೇ ||೫೭೬||

ಮಹರ್ಷಿಯೇ, ತಾವು ಎಂದು ಕಾಶಿಗೆ ಪ್ರಯಾಣಮಾಡುವಿರೋ ಅಂದು ನಾನು ತಮ್ಮ ಜೊತೆಯಲ್ಲಿ ಸೇರಿ ಸತ್ಸಹವಾಸದಿಂದ ಕಾಶಿಯನ್ನು ತಲಪುವೆನು" ಎಂದು ಪ್ರಾರ್ಥಿಸಿಕೊಂಡು, ಭಕ್ತಿಶ್ರದ್ಧಾಪುರಸ್ಸರವಾಗಿ ಅಲ್ಲಿಗೆ ಬಂದ ಶಾಂಭವ ಶ್ರೇಷ್ಠರನ್ನೆಲ್ಲಾ ಭಕ್ತಿಯಿಂದರ್ಚಿಸಿದನು. ||೫೭೧-೫೭೨||

ಎಲೌ ದೇವಿಯೇ, ಹಾಗೆ ಪೂಜಿತರಾದ ದಧೀಚಿಯೇ ಮೊದಲಾದವರು, ನನ್ನನ್ನೇ ಸ್ಮರಿಸುತ್ತಾ, ತಮ್ಮತಮ್ಮ ಆಶ್ರಮವನ್ನು ಹೊಕ್ಕು, ಆರಾತ್ರಿ ಅಲ್ಲಿ ನಿದ್ರಿಸಿ, ಮುಂದಿನದಿನವೇ ಸ್ನಾನಾದಿಗಳನ್ನು ನೆರವೇರಿಸಿಕೊಂಡು ಕಾಶೀನಗರಕ್ಕೆ ಹೋಗಲು ಸಿದ್ಧರಾದರು. ||೫೭೩-೫೭೪||

ಹೊರಡುವಾಗ ಅವರು ಪಿತೃಕರ್ಮಗಳನ್ನು ನೆರವೇರಿಸಿಕೊಂಡು, ಕಾಶೀಪ್ರಯಾಣ ನಿರತರಾದರು. ಆ ಧರ್ಮಮೂರ್ತಿರಾಜನಾದರೋ, ತನ್ನ ರಾಜ್ಯಭಾರವನ್ನು ಮಕ್ಕಳಿಗೊಪ್ಪಿಸಿ ಋಷಿಜನರೊಡನೆ ತಾನೂ ಕಾಶಿಗೆ ಪ್ರಯಾಣಮಾಡಿದನು. ||೫೭೫-೫೭೬||

ಕಾಶೀಂ ಸಂಪ್ರಾಪ್ಯ ತೇ ಸರ್ವೇ ಪ್ರಾಪುರಾನಂದಮಕ್ಷಯಂ ।
ಜ್ಞಾನವಾಪ್ಯಾಂ ತತಸ್ಸರ್ವೇ ಸ್ನಾನಂ ಚಕ್ರುರ್ಯಥಾವಿಧಿ ॥೫೭೭॥

ಜ್ಞಾನೇಶಾದೀಂಸ್ತತೋಭ್ಯರ್ಚ್ಯ ವಿಶ್ವೇಶ್ವರಮುಮಾಪತಿಂ ।
ಜಲಬಿಲ್ವಪ್ರಸೂನಾದ್ಯೈಃ ಪೂಜಯಾಮಾಸುರಂಬಿಕೇ ॥೫೭೮॥

ಪೂಜಯಂತಃ ಸ್ಥಿತಾಶ್ಚಾಂತೇ ಬಹುಕಾಲಂ ವರಾನನೇ ।
ಸರ್ವೇ ಮುಕ್ತಾಸ್ತತೋ ದೇವಿ ಮತ್ಪ್ರಸಾದಾದಕಲ್ಮಷಾಃ ॥೫೭೯॥

ಇದಂ ಲಿಂಗಮುಪಾಶ್ರಿತ್ಯ ಕೋ ಯಾತಿ ಮರಣಂ ವಿನಾ ।
ಮೃತ್ಯುಂ ವಾಂಛತಿ ಧನ್ಯೋತ್ರ ಶೈವಂ ಗುರುಮಿವಪ್ರಿಯಂ ॥೫೮೦॥

ಯೋ ಯಾತಿ ಕಾಶೀಂ ಸಂಪ್ರಾಪ್ಯಾಪ್ಯಧಮಃ ಪಾಪಕೃಚ್ಛಿವೇ ।
ತಸ್ಯ ಮುಕ್ತಿಃ ಕಥಂ ಭೂಯಾನ್ಮಹಾಕಲ್ಪಶತೈರಪಿ ॥೫೮೧॥

ಮಧ್ಯಾರ್ಜುನೇಶಂ ಸಂಪ್ರಾಪ್ಯ ಯೇ ಸ್ಥಿತಾ ಭಕ್ತಿಪೂರ್ವಕಂ ।
ತೇಷಾಂ ಕಾಶ್ಯಾಂ ಪ್ರಯತ್ನೇನ ಮರ್ತವ್ಯಮಿತಿಧೀಸ್ಸದಾ ॥೫೮೨॥

ಅವರೆಲ್ಲರೂ ಕಾಶಿಯನ್ನು ಸೇರಿ ಮೊದಲು ಅಲ್ಲಿ ಜ್ಞಾನವಾಪಿಯಲ್ಲಿ ಸ್ನಾನ ಮಾಡಿ, ಜ್ಞಾನೇಶ್ವರನೇ ಮೊದಲಾದ ಶಿವಲಿಂಗಗಳನ್ನು ಪೂಜಿಸುತ್ತಾ ಮುಂದುವರಿದು, ವಿಶ್ವೇಶ್ವರಲಿಂಗವನ್ನು ನೀರು, ಬಿಲ್ವಪತ್ರೆ, ಪುಷ್ಪ ಇವೇ ಮೊದಲಾದುವುಗಳಿಂದ ವಿಧಿವತ್ತಾಗಿ ಪೂಜಿಸಿದರು. ॥೫೭೭-೫೭೮॥

ಎಲೌ ಗೌರಿಯೇ, ಮತ್ತು ಅವರೆಲ್ಲರೂ ಅಲ್ಲಿಯೇ ಬಹುಕಾಲ ನೆಲಸಿದ್ದು, ನನ್ನನ್ನೇ ಧ್ಯಾನಿಸುತ್ತಾ, ಪಾಪರಹಿತರಾಗಿ ಮುಕ್ತರಾದರು. ಯಾರು ಈ ಶಿವಲಿಂಗವನ್ನು ಆಶ್ರಯಿಸಿ, ಅಲ್ಲಿಯೇ ಮೃತಿಹೊಂದದೆ, ಕೆಲವು ದಿನಗಳಿದ್ದು ಹಿಂದಿರುಗುವರೋ, ಅವರು ಶೈವ ಸದ್ಗುರುವನ್ನು ಕಳೆದುಕೊಂಡ ಪಾಪಿಗಳಂತೆ ಅಕಾಲಮೃತ್ಯುವನ್ನು ಅರಸುವರು. ॥೫೭೯-೫೮೦॥

ದೇವಿಯೇ, ಕಾಶಿಯನ್ನು ಸೇರಿದರೂ, ನೀಚರಾದವರು ಪಾಪಕಾರ್ಯಾಸಕ್ತರಾಗಿ ನಿಂತರೆ, ಅವರಿಗೆ ಎಷ್ಟು ಕಲ್ಪಗಳಾದರೂ ಮುಕ್ತಿಯು ದೊರಕುವುದೆ? ಅಂತಹ ಕಾಶಿಯಲ್ಲಿ ಮರಣಹೊಂದಬೇಕೆಂಬ ಬುದ್ಧಿಯುದಯಿಸಬೇಕಾದರೆ ಮನುಷ್ಯನು

ಮಧ್ಯಾರ್ಜುನೇಶಂ ಮದನುಗ್ರಹೇಣ
ಮಾಯಾವಿಮುಕ್ತಾ ಮಯಿ ಸಕ್ತಚಿತ್ತಾಃ ।
ಸಂಪ್ರಾಪ್ಯ ಸಂಸಾರದವಾಗ್ನಿಶಾಂತ್ಯೈ
ಸಂಪೂಜ್ಯ ತಿಷ್ಠಂತಿ ಶಿವೇ ಶುಭಾನನೇ ॥೫೮೩॥

ಇತಿ ಶ್ರೀ ಶಿವರಹಸ್ಯೇ ಉಗ್ರಾಖ್ಯೇ ಸಪ್ತಮಾಂಶೇ
ಪೂರ್ವಭಾಗೇ ಮಧ್ಯಾರ್ಜುನೇಶಮಹಿಮಾವರ್ಣನೇ
ಅಷ್ಟಾವಿಂಶೋಽಧ್ಯಾಯಃ

---

ಮಧ್ಯಾರ್ಜುನಕ್ಷೇತ್ರದಲ್ಲಿದ್ದು ಮಧ್ಯಾರ್ಜುನೇಶ್ವರನನ್ನು ಪೂಜಿಸಬೇಕು. ॥೫೮೧-೫೮೨॥

ಎಲೌ ಮಂಗಳಾಂಗಿಯಾದ ಪಾರ್ವತಿಯೇ, ಜನರಿಗೆ ಮಧ್ಯಾರ್ಜುನೇಶ್ವರನನ್ನು ಪೂಜಿಸಲು ನನ್ನ ಸಂಪೂರ್ಣಾನುಗ್ರಹವಿರಬೇಕು. ಆದರಿಂದ ಅವರು ಹಾಗೆ ಮಧ್ಯಾರ್ಜುನೇಶ್ವರನನ್ನು ಪೂಜಿಸಿ, ಅಜ್ಞಾನವನ್ನು ಕಳೆದುಕೊಂಡು, ತನ್ಮೂಲಕ ಸಂಸಾರದುಃಖವನ್ನು ದೂರೀಕರಿಸಿ, ಹಾಗೆಯೇ ಕಾಶ್ಯಾದಿಪುಣ್ಯಕ್ಷೇತ್ರಗಳಲ್ಲಿ ಸಂಚರಿಸಿ ಶಾಶ್ವತವಾದ ಮುಕ್ತಿಯನ್ನು ಸಂಪಾದಿಸುವರು. ಇದು ನಿಶ್ಚಯು" ಎಂದು ಪರಮೇಶ್ವರನು ಪಾರ್ವತಿಗೆ ಬೋಧಿಸಿದನೆಂದು ಜೈಗೀಷವ್ಯಮಹರ್ಷಿಗಳು ಮಧ್ಯಾರ್ಜುನೇಶ್ವರ ಮಹಿಮೆಯನ್ನು ವಿವರಿಸಿ ಹೇಳಿದರು ॥೫೮೩॥

ಇಲ್ಲಿಗೆ ಶ್ರೀಶಿವರಹಸ್ಯದ ಉಗ್ರನಾಮಕವಾದ ಏಳನೆಯ ಅಂಶದ ಪೂರ್ವಾರ್ಧದಲ್ಲಿ
ಮಧ್ಯಾರ್ಜುನೇಶ್ವರಮಹಿಮೆಯನ್ನು ವಿವರಿಸುವ ಇಪ್ಪತ್ತೆಂಟನೆಯ ಅಧ್ಯಾಯವು
ಮುಗಿದುದು

|| ಶ್ರೀ

|| ಶ್ರೀ ಶಿವಾಯನಮಃ ||

# ಅಥ ಶ್ರೀ ಶಿವರಹಸ್ಯೇ

## ಉಗ್ರಾಖ್ಯೇ

### ಸಪ್ತಮಾಂಶೇ ಪೂರ್ವಾರ್ಧೇ

## ಏಕೋನತ್ರಿಂಶೋಽಧ್ಯಾಯಃ

|| ಶ್ರೀಶಿವ ಉವಾಚ ||

ಶಿವಮಧ್ಯಾರ್ಜುನಾದೀನಿ ಸಂತಿ ತೀರ್ಥಾನಿ ಕೋಟಿಶಃ ।
ತೇಷಾಂ ಪ್ರಭಾವಃ ಕೇನಾಪಿ ನ ಜ್ಞಾತುಂ ಶಕ್ಯತೇ ಧ್ರುವಂ ॥೧॥

ಪೃಥಿವ್ಯಾಂ ಸಂತಿ ತೀರ್ಥಾನಿ ಕೋಟಿಶಃ ಕಮಲಾನನೇ ।
ತಾನಿ ಸರ್ವಾಣಿ ತೀರ್ಥಾನಿ ಕಾಶೀಪ್ರಾಪ್ತಿಕರಾಣಿ ಹಿ ॥೨॥

ಪಾತಾಲಾದಿಷು ಲೋಕೇಷು ಸಂತಿ ತೀರ್ಥಾನಿ ಯಾನಿ ಚ ।
ತಾನಿ ಸರ್ವಾಣಿ ತೀರ್ಥಾನಿ ಕಾಶೀಪ್ರಾಪ್ತಿಕರಾಣಿ ಹಿ ॥೩॥

ಭುವರಾದಿಷು ಲೋಕೇಷು ಸಂತಿ ತೀರ್ಥಾನಿ ಯಾನಿ ಚ ।
ತಾನಿ ಸರ್ವಾಣಿ ತೀರ್ಥಾನಿ ಕಾಶೀಪ್ರಾಪ್ತಿಕರಾಣಿ ಚ ॥೪॥

## ಇಪ್ಪತ್ತೊಂಬತ್ತನೆಯ ಅಧ್ಯಾಯ

ಪರಶಿವನು ಮತ್ತೆ ತೀರ್ಥಕ್ಷೇತ್ರಾದಿಗಳನ್ನು ವರ್ಣಿಸುತ್ತಾ ದೇವಿಯನ್ನು ಕುರಿತು ಹೀಗೆಂದನು—"ದೇವಿಯೇ, ಭೂಲೋಕದಲ್ಲಿ ಶಿವಮಧ್ಯಾರ್ಜುನವೇ ಮೊದಲಾದ ಅನೇಕ ತೀರ್ಥಕ್ಷೇತ್ರಗಳಿರುವುವು. ಅವುಗಳ ಮಹಿಮೆಯನ್ನು ವರ್ಣಿಸಲಸದಳ. ಅಂತಹ ಕ್ಷೇತ್ರಗಳು ಎಷ್ಟು ಕಂಡುಬರುವುವೋ, ಅಲ್ಲಿರುವ ಆ ತೀರ್ಥಸೇವನೆಯಿಂದ ಮನುಷ್ಯರಿಗೆ ಕಾಶೀವಾಸವು ಲಭಿಸುವುದು. ||೧-೨||

ಪಾತಾಲ ಮತ್ತು ಭುವರ್ಲೋಕವೇ ಮೊದಲಾದ ಲೋಕಗಳಲ್ಲಿರುವ ಸಕಲ ತೀರ್ಥಗಳೂ ಕಾಶೀಕ್ಷೇತ್ರಪ್ರಾಪ್ತಿಯಲ್ಲಿ ಪರ್ಯವಸಾನ ಹೊಂದುವುವು ||೩-೪||

ಶ್ರೀ ಕಾಶೀಕ್ಷೇತ್ರಭಿನ್ನಾನಿ ಸಂತಿ ತೀರ್ಥಾನಿ ಕೋಟಿಶಃ ।
ತೇಷು ತಪ್ತತಪಸ್ಕೇಷಾ ಕಾಶೀ ಸಂಪ್ರಾಪ್ಯತೇ ಶಿವೇ ॥೫॥

ಯಾವಂತಿ ಸಂತಿ ತೀರ್ಥಾನಿ ಸರ್ವಲೋಕೇಷು ಶೈಲಜೇ ।
ತಾವತಾಮಪಿ ತೀರ್ಥಾನಾಂ ಕಾಶೀಪ್ರಾಪ್ತಿಫಲಂ ಶಿವೇ ।೬॥

ಏಕೈಕಸ್ಮಿನ್ಪೃಥಕ್ಷೇತ್ರೇ ಕಾಶೀಭಿನ್ನೇ ಸಹಸ್ರಧಾ ।
ಯೇನ ತಪ್ತಂ ತಪಸ್ತೇನ ಕಾಶೀ ಸಂಪ್ರಾಪ್ಯತೇ ಶಿವೇ ॥೭॥

ಅನಂತಜನ್ಮಭಿರ್ಯೇನ ಕೃತಾ ಧರ್ಮಾಃ ಸಹಸ್ರಧಾ ।
ತೇನೈವ ಲಭ್ಯತೇ ಕಾಶೀ ಮದ್ರೂಪಾ ಮುಕ್ತಿದಾಯಿನೀ ॥೮॥

ಕಾಶೀತೋಽಪ್ಯಧಿಕಂ ತೀರ್ಥಂ ನ ಕುತ್ರಾಪಿ ವರಾನನೇ ।
ಸತ್ಯಂ ಸತ್ಯಂ ಪುನಸ್ಸತ್ಯಮುದ್ಧೃತ್ಯ ಭುಜಮುಚ್ಯತೇ ।೯॥

ಕಾಶೀತೋಽಪ್ಯಧಿಕಂ ತೀರ್ಥಮನ್ಯದಸ್ತೀತಿ ಯೋ ವದೇತ್ ।
ಸ ವೇದಬಾಹ್ಯ ಇತ್ಯೇವ ಜ್ಞಾತವ್ಯೋ ವೇದವಾದಿಭಿಃ ॥೧೦॥

ಕಾಶೀನಗರವನ್ನು ಬಿಟ್ಟು ಉಳಿದ ಕಡೆ ಇರುವ ತೀರ್ಥಕ್ಷೇತ್ರಗಳ ಸೇವನೆಯೆಲ್ಲಾ ಕಾಶೀವಾಸಪ್ರಾಪ್ತಿಗೆ ಮುಖ್ಯಕಾರಣವಾಗುವುದು. ಅಲ್ಲಿ ಮಾಡಿದ ತಪಸ್ಸಿನಿಂದ ಕಾಶೀಕ್ಷೇತ್ರವಾಸವು ಲಭಿಸುವುದು. ॥೫-೬॥

ಪ್ರತಿ ಕ್ಷೇತ್ರದಲ್ಲಿಯೂ ಸಹಸ್ರ ಸಾರಿ ತಪಸ್ಸುಮಾಡುವುದರಿಂದ ಲಭಿಸುವ ಸುಕೃತವು ಕಾಶಿಯನ್ನು ದೊರಕಿಸುವುದರಲ್ಲಿಯೇ ಸಮರ್ಥವಾಗುವುದು. ಒಟ್ಟಿನಲ್ಲಿ ಅನೇಕ ಜನ್ಮಗಳಲ್ಲಿ ಸಂಪಾದಿಸಿದ ಸುಕೃತವಿಶೇಷದಿಂದ ಮುಕ್ತಿಪ್ರದವಾದ ಕಾಶೀವಾಸವು ಸುಲಭವಾಗಿ ದೊರೆಯುವುದು. ॥೭-೮॥

ಪಾರ್ವತಿಯೇ, ತೀರ್ಥಗಳಲ್ಲಿ ಕಾಶಿಗಿಂತಲೂ ಶ್ರೇಷ್ಠವಾದದ್ದು ಮತ್ತಾವ ಲೋಕದಲ್ಲಿಯೂ ಇಲ್ಲ. ಪ್ರಮಾಣವಾಗಿ ಇದನ್ನು ಹೇಳುತ್ತೇನೆ. ಇದಕ್ಕಿಂತಲೂ ಶ್ರೇಷ್ಠವಾದ ಕ್ಷೇತ್ರವೊಂದಿದೆ ಎಂದು ಹೇಳುವವನು ನಿಜವಾಗಿಯೂ ವೇದಬಾಹಿರನು ಎಂದು ತಿಳಿಯಬೇಕು. ॥೯-೧೦॥

ನಾಸ್ತಿ ಕಾಶೀಸಮಂ ಕ್ಷೇತ್ರಂ ಲೋಕೇಷು ಕ್ವಾಪಿ ವಸ್ತುತಃ ।
ನಾಸ್ತಿ ಮತ್ಸದೃಶೋ ದೇವೋ ವಿಷ್ಣ್ವಾದಿಷ್ವಖಿಲೇಷ್ವಪಿ ॥೧೧॥

ಯದೇತದ್ವಿಮಲಂ ಲಿಂಗಂ ದೃಶ್ಯತೇಽದ್ಯ ಮದಾತ್ಮಕಂ ।
ಏತಲ್ಲಿಂಗಸಮಂ ಲಿಂಗಂ ನ ಕುತ್ರಾಪಿ ವರಾನನೇ ॥೧೨॥

ಇದಮೇವ ಪರಂಜ್ಯೋತಿರಿದಮೇವ ಪರಾತ್ಪರಂ ।
ಇದಮೇವ ಮದಾಕಾರಮನಂತಮಿದಮೇವ ಹಿ ॥೧೩॥

ಅನಂತವೇದವೇದಾಂತಸಾರಃ ಸರ್ವೋ ವರಾನನೇ ।
ಪಿಂಡೀಭೂಯಾತ್ರ ಸತತಂ ಲಿಂಗಾಕಾರೇಣ ತಿಷ್ಠತಿ ॥೧೪॥

ನಿರ್ವಿಕಾರಂ ಪರಂ ಬ್ರಹ್ಮ ಲಿಂಗಮೇತನ್ಮನೋರಮೇ ।
ನಿಷ್ಕಲಂ ನಿರ್ಗುಣಂ ಶಾಂತಮಿದಮೇವ ನ ಸಂಶಯಃ ॥೧೫॥

ಶೈವಮೇತನ್ಮಹಸ್ಸಾಕ್ಷಾದಕ್ಷಯಂ ಲಿಂಗಮುತ್ತಮಂ ।
ಇದಂ ಲಿಂಗಮನಾದ್ಯಂತಂ ಸಚ್ಚಿದಾನಂದಲಕ್ಷಣಂ ॥೧೬॥

ದೇವಿಯೇ, ಚತುರ್ದಶಲೋಕಗಳಲ್ಲಿಯೂ ಕಾಶೀಕ್ಷೇತ್ರಕ್ಕೆ ಸಮನಾದ ಕ್ಷೇತ್ರವೊಂದಿಲ್ಲ. ವಿಷ್ಣ್ವಾದಿದೇವತೆಗಳಲ್ಲಿ ನನಗೆ ಸರಿಸಮನಾದ ದೇವತೆಯೊಬ್ಬ ನಿಲ್ಲ. ಕಾಶಿಯಲ್ಲಿರುವ ಶಿವಲಿಂಗವು ನನ್ನ ಸ್ವರೂಪ. ತತ್ಸದೃಶವಾದ ಶಿವಲಿಂಗ ವನ್ನೂ ಎಲ್ಲೂ ನೋಡಲಾಗುವುದಿಲ್ಲ. ॥೧೧-೧೨॥

ಜ್ಯೋತೀರೂಪದಿಂದಲೂ, ನನ್ನ ನೈಸರ್ಗಿಕವಾದ ಸ್ವರೂಪದಿಂದಲೂ ತೋರಿಬರುವ ಶಿವಲಿಂಗವೆಂದರೆ ಇದೊಂದೇ. ವೇದವೇದಾಂತಗಳ ಸಾರವೆಲ್ಲಾ ಏಕತ್ರ ಮಿಳಿತವಾಗಿ ಇಲ್ಲಿ ಲಿಂಗಾಕಾರದಲ್ಲಿದೆ ಎಂದು ನಿಸ್ಸಂದೇಹವಾಗಿ ತಿಳಿಯ ಬಹುದು. ॥೧೩-೧೪॥

ವಿಶ್ವೇಶಲಿಂಗವು ವಿಕಾರವಿಲ್ಲದೆ, ಶುದ್ಧಬ್ರಹ್ಮಸ್ವರೂಪದಿಂದಿರುವುದು. ನಿರ್ಗುಣವೂ, ನಿರಾಕಾರವೂ, ಶಾಂತವೂ ಆದದ್ದು ಈ ಶಿವಲಿಂಗವೆಂದರೆ ಅತಿಶಯೋಕ್ತಿಯಲ್ಲ ಈ ಲಿಂಗದಲ್ಲಿ ತೋರಿಬರುವ ತೇಜಸ್ಸು ನಾಶರಹಿತವಾದದ್ದು. ಮತ್ತು ಇದಕ್ಕೆ ಆದ್ಯಂತ ಗಳಿಲ್ಲದೆ ಸತ್, ಚಿತ್, ಆನಂದ ಇವುಗಳ ಸ್ವರೂಪದಲ್ಲಿ ಕಂಡುಬರುವುದು. ॥೧೫-೧೬॥

ಸರ್ವಪುಣ್ಯಫಲಾಕಾರಮವಿಕಾರಂ ನಿರಂಜನಂ ।
ಲಿಂಗಮೇತನ್ಮಯೋಂಕಾರಂ ಮೋಕ್ಷಾಕಾರಮನಾಕರಂ ॥೧೭॥

ಗಿರಿಜೇ ಪಶ್ಯ ಪಶ್ಯೇದಂ ಲಿಂಗಂ ಮಂಗಳದಾಯಕಂ ।
ಕಥಮೇತತ್ಪ್ರಭಾಕೋಟೋ ದಿಶಿ ವಿಶ್ರಮ್ಯ ಗಚ್ಛತಿ ॥೧೮॥

ವೇದಾಸ್ಸ್ತುವಂತಿ ಬಹುಧಾ ಲಿಂಗಸ್ಯಾಸ್ಯೈವ ಸರ್ವದಾ ।
ಮಾಹಾತ್ಮ್ಯಂ ಮೋಕ್ಷದಂ ಪುಣ್ಯಂ ಸ್ವಸ್ವಶಕ್ತ್ಯಾ ವರಾನನೇ ॥೧೯॥

ಯಾವದಸ್ಯಾಸ್ತಿ ಮಾಹಾತ್ಮ್ಯಂ ಶಿವಲಿಂಗಸ್ಯ ವಸ್ತುತಃ ।
ತಾವನ್ಮಾಹಾತ್ಮ್ಯಮಮಲೇ ವೇದೈರಪಿ ನ ಬುಧ್ಯತೇ ॥೨೦॥

ಅಸ್ಯ ಲಿಂಗಸ್ಯ ಮಾಹಾತ್ಮ್ಯಂ ಬ್ರಹ್ಮವಿಷ್ಣ್ವಾದಿಭಿಸ್ಸುರೈಃ ।
ನ ಜ್ಞಾಯತೇ ಮುನೀಂದ್ರೈಶ್ಚ ಸಿದ್ಧೈಶ್ಚಾನ್ಯೈಶ್ಚ ವಸ್ತುತಃ ॥೨೧॥

ಸರ್ವಜ್ಞೇನ ಮಯೈಕೇನ ಲಿಂಗಸ್ಯಾಸ್ಯ ವರಾನನೇ ।
ಮಾಹಾತ್ಮ್ಯಂ ಜ್ಞಾಯತೇ ಸಮ್ಯಙ್ಮದನ್ಯೈಸ್ತು ನ ಸರ್ವಥಾ ॥೨೨॥

ಸಕಲ ಪುಣ್ಯಸ್ವರೂಪದಿಂದಲೂ, ಪಾಪಾಂಶರಾಹಿತ್ಯದಿಂದಲೂ, ಪ್ರಕಾಶಿಸುತ್ತಾ, ಪ್ರಣವರೂಪಿಯಾಗಿ ಮೋಕ್ಷಾಕಾರವಾದುದೇ ಈ ಶಿವಲಿಂಗ. ದೇವಿಯೇ, ಈ ಲಿಂಗದ ನಿಜವಾದ ತೇಜಸ್ಸು ಹೇಗೆ ಸಕಲ ದಿಕ್ಕುಗಳಲ್ಲಿಯೂ ಹರಡಿ ಪ್ರಜ್ವಲಿಸುತ್ತಿದೆ; ನೋಡು ! ॥೧೭-೧೮॥

ಈ ಲಿಂಗಮಹಿಮೆಯನ್ನು ಸಕಲ ವೇದಗಳೂ ಘೋಷಿಸುತ್ತಿವೆ ಇದರ ಮಹಿಮಾಶ್ರವಣವು ಸುಕೃತರಾಶಿಯನ್ನೂ, ಮುಕ್ತಿಯನ್ನೂ ಒದಗಿಸುವುದು. ಇದರ ಸಂಪೂರ್ಣವಾದ ಮಹಿಮೆಯನ್ನು ವೇದಗಳೂ ಪೂರ್ತಿಯಾಗಿ ಅರಿಯಲಾರವು ॥೧೯-೨೦॥

ಬ್ರಹ್ಮವಿಷ್ಣ್ವಾದಿಗಳೂ, ಸಿದ್ಧಗಂಧರ್ವಾದಿಗಳೂ, ಮುನಿಶ್ರೇಷ್ಠರೂ ಸಹ ಈ ಶಿವಲಿಂಗ ವಿಷಯವನ್ನು ಪೂರ್ತಿಯಾಗಿ ಅರಿಯಲಾರರು. ಸರ್ವಜ್ಞನೆನಿಸಿದ ನಾನೊಬ್ಬನೇ ಇದರ ಸಂಪೂರ್ಣ ಮಹಿಮೆಯನ್ನು ತಿಳಿದಿರುವೆನು. ಮತ್ತಾರಿಗೂ ಇದರ ಅರಿವಿಲ್ಲ. ॥೨೧-೨೨॥

ಕೃತಧರ್ಮಾಃ ಪೂತಚಿತ್ತಾಃ ಯೇ ತಪೋಮೂರ್ತಯೋ ಜನಾಃ ।
ತೇಷಾಮೇವಾಸ್ಯ ಲಿಂಗಸ್ಯ ದರ್ಶನಂ ಭವತಿ ಪ್ರಿಯೇ ॥೨೩॥

ಉಕ್ತಕ್ಷೇತ್ರೇಷು ಸರ್ವೇಷು ತದನ್ಯೇಷ್ವಪಿ ಕೋಟಿಶಃ ।
ತಪ್ತಂ ಯೇನ ತಪಸ್ತೇನ ದೃಶ್ಯತೇ ಲಿಂಗಮೀದೃಶಂ ॥೨೪॥

ತುಲಾದಾನಾದಿದಾನಾನಿ ಕೋಟಿಶೋ ವಿಧಿಪೂರ್ವಕಂ ।
ಕೃತಾನಿ ಯೇನ ತೇನೈವ ದೃಶ್ಯತೇ ಲಿಂಗಮೀದೃಶಂ ॥೨೫॥

ಕದಾಚಿದಪಿ ಯೇನೇದಂ ಲಿಂಗಂ ದೃಷ್ಟಂ ಮಮ ಪ್ರಿಯೇ ।
ತೇನ ಗರ್ಭಾದಿ ದುಃಖಾನಿ ನ ಪ್ರಾಪ್ಯಂತೇ ನ ಸಂಶಯಃ ॥೨೬॥

ಅಸ್ಮಿನ್ ಲಿಂಗೇ ಮದಾಕಾರೇ ಮಮ ವಿಶ್ವೇಶ್ವರಾಭಿಧೇ ।
ಯಸ್ಯ ಭಕ್ತಿರ್ದೃಢಾ ತಸ್ಮೈ ಮುಕ್ತಿಂ ದಾಸ್ಯೇ ವರಾನನೇ ॥೨೭॥

ಯೇನ ಧ್ಯಾತಮಿದಂ ಲಿಂಗಂ ಮಮ ವಿಶ್ವೇಶ್ವರಾಭಿಧಂ ।
ಸ ಮುಕ್ತಿಕಾಂತಾಂ ಲಭತೇ ವಿನಾ ಯತ್ನೇನ ಶೋಭನೇ ॥೨೮॥

---

ಯಾರು ತಪೋಮೂರ್ತಿಗಳೆನಿಸಿ, ತಮ್ಮ ಚಿತ್ತವನ್ನು ಪರಿಶುದ್ಧಿಗೊಳಿಸಿ ಕೊಂಡಿರುವರೋ, ಯಾರು ಹಿಂದೆ ಹೇಳಿದ ದಿವ್ಯಕ್ಷೇತ್ರಗಳಲ್ಲಿ ಅನೇಕಕೋಟಿವರ್ಷ ತಪಸ್ಸನ್ನಾಚರಿಸಿ ಸುಕೃತವನ್ನು ಗಳಿಸಿರುವರೋ ಅವರಿಗೆ ಮಾತ್ರ ಈ ಶಿವಲಿಂಗದ ದರ್ಶನವೊದಗುವುದು. ॥೨೩-೨೪॥

ಕೋಟಿಸುವರ್ಣ ತುಲಾಭಾರಾದಿಗಳ ದಾನದಿಂದ ಪುಣ್ಯವನ್ನಾರ್ಜಿಸಿದವರಿಗೆ ಈ ಲಿಂಗದರ್ಶನವು ಸುಲಭವಾಗಿ ದೊರೆಯುವುದು. ಪುಣ್ಯವಶದಿಂದ ಈ ಶಿವಲಿಂಗ ದರ್ಶನಮಾಡಿದವರಿಗೆ ಜನನಮರಣರೂಪವಾದ ದುಃಖಗಳು ಎಂದೂ ಒದಗಲಾರವು. ॥೨೫-೨೬॥

ನನ್ನ ಆಕಾರದಿಂದ ವಿರಾಜಿಸುವ ಈ ವಿಶ್ವೇಶ್ವರಲಿಂಗದಲ್ಲಿ ದೃಢಭಕ್ತಿಯಿರುವ ವರಿಗೂ, ದೃಢಭಕ್ತಿಯಿಂದ ಸೇವೆಮಾಡಿದವರಿಗೂ, ನಾನು ವಿಶ್ವಾಸದಿಂದ ಶಾಶ್ವತ ವಾದ ಮುಕ್ತಿಸುಖವನ್ನು ಅನುಗ್ರಹಿಸುವೆನು. ॥೨೭-೨೮॥

ಅಸ್ಮಿನ್ಲಿಂಗೇ ಮುದಾ ದತ್ತಂ ಯೇನ ಬಿಲ್ವದಳಂ ಪ್ರಿಯೇ ।
ತೇನ ದತ್ತಾನಿ ರತ್ನಾನಿ ಕೋಟಿಶೋ ನಾತ್ರ ಸಂಶಯಃ ॥೨೯॥

ಅಸ್ಮಿನ್ಲಿಂಗೇ ಮುದಾ ದತ್ತಂ ಜಲಮಲ್ಪಂ ಮಮ ಪ್ರಿಯೇ ।
ಸಸಾಗರನದೀತೋಽಯಂ ದತ್ತಂ ತೇನಾಖಿಲಂ ಪ್ರಿಯೇ ॥೩೦॥

ಯೇನಾತ್ರ ಫಲಮನ್ನಂ ವಾ ದತ್ತಂ ಲಿಂಗೇ ಮುದಾತ್ಮಕೇ ।
ತೇನ ಮೇರುಸಮಾನ್ಯಾನಿ ದತ್ತಾನ್ಯೇವ ನ ಸಂಶಯಃ ॥೩೧॥

ಏಕೋಽಪಿ ದತ್ತೋ ಯೇನಾತ್ರ ದೀಪಸ್ತೇನ ತು ಕೋಟಿಶಃ ।
ನಿತ್ಯಮತ್ಯುಜ್ಜ್ವಲಾ ದೀಪಾ ದತ್ತಾ ಏವ ನ ಸಂಶಯಃ ॥೩೨॥

ಏಕಂ ವಾಪಿ ಕೃತಂ ಯೇನ ಲಿಂಗಸ್ಯಾಸ್ಯ ಪ್ರದಕ್ಷಿಣಂ ।
ಪ್ರದಕ್ಷಿಣೀಕೃತಾ ತೇನ ಕ್ಷೋಣೀ ಸರ್ವಾ ನ ಸಂಶಯಃ ॥೩೩॥

ಪ್ರಣಾಮೋಽಸ್ಯ ಕೃತಾ ಯೇನ ಲಿಂಗಸ್ಯೈಕೋಽಪಿ ಭಕ್ತಿತಃ ।
ತೇನಾನಂತಾಃ ಕೃತಾ ಭಕ್ತ್ಯಾ ಪ್ರಣಾಮಾ ನಾತ್ರ ಸಂಶಯಃ ॥೩೪॥

ಈ ಶಿವಲಿಂಗಕ್ಕೆ ಭಕ್ತಿಯಿಂದ ಬಿಲ್ವದಳಗಳನ್ನು ಅರ್ಪಿಸಿದರೆ ಅವೆಲ್ಲವೂ ರತ್ನಪ್ರಾಯಗಳಾಗುವುವು. ಅಭಿಷೇಕಮಾಡಿದ ಅಲ್ಪಪ್ರಮಾಣದ ಜಲವೂ ಕೂಡ ಸಮುದ್ರ ಮತ್ತು ನದಿಗಳ ಜಲರಾಶಿಗೆ ಸಮಾನವಾಗಿದ್ದು ನನಗೆ ತೃಪ್ತಿಯನ್ನುಂಟು ಮಾಡುವುವು ||೨೯-೩೦||

ಅಲ್ಪಪ್ರಮಾಣದಿಂದ ಈ ಶಿವಲಿಂಗಕ್ಕೆ ನಿವೇದಿಸಿದ ಅನ್ನಾಹಾರಾದಿಗಳು ಮೇರುಪರ್ವತ ಸದೃಶಗಳಾಗಿ ಫಲಕೊಡುವುವು. ಭಕ್ತಿಯಿಂದರ್ಪಿಸಿದ ಒಂದು ದೀಪವೂ ಸಹ ದೀಪಮಾಲಾದಾನದಂತೆ ನನಗೆ ತೃಪ್ತಿಕರವಾಗುವುದು. ||೩೧-೩೨||

ಈ ಶಿವಲಿಂಗಕ್ಕೆ ಒಂದುಸಾರಿ ಪ್ರದಕ್ಷಿಣೆಮಾಡಿ ನಮಸ್ಕರಿಸಿದರೂ, ಭೂಪ್ರದಕ್ಷಿಣೆಮಾಡಿ, ಅನಂತಾನಂತವಂದನೆಗಳನ್ನು ನನಗೆ ಅರ್ಪಿಸಿದಂತಾಗುವುದು. ಇದರಲ್ಲಿ ಸಂಶಯವಿಲ್ಲ. ||೩೩-೩೪||

ಲಿಂಗಮೇತತ್ಕ್ಷಣಾರ್ಧಂ ವಾ ಯೇನ ಧ್ಯಾತಂ ಮದಾತ್ಮಕಂ ।
ತೇನ ಧ್ಯಾತೋಽಸ್ಮ್ಯಹಂ ಸಾಕ್ಷಾದ್ಬಹುಕಾಲಂ ವರಾನನೇ ॥೩೫॥

ತಿಲೈಸ್ತ್ರ್ಯಂಬಕೇನಾಗ್ನೌ ಯೇನೈಕಾತ್ರಾಹುತಿರ್ಹುತಾ ।
ಕೋಟಿಹೋಮಾಃ ಕೃತಾಸ್ತೇನ ಕೋಟಿಶೋ ವಿಧಿಪೂರ್ವಕಂ ॥೩೬॥

ವಾರಂ ಜಪ್ತೋಽತ್ರ ವಿಧಿನಾ ಶೈವಃ ಪಂಚಾಕ್ಷರಃ ಪರಃ ।
ತೇನ ತಪ್ತಂ ತಪೋ ಘೋರಂ ಕಲ್ಪಕೋಟ್ಯಯುತಂ ಶಿವೇ ॥೩೭॥

ಯೇನೈಕವಾರಮತ್ರಾಂಬ ರುದ್ರಪಾರಾಯಣಂ ಕೃತಂ ।
ವೇದಪಾರಾಯಣಂ ತೇನ ಕಲ್ಪಕೋಟ್ಯಯುತಂ ಕೃತಂ ॥೩೮॥

ಯೇನ ಕಾಶ್ಯಾಂ ಸ್ಥಿತಂ ಭಕ್ತ್ಯಾ ಕ್ಷಣಾರ್ಧಮಪಿ ಶೋಭನೇ ।
ಪಂಚಾಗ್ನಿಮಧ್ಯೇ ತೇನೈವ ಸ್ಥಿತಂ ಕಲ್ಪಾರ್ಬುದಾಷ್ಟಕಂ ॥೩೯॥

ಯೇನೇದಂ ಪೂಜಿತಂ ಲಿಂಗಂ ಜಲಪುಷ್ಪದಲಾದಿಭಿಃ ।
ತೇನಾಹಂ ಪೂಜಿತಸ್ಸಾಕ್ಷಾದ್ಬ್ರಹ್ಮವಿಷ್ಣ್ವಾದಿಪೂಜಿತಃ ॥೪೦॥

ಈ ಶಿವಲಿಂಗವನ್ನು ಯಾರು ನನ್ನ ಆಕಾರವನ್ನಾಗಿ ಭಾವಿಸಿ ಕ್ಷಣಕಾಲ ಧ್ಯಾನಿಸುವರೋ, ಅವರು ಅನೇಕಕಾಲ ತಪಸ್ಸನ್ನಾಚರಿಸಿದಂತಹ ಫಲವನ್ನು ಪಡೆಯುವರು. ತ್ರ್ಯಂಬಕಪ್ರೀತ್ಯರ್ಥವಾಗಿ ಯಾರು ಇಲ್ಲಿ ತಿಲಹೋಮಮಾಡುವರೋ, ಅವರು ಕೋಟಿಹೋಮದ ಫಲವನ್ನು ಅನಾಯಾಸವಾಗಿ ಹೊಂದುವರು. ॥೩೫-೩೬॥

ಇಲ್ಲಿ ಶಿವಪಂಚಾಕ್ಷರಿಯನ್ನು ಒಂದುಸಾರಿ ಜಪಿಸಿದರೂ ಕೋಟಿಕಲ್ಪ ಪರ್ಯಂತ ಮಾಡಿದ ತಪಸ್ಸಿನ ಫಲವು ದೊರೆಯುವುದು. ಒಂದುಕೋಟಿಕಲ್ಪ ಪರ್ಯಂತ ವೇದಪಾರಾಯಣಮಾಡಿದ ಫಲವನ್ನು ಒಂದುಸಾರಿ ರುದ್ರಪಾರಾಯಣ ಮಾಡುವುದರಿಂದಲೇ ಪಡೆಯಬಹುದು. ॥೩೭-೩೮॥

ಕ್ಷಣಕಾಲ ಇಲ್ಲಿ ಭಕ್ತಿಯಿಂದ ವಾಸಮಾಡಿದರೂ ಅನೇಕ ಕಲ್ಪಪರ್ಯಂತ ವಾಗಿ ಪಂಚಾಗ್ನಿಮಧ್ಯೆ ತಪಸ್ಸುಮಾಡಿದ ಫಲವು ದೊರೆಯುವುದು. ಬ್ರಹ್ಮವಿಷ್ಣ್ವಾದಿಗಳಿಂದ ಪೂಜಿತನಾದ ನಾನು, ಈ ವಿಶ್ವೇಶ್ವರಲಿಂಗವನ್ನು ಭಕ್ತಿಯಿಂದ ಜಲಪುಷ್ಪಾದಿಗಳನ್ನಿಟ್ಟು ಪೂಜಿಸಿದವನಿಗೆ ಸಕಲಾನುಗ್ರಹವನ್ನೂ ಕೊಡುವೆನು. ॥೩೯-೪೦॥

ದೃಷ್ಟಂ ಯೇನೇದಮಮಲಂ ಲಿಂಗಂ ವಿಶ್ವೇಶ್ವರಾಭಿಧಂ ।
ತೇನ ಸಾಕ್ಷಾದಹಂ ದೃಷ್ಟಃ ಪರಮಾನಂದಲಕ್ಷಣಃ ॥೪೧॥

ಯೇನೇದಂ ಪ್ರಣತಂ ಲಿಂಗಂ ಮಮ ವಿಶ್ವೇಶ್ವರಾಭಿಧಂ ।
ತೇನ ಸಾಕ್ಷಾದಹಂ ಭಕ್ತ್ಯಾ ಪ್ರಣತಃ ಸುರವಂದಿತಃ ॥೪೨॥

ನಿಮಜ್ಯ ಜ್ಞಾನವಾಪ್ಯಾಂ ಮಾಮೇತಲ್ಲಿಂಗಸ್ವರೂಪಿಣಂ ।
ಯಃ ಸ್ಮರೇತ್ಸ ಸವಂಶಃ ಸನ್ಮಾಮೇತ್ಯೇವ ವರಾನನೇ ॥೪೩॥

ಯೇನ ಸ್ತುತಮಿದಂ ಲಿಂಗಂ ಮಮ ವಿಶ್ವೇಶ್ವರಾಭಿಧಂ ।
ತೇನ ಸಾಕ್ಷಾದಹಂ ದೇವಿ ಸ್ತುತ ಏವ ನ ಸಂಶಯಃ ॥೪೪॥

ಯೇನ ಸ್ಪೃಷ್ಟಮಿದಂ ಲಿಂಗಂ ಮಮ ವಿಶ್ವೇಶ್ವರಾಭಿಧಂ ।
ತೇನ ಸಾಕ್ಷಾದಹಂ ದೇವಿ ಸ್ಪೃಷ್ಟ ಏವ ನ ಸಂಶಯಃ ॥೪೫॥

ಪೂಜಿತೋಽಹಂ ಮಹಾದೇವೋ ದೃಷ್ಟಸ್ಸ್ಪೃಷ್ಟ ಸ್ತುತೋ ನತಃ ।
ದಾಸ್ಯಾಮ್ಯೈಶ್ವರ್ಯಮತುಲಂ ಮುಕ್ತಿಂ ಚ ಕಮಲಾನನೇ ॥೪೬॥

---

ಭಕ್ತಿಯಿಂದ ಈ ವಿಶ್ವೇಶ್ವರಲಿಂಗವನ್ನು ದರ್ಶನಮಾಡಿದವನು ಲಕ್ಷಣವಿಶಿಷ್ಟನಾದ ನನ್ನನ್ನು ನೋಡಿದಂತೆಯೇ ಆಗುವುದು. ಯಾರು ಈ ಲಿಂಗಕ್ಕೆ ನಮಸ್ಕರಿಸುವರೋ ಅವರು ಸುರವಂದಿತನಾದ ನನಗೆ ಎದುರಿನಲ್ಲಿಯೇ ನಮಸ್ಕಾರಮಾಡಿದಂತಾಗುವುದು. ॥೪೧-೪೨॥

ಜ್ಞಾನವಾಪಿಯೆಂಬ ಕೊಳದಲ್ಲಿ ಸ್ನಾನಮಾಡಿ (ಶುದ್ಧಮನಸ್ಕನಾಗಿ) ಲಿಂಗರೂಪಿಯಾಗಿರುವ ನನ್ನನ್ನು ಯಾರು ಸ್ಮರಿಸಿಕೊಳ್ಳುವರೋ ಅಥವಾ ಯಾರು ಸ್ತೋತ್ರಮಾಡುವರೋ ಅವರು ಸಾಕ್ಷಾತ್ತಾಗಿ ನನ್ನನ್ನೇ ಪೂಜಿಸಿದಂತೆಯೂ, ಸ್ತುತಿಸಿದಂತೆಯೂ ಆಗುವುದು. ॥೪೩-೪೪॥

ಈ ವಿಶ್ವೇಶ್ವರಲಿಂಗವನ್ನು ಸ್ಥಾಪನೆಮಾಡಿದವನು ನನ್ನನ್ನು ಸ್ಥಾಪಿಸಿದಂತೆಯೇ ಆಗಿದೆ. ಯಾವನು ಇಂತಹ ಶಿವಲಿಂಗವನ್ನು ದರ್ಶನಮಾಡಿ, ಸ್ಪರ್ಶಮಾಡುವನೋ ಅವನಿಗೆ ನಾನು ಸಕಲೈಶ್ವರ್ಯಗಳನ್ನೂ ಅನುಗ್ರಹಿಸಿ ಕೊಡುವೆನು. ॥೪೫-೪೬॥

ಲಿಂಗಾನಿ ಸಂತ್ಯನಂತಾನಿ ಕಾಶ್ಯಾಂ ಯದ್ಯಪಿ ಶೋಭನೇ ।
ತಥಾಪ್ಯೇತತ್ಸಮಂ ಲಿಂಗಂ ನಾತೋತ್ರ ಪ್ರೀತಿರಸ್ತಿ ಮೇ ॥೪೭॥

ಶ್ರೀಕಾಶೀಲಿಂಗತುಲ್ಯಾನಿ ಲಿಂಗಾನಿ ನ ಜಗತ್ತ್ರಯೇ ।
ಕಾಶೀಲಿಂಗೇಷ್ವಪಿ ಶಿವೇ ಲಿಂಗಮೇತದ್ವಿಲಕ್ಷಣಂ ॥೪೮॥

ಶಿವೇ ಕಾಶ್ಯನ್ಯಲಿಂಗೇಭ್ಯಃ ಕಾಶೀಲಿಂಗಾನಿ ವಸ್ತುತಃ ।
ಶ್ರೇಷ್ಠಾನಿ ತೇಷು ಲಿಂಗೇಷು ಶ್ರೇಷ್ಠಂ ಲಿಂಗಮಿದಂ ಮಮ ॥೪೯॥

ಯೇನ ದೃಷ್ಟಮಿದಂ ಲಿಂಗಂ ಮಮ ವಿಶ್ವೇಶ್ವರಾಭಿಧಂ ।
ತೇನ ದೃಷ್ಟಾನಿ ಲಿಂಗಾನಿ ನಾನಾದೇಶಸ್ಥಿತಾನ್ಯಪಿ ॥೫೦॥

ಯೇನಾರ್ಚಿತಮಿದಂ ಲಿಂಗಂ ಮಮ ವಿಶ್ವೇಶ್ವರಾಭಿಧಂ ।
ತೇನಾರ್ಚಿತಾನಿ ಲಿಂಗಾನಿ ನಾನಾದೇಶಸ್ಥಿತಾನ್ಯಪಿ ॥೫೧॥

ಯೇನ ಸ್ಪೃಷ್ಟಮಿದಂ ಲಿಂಗಂ ಮಮ ವಿಶ್ವೇಶ್ವರಾಭಿಧಂ ।
ತೇನ ಸ್ಪೃಷ್ಟಾನಿ ಲಿಂಗಾನಿ ನಾನಾದೇಶಸ್ಥಿತಾನ್ಯಪಿ ॥೫೨॥

ದೇವಿಯೇ, ಈ ಕಾಶೀನಗರದಲ್ಲಿ ಅಸಂಖ್ಯಾತವಾದ ಶಿವಲಿಂಗಗಳಿರುವುವು. ಆದರೆ ಈ ವಿಶ್ವೇಶ್ವರಲಿಂಗದಷ್ಟು ಮಹಿಮೆಯುಳ್ಳದ್ದು ಮತ್ತೊಂದಿಲ್ಲ. ಒಟ್ಟಿನಲ್ಲಿ ಕಾಶೀನಗರಸ್ಥವಾದ ಲಿಂಗಗಳೇ ಪವಿತ್ರವಾದವುಗಳು. ಅದರಲ್ಲಿಯೂ ಈ ವಿಶ್ವೇಶ್ವರ ಲಿಂಗದಲ್ಲಿರುವಷ್ಟು ಪ್ರೀತಿಯು ನನಗೆ ಮತ್ತೆಲ್ಲಿಯೂ ಇರುವುದಿಲ್ಲ. ॥೪೭-೪೮॥

ಇತರಸ್ಥಳಗಳಲ್ಲಿರುವ ಶಿವಲಿಂಗಗಳಿಗಿಂತ ಕಾಶೀಸ್ಥವಾದ ಲಿಂಗಗಳು ಶ್ರೇಷ್ಠವಾದವುಗಳು. ಅದರಲ್ಲಿ ವಿಶ್ವೇಶ್ವರಲಿಂಗವೇ ಉತ್ತಮೋತ್ತಮವಾದುದು. ಈ ವಿಶ್ವೇಶ್ವರಲಿಂಗವನ್ನು ದರ್ಶನಮಾಡಿದರೆ ಪ್ರಪಂಚದ ಸಕಲ ಶಿವಲಿಂಗಗಳ ದರ್ಶನ ಫಲವೂ ದೊರೆಯುವುದು. ॥೪೯-೫೦॥

ವಿಶ್ವೇಶ್ವರಲಿಂಗವನ್ನು ಒಂದುಸಾರಿ ಅರ್ಚಿಸಿ, ಸ್ಪರ್ಶಮಾಡಿದರೆ ಪ್ರಪಂಚದ ಸಕಲ ಶಿವಲಿಂಗಗಳನ್ನೂ ಅರ್ಚಿಸಿ, ಸ್ಪರ್ಶಮಾಡಿದಂತೆಯೇ ಆಗುವುದು. ॥೫೧-೫೨॥

ಯೇನ ಸ್ತುತಮಿದಂ ಲಿಂಗಂ ಮಮ ವಿಶ್ವೇಶ್ವರಾಭಿಧಂ ।
ತೇನ ಸ್ತುತಾನಿ ಲಿಂಗಾನಿ ನಾನಾದೇಶಸ್ಥಿತಾನ್ಯಪಿ ॥೫೩॥

ಯೇನ ಧ್ಯಾತಮಿದಂ ಲಿಂಗಂ ಮಮ ವಿಶ್ವೇಶ್ವರಾಭಿಧಂ ।
ತೇನ ಧ್ಯಾತಾನಿ ಲಿಂಗಾನಿ ನಾನಾದೇಶಸ್ಥಿತಾನ್ಯಪಿ ॥೫೪॥

ಯೇನ ಶ್ರುತಮಿದಂ ಲಿಂಗಂ ಮಮ ವಿಶ್ವೇಶ್ವರಾಭಿಧಂ ।
ತೇನ ಶ್ರುತಾನಿ ಲಿಂಗಾನಿ ನಾನಾದೇಶಸ್ಥಿತಾನ್ಯಪಿ ॥೫೫॥

ಮೌನೀ ವಿಭೂತಿಪೂತಾಂಗೋ ಯೋ ಲಿಂಗಮಿದಮರ್ಚಯೇತ್ ।
ಸೋಽನಂತರಾಜಸೂಯಾದಿನಾನಾಯಾಗಫಲಂ ಲಭೇತ್ ॥೫೬॥

ಏತಲ್ಲಿಂಗಾರ್ಚನಂ ಕರ್ತುಂ ಪ್ರಯತಃ ಪ್ರಸ್ಥಿತೋ ನರಃ ।
ಪದೇಪದೇಽಶ್ವಮೇಧಾನಾಂ ಫಲಂ ಪ್ರಾಪ್ನೋತಿ ಶೈಲಜೇ ॥೫೭॥

ಯೇನಾರ್ಚಿತಮಿದಂ ಲಿಂಗಂ ಮದ್ಭಕ್ತೇನ ಪ್ರಯತ್ನತಃ ।
ತೇನಾರ್ಚಿತೋಽಹಂ ಸಗಣಃ ಸರ್ವದಾಪಿ ವರಾನನೇ ॥೫೮॥

ಯಃ ಪೂಜಯತಿ ಯತ್ನೇನ ಮಮೇದಂ ಲಿಂಗಮುತ್ತಮಂ ।
ತಂ ಪೂಜಯಂತಿ ಯತ್ನೇನ ಬ್ರಹ್ಮವಿಷ್ಣ್ವಾದಯಸ್ಸುರಾಃ ॥೫೯॥

ಲಿಂಗಮೇತತ್ಪ್ರಯತ್ನೇನ ಯಃ ಸ್ತೌತಿ ಕಮಲಾನನೇ ।
ಸ್ತುವಂತಿ ತಂ ಪ್ರಯತ್ನೇನ ಬ್ರಹ್ಮವಿಷ್ಣ್ವಾದಯಸ್ಸುರಾಃ ॥೬೦॥

---

ವಿಶ್ವೇಶ್ವರಲಿಂಗವನ್ನು ಸ್ತುತಿಸಿ, ಧ್ಯಾನಿಸಿ, ಅದರ ಮಹಿಮೆಯನ್ನು ಶ್ರವಣ ಮಾಡಿದರೆ, ಪ್ರಪಂಚದ ಸಕಲ ಶಿವಲಿಂಗಗಳ ಸ್ತೋತ್ರ, ಧ್ಯಾನ, ಮಹಿಮಾಶ್ರವಣ ಇವುಗಳ ಫಲವನ್ನು ಪಡೆದಂತಾಗುವುದು. ||೫೩-೫೪-೫೫||

ಯಾರು ಮೌನವ್ರತದಿಂದಿದ್ದು ಈ ವಿಶ್ವೇಶ್ವರಲಿಂಗವನ್ನು ಭಕ್ತಿಯಿಂದ ಅರ್ಚಿಸುವರೋ ಅಥವಾ ಪೂಜಿಸಲು ಯತ್ನಿಸುವರೋ ಅವರು ರಾಜಸೂಯಯಾಗ ಮತ್ತು ಅಶ್ವಮೇಧಯಾಗಗಳ ಫಲವನ್ನು ಪಡೆಯುವರು. ||೫೬-೫೭||

ಈ ಶಿವಲಿಂಗಾರ್ಚನೆಯಿಂದ ನಾನು ನನ್ನ ಗಣಸಹಿತವಾಗಿ ತೃಪ್ತಿಪಡುವೆನು. ಈ ಲಿಂಗಾರ್ಚಕನನ್ನು ಬ್ರಹ್ಮ, ವಿಷ್ಣುವೇ ಮೊದಲಾದ ದೇವತೆಗಳೆಲ್ಲರೂ ಪೂಜಿಸುವರು ಮತ್ತು ಸ್ತುತಿಸುವರು. ||೫೮-೫೯-೬೦||

ಲಿಂಗಮೇತತ್ಪ್ರಯತ್ನೇನ ಯೋ ನಮೇನ್ಮಾನಶೋಭನೇ ।
ತಂ ನಮಂತ್ಯತಿಯತ್ನೇನ ಬ್ರಹ್ಮವಿಷ್ಣ್ವಾದಯಸ್ಸುರಾಃ ॥೬೧॥

ಶಿವೇ ಕಾಶ್ಯಾಂ ಪ್ರಯತ್ನೇನ ಯೇ ಮದರ್ಚನತತ್ಪರಾಃ ।
ತೇ ಮದ್ರೂಪಾ ಇತಿ ಜ್ಞಾತ್ವಾ ತಾನ್ನಮಂತಿ ಸುರಾಸ್ಸದಾ ॥೬೨॥

ಮಲ್ಲಿಂಗಪೂಜಾನಿರತಾ ಭಸ್ಮರುದ್ರಾಕ್ಷಭೂಷಣಾಃ ।
ಮದೀಯಾ ಇತಿ ವಿಜ್ಞಾಯ ಸುರಾಸ್ತಾನರ್ಚಯಂತಿ ಚ ॥೬೩॥

ಭೂತಿರುದ್ರಾಕ್ಷಪೂತಾಂಗಾ ಮಲ್ಲಿಂಗಾರಾಧನಪ್ರಿಯಾಃ ।
ಮಮ ಪ್ರಿಯಾಃ ಪ್ರಿಯೇ ತಸ್ಮಾದ್ದೇವಾ ಅಪ್ಯರ್ಚಯಂತಿ ತಾನ್ ॥೬೪॥

ಯಾವಂತಸ್ಸಂತಿ ಕಾಶೀಸ್ಥಾ ಭಸ್ಮರುದ್ರಾಕ್ಷಭೂಷಣಾಃ ।
ತಾವಂತಶ್ಚಂಚಲಾಪಾಂಗಿ ಭಕ್ತಾಃ ಪಾರಿಷದಾ ಮಮ ॥೬೫॥

ಕಾಶೀಂ ಮುಕ್ತಿಪ್ರದಾಂ ಪ್ರಾಪ್ಯ ಸಂಸಾರಗ್ರೀಷ್ಮತಾಪಿತಾಃ ।
ಶಿವೇ ನಾನ್ಯತ್ರ ಗಚ್ಛಂತಿ ಕದಾಚಿದಪಿ ಮತ್ಪ್ರಿಯಾಃ ॥೬೬॥

ದೇವಿಯೇ, ಈ ಶಿವಲಿಂಗಕ್ಕೆ ನಮಸ್ಕರಿಸಿದವರನ್ನು ಬ್ರಹ್ಮಾದಿಗಳೂ ಸಹ ವಂದಿಸುವರು. ಹೆಚ್ಚೇನು? ಈ ಕಾಶಿಯಲ್ಲಿ ಈ ಲಿಂಗವನ್ನು ಪೂಜಿಸಿದವರೆಲ್ಲಾ ನನಗೆ ಸದೃಶರಾಗಿಯೇ ಆಗುವರು. ॥೬೧-೬೨॥

ಶಿವಲಿಂಗವನ್ನು ಪೂಜಿಸುತ್ತಾ ಭಸ್ಮರುದ್ರಾಕ್ಷಗಳಿಂದ ಅಲಂಕೃತರಾಗಿರುವವರೆಲ್ಲಾ ನನ್ನವರು. ನನಗೆ ಪ್ರಿಯರಾದವರು. ಅಂತಹವರನ್ನು ದೇವತೆಗಳೂಕೂಡ ಸದಾ ಪೂಜಿಸುತ್ತಿರುವರು. ॥೬೩-೬೪॥

ಕಾಶೀನಗರದಲ್ಲಿ ವಾಸಿಸುತ್ತಾ ಭಸ್ಮರುದ್ರಾಕ್ಷಧಾರಿಗಳಾಗಿ ನನ್ನನ್ನು ಪೂಜಿಸುತ್ತಿರುವವರೆಲ್ಲಾ ಕೊನೆಗೆ ನನ್ನ ಗಣನಾಯಕರಾಗುವರು. ಸಂಸಾರತಾಪಕ್ಕೆ ಸಿಕ್ಕಿ ಪರಿತಪಿಸುತ್ತಾ ಕಾಶೀನಗರವನ್ನು ಹೊಂದಿ ನನ್ನಿಂದ ಅನುಗೃಹೀತರಾದವರು ಮುಕ್ತಿಯನ್ನು ಪಡೆಯುವರಲ್ಲದೆ ಮತ್ತೆ ಸಂಸಾರಸಾಗರಕ್ಕೆ ಅಡಿಯಿಡಲಾರರು. ॥೬೫-೬೬॥

ಉಪಸರ್ಗಸಹಸ್ರಾಣಿ ಸೋಢ್ವಾ ಕಾಶ್ಯಾಂ ವಸಂತಿ ಯೇ ।
ತಾನಂತಕಾಲೇ ಸಂಸಾರಾತ್ತಾರಯಾಮಿ ವರಾನನೇ ॥೬೭॥

ಧೈರ್ಯಂ ವಿಜ್ಞಾತುಮೇವೇಹ ಪುರಾ ಕಾಶೀನಿವಾಸಿನಾಂ ।
ಉಪಸರ್ಗಾಃ ಪುರಾ ಸೃಷ್ಟಾ ಮಯಾನಂತಾಃ ಕ್ಷಣೇಕ್ಷಣೇ ॥೬೮॥

ತದಾ ಋಷೀಣಾಂ ಸರ್ವೇಷಾಂ ಶಿವೇ ಕಾಶೀನಿವಾಸಿನಾಂ ।
ಉದ್ವೇಗಾ ಬಹವೋ ಜಾತಾ ಬಹುಧೈವ ಕ್ಷಣೇಕ್ಷಣೇ ॥೬೯॥

ಛಾಯಾರ್ಥಂ ವೃಕ್ಷಮೂಲೇಷು ಋಷಯೋ ಯೇಷು ಸಂಸ್ಥಿತಾಃ ।
ತೇ ವೃಕ್ಷಾಃ ಪತ್ರಸಂಪನ್ನಾಃ ಸರ್ವೇ ಶುಷ್ಕೀಕೃತಾ ಮಯಾ ॥೭೦॥

ಸ್ಥಿತಾಃ ಪರ್ಣಗೃಹಾ ಯೇಷಾಂ ತೇಷಾಂ ಪರ್ಣಗೃಹಾ ಮಯಾ ।
ಭಸ್ಮೀಕೃತಾಃ ಕ್ಷಣಾರ್ಧೇನ ವೃಷ್ಟ್ಯಾತಪನಿವಾರಕಾಃ ॥೭೧॥

ಜಲಂ ಚ ಶೋಷಿತಂ ಸರ್ವೇ ಕಾಶೀತೀರ್ಥಸ್ಥಿತಂ ಶಿವೇ ।
ತತೋ ವಿಷಾಶಿತಾನ್ಯನ್ನಾನ್ಯಮಲಾನಿ ಫಲಾನಿ ಚ ॥೭೨॥

ತತಃ ಸೃಷ್ಟಾ ಜ್ವರಾಃ ಕ್ರೂರಾ ವ್ಯಾಧಯೋಽನ್ಯೇಪಿ ದುಃಖದಾಃ ।
ತದ್ವ್ಯಾಧಿಸಂಯುತಾಃ ಸರ್ವೇ ದುಃಖಂ ಪ್ರಾಪುರ್ಮುನೀಶ್ವರಾಃ ॥೭೩॥

---

ಕಾಶೀವಾಸದಲ್ಲಿ ಅನೇಕ ತೊಂದರೆಗಳಿವೆ. ಅವರಿಗೆ ಧೈರ್ಯವನ್ನು ಹೆಚ್ಚಿಸುವುದಕ್ಕಾಗಿಯೂ, ಮನಃಪರೀಕ್ಷೆಗಾಗಿಯೂ ನಾನೇ ಅಷ್ಟು ತೊಂದರೆಗಳನ್ನು ಕಲ್ಪಿಸಿರುವೆನು. ಅವುಗಳನ್ನು ಸಹಿಸಿಕೊಂಡು ಅಲ್ಲಿದ್ದು ನನ್ನನ್ನು ಆರಾಧಿಸಿದವರಿಗೆ ನಾನು ಶಾಶ್ವತವಾದ ಮುಕ್ತಿಯನ್ನು ಅನುಗ್ರಹಿಸುವೆನು. ॥೬೭-೬೮॥

ಅಲ್ಲಿ ತಪಸ್ಸುಮಾಡುತ್ತಿದ್ದ ಋಷಿಗಳಿಗೆ ನಾನು ಕ್ಷಣಕ್ಷಣಕ್ಕೂ ಹಿಂಸೆಯನ್ನು ತಂದೊಡ್ಡಿದೆನು. ಮರದ ನೆರಳಿನಲ್ಲಿ ಕುಳಿತು ತಪಸ್ಸುಮಾಡುವವರಿಗೆ, ನೆರಳನ್ನು ತಪ್ಪಿಸಲು ಮರವನ್ನೇ ಒಣಗಿಸಿಬಿಟ್ಟೆನು. ॥೬೯-೭೦॥

ಮಳೆ, ಮತ್ತು ಬಿಸಿಲಿನ ತಡೆಗಾಗಿ ಕಟ್ಟಿಕೊಂಡಿದ್ದ ಪರ್ಣಶಾಲೆಗಳನ್ನೆಲ್ಲಾ ಸುಟ್ಟು ಭಸ್ಮಮಾಡಿದೆನು. ತೀರ್ಥಗಳಲ್ಲಿದ್ದ ನೀರನ್ನೆಲ್ಲಾ ಬತ್ತಿಸಿದೆನು. ಅಲ್ಲಿದ್ದ ರುಚಿಯಾದ ಹಣ್ಣುಗಳನ್ನೆಲ್ಲಾ ವಿಷಮಯವನ್ನಾಗಿ ಮಾಡಿಸಿದೆನು. ॥೭೧-೭೨॥

ಹಾಗೆಯೇ ಅನೇಕ ಕ್ರೂರಜ್ವರಗಳನ್ನೂ, ನಾನಾವ್ಯಾಧಿಗಳನ್ನೂ ಸೃಷ್ಟಿಮಾಡಿ

ಕೇಚಿದ್ವಿಷಜ್ವರಾಕ್ರಾಂತಾಃ ಕೇಚಿಚ್ಛೀತಜ್ವರಾನ್ವಿತಾಃ ।
ಕೇಚಿದ್ರೋಗಾಂತರಾಕ್ರಾಂತಾಃ ಜಾತಾಃ ಸರ್ವೇಽಪಿ ಚೈಕದಾ ॥೭೪॥

ವಿಷಜ್ವರಸಮಾಕ್ರಾಂತಾಸ್ತೃಷಿತಾಃ ಶುಷ್ಕತಾಲುಕಾಃ ।
ಸರ್ವೇಽಪಿ ಜಲಮಪ್ರಾಪ್ಯ ದುಃಖಂ ಪ್ರಾಪುರ್ಮುನೀಶ್ವರಾಃ ॥೭೫॥

ದುಃಸ್ವಪ್ನಾ ದರ್ಶಿತಾಸ್ತೇಭ್ಯಃ ಕೋಟಿಶೋ ಭಯದಾಯಕಾಃ ।
ಅದ್ಭುತಾನ್ಯಪಿ ಚಿಹ್ನಾನಿ ದರ್ಶಿತಾನಿ ಮಯಾ ಶಿವೇ ॥೭೬॥

ತದಾನೀಂ ಯಮಿನಾಂ ಶ್ರೇಷ್ಠಂ ಜೈಗೀಷವ್ಯಂ ಮಹಾಮುನಿಂ ।
ಸಂಪ್ರಾಪುರ್ಮುನಯೋ ದಿಗ್ಭ್ಯೋ ಮಹಾವ್ಯಾಧಿಸಮಾಕುಲಾಃ॥೭೭॥

ಕೋಟೀನಾಮಯುತಂ ಪ್ರಾಪ ಮುನೀನಾಂ ಪೂರ್ವತೋ ಮುನಿಂ ।
ತತಶ್ಶತಗುಣಂ ಪ್ರಾಪ ದಕ್ಷಿಣಾತೋ ಮುನೀಶ್ವರಂ ॥೭೮॥

ತತಃಕೋಟಿಗುಣಂ ಪ್ರಾಪ ಪಶ್ಚಿಮಾತೋ ಮುನೀಶ್ವರಂ ।
ತತೋಽರ್ಬುದಗುಣಂ ಪ್ರಾಪ ಮುನಿಮುತ್ತರತಶ್ಶಿವೇ ॥೭೯॥

ಏತಾವಂತೋ ಮುನಿವರಾಃ ಸರ್ವೇಽಪ್ಯಾಗತ್ಯ ತಂ ಮುನಿಂ ।
ಪ್ರಣಮ್ಯೋಚುಃ ಶುಷ್ಕಕಂಠಾ ಜ್ವರದಾಹಾದಿಪೀಡಿತಾಃ ॥೮೦॥

ದೆನು. ನನ್ನನ್ನು ಕುರಿತು ತಪಸ್ಸುಮಾಡುತ್ತಿದ್ದವರೆಲ್ಲಾ ವಿಷಜ್ವರಪೀಡಿತರಾಗಿ ಬಾಯೊಣಗಿ ನೀರನ್ನೂ ಸಹ ಹೊಂದಲಾರದೆ ದುಃಖಪಡುವಂತೆ ಮಾಡಿದೆನು. ಕೆಲವರು ವಿಷಜ್ವರದಿಂದಲೂ, ಹಲವರು ಶೀತಜ್ವರದಿಂದಲೂ, ಅನೇಕರು ವಿಧವಿಧ ವಾದ ರೋಗಗಳಿಂದಲೂ ನರಳುವಂತೆ ಏರ್ಪಡಿಸಿದೆನು. ||೭೩-೭೪-೭೫||

ಅಲ್ಲಿರುವ ಋಷಿಜನರಿಗೆ ಭಯಪ್ರದಗಳಾದ ದುಸ್ಸ್ವಪ್ನಗಳನ್ನು ಕಲ್ಪಿಸಿದೆನು. ಆದರಿಂದ ಹೆದರಿದ ಆ ಋಷಿವರ್ಗವು ಅಲ್ಲಿಯೇ ನೆಲಸಿದ್ದ ಜೈಗೀಷವ್ಯಮಹಾಮುನಿ ಯನ್ನು ನೋಡಲು ಸಕಲ ದಿಕ್ಕುಗಳಿಂದಲೂ ಅಲ್ಲಿಗೆ ಬರಲಾರಂಭಿಸಿದರು.||೭೬-೭೭||

ಪೂರ್ವದಿಕ್ಕಿನಿಂದ ಹತ್ತುಸಾವಿರಕೋಟಿ ಋಷಿಜನರೂ, ಹಾಗೆಯೇ ದಕ್ಷಿಣ, ಪಶ್ಚಿಮ, ಉತ್ತರ ಮುಂತಾದ ದಿಕ್ಕುಗಳಿಂದ ಅದಕ್ಕೆ ಶತಪಾಲು, ಸಹಸ್ರಪಾಲು, ದಶಸಹಸ್ರಪಾಲು ಅಧಿಕಸಂಖ್ಯೆಯಲ್ಲಿ ಮಹರ್ಷಿಗಳೂ ಬಂದು ನೆರೆದರು. ಹೀಗೆ

|| ಋಷಯ ಊಚುಃ ||

ನಾನಾವ್ಯಾಧಿಕೃತಂ ದುಃಖಂ ಸರ್ವೈರಪ್ಯನುಭೂಯತೇ ।
ಸರ್ವಥಾಸ್ಮಾಸು ಕಸ್ಯಾಪಿ ಸ್ವಾಸ್ಥ್ಯಂ ನಾಸ್ತ್ಯೇವ ಸರ್ವದಾ ||೮೧||

ಅನ್ಯಾನ್ಯಪಿ ಚ ದುಃಖಾನಿ ಪ್ರಾಪ್ಯಂತೇ ಸರ್ವದಾ ಮುನೇ ।
ಇಯತ್ತಾ ನಾಸ್ತಿ ದುಃಖಾನಾಂ ವಸ್ತುತೋ ನಾನೃತಂ ಧ್ರುವಂ ||೮೨||

ದಗ್ಧಾಃ ಪರ್ಣಗೃಹಾಸ್ಸರ್ವೇ ಜಾತಾಶ್ಶುಷ್ಕಾಶ್ಚ ಭೂರುಹಾಃ ।
ಫಲಾನ್ಯನ್ನಾನಿ ದಗ್ಧಾನಿ ವಲ್ಕಲಾನಿ ಚ ಭೂರಿಶಃ ||೮೩||

ಜಲಂ ನ ಲಭ್ಯತೇ ಕ್ವಾಪಿ ಪಾನಾರ್ಥಮಪಿ ವಸ್ತುತಃ ।
ಕಿಮುತಾನ್ನಫಲಾದೀನಿ ತದ್ರೂಪಮಪಿ ನೇಕ್ಷಿತಂ ||೮೪||

ಪಂಚಕ್ರೋಶಾತ್ಮಕೇ ಕ್ಷೇತ್ರೇ ಸರ್ವೇಪ್ಯೇತೇಪ್ಯುಪದ್ರವಾಃ ।
ಪಂಚಕ್ರೋಶಾದ್ಬಹಿಃ ಸರ್ವೇ ತಿಷ್ಠಂತಿ ಸುಖಿನೋ ಜನಾಃ ||೮೫||

ಅತೋತಃಪರಮಸ್ಮಾಭಿಃ ಕಾಶ್ಯಾಂ ಸ್ಥಾತುಂ ನ ಶಕ್ಯತೇ ।
ಶೀಘ್ರಂ ನಿರ್ಗತ್ಯ ಗಂತವ್ಯಮಿದಾನೀಮೇವ ಸರ್ವಥಾ ||೮೬||

ಜ್ವರಾದಿಗಳಿಂದ ಪೀಡಿತರಾಗಿ ಬಂದ ಋಷಿಸಮೂಹವೆಲ್ಲಾ ಋಷಿಶ್ರೇಷ್ಠನಾದ ಜೈಗೀಷವ್ಯಮಹರ್ಷಿಗೆ ವಂದಿಸಿ ಹೀಗೆ ಹೇಳಿಕೊಂಡಿತು. ||೭೮-೭೯-೮೦||

"ಮಹರ್ಷಿಯೇ, ನಮಗೆ ನಾನಾವ್ಯಾಧಿಗಳು ಪ್ರಾಪ್ತವಾಗಿ ಬಹಳವಾದ ಹಿಂಸೆಯನ್ನು ತಂದೊಡ್ಡಿವೆ. ಸರ್ವಥಾ ನಮ್ಮ ಮನಃಶಾಂತಿಯು ಮಾಯವಾಗಿದೆ. ಇತರ ದುಃಖಗಳ ಅವಧಿಯನ್ನು ಹೇಳುವುದೇ ಸಾಧ್ಯವಿಲ್ಲ. ನಮ್ಮ ಮಾತಿನಲ್ಲಿ ಈಷದಪಿ ಸುಳ್ಳಿಲ್ಲ ||೮೧-೮೨||

ಪರ್ಣಶಾಲೆಗಳು ಸುಟ್ಟುಹೋದವು. ಮರಗಳು ಒಣಗಿದವು. ಆಹಾರವಸ್ತುವೆಲ್ಲಾ ಭಸ್ಮವಾದವು. ನಾರುಮಡಿಗಳು ದುರ್ಲಭವಾದವು. ಅವರಿಗೆ ಕುಡಿಯುವುದಕ್ಕೂ ನೀರು ದೊರೆಯದಂತಾಯಿತು ಇನ್ನು ರುಚಿರುಚಿಯಾದ ಆಹಾರವಾಗಲಿ ಫಲಗಳಾಗಲಿ ನಮಗೆ ಹೇಗೆ ಸಿಗಬೇಕು? ||೮೩-೮೪||

ಐದುಮೈಲಿ ವಿಸ್ತಾರವಾದ ಈ ಕ್ಷೇತ್ರದಲ್ಲಿ ನಾನಾರೀತಿಯ ಉಪದ್ರವಗಳೆಲ್ಲಾ ನಮಗೆ ತಲೆದೋರಿವೆ. ಕಾಶಿಯಿಂದ ಹೊರಭಾಗದಲ್ಲಿ ಜನರು ಅತ್ಯಂತ ಸುಖಿಗಳಾಗಿ

ತೀರ್ಥಾನಿ ಸಂತಿ ಭೂಪೃಷ್ಠೇ ನರ್ಮದಾದೀನಿ ಭೂರಿಶಃ ।
ತೇಷು ಸ್ಥಾತವ್ಯಮನಿಶಂ ಶಿವಕ್ಷೇತ್ರಾಣಿ ತಾನ್ಯಪಿ ॥೮೭॥

ಜೀವನಂ ಚೇದ್ಭವೇದಗ್ರೇ ಧರ್ಮಸಿದ್ಧಿರ್ಭವಿಷ್ಯತಿ ।
ಶತೇಷು ಜೀವನೇ ಧರ್ಮಃ ಕಥಂ ಸಾಧ್ಯೋ ಭವಿಷ್ಯತಿ ॥೮೮॥

ಯದಿ ಪ್ರಾಣಾ ಗಮಿಷ್ಯಂತಿ ಶೀಘ್ರಮತ್ರ ತದಾ ಮುನೇ ।
ಮೋಕ್ಷೋ ಭವಿಷ್ಯತ್ಯಧುನಾ ತೇ ಗಮಿಷ್ಯಂತಿ ನಃ ಕಥಂ ॥೮೯॥

ಇತಿ ತೇಷಾಂ ವಚಃ ಶ್ರುತ್ವಾ ಮುನೀನಾಮಾರ್ತಚೇತಸಾಂ ।
ಜೈಗೀಷವ್ಯೋ ದುಃಖಿತೋಽಪಿ ಪ್ರಾಹ ತಾನ್ ಧೈರ್ಯಮುದ್ವಹನ್ ॥೯೦॥

॥ ಜೈಗೀಷವ್ಯ ಉವಾಚ ॥

ಪ್ರಾಪ್ಸ್ಯಂತ ಏವ ದುಃಖಾನಿ ಸರ್ವೇ ನಾತ್ರಾಸ್ತಿ ಸಂಶಯಃ ।
ಉಪಸರ್ಗಸ್ಸಮುತ್ಪನ್ನೋ ದೈವಯೋಗೇನ ಭೂರಿಶಃ ॥೯೧॥

ಉಪಸರ್ಗಾ ಭವಿಷ್ಯಂತಿ ಕಾಶ್ಯಾಂ ಯೇಯೇ ಯದಾಯದಾ ।
ತೇತೇ ಸರ್ವೇಽಪಿ ಸೋಢವ್ಯಾಃ ಸರ್ವದಾಪಿ ತದಾತದಾ ॥೯೨॥

---

ರುವರು. ಎಲೈ ಮಹರ್ಷಿಯೇ, ಇನ್ನು ನಾವು ಇಲ್ಲಿರಲಾರೆವು. ಜಾಗ್ರತೆ ಈ ಸ್ಥಳವನ್ನು ಬಿಟ್ಟು ಈಗಲೇ ಹೊರಡುತ್ತೇವೆ. ॥೮೫-೮೬॥

ಕಾಶಿಯನ್ನು ಬಿಟ್ಟರೂ ನರ್ಮದಾ ತೀರವೇ ಮೊದಲಾದ ಇತರ ಭೂಭಾಗಗಳಲ್ಲಿ ಅನೇಕ ಶಿವಕ್ಷೇತ್ರಗಳಿರುವುವು. ನಮ್ಮ ಜೀವವನ್ನು ಸರಿಯಾಗಿಟ್ಟುಕೊಂಡು, ಆ ಕ್ಷೇತ್ರಗಳಲ್ಲಿ ಧರ್ಮಕಾರ್ಯವೆಸಗಿದರೆ ಮುಕ್ತಿಯು ಲಭಿಸಲಾರದೆ? ॥೮೭-೮೮॥

ಒಂದುವೇಳೆ ಜಾಗ್ರತೆಯಾಗಿ ಇಲ್ಲಿಯೇ ಪ್ರಾಣಹೋಗುವುದಾದರೂ ಒಳ್ಳೆಯದು; ಸುಲಭವಾಗಿ ಮುಕ್ತಿಯು ದೊರಕೀತು. ಅದೂ ಆಗುವುದಿಲ್ಲವಲ್ಲಾ! ಏನು ಮಾಡುವುದು"? ಎಂದು ಋಷಿ ಜನರು ಗೋಳಿಡುವುದನ್ನು ಕೇಳಿ ಜೈಗೀಷವ್ಯನು ಅವರನ್ನು ಸಮಾಧಾನಗೊಳಿಸುತ್ತಾ ಹೀಗೆಂದನು. ॥೮೯-೯೦॥

"ಮಹರ್ಷಿಗಳೇ, ಈ ಕಾಶೀನಗರದಲ್ಲಿ ಇಂತಹ ಈತಿಬಾಧೆಗಳು ಆಗಾಗ ಸಂಭವಿಸುತ್ತಲೇ ಇರುವುವು ದೈವಯೋಗದಿಂದ ಒದಗಿದ ಇವುಗಳನ್ನು ಸಹಿಸಿಕೊಂಡು ಇಲ್ಲಿ ಜೀವಿಸುವುದೇ ಉತ್ತಮವಾದುದು. ॥೯೧-೯೨॥

ಉಪಸರ್ಗಾಂಸ್ತ್ವೃಣೀಕೃತ್ಯ ಯಃ ಕಾಶ್ಯಾಂ ಸ್ಥಾತುಮಿಚ್ಛತಿ ।
ತಸ್ಮೈ ಮುಕ್ತಿಮಯತ್ನೇನ ಕಾಶೀನಾಥಃ ಪ್ರಯಚ್ಛತಿ ॥೯೩॥

ದ್ವಿವಾರಂ ನೈವ ಮರ್ತವ್ಯಂ ಕಿಂತು ಮರ್ತವ್ಯಮೇಕದಾ ।
ತದಬ್ದಾಚ್ಛಾದಯುತಾಂತೇ ವಾ ಮರಣಂ ನೋ ಭವಿಷ್ಯತಿ ॥೯೪॥

ತ್ಯಾಜ್ಯೈವ ಯತ್ರಕುತ್ರಾಪಿ ಪ್ರಾಪ್ತೇಯಂ ತನುರೇಕದಾ ।
ತ್ಯಾಜ್ಯಾ ಸಾ ತನುರತ್ರೈವ ತ್ಯಾಜ್ಯಾ ಯತ್ನಪುರಸ್ಸರಂ ॥೯೫॥

ಪ್ರಾಣೇಷೂತ್ಕ್ರಮಮಾಣೇಷು ಜಂತೋರತ್ರ ಮಹೇಶ್ವರಃ ।
ಶೈವಮೇವೋಪದಿಶತಿ ಮೋಕ್ಷಾರ್ಥಂ ತಾರಕಂ ಮನುಂ ॥೯೬॥

ಮಹೇಶಾಂಕಂ ಸಮಾರುಹ್ಯ ಮಹೇಶೇನೈವ ಚೋದಿತಃ ।
ಪ್ರಾಪ್ತವ್ಯಸ್ತಾರಕೋ ಮಂತ್ರಃ ಶಿವಪಂಚಾಕ್ಷರಾಭಿಧಃ ॥೯೭॥

ಗೃಹೀತಾಃ ಪೂರ್ವಮಸ್ಮಾಭಿರನಂತಾಸ್ತನವೋ ವೃಥಾ ।
ತ್ಯಕ್ತಾಶ್ಚ ತಾಃ ಕೀಟಿಕಾದೌ ನಾನಾನರಕಸಾಧನಾಃ ॥೯೮॥

ಇಂತಹ ತೊಂದರೆಗಳನ್ನು ಅನುಭವಿಸುತ್ತಾ ಕಾಶಿಯಲ್ಲಿ ಮರಣಹೊಂದಿದರೆ ಕಾಶೀನಾಥನೆನಿಸಿದ ಮಹೇಶ್ವರನು ಮುಕ್ತಿಯನ್ನು ಕೊಡುವನು. ಮನುಷ್ಯನು ಎಂದೂ ಮತ್ತೆ ಜನ್ಮವನ್ನು ತಾಳುವ ಮರಣವನ್ನು ಅಪೇಕ್ಷಿಸಬಾರದು. ಪುನರ್ಜನ್ಮ ರಹಿತವಾದ ಮರಣವೇ ಸರ್ವಶ್ರೇಷ್ಠ. ಅಂತಹ ಮರಣವು ಇನ್ನೂ ನಮಗೆ ಹತ್ತು ಸಾವಿರವರ್ಷ ಪರ್ಯಂತ ಸಂಭವಿಸುವಂತಿಲ್ಲ. ।।೯೩-೯೪।।

ಪಂಚಭೂತ ಸಂಬಂಧವಾದ ಈ ದೇಹವನ್ನು ಎಲ್ಲಿಯಾದರೊಂದುಕಡೆ ತ್ಯಜಿಸಬೇಕು. ಇಲ್ಲಿಯೇ ಆ ದೇಹವನ್ನು ಬಿಡೋಣ. ಪ್ರಾಣೋತ್ಕ್ರಮಣಕಾಲದಲ್ಲಿ ಮಹೇಶ್ವರನು ಕಾಶೀಸ್ಥವಾದ ಪ್ರಾಣಿಗಳಿಗೆ ತಾರಕಮಂತ್ರವನ್ನುಪದೇಶಿಸುವನೆಂದು ಪ್ರತೀತಿಯಿದೆ. ಆದರಿಂದಲೇ ನಮಗೆ ಮುಕ್ತಿಯು ಲಭಿಸುವುದು. ।।೯೫-೯೬।।

ಈಗ ನಾವು ಮಹೇಶ್ವರನ ತೊಡೆಯಮೇಲೆ ಕುಳಿತಿರುವೆವು. ಇದಕ್ಕೂ ಮೂಲಕಾರಣನು ಮಹೇಶ್ವರನೇ. ಈಗ ನಾವು ಶಿವಪಂಚಾಕ್ಷರಿಯೆಂಬ ಸಂಸಾರ ತಾರಕಮಂತ್ರವನ್ನು ಸುಲಭವಾಗಿ ಶಿವನಿಂದ ಪಡೆಯಬಹುದು. ನಾವು ಹಿಂದೆ

ಯಾವದ್ಭುಕ್ತಂ ಪುರಾ ದುಃಖಂ ನರಕೇಷು ಸಹಸ್ರಧಾ ।
ತಾವದ್ದುಃಖಮಿದಾನೀಂ ಕಿಂ ಭವದ್ಭಿರ್ಭುಜ್ಯತೇ ದ್ವಿಜಾಃ ॥೯೯॥

ಯಾವದ್ದುಃಖಂ ಗರ್ಭವಾಸೇ ಭವದ್ಭಿರ್ಭುಕ್ತಮೇಕದಾ ।
ತಾವದ್ದುಃಖಮಿದಾನೀಂ ಕಿಂ ಭವದ್ಭಿರ್ಭುಜ್ಯತೇ ದ್ವಿಜಾಃ ॥೧೦೦॥

ಯಾವದ್ದುಃಖಂ ಪುರಾ ಭುಕ್ತಂ ಜನನೀ ಯೋನಿನಿರ್ಗಮೇ ।
ತಾವದ್ದುಃಖಮಿದಾನೀಂ ಕಿಂ ಭವದ್ಭಿರ್ಭುಜ್ಯತೇ ದ್ವಿಜಾಃ ॥೧೦೧॥

ಯಾವದ್ದುಃಖಂ ಪುರಾಭುಕ್ತಂ ಜನನೀ ಜಠರಾಗ್ನಿನಾ ।
ತಾವದ್ದುಃಖಮಿದಾನೀಂ ಕಿಂ ಭವದ್ಭಿರ್ಭುಜ್ಯತೇ ದ್ವಿಜಾಃ ॥೧೦೨॥

ಸೂಕರಶ್ವಾರಾಸಭಾದಿನಾನಾಪ್ರೋಕ್ಷಿತಯೋನಿಷು ।
ಬಹುಧೋತ್ಪತ್ತಿರಭವದ್ಬಹುದುಃಖಪ್ರದಾಯಿನೀ ॥೧೦೩॥

ತಾನಿ ದುಃಖಾನಿ ಸರ್ವಾಣಿ ಸ್ಮರ್ತವ್ಯಾನಿ ಪುನಃ ಪುನಃ ।
ಬಹುಧೈವಾನುಭೂತಾನಿ ವಿಸ್ಮೃತಾನಿ ನ ತಾನಿ ತು ॥೧೦೪॥

ಎಷ್ಟೋ ಕ್ರಿಮಿಕೀಟಾದಿಗಳ ಜನ್ಮವನ್ನು ಪಡೆದು, ನರಕಯಾತನೆಗಳನ್ನೆಲ್ಲಾ ಅನುಭವಿಸಿ, ದೇಹಪರಿತ್ಯಾಗವಮಾಡಿರುವೆವು ॥೯೭-೯೮॥

ಅಂತಹ ಹಿಂದಿನ ಜನ್ಮಗಳನ್ನು ಪಡೆದು ನರಕಲೋಕಗಳನ್ನು ಹೊಂದಿ ಆ ದುಃಖಗಳನ್ನೂ, ಹಾಗೆಯೇ ಗರ್ಭದಲ್ಲಿ ವಾಸಮಾಡುವಾಗ ಅನೇಕಾನೇಕ ಕ್ಲೇಶಗಳನ್ನೂ ಅನುಭವಿಸಿಯೂ ಮತ್ತೂ ಏತಕ್ಕಾಗಿ ಅದಕ್ಕೇ ಮತ್ತೆ ಮತ್ತೆ ಬಯಸುವಿರಿ? ॥೯೯-೧೦೦॥

ಹಿಂದಿನ ಜನ್ಮಗಳಲ್ಲಿ ತಾಯಿಯ ಜಠರಾಗ್ನಿಯ ಬೇನೆಯಿಂದಲೂ, ಜನನ ಕಾಲದ ಯೋನಿಸಮ್ಮರ್ದನದಿಂದಲೂ ಅನುಭವಿಸಿದ ದುಃಖಗಳನ್ನು ಮತ್ತೆ ಏಕೆ ಅಪೇಕ್ಷಿಸುವಿರಿ? ॥೧೦೧-೧೦೨॥

ಹಂದಿ, ನಾಯಿ, ಕತ್ತೆ ಮೊದಲಾದ ಅನೇಕ ಪ್ರಾಣಿಜನ್ಮಗಳಲ್ಲಿ ದುಃಖವನ್ನನುಭವಿಸಿಯೂ, ಮತ್ತೆ ಮತ್ತೆ ಅದನ್ನೇ ಸ್ಮರಿಸುವುದು ಯಾವನ್ಯಾಯ? ಅವುಗಳನ್ನು ಖಂಡಿತವಾಗಿಯೂ ಮರೆತುಬಿಡಬೇಕು ಅನುಭವ ಬಲದಿಂದ ಅದು ಮರೆಯುವಂತಿಲ್ಲವೇ? ॥೧೦೩-೧೦೪॥

ಕಿಂ ಚಾನಂತೈಸ್ತಪೋದಾನಧರ್ಮೈಶ್ಚ ವಿಧಿವತ್ಕೃತೈಃ ।
ಪ್ರಾಪ್ತೇಯಂ ಪುಣ್ಯನಿಲಯಾ ಕಥಂ ತ್ಯಾಜ್ಯಾ ಮನೀಷಿಭಿಃ ॥೧೦೫॥

ಕಾಶೀ ಪ್ರಾಪ್ತಾ ಧರ್ಮಸಂಘೈರನಂತೈಃ ಕಾಲಸಾಧಿತೈಃ ।
ಸರ್ವಪುಣ್ಯಮಯೀ ಧನ್ಯಾ ಕಾಶೀ ತ್ಯಾಜ್ಯಾ ಕಥಂ ಭವೇತ್ ॥೧೦೬॥

ಕಾಶೀಪ್ರಾಪ್ತ್ಯರ್ಥಮಸ್ಮಾಭಿರ್ಬಹುಧೈವ ಕೃತಂ ತಪಃ ।
ತಪಃ ಪುಣ್ಯಫಲೇನಾಪ್ತಾ ಕಾಶೀ ತ್ಯಾಜ್ಯಾ ನ ಸರ್ವಥಾ ॥೧೦೭॥

ಅನಾಯಾಸೇನ ನ ಪ್ರಾಪ್ತಾ ಪರಂ ತ್ವಾಯಾಸಕೋಟಿಭಿಃ ।
ಪ್ರಾಪ್ತೇಯಂ ಮುಕ್ತಿದಾ ಕಾಶೀ ತ್ಯಾಜ್ಯಾ ಸ್ಯಾಜ್ಜೀವತಾ ಕಥಂ॥೧೦೮॥

ಕದಾಚಿನ್ನಿಧಯಸ್ತ್ಯಾಜ್ಯಾಃ ಪುತ್ರಾದ್ಯಾಶ್ಚ ಮುನೀಶ್ವರಾಃ ।
ಇಯಂ ಕಾಶೀ ಕಥಂ ತ್ಯಾಜ್ಯಾ ಸರ್ವಮುಕ್ತಿಪ್ರದಾಯಿನೀ ॥೧೦೯॥

ತ್ಯಾಗಾರ್ಥಮೇವ ಕಿಂ ಪ್ರಾಪ್ತಾ ಕಾಶೀಯಂ ತಪಸಾ ಪುರಾ ।
ತ್ಯಾಜ್ಯೈವ ಚೇದೇತದರ್ಥಂ ತಪಸ್ತಪ್ತಂ ಪುರಾ ಕಥಂ ॥೧೧೦॥

ನಾವು ಅಗಾಧವಾದ ರೀತಿಯಲ್ಲಿ ಆಚರಿಸಿದ ತಪಸ್ಸು, ದಾನ, ಮುಂತಾದುವುಗಳ ಫಲವಾಗಿ ನಮಗೆ ಪುಣ್ಯಭೂಮಿಯೆನಿಸಿದ ಈ ಕಾಶೀಕ್ಷೇತ್ರವು ಲಭಿಸಿದೆ. ಇಂತಹ ನಗರವನ್ನು ತ್ಯಜಿಸುವುದು ಯಾವ ನ್ಯಾಯ? ||೧೦೫-೧೦೬||

ಈ ಕಾಶೀಪ್ರಾಪ್ತಿಗಾಗಿ ನಾವು ಎಷ್ಟೋ ತಪಸ್ಸನ್ನಾಚರಿಸಿರುವೆವು. ತತ್ಪರಿಣಾಮವಾಗಿ ಈಗ ಇಲ್ಲಿಯ ವಾಸವು ಲಭಿಸಿದೆ. ಅನಾಯಾಸವಾಗಿ ಈ ಕ್ಷೇತ್ರವಾಸವು ನಮಗೆ ಲಭಿಸಿಲ್ಲ. ಆಯಾಸಪರಂಪರೆಯಿಂದ ಸಂಪಾದಿಸಿದ ಮುಕ್ತಿಪ್ರದವಾದ ಈ ಕಾಶಿಯನ್ನು ನಾವು ಬದುಕಿರುವ ಪರ್ಯಂತ ತ್ಯಜಿಸುವುದು ಹೇಗೆ? ||೧೦೭-೧೦೮||

ಒಂದುವೇಳೆ ಮಕ್ಕಳುಮರಿಗಳನ್ನಾಗಲಿ, ಹಣಕಾಸನ್ನಾಗಲಿ ದೂರಮಾಡಬಹುದು. ಇಂತಹಕ್ಷೇತ್ರವನ್ನು ತ್ಯಜಿಸುವುದು ಹೇಗೆ? ಇಷ್ಟು ಕಷ್ಟಪಟ್ಟು ಆರ್ಜಿಸಿದ ಪುಣ್ಯರಾಶಿಯನ್ನು ದೂರಮಾಡುವುದು ಉಚಿತವೆನಿಸೀತೆ? ಇಷ್ಟಕ್ಕಾಗಿ ಅಷ್ಟು ಕಷ್ಟಪಟ್ಟು ತಪಸ್ಸನ್ನಾಚರಿಸಬೇಕಾಗಿದ್ದಿತೆ? ||೧೦೯-೧೧೦||

ತೀರ್ಥಾಂತರೇಷು ಗಂತವ್ಯಂ ತೇಷು ಸ್ನಾತವ್ಯಮಿತ್ಯಪಿ ।
ಭವದ್ಭಿರುಕ್ತಂ ಮೋಹೇನ ನ ವಕ್ತವ್ಯಂ ತಥಾ ದ್ವಿಜಾಃ ॥೧೧೧॥

ನಿಧಾನಕಲಶಂ ತ್ಯಕ್ತ್ವಾ ಕಃ ಕುರ್ಯಾದಂತ್ಯಜಾರ್ಜನಂ ।
ಏವಂ ಕಾಶೀಮಿಮಾಂ ತ್ಯಕ್ತ್ವಾ ಕೋ ವಾ ತೀರ್ಥಾಂತರಂ ವ್ರಜೇತ್ ॥೧೧೨॥

ಯಸ್ತೀರ್ಥಾಂತರಮುದ್ದಿಶ್ಯ ಕಾಶೀಂ ತ್ಯಕ್ತ್ವಾ ಗಮಿಷ್ಯತಿ ।
ಸ ಮಹಾಪಾತಕಾಕ್ರಾಂತೋ ಭವಿಷ್ಯತಿ ಪದೇ ಪದೇ ॥೧೧೩॥

ಕಾಶ್ಯಾಂ ಸ್ಥಿತ್ವಾ ಜಿಗಮಿಷಾಂ ಕುರ್ವನ್ ತೀರ್ಥಾಂತರೇ ನರಃ
ನಾನಾಪಾತಕ ಸಂಕ್ರಾಂತೋ ಭವತ್ಯೇವ ನ ಸಂಶಯಃ ॥೧೧೪॥

ಕಾಶೀಂ ತ್ಯಕ್ತ್ವಾನ್ಯತೀರ್ಥಾನಿ ಗಂತುಮಿಚ್ಛಂತಿ ತೇ ಯದಾ ।
ತದಾ ತೇಭ್ಯಃ ಪರಾವೃತ್ತಾ ಮುಕ್ತಿರ್ವಾರ್ತಾಪಿ ಮುಕ್ತಿದಾ ॥೧೧೫॥

ಯೇ ಕಾಶೀಂ ತ್ಯಕ್ತುಮಿಚ್ಛಂತಿ ರತ್ನಸಿಂಹಾಸನಾನಿ ತೇ ।
ತ್ಯಕ್ತ್ವಾ ಪುರೀಷಕುಂಡೇಷು ಸ್ನಾತುಮಿಚ್ಛಂತಿ ವಸ್ತುತಃ ॥೧೧೬॥

ಇಂತಹ ಕ್ಷೇತ್ರವನ್ನು ಬಿಟ್ಟು ಬೇರೆ ಕ್ಷೇತ್ರಗಳಲ್ಲಿ ವಾಸಮಾಡಬೇಕೆಂದು ನೀವು ಹೇಳುವಿರಲ್ಲವೆ? ತಾನಾಗಿಯೇ ಪ್ರಾಪ್ತವಾದ ಹಣದ ಗಡಿಗೆಯನ್ನು ದೂರ ಎಸೆದು, ಚಂಡಾಲಸ್ವತ್ತಿಗೆ ಅಪೇಕ್ಷೆಪಡುವ ಮೂರ್ಖರಂತೆ, ನಾವು ಕಾಶಿಯನ್ನು ಬಿಟ್ಟು ತೀರ್ಥಾಂತರವನ್ನು ಹುಡುಕಿಕೊಂಡು ಹೋಗಬಹುದೆ? ॥೧೧೧-೧೧೨॥

ಪವಿತ್ರವಾದ ಈ ಕ್ಷೇತ್ರವನ್ನು ಬಿಟ್ಟು ತೀರ್ಥಾಂತರಕ್ಕೆ ಹೋಗುವ ಮನುಷ್ಯನು ನಿಜವಾಗಿಯೂ ಮಹಾಪಾಪಿಯೆನಿಸುವನು. ಅಲ್ಲದೆ ಕಾಶಿಯಲ್ಲಿ ವಾಸಮಾಡುತ್ತಾ, ತೀರ್ಥಾಂತರಕ್ಕೆ ಹೋಗುವ ಅಪೇಕ್ಷೆಯುಳ್ಳಿರುವವನು ಮಹಾ ಪಾಪಗಳಿಂದ ಆವೃತನಾಗುವನು. ॥೧೧೩-೧೧೪॥

ಕಾಶಿಯನ್ನು ದೂರಮಾಡಿ ತೀರ್ಥಾಂತರಕ್ಕೆ ಹೋಗುವವರಿಗೆ ಮುಕ್ತಿಯೂ ದೂರವಾದಂತೆಯೇ ಸರಿ. ರತ್ನಸಿಂಹಾಸನವನ್ನು ಬಿಟ್ಟು ಮಲಕೂಪದಲ್ಲಿ ಕುಳಿತು ಕೊಳ್ಳಲು ಯಾರಾದರೂ ಇಷ್ಟಪಡುವರೆ? ॥೧೧೫-೧೧೬॥

ಯೇ ಕಾಶೀಂ ತ್ಯಕ್ತುಮಿಚ್ಛಂತಿ ತೇ ಪೀಯೂಷಮುಪೇಕ್ಷಿತಂ ।
ತ್ಯಕ್ತ್ವಾ ರೇತೋನಿಶಂ ಪಾತುಮಿಚ್ಛಂತ್ಯೇವ ನ ಸಂಶಯಃ ॥೧೧೭॥

ಯೇ ಕಾಶೀಂ ತ್ಯಕ್ತುಮಿಚ್ಛಂತಿ ತೇ ಮಹಾರಾಜ್ಯನಾಥತಾಂ ।
ತ್ಯಕ್ತ್ವಾ ಚಂಡಾಲಭೃತ್ಯತ್ವಂ ಪ್ರಾಪ್ತುಮಿಚ್ಛಂತಿ ದುರ್ಭಗಾಃ ॥೧೧೮॥

ಯೇ ಕಾಶೀಂ ತ್ಯಕ್ತುಮಿಚ್ಛಂತಿ ಸ್ವರ್ಗಭೋಗಂ ವಿಹಾಯ ತೇ ।
ನರಕಾವಾಸಮಿಚ್ಛಂತಿ ಯಾವದಾಚಂದ್ರತಾರಕಂ ॥೧೧೯॥

ಯೇ ಕಾಶೀಂ ತ್ಯಕ್ತುಮಿಚ್ಛಂತಿ ರಂಭಾಭೋಗಂ ವಿಹಾಯ ತೇ ।
ಗಾರ್ದಭೀಯೋಗಮಿಚ್ಛಂತಿ ನರಕಾವಾಸಸಾಧನಂ ॥೧೨೦॥

ಯೇ ಕಾಶೀಂ ತ್ಯಕ್ತುಮಿಚ್ಛಂತಿ ತೇ ವಿಹಾಯಾನ್ನಮುತ್ತಮಂ ।
ವಿಷ್ಠಾಭಕ್ಷಣಮಿಚ್ಛಂತಿ ಸುಹೃದ್ವರ್ಗಸಮನ್ವಿತಾಃ ।೧೨೧।

ಯೇ ಕಾಶೀಂ ತ್ಯಕ್ತುಮಿಚ್ಛಂತಿ ತೇ ಸುಗಂಧಾನುಲೇಪನಂ ।
ತ್ಯಕ್ತ್ವಾ ಸೂಕರವಿಷ್ಠಾನುಲೇಪನೇಚ್ಛಾಂ ಪ್ರಕುರ್ವತೇ ॥೧೨೨॥

ಯೇ ಕಾಶೀಂ ತ್ಯಕ್ತುಮಿಚ್ಛಂತಿ ನಿರ್ವಾಣಪದದಾಯಿನೀಂ ।
ತೇ ಸರ್ವೇಷ್ವಾತ್ಮಹಂತಾರಸ್ತೇಷಾಂ ನಾಸ್ತ್ಯೇವ ನಿಷ್ಕೃತಿಃ ॥೧೨೩॥

ಅಮೃತವನ್ನು ಬಿಟ್ಟು ರೇತಃಪಾನಮಾಡುವನಂತೆಯೂ, ಮಹಾರಾಜಪದವಿಯನ್ನು ದೂರಮಾಡಿ ಚಂಡಾಲಸೇವಕನಾಗುವಂತೆಯೂ, ಕಾಶಿಯನ್ನು ದೂರಮಾಡುವವನು ಕಡುಮೂರ್ಖನೆನಿಸುವನು. ॥೧೧೭-೧೧೮॥

ಅಷ್ಟೇ ಅಲ್ಲ ಕಾಶಿಯನ್ನು ಬಿಡಲಿಚ್ಛಿಸುವವನು, ಸ್ವರ್ಗವನ್ನು ಬಿಟ್ಟು ನರಕವನ್ನು ಶಾಶ್ವತವಾಗಿ ಹೊಂದುವನಂತೆಯೂ, ರಂಭೆಯ ಆಲಿಂಗನವನ್ನು ದೂರಮಾಡಿ ಹೆಣ್ಣುಕತ್ತೆಯಿಂದ ಸಂಭೋಗಸುಖವನ್ನು ಬಯಸುವನಂತೆಯೂ ಮೂರ್ಖನೆನಿಸುವನು. ೧೧೯-೧೨೦॥

ಮೃಷ್ಟಾನ್ನವನ್ನು ಬಿಟ್ಟು ಅಮೇಧ್ಯವನ್ನು ಪಡೆದಂತೆಯೂ, ಸುಗಂಧವಸ್ತುಗಳನ್ನೊಲ್ಲದೆ ಹಂದಿಯ ಮಲವನ್ನು ಲೇಪಿಸಿಕೊಂಡಂತೆಯೂ ಕಾಶಿಯನ್ನು ಬಿಡುವವನು ದಡ್ಡನೆನಿಸುವನು ॥೧೨೧-೧೨೨॥

ಮುಕ್ತಿಪ್ರದವಾದ ಕಾಶಿಯನ್ನು ದೂರಮಾಡುವವರು ತಮ್ಮನ್ನು ತಾವು

ಶರೀರೇಷ್ವೇವ್ಯಶೀಮಾಸ್ಥಾಂ ಕೇ ವಾ ಕುರ್ವಂತಿ ದುರ್ಧಿಯಃ ।
ಕಾಶೀಂ ತ್ಯಕ್ತ್ವಾ ಶರೀರಾಣಿ ರಕ್ಷಣೀಯಾನಿ ಕಿಂ ಬುಧೈಃ ॥೧೨೪॥

ಶರೀರಂ ವಸ್ತುತಸ್ತುಚ್ಛಂ ಮೂತ್ರಾಮೇಧ್ಯಸಮಾವೃತಂ ।
ತಸ್ಮಿನ್ನಾಸ್ಥಾಂ ಕಥಂ ವಿಪ್ರಾ ಭವದ್ಭಿಃ ಕ್ರಿಯತೇಽಧುನಾ ॥೧೨೫॥

ಕಾಶೀ ತ್ಯಾಜ್ಯೇತಿ ಸಹಸಾ ಜೀವದ್ಭಿಃ ಕಥಮುಚ್ಯತೇ ।
ಮುಕ್ತಿನಾರ್ತಾ ದೂರತಸ್ತು ಕಥಂ ಲಜ್ಜಾ ನ ಜಾಯತೇ ॥೧೨೬॥

ಸ್ರವನ್ಮೂತ್ರಪುರೀಷಾಢ್ಯೇ ಶರೀರೇ ರಕ್ಷ್ಯತಾಮತಿಃ ।
ಕಾಶೀತ್ಯಾಗಮತಿಶ್ಚೇತಿ ದ್ವಯಂ ದೌರ್ಭಾಗ್ಯಲಕ್ಷಣಂ ॥೧೨೭॥

ಸಂತ್ಯನಂತಾನಿ ಪಾಪಾನಿ ಸದಾ ಕಾಶ್ಯಾ ಬಹಿರ್ದ್ವಿಜಾಃ ।
ಕಾಶೀತ್ಯಾಗೇ ಲಗಿಷ್ಯಂತಿ ತಾನಿ ಯುಷ್ಮಾಸು ಸರ್ವಥಾ ॥೧೨೮॥

ಕೊಂದಂತೆಯೇ ಸರಿ. ಏಕೆಂದರೆ ಅವರಿಗೆ ಮತ್ತೆಲ್ಲಿಯೂ ಸುಖವು ದೊರೆಯಲಾರದು. ದುಃಖನಿಧಿಯಾದ ಈ ಕ್ಷಣಭಂಗುರವಾದ ಶರೀರದಲ್ಲಿ ಆಸಕ್ತಿಯಿಟ್ಟು, ಇಂತಹ ಪವಿತ್ರಕ್ಷೇತ್ರವನ್ನು ತಿಳಿದವರು ಎಂದಾದರೂ ದೂರಮಾಡುವರೇ ? ||೧೨೩-೧೨೪||

ಎಲೈ ವಿಪ್ರರೇ, ಮಲಮೂತ್ರಗಳಿಗೆ ಆಶ್ರಯವಾಗಿ ನಿಂದ್ಯವೆನಿಸಿದ ಈ ಶರೀರದಲ್ಲಿ ನಿಮಗೆ ಆಸೆಯು ಹೇಗೆ ಒದಗಿತು ? ಜೀವಂತರಾಗಿರುವಾಗಲೇ ಕಾಶಿಯನ್ನು ಬಿಡಬೇಕೆಂದು ಹೇಳುವ ನೀವು ನಿಜವಾಗಿಯೂ ಪ್ರಾಪ್ತವಾದ ಮುಕ್ತಿಯನ್ನು ಕಳೆದುಕೊಂಡಂತಾಯಿತಲ್ಲವೆ ? ಈ ಕಾರ್ಯದಲ್ಲಿ ನಿಮಗೆ ನಾಚಿಕೆಯಿರಲಾರದೆ ? ||೧೨೫-೧೨೬||

ಮಲಮೂತ್ರಗಳಿಂದ ಅಪವಿತ್ರವಾಗಿರುವ ಶರೀರದಲ್ಲಿ ರಕ್ಷಣಾಬುದ್ಧಿಯೂ, ಪವಿತ್ರವಾದ ಕಾಶಿಯಲ್ಲಿ ತ್ಯಾಗಬುದ್ಧಿಯೂ, ನಿಮ್ಮ ದೌರ್ಭಾಗ್ಯದಿಂದ ನಿವಗೆ ಬಂದುದಲ್ಲದೆ ? ಲೋಕದಲ್ಲಿ ತೋರಿಬರುವ ಮಹಾಪಾಪಗಳೆಲ್ಲಾ ಕಾಶಿಯಿಂದ ಹೊರಗೆ ನೆಲಸಿರುವುವು. ಅಲ್ಲಿಗೆ ನಾವು ಸೇರಿದ ಮಾತ್ರದಿಂದಲೇ ನಮಗೆ ಸಕಲ ಪಾಪಸಂಬಂಧವೂ ಒದಗುವುದು ನಿಜ. ||೧೨೭-೧೨೮||

ಲಗ್ನಾನಿ ತಾನಿ ಪಾಪಾನಿ ನ ನಶ್ಯಂತಿ ಕದಾಚನ ।
ಕೋಟಿಶಃ ಕೃತತೀರ್ಥಾನಾಮಪಿ ಸರ್ವಾತ್ಮನಾ ಧ್ರುವಂ ॥೧೨೯॥

ಅನಂತಪಾಪಸಂಘಾನಾಂ ಫಲಂ ಕಾಶೀವಿಯೋಜನಂ ।
ಅನಂತಪುಣ್ಯಸಂಘಾನಾಂ ಕಾಶೀವಾಸಫಲಂ ದ್ವಿಜಾಃ ॥೧೩೦॥

ಕಾಶೀಪ್ರಾಪ್ತ್ಯರ್ಥಮಸ್ಮಾಭಿಃ ಕಥಂ ಪುಣ್ಯಾರ್ಜನಂ ಕೃತಂ ।
ಕಾಶೀಪ್ರಾಪಕಪುಣ್ಯಾರ್ಥಂ ಯತ್ನಾಶ್ಚ ಬಹುಧಾ ಕೃತಾಃ ॥೧೩೦॥

ವಿನಾ ಯತ್ನೈರಿಯಂ ಕಾಶೀ ಲಬ್ಧಾಸ್ಮಾಭಿಃ ಕಿಮೀದೃಶೈಃ ।
ಕಥಂ ತ್ಯಾಜ್ಯಾ ಶರೀರಾರ್ಥಂ ಧಿಕ್ ಶರೀರಮಿದಂ ದ್ವಿಜಾಃ ॥೧೩೨॥

ಕಾಶೀಂ ಶರೀರರಕ್ಷಾರ್ಥಂ ತ್ಯಕ್ಷ್ಯಾಮೋ ಏವ ಸಾ ಯದಿ ;
ತದೇನಾಂಸಿ ಹನಿಷ್ಯಂತಿ ಕರತಾಡನಪೂರ್ವಕಂ ॥೧೩೩॥

ಶರೀರಪೀಡಾ ಬಹುಧಾ ಯದಿ ಸೋಢುಂ ನ ಶಕ್ಯತೇ ।
ತದಾ ಶಸ್ತ್ರೈಸ್ತನೂಶ್ಛಿತ್ವಾ ಕಾಶ್ಯಾಂ ಮರ್ತವ್ಯಮುತ್ತಮೈಃ ॥೧೩೪॥

ಹಾಗೆ ಸಂಬಂಧಿಸಿದ ಪಾಪಸಂಸರ್ಗದಿಂದ ನಾವು ಮತ್ತೆಷ್ಟುಕೋಟಿ ತೀರ್ಥಗಳ ಸೇವನೆಮಾಡಿದರೂ ನಮಗೆ ಪರಿಹಾರದೊರಕದು. ಪಾಪರಾಶಿಗಳ ಫಲವೇ ಕಾಶೀ ಪರಿತ್ಯಾಗ. ಪುಣ್ಯಫಲವೇ ಕಾಶೀವಾಸವೆಂದು ತಿಳಿಯಬಹುದು. ||೧೨೯-೧೩೦||

ನಾವು ಕಾಶಿಯನ್ನು ಹೊಂದಲೋಸುಗ ಎಷ್ಟು ಕಷ್ಟಪಟ್ಟಿವೋ ಅರಿಯದು. ಅಷ್ಟು ಪ್ರಯತ್ನಸಾಧ್ಯವಾಗಿರುವ ಈ ಕಾಶೀನಗರಿಯನ್ನು ಈ ಅಲ್ಪವಾದ ದೇಹತೃಪ್ತಿಗಾಗಿ ಬಿಡುವುದು ನ್ಯಾಯವೇ. ಛೀ ; ಇಂತಹ ದೇಹಾಭಿಮಾನವನ್ನು ಬಿಟ್ಟುಬಿಡಿ. ||೧೩೧-೧೩೨||

ದೇಹಸೌಖ್ಯಕ್ಕಾಗಿ ನಮ್ಮ ಪಾಪದ ಪರಿಣಾಮದಿಂದ ಕಾಶೀಪರಿತ್ಯಾಗವು ನಮ್ಮಿಂದ ನಡೆಸಲ್ಪಟ್ಟಿದ್ದೇ ಆದರೆ, ಆಗ ನಮ್ಮನ್ನು ಜಯಿಸಿದ ಆ ಪಾಪಗಳು ಚಪ್ಪಾಳೆತಟ್ಟಿ ನಗುತ್ತಾ ನಮ್ಮನ್ನು ಮತ್ತೂ ಹಿಂಸಿಸುವುವು. ಒಂದುವೇಳೆ ಶರೀರದ ಕಷ್ಟವನ್ನು ಸಹಿಸಲಾಗದಿದ್ದರೆ ಅಂತಹ ಶರೀರವನ್ನು ಶಸ್ತ್ರಗಳಿಂದ ಕತ್ತರಿಸಿ ಕಾಶಿಯಲ್ಲಿ ಸಾಯಬೇಕು ||೧೩೩-೧೩೪||

ಉಪ್ರೋಷಣೈರ್ವಾ ಮರ್ತವ್ಯಂ ಕಾಶ್ಯಾಂ ದುಃಖಾಸಹಿಷ್ಣುಭಿಃ ।
ಪರಂ ತು ಕಾಶೀ ನ ತ್ಯಾಜ್ಯಾ ಮನಸಾಪಿ ಮುಮುಕ್ಷುಭಿಃ ॥೧೩೫॥

ಧನ್ಯಾಃ ಕೀಟಾದಯೋಪ್ಯೇತೇ ವಿಪ್ರಾ ಭವದಪೇಕ್ಷಯಾ ।
ನ ಕಾಶೀಂ ತ್ಯಕ್ತುಮಿಚ್ಛಂತಿ ಕದಾಚಿದಪಿ ಚೇತಸಾ ॥೧೩೬॥

ಶತಾಬ್ದಾವಧಿಪಾನೀಯಂ ಕಾಶ್ಯಾಂ ಕ್ವಾಪಿ ನ ದೃಶ್ಯತೇ ।
ತಥಾಪ್ಯೇತೇ ನ ತ್ಯಜಂತಿ ಕಾಶೀಂ ಕೀಟಾ ಮುಮುಕ್ಷವಃ ॥೧೩೭॥

ಜಲಪ್ರಧಾನಮೇತೇಷಾಂ ಕೀಟಾನಾಂ ಜೀವನಂ ದ್ವಿಜಾಃ ।
ತಥಾಪಿ ತದ್ವಿಹಾಯ್ಯೈತೇ ಕಾಶ್ಯಾಂ ತಿಷ್ಠಂತಿ ಧೈರ್ಯತಃ ॥೧೩೮॥

ಜೀವನಂ ಧನ್ಯಮೇತೇಷಾಂ ಕಾಶಿಸಂಸಕ್ತಚೇತಸಾಂ ।
ಕಾಶೀಂ ನ ತ್ಯಕ್ತುಮಿಚ್ಛಂತಿ ತ್ಯಕ್ತಜೀವನಸಾಧನಾಃ ॥೧೩೯॥

ಏನಂ ಪಶ್ಯಂತು ಮಂಡೂಕಂ ಚರ್ಮಮಾತ್ರಾವಶೇಷಿತಂ ।
ಕಾಶ್ಯಾಂ ವಿನಾ ಜಲೇನಾಯಂ ಕಥಂ ತಿಷ್ಠತಿ ಧೈರ್ಯತಃ ॥೧೪೦॥

ದುಃಖವನ್ನು ಸಹಿಸಲಾಗದವರು ಉಪವಾಸಮಾಡಿಯಾದರೂ ಕಾಶಿಯಲ್ಲಿ ಮರಣಹೊಂದಬೇಕು. ನಿಜವಾದ ಮೋಕ್ಷಾಪೇಕ್ಷಿಗಳು ಖಂಡಿತವಾಗಿ ಕಾಶಿಯನ್ನು ಬಿಡಬಾರದು. ಎಲೈ ವಿಪ್ರರೇ, ಕ್ರಿಮಿಕೀಟಾದಿಗಳೂ ಕೂಡ ಇಂತಹ ಕಾಶೀ ಕ್ಷೇತ್ರವನ್ನು ಬಿಡಲು ಮನಸ್ಸಿನಿಂದಲೂ ಕೂಡ ಯೋಚಿಸಲಾರವು. ॥೧೩೫-೧೩೬॥

ಅನೇಕ ವರ್ಷ ಪರ್ಯಂತ ಸುಲಭವಾಗಿ ಪಾನೀಯವನ್ನು ಒದಗಿಸುವ ಜಲಾಶಯಗಳು ಈ ಕ್ಷೇತ್ರದಲ್ಲಿಲ್ಲದಿದ್ದರೂ, ಜಲಜೀವಿಗಳಾಗಿ ಈ ಕೀಟಾದಿಗಳು ಮೋಕ್ಷಾಪೇಕ್ಷೆಯಿಂದ ಈ ನಗರವನ್ನು ಬಿಡಲಾರದೆ, ಇಲ್ಲಿಯೇ ಕಷ್ಟದಿಂದ ಜೀವಿಸಿ ಕೊಂಡಿರುವುವು. ॥೧೩೭-೧೩೮॥

ಪ್ರಾಣಹೋಗುವಂತಹ ತೊಂದರೆಗಳಿದ್ದರೂ, ಈ ಕ್ಷೇತ್ರವನ್ನು ಬಿಡಬಾರದೆಂದು ಇಲ್ಲಿಯೇ ನೆಲಸಿರುವ ಈ ಪ್ರಾಣಿಗಳ ಜೀವನವೇ ಶ್ರೇಷ್ಠವಾದುದು. ಇಲ್ಲಿ ನೀರಿಲ್ಲದಿದ್ದರೂ, ಈ ಕಪ್ಪೆಯು ಒಣಗಿಕೊಂಡು ಚರ್ಮಮಾತ್ರಾವಶೇಷಿಯಾಗಿ ಇಲ್ಲಿಯೇ ಹೇಗೆ ಬದುಕಿದೆ ನೋಡಿರಿ! ॥೧೩೯-೧೪೦॥

ಕ್ಷಣಾರ್ಧಮಪಿ ಮಂಡೂಕೋ ನ ತಿಷ್ಠತಿ ಜಲಂ ವಿನಾ ।
ಕಾಶ್ಯಾಮೇತಾದೃಶಸ್ಯಾಸ್ಯ ನಾಶಃ ಕಥಮಭೂದ್ದ್ವಿಜಾಃ ॥೧೪೧॥

ಮಂಡೂಕಾಪೇಕ್ಷಯಾಪ್ಯಂತೇ ಭವಂತಸ್ತ್ವಧಮಾಧಮಾಃ ।
ಯತಃ ಕಾಶೀಂ ವಿಹಾಯಾದ್ಯ ಭವಂತೋ ಗಂತುಮಿಚ್ಛಥ ॥೧೪೨॥

ಧಿಗ್ವಿದ್ಯಾ ಭವತಾಂ ಮೂರ್ಖಾಃ ಕಿಂ ತಯಾ ವಿದ್ಯಯಾಧುನಾ ।
ಯತಃ ಕಾಶೀನಿಯೋಗಾರ್ಥಮುದ್ಯತಾ ಯೂಯಮೀದೃಶಾಃ ॥೧೪೩॥

ಪ್ರಾಯೋ ಭವಂತಸ್ಸರ್ವೇಽಪಿ ಶಿಶ್ನೋದರಪರಾಯಣಾಃ ।
ಅನ್ಯಥಾ ಭವತಾಮದ್ಯ ಕಾಶೀ ತ್ಯಾಗೇ ಮತಿಃ ಕಥಂ ॥೧೪೪॥

ಭಕ್ಷ್ಯಭೋಜ್ಯಾದಿಕಂ ಕಾಶ್ಯಾಂ ಸಮೃದ್ಧಂ ಯಾವದಾಪ್ಯತೇ ।
ತಾವದ್ಭವದ್ಭಿಃ ಕರ್ತವ್ಯಃ ಕಾಶೀವಾಸೋಽನ್ನಕಾಂಕ್ಷಿಭಿಃ ॥೧೪೫॥

ಸ್ಥಿತಂ ಭವದ್ಭಿಃ ಪಾಪಿಷ್ಠೈಃ ಕಾಶ್ಯಾಮನ್ನಾದಿಕಾಂಕ್ಷಯಾ ।
ಏತಾದೃಶಾನಾಂ ಭವತಾಂ ಧಿಗ್ಧಿಗ್ಜೀವನಂ ವೃಥಾ ॥೧೪೬॥

---

ನಿಜವಾಗಿ ಕಪ್ಪೆಯು ನೀರಿಲ್ಲದೆ ಅರ್ಧಕ್ಷಣವೂ ಬದುಕಲಾರದು. ಹಾಗಾದರೂ ಅದು ಇಲ್ಲಿ ಹೇಗೆ ಜೀವಿಸಿದೆ ನೋಡಿ! ನಿಮ್ಮ ಜೀವನವು ಇದಕ್ಕಿಂತಲೂ ತುಚ್ಛವಾಯಿತೆ? ಇಂತಹ ಕಾಶಿಯನ್ನು ಬಿಡುವುದರಲ್ಲಿ ನಿಮ್ಮ ಮನಸ್ಸು ತ್ವರೆಪಡುತ್ತಿದೆಯಲ್ಲಾ! ||೧೪೧-೧೪೨||

ನಿಮ್ಮ ವಿದ್ಯೆಯು ಹಾಳಾಗಲಿ. ಇಷ್ಟು ತಿಳಿವಳಿಕೆಕೊಡದ ವಿದ್ಯೆಯಿಂದ ಪ್ರಯೋಜನವೇನು? ಕಾಶೀಕ್ಷೇತ್ರವನ್ನು ಬಿಟ್ಟು ಹೋಗಲಿರುವ ನೀವು ಕೇವಲ ಶಿಶ್ನೋದರಪರಾಯಣರಲ್ಲವೆ? ನಿಜವಾದ ವಿವೇಕಿಗಳಾಗಿದ್ದರೆ ನೀವು ಹೀಗೆ ಈ ಪುರತ್ಯಾಗಮಾಡುತ್ತಿದ್ದಿರಾ! ||೧೪೩-೧೪೪||

ಈ ಕಾಶಿಯಲ್ಲಿ ಭಕ್ಷ್ಯಭೋಜ್ಯಾದಿಗಳು ಹೇರಳವಾಗಿ ಸಿಕ್ಕುವವರೆಗೂ ಇಲ್ಲಿಯೇ ನೆಲಸಿದ್ದಿರಿ. ಏಕೆಂದರೆ ನೀವು ಅನ್ನಾಭಿಮಾನಿ ಮನುಜರು ಪಾಪಿಷ್ಠರಾದ ಮತ್ತು ಅನ್ನಾಕಾಂಕ್ಷಿಗಳಾದ ನಿಮ್ಮ ಜನ್ಮವನ್ನು ಸುಡಲಿ. ||೧೪೫-೧೪೬||

ಯಾವತ್ಪಕ್ಷ್ಯಾದಿಕಂ ಕಾಶ್ಯಾಂ ತಾವತ್ ಸ್ಥಿತ್ವಾ ತತಃ ಪರಂ ।
ಕಾಶೀಂ ತ್ಯಜಂತಿ ಯೇ ಮೂಢಾಸ್ತೇ ಯೂಯಂ ಪಾತಕಾಶ್ರಯಾಃ॥೧೪೭॥

ಭವಾದೃಶಾನಾಂ ದುಷ್ಟಾನಾಂ ಕಾಶೀಂ ಸಂತ್ಯಕ್ತುಮಿಚ್ಛತಾಂ ।
ನರಕೇಷ್ವನಿಶಂ ವಾಸೋ ಭವಿಷ್ಯತಿ ನ ಸಂಶಯಃ ॥೧೪೮॥

ಕಾಶೀತ್ಯಾಗರತಂ ಮೋಹಾದ್ಯೇ ಪಶ್ಯಂತಿ ನರಾಧಮಂ ।
ತೇಷಾಮಪಿ ಭವೇತ್ಪಾಪಂ ಕಿಂ ಪುನಸ್ತಾದೃಶಾತ್ಮನಾಂ ॥೧೪೯॥

ಕಾಶೀತ್ಯಾಜ್ಯೇತಿ ಬುದ್ಧಿಶ್ಚೇತ್ತದಾ ಮನ್ನಿಕಟೇಽಧುನಾ ।
ಕಿಮರ್ಥಮಾಗತಂ ಯಾಂತು ಶ್ಯಾಮಂ ಕೃತ್ವಾ ಮುಖಂ ಜಡಾಃ ॥೧೫೦॥

ಕಾಶೀತ್ಯಾಗರತೈಃ ಸಾಕಂ ಮೋಹಾದ್ವಾ ಯೋಽನುಭಾಷತೇ ।
ನ ತಸ್ಯ ನಿಷ್ಕೃತಿರ್ದೃಷ್ಟಾ ಚಾಂದ್ರಾಯಣಶತೈರಪಿ ॥೧೫೧॥

ಅಸ್ಮಿನ್ ಧರ್ಮಯುಗೇ ಜಾತಾ ಕಾಶೀತ್ಯಾಗರತಿಃ ಕಥಂ ।
ಅಧರ್ಮಃ ಪ್ರಾಯಶೋಽದ್ಯೈವ ಸಂಪ್ರಾಪ್ಯ ಕಲಿಕಾಲಕೇ ॥೧೫೨॥

ಕಾಶಿಯಲ್ಲಿ ಪ್ರಪಷ್ಟಾನ್ನ ದೊರೆಯುವವರೆಗೂ ವಾಸಿಸುತ್ತಿದ್ದು ಈಗ ಕಷ್ಟ ಪೊದಗಿದಾಗ ಕಾಶಿಯನ್ನು ತ್ಯಜಿಸುವ ನೀವು ಎಂತಹ ದುಷ್ಟರು! ನಿಮಗೆ ನರಕ ವಾಸವು ಒದಗುವುದು ನಿಜ. ಸಂಶಯವಿಲ್ಲ. ॥೧೪೭-೧೪೮॥

ಕಾಶೀವಾಸವನ್ನು ಬಿಡಬೇಕೆಂದು ಹೇಳುವವರನ್ನು ಕಣ್ಣಿಂದಲೂ ನೋಡ ಕೂಡದು. ಒಂದುವೇಳೆ ನೋಡಿದರೆ ನೋಡಿದವರು ಪಾಪಿಗಳೆನಿಸುವರು. ನಿಮಗೆ ಅಂತಹ ಬುದ್ಧಿಯಿರುವಾಗ ಕಪ್ಪುಮುಖಹಾಕಿಕೊಂಡು ನನ್ನ ಸಮೀಪಕ್ಕೆ ಏತಕ್ಕಾಗಿ ಬಂದಿರಿ? ॥೧೪೯-೧೫೦॥

ಕಾಶೀಕ್ಷೇತ್ರ ತ್ಯಾಗಮಾಡುವವರೊಡನೆ ಮರೆತಾದರೂ ಮಾತನಾಡಬಾರದು. ಒಂದುವೇಳೆ ಮಾತನಾಡಿದರೆ ಆ ಪಾಪವು ಚಾಂದ್ರಾಯಣಶತವ್ರತಾಚರಣೆಯಿಂದಲೂ ಕಮ್ಮಿಯಾಗಲಾರದು. ಈ ಧರ್ಮಯುಗದಲ್ಲಿ ನಿಮಗೆ ಇಂತಹ ಬುದ್ಧಿ ಹೇಗೆ ಬಂದಿತು? ಒಂದುವೇಳೆ ಕಲಿಯುಗದ ಅಧರ್ಮವು ಈಗಲೇ ಆರಂಭವಾಯಿತೋ ಏನೋ! ॥೧೫೧-೧೫೨॥

ಕಲಿಕಾಲೇ ಭವಿಷ್ಯಂತಿ ಕಾಶೀತ್ಯಾಗರತಾಜನಾಃ ।
ತತಸ್ತೇಷಾಂ ಭವಿಷ್ಯಂತಿ ಯಾತನಾ ಅಪಿ ದುಸ್ಸಹಾಃ ॥೧೫೩॥

ಅನ್ಯತೀರ್ಥಸಮತ್ವೇನ ಕಲೌ ಜ್ಞಾಸ್ಯಂತಿ ಕಾಶಿಕಾಂ ।
ತತಸ್ತೇಷಾಂ ಭವಿಷ್ಯಂತಿ ಯಾತನಾ ಅಪಿ ದುಸ್ಸಹಾಃ ॥೧೫೪॥

ಭವಿಷ್ಯಂತಿ ಕಲೌ ವಿಪ್ರಾಃ ನ್ಯೃದ್ಫಾಲಾ ಭಸ್ಮವರ್ಜಿತಾಃ ।
ತತಸ್ತೇಷಾಂ ಭವಿಷ್ಯಂತಿ ಯಾತನಾ ಅಪಿ ದುಃಸ್ಸಹಾಃ ॥೧೫೫॥

ಶಿವಾನ್ಯಮರ್ಚಯಿಸ್ಯಂತಿ ಕಲೌ ತ್ಯಕ್ತ್ವಾ ಶಿವಾರ್ಚನಂ ।
ತತಸ್ತೇಷಾಂ ಭವಿಷ್ಯಂತಿ ಯಾತನಾ ಅಪಿ ದುಃಸಹಾಃ ॥೧೫೬॥

ಶಿವಾನ್ಯಂ ಕೀರ್ತಯಿಷ್ಯಂತಿ ಕಲೌ ತ್ಯಕ್ತ್ವಾ ಶಿವಸ್ತುತಿಂ ।
ತತಸ್ತೇಷಾಂ ಭವಿಷ್ಯಂತಿ ಯಾತನಾ ಅಪಿ ದುಸ್ಸಹಾಃ ॥೧೫೭॥

ಶಿವಾನ್ಯಂ ಸಂಸ್ಮರಿಷ್ಯಂತಿ ಕಲೌ ತ್ಯಕ್ತ್ವಾ ಶಿವಸ್ಮೃತಿಂ ।
ತತಸ್ತೇಷಾಂ ಭವಿಷ್ಯಂತಿ ಯಾತನಾ ಅಪಿ ದುಸ್ಸಹಾಃ ॥೧೫೮॥

---

ಕಲಿಯುಗದಲ್ಲಿ ಕಾಶೀಕ್ಷೇತ್ರವನ್ನು ಬಿಡುವುದೂ, ಮತ್ತೂ ಇತರ ಅಸಾಧ್ಯವಾದ ಕ್ಷೇತ್ರಗಳೊಡನೆ ಈ ಕಾಶಿಯನ್ನು ಸಮನೆಂದೂ ತಿಳಿಯುವುದೂ ಸರ್ವಸಾಮಾನ್ಯವಾಗುವುದು. ಹಾಗೆ ತಿಳಿದವರಿಗೆ ನಿಜವಾಗಿಯೂ ನಾನಾವಿಧವಾದ ಕಷ್ಟಪರಂಪರೆಗಳು ಪ್ರಾಪ್ತವಾಗುವುವು. ॥೧೫೩-೧೫೪॥

ಕಲಿಯುಗದಲ್ಲಿ ಅನೇಕರು ತಮ್ಮ ಹಣೆಗೆ ಮೃತ್ತಿಗೆಯನ್ನು ಹಚ್ಚಿಕೊಳ್ಳುತ್ತಾ ಭಸ್ಮಶೂನ್ಯವಾದ ಲಲಾಟವುಳ್ಳವರಾಗುವರು. ಮತ್ತು ಅವರು ಶಂಕರನನ್ನು ಬಿಟ್ಟು ಬೇರೆ ದೇವತೆಗಳನ್ನು ಪೂಜಿಸುವರು. ಅಂತಹವರು ಅತಿಯಾದ ಕಷ್ಟವನ್ನು ಅನುಭವಿಸುವರು. ॥೧೫೫-೧೫೬॥

ಅನೇಕ ವಿಪ್ರರು ಕಲಿಯುಗದಲ್ಲಿ ಶಂಕರನ ಸ್ತುತಿಯನ್ನೂ, ಶಿವಸ್ಮರಣೆಯನ್ನೂ ಬಿಟ್ಟು ಇತರ ದೇವತೆಗಳನ್ನು ಹೊಗಳುವುದಕ್ಕೂ, ಸ್ಮರಿಸುವುದಕ್ಕೂ ತೊಡಗುವರು. ಅಂತಹವರು ದುಸ್ಸಹವಾದ ಯಾತನೆಯನ್ನು ಅನುಭವಿಸುವರು. ॥೧೫೭-೧೫೮॥

ಏತಾದೃಶಾನಿ ಕರ್ಮಾಣಿ ಪಾಪಹೇತೂನಿ ಭೂರಿಶಃ ।
ದ್ವಿಜಾ ಅಪಿ ಕರಿಷ್ಯಂತಿ ಸಂಪ್ರಾಪ್ತೇ ತು ಕಲೌ ಯುಗೇ ॥೧೫೯॥

ಅಧುನಾ ಕಥಮೇತಾನಿ ಕರ್ಮಾಣಿ ದುರದೃಷ್ಟಯಃ ।
ಕರ್ತುಮಿಚ್ಛಥ ಪಾಪಿಷ್ಠಾ ದೇಹರಕ್ಷಣತತ್ಪರಾಃ ॥೧೬೦॥

ಕಾಶೀಂ ಗತ್ವಾ ಸದಾ ಕಾಶ್ಯಾಂ ನಿವಾಸಿಷ್ಯಾಮ್ಯಪಿ ಯೋ ವದೇತ್ ।
ಸ ನಿಷ್ಪಾಪೋ ಭವತ್ಯೇಷಾ ಕಾಶೀ ಸಂತ್ಯಜ್ಯತೇ ಕಥಂ ॥೧೬೧॥

ಪುರಾ ವಿಂಧ್ಯಾಚಲಪ್ರಾಂತೇ ಕಶ್ಚಿದಾಸೀದ್ದ್ವಿಜಾಧಮಃ ।
ಕಿರಾತವೃತ್ತಿಮಾಶ್ರಿತ್ಯ ಸ್ಥಿತಸ್ತತ್ರ ಸ ಸರ್ವದಾ ॥೧೬೨॥

ಬ್ರಹ್ಮಹತ್ಯಾ ಕೃತಾನಂತಾಸ್ತೇನ ಪಾತಕಮೂರ್ತಿನಾ ।
ಗೋಹತ್ಯಾ ವಾಜಿಹತ್ಯಾಶ್ಚ ಭ್ರೂಣಹತ್ಯಾಶ್ಚ ಕೋಟಿಶಃ ॥೧೬೩॥

ತೇನ ಪಾತಕಿನಾ ಭೂರಿ ಬ್ರಹ್ಮಸ್ವಹರಣಂ ಕೃತಂ ।
ಸ ಮಾತೃಗಾಮೀ ಜಾತೋ ಭಗಿನೀಗಾಮೀ ತತಃ ॥೧೬೪॥

ಕಲಿಯುಗದಲ್ಲಿ, ತಿಳಿದಂತಹ ದ್ವಿಜರೂ ಸಹ ಇಂತಹ ಪಾಪಕರ್ಮಾಚರಣೆಗೆ ಮನಗೊಡುವರು. ಈಗ ನಿಮ್ಮಗಳಿಗೂ ಸಹ ಇಂತಹ ಬುದ್ಧಿಯು ಹೇಗೆ ಜನಿಸಿತು? ನಿಮ್ಮ ದೇಹಾಭಿಮಾನದಿಂದ ನೀವು ಪಾಪಿಗಳಾದರಲ್ಲಾ! ೧೫೯-೧೬೦॥

ಕಾಶಿಗೆ ಹೋದವನು ಅಲ್ಲಿಯೇ ವಾಸಮಾಡಬೇಕೆಂದು ಸಂಕಲ್ಪಮಾಡಿದರೆ ಅವನ ಪಾಪಗಳೆಲ್ಲವೂ ನಿವಾರಣೆಯಾಗುವುವು. ಇಂತಹ ಸಂದರ್ಭದಲ್ಲಿ ನೀವು ಕಾಶಿಯನ್ನು ಬಿಡಬೇಕೆಂದು ಹೇಗೆ ಹೇಳುವಿರಿ? ಇದಕ್ಕೆ ನಿದರ್ಶನವಾದ ಒಂದು ಇತಿಹಾಸವನ್ನು ಹೇಳುವೆನು ಕೇಳಿರಿ. ಹಿಂದೆ ವಿಂಧ್ಯಾಚಲಪ್ರಾಂತದಲ್ಲಿ ಒಬ್ಬ ನೀಚಬ್ರಾಹ್ಮಣನು ಬೇಡರ ವೃತ್ತಿಯಿಂದ ಜೀವನ ಹೊರೆಯುತ್ತಾ ವಾಸಮಾಡುತ್ತಿದ್ದನು. ॥೧೬೧-೧೬೨॥

ಪಾಪಮೂರ್ತಿಯಂತಿದ್ದ ಆತನು ಬ್ರಹ್ಮಹತ್ಯ, ಗೋಹತ್ಯ, ಅಶ್ವಹತ್ಯ, ಭ್ರೂಣಹತ್ಯ ಮುಂತಾದ ಮಹಾಪಾಪಕಾರ್ಯಗಳನ್ನು ಅಸಂಖ್ಯಾತವಾಗಿ ಆಚರಿಸಿದನು. ಅಷ್ಟಲ್ಲದೆ ಬ್ರಹ್ಮಸ್ವತ್ತನ್ನು ಅಪಹರಿಸಿ, ಮಾತೃಗಮನ, ಭಗಿನೀಗಮನ ಮೊದಲಾದ ಅಕಾರ್ಯಗಳನ್ನೂ ನಡೆಸಿದನು. ॥೧೬೩-೧೬೪॥

ಸುರಾಪಾನಂ ಕೃತಂ ತೇನ ಗೋಮಾಂಸಮಪಿ ಭಕ್ಷಿತಂ ।
ಪ್ರತ್ಯಹಂ ತಸ್ಯ ಗೋಮಾಂಸಮಶನಂ ಸಮಭೂದ್ದ್ವಿಜಾಃ ॥೧೬೫॥

ಏವಮೇವ ಸ ಪಾಪಾನಿ ಕುರ್ವನ್ನೇವ ಹಿ ಸಂಸ್ಥಿತಃ ।
ತತಃ ಕದಾಚಿದ್ರೋಗೇಣ ಪೀಡಿತೋಽಭೂತ್ಸ ದುಷ್ಟಧೀಃ ॥೧೬೬॥

ತದಾನೀಂ ತತ್ಪಿತಾ ವೃದ್ಧಃ ಪುತ್ರಂ ಸಂವೀಕ್ಷ್ಯ ಪೀಡಿತಂ ।
ರುದನ್ನಶ್ರುಸಮಾಕ್ರಾಂತಸ್ತಮಾಹ ಸುತಮುದ್ಧತಂ ॥೧೬೭॥

ಬ್ರಾಹ್ಮಣಾಜ್ಜನ್ಮ ಸಂಪ್ರಾಪ್ತಮತ್ರ ಏವ ಭವಾನ್ ಸುತ ।
ತ್ಯಕ್ತ್ವಾ ಬ್ರಾಹ್ಮಣಕರ್ಮಾಣಿ ಕೃತವಾನಸಿ ದುಷ್ಕೃತಂ ॥೧೬೮॥

ತ್ವತ್ಕೃತಾನಾಂ ಪಾತಕಾನಾಮಂತೋ ನಾಸ್ತ್ಯೇವ ಸರ್ವಥಾ ।
ತತ್ಪಾಪಫಲಭೋಗೋಽಗ್ರೇ ಭವಿಷ್ಯತ್ಯತಿದಾರುಣಃ ॥೧೬೯॥

ಕಲ್ಪಾಂತೇಽಪಿ ನ ತೇ ಮುಕ್ತಿರ್ಭವಿಷ್ಯತಿ ನ ಸಂಶಯಃ ।
ಅಘೋರನರಕಾವಾಸೋ ಭವಿಷ್ಯತಿ ತವ ಧ್ರುವಂ ॥೧೭೦॥

ಇತಿ ತದ್ವಚನಂ ಶ್ರುತ್ವಾ ಸ ತಂ ಪ್ರಾಹಾತಿಪೀಡಿತಃ ।
ಪಾಪನಾಶಕರೋಪಾಯಃ ಕಃ ಸಾಧ್ಯೋಽಸ್ತಿ ಮಮೇತಿ ಚ ॥೧೭೧॥

ಪ್ರತಿದಿನವೂ ಆತನು ಸುರಾಪಾನ, ಗೋಮಾಂಸಭಕ್ಷಣ ಮುಂತಾದುವುಗಳಿಂದಲೇ ಕಾಲಕಳೆಯುತ್ತಾ ಪಾಪಸಂಚಯಮಾಡಿಕೊಳ್ಳುತ್ತಿದ್ದನು. ॥೧೬೫॥

ಹೀಗಿರುವಾಗ ಅವನಿಗೆ ಒಂದುಸಾರಿ ದೊಡ್ಡ ರೋಗವು ವ್ಯಾಪಿಸಿತು. ಆಗ ಅವನ ತಂದೆಯಾದ ವೃದ್ಧನು ಮಗನು ನರಳುತ್ತಿರುವುದನ್ನು ನೋಡಿ ಕಣ್ಣೀರಿಡುತ್ತಾ ಮಗನನ್ನು ಕುರಿತು ಹೀಗೆಂದನು. ॥೧೬೬-೧೬೭॥

" ಪುತ್ರನೇ, ನೀನು ಬ್ರಾಹ್ಮಣನಿಂದ ಜನ್ಮತಾಳಿದೆ. ಆದರೆ ಬ್ರಾಹ್ಮಣಕರ್ಮಗಳನ್ನು ಮಾತ್ರ ದೂರಮಾಡಿದೆ. ನೀನು ನಡೆಸಿರುವ ಪಾಪಕರ್ಮಗಳಿಗೆ ಕೊನೆಮೊದಲೇ ಇಲ್ಲ. ಅವರ ಫಲವನ್ನು ನೀನು ಮುಂದೆ ಭಯಂಕರವಾಗಿ ಅನುಭವಿಸುವೆ. ॥೧೬೮-೧೬೯॥

ನಿನಗೆ ಕಲ್ಪಾಂತ್ಯದ ವರೆಗೂ ಮುಕ್ತಿಯು ದೊರಕುವ ಯೋಚನೆಯಿಲ್ಲ. ಅಲ್ಲಿಯ ವರೆಗೂ ನಿನಗೆ ಘೋರ ನರಕವೇ ಗತಿ " ಎಂದು ಹೇಳಿದ ತಂದೆಯು

ತತಸ್ಸ ವೇದತತ್ತ್ವಜ್ಞೋ ಜಾಬಾಲಶ್ರುತಿಪಾರಗಃ ।
ಪಾಪನಾಶಕರೋಪಾಯಂ ಪ್ರಾಹ ತತ್ತ್ವವಿದಾಂ ವರಃ ॥೧೭೨॥

ಪುತ್ರಾದ್ಯ ತ್ವತ್ಕೃತಾಘಾನಾಂ ನಾಶಸಾಧನಮುತ್ತಮಂ ।
ಅನನ್ಯಸಾಧನಾಪೇಕ್ಷಮೇಕಮಸ್ತಿ ವದಾಮ್ಯಹಂ ॥೧೭೩॥

ಉತ್ಥಾಯೋದಙ್ಮುಖೋ ಭೂತ್ವಾ ತನುಮುದ್ಧೂಲ್ಯ ಭಸ್ಮನಾ ।
ವದ ಕಾಶೀಂ ಗಮಿಷ್ಯಾಮೀತ್ಯೇಕವಾರಂ ಪ್ರಯತ್ನತಃ ॥೧೭೪॥

ಏತಾವತೈವ ಪಾಪಾನಿ ತ್ವತ್ಕೃತಾನ್ಯಖಿಲಾನ್ಯಪಿ ।
ವಿನಷ್ಟಾನಿ ಭವಿಷ್ಯಂತಿ ಸದ್ಯ ಏವ ನ ಸಂಶಯಃ ॥೧೭೫॥

ಯದಿ ಶಕ್ತಿಃ ಪ್ರಚಲಿತುಂ ದ್ವಿತ್ರಾಣ್ಯಪಿ ಪದಾನಿ ತೇ ।
ತದಾ ಪುಣ್ಯಸಮೃದ್ಧ್ಯರ್ಥಂ ಶ್ರೀಕಾಶ್ಯಭಿಮುಖಂ ಚಲ ॥೧೭೬॥

ಮಾತನ್ನು ಕೇಳಿ, ಆಗ ಆ ಪಾಪಿಯು ತನ್ನ ಪಾಪವನ್ನು ಕಳೆದುಕೊಳ್ಳಲು ಯಾವ ಉಪಾಯಮಾಡಬಹುದೆಂದು ಮತ್ತೆ ತಂದೆಯನ್ನೇ ಪ್ರಶ್ನಿಸಿದನು. ॥೧೭೦-೧೭೧॥

ಅವನ ತಂದೆಯಾದರೋ ವೇದವೇದಾಂಗಪಾರಗನಾಗಿ ಜಾಬಾಲೋಪನಿಷತ್ಸಾರವನ್ನು ಚೆನ್ನಾಗಿ ತಿಳಿದಿದ್ದನು. ಈ ವಿಷಯವಾಗಿ ಆತನು ಮಗನಿಗೆ ಪಾಪನಿವಾರಣೋಪಾಯವನ್ನು ಹೀಗೆ ವಿವರಿಸತೊಡಗಿದನು. "ಪುತ್ರನೇ, ನೀನು ಮಾಡಿದ ಪಾಪಕಾರ್ಯಗಳಿಂದ ಉಂಟಾಗಿರುವ ದುಷ್ಕೃತರಾಶಿಯನ್ನು ಪರಿಹರಿಸುವಂತಹ ಸಾಧನವು ಅತ್ಯಂತ ದುರ್ಲಭವಾದದ್ದೇ. ಆದರೂ ಒಂದು ಕಾರ್ಯವನ್ನು ನೀನು ನಡೆಸಿದರೆ ಒಂದುವೇಳೆ ನಿನಗೆ ಪಾಪವಿಮೋಚನೆಯು ಆದೀತು." ॥೧೭೨-೧೭೩॥

ಒಂದು ದಿವಸ ಉಷಃಕಾಲದಲ್ಲೆದ್ದು ಉತ್ತರಾಭಿಮುಖನಾಗಿ ಭಸ್ಮೋದ್ಧೂಳಿತ ಗಾತ್ರನಾಗಿ ಕುಳಿತುಕೊಂಡು, "ಒಂದುಸಾರಿ ಕಾಶೀಯಾತ್ರೆ ಮಾಡುತ್ತೇನೆಂದು ಸಂಕಲ್ಪಮಾಡು" ಅಷ್ಟರಿಂದಲೇ ನೀನು ಪಾಪಮುಕ್ತನಾಗುವೆ. ಇದರಲ್ಲಿ ಸಂಶಯವಿಡಬೇಡ. ॥೧೭೪-೧೭೫॥

ಎರಡು ಮೂರು ಹೆಜ್ಜೆ ನಡೆಯುವಷ್ಟು ಶಕ್ತಿಯಿದ್ದರೂ ನೀನು ಕಾಶಿಗೆ ಎದುರಾಗಿ ಸಂಚರಿಸು ಆದರಿಂದ ನಿನಗೆ ಪುಣ್ಯವು ವೃದ್ಧಿಯಾಗುವುದು. ಈ ಮಾತಿನಲ್ಲಿ

ವಿಶ್ವಾಸಂ ಕುರು ಮದ್ವಾಕ್ಯೇ ಭ್ರಾಂತೋ ಮಾಭವ ಸರ್ವಥಾ ।
ಜಾಬಾಲಶ್ರುತಿರೇವೈಷಾ ಕಾಶೀ ಮೋಕ್ಷಕರೀತಿ ಯಾ ॥೧೭೭॥

ಪ್ರಾಣನಿರ್ಯಾಣಸಮಯೇ ಕಾಶೀತಿ ವಚನಂ ಮುದಾ ।
ಯಃ ಶೃಣೋತಿ ಸ ಪಾಪೇಭ್ಯೋ ಮುಕ್ತೋ ಮುಕ್ತೋ ಭವಿಷ್ಯತಿ ॥೧೭೮॥

ಕಾಶೀತಿ ವರ್ಣಶ್ರವಣಾತ್ಪರಾ ಮುಕ್ತಿ ಸಹಸ್ರಧಾ ।
ಯತೋ ನಿರ್ವಾಣದೋ ಮಂತ್ರಃ ಕಾಶೀ ವರ್ಣದ್ವಯಾತ್ಮಕಃ ॥೧೭೯॥

ಫಲೋನ್ಮುಖಾನಿ ಪುಣ್ಯಾನಿ ಯೇಷಾಂ ಭಾಗ್ಯವತಾಂ ನೃಣಾಂ ।
ತೈಃ ಶ್ರೂಯತೇ ಮಹಾಮಂತ್ರಃ ಕಾಶೀತಿ ಮರಣಕ್ಷಣೇ ॥೧೮೦॥

ವಾರಾಣಸೀತಿ ಕಾಶೀತಿ ರುದ್ರಾವಾಸ ಇತಿ ಸ್ಫುಟಂ ।
ವದತಾಂ ಪಾಪಭೀತಿಸ್ತು ನ ಭವಿಷ್ಯತಿ ಸರ್ವಥಾ ॥೧೮೧॥

ಕಾಶೀತಿ ಮಂತ್ರಸಾರೋಽಯಂ ವೇದಸಾರೋಽಯಮೇವ ಹಿ ।
ವೇದಾಃ ಸಂಶ್ರಿತ್ಯ ತಿಷ್ಠಂತಿ ಕಾಶೀತಿ ಮನುಮುನ್ನಹಂ ॥೧೮೨॥

ನಂಬಿಕೆಯಿಡು. ಮೋಸಹೋಗಬೇಡ ಈ ಮಾತು ಜಾಬಾಲೋಪನಿಷತ್ಸಮ್ಮತವಾದುದು. ಕಾಶಿಯು ಮೋಕ್ಷಕರೀ ಎಂಬುದೇ ಅಲ್ಲಿಯ ಮಾತು. ॥೧೭೬-೧೭೭॥

ಪ್ರಾಣಹೋಗುವ ಕಾಲದಲ್ಲಿ ಯಾರು 'ಕಾಶಿ' ಎಂಬ ಎರಡಕ್ಷರಗಳನ್ನುಚ್ಚರಿಸುವರೋ, ಅಥವಾ ಕೇಳುವರೋ ಅವರು ನಿಜವಾಗಿಯೂ ಮುಕ್ತರಾಗುವರು. ಕಾಶೀ ಎಂಬ ಅಕ್ಷರದ್ವಯಾತ್ಮಕವಾದ ಮಂತ್ರವು ಮಹಾಮಂತ್ರವೆನಿಸಿರುವುದು. ಯಾರು ಇಂತಹ ಮಂತ್ರವನ್ನು ಮರಣಕಾಲದಲ್ಲಿ ಶ್ರವಣಮಾಡುವರೋ, ಅವರು ಮಾಡಿದ ಸುಕೃತಗಳೆಲ್ಲವೂ ಏಕದಾ ಫಲೋನ್ಮುಖಗಳಾಗುವುವು. ॥೧೭೮-೧೭೯-೧೮೦॥

ವಾರಾಣಸೀ ಅಥವಾ ಕಾಶೀ ಎಂಬ ಕ್ಷೇತ್ರವು ರುದ್ರನಿಗೆ ಆವಾಸಸ್ಥಾನವಾದದ್ದು ಎಂದು ಹೇಳುವವನು ಪಾಪಮುಕ್ತನಾಗುವನು ಕಾಶೀ ಎಂಬ ಮಾತು ವೇದಸಾರ ಅಥವಾ ಮಂತ್ರಸಾರ ಎನ್ನಬಹುದು. ಕಾಶೀ ಎಂಬ ಮಹಾಮಂತ್ರದಲ್ಲಿ ಸಕಲ ವೇದಗಳೂ ಆಶ್ರಯಪಡೆದು ನಿಂತಿರುವುವು. ॥೧೮೧-೧೮೨॥

ಕಾಶೀತಿ ಮನುರೇಕೋಽಯಂ ಸಂಸಾರಾರ್ಣವತಾರಕಃ ।
ಜಪನೀಯಃ ಪ್ರಯತ್ನೇನ ಮುಮುಕ್ಷುಭಿರಹರ್ನಿಶಂ ॥೧೮೩॥

ಕಾಶೀತಿ ಮನುಮುಚ್ಚಾರ್ಯ ಯಸ್ತ್ಯಜೇತ್ತನುಮಾದರಾತ್ ।
ಸ ಮಹೇಶತನಾವೇವ ಲೀನೋ ಭವತಿ ವಸ್ತುತಃ ॥೧೮೪॥

ಕಾಶೀತಿ ಮಂತ್ರಮುಚ್ಚಾರ್ಯ ಶ್ರುತ್ವಾ ವಾ ಯಸ್ತ್ಯಜೇದಸೂನ್ ।
ಸ ಧನ್ಯ ಇತಿ ವಿಜ್ಞೇಯೋ ಮೋಕ್ಷಕಾಂತಾಸಮಾಶ್ರಿತಃ ॥೧೮೫॥

ಇತಿ ತದ್ವಚನಂ ಶ್ರುತ್ವಾ ಸೋಽಪ್ಯುದ್ಧೂಲ್ಯ ತನುಂ ತತಃ ।
ಪ್ರಾಹ ಕಾಶೀಂ ಗಮಿಷ್ಯಾಮೀತ್ಯೇಕವಾರಂ ಕೃತಾಂಜಲಿಃ ॥೧೮೬॥

ತತಶ್ಚಚಾಲ ದ್ವಿತ್ರಾಣಿ ಪಾದಾನಪಿ ಸ ಯತ್ನತಃ ।
ತತಃ ಪಪಾತ ತತ್ರೈವ ಮೂರ್ಛಿತಃ ಸ ಮೃತಸ್ತತಃ ॥೧೮೭॥

ತದಾನೀಮಾಗತಾಃ ಕ್ರೂರಾಃ ಕೋಟಿಶೋ ಯಮಕಿಂಕರಾಃ ।
ಆಗತ್ಯ ಬಧ್ವಾ ತಂ ನೇತುಂ ಸಮುದ್ಯುಕ್ತಾ ಮದೋದ್ಧತಾಃ ॥೧೮೮॥

ಕಾಶಿಯೆಂಬ ಪದವು ಸಂಸಾರದ ದುಃಖವನ್ನು ನಿವೃತ್ತಿಮಾಡುವಂತಹುದು. ಆದ್ದರಿಂದ ಮೋಕ್ಷಾಪೇಕ್ಷಿಗಳು ಸದಾ ಈ ಮಂತ್ರವನ್ನು ಪಠನೆಮಾಡುತ್ತಿರಬೇಕು. ಮರಣಕಾಲದಲ್ಲಿ ಕಾಶೀಪದವನ್ನುಚ್ಚರಿಸುತ್ತಾ ಮೃತನಾದವನು ಈಶ್ವರನ ದೇಹದಲ್ಲಿಯೇ ಐಕ್ಯನಾಗುವನು. ||೧೮೩-೧೮೪||

ಕಾಶೀನಾಮಸ್ಮರಣೆಮಾಡುತ್ತಾ ಯಾರು ಮೃತರಾಗುವರೋ ಅವರು ಮುಕ್ತಿಕಾಂತಾಲಿಂಗನದಿಂದ ಧನ್ಯರೆನಿಸುವರು, ಎಂಬುದನ್ನು ತಿಳಿದು ಕಾಶಿಯಲ್ಲಿಯೇ ಸ್ಥಿರಮನಸ್ಸನ್ನಿಡಬೇಕು. ಎಂದು ಹೇಳಿದ ಮಾತನ್ನು ಕೇಳಿ, ಆ ಪಾಪಿಯು ಭಸ್ಮವನ್ನು ಮೈಗೆಲ್ಲಾ ಬಳಿದುಕೊಂಡು ಕಾಶಿಗೆ ಹೋಗುತ್ತೇನೆಂದು ಸಂಕಲ್ಪಮಾಡಿದನು. ||೧೮೫-೧೮೬||

ಒಡನೆಯೇ ಉತ್ತರದಿಗಭಿಮುಖನಾಗಿ ಎರಡು ಮೂರು ಹೆಜ್ಜೆಯಿಟ್ಟು ಮುಂದುವರಿದನು ಒಡನೆಯೇ ಅಲ್ಲಿಯೇ ಬಿದ್ದು ಮೂರ್ಛೆಹೊಂದಿ ಮೃತನಾದನು. ತತ್ಕ್ಷಣವೇ ಅವನ ಪ್ರಾಣವನ್ನು ಎಳೆದೊಯ್ಯಲು ಕ್ರೂರರಾದ ಯಮದೂತರು ಬಂದು, ಅವನನ್ನು ಕಟ್ಟಿ ಎಳೆದೊಯ್ಯಲು ಪ್ರಯತ್ನಿಸಿದರು ||೧೮೭-೧೮೮||

ತದಾನೀಂ ವಿಧಿವಿಷ್ಣ್ವಾದ್ಯಾಃ ಕೌತುಕಂ ದ್ರಷ್ಟುಮುದ್ಯತಾಃ ।
ಪುಷ್ಪಕಾಣಿ ಸಮಾರುಹ್ಯ ತದ್ದೇಶಂ ಸಮುಪಾಗತಾಃ ॥೧೮೯॥

ತತಸ್ತಂ ಭಸ್ಮಪೂತಾಂಗಂ ದೃಷ್ಟ್ವಾ ವಿಷ್ಣ್ವಾದಯಸ್ಸುರಾಃ ।
ಪ್ರಣಮ್ಯ ಪೂಜಯಾಮಾಸುರ್ದೂತಂ ವೃತ್ತಾಂತಹಾರಿಣಂ ॥೧೯೦॥

ವಿಷ್ಣ್ವಾದಿಪೂಜಿತಂ ದೃಷ್ಟ್ವಾ ತಂ ತತೋ ಯಮಕಿಂಕರಾಃ ।
ಯಮಾಯ ಪ್ರೇಷಯಾಮಾಸುರ್ದೂತಂ ವೃತ್ತಾಂತಹಾರಿಣಂ॥೧೯೧॥

ಸ ಯಮಸ್ತನ್ಮುಖಾಚ್ಛ್ರುತ್ವಾ ವೃತ್ತಾಂತಮಿಮಮಾದರಾತ್ ।
ಸ ಚಿತ್ರಗುಪ್ತಃ ಸಂಪ್ರಾಪ ತಂ ದೇವಾಸುರಸುಸೇವಿತಂ ॥೧೯೨॥

ತತೋ ದೂರಾದ್ಯಮೋ ದೃಷ್ಟ್ವಾ ವಿಷ್ಣ್ವಾದೀನಮರಾಂಸ್ತದಾ ।
ಪ್ರಣಮ್ಯ ಪೂಜಾಂ ಕೃತ್ವಾ ಚ ವಿಷ್ಣುಮಾಹ ವಿಚಕ್ಷಣಂ ॥೧೯೩॥

॥ ಯಮ ಉವಾಚ ॥

ಅಯಂ ಪಾತಕಿನಾಂ ಶ್ರೇಷ್ಠೋ ಮಹಾಪಾಪಕುಲಾಶ್ರಯಃ ।
ಕೃತೈತಸ್ಯ ಕಥಂ ಪೂಜಾ ಭವದ್ಭಿಸ್ತತ್ವದರ್ಶಿಭಿಃ ॥೧೯೪॥

ಒಡನೆಯೇ ಬ್ರಹ್ಮ, ವಿಷ್ಣುವೇ ಮೊದಲಾದವರು ಪುಷ್ಪಕವಿಮಾನವನ್ನೇರಿ ಆಶ್ಚರ್ಯವನ್ನು ನೋಡಲು ಅಲ್ಲಿಗೆ ಬಂದರು. ಮತ್ತು ಭಸ್ಮದಿಂದ ಪರಿಶುದ್ಧವಾದ ಗಾತ್ರವುಳ್ಳ ಆ ಪಾಪಿಯನ್ನು ನೋಡಿ, ವಿಷ್ಣ್ವಾದಿಗಳಿಂದ ಕೂಡಿದ ದೇವತೆಗಳೆಲ್ಲರೂ ಅವನನ್ನು ಪೂಜಿಸಲಾರಂಭಿಸಿದರು. ॥೧೮೯-೧೯೦॥

ಹಾಗೆ ವಿಷ್ಣ್ವಾದಿದೇವತೆಗಳು ಪೂಜೆಮಾಡಿದುದನ್ನು ನೋಡಿ ಯಮದೂತರು ಯಮನಿಗೆ ಒಬ್ಬ ದೂತನ ಮೂಲಕ ಈ ಸಮಾಚಾರವನ್ನು ಹೇಳಿ ಕಳುಹಿಸಿದರು. ಯಮನು ಈ ಸಮಾಚಾರವನ್ನು ದೂತರಿಂದ ಕೇಳಿ ಚಿತ್ರಗುಪ್ತನೊಡಗೂಡಿ ತಾನೇ ಅಲ್ಲಿಗೆ ಬಂದನು. ॥೧೯೧-೧೯೨॥

ದೂರದಲ್ಲಿ ಆ ಪಾಪಿಯನ್ನು ಪೂಜಿಸಿ ನಿಂತಿದ್ದ ವಿಷ್ಣುವೇ ಮೊದಲಾದವರನ್ನು ಯಮನು ನೋಡಿ, ಮೊದಲು ಅವರಿಗೆ ತಲೆಬಾಗಿ ಅನಂತರ ಹೀಗೆ ಆಕ್ಷೇಪಿಸಿದನು. “ದೇವಶ್ರೇಷ್ಠರಿರಾ, ಇವನು ಮಹಾಪಾಪಿಯು, ಅಸಂಖ್ಯಾತವಾದ ಪಾಪಕಾರ್ಯ

ಯೋಜನೀಯಃ ಪ್ರಯತ್ನೇನ ಘೋರೇಷು ನರಕೇಷ್ವಯಂ ।
ನೈತಸ್ಯ ಬ್ರಹ್ಮಕಲ್ಪಾಂತೇಽಪ್ಯವಶ್ಯಂ ನಿಷ್ಕೃತಿರ್ಹರೇ ॥೧೯೫॥

ಇತಿ ತದ್ವಚನಂ ಶ್ರುತ್ವಾ ಮಂದಹಾಸಪುರಸ್ಸರಂ ।
ಯಮಮಾಹ ತದಾ ವಿಷ್ಣುಶ್ಚಿತ್ರಗುಪ್ತಾದಿಸಂಯುತಂ ॥೧೯೬॥

ವಿಷ್ಣುರುವಾಚ

ಮೃತಂ ವಿಭೂತಿಪೂತಾಂಗಂ ಪಶ್ಯೈನಂ ಯಮ ಸಾದರಂ ।
ಕಥಮೇತಾದೃಶಂ ನೇತುಮುದ್ಯೋಗಃ ಕ್ರಿಯತೇ ತ್ವಯಾ ॥೧೯೭॥

ಶಿವಂ ಪ್ರಯಾಂತಿ ಸಹಸಾ ಭೂತಿಭೂಷಿತವಿಗ್ರಹಾಃ ।
ಏತಾದೃಶಾ ಯಮದ್ವಾರಂ ನ ಪಶ್ಯಂತ್ಯೇವ ಸರ್ವಥಾ ॥೧೯೮॥

ಯಾತನಾಸ್ತು ಕಥಂ ಪ್ರಾಪ್ಯಾ ಘೋರಾ ಭಸ್ಮವಿಭೂಷಣೈಃ ।
ಭಸ್ಮಸಂಛನ್ನದೇಹಾನಾಂ ಯತೋ ನಾಸ್ತ್ಯೇವ ಯಾತನಾ ॥೧೯೯॥

ಶ್ರೌತಭಸ್ಮಸಮಾಕ್ರಾಂತಂ ಯದಂಗಂ ಮಂಗಲಾವಹಂ ।
ತೇ ಮಂಗಲಾಪತಿಂ ಶೀಘ್ರಂ ಪ್ರವಿಶಂತಿ ನ ಸಂಶಯಃ ॥೨೦೦॥

ಗಳನ್ನೆಸಗಿರುವವನು. ಈತನನ್ನು ನೀವು ಹೇಗೆ ಪೂಜಿಸಿದಿರಿ? ಇವನು ಘೋರ ನರಕಯಾತನಾನುಭವಕ್ಕೆ ಯೋಗ್ಯನಲ್ಲವೆ? ಬ್ರಹ್ಮಕಲ್ಪಮುಗಿಯುವವರೆಗೂ ಈತನು ನರಕವಾಸಿಯಾಗಿರಬೇಕು.'' ॥೧೯೩-೧೯೪-೧೯೫॥

ಎಂದು ಹೇಳಿದ ಯಮನ ವಾಣಿಯನ್ನು ಕೇಳಿ ವಿಷ್ಣುವು ಅಲ್ಲಿಗೆ ಬಂದಿದ್ದ ಚಿತ್ರಗುಪ್ತಾದಿಗಳ ಎದುರಿನಲ್ಲಿ ಹೀಗೆಂದನು. ''ಎಲೈ ಯಮನೇ, ಇಲ್ಲಿ ನೋಡು. ಈತನು ಮರಣಕಾಲದಲ್ಲಿ ವಿಭೂತಿಯಿಂದ ಲಿಪ್ತವಾದ ಗಾತ್ರವುಳ್ಳವನಾಗಿರುವನು. ಇಂತಹವನನ್ನು ನೀನು ಕರೆದೊಯ್ಯುವುದು ಹೇಗೆ? ॥೧೯೬-೧೯೭॥

ಯಾರು ಈ ರೀತಿ ಭಸ್ಮಭೂಷಿತರಾಗಿರುವರೋ, ಅವರು ಯಮದ್ವಾರವನ್ನು ಸಹ ನೋಡಲಾರರು. ಅಂತಹವರಿಗೆ ನರಕಯಾತನೆಯು ಲಭಿಸುವುದೆಂತು? ಶ್ರುತಿ ಪ್ರಸಿದ್ಧವಾದ ಭಸ್ಮಧಾರಣೆಯಿಂದ ಆತನು ಪವಿತ್ರಗಾತ್ರನೆನಿಸುವನು. ಆತನು ಕೊನೆಗೆ ಸರ್ವಮಂಗಳಾಪತಿಯಾದ ಶಿವನನ್ನೇ ಶರಣುಹೊಂದುವನು ಇದರಲ್ಲಿ ಸಂಶಯವಿಡಬೇಡ. ॥೧೯೮-೧೯೯-೨೦೦॥

ಭಸ್ಮಪೂತತನೂನಾಂ ಚೇದ್ದಾರುಣಾ ಯಮಯಾತನಾ ।
ತದಾ ಭುವಿ ನ ಕಸ್ಯಾಪಿ ಮೋಕ್ಷೋ ಭವತಿ ಸರ್ವಥಾ ॥೨೦೧॥

ವಸ್ತುತಃ ಸಂಗಮಾತ್ರೇಣ ಯಮ ಭಸ್ಮಕಣಾಂಗಯೋಃ ।
ಸದ್ಯೋ ಭವಂತಿ ದಗ್ಧಾನಿ ಪಾತಕಾನಿ ನ ಸಂಶಯಃ ॥೨೦೨॥

ವಿಭೂತಿಕಣರೂಪೇಣ ಕ್ರೂರಘೋರೇಣ ಪರ್ಶುನಾ ।
ಛಿನ್ನಂ ಭವತಿ ತೀವ್ರೇಣ ಮಹಾಪಾತಕಕಾನನಂ ॥೨೦೩॥

ವಿಭೂತಿರೂಪಂ ದೃಷ್ಟ್ವಾಸ್ತ್ರಂ ಘೋರಪಾತಕಕಾನನಂ ।
ಕಂಪಮಾಪದ್ಯತೇ ಶೀಘ್ರಂ ಕಿಂ ಕರ್ತವ್ಯಮಿತಿ ಧ್ರುವಂ ॥೨೦೪॥

ಶ್ರೌತಭಸ್ಮಸಮಾಕ್ರಾಂತನಿಷ್ಕ್ರಾಂತಪ್ರಾಣವಾಯವಃ ।
ಅನೇಕಪುಣ್ಯಸಂಕ್ರಾಂತಾ ಭವನ್ತ್ಯೇವ ನ ಸಂಶಯಃ ॥೨೦೫॥

ಶ್ರೌತಂ ಭಸ್ಮ ಸ್ವತಃ ಪುಣ್ಯಂ ಶ್ರೀಮಹಾದೇವಭೂಷಣಂ ।
ಭೂಷಣಂ ಯಸ್ಯ ಮರಣೇ ಸ ನಿರ್ವಾಣಮವಾಪ್ನುಯಾತ್ ॥೨೦೬॥

ಭಸ್ಮದಿಂದ ಪವಿತ್ರರಾದವರಿಗೂ ನರಕವಾಸವು ಲಭಿಸುವುದಾದರೆ ಭೂಮಿಯಲ್ಲಿ ಮತ್ತಾರಿಗೆ ಮುಕ್ತಿಯು ದೊರೆತೀತು? ನಿಜವಾಗಿಯೂ ಭಸ್ಮದ ಸ್ಪರ್ಶಮಾತ್ರದಿಂದಲೇ ಸಕಲಪಾತಕಗಳೂ ನಾಶವಾಗುವುವು; ಎಂಬುದರಲ್ಲಿ ಯಾವ ಅನುಮಾನವೂ ಇರುವುದಿಲ್ಲ. ೨೦೧-೨೦೨॥

ಮಹಾಪಾಪವೆಂಬ ಅರಣ್ಯವು ವಿಭೂತಿಕಣವೆಂಬ ಕೊಡಲಿಯಿಂದ ಛಿದ್ರಛಿದ್ರವಾಗಿ ಕಡಿದುಹೋಗುವುದು. ಅಲ್ಲದೆ ಪಾಪರಾಶಿಯು ವಿಭೂತಿರೂಪವಾದ ಅಸ್ತ್ರವನ್ನು ನೋಡಿ ಹೆದರಿ ಮುಂದೇನುಮಾಡಬೇಕೆಂದು ನಡುಗಲಾರಂಭಿಸುವುದು. ॥೨೦೩-೨೦೪॥

ವಿಭೂತಿಸ್ಪರ್ಶದಿಂದ ಹೊರಹೊರಟ ಪ್ರಾಣವಾಯುವಿಗೆ ಕೋಟಿಪುಣ್ಯಸ್ಪರ್ಶವಾದಂತೆಯೇ ಸರಿ. ಮಹಾದೇವನಿಗೆ ಒಡವೆಯೆನಿಸಿದ ವಿಭೂತಿಯು ಮರಣಕಾಲದಲ್ಲಿ ಮನುಷ್ಯನಿಗೆ ಭೂಷಣವಾಗಿ ನಿಂತರೆ, ಆತನು ನಿಜವಾಗಿಯೂ ಮುಕ್ತನಾಗುವನು ಇದರಲ್ಲಿ ಸಂಶಯವಿಲ್ಲ. ॥೨೦೫-೨೦೬॥

ತಸ್ಯ ನಿರ್ವಾಣಮಭ್ಯರ್ಣೇ ಯಸ್ಯ ಭೂತಿರ್ವಿಭೂಷಣಂ ।
ಭೂತಿನಿರ್ವಾಣದಾಪರ್ಣಾ ಮರಣಾಭರಣಾಂ ಯಶಃ ॥೨೦೭॥

ಅಯಂ ಧನ್ಯಃ ಕೃತಾರ್ಥೋಽಯಮಯಂ ಮಾನ್ಯೋಽಸ್ಮದಾದಿಭಿಃ ।
ಯತೋ ಮರಣವೇಳಾಯಾಂ ವಿಭೂತಿಂ ಪ್ರಾಪ್ತವಾನಯಂ ॥೨೦೮॥

ಮಹೇಶಾನುಗೃಹೀತೋಽಯಂ ಭೂತಿಭೂಷಿತವಿಗ್ರಹಃ ।
ಪ್ರಾಪ್ಸ್ಯನೇನ ಕಥಂ ಭೂತಿರನ್ಯಥಾ ಮರಣಕ್ಷಣೇ ॥೨೦೯॥

ಅನಂತಜನ್ಮಭಿರ್ಯೇನ ಪೂಜಿತಃ ಪಾರ್ವತೀಪತಿಃ ।
ತೇನೈವ ಪ್ರಾಪ್ಯತೇ ಭೂತಿರ್ನಾನ್ಯೇನ ಯಮ ಸರ್ವಥಾ ॥೨೧೦॥

ವಿಭೂತಿಕವಚಂ ಯೇಷಾಂ ಸಾಮ ಶೈವಂ ಮಹಾಯುಧಂ ।
ತೇಷಾಂ ಕ್ವ ಪಾತಕಾದ್ಭೀತಿರ್ಭವತೋಽಪಿ ಭಯಾನಕಾತ್ ॥೨೧೧॥

ಪ್ರಾಲೇಯಾಚಲವದ್ಭಾತಿ ಮೃತೋಽಯಂ ಭೂತಿಭೂಷಿತಃ ।
ಪಶ್ಯ ಪಶ್ಯಾಯಮಧುನಾ ಶಿವಲೋಕಂ ಗಮಿಷ್ಯತಿ ॥೨೧೨॥

---

ಸಕಲರಿಗೂ ಮುಕ್ತಿಯನ್ನು ಅನುಗ್ರಹಿಸುವ ಶಂಕರನ ಆಭರಣವೆನಿಸಿದ ವಿಭೂತಿಯು ಯಾವನಿಗೆ ಭೂಷಣವೆನಿಸುವುದೋ ಅವನಿಗೆ ಮುಕ್ತಿಯು ಸಮೀಪಗತವಾಗುವುದರಲ್ಲಿ ಸಂಶಯವೇನು? ಅಂತಹವನೇ ಧನ್ಯ. ಅವನೇ ಮಾನ್ಯ. ನಮ್ಮೆಲ್ಲರಿಗೂ ಪೂಜ್ಯನೆನಿಸಿದವನು ಅವನಲ್ಲದೆ ಮತ್ತಾರು? ॥೨೦೭-೨೦೮॥

ವಿಭೂತಿಧಾರಣೆಮಾಡಿದವನು ಮಹೇಶನ ಅನುಗ್ರಹಕ್ಕೆ ಪಾತ್ರನಾದವನೇ ಸರಿ. ಇಲ್ಲವಾದರೆ ಆತನಿಗೆ ಮರಣಕಾಲದಲ್ಲಿ ವಿಭೂತಿಧಾರಣೆಮಾಡುವ ಬುದ್ಧಿಯೆಲ್ಲಿಂದ ಬರಬೇಕು? ಅನೇಕಜನ್ಮಗಳಲ್ಲಿ ಪೂಜಿತನಾದ ಪಾರ್ವತೀಪತಿಯ ಅನುಗ್ರಹಬಲದಿಂದಲೇ ಈ ಪಾಪಿಗೆ ಅಂತಹ ಬುದ್ಧಿಯು ಅವಸಾನಕಾಲದಲ್ಲಿ ಒದಗಿದೆ. ॥೨೦೯-೨೧೦॥

ಶಿವಕವಚದಂತಿರುವ ಈ ಭಸ್ಮವು ಯಾವನ ಅಂಗದಲ್ಲಿ ವಿರಾಜಿಸುವುದೋ ಅವನಿಗೆ ಯಾವ ಪಾಪದಿಂದಾಗಲಿ ಭಯವಿರುವುದೇ? ಎಂದಿಗೂ ಇಲ್ಲ. ಇಗೋ, ಇಲ್ಲಿ ನೋಡು. ಹಿಮಗಿರಿಯಂತೆ ಶುಭ್ರವಾಗಿರುವ ಈತನು ಶಿವಲೋಕವನ್ನು ಕುರಿತು ಹೋಗುತ್ತಿರುವನು. ॥೨೧೧-೨೧೨॥

ಏತಾದೃಶಸ್ಯ ಶೈವಸ್ಯ ದರ್ಶನಂ ದುರ್ಲಭಂ ಯಮ ।
ಗತೇಽಸ್ಮಿನ್ ಶಿವಲೋಕಸ್ಯ ಭೂಯಸ್ಸ್ಯಾದ್ದರ್ಶನಂ ಕಥಂ ॥೨೧೩॥

ಪಾಪಾಶ್ರಯೋಽಯಮಿತ್ಯೇಷಾ ತವ ಬುದ್ಧಿರ್ಭ್ರಮಾತ್ಮಿಕಾ ।
ಸ್ಥಾಸ್ಯಂತಿ ಪಾತಕಾನ್ಯಸ್ಮಿನ್ ಕಥಂ ವಾ ಭೂತಿಭೂಷಿತೇ ॥೨೧೪॥

ಯಸ್ಯ ಭಸ್ಮಕಣೋ ನೂನಮೇಕೋಽಪ್ಯಘಕುಲಾಶನಿಃ ।
ಕಿಮು ಭಸ್ಮಕಣಾಸ್ಸಾಂದ್ರಾಃ ಪುಣ್ಯಾಸ್ಸರ್ವಾಂಗಸಂಗಿನಃ ॥೨೧೫॥

ಯಸ್ಯ ಭಸ್ಮಕಣೇನಾಚ್ಛೇನೈಕೇನಾಪ್ಯಂಗಸಂಗಿನಾ ।
ದಗ್ಧಾನ್ಯಘಕುಲಾನೀತಿ ಪ್ರಮಿತಿರ್ಜಾಯತೇ ಮಮ ॥೨೧೬॥

ಕಾಲಾಗ್ನಿರುದ್ರೋಪನಿಷಜ್ಜಾಬಾಲೋಪನಿಷತ್ತಥಾ ।
ಅನ್ಯಾಶ್ಚ ಶ್ರುತಯೋ ನೂನಂ ಭಸ್ಮನಃ ಪಾಪನಾಶನೇ ॥೨೧೭॥

ಶ್ರುತ್ಯರ್ಥಮನ್ಯಥಾಕರ್ತುಂ ಕಃ ಶಕ್ನೋತಿ ಸುರೇಷ್ವಪಿ ।
ಪಾಪಾಪನೋದಕತ್ವೇನ ಶ್ರುತಿಭಿರ್ಭಸ್ಮಕೀರ್ತನಂ ॥೨೧೮॥

ಇಂತಹ ಈಶ್ವರಭಕ್ತನ ದರ್ಶನವೇ ನಮಗೆ ದುರ್ಲಭವಲ್ಲವೇ? ಈತನು ಶಿವಲೋಕವನ್ನು ಸೇರಿದ ಮೇಲೆ ಮತ್ತೆ ನಮಗೆ ಈತನ ದರ್ಶನವೆಲ್ಲಿ ದೊರಕುವುದು? ಇಂತಹವನನ್ನು ನೀನು ಪಾಪಿಯೆಂದು ತಿಳಿದಿರುವೆಯಲ್ಲಾ! ಇದು ನಿನ್ನ ಭ್ರಮೆಯಲ್ಲವೆ? ಭೂತಿಭೂಷಿತನಾದ ಈತನಲ್ಲಿ ಯಾವ ಪಾಪಗಳು ಸೇರಿರುತ್ತವೆ? ಅವೆಲ್ಲವೂ ಭಸ್ಮವಾಗಿರಬೇಕಲ್ಲವೆ? ॥೨೧೩-೨೧೪॥

ಒಂದೇ ಭಸ್ಮಕಣವು ಸಕಲ ಪಾಪವನ್ನೂ ಮಿಂಚಿನಂತೆ ನಾಶಮಾಡುವುದು. ಹಾಗಿರುವಾಗ ಸರ್ವಾಂಗವ್ಯಾಪಿಯಾದ ಈ ಭಸ್ಮರಾಶಿಯು ಪಾಪಸಮೂಹವನ್ನು ಬಿಟ್ಟೀತೆ? ಭಸ್ಮಲಿಪ್ತವಾದ ಅವಯವಸ್ಪರ್ಶದಿಂದಲೇ ಸಕಲಪಾಪರಾಶಿಯೂ ನಾಶವಾಗುವುದೆಂದು ನನ್ನ ದೃಢನಂಬಿಕೆ. ॥೨೧೫-೨೧೬॥

ಭಸ್ಮವು ಪಾಪನಾಶಕವಾದದ್ದು ಎಂಬ ಅಂಶವನ್ನು, ಕಾಲಾಗ್ನಿರುದ್ರೋಪನಿಷತ್ತು, ಜಾಬಾಲೋಪನಿಷತ್ತು ಮುಂತಾದ ಶ್ರುತಿಗಳು ಸಮರ್ಥನಮಾಡುತ್ತಿವೆ. ಅಂತಹ ಶ್ರುತ್ಯರ್ಥವನ್ನು ಅನ್ಯಥಾ ಪ್ರತಿಪಾದಿಸಲು ದೇವತೆಗಳಿಗೂ ಅಧಿಕಾರವಿಲ್ಲ

ಪಾಪಾಪನೋದಕಂ ಪುಣ್ಯಂ ಪವಿತ್ರಂ ಭಸ್ಮಪಾವನಂ ।
ಧಾರಣೀಯಂ ದ್ವಿಜೈರ್ನಿತ್ಯಮಿತಿ ವೇದಃ ಶ್ರುತೋ ಮಯಾ ॥೨೧೯॥

ವೇದೋಯಮೀಶ್ವರಾಜ್ಞಾತಃ ಪಾಲನೀಯಃ ಸುರಾಸುರೈಃ ।
ಅಸ್ಮಾಭಿರೀಶ್ವರಾಜ್ಞೇಯಮನುಲ್ಲಂಘ್ಯೈವ ಸರ್ವಥಾ ॥೨೨೦॥

ಯದ್ಯೇನಂ ನೇತುಮುದ್ಯೋಗಃ ಕ್ರಿಯತೇ ಮೋಹತಸ್ತ್ವಯಾ ।
ತದಾ ತವಾಧಿಕಾರೋಯಂ ಗಮಿಷ್ಯತಿ ನ ಸಂಶಯಃ ॥೨೨೧॥

ಭಸ್ಮಭೂಷಿತಸರ್ವಾಂಗಾಃ ಶಾಂಭವಾಸ್ತೇ ತತಸ್ತ್ವಯಾ ।
ಕಥಂ ನೇಯಾ ಭವಿಷ್ಯಂತಿ ಯಮ ಭ್ರಾಂತೋಸಿ ವಸ್ತುತಃ ॥೨೨೨॥

ಕ್ರೂರದೃಷ್ಟ್ಯಾಪ್ಯಮುಂ ಕಾಲ ಯದಿ ಪಶ್ಯಸಿ ಮೋಹತಃ ।
ತದಾ ತವ ಪ್ರತ್ಯುತಾದ್ಯ ಭವಿಷ್ಯತ್ಯೇವ ಯಾತನಾ ॥೨೨೩॥

ಬಲಾವಲೇಪಾದಧುನಾ ಯದ್ಯೇನಂ ನೇತುಮುದ್ಯತಃ ।
ತದಾ ಹನಿಷ್ಯೇ ಚಕ್ರೇಣ ಮೂರ್ಧಾನಂ ತರಸಾ ತವ ॥೨೨೪॥

---

ವಷ್ಟೆ! ಭಸ್ಮವು ಪಾಪಪರಿಹಾರಕವಾದದ್ದೆಂದು ಸಕಲ ಶ್ರುತಿಗಳೂ ಹೇಳುತ್ತಿವೆ ಯಲ್ಲವೆ? ॥೨೧೭-೨೧೮॥

ಭಸ್ಮವು ಪಾಪಹಾರಕವಾಗಿರುವಂತೆಯೇ ಪುಣ್ಯಚೋದಕವಾದುದೆಂದೂ, ಅದನ್ನು ದ್ವಿಜರು ಪ್ರತಿನಿತ್ಯವೂ ಧರಿಸಲೇಬೇಕೆಂದೂ ಸಕಲ ವೇದಗಳೂ ಘೋಷಿಸುತ್ತಿವೆ. ವೇದವೆಂಬುದು ಈಶ್ವರಾಜ್ಞೆ. ಆ ಈಶ್ವರನ ಅಪ್ಪಣೆಯನ್ನು ದಾಟಲು ನಮ್ಮಿಂದ ಸಾಧ್ಯವೇ? ಅದನ್ನೇ ಅನುಸರಿಸುವುದು ನಮ್ಮ ಕರ್ತವ್ಯವಲ್ಲವೆ? ॥೨೧೯-೨೨೦॥

ಒಂದುವೇಳೆ ಹಟದಿಂದ ನೀನು ಈತನನ್ನು ಎಳೆದೊಯ್ದರೆ ನಿನ್ನ ಅಧಿಕಾರಕ್ಕೆ ಚ್ಯುತಿಬಂದೀತು! ಎಚ್ಚರಿಕೆ. ಎಲೈ ಯಮನೆ, ಭಸ್ಮಭೂಷಿತರಾದ ಶಾಂಭವರನ್ನು ನೀನು ಹೇಗೆ ಎಳೆದೊಯ್ಯುವೆ? ॥೨೨೧-೨೨೨॥

ಕ್ರೂರದೃಷ್ಟಿಯಿಂದ ನೀನು ಈತನನ್ನು ನೋಯಿಸಿದರೂ ನಿನಗೆ ಅದಕ್ಕೆ ತಕ್ಕ ಶಿಕ್ಷೆಯು ದೊರೆತೀತು? ಒಂದುವೇಳೆ ಶೌರ್ಯಗರ್ವದಿಂದ ಇವನನ್ನು ಎಳೆದೊ

ಶಿವದ್ರೋಹರತಾ ಯೇ ಚ ಶೈವದ್ರೋಹರತಾಶ್ಚ ಯೇ ।
ತೇ ಸರ್ವೇಽಪಿ ಮಯಾ ಕಾಲ ಹಂತವ್ಯಾಶ್ಚಕ್ರಪಾಣಿನಾ ॥೨೨೫॥

ಮಹಾದೇವಾಂಘ್ರಿರೇಖಾಭಿಃ ಸೃಷ್ಟಂ ಚಕ್ರಮಿದಂ ಪುರಾ ।
ಮಯಾ ಮಹೇಶ್ವರಾದೇತತ್ಪ್ರಾಪ್ತಮತ್ಯಂತಯತ್ನತಃ ॥೨೨೬॥

॥ ಶ್ರೀಶಿವ ಉವಾಚ ॥

ಏತಚ್ಚಕ್ರಂ ಯದಾ ದತ್ತಂ ಮಹ್ಯಮೀಶೇನ ಸಾದರಂ ।
ತದಾ ಮಮಾಹ ಭಗವಾನೀಶ್ವರೋ ಭಕ್ತವತ್ಸಲಃ ॥೨೨೭॥

ಇದಂ ಚಕ್ರಂ ಮಯಾದತ್ತಂ ತುಭ್ಯಮತ್ಯುತ್ತಮಂ ಹರೇ ।
ಅಶೈವಾನ್ ಸಂಹರಾನೇನ ಚಕ್ರೇಣಾನೇನ ಶಿಕ್ಷಯ ॥೨೨೮॥

ಅಶೈವಾಸ್ಸಂತಿ ಯಾವಂತೋ ಯಾವಂತಶ್ಶೈವನಿಂದಕಾಃ ।
ತಾನಂಜಸಾತಿಯತ್ನೇನ ಚಕ್ರೇಣಾನೇನ ಶಿಕ್ಷಯ ॥೨೨೯॥

ಯ್ಯುವುದಾದರೆ ನಾನೇ ನಿನ್ನ ತಲೆಯನ್ನು ಈಗ ಚಕ್ರದಿಂದ ಕತ್ತರಿಸಿಬಿಡುವೆನು. ||೨೨೩-೨೨೪||

ಶಿವನಿಗೂ, ಶಿವಾರ್ಚಕರಿಗೂ ಯಾರು ದ್ರೋಹವೆಣಿಸುವರೋ ಅವರನ್ನು ಶಿಕ್ಷಿಸುವುದಕ್ಕಾಗಿಯೇ ನಾನು ಚಕ್ರವನ್ನು ಹಿಡಿದಿರುವುದು. ಈ ಚಕ್ರವಾದರೋ ಮಹಾದೇವನ ಕಾಲಿನ ಬೆರಳಿನಿಂದ ಹಾಕಿದ ರೇಖೆಯೇ ಅಲ್ಲವೇ. ಆ ಶಿವಶಕ್ತಿಯೇ ಈಗ ಬಲಿಷ್ಠವಾದ ಸುದರ್ಶನವೆಂಬ ಹೆಸರಿನಿಂದ ನನ್ನ ಕೈ ಸೇರಿರುವುದು. ಮಹೇಶ್ವರನ ಕೃಪಾತಿಶಯದಿಂದಲೇ ನಾನು ಇವನ್ನು ಅತ್ಯಂತಶ್ರಮದಿಂದ ಪಡೆದಿರುವೆನು. ||೨೨೫-೨೨೬||

ಶಂಕರನು ನನಗೆ ಈ ಚಕ್ರವನ್ನು ಅನುಗ್ರಹಿಸಿಕೊಡುವಾಗ ನನಗೆ ಹೀಗೆ ದಯಾಸಮುದ್ರನಾದ ಸ್ವಾಮಿಯು ಅಪ್ಪಣೆಮಾಡಿರುವನು. "ವಿಷ್ಣುವೇ, ಈಗ ನಿನಗೆ ಈ ಚಕ್ರವನ್ನು ಅನುಗ್ರಹಿಸಿಕೊಟ್ಟಿರುವೆನು. ಇದರಿಂದ ನನ್ನ ಭಕ್ತರಲ್ಲದವರನ್ನು ದಂಡಿಸು. ||೨೨೭-೨೨೮||

ಲೋಕದಲ್ಲಿ ಯಾರು ಈಶ್ವರಸೇವಕರಾಗುವುದಿಲ್ಲವೋ ಅಥವಾ ಶಿವಸೇವಕರಾಗಿರುವವರನ್ನು ನಿಂದಿಸುವರೋ ಅಂತಹವರನ್ನು ಈ ಚಕ್ರದಿಂದ ಶಿಕ್ಷಿಸು. ಶೈವರಲ್ಲ

ಅಶ್ವೈವವಂಶಕಾಶಾಮಿರಾಶುಚಕ್ರೆ ಹುತಾಶನಾಃ ।
ಅಶ್ವೈವ ವಂಶನಾಶಾಯ ದತ್ತಸ್ತುಭ್ಯಂ ಮಯಾಧುನಾ ॥೨೩೦॥

ಭವಾನಶ್ವೈವನಾಶಾರ್ಥಂ ಪುರಾ ಸೃಷ್ಟೋ ಮಯಾ ಹರೇ ।
ಅಶ್ವೈವಾನತ ಏವಾಶು ಚಕ್ರೇಣಾನೇನ ನಾಶಯ ॥೨೩೧॥

ದೇವತಾಸಾರ್ವಭೌಮೇನ ಮಹಾದೇವೇನ ಶೂಲಿನಾ ।
ಏವಮುಕ್ತಂ ಪುರಾ ಕಾಲ ಮಾಮುದ್ದಿಶ್ಯ ಪುರಾರಿಣಾ ॥೨೩೨॥

ಅಶ್ವೈವವಂಶಾ ಬಹವಶ್ಚಕ್ರೇಣಾನೇನ ನಾಶಿತಾಃ ।
ಅತಃ ಪರಂ ನಾಶನೀಯಾಶ್ಚಕ್ರೇಣಾನೇನ ಕೋಟಿಶಃ ॥೨೩೩॥

ನಾನೃತಂ ವಚ್ಮ್ಯಹಂ ಕಾಲ ಯಥಾರ್ಥಮಿದಮುಚ್ಯತೇ ।
ಕಾಲತಃ ಸಾವಧಾನೇನ ಕರ್ತವ್ಯಂ ಕುರು ಸತ್ವರಂ ॥೨೩೪॥

ಕಾಯಸ್ಯ ಭಸ್ಮಸಂಬಂಧೋ ಮುಕ್ತಿಹೇತುರುದೀರಿತಃ ।
ಅನ್ಯದಪ್ಯಸ್ತಿ ವಿಶ್ವಸ್ಯ ಮುಕ್ತಿಹೇತುದ್ವಯಂ ಮಮ ॥೨೩೫॥

ದವರನ್ನು ನೀನು ಈ ಚಕ್ರದಿಂದ ಏಳುವ ಬೆಂಕಿಯ ಜ್ವಾಲೆಯಿಂದಲೇ ದಹಿಸು. ಈ ಕಾರ್ಯಗಳಿಗಾಗಿಯೇ ನಿನಗೆ ಈ ಚಕ್ರವನ್ನು ಅನುಗ್ರಹಿಸಿಕೊಟ್ಟಿರುವೆನು. ||೨೨೯-೨೩೦||

ಎಲೈ ವಿಷ್ಣುವೇ, ನಿನ್ನನ್ನು ಸೃಷ್ಟಿಸಿರುವುದೇ ಅಶ್ವೈವರನ್ನು ಶಿಕ್ಷಿಸುವುದಕ್ಕಾಗಿ. ಆದರಿಂದಲೇ ಈ ಚಕ್ರವು ಈಗ ನಿನ್ನ ಕೈಯ್ಯಲ್ಲಿರುವುದು.'' ಎಲೈ ಯಮನೇ, ಮಹಾದೇವನು ದೇವತಾಸಾರ್ವಭೌಮನು. ಈ ರೀತಿ ತ್ರಿಶೂಲಿಯಾದ ಶಂಕರನು ನನಗೆ ಅಪ್ಪಣೆಯಿತ್ತಿರುವನು ||೨೩೧-೨೩೨||

ಕಾಲನೇ, ಇಲ್ಲಿನವರೆಗೆ ಪರಶಿವನ ಅಪ್ಪಣೆಯಂತೆ ಅನೇಕ ಅಶ್ವೈವರ ವಂಶಗಳನ್ನು ನಾನು ನಿರ್ಮೂಲಮಾಡಿರುವೆನು. ಇನ್ನೂ ಎಷ್ಟೋ ವಂಶಗಳನ್ನು ಕೊಲ್ಲಬೇಕಾಗಿದೆ. ಈ ವಿಷಯದಲ್ಲಿ ನಾನು ಸುಳ್ಳುಹೇಳುವುದಿಲ್ಲ ಆದ್ದರಿಂದ ನೀನು ನಿದಾನವಾಗಿ ಯೋಚಿಸಿ ಮುಂದಿನಕಾರ್ಯಗಳನ್ನು ಮಾಡು. ||೨೩೩-೨೩೪||

ದೇಹಕ್ಕೆ ಭಸ್ಮಸಂಸ್ಪರ್ಶವಾಗುವುದರಿಂದಲೇ ಮುಕ್ತಿಯು ದೊರಕುವುದೆಂದು ನಿಶ್ಚಿತವಾಗಿದೆ. ಹಾಗೆಯೇ ಭಸ್ಮಭೂಷಿತನಾಗಿ ಕಾಶೀನಗರಕ್ಕೆ ಅಭಿಮುಖನಾಗಿ

ಉದ್ಧೂಲ್ಯ ಭಸ್ಮನಾಂಗಾನಿ ಕಾಶೀಸಮ್ಮುಖಮುತ್ಥಿತಃ ।
ಅಹಂ ಕಾಶೀಂ ಗಮಿಷ್ಯಾಮೀತ್ಯುಕ್ತವಾನಯಮಾದರಾತ್ ॥೨೩೬॥

ತತಃ ಪ್ರಚಲಿತೋ ಭಕ್ತ್ಯಾ ಪದಾನಿ ತ್ರೀಣಿ ಸಾದರಂ ।
ತತಃ ಪರಂ ಮೃತೋತ್ರೈವ ಮಹಾರೋಗಸಮನ್ವಿತಃ ॥೨೩೭॥

ಏತಾದೃಶಸ್ಯ ಪುಣ್ಯಸ್ಯ ಯಾತನಾ ಸ್ಯಾತ್ಕಥಂ ವದ ।
ಯೋಗಿನಾಮಪಿ ಪೂಜ್ಯೋಯಂ ಪಾಪಯೋಗೋಸ್ಯ ನಾಸ್ತ್ಯತಃ ॥೨೩೮॥

ಘೋರಸಂಸಾರದಾವಾಗ್ನಿಃ ಕಾಶೀತ್ಯೇಷ ಮಹಾಮನುಃ ।
ಏತಸ್ಯ ವಚನಾದದ್ಯ ನಿಃಸೃತಃ ಪುಣ್ಯಯೋಗತಃ ॥೨೩೯॥

ಕಾಶೀತಿ ವರ್ಣಯುಗಲಂ ಗಲಿತಂ ಯನ್ಮುಖಾಂಬುಜಾತ್ ।
ತಸ್ಯ ಸಂಸಾರನಿಗಲಾ ಗಲಿತಾ ಏವ ತತ್ಕ್ಷಣೇ ॥೨೪೦॥

ಏವಶೇನಾಪಿ ಕಾಶೀತಿ ಯೇನ್ನೈವ ಸಮುದೀರಿತಂ ।
ತೇನ್ನೈವ ಸಕಲಾಪದ್ಭ್ಯೋ ಮುಚ್ಯತೇ ಯಮ ವಸ್ತುತಃ ॥೨೪೧॥

ಕುಳಿತು, ಕಾಶಿಗೆ ಹೋಗುತ್ತೇನೆಂದು ಸಂಕಲ್ಪಮಾಡುವುದೂ ಮುಕ್ತಿಗೆ ಕಾರಣವಾಗುವುದು. ಈಗ ಈತನಲ್ಲಿ ಮುಕ್ತಿಗೆ ಕಾರಣವಾದ ಈ ಎರಡು ಸನ್ನಿವೇಶಗಳೂ ಕಂಡುಬರುವುವು. ||೨೩೫-೨೩೬||

ಅದೂ ಅಲ್ಲದೆ ಕಾಶಿಗೆ ಹೋಗಬೇಕೆಂದು ಎರಡು ಮೂರು ಹೆಜ್ಜೆಗಳನ್ನೂ ಮುಂದಿಟ್ಟನು. ಹಾಗೆಯೇ ಮೂರ್ಛೆಬಂದು ಇಲ್ಲಿಯೇ ಮರಣಹೊಂದಿರುವನು. ಇಷ್ಟು ಪುಣ್ಯವನ್ನು ಸಂಪಾದಿಸಿರುವಾಗ ಈತನಿಗೆ ನರಕಯಾತನೆಯೆಲ್ಲಿಂದ ಬಂತು ? ಈತನು ಈಗ ಯೋಗಿಗಳಿಗೂ ಪೂಜ್ಯನೆನಿಸಿರುವನಲ್ಲವೇ ? ||೨೩೭-೨೩೮||

ಕಾಶಿ ಎಂಬ ಎರಡಕ್ಷರದ ಮಂತ್ರವು ಘೋರವಾದ ಸಂಸಾರದುಃಖಕ್ಕೆ ದಾವಾಗ್ನಿಯಂತಿರುವುದು. ಅಂತಹ ಮಹಾಮಂತ್ರವು ಈತನ ವದನದಿಂದ ಬಂದಿರುವುದು. ಈ ಮಂತ್ರೋಚ್ಚಾರಣೆಮಾಡಿದವರಿಗೆ ಸಂಸಾರಬಂಧನವು ನಿಜವಾಗಿಯೂ ತಪ್ಪುವುದು. ಇದರಲ್ಲಿ ಸಂಶಯವಿಲ್ಲ. ||೨೩೯-೨೪೦||

ಪರಪ್ರೇರಣೆಯಿಂದಾದರೂ ಯಾರು ಕಾಶೀ ಎಂಬುದಾಗಿ ಉಚ್ಚರಿಸುವರೋ ಅವರಿಗೆ ಬರುವ ಆಪತ್ತುಗಳೆಲ್ಲಾ ನಿವಾರಣೆಯಾಗುವುವು. ಕಾಶಿ ಎಂಬ ಮಂತ್ರವು

ಕಾಶೀತಿ ಪರಮಂ ಮಂತ್ರಂ ಸರ್ವಮಂತ್ರಾಧಿದೈವತಂ ।
ಮುಕ್ತಿದಂ ಮುನಯಸ್ಸರ್ವೇ ಜಪಂತ್ಯನುದಿನಂ ಮುದಾ ॥೨೪೨॥

ಕಾಶೀತ್ಯಮೃತಕಲ್ಲೋಲಲೋಲಜಿಹ್ವಾಮನೀಷಿಣಃ ।
ಪ್ರಯಾಂತಿ ಶಿವಸಾಯುಜ್ಯಮಿಜ್ಯಾದಾನಾದಿಭಿರ್ಯಮಃ ॥೨೪೩॥

ಕಾಶೀತಿವರ್ಣಯುಗ್ಮಸ್ಯ ಸಾಮರ್ಥ್ಯಂ ವೇದ ಶಂಕರಃ ।
ತತ್ಸಾಮರ್ಥ್ಯಂ ತದನ್ಯೇನ ಕಥಂ ವಾ ಜ್ಞಾಯತೇ ಯಮ ॥೨೪೪॥

ಕಾಶೀತಿ ವರ್ಣದ್ವಂದ್ವಂ ಯದ್ಬಹುದುಃಖಾಪಹಾರಕಂ ।
ತದ್ವಿಧೂಯ ದ್ವಂದ್ವದುಃಖಂ ಶುದ್ಧಿಮುದ್ಧಾ ದಧಾತಿ ಚ ॥೨೪೫॥

ಕಾಶೀತ್ಯುಚ್ಚರಿತಂ ಯೇನ ಪರಿಹಾಸೇನ ವಾ ಯಮ ।
ತೇನ ಸ್ವೋಪಾರ್ಜಿತಾನಂತಪಾಪನಾಶಃ ಕೃತೋ ಧ್ರುವಂ ॥೨೪೬॥

ಪಾಪಕಾನನನಾಶಾಯ ಕಾಶೀತ್ಯೇಷ ಹುತಾಶನಃ ।
ಪರಮೇಶೇನ ನಿರ್ದಿಷ್ಟಃ ಶಿಷ್ಟಃ ಕಷ್ಟವಿನಾಶಕಃ ॥೨೪೭॥

ಸರ್ವಮಂತ್ರಾತ್ಮಕವಾದದ್ದು. ಅದು ಮುಕ್ತಿಯನ್ನು ಒದಗಿಸುವುದರಿಂದಲೇ ಜ್ಞಾನಿಗಳು ಅದನ್ನು ಸದಾ ಉಚ್ಚರಿಸುತ್ತಿರುವರು. ॥೨೪೧-೨೪೨॥

ಕಾಶೀನಾಮೋಚ್ಚಾರಣೆಯೆಂಬ ಅಮೃತಪಾನದಿಂದ ತೃಪ್ತರಾದ ವಿದ್ವಾಂಸರು ಅನೇಕ ಯಾಗಾದಿಗಳನ್ನು ನೆರವೇರಿಸಿ ಶಿವಸಾಯುಜ್ಯವನ್ನು ಪಡೆಯುವರು. ಕಾಶಿ ಎಂಬ ಎರಡಕ್ಷರದ ಮಹಿಮೆಯು ಶಂಕರನಿಗೆ ಮಾತ್ರ ಗೊತ್ತು ಇತರರಿಗೆ ತಿಳಿಯಲು ಸಾಧ್ಯವೇ ಇಲ್ಲ. ॥೨೪೩-೨೪೪॥

ಕಾಶೀ ಎಂಬ ಅಕ್ಷರದ್ವಯವು ದುಃಖನಾಶಕವಾದದ್ದು. ಸಾಂಸಾರಿಕಕ್ಲೇಶಗಳನ್ನು ಪರಿಹರಿಸಿ ಮನುಷ್ಯನನ್ನು ಪವಿತ್ರನನ್ನಾಗಿ ಮಾಡುವುದು. ಪರಿಹಾಸಕ್ಕಾಗಿಯಾದರೂ ಕಾಶೀನಾಮೋಚ್ಚಾರಣೆಮಾಡಿದವನು ತಾನು ಹಿಂದೆ ಸಂಪಾದಿಸಿದ ಪಾಪರಾಶಿಯನ್ನೆಲ್ಲಾ ಕಳೆದುಕೊಳ್ಳುವನು. ॥೨೪೫-೨೪೬॥

ಪಾಪವೆಂಬ ಕಾಡಿಗೆ ಕಾಶಿ ಎಂಬ ಶಬ್ದವೇ ಕಾಡುಕಿಚ್ಚು ಎಂಬುದಾಗಿ ಪರಶಿವನೇ ನಿರೂಪಿಸಿರುವನು. ಜನನ, ಮರಣ, ಮುಪ್ಪು, ದುಃಖ ಮುಂತಾದುವುಗಳನ್ನು ಪರಿಹರಿಸಿಕೊಳ್ಳಲು ಇಷ್ಟವುಳ್ಳವರು ನಿಜವಾಗಿಯೂ ಕಾಶೀ ಎಂಬ ಮಹಾ

ಜನ್ಮಮೃತ್ಯುಜರಾದುಃಖಮಹಾರೋಗೌಷಧಂ ಪರಂ ।
ಕಾಶೀತಿ ಪರಮೋ ಮಂತ್ರಃ ಸಂತ್ರಾಸಯತಿ ಪಾತಕಂ ॥೨೪೮॥

ಸಂಸಾರಪಾಪಮತ್ತೇಭಪಂಚಾನನಮನಾಮಯಂ ।
ಕಾಶೀತಿ ಮಂತ್ರಮನಿಶಂ ಜಪಂತಿ ಮುನಯೋ ಮುದಾ ॥೨೪೯॥

ಸಂಸಾರಘೋರಗರ್ತಸ್ಥಾನ್ ಕಾಶೀತ್ಯೇಷೋ ಮಹಾಮನುಃ ।
ಸಮಾಕರ್ಷಯತಿ ಸ್ಪಷ್ಟಂ ನಯಂತ್ಯೂರ್ಧ್ವಮನಂತರಂ ॥೨೫೦॥

ಸಂಸಾರಸರ್ಪದಷ್ಟೇನ ಕಾಶೀತಿ ಮನುಮೂಲಿಕಾ ।
ಸಂಸಾರವಿಷಶಾಂತ್ಯರ್ಥಂ ಸೇವನೀಯಾ ಮುಹುರ್ಮುಹುಃ ॥೨೫೧॥

ಮುಕ್ತಿಕಾಂತಾಕರ್ಷಕೋಯಂ ಕಾಶೀತಿ ಮನುರುತ್ತಮಃ ।
ನಿತ್ಯಂ ಮುಕ್ತಿವಿಟ್ಯೈಃ ಸೇವ್ಯೋ ಸ ಮೋಹಪಟಲಾಶನಿಃ ॥೨೫೨॥

ಅಸಕೃದ್ವಾ ಸಕೃದ್ವಾಪಿ ಕಾಶೀತಿ ಮನುಮುತ್ತಮಂ ।
ಯೋ ಜಪೇತ್ಸಮಹಾಘೇಭ್ಯಃ ಸದ್ಯ ಏವ ವಿಮುಚ್ಯತೇ ॥೨೫೩॥

ಮಂತ್ರವನ್ನು ಪಠಿಸಬೇಕು. ಇದರಿಂದ ಸಕಲ ಪಾಪವೂ ನಿವಾರಣೆಯಾಗುವುದು. ||೨೪೭-೨೪೮||

ಸಂಸಾರವೆಂಬ ಮದ್ದಾನೆಗೆ ಸಿಂಹಪ್ರಾಯವಾಗಿರುವುದು ಈ ಕಾಶೀ ಎಂಬ ಮಹಾಮಂತ್ರವೇ. ಸಂಸಾರವೆಂಬ ಘೋರವಾದ ಹಳ್ಳದಲ್ಲಿ ಬಿದ್ದಿರುವವರನ್ನು ಮೇಲೆತ್ತಿ ರಕ್ಷಿಸುವುದೆಂದರೆ ಈ ಮಹಾಮಂತ್ರವೇ. ಆದಕ್ಕಾಗಿಯೇ ಮಹಾ ಮುನಿಗಳೂ ಸಹ ಇದನ್ನೇ ಸರ್ವದಾ ಉಚ್ಚರಿಸುತ್ತಿರುವರು. ||೨೪೯-೨೫೦||

ಸಂಸಾರವೆಂಬ ಸರ್ಪದಿಂದ ಕಚ್ಚಲ್ಪಟ್ಟವನಿಗೆ ಕಾಶಿ ಎಂಬ ಶಬ್ದವು ವಿಷವನ್ನು ಪರಿಹರಿಸುವ ಮೂಲಿಕೆ. ಆದಕ್ಕಾಗಿಯೇ ಸಂಸಾರಿಗಳು ಇದನ್ನು ಸದಾ ಪಠಿಸುತ್ತಿರಬೇಕು. ಅಲ್ಲದೆ ಮುಕ್ತಿಕಾಮಿಗಳು ತಮ್ಮ ಅಜ್ಞಾನಕ್ಕೆ ಸಿಡಿಲಿನಂತಿರುವ ಈ ಕಾಶೀನಾಮವನ್ನು ಸರ್ವದಾ ಉಚ್ಚರಿಸುತ್ತಾ ಸುಲಭವಾಗಿ ಮೋಕ್ಷವನ್ನು ಗಳಿಸುವರು ||೨೫೧-೨೫೨||

ಒಂದುಸಾರಿಯಾಗಲಿ, ಅನೇಕವೇಳೆಯಾಗಲಿ ಹೇಗಾದರೂ ಕಾಶೀನಾಮೋಚ್ಚಾರಣೆ ಮಾಡಿದವರಿಗೆ ನಿಜವಾಗಿಯೂ ಪಾಪಭಯವಿರುವುದಿಲ್ಲ. ಕಾಶೀನಾಮ

ಕಾಶೀತಿ ನಾಮ ಪೀಯೂಷಂ ಯೇ ಪಿಬಂತಿ ಪುನಃ ಪುನಃ ।
ತೇ ಮಹಾಪಾಪಸಂಘೇಭ್ಯೋ ಮುಚ್ಯಂತೇ ನಾತ್ರ ಸಂಶಯಃ ॥೨೫೪॥

ಯಮ ಕಾಶೀತಿ ವಾಗ್ವಲ್ಲೀ ಸುವರ್ಣದ್ವಂದ್ವಪಲ್ಲವಾ ।
ಸ್ವರ್ಗಾಪವರ್ಗಫಲದಾ ಬಲಪ್ರಮಥನಪ್ರಿಯಾ ॥೨೫೫॥

ಕಾಶೀನಾಮಸುಧಾಂ ಧನ್ಯಾ ವಸುಧಾತಲವಾಸಿನಃ ।
ಪಿಬಂತಿ ಶ್ರದ್ಧಯಾ ಸಿದ್ಧಾಃ ಶಮನಾತ್ತತಪೋಧನಾಃ ॥೨೫೬॥

ಕಾಶೀತಿಮಂತ್ರರಾಜೋಽಯಂ ಪುಣ್ಯರಾಶಿಸಮೃದ್ಧಿದಃ ।
ಅನಂತಾಭೇದ್ಯನಿವಿಧಪಾಪರಾಶಿಮಹಾಶನಿಃ ॥೨೫೭॥

ಕಾಶೀತ್ಯಮೃತಮುತ್ಕೃಷ್ಟಂ ಸುರಾಣಾಮಪಿ ದುರ್ಲಭಂ ।
ಪಿಬಂತಿ ಸಾಧವೋ ಭಕ್ತ್ಯಾ ಭಾಲಲೋಚನಪೂಜಕಾಃ ॥೨೫೮॥

ಪೀತ್ವಾಪ್ಯಮೃತಮಾಶಾಸ್ಯಂ ಸುರಾ ಭೂತ್ವಾ ಪುನರ್ನರಾಃ ।
ಭವಂತಿ ನ ತಥಾ ಕಾಶೀ ನಾಮಾಮೃತಮನೋಹರಂ ॥೨೫೯॥

---

ವೆಂಬುದೇ ಅಮೃತ. ಅದರ ಪಾನದಿಂದ ಮನುಷ್ಯನಿಗೆ ಯಾವ ಬಾಧೆಯೂ ತಗಲುವುದಿಲ್ಲ. ॥೨೫೩-೨೫೪॥

ಕಾಶಿ ಎಂಬ ಮಾತಿನ ಬಳ್ಳಿಯು ಸುವರ್ಣದ್ವಂದ್ವಗಳಂತಿರುವ ಅಕ್ಷರ ದ್ವಯಾತ್ಮಿಕವಾದದ್ದು. ಅದು ಸ್ವರ್ಗ ಮತ್ತು ಮೋಕ್ಷ ಇವುಗಳನ್ನು ಅನುಗ್ರಹಿಸುವುದು. ಭೂಲೋಕವಾಸಿಗಳು ಇಂತಹ ಅಮೃತಸದೃಶವಾದ ಕಾಶೀನಾಮವನ್ನು ಶ್ರದ್ಧೆಯಿಂದ ಉಚ್ಚರಿಸಿ ಶಾಂತಮನಸ್ಕರಾಗಿ ತಪಸ್ಸಿದ್ಧಿಯನ್ನು ಪಡೆದಿರುವರು.

ಮಂತ್ರರಾಜನೆನಿಸಿ ಮೆರೆಯುವ ಈ ಕಾಶೀಶಬ್ದವು ಪುಣ್ಯರಾಶಿಯನ್ನು ವೃದ್ಧಿಪಡಿಸುವುದಲ್ಲದೆ, ಪಾಪರಾಶಿಗೆ ಮಿಂಚಿನಂತಿರುವುದು. ಈ ಕಾಶೀ ಎಂಬ ಅಮೃತವನ್ನು ಈಶ್ವರಪೂಜಕರೆನಿಸಿದ ಸತ್ಪುರುಷರು ಸಂತೋಷದಿಂದ ಪಾನಮಾಡುವರು. ॥೨೫೭-೨೫೮॥

ಕಾಶಿ ಎಂಬ ಮಂತ್ರವು ಅಮೃತಕ್ಕಿಂತಲೂ ಶ್ರೇಷ್ಠವಾದ್ದುದು. ಏಕೆಂದರೆ ದೇವತೆಗಳು ಅಮೃತಪಾನಮಾಡಿದರೂ ಅವರಿಗೆ ಪುನರ್ಜನ್ಮವಿರುವುದು. ಕ್ಷೀಣ

ಕಾಶೀತ್ಯೇಷ ಮಹಾಮಂತ್ರಃ ಶ್ರೇಷ್ಠೋಽಯಮಮೃತಾದಪಿ ।
ಅಮೃತಂ ನಶ್ವರಂ ಯಸ್ಮಾದನಶ್ವರಮಿಯಂ (ತ) ಮನುಃ ॥೨೬೦॥

ಏತಾದೃಶೋಽಯಂ ಕಾಶೀತಿ ಮಹಾಮಂತ್ರೋಽಮೃತಾತ್ಮಕಃ ।
ಅನೇನೋಚ್ಚಾರಿತೋ ದೈವಾದತೋ ಧನ್ಯೋಽಯಮೀದೃಶಃ॥೨೬೧॥

ಕಾಶೀಸಮ್ಮುಖಮುತ್ಥಾಯ ಚಲಿತೋಽಯಂ ಪದತ್ರಯಂ ।
ಇದಮಸ್ಯಾಪರಂ ಕಾಲ ಮುಕ್ತಿಸಾಧನಮುತ್ತಮಂ ॥೨೬೨॥

ಅಹಂ ಕಾಶೀಂ ಗಮಿಷ್ಯಾಮೀತ್ಯಪಿ ಯೋ ವಾಚಮುಚ್ಚರೇತ್ ।
ಸೋಽಪಿ ಮುಕ್ತೋ ಭವತ್ಯೇವೇತ್ಯಾಹುರ್ಜಾಬಾಲವಾದಿನಃ ॥೨೬೩॥

ಕಾಶೀತಿ ನಾಮೋಚ್ಚಾರಣಂ ಸರ್ವಾಂಗೇ ಭೂತಿಧಾರಣಂ ।
ಕಸ್ಯ ವಾ ಮರಣೇಭ್ಯರ್ಣೇ ಸ ನಿರ್ವಾಣಂ ಪ್ರಯಚ್ಛತಿ ॥೨೬೪॥

ಕಾಶೀಪ್ರಯಾಣಂ ಕಾಶೀತಿ ನಾಮಪೀಯೂಷಭಕ್ಷಣಂ ।
ವಿಭೂತಿಧಾರಣಂ ಚೇತಿ ತ್ರಯಂ ನಿರ್ವಾಣದಂ ನ ಕಿಂ ॥೨೬೫॥

ಪುಣ್ಯರಾದಮೇಲೆ ಮತ್ತೆ ಭೂಲೋಕದಲ್ಲಿ ಜನಿಸುವರು. ಈ ಕಾಶೀನಾಮೋಚ್ಚಾರಣೆ ಮಾಡಿದವರಿಗೆ ಪುನರ್ಜನ್ಮದ ದುಃಖವೇ ಇರುವುದಿಲ್ಲ. ಶಾಶ್ವತವಾದ ಸುಖವನ್ನು ಕೊಡುವುದೆಂದರೆ ಈ ಕಾಶಿಯೇ ಅಲ್ಲವೇ! ॥೨೫೯-೨೬೦॥

ಆದರಿಂದ ಎಲೈ ಯಮನೇ, ಇಂತಹ ಕಾಶಿ ಎಂಬ ಪವಿತ್ರನಾಮವನ್ನು ಈತನು ಮರಣಕಾಲದಲ್ಲಿ ಉಚ್ಚರಿಸಿರುವನು. ಅಲ್ಲದೆ ಕಾಶೀ ನಗರಾಭಿಮುಖವಾಗಿ ಎರಡು ಮೂರು ಹೆಜ್ಜೆ ಮುಂದುವರಿದಿರುವನು. ಇದಕ್ಕಿಂತ ಮುಕ್ತಿಸಾಧಕವಾದ ಮಾರ್ಗವಿನ್ನಾವುದು? ॥೨೬೧-೨೬೨॥

ಜಾಬಾಲೋಪನಿಷತ್ತಿನಲ್ಲಿ ಕಾಶೀ ಗಮನವನ್ನು ಯಾರು ನಿಶ್ಚಯಮಾಡಿಕೊಂಡು ಬಾಯಿಂದಾಡುವರೋ ಅಂತಹವರು ನಿಜವಾಗಿಯೂ ಮುಕ್ತರಾಗುವರೆಂದು ವರ್ಣಿತವಾಗಿದೆ ಕಾಶೀನಾಮೋಚ್ಚಾರಣೆ, ಭಸ್ಮಧಾರಣೆ, ಇವು ಮರಣಕಾಲದಲ್ಲಿ ಒದಗಿದರೆ ಆತನಿಗೆ ಮೋಕ್ಷವೇ ದೊರಕುವುದರಲ್ಲಿ ಅನುಮಾನವಿದೆಯೆ? ॥೨೬೩-೨೬೪॥

ಕಾಶೀಪ್ರಯಾಣ, ಕಾಶೀನಾಮೋಚ್ಚಾರಣೆ, ವಿಭೂತಿಧಾರಣೆ, ಈ ಮೂರೂ ಮುಕ್ತಿಸಾಧಕಗಳು. ಅಲ್ಲದೆ ಇವುಗಳಲ್ಲಿ ಒಂದೊಂದೂ ಮೋಕ್ಷವನ್ನು ಒದಗಿಸುವಾಗ

ಏತೇಷ್ವೇಕೈಕಮೋಽವ್ಯೈತನ್ನಿರ್ವಾಣದಮತೋ ಯಮ ।
ಏತತ್ರಿತಯಸಂಗೋಽಸ್ಯ ನ ಕಿಂ ನಿರ್ವಾಣದೋ ವದ ॥೨೬೬॥

ಕಿಂ ಚಾಧುನೈವ ತರಸಾ ಯಮ ಶಂಕರಕಿಂಕರಾಃ ।
ಆಯಾಸ್ಯಂತ್ಯೇನಮನಘಂ ನೇತುಂ ಶಂಕರಮಂದಿರಂ ॥೨೬೭॥

ಯದಿ ತಾನ್ಪ್ರತಿ ಮೋಹೇನ ಪ್ರತಿಕೂಲಂ ವದಿಷ್ಯಸಿ ।
ತದಾ ಭವಂತಂ ತರಸಾ ತೇ ಹನಿಷ್ಯಂತ್ಯಸಂಶಯಂ ॥೨೬೮॥

ಕಿಂ ಚೈನಂ ಶಾಂಭವಂ ಮೋಹಾದ್ಯದಿ ನಾರ್ಚಯಸೇ ತದಾ ।
ಶಾಂಭವಾನರ್ಚನಾತ್ಕಾಲ ಪ್ರತ್ಯವಾಯೋ ಭವಿಷ್ಯತಿ ॥೨೬೯॥

ನರಕೇ ಪಾತಿತಾಃ ಪೂರ್ವಂ ಶಾಂಭವಾನರ್ಚಕಾಸ್ತ್ವಯಾ ।
ಕಥಮೇತಾದೃಶೇನಾದ್ಯ ತ್ಯಕ್ತಂ ಶಾಂಭವಪೂಜನಂ ॥೨೭೦॥

ತ್ಯಜ ಮೋಹಂ ಭಜ ರತಿಂ ಯಮ ಶಾಂಭವಮರ್ಚಯ ।
ಕುರು ಮದ್ವಾಚಿ ವಿಶ್ವಾಸಂ ತ್ಯಜಾವಿಶ್ವಾಸಮಣ್ವಪಿ ॥೨೭೧॥

ಈ ಮೂರನ್ನೂ ಆಚರಿಸಿದ ಈತನಿಗೆ ಮೋಕ್ಷಪ್ರಾಪ್ತಿಯಾಗುವುದಿಲ್ಲವೇ? ಹೇಳು. ॥೨೬೫-೨೬೬॥

ಎಲೈ ಯಮನೇ, ಈಗಲೇ ಶಿವದೂತರು ಬಂದು ಶಂಕರಸನ್ನಿಧಿಗೆ ಇವನನ್ನು ಕರೆದೊಯ್ಯುವರು. ಆಗ ಏನಾದರೂ ನೀನು ಅವರಿಗೆ ವಿರುದ್ಧವಾಗಿ ಮಾತನಾಡಿದರೆ ಒಡನೆಯೇ ಅವರು ನಿನ್ನನ್ನು ಕೊಲ್ಲುವರು. ॥೨೬೭-೨೬೮॥

ಅಲ್ಲದೆ ನೀನು ಅಜ್ಞಾನದಿಂದ ಈ ಶಂಭುಭಕ್ತನನ್ನು ಈಗ ಪೂಜಿಸದಿದ್ದರೆ ನಿನಗೆ ತತ್ಪ್ರಯುಕ್ತವಾಗಿಯೂ ಪಾಪಸಂಘಟನೆಯಾಗುವುದು. ಶಂಕರ ಕಿಂಕರರನ್ನು ಅರ್ಚನೆಮಾಡದವರನ್ನು ನೀನೇ ಹಿಂದೆ ಘೋರನರಕಗಳಿಗೆ ಹಾಕಿಸಿರುವೆ. ಅಂತಹ ನೀನೇ ಈಗ ಅರ್ಚಿಸದಿರುವುದು ಯುಕ್ತವೇ? ॥೨೬೯-೨೭೦॥

ಎಲೈ ಯಮನೇ, ಅಜ್ಞಾನವನ್ನು ಬಿಡು. ಶಂಕರಭಕ್ತರಲ್ಲಿ ಪ್ರೀತಿಯಿಡು. ನನ್ನ ಮಾತಿನಲ್ಲಿ ವಿಶ್ವಾಸವಿಡು. ಇವನಲ್ಲಿ ಅವಿಶ್ವಾಸಬುದ್ಧಿಯನ್ನು ಬಿಡು.'' ಎಂದು

ಇತಿ ವಿಷ್ಣುವಚಃ ಶ್ರುತ್ವಾ ತಂ ದೃಷ್ಟ್ವಾ ಭೂತಿಭೂಷಣಂ ।
ಯಮೋಽತಿಭಕ್ತ್ಯಾ ನತ್ವಾ ತಂ ಪೂಜಯಾಮಾಸ ಶಾಂಭವಂ ॥೨೭೨॥

ಏತಸ್ಮಿನ್ನಂತರೇ ಕಾಲೇ ಶಿವದೂತಾಃ ಸಮಾಗತಾಃ ।
ಶಿವನಾಮಾನಿ ಗಾಯಂತೋ ಭೂತಿಭೂಷಿತವಿಗ್ರಹಾಃ ॥೨೭೩॥

ತತೋ ವಿಷ್ಣ್ವಾದಯಸ್ಸರ್ವೇ ದೃಷ್ಟ್ವಾ ತಾನ್ಶಿವಕಿಂಕರಾನ್ ।
ಪ್ರಣಮ್ಯ ದಂಡವದ್ಭೂಮೌ ಚಕ್ರುಃ ಪೂಜಾಂ ಪೃಥಕ್ಪೃಥಕ್ ॥೨೭೪॥

ತೇ ವಿಷ್ಣ್ವಾದಿಕೃತಾಂ ಪೂಜಾಂ ಗೃಹೀತ್ವಾ ಶಿವಕಿಂಕರಾಃ ।
ತಂ ಗೃಹೀತ್ವಾ ಮೃತಂ ವಿಪ್ರಂ ಯಯುಃ ಶಂಕರಮಂದಿರಂ ॥೨೭೫॥

ತತಶ್ಶಿವಪ್ರಸಾದೇನ ಗಾಣಾಪತ್ಯಮವಾಪ್ತವಾನ್ ।
ತತಃ ಪರಂ ವಿನಾ ಯತ್ನಂ ಶಿವೇ ಲೀನೋಽಪ್ಯಭೂದ್ದ್ವಿಜಾಃ ॥೨೭೬॥

ಕಾಶೀತ್ಯುಚ್ಚಾರಣೇನಾಪಿ ಸ ಮುಕ್ತಃ ಪಾಪಕೃತ್ತಮಃ ।
ಈದೃಶೀ ಮುಕ್ತಿದಾ ಕಾಶೀ ಕಥಂ ತ್ಯಾಜ್ಯಾ ಮನೀಷಿಭಿಃ ॥೨೭೭॥

ಹೇಳಿದ ವಿಷ್ಣುವಿನ ಮಾತುಗಳನ್ನು ಕೇಳಿ ಯಮನು ಅತ್ಯಂತ ಭಯಭಕ್ತಿಯಿಂದ ಕೂಡಿದವನಾಗಿ ಆ ಶಾಂಕರನನ್ನು ಬಹಳವಾಗಿ ಪೂಜಿಸಿದನು. ||೨೭೧-೨೭೨||

ಅಷ್ಟರಲ್ಲಿ ಶಿವದೂತರು ಶಂಕರನಾಮಸ್ಮರಣೆಮಾಡುತ್ತಾ, ವಿಭೂತಿಭಸಿತ ಗಾತ್ರರಾಗಿ ಅಲ್ಲಿಗೆ ಬಂದರು. ಅನಂತರ ವಿಷ್ಣುವೇ ಮೊದಲಾದ ದೇವಶ್ರೇಷ್ಠರು ಅವರನ್ನು ನೋಡಿ ದಂಡಪ್ರಣಾಮಮಾಡಿ ಅರ್ಘ್ಯಪಾದ್ಯಾದಿಗಳಿಂದ ಸತ್ಕರಿಸಿದರು. ||೨೭೩-೨೭೪||

ಅವರ ಪೂಜಾಸತ್ಕಾರವನ್ನು ಸ್ವೀಕರಿಸಿ ಶಿವಕಿಂಕರರು ಮೃತನಾಗಿದ್ದ ಆ ಬ್ರಾಹ್ಮಣನನ್ನು ಶಿವಮಂದಿರಕ್ಕೆ ಕರೆದುಕೊಂಡು ಹೋಗಿ, ಶಂಕರನ ಅಪ್ಪಣೆಯಂತೆ ಗಾಣಾಪತ್ಯ ಪದವಿಯನ್ನಿತ್ತರು. ಕಾಲಕ್ರಮದಲ್ಲಿ ಆತನು ಶಂಕರಾನುಗ್ರಹಕ್ಕೆ ಪಾತ್ರನಾಗಿ ಶಂಕರನಲ್ಲಿಯೇ ಐಕ್ಯನಾದನು. ||೨೭೫-೨೭೬||

ಕಾಶೀ ಎಂಬ ನಾಮೋಚ್ಚಾರಣೆಯಿಂದಲೇ ಆ ಬ್ರಾಹ್ಮಣನು ಮುಕ್ತನಾದ ನೆಂದರೆ ಅಂತಹ ಪವಿತ್ರವಾದ ಕಾಶಿಯನ್ನು ಬಿಟ್ಟುಹೋಗುವುದು ಯುಕ್ತವೆ?

ಅವಿಮುಕ್ತಂ ನಮೋಽವ್ಯಕ್ತಮಿತಿ ಜಾಬಾಲವಾದಿಭಿಃ ।
ಡಿಂಡೀರವಃ ಕೃತಃ ಪೂರ್ವಂ ವೇದರೂಪೋ ನಿರಾಕುಲಃ ॥೨೭೮॥

ಅವಿಮುಕ್ತಂ ಮುಂಚಮಾನಾಃ ಶ್ವಪಚಾ ಏವ ಕೇವಲಂ ।
ಸತ್ಯಮೇವಂ ಪುನಸ್ಸತ್ಯಮುದ್ಧೃತ್ಯ ಭುಜಮುಚ್ಯತೇ ॥೨೭೯॥

ಅವಿಮುಕ್ತಂ ಮಹಾದೇವೋಽಪ್ಯನೇಕಾಮರಸಂಯುತಃ ।
ನ ಮುಂಚತಿ ತತಃ ಕಾಶೀ ಕಥಂ ತ್ಯಾಜ್ಯಾ ಭವಾದೃಶೈಃ ॥೨೮೦॥

ಅಸಂಸಾರೀ ಮಹಾದೇವಃ ಕಾಶ್ಯಾಂ ತಿಷ್ಠತಿ ಸಾಂಬಿಕಃ ।
ಸಂಸಾರಿಣೋ ಭವಂತಸ್ತು ಕಥಂ ವಾ ತ್ಯಕ್ತುಮಿಚ್ಛಥ ॥೨೮೧॥

ಸಂಸಾರಾವಧಿಕಾ ಕಾಶೀ ಕಾಶೀ ಸಂಸಾರಪಾವಕಃ ।
ಪಾವನೈಸ್ಸತತಂ ಸೇವ್ಯಾ ಪಾಪಭೀರುಭಿರುತ್ತಮೈಃ ॥೨೮೨॥

ಜಾಬಾಲೋಪನಿಷತ್ತನ್ನು ಅರಿತವರು ಕಾಶಿಯನ್ನು ಅವಿಮುಕ್ತಕ್ಷೇತ್ರವೆಂದೂ, ಅದು ಅವ್ಯಕ್ತವಾದುದೆಂದೂ ವೇದರೂಪದಿಂದ ಘೋಷಿಸುತ್ತಿರುವರು. ||೨೭೭-೨೭೮||

ಅವಿಮುಕ್ತಕ್ಷೇತ್ರವೆನಿಸಿದ ಕಾಶಿಯನ್ನು ಬಿಟ್ಟು ಹೋಗಬೇಕೆನ್ನುವವರು ಚಂಡಾಲರೇ ಸರಿ. ಈ ಮಾತನ್ನು ಭುಜವೆತ್ತಿ ಸತ್ಯವೆಂದು ಸಾರಿಸಾರಿ ಹೇಳುವೆನು. ಮಹಾದೇವನು ಸಕಲ ದೇವಸೇನಾಪರಿವೃತನಾಗಿ ಕಾಶಿಯಲ್ಲಿಯೇ ನೆಲಸಿರುವನು. ಅಂತಹ ಕಾಶಿಯನ್ನು ನಿಮ್ಮಂತಹವರು ಬಿಟ್ಟುಹೋಗುವುದು ಉಚಿತವೇ ? ||೨೭೯-೨೮೦||

ಮಹಾದೇವನು ನಿಜವಾಗಿಯೂ ಸಂಸಾರನಿರ್ಮುಕ್ತನಾದವನು. ಅಂತಹವನೇ ಪಾರ್ವತಿಯೊಡನೆ ಈ ಕಾಶಿಯಲ್ಲಿ ನೆಲಸಿರುವಾಗ, ಸಂಸಾರಕ್ಕಾಗಿ ಶ್ರಮಿಸುವ ನೀವು ಕಾಶಿಯನ್ನು ಬಿಡುವುದುಚಿತವೇ? ಈ ಕಾಶಿಯು ಸಂಸಾರದುಃಖವನ್ನು ನೀಗಿಸುವುದು. ಹಾಗೆಯೇ ಸಂಸಾರವನ್ನೂ ಪವಿತ್ರಗೊಳಿಸುವುದು. ಪಾಪಭೀರುಗಳಾದವರು ನಿಜವಾಗಿಯೂ ಈ ಕಾಶಿಯನ್ನು ಸೇವಿಸಿ ಪವಿತ್ರರಾಗುವರು. ||೨೮೧-೨೮೨||

ಕಾಶೀನಿವಾಸಮಾತ್ರೇಣ ಘೋರಸಂಸಾರಶೃಂಖಲಾಃ ।
ಸದ್ಯೋ ಭವಂತಿ ವಿಚ್ಛಿನ್ನಾಃ ಪರ್ವತಾ ಇವ ಭೇದಿತಾಃ ॥೨೮೩॥

ಕಾಶೀತಿ ಸಂವದನ್ನಿತ್ಯಂ ಕಾಶೀನಾಥಂ ಸಮರ್ಚಯನ್ ।
ಕಾಲಭೀತಿಂ ವಿಹಾಯಾತ್ರ ಯೋ ವಸೇತ್ಸ ತು ಪುಣ್ಯಕೃತ್ ॥೨೮೪॥

ತ್ರಿನೇತ್ರಾಂಶ್ಚಂದ್ರಚೂಡಾಂಕಾನ್ ಭೂತಿರುದ್ರಾಕ್ಷಭೂಷಣಾನ್ ।
ಕಾಶೀಸ್ಥಾನ್ ದಿವಿಜಾನ್ ದೃಷ್ಟ್ವಾ ಸ್ತುವಂತ್ಯನ್ವಹಮಾದರಾತ್ ॥೨೮೫॥

ದೇವಾಃ ಪತಂತಿ ಸ್ವರ್ಗಸ್ಥಾಃ ಕಾಶೀಸ್ಥಾ ತು ಕದಾಚನ ।
ನ ಪತಂತ್ಯೇವ ಸೈವೇಷಾ ಕಾಶೀ ತ್ಯಾಜ್ಯಾ ಕಥಂ ಭವೇತ್ ॥೨೮೬॥

ಬ್ರಹ್ಮತ್ವಮಪಿ ನೇಚ್ಛಂತಿ ಕಾಶೀಸ್ಥಾ ಭಸ್ಮಭೂಷಣಾಃ ।
ಈದೃಶೀ ಮುಕ್ತಿದಾ ಕಾಶೀ ನ ತ್ಯಾಜ್ಯಾ ಮನಸಾಪಿ ಹಿ ॥೨೮೭॥

ಕಾಶೀಸ್ಥಃ ಪುಲ್ಕಸೋಽಪ್ಯಲ್ಪಸ್ತ್ರೈಲೋಕ್ಯಾಧಿಪತಿಂ ಹರಿಂ ।
ತೃಣೀಕೃತ್ಯಾತ್ರ ಸತತಂ ತಿಷ್ಠತ್ಯಾಶಾವಿವರ್ಜಿತಃ ॥೨೮೮॥

ಘೋರಸಂಸಾರದ ಬಂಧನವು ಕಾಶೀವಾಸಮಾತ್ರದಿಂದಲೇ, ಪರ್ವತವು ವಜ್ರಾಯುಧದಿಂದ ಭೇದಿಸಲ್ಪಡುವಂತೆ ನಿವಾರಣೆಯಾಗುವುದು. ಕಾಶೀನಾಮ ಸ್ಮರಣೆಮಾಡುತ್ತಾ, ಕಾಶೀನಾಥನನ್ನು ಅರ್ಚಿಸುತ್ತಾ ಕಾಶಿಯಲ್ಲಿ ವಾಸಮಾಡಿದವನು ಯಮನಿಂದ ಒದಗುವ ಸಕಲ ಭಯವನ್ನೂ ಕಳೆದುಕೊಳ್ಳುವನು. ||೨೮೩-೨೮೪||

ಕಾಶೀನಗರದಲ್ಲಿ ವಾಸಿಸುತ್ತಾ ಶಿವಾನುಗ್ರಹಕ್ಕೆ ಪಾತ್ರರಾದವರು ಶಿವನಂತೆಯೇ ನೇತ್ರತ್ರಯ, ಚಂದ್ರಚೂಡ, ಭೂತಿರುದ್ರಾಕ್ಷಿಗಳು ಇವುಗಳಿಂದ ಕೂಡಿ ಮೆರೆಯುವರು. ಅಂತಹವರನ್ನು ನೋಡಿ ಸಕಲ ದೇವತೆಗಳೂ ವಂದಿಸುವರು. ಸ್ವರ್ಗವಾಸಿಗಳಿಗಾದರೂ ಒಂದುವೇಳೆ ಚ್ಯುತಿಬಂದೀತು, ಕಾಶೀವಾಸಿಗಳಿಗೆ ಪದಚ್ಯುತಿಯೇ ಇರುವುದಿಲ್ಲ. ||೨೮೫-೨೮೬||

ಭಸ್ಮಭೂಷಿತರಾದ ಕಾಶೀವಾಸಿಗಳು ಬ್ರಹ್ಮಪದವಿಯನ್ನು ಸಹ ಅಪೇಕ್ಷಿಸುವುದಿಲ್ಲ ಮುಕ್ತಿಪ್ರದವಾದ ಕಾಶೀನಗರವನ್ನು ಬಿಡುವ ಸಂಕಲ್ಪವನ್ನು ಕೂಡ ಮಾಡಬಾರದು. ಕಾಶೀವಾಸಿಯಾದ ಒಬ್ಬ ಚಂಡಾಲನೂ ಕೂಡ ತ್ರಿಲೋಕಾಧಿಪತಿ

ಸ್ವಪ್ರಾಪ್ತಂ ರಾಜ್ಯಮಪಿ ತ್ಯಕ್ತ್ವಾ ಕಾಶ್ಯಾಂ ಸಂಸಾರಭೀರವಃ ।
ಸ್ಥಾತುಮಿಚ್ಛಂತಿ ಸತತಂ ಸೈಷಾ ಕಾಶೀ ಶಿವಾತ್ಮಿಕಾ ॥೨೮೯॥

ಕಾಶೀ ಚೇತ್ತ್ಯಜ್ಯತೇ ಮೂರ್ಖೈಸ್ತೈರರ್ಕಕ್ಷೀರಮಾದರಾತ್ ।
ಪೀತಂ ಗವ್ಯಂ ವಿಹಾಯೈವ ಕ್ಷೀರಮಾಜ್ಯಸಮನ್ವಿತಂ ॥೨೯೦॥

ಕಾಶ್ಯಾಂ ಸ್ಥಿತ್ವಾಂತಕಾಲೇಽಪಿ ಕಾಶೀನಾಥಂ ಮುದಾ ಸ್ಮರನ್ ।
ಪ್ರವಿಶತ್ಯೇವ ದೇವೇಶೇ ಕಾಶೀನಾಥೇ ಮಹೇಶ್ವರೇ ॥೨೯೧॥

ಏಕೈಕಮಸ್ತಿ ಯತ್ಕಾಶ್ಯಾಂ ಶಿವಲಿಂಗಮನುತ್ತಮಂ ।
ತನ್ನಾಸ್ತ್ಯನ್ಯತ್ರ ಕುತ್ರಾಪಿ ವಸ್ತುತೋ ಮುನಿಸತ್ತಮಾಃ ॥೨೯೨॥

ಶ್ರೀಮದ್ವಿಶ್ವೇಶ್ವರಂ ಲಿಂಗಂ ಯತ್ಕಾಶ್ಯಾಂ ದೃಶ್ಯತೇಽನಘಂ ।
ತತ್ಸಾಕ್ಷಾನ್ಮುಕ್ತಿದಂ ಲಿಂಗಂ ತತ್ತ್ಯಾಗೋಽನುಚಿತೋ ದ್ವಿಜಾಃ ॥೨೯೩॥

ವೈಶ್ವೇಶ್ವರಂ ಲಿಂಗಮೇಕಂ ವೇದಾಃ ಸ್ತುತ್ವಾಪ್ಯನೇಕಧಾ ।
ನ ವಿಶ್ರಾಂತಿಂ ಗತಾ ಭೂಯಃ ಸ್ತುವಂತ್ಯೇವ ಮುಹುರ್ಮುಹುಃ॥೨೯೪॥

---

ಯಾದ ವಿಷ್ಣುವನ್ನು ತಿರಸ್ಕರಿಸಿ, ಜ್ಞಾನಿಯಾಗಿ ಆಶಾಪರಿತ್ಯಾಗಮಾಡಿ ಕಾಶಿಯಲ್ಲಿಯೇ ನೆಲಸುವನು. ॥೨೮೭-೨೮೮॥

ಸಂಸಾರದಲ್ಲಿ ಜಿಹಾಸೆಯುಳ್ಳ ಅನೇಕರಾಜರು ತಮಗೆ ಒದಗಿದ ರಾಜ್ಯವನ್ನು ಸಹ ದೂರಮಾಡಿ ಕಾಶಿಯಲ್ಲಿ ನೆಲಸುವರು. ಏಕೆಂದರೆ ಕಾಶಿಯು ಶಿವನಿಗೆ ಆವಾಸ ಸ್ಥಾನವಲ್ಲವೇ? ಕಾಶಿಯನ್ನು ತ್ಯಾಗಮಾಡಿದವರು ತುಪ್ಪದಿಂದ ಮಿಶ್ರಿತವಾದ ಹಾಲನ್ನು ಚೆಲ್ಲಿ ಎಕ್ಕದ ಹಾಲನ್ನು ಕುಡಿದ ಮೂರ್ಖರಂತಾಗುವರು. ॥೨೮೯-೨೯೦॥

ಕೊನೆಗಾಲದಲ್ಲಿ ಮನುಷ್ಯರು ಕಾಶಿಯಲ್ಲಿ ನೆಲಸಿ, ಕಾಶೀನಾಥನನ್ನು ಸ್ಮರಿಸುತ್ತಾ ಮರಣಹೊಂದಿದವರು ಮಹೇಶ್ವರನಲ್ಲಿ ಐಕ್ಯರಾಗುವರು. ಕಾಶಿಯಲ್ಲಿರುವ ಒಂದೊಂದು ಶಿವಲಿಂಗವೂ ಬಹುಪವಿತ್ರವಾದದ್ದು. ತತ್ಸದೃಶವಾದ ಶಿವಲಿಂಗವು ಮತ್ತೆಲ್ಲಿಯೂ ದೊರೆಯಲಾರದು. ॥೨೯೧-೨೯೨॥

ಕಾಶಿಯಲ್ಲಿರುವ ವಿಶ್ವೇಶ್ವರಲಿಂಗವು ಮುಕ್ತಿಪ್ರದವಾದದ್ದು ಆದರ ಸೇವೆಯನ್ನು ಬಿಟ್ಟು ಹೋಗುವುದು ಉಚಿತವೆನಿಸಲಾರದು ವೇದಗಳೂ ಸಹ ಈ ಶಿವಲಿಂಗವನ್ನು ಸಂತತವಾಗಿ ವಿಶ್ರಾಂತಿಯಿಲ್ಲದೆ ಸ್ತುತಿಸುತ್ತಿರುವುವು. ॥೨೯೩-೨೯೪॥

ಯೇನ ವೈಶ್ವೇಶ್ವರಂ ಲಿಂಗಂ ದೂರೇ ಸ್ಥಿತ್ವಾಪಿ ಸಂಸ್ಮೃತಂ ।
ತೇನಾಪಿ ಮುಚ್ಯತೇ ವಿಪ್ರಾ ಘೋರಸಂಸಾರಸಾಗರಾತ್ ॥೨೯೫॥

ಲಿಂಗಾಕಾರಾ ಮುಕ್ತಿರೇವ ಲಿಂಗಂ ವಿಶ್ವೇಶ್ವರಾಭಿಧಂ ।
ತತ್ಪ್ರಾಪ್ತಂ ಯೇನ ತೇನೈವ ಮುಕ್ತಿಃ ಪ್ರಾಪ್ತಾ ನ ಸಂಶಯಃ ॥೨೯೬॥

ನ ದೃಷ್ಟಂ ಯದ್ದಿನೇ ಲಿಂಗಂ ಶ್ರೀಮದ್ವಿಶ್ವೇಶ್ವರಾಭಿಧಂ ।
ತದ್ದಿನಂ ದುರ್ದಿನಂ ವಿಪ್ರಾ ಮೇಘಚ್ಛನ್ನಂ ನ ದುರ್ದಿನಂ ॥೨೯೭॥

ಪದ್ಮಪತ್ರಸಮಾನಾಭ್ಯಾಂ ನೇತ್ರಾಭ್ಯಾಮಪಿ ಕಿಂ ವೃಥಾ ।
ಯಾಭ್ಯಾಂ ನ ದೃಷ್ಟಂ ತಲ್ಲಿಂಗಂ ಶ್ರೀಮದ್ವಿಶ್ವೇಶ್ವರಾಭಿಧಂ ॥೨೯೮॥

ಹತಾಭ್ಯಾಮಪಿ ಕಿಂ ತಾಭ್ಯಾಂ ಯಾಭ್ಯಾಂ ಪ್ರತ್ಯಹಮಾದರಾತ್ ।
ನಾರ್ಚಿತಂ ಬಿಲ್ವಪತ್ರಾದ್ಯೈರ್ಲಿಂಗಂ ವಿಶ್ವೇಶ್ವರಾಭಿಧಂ ॥೨೯೯॥

ಜೀವತಾಂ ಯೇನ ನಧ್ಯಾತಂ ಲಿಂಗಂ ವಿಶ್ವೇಶ್ವರಾಭಿಧಂ ।
ಜೀವತಾಪಿ ಮೃತಂ ತೇನ ಧಿಗ್ಧಿಗ್ಧಿಕ್ತಸ್ಯ ಜೀವನಂ ॥೩೦೦॥

---

ಒಂದುವೇಳೆ ದೂರದೇಶದಲ್ಲಿದ್ದು ವಿಶ್ವೇಶ್ವರಲಿಂಗವನ್ನು ಸ್ಮರಿಸಿಕೊಂಡರೂ ಅವರಿಗೆ ಘೋರಸಂಸಾರದ ಭಯವು ತಪ್ಪಿಹೋಗುವುದು. ಶಿವಲಿಂಗಾಕಾರವನ್ನು ಪಡೆಯುವುದೇ ಮುಕ್ತಿಯು. ಮುಕ್ತಿಸ್ವರೂಪವಾದ ವಿಶ್ವೇಶ್ವರಲಿಂಗವನ್ನು ಸ್ಮರಿಸಿದವರಿಗೂ, ಹೊಂದಿದವರಿಗೂ ಮುಕ್ತಿಯು ದೊರಕುವುದರಲ್ಲಿ ಸಂಶಯವಿಲ್ಲ. ॥೨೯೫-೨೯೬॥

ವಿಶ್ವೇಶ್ವರಲಿಂಗವನ್ನು ದರ್ಶನಮಾಡದ ದಿನವೇ ದುರ್ದಿನ ಮೇಘದಿಂದ ಮುಚ್ಚಿದ, ಸೂರ್ಯರಶ್ಮಿಯಿಲ್ಲದ ದಿನವನ್ನು ದುರ್ದಿನವೆನ್ನುವರು; ಅದಲ್ಲ. ವಿಶ್ವೇಶ್ವರನನ್ನು ದರ್ಶನಮಾಡದ ಪದ್ಮಪತ್ರದಂತೆ ವಿಶಾಲವಾದ ಕಣ್ಣುಗಳಿದ್ದೂ ವ್ಯರ್ಥವೇ ಅಲ್ಲವೇ? ॥೨೯೭-೨೯೮॥

ಬಿಲ್ವಪತ್ರಾದಿಗಳಿಂದ ಅರ್ಚನೆಮಾಡದ ಕೆಟ್ಟಕೈಗಳಿದ್ದೂ ಪ್ರಯೋಜನವೇನು? ಅಂತಹ ಕೈಗಳು ಇದ್ದೂ ವ್ಯರ್ಥವೇ. ಯಾರು ತಮ್ಮ ಜೀವನಕಾಲದಲ್ಲಿ ವಿಶ್ವೇಶ್ವರಲಿಂಗವನ್ನು ಮನಸಾ ಧ್ಯಾನಿಸುವುದಿಲ್ಲವೋ ಅವರ ಜೀವನವು ವ್ಯರ್ಥವೆಂದೇ ತಿಳಿಯಬೇಕು. ॥೨೯೯-೩೦೦॥

ಜೀವಿತವ್ಯಂ ತಾವದೇವ ಯಾವದ್ಭಕ್ತಿಪುರಸ್ಸರಂ ।
ಪೂಜ್ಯತೇ ಧ್ಯಾಯತೇ ನಿತ್ಯಂ ಲಿಂಗಂ ವಿಶ್ವೇಶ್ವರಾಭಿಧಂ ॥೩೦೧॥

ಕಿಂ ತೇನ ಜೀವನೇನಾಪಿ ಯದ್ದಿನೇ ಸಾವಧಾನತಃ ।
ನಾರಾಧಿತಂ ವಿಧಾನೇನ ಲಿಂಗಂ ವಿಶ್ವೇಶ್ವರಾಭಿಧಂ ॥೩೦೨॥

ಕರ್ತವ್ಯಾ ಜೀವನಾಪೇಕ್ಷಾ ತಾವದೇವ ಮುಮುಕ್ಷುಭಿಃ ।
ಯಾವದಾರಾಧ್ಯತೇ ಭಕ್ತ್ಯಾ ಲಿಂಗಂ ವಿಶ್ವೇಶ್ವರಾಭಿಧಂ ॥೩೦೩॥

ವೇದೋಪನಿಷದಾಂ ಸಾರೋ ಲಿಂಗರೂಪಮುಪಾಶ್ರಿತಃ ।
ವಿಶ್ವೇಶ್ವರಾಭಿಧಾಂ ಪ್ರಾಪ್ಯ ಕಾಶ್ಯಾಂ ತಿಷ್ಠತಿ ಸರ್ವದಾ ॥೩೦೪॥

ಕಾಶ್ಯಾಂ ವೈಶ್ವೇಶ್ವರಂ ಲಿಂಗಂ ಸರ್ವವೇದೋಪಬೃಂಹಿತಂ ।
ಭುಕ್ತಿಮುಕ್ತಿಪ್ರದಂ ಪುಣ್ಯಂ ಸೇವನೀಯಂ ಮನೀಷಿಭಿಃ ॥೩೦೫॥

ವಿಶ್ವೇಶ್ವರಾಖ್ಯಾ ಜಿಹ್ವಾಗ್ರೇ ಚಿತ್ತೇ ವಿಶ್ವೇಶ್ವರಸ್ಮೃತಿಃ ।
ವಿಶ್ವೇಶ್ವರಾರ್ಚನಂ ಹಸ್ತೇ ಯಸ್ಯ ತಸ್ಯ ನ ಯಾತನಾ ॥೩೦೬॥

---

ವಿಶ್ವೇಶ್ವರಲಿಂಗವನ್ನು ಎಲ್ಲಿನವರೆಗೆ ಭಕ್ತಿಪೂರ್ವಕವಾಗಿ ಪೂಜಿಸುವ ಮತ್ತು ಧ್ಯಾನಿಸುವ ಶಕ್ತಿಯಿರುವುದೋ, ಅಲ್ಲಿನವರೆಗೆ ಬದುಕಿರಬೇಕು. ಹಾಗೆ ವಿಶ್ವೇಶ್ವರ ಲಿಂಗವನ್ನು ಪೂಜಿಸದ ಮತ್ತು ಧ್ಯಾನಿಸದ ಜೀವನವು ಅತಿ ನಿಂದ್ಯವೇ ಸರಿ. ॥೩೦೧-೩೦೨॥

ಮೋಕ್ಷಾಪೇಕ್ಷಿಗಳು ವಿಶ್ವೇಶ್ವರಲಿಂಗಾರಾಧನೆ ಮಾಡುವಷ್ಟು ಕಾಲವೂ ಬದುಕಿರಲು ಅಪೇಕ್ಷಿಸಬೇಕು. ಒಟ್ಟಿನಲ್ಲಿ ಸಕಲವೇದ ವೇದಾಂಗಗಳ ಸಾರವೆಲ್ಲಾ ಕಾಶೀ ವಿಶ್ವೇಶ್ವರಲಿಂಗರೂಪವಾಗಿ ನೆಲಸಿದೆಯೆಂದು ಹೇಳಬಹುದು. ॥೩೦೩-೩೦೪॥

ಹೀಗೆ ಸರ್ವವೇದಸ್ತುತವಾಗಿಯೂ, ಭಕ್ತರ ಭುಕ್ತಿ, ಮುಕ್ತಿ, ಇವುಗಳ ಪ್ರಾಪ್ತಿಗೆ ಮೂಲಕಾರಣವಾಗಿಯೂ ಇರುವ ಶಿವಲಿಂಗವನ್ನು ವಿದ್ವಾಂಸರಾದವರು ನಿತ್ಯವೂ ಸ್ತುತಿಸಬೇಕು. ಯಾವನು ವಿಶ್ವೇಶ್ವರಲಿಂಗವನ್ನು ಬಾಯಿಂದ ಸ್ತುತಿಸುತ್ತಾ, ಮನಸ್ಸಿನಿಂದ ಧ್ಯಾನಿಸುತ್ತಾ, ಕೈಯಿಂದ ಅರ್ಚಿಸುತ್ತಾ ಕಾಲಕಳೆಯುವನೋ, ಅವನಿಗೆ ಯಾವ ಸಂಸಾರಯಾತನೆಗಳೂ ತಟ್ಟಲಾರವು. ॥೩೦೫-೩೦೬॥

ಸೋತ್ಸಾಹಮತಿಯತ್ನೇನ ಕಾಶ್ಯಾಂ ವಿಶ್ವೇಶ್ವರಾಭಿಧಂ ।
ಲಿಂಗಂ ಯೇಭ್ಯರ್ಚಯಿಷ್ಯಂತಿ ತೇಷಾಂ ಯಮಭಯಂ ಕುತಃ ॥೩೦೭॥

ವಿಶ್ವನಾಥಸ್ತುತಿಂ ಕೃತ್ವಾ ಕಾಶ್ಯಾಂ ತಿಷ್ಠಂತಿ ಯೇ ಜನಾಃ ।
ತೇ ತರ್ಜಯಂತಿ ಪಾಪಾನಿ ಘೋರಾಣಿ ವಿವಿಧಾನ್ಯಪಿ ॥೩೦೮॥

ವಿಶ್ವೇಶ್ವರಂ ವಿಲಾಸೇನಾಪ್ಯೇಕದಾ ವೀಕ್ಷ್ಯ ಸಾದರಂ ।
ನ ಬಿಭೇತಿ ಯಮಾತ್ಸೋಽಪಿ ಕೃತಪಾಪೋಽಪಿ ಸರ್ವಥಾ ॥೩೦೯॥

ಯಲ್ಲಿಂಗಂ ಬ್ರಹ್ಮವಿಷ್ಣ್ವಾದ್ಯೈಃ ಪೂಜ್ಯತೇ ಸಾವಧಾನತಃ ।
ತಲ್ಲಿಂಗಂ ಖಲು ವಿಪ್ರೇಂದ್ರಾ ಲಿಂಗಂ ವಿಶ್ವೇಶ್ವರಾಭಿಧಂ ॥೩೧೦॥

ಯಲ್ಲಿಂಗಂ ಬ್ರಹ್ಮವಿಷ್ಣ್ವಾದ್ಯಾಃ ಸಮಾರಾಧ್ಯಾಪ್ಯನಂತಧಾ ।
ವಿರತಾ ನ ತದೇವೇದಂ ಲಿಂಗಂ ವಿಶ್ವೇಶ್ವರಾಭಿಧಂ ॥೩೧೧॥

ಯಲ್ಲಿಂಗಂ ವಿಧಿವಿಷ್ಣ್ವಾದ್ಯಾಃ ಸ್ತೋತ್ರೈಃ ಸ್ತುತ್ವಾಪ್ಯನಂತಧಾ ।
ವಿರತಾ ನ ತದೇವೇದಂ ಲಿಂಗಂ ವಿಶ್ವೇಶ್ವರಾಭಿಧಂ ॥೩೧೨॥

ಯಲ್ಲಿಂಗಂ ವಿಧಿವಿಷ್ಣ್ವಾದ್ಯಾಃ ಸಮ್ಯಗ್ದೃಷ್ಟ್ವಾನಂತಧಾ ।
ವಿರತಾ ನ ತದೇವೇದಂ ಲಿಂಗಂ ವಿಶ್ವೇಶ್ವರಾಭಿಧಂ ॥೩೧೩॥

ಕಾಶೀ ವಿಶ್ವೇಶ್ವರಲಿಂಗವನ್ನು ಭಯಭಕ್ತಿಯಿಂದ ಪ್ರಯತ್ನಪೂರ್ವಕವಾಗಿ ಸ್ತುತಿಸುವವನಿಗೆ ಯಮಭಯವಿರುವುದಿಲ್ಲ. ಅಲ್ಲದೆ ಕಾಶೀನಿವಾಸಿಗಳಾಗಿ ವಿಶ್ವೇಶ್ವರ ಸ್ತುತಿಯಿಂದ ಪವಿತ್ರರಾದವರು ಘೋರಪಾಪಗಳನ್ನೇ ಹೆದರಿಸುವಷ್ಟು ಶಕ್ತರಾಗುವರು. ॥೩೦೭-೩೦೮॥

ಪರಮಪಾಪಿಯಾಗಿದ್ದರೂ ಒಂದುಸಾರಿ ವಿಲಾಸಕ್ಕಾಗಿಯಾದರೂ ವಿಶ್ವೇಶ್ವರನ ದರ್ಶನಮಾಡಿದರೆ ಅವನಿಗೆ ಯಮನ ಭಯವೇ ಇರುವುದಿಲ್ಲ. ಬ್ರಹ್ಮವಿಷ್ಣ್ವಾದಿಗಳಿಂದ ಪೂಜಿತವಾದ ಶಿವಲಿಂಗವೆಂದರೆ ಈ ವಿಶ್ವೇಶ್ವರಲಿಂಗವೇ ಎಂದು ತಿಳಿಯಿರಿ. ॥೩೦೯-೩೧೦॥

ಈ ಲಿಂಗವನ್ನು ಬ್ರಹ್ಮಾದಿದೇವತೆಗಳು ಇನ್ನೂ ದರ್ಶನಮಾಡುತ್ತಲೇ ಇರುವರು. ವೇದವೇದಾಂತಗಳು ನಾನಾರೀತಿ ಸ್ತುತಿಸುತ್ತಲೇ ಇರುವುವು. ಯೋಗಿಗಳು

ಯಲ್ಲಿಂಗಂ ನಿಗಮಾಷ್ಟಾಂಗಾಃ ಸ್ತುತ್ವಾ ಸ್ತುತ್ವಾಪ್ಯನಂತಧಾ ।
ವಿರತಾ ನ ತದೇವೇದಂ ಲಿಂಗಂ ವಿಶ್ವೇಶ್ವರಾಭಿಧಂ ॥೩೧೪॥

ಯಲ್ಲಿಂಗಂ ಯೋಗಿನೋ ಭಕ್ತ್ಯಾ ಧ್ಯಾತ್ವಾ ಧ್ಯಾತ್ವಾಪ್ಯನೇಕಧಾ ।
ವಿರತಾ ನ ತದೇವೇದಂ ಲಿಂಗಂ ವಿಶ್ವೇಶ್ವರಾಭಿಧಂ ॥೩೧೫॥

ಯಲ್ಲಿಂಗಂ ಪಾರ್ವತೀ ಭಕ್ತ್ಯಾ ಬಿಲ್ವೈಸ್ಸಂಪೂಜ್ಯ ಸಂತತಂ ।
ಮುದಿತಾಭೂತ್ತದೇವೇದಂ ಲಿಂಗಂ ವಿಶ್ವೇಶ್ವರಾಭಿಧಂ ॥೩೧೬॥

ಯಾಗದಾನಾದಿಧರ್ಮಾಣಾಂ ಫಲಂ ಯಲ್ಲಿಂಗದರ್ಶನಂ ।
ತದೇವೇದಂ ಪರಂ ಜ್ಯೋತಿರ್ಲಿಂಗಂ ವಿಶ್ವೇಶ್ವರಾಭಿಧಂ ॥೩೧೭॥

ಯದ್ವಿಶ್ವೇಶ್ವರಲಿಂಗಸ್ಯ ದರ್ಶನಂ ಯಮತರ್ಜನಂ ।
ತದ್ವಿಶ್ವೇಶ್ವರಲಿಂಗಸ್ಯ ತ್ಯಾಗೋ ನ ಮಹತಾಂ ಮತಃ ॥೩೧೮॥

ಯದ್ವಿಶ್ವೇಶ್ವರಲಿಂಗಸ್ಯ ಸ್ಪರ್ಶನಂ ಯಮತರ್ಜನಂ ।
ತದ್ವಿಶ್ವೇಶ್ವರಲಿಂಗಸ್ಯ ತ್ಯಾಗೋ ನ ಮಹತಾಂ ಮತಃ ॥೩೧೯॥

ಯದ್ವಿಶ್ವೇಶ್ವರಲಿಂಗಸ್ಯ ದರ್ಶನಂ ಪಾಪಕರ್ಷಣಂ ।
ತದ್ವಿಶ್ವೇಶ್ವರಲಿಂಗಸ್ಯ ತ್ಯಾಗೋ ನ ಮಹತಾಂ ಮತಃ ॥೩೨೦॥

ಯದ್ವಿಶ್ವೇಶ್ವರಲಿಂಗಸ್ಯ ಭಜನಂ ಮೋಕ್ಷಸಾಧನಂ ।
ತದ್ವಿಶ್ವೇಶ್ವರಲಿಂಗಸ್ಯ ತ್ಯಾಗೋ ನ ಮಹತಾಂ ಮತಃ ॥೩೨೧॥

---

ತಮ್ಮ ಹೃದಯಕಮಲದಲ್ಲಿ ಧ್ಯಾನಿಸುತ್ತಲೇ ಇರುವರು. ಅಷ್ಟಾದರೂ ಅವರಿಗೆ ತೃಪ್ತಿಯುಂಟಾಗಿಲ್ಲ. ॥೩೧೧-೩೧೨-೩೧೩-೩೧೪-೩೧೫॥

ಪಾರ್ವತೀದೇವಿಯು ಇದೇ ಲಿಂಗವನ್ನೇ ಬಿಲ್ವಪತ್ರಾದಿಗಳಿಂದ ಭಕ್ತಿಪೂರ್ವಕವಾಗಿ ಸ್ತುತಿಸಿ ತೃಪ್ತಿಪಟ್ಟಿರುವಳು. ಒಟ್ಟಿನಲ್ಲಿ ಮಾನವರು ತಮ್ಮ ಜೀವಮಾನಕಾಲದಲ್ಲಿ ಆಚರಿಸಿದ ಸಕಲ ಯಜ್ಞದಾನಾದಿ ಸಕಲ ಧರ್ಮಕಾರ್ಯಗಳ ಫಲವಾಗಿ ಹೊಂದುವ ಸುಕೃತವೆಂದರೆ ಈ ವಿಶ್ವೇಶ್ವರಲಿಂಗದ ದರ್ಶನವೇ ಹೊರತು ಮತ್ತೆ ಬೇರೆಯಲ್ಲ. ॥೩೧೬-೩೧೭॥

ವಿಶ್ವೇಶ್ವರಲಿಂಗದ ದರ್ಶನ, ಸ್ಪರ್ಶನ, ಭಜನ ಮುಂತಾದ ಕರ್ಮಗಳು ಯಮನಿಗೂ, ಪಾಪರಾಶಿಗಳಿಗೂ ಭಯಪ್ರದಗಳಾಗುವುವು. ಈ ವಿಶ್ವೇಶ್ವರಲಿಂಗಾರ್ಚ

ಯದ್ವಿಶ್ವೇಶ್ವರಲಿಂಗಸ್ಯ ವೀಕ್ಷಣಂ ಮೋಕ್ಷಭೂಷಣಂ ।
ತದ್ವಿಶ್ವೇಶ್ವರಲಿಂಗಸ್ಯ ತ್ಯಾಗೋ ನ ಮಹತಾಂ ಮತಃ ॥೩೨೨॥

ಸ ಏವ ವಾಜಪೇಯಾದಿ ಸರ್ವಯಾಗೇಷು ದೀಕ್ಷಿತಃ ।
ಯಃ ಪ್ರೇಕ್ಷಯತಿ ವಿಶ್ವೇಶಂ ಚಕ್ಷುಷಾ ಪಕ್ಷಪಾತಿನಾ ॥೩೨೩॥

ಸ ಏವ ಗಜದಾನಾದಿಮಹಾದಾನವಿಚಕ್ಷಣಃ ।
ಯೋ ದದ್ಯಾದ್ಬಿಲ್ವಜಂ ಪತ್ರಂ ಲಿಂಗೇ ವಿಶ್ವೇಶ್ವರಾಭಿಧೇ ॥೩೨೪॥

ಸ ಏವ ಸರ್ವಧರ್ಮಾಣಾಂ ತಪಸಾಮಪಿ ಸಂಶ್ರಯಃ ।
ಯೋ ವಿಶ್ವಸ್ಯ ವ್ಯೋಮಕೇಶಂ ತಂ ವಿಶ್ವೇಶಂ ಸಮುಪಾಶ್ರಯೇತ್ ॥೩೨೫॥

ತಾವದ್ಗರ್ಜತ್ಯಘೌಘಂ ಕೃತಾಂತೋಽಪಿ ಭಟೈಸ್ಸಹ ।
ಯಾವನ್ನಾಭ್ಯರ್ಚಿತಂ ಭಕ್ತ್ಯಾ ಲಿಂಗಂ ವಿಶ್ವೇಶ್ವರಾಭಿಧಂ ॥೩೨೬॥

ತಾವತ್ತಿಷ್ಠತಿ ಮರ್ತ್ಯೇಷು ಘೋರಸಂಸಾರಶೃಂಖಲಾ ।
ಯಾವನ್ನಾಭ್ಯರ್ಚಿತಂ ಭಕ್ತ್ಯಾ ಲಿಂಗಂ ವಿಶ್ವೇಶ್ವರಾಭಿಧಂ ॥೩೨೭॥

---

ನಾದಿಗಳಿಂದ ಯಮನನ್ನು ಹೆದರಿಸಬಹುದಲ್ಲದೆ ಅನಾಯಾಸವಾಗಿ ಸ್ಥಿರವಾದ ಮುಕ್ತಿಯನ್ನೂ ಗಳಿಸಬಹುದು. ||೩೧೮-೩೧೯-೩೨೦-೩೨೧-೩೨೨||

ವಿಶ್ವೇಶ್ವರಲಿಂಗದ ದರ್ಶನವು ಮೋಕ್ಷಕ್ಕೆ ಅಲಂಕಾರಪ್ರಾಯವೆನಿಸುವುದು. ಅಂತಹ ಶಿವಲಿಂಗದರ್ಶನಮಾಡಿದವನು ವಾಜಪೇಯಾದಿ ಮಹಾಯಾಗದ ಯಜಮಾನನಿಗೆ ಸಮನೆನಿಸುವನು. ಮತ್ತು ಬಿಲ್ವಾದಿಗಳಿಂದ ಈ ಶಿವಲಿಂಗವನ್ನು ಅರ್ಚಿಸಿದವರು ಗಜದಾನವೇ ಮೊದಲಾದ ಮಹಾಯಾಗಗಳ ಫಲವನ್ನು ಪಡೆಯುವರು. ||೩೨೨-೩೨೩-೩೨೪||

ವ್ಯೋಮಕೇಶನೆನಿಸಿದ ಈ ವಿಶ್ವೇಶ್ವರಲಿಂಗಾರ್ಚನೆಗೆ ಮನಗೊಟ್ಟವನು ಸಕಲ ಧರ್ಮಕಾರ್ಯಗಳನ್ನೂ, ಸರ್ವವಿಧವಾದ ತಪಸ್ಸನ್ನೂ ಆಚರಿಸಿದಂತೆಯೇ ಸರಿ. ಹಾಗೆ ಅರ್ಚನೆ ಮಾಡುವ ಪರ್ಯಂತವೂ ಅವನ ಪಾಪರಾಶಿಯೂ, ಯಮಧರ್ಮನೂ ಅವನನ್ನು ಹಿಂಸಿಸುತ್ತಲೇ ಇರುವರು. ಇದರಲ್ಲಿ ಸಂಶಯವಿಲ್ಲ. ||೩೨೫ ೩೨೬||

ವಿಶ್ವೇಶ್ವರಲಿಂಗವನ್ನು ಭಕ್ತಿಯಿಂದ ಅರ್ಚನೆ ಮಾಡುವವರೆಗೆ ಘೋರ

ತಾವಜ್ಜನ್ಮಜರಾಮೃತ್ಯುಮೃತ್ಯುಪಾಶಾಶ್ರಿತೋ ಜನಃ ।
ಯಾವನ್ನಾಭ್ಯರ್ಚಿತಂ ಭಕ್ತ್ಯಾ ಲಿಂಗಂ ವಿಶ್ವೇಶ್ವರಾಭಿಧಂ ॥೩೨೮॥

ತಾವದ್ದುಃಖಾನಿ ಸರ್ವಾಣಿ ಭುಜ್ಯಂತೇ ಮನುಜೈಸ್ಸಹ ।
ಯಾವನ್ನಾಭ್ಯರ್ಚಿತಂ ಭಕ್ತ್ಯಾ ಲಿಂಗಂ ವಿಶ್ವೇಶ್ವರಾಭಿಧಂ ॥೩೨೯॥

ತಾವನ್ಮರಣಸಂತ್ರಾಸಸ್ತಾವಜ್ಜನ್ಮಭಯಂ ಮಹತ್ ।
ಯಾವನ್ನಾಭ್ಯರ್ಚಿತಂ ಭಕ್ತ್ಯಾ ಲಿಂಗಂ ವಿಶ್ವೇಶ್ವರಾಭಿಧಂ ॥೩೩೦॥

ತಾವದ್ಗರ್ಭಗತಾ ತಾವನ್ನಾನಾರೋಗೋದ್ಭವಂ ಭಯಂ ।
ಯಾವನ್ನಾಭ್ಯರ್ಚಿತಂ ಭಕ್ತ್ಯಾ ಲಿಂಗಂ ವಿಶ್ವೇಶ್ವರಾಭಿಧಂ ॥೩೩೧॥

ಪುರಾ ಕೀರ್ತೀಶ್ವರೋ ನಾಮ ರಾಜಾಭೂಚ್ಚಕ್ರಪಾಲಕಃ ।
ಜಾಬಾಲಶ್ರುತಿತತ್ತ್ವಜ್ಞಾನ್ ದದರ್ಶ ಶಿವಪೂಜಕಾನ್ ॥೩೩೨॥

ತಾನ್ ದೃಷ್ಟ್ವಾತಿಪ್ರಯತ್ನೇನ ಪ್ರಣಮ್ಯಾಭ್ಯರ್ಚ್ಯ ಸಾದರಂ ।
ಕೃತಾಂಜಲಿರ್ಮುಕ್ತ್ಯುಪಾಯಂ ಪಪ್ರಚ್ಛ ವಿನಯಾನ್ವಿತಃ ॥೩೩೩॥

---

ಸಂಸಾರದ ಕ್ಲೇಶವೂ, ಜರಾಮೃತ್ಯುಗಳ ಬಾಧೆಯೂ ಮನುಷ್ಯರಿಗೆ ತಪ್ಪುವುದೇ ಇಲ್ಲ. ॥೩೨೭-೩೨೮॥

ವಿಶ್ವೇಶ್ವರಾರ್ಚನೆ ಮಾಡುವವರೆಗೆ ಮನುಷ್ಯರ ಸಕಲದುಃಖಾನುಭವಗಳೂ, ಜನ್ಮಮೃತ್ಯುಗಳ ಭಯವೂ, ನಾನಾರೋಗಾದಿಗಳ ಉಪಟಳವೂ ಕಂಡುಬರುವುದು. ಈಶ್ವರಾರ್ಚನೆ ಮಾಡಿದೊಡನೆಯೇ ಅವೆಲ್ಲವೂ ಸಂಪೂರ್ಣವಾಗಿ ನಾಶವಾಗುವುವು. ॥೩೨೯-೩೩೦-೩೩೧॥

ಹಿಂದೆ ಕೀರ್ತೀಶ್ವರನೆಂಬ ಹೆಸರಿನ ಚಕ್ರವರ್ತಿಯೊಬ್ಬನಿದ್ದನು. ಆತನು ಒಂದುಸಾರಿ ಶಿವಪೂಜಕರೂ ಜಾಬಾಲೋಪನಿಷತ್ತಿನ ಸಾರವನ್ನು ಚೆನ್ನಾಗಿ ತಿಳಿದವರೂ ಆದ ಕೆಲವು ಮಹಾತ್ಮರನ್ನು ಕಂಡು ನಮಸ್ಕರಿಸಿ, ಸುಲಭವಾಗಿ ಮುಕ್ತಿ ದೊರಕುವ ಮಾರ್ಗವನ್ನು ಉಪದೇಶಿಸಬೇಕೆಂದು ವಿನಯದಿಂದ ಕೇಳಿಕೊಂಡನು. ॥೩೩೨-೩೩೩॥

|| ವಿಪ್ರಾ ಊಚುಃ ||

ಕಾಶೀಂ ವಿನಾ ಮುಕ್ತ್ಯುಪಾಯೋ ನ ಕ್ವಾಪೀತಿ ಮುನೀಶ್ವರಾಃ ।
ವದಂತಿ ಶ್ರುತಿತತ್ವಜ್ಞಾಃ ಜಾಬಾಲಾರ್ಥವಿಚಾರಕಾಃ ॥೩೩೪॥

ಕಾಶೀ ಶಿವತನುಸ್ತಸ್ಮಾತ್ ಶೈವಮುಕ್ತಿಪ್ರದಾ ನೃಪ ।
ಕಾಶೀದರ್ಶನಮೇವಾತಃ ಕರ್ತವ್ಯಂ ಮುಕ್ತಿಕಾಂಕ್ಷಿಭಿಃ ॥೩೩೫॥

ರಾಜಸೂಯಾದಿಯಾಗಾನಾಂ ತಪಸಾಮಪಿ ವಸ್ತುತಃ ।
ಕಾಶೀಪ್ರಾಪ್ತಿಃ ಫಲಂ ತಸ್ಮಾತ್ಕಾಶೀ ಸೇವ್ಯಾ ಮುಮುಕ್ಷುಭಿಃ ॥೩೩೬॥

ಕಾಶ್ಯೇಕಾ ಶರಣಂ ರಾಜನ್ ಜನಾನಾಂ ಮೋಕ್ಷಮಿಚ್ಛತಾಂ ।
ತದನ್ಯಚ್ಛರಣಂ ಕ್ವಾಪಿ ನಾಸ್ತಿ ನ ಶ್ರೂಯತೇಽಪಿ ಚ ॥೩೩೭॥

ರಾಜನ್ ಕಾಶೀಂ ವಿನಾನ್ಯತ್ರ ಮುಕ್ತಿರ್ನಾಸ್ತ್ಯೇವ ಸರ್ವಥಾ ।
ಅತೋ ನಾನಾವಿಧೈರ್ಯತ್ನೈಃ ಕಾಶೀ ಪ್ರಾಪ್ಯಾ ಮುಮುಕ್ಷುಭಿಃ ॥೩೩೮॥

ಧರ್ಮಾಃ ಕ್ರಿಯಂತೇ ಬಹುಧಾ ಕಾಶೀಪ್ರಾಪ್ತ್ಯರ್ಥಮಾದರಾತ್ ।
ವಸ್ತುತೋ ಶೇಷಧರ್ಮಾಣಾಂ ಕಾಶೀಪ್ರಾಪ್ತಿಃ ಫಲಂ ಯತಃ ॥೩೩೯॥

---

ಆಗ ಆ ವಿಪ್ರರು ಹೀಗೆಂದರು, "ಎಲೈ ರಾಜನೇ, ಸುಲಭಮುಕ್ತಿಪ್ರಾಪ್ತಿಗೆ ಕಾಶಿಯೇ ಮುಖ್ಯಸೇವನೀಯವಾದುದು ಎಂದು ಜಾಬಾಲೋಪನಿಷತ್ಸಾರವನ್ನು ತಿಳಿದವರು ಹೇಳುತ್ತಾರೆ. ಏಕೆಂದರೆ ಕಾಶಿಯೆಂಬುದು ಈಶ್ವರನ ಒಂದು ದೇಹ ದಂತಿರುವುದು. ಆದಕ್ಕಾಗಿಯೇ ಮುಮುಕ್ಷುಗಳು ಆ ಕ್ಷೇತ್ರದರ್ಶನಮಾಡಬೇಕೆಂದು ಕುತೂಹಲಪಡುತ್ತಿರುವರು. ||೩೩೪-೩೩೫||

ರಾಜಸೂಯಾದಿ ಯಾಗಾಚರಣೆಗೆ ಫಲವೆಂದರೆ ಕಾಶೀಪ್ರಾಪ್ತಿಯೇ. ಮೋಕ್ಷಾರ್ಥಿಗಳಿಗೆ ನಿಜವಾದ ಆಶ್ರಯಸ್ಥಾನವೆಂದರೆ ಕಾಶಿಯೊಂದೇ. ಕಾಶಿಯನ್ನು ಬಿಟ್ಟರೆ ಮುಕ್ತಿಪ್ರದವಾದ ಮತ್ತೊಂದು ಸ್ಥಾನವು ಎಂದಿಗೂ ದೊರೆಯಲಾರದು. ಆದಕ್ಕಾಗಿ ಮೋಕ್ಷಾಪೇಕ್ಷಿಗಳು ನಿಜವಾಗಿಯೂ ಕಾಶಿಯನ್ನು ಹೊಂದಲು ಪ್ರಯತ್ನಿಸಬೇಕು. ||೩೩೬-೩೩೭-೩೩೮||

ಕಾಶೀಪ್ರಾಪ್ತಿಗಾಗಿ ಅನೇಕ ಧರ್ಮಕಾರ್ಯಗಳು ಆಚರಿಸಲ್ಪಡುವುವು. ಧರ್ಮಕಾರ್ಯಗಳಿಗೆ ನಿಜವಾಗಿಯೂ ಕಾಶೀಪ್ರಾಪ್ತಿಯೇ ಫಲವಲ್ಲವೇ. ನಾನಾ

ಕಾಶೀಪ್ರಾಪ್ತಿಃ ಪರಾ ಮುಕ್ತಿಃ ಸ ನಾನಾಧರ್ಮಸಾಧಿತಾ ।
ಸಾ ತತಃ ಸರ್ವಯತ್ನೇನ ಸಾಧನೀಯಾ ಮುಮುಕ್ಷುಭಿಃ ॥೩೪೦॥

ಸಂಸಾರಸಾಗರಂ ಘೋರಮಸಾರಂ ಪಾತಕಾಕರಂ ।
ಕಾಶೀಪ್ರಾಪ್ತಿತರಿಂಪ್ರಾಪ್ಯ ತರಂತಿ ಶಿವತತ್ಪರಾಃ ॥೩೪೧॥

ಸ ಏವ ಭಾಗ್ಯವಾನ್ ಲೋಕೇ ಸ ಏವ ಪುರುಷರ್ಷಭಃ ।
ಯಸ್ಸಂಸಾರಂ ಪರಿತ್ಯಜ್ಯ ಕಾಶೀಂ ಪ್ರಾಪ್ನೋತಿ ಸಾದರಂ ॥೩೪೨॥

ಅಧುನಾ ಶ್ವಃ ಪರಶ್ವೋವಾ ಮರಣಂ ಚೇದ್ಭವಿಷ್ಯತಿ ।
ತದಾ ವೃಥಾಗತಂ ಜನ್ಮ ಕಾಶೀದರ್ಶನವರ್ಜಿತಂ ॥೩೪೩॥

ವೃಥಾ ರಾಜ್ಯಂ ವೃಥಾ ಭೋಗೋ ವೃಥಾ ಪುತ್ರಾ ಧನಾದಿಕಂ ।
ಯದಿ ನ ಪ್ರಾಪ್ಯತೇ ಕಾಶೀ ಶ್ರೀಮಹೇಶತನುಃ ಪರಾ ॥೩೪೪॥

ಸ ಕಾಶೀ ಮಶಕಃ ಶ್ರೇಯಾನ್ ನ ಯಸ್ಯ ಶಮನಾದ್ಭಯಂ ।
ವಯಂ ತು ಶಮನತ್ರಸ್ತಾಸ್ತಸ್ಮಾದಸ್ಯಧಮಾಧಮಾಃ ॥೩೪೫॥

---

ಧರ್ಮಸಾಧಿತವಾದ ಕಾಶೀಪ್ರಾಪ್ತಿಯೇ ಮುಕ್ತಿಸಾಧನ. ಆದ್ದರಿಂದ ಮನುಷ್ಯರು ಶ್ರಮಪಟ್ಟಾದರೂ ಕಾಶಿಯನ್ನು ಹೊಂದಲೇಬೇಕು. ||೩೩೯-೩೪೦||

ಸಂಸಾರವೆಂಬುದು ಒಂದು ಭಯಂಕರವಾದ ಮಡು. ಅದು ಪಾಪಭೂಯಿಷ್ಠವಾದುದು. ಅದನ್ನು ದಾಟಬೇಕಾದರೆ ಕಾಶಿಯೆಂಬ ದೋಣಿ ಬೇಕು. ಯಾವನು ತನ್ನ ಸಂಸಾರದ ಗೊಂದಲವನ್ನು ದೂರಮಾಡಿ ಕಾಶಿಯನ್ನು ಸೇರುವನೋ ಅವನೇ ಧೀರನು. ಆತನೇ ಪುರುಷಶ್ರೇಷ್ಠನು. ||೩೪೧-೩೪೨||

ಈಗಲೋ, ನಾಳೆಯೋ, ಮರುದಿನವೋ ಮನುಷ್ಯನಿಗೆ ಮರಣವು ಸಂಭವಿಸಬಹುದು. ಅಂತಹ ಸಂದರ್ಭದಲ್ಲಿ ಕಾಶಿಯನ್ನು ಸೇರುವುದು ನಿದಾನವಾದರೆ ಆ ಭಾಗ್ಯವು ಅವನಿಗೆ ದೂರವಾಗುವುದು. ಮಹೇಶ್ವರನ ಶರೀರದಂತಿರುವ ಕಾಶಿಯನ್ನು ಹೊಂದದಮೇಲೆ, ಅವನಿಗಿರುವ ರಾಜ್ಯ, ಭೋಗ, ಪುತ್ರಸಂಪತ್ತು ಇವೆಲ್ಲವೂ ವ್ಯರ್ಥವೇ ಸರಿ. ||೨೪೩-೨೪೪||

ಕಾಶಿಯಲ್ಲಿ ವಾಸಿಸುವ ಒಂದು ಸೊಣಕಕ್ಕೂ ಯಮನಿಂದ ಭಯವಿಲ್ಲ. ಹಾಗಿರುವಾಗ ನಾವು ಈ ನಗರಿಯನ್ನು ಬಿಟ್ಟುಹೋಗಿ ಸೊಣಕ್ಕಿಂತಲೂ ಕಮ್ಮಿ

ಕಾಶೀಪ್ರಾಪ್ತ್ಯರ್ಥಮುದ್ಯೋಗಃ ಕೃತೋಽಸ್ಮಾಭಿಸ್ಸುಭೂರಿಶಃ।
ಅನೇಕಜನ್ಮಭಿಃ ಕಾಶೀ ನಾಸ್ಮಾಭಿಃ ಪ್ರಾಪ್ಯತೇ ಧ್ರುವಂ ॥೩೪೬॥

ಅತಃ ಪರಂ ವಯಂ ಯಾಮಃ ಶ್ರೀಶೈಲಂ ಪ್ರತಿ ಸತ್ವರಂ।
ತತ್ರ ಗತ್ವಾ ತಪಶ್ಚರ್ಯಾಂ ಕರಿಷ್ಯಾಮೋ ಯಥಾವಿಧಿ ॥೩೪೭॥

ಅಸ್ಮಾಭಿಃ ಕಲ್ಪಪರ್ಯಂತಂ ತತ್ರ ಕಾರ್ಯಂ ತಪೋಽನ್ನಪ।
ತತಃ ಕಲ್ಪದ್ವಯಂ ಕಾರ್ಯಂ ಕಾಲಹಸ್ತೀಶಸನ್ನಿಧೌ ॥೩೪೮॥

ತತಃ ಕಾಂಚ್ಯಾಂ ಚ ಕರ್ತವ್ಯಂ ಕಲ್ಪತ್ರಯಮನಾಕುಲಂ।
ತತೋಽರುಣಾಚಲೇ ಕಾರ್ಯಂ ತಪಃ ಕಲ್ಪಚತುಷ್ಟಯಂ ॥೩೪೯॥

ತತೋ ವೃದ್ಧಾಚಲೇ ಕಾರ್ಯಂ ಕಲ್ಪಂ ಪಂಚಕಮಾದರಾತ್
ತತಶ್ಚಿದಂಬರೇ ಕಾರ್ಯಂ ಕಲ್ಪಷಟ್ಕಂ ತಪೋಮುದಾ

ಕುಂಭಕೋಣೇ ತತಃ ಕಾರ್ಯಂ ಕಲ್ಪಸಪ್ತಕಮಾದರಾತ್।
ಮಧ್ಯಾರ್ಜುನೇ ತತಃ ಕಾರ್ಯಂ ತಪಃ ಕಲ್ಪಾಷ್ಟಕಂ ಮುದಾ॥೩೫೦॥

ಯಾಗಬೇಕೇ? ಕಾಶೀಪ್ರಾಪ್ತಿಗಾಗಿ ನಾವು ಬಹುಕಾಲ ಕಷ್ಟಪಟ್ಟು ತಪಸ್ಸನ್ನಾಚರಿಸಿದೆವು. ಅನೇಕ ಜನ್ಮಗಳಲ್ಲಿ ನಮಗೆ ಈ ಕಾಶೀವಾಸವೇ ದೊರೆಯಲಿಲ್ಲ. ॥೩೪೫-೩೪೬॥

ಕಾಶೀಪ್ರಾಪ್ತಿಗಾಗಿ ನಾವು ಮೊದಲು ಶ್ರೀಶೈಲದಲ್ಲಿ ಕಲ್ಪಪರ್ಯಂತ ತಪಸ್ಸನ್ನಾಚರಿಸಬೇಕು. ಅಲ್ಲಿಂದ ಮುಂದೆ ಕಾಲಹಸ್ತಿಗೆ ಹೋಗಿ ಎರಡುಕಲ್ಪಪರ್ಯಂತ ಕಾಲಹಸ್ತೀಶ್ವರನ ಸನ್ನಿಧಿಯಲ್ಲಿ ತಪಸ್ಸು ಮಾಡಬೇಕು. ॥೩೪೭-೩೪೮॥

ಕಾಂಚಿಯಲ್ಲಿ ಮೂರು ಕಲ್ಪಗಳೂ, ಅರುಣಾಚಲದಲ್ಲಿ ನಾಲ್ಕುಕಲ್ಪಗಳೂ, ವೃದ್ಧಾಚಲದಲ್ಲಿ ಐದುಕಲ್ಪಗಳೂ, ಚಿದಂಬರಕ್ಷೇತ್ರದಲ್ಲಿ ಆರುಕಲ್ಪಗಳೂ ಕಾಶೀಪ್ರಾಪ್ತಿಗಾಗಿ ತಪಸ್ಸುಮಾಡಿರಬೇಕು. ॥೩೪೯-೩೫೦॥

ಹಾಗೆಯೇ ಕುಂಭಕೋಣಕ್ಷೇತ್ರದಲ್ಲಿ ಏಳು ಕಲ್ಪಗಳೂ, ಮಧ್ಯಾರ್ಜುನಕ್ಷೇತ್ರದಲ್ಲಿ ಎಂಟು ಕಲ್ಪಗಳೂ, ತಪಸ್ಸನ್ನಾಚರಿಸಬೇಕು. ಇದೇ ರೀತಿ ಅಸಂಖ್ಯಾತ

ರಾಜನ್ಮಧ್ಯಾರ್ಜುನಾದೀನಿ ಶಿವಸ್ಥಾನಾನಿ ಕೋಟಿಶಃ ।
ಸಂತಿ ತೇಷ್ವಪಿ ಕರ್ತವ್ಯಂ ತಪೋಽಸ್ಮಾಭಿಃ ಪ್ರಯತ್ನತಃ ॥೩೫೨॥

ಏಕೈಕಂ ಕಲ್ಪಮೇಕತ್ರ ಸ್ಥಿತ್ವಾ ಯತ್ನಪುರಸ್ಸರಂ ।
ತಪೋ ಘೋರತರಂ ಕಾರ್ಯಂ ಕಾಶೀಪ್ರಾಪ್ತ್ಯರ್ಥಮನ್ವಹಂ॥೩೫೩॥

ಪುರಾ ಯಾಗಾದಯೋ ಧರ್ಮಾಃ ಕೃತಾಸ್ಸಂತ್ಯೇವ ಕೋಟಿಶಃ ।
ಅತಃಪರಂ ತಪೋಮಾತ್ರಂ ಕರ್ತವ್ಯಮತಿಯತ್ನತಃ ॥೩೫೪॥

ತತೋಽಸ್ಮಾಭಿರಯತ್ನೇನ ಕಾಶೀ ಪ್ರಾಪ್ತಾ ಭವಿಷ್ಯತಿ ।
ಕಾಶೀ ಸಂಪ್ರಾಪ್ತಿಮಾತ್ರೇಣ ಭವಾನೋ ನಿರ್ಭಯಾಸ್ತತಃ ॥೩೫೫॥

ತಾವದಸ್ತಿ ಭಯಂ ರಾಜನ್ ಯಾವತ್ಕಾಶೀ ನ ಲಭ್ಯತೇ ।
ಕಾಶೀ ದೈವಾದ್ಯದಿ ಪ್ರಾಪ್ತಾ ಗತಮೇವ ಭಯಂ ತದಾ ॥೩೫೬॥

ಪುರಾ ಬಹೂನಿ ಜನ್ಮಾನಿ ಪ್ರಾಪ್ತಾನ್ಯಸ್ಮಾಭಿರೀದೃಶೈಃ ।
ಅತೋಽತ್ಯಲ್ಪಾನಿ ಜನ್ಮಾನಿ ಪ್ರಾಪ್ತವ್ಯಾನಿ ನೃಪೋತ್ತಮ ॥೩೫೭॥

ರಾಜಂಸ್ತ್ವಯಾ ಕೃತೈವಾಸ್ತಿ ತಪಶ್ಚರ್ಯಾ ವಿಧಾನತಃ ।
ಶಿವಸ್ಥಾನೇಷು ಸರ್ವೇಷು ಕಾಶೀಪ್ರಾಪ್ತ್ಯರ್ಥಮಾದರಾತ್ ॥೩೫೮॥

ವಾದ ಶಿವಕ್ಷೇತ್ರಗಳು ಎಲ್ಲೆಲ್ಲಿ ಗೋಚರವಾಗುತ್ತವೆಯೋ ಅಲ್ಲೆಲ್ಲಾ ಬಹುಕಾಲ ತಪಸ್ಸನ್ನಾಚರಿಸಬೇಕು. ॥೩೫೧-೩೫೨॥

ಒಂದೊಂದು ಶಿವಕ್ಷೇತ್ರದಲ್ಲಿಯೂ ಒಂದೊಂದು ಕಲ್ಪಪರ್ಯಂತತಪಸ್ಸನ್ನಾಚರಿಸಬೇಕು. ನಾವು ಹಿಂದೆ ಕಾಶೀ ಪ್ರಾಪ್ತ್ಯರ್ಥವಾಗಿ ಅನೇಕ ಯಾಗಗಳನ್ನೂ, ಧರ್ಮಕಾರ್ಯಗಳನ್ನೂ ನೆರವೇರಿಸಿರುವೆವು ಈಗ ಮಾಡಬೇಕಾಗಿರುವುದು ತಪಸ್ಸೊಂದೇ. ॥೩೫೩-೩೫೪॥

ಆದಾದನಂತರ ನಮಗೆ ಪ್ರಯತ್ನವಿಲ್ಲದೆ ಕಾಶೀವಾಸವು ಲಭಿಸುವುದು ಅಲ್ಲಿಯ ವಾಸದಿಂದಲೇ ನಮಗಿರುವ ಭಯವೆಲ್ಲಾ ತೊಲಗುವುದು. ಅಲ್ಲಿನವರೆಗೆ ಭಯವು ತಪ್ಪುವುದೇ ಇಲ್ಲ. ॥೩೫೫-೩೫೬॥

ಹಿಂದೆ ಅನೇಕ ಜನ್ಮಗಳನ್ನು ನಾವು ಹೀಗೆಯೇ ಕಳೆದಿರುವೆವು. ಇನ್ನು ಮುಂದೆ ನಮಗೆ ಇಷ್ಟು ಜನ್ಮಗಳು ಬರುವಂತಿಲ್ಲ. ಆದ್ದರಿಂದ ಎಲೈ ರಾಜನೇ,

ಶ್ರೀ ಕಾಶೀಪ್ರಾಪ್ತಿಮುದ್ದಿಶ್ಯ ವಿಧಿವದ್ಯತ್ನಪೂರ್ವಕಂ ।
ತಪೋಭಿನ್ನಾಃ ಕೃತಾ ರಾಜಂಸ್ತ್ವಯಾ ಧರ್ಮಾಶ್ಚ ಕೋಟಿಶಃ ॥೩೫೯॥

ಅತಃಪರಮನೇನೈವ ಜನ್ಮನಾ ತವ ಭೂಪತೇ ।
ಕಾಶೀಪ್ರಾಪ್ತಿರಯತ್ನೇನ ಭವಿಷ್ಯತಿ ನ ಸಂಶಯಃ ॥೩೬೦॥

ಭಾಗ್ಯವಾನಸಿ ಧನ್ಯೋಽಸಿ ಕೃತಾರ್ಥೋಽಸಿ ಮಹೀಪತೇ ।
ಕಾಶೀ ಪ್ರಾಪ್ತಾ ತ್ವಯಾ ಯಸ್ಮಾದನೇನೈವ ಹಿ ಜನ್ಮನಾ ॥೩೬೧॥

ಸಂಪ್ರಾಪ್ಯ ಕಾಶೀಂ ಭೂಪಾಲ ಸ್ವಧರ್ಮಮಪರಿತ್ಯಜನ್ ।
ನಿತ್ಯಯಾತ್ರಾದಿಕರ್ಮಾಣಿ ಕುರು ಯತ್ನೇನ ಸಂತತಂ ॥೩೬೨॥

ಬಹವೋ ನಿಯಮಾಸ್ಸಂತಿ ರಾಜನ್ ಕಾಶೀನಿವಾಸಿನಾಂ ।
ತದ್ಧರ್ಮಾಚರಣಂ ಕಾರ್ಯಂ ಯತ್ನಪೂರ್ವಕಮುನ್ನಹಂ ॥೩೬೩॥

ಕಾಶೀಪ್ರಾಪ್ತಾ ಮಯಾ ಕಾಶ್ಯಾಂ ಸ್ಥಾತವ್ಯಂ ಸ್ವೇಚ್ಛಯೇತಿ ಧೀಃ ।
ನ ಕರ್ತವ್ಯಾ ಭ್ರಮೇಣಾಪಿ ಸಾ ಕಾಶೀ ಕಠಿಣಾ ಯತಃ ॥೩೬೪॥

ನೀನೂ ಸಹ ಕಾಶೀಪ್ರಾಪ್ತಿಗಾಗಿ ನಾನು ಹೇಳಿದಂತಹ ಶಿವಕ್ಷೇತ್ರಗಳಲ್ಲಿ ಹೋಗಿ ತಪಸ್ಸುಮಾಡು ||೩೫೭-೩೫೮||

ಅಲ್ಲದೆ ಕಾಶೀಪ್ರಾಪ್ತಿಗಾಗಿಯೇ ನೀನು ಪ್ರಯತ್ನಪೂರ್ವಕವಾಗಿ ಅನೇಕ ತಪಸ್ಸುಗಳನ್ನೂ, ಧರ್ಮಕಾರ್ಯಗಳನ್ನೂ ಆಚರಿಸಿರುವೆ. ತಪಸ್ಸನ್ನೂ ನಡೆಸುವುದಾದರೆ ಈ ಜನ್ಮದಲ್ಲಿಯೇ ನಿನಗೆ ಕಾಶೀವಾಸವು ದೊರಕುವುದರಲ್ಲಿ ಸಂಶಯವಿಲ್ಲ. ||೩೫೯-೩೬೦||

ಎಲೈ ರಾಜನೇ, ನಿನ್ನ ಕರ್ಮಾಚರಣೆಯ ಫಲವಾಗಿ ಈ ಜನ್ಮದಲ್ಲಿಯೇ ನೀನು ಕಾಶಿಯನ್ನು ಸೇರುವೆ. ಆದರಿಂದ ನೀನೇ ಧನ್ಯ ಮತ್ತು ಸುಕೃತಿ. ಏಕೆಂದರೆ ಅಲಭ್ಯವಾಗಿರುವ ವಸ್ತುವನ್ನು ನೀನು ಅನಾಯಾಸವಾಗಿ ಪಡೆಯುವೆ. ನೀನು ಕಾಶಿಯನ್ನು ಸೇರಿದಮೇಲೆ ಧರ್ಮಿಷ್ಠನಾಗಿ ನಿತ್ಯ ಕರ್ಮಗಳನ್ನು ಬಿಡದೆ ನಡೆಸುತ್ತಿರು ||೩೬೧-೩೬೨||

ಕಾಶಿಯಲ್ಲಿ ವಾಸಿಸುವವರಿಗೆ ನಿಯಮಗಳು ಬಹಳವಾಗಿವೆ. ಪ್ರಯತ್ನಪೂರ್ವಕವಾಗಿ ಅವೆಲ್ಲವನ್ನೂ ನೀನು ನಡೆಸು. ಕಾಶಿಯನ್ನು ಹೊಂದಿದಮೇಲೆ

ಯಾತ್ರಾದಿರತಚಿತ್ತಾನಾಂ ಸ್ವಸ್ವಧರ್ಮರತಾತ್ಮನಾಂ ।
ಕಾಶೀವಾಸೋ ಮುಕ್ತಿಹೇತುರ್ನಾನ್ಯೇಷಾಂ ಪೃಥಿವೀಪತೇ ॥೩೬೫॥

ಉದ್ಧೂಳನತ್ರಿಪುಂಡ್ರಾಭ್ಯಾಂ ತಥಾ ರುದ್ರಾಕ್ಷಧಾರಣಾತ್ ।
ವಿಶ್ವೇಶ್ವರಾಭ್ಯರ್ಚನಾಚ್ಚ ಮಾಮಾ ಪ್ರಮದ ಭೂಪತೇ ॥೩೬೬॥

ಜ್ಞಾನವಾಪೀ ಜಲಸ್ನಾನಾತ್ ಜ್ಞಾನೇಶಾಭ್ಯರ್ಚನಾದಪಿ ।
ವಿಶ್ವೇಶ್ವರಾಭ್ಯರ್ಚನಾಚ್ಚ ಮಾ ಮಾ ಪ್ರಮದ ಭೂಪತೇ ॥೩೬೭॥

ಧುಂಡೀಶಪೂಜನಾತ್ತದ್ವದ್ದಂಡಪಾಣೀಶಪೂಜನಾತ್ ।
ವಿಶ್ವೇಶ್ವರಾಭ್ಯರ್ಚನಾಚ್ಚ ಮಾ ಮಾ ಪ್ರಮದ ಭೂಪತೇ ॥೩೬೮॥

ಆನಂದಭೈರವಾರ್ಚಾತಃ ಕುಮಾರಸ್ಯಾಪಿ ಪೂಜನಾತ್ ।
ವಿಶ್ವೇಶ್ವರಾಭ್ಯರ್ಚನಾಚ್ಚ ಮಾ ಮಾ ಪ್ರಮದ ಭೂಪತೇ ॥೩೬೯॥

ಅವಿಮುಕ್ತೇಶ್ವರಾರ್ಚಾತಸ್ತಥಾ ನಂದೀಶಪೂಜನಾತ್ ।
ವಿಶ್ವೇಶ್ವರಾಭ್ಯರ್ಚನಾಚ್ಚ ಮಾ ಮಾ ಪ್ರಮದ ಭೂಪತೇ ॥೩೭೦॥

ನಾನು ಕೃತಾರ್ಥನಾದೆನು ಎಂದು ಭಾವಿಸಿ ಸ್ವೇಚ್ಛೆಯಾಗಿ ವರ್ತಿಸಬೇಡ. ಆ ವಿಧವಾದ ಭ್ರಾಂತಿಯನ್ನು ಬಿಡು ಕಾಶೀವಾಸವು ಬಹು ಕಠಿನವಾದುದು.॥೩೬೩-೩೬೪॥

ತೀರ್ಥಯಾತ್ರೆಗಳಲ್ಲಿ ಆಸಕ್ತಿಹೊಂದಿದವರಿಗೂ, ಸ್ವಸ್ವಧರ್ಮಗಳಲ್ಲಿ ನಿರತರಾದವರಿಗೂ ಕಾಶೀವಾಸವು ಮುಕ್ತಿಹೇತುವೆನಿಸುವುದು. ಉಳಿದೆಲ್ಲರಿಗೂ ಕಾಶೀ. ವಾಸದಿಂದ ಫಲ ಸಿಗಲಾರದು. ಭಸ್ಮಮಾರ್ಜನ, ತ್ರಿಪುಂಡ್ರಧಾರಣ, ರುದ್ರಾಕ್ಷಿಭೂಷಣ ಇವುಗಳನ್ನು ಮಾಡಿಕೊಂಡು ಸದಾ ವಿಶ್ವೇಶ್ವರಾರಾಧನೆಮಾಡುತ್ತಾ ಕಾಲಕಳೆಯಬೇಕು. ॥೩೬೫-೩೬೬॥

ಜ್ಞಾನವಾಪಿಯಲ್ಲಿ ಸ್ನಾನ, ಜ್ಞಾನೇಶ್ವರ ದೇವತಾಪೂಜೆ, ಧುಂಡೀಶ್ವರ ಪೂಜೆ, ದಂಡಪಾಣೀಶ್ವರ ಪೂಜೆ ಇವುಗಳನ್ನು ಮಾಡುತ್ತಾ ವಿಶ್ವೇಶ್ವರನನ್ನು ತಪ್ಪದೆ ಅರ್ಚಿಸುತ್ತಿರಬೇಕು. ॥೩೬೭-೩೬೮॥

ಆನಂದಭೈರವೇಶ್ವರ, ಕುಮಾರಸ್ವಾಮಿ, ಅವಿಮುಕ್ತೇಶ್ವರ, ನಂದೀಶ್ವರ ಈ ಶಿವಲಿಂಗಗಳನ್ನು ಪೂಜಿಸಿ ವಿಶ್ವೇಶ್ವರನನ್ನೂ ಸದಾ ಧ್ಯಾನಿಸುತ್ತಿರಬೇಕು. ॥೩೬೯-೩೭೦॥

ರುದ್ರಾಧ್ಯಾಯಜಪಾತ್ತದ್ವತ್ಪಂಚಾಕ್ಷರಜಪಾದಪಿ ।
ವಿಶ್ವೇಶ್ವರಾಭ್ಯರ್ಚನಾಚ್ಚ ಮಾ ಮಾ ಪ್ರಮದ ಭೂಪತೇ ॥೩೭೧॥

ಭೃಂಗೀಶದರ್ಶನಾತ್ತದ್ವತ್ತಾರಕೇಶಸ್ಯ ದರ್ಶನಾತ್ ।
ವಿಶ್ವೇಶ್ವರಾಭ್ಯರ್ಚನಾಚ್ಚ ಮಾ ಮಾ ಪ್ರಮದ ಭೂಪತೇ ॥೩೭೨॥

ಭವಾನೀದರ್ಶನಾತ್ತದ್ವಚ್ಛಿವಾಶಂಕರದರ್ಶನಾತ್ ।
ವಿಶ್ವೇಶ್ವರಾಭ್ಯರ್ಚನಾಚ್ಚ ಮಾ ಮಾ ಪ್ರಮದ ಭೂಪತೇ ॥೩೭೩॥

ಮಣಿಕರ್ಣೀಜಲಸ್ನಾನಾನ್ಮಣಿಕರ್ಣೀಶಪೂಜನಾತ್ ।
ವಿಶ್ವೇಶ್ವರಾಭ್ಯರ್ಚನಾಚ್ಚ ಮಾ ಮಾ ಪ್ರಮದ ಭೂಪತೇ ॥೩೭೪॥

ವೀರಕುಂಡಜಲಸ್ನಾನಾಚ್ಛ್ರೀವೀರೇಶ್ವರದರ್ಶನಾತ್ ।
ವಿಶ್ವೇಶ್ವರಾಭ್ಯರ್ಚನಾಚ್ಚ ಮಾ ಮಾ ಪ್ರಮದ ಭೂಪತೇ ॥೩೭೫॥

ವಸಿಷ್ಠೇಶ್ವರಪೂಜಾತೋ ವಾಮದೇವಸ್ಯ ದರ್ಶನಾತ್ ।
ವಿಶ್ವೇಶ್ವರಾಭ್ಯರ್ಚನಾಚ್ಚ ಮಾ ಮಾ ಪ್ರಮದ ಭೂಪತೇ ॥೩೭೬॥

ಚಂದ್ರಕುಂಡಜಲಸ್ನಾನಾಚ್ಛ್ರೀಚಂದ್ರೇಶ್ವರದರ್ಶನಾತ್ ।
ವಿಶ್ವೇಶ್ವರಾಭ್ಯರ್ಚನಾಚ್ಚ ಮಾ ಮಾ ಪ್ರಮದ ಭೂಪತೇ ॥೩೭೭॥

ಶ್ರೀಮತ್ಪಶುಪತೀಶಸ್ಯ ದರ್ಶನಾತ್ಪೂಜನಾತ್ತಥಾ ।
ವಿಶ್ವೇಶ್ವರಾಭ್ಯರ್ಚನಾಚ್ಚ ಮಾ ಮಾ ಪ್ರಮದ ಭೂಪತೇ ॥೩೭೮॥

ರುದ್ರಾಧ್ಯಾಯಜಪ, ಶಿವಪಂಚಾಕ್ಷರೀಜಪ, ಭೃಂಗೀಶ್ವರದರ್ಶನ, ತಾರಕೇಶ್ವರದರ್ಶನ ಇವುಗಳನ್ನು ನಡೆಸುತ್ತಾ ವಿಶ್ವೇಶ್ವರಲಿಂಗಾರ್ಚನೆಮಾಡಬೇಕು. ॥೩೭೧-೩೭೨॥

ಭವಾನೀದರ್ಶನ, ಶಿವಶಂಕರದರ್ಶನ, ಮಣಿಕರ್ಣಿಕಾಸ್ನಾನ, ಮಣಿಕರ್ಣೀಶ್ವರಪೂಜೆ ಇವುಗಳನ್ನು ನಡೆಸುತ್ತಾ ವಿಶ್ವೇಶ್ವರಾರಾಧನೆಮಾಡುತ್ತಿರು ॥೩೭೩-೩೭೪॥

ವೀರಕುಂಡಜಲಸ್ನಾನ, ವೀರೇಶ್ವರದರ್ಶನ, ವಸಿಷ್ಠೇಶ್ವರಪೂಜೆ, ವಾಮದೇವದರ್ಶನ ಇವುಗಳನ್ನು ನಡೆಸುತ್ತಾ ವಿಶ್ವೇಶ್ವರನನ್ನು ಅರ್ಚಿಸುತ್ತಿರು. ॥೩೭೫-೩೭೬॥

ಚಂದ್ರಕುಂಡಜಲಸ್ನಾನ, ಚಂದ್ರೇಶ್ವರ ದರ್ಶನ, ಪಶುಪತೀಶ್ವರದರ್ಶನ

ಆಮರ್ದಕೇಶಾರ್ಚನತಃ ಪಾಪಭಕ್ಷೇಶಪೂಜನಾತ್ ।
ವಿಶ್ವೇಶ್ವರಾಭ್ಯರ್ಚನಾಚ್ಚ ಮಾ ಮಾ ಪ್ರಮದ ಭೂಪತೇ ॥೩೭೯॥

ಕಾಲಕುಂಡಜಲಸ್ನಾನಾತ್ಕಾಲಭೈರವದರ್ಶನಾತ್ ।
ವಿಶ್ವೇಶ್ವರಾಭ್ಯರ್ಚನಾಚ್ಚ ಮಾ ಮಾ ಪ್ರಮದ ಭೂಪತೇ ॥೩೮೦॥

ನವಗ್ರಹೇಶಪೂಜಾತಃ ಕಾಲೇಶಾಭ್ಯರ್ಚನಾದಪಿ ।
ವಿಶ್ವೇಶ್ವರಾಭ್ಯರ್ಚನಾಚ್ಚ ಮಾ ಮಾ ಪ್ರಮದ ಭೂಪತೇ ॥೩೮೧॥

ಕೃತ್ತಿವಾಸೇಶ್ವರಾರ್ಚಾತಃ ಶ್ರೀರತ್ನೇಶ್ವರದರ್ಶನಾತ್ ।
ವಿಶ್ವೇಶ್ವರಾಭ್ಯರ್ಚನಾಚ್ಚ ಮಾ ಮಾ ಪ್ರಮದ ಭೂಪತೇ ॥೩೮೨॥

ಶಿವಗಂಗಾಜಲಸ್ನಾನಾದಾಗ್ನೀಧ್ರೇಶ್ವರದರ್ಶನಾತ್ ।
ವಿಶ್ವೇಶ್ವರಾಭ್ಯರ್ಚನಾಚ್ಚ ಮಾ ಮಾ ಪ್ರಮದ ಭೂಪತೇ ॥೩೮೩॥

ಕಾರ್ಕೋಟಕಕುಂಡಸ್ನಾನಾಚ್ಚ ಕಾರ್ಕೋಟೇಶಸ್ಯ ದರ್ಶನಾತ್ ।
ವಿಶ್ವೇಶ್ವರಾಭ್ಯರ್ಚನಾಚ್ಚ ಮಾ ಮಾ ಪ್ರಮದ ಭೂಪತೇ ॥೩೮೪॥

ಮತ್ಸ್ಯೋದರೀಜಲಸ್ನಾನಾಚ್ಛ್ರೀಮದೋಂಕಾರದರ್ಶನಾತ್ ।
ವಿಶ್ವೇಶ್ವರಾಭ್ಯರ್ಚನಾಚ್ಚ ಮಾ ಮಾ ಪ್ರಮದ ಭೂಪತೇ ॥೩೮೫॥

ಮತ್ತು ಆರಾಧನ ಇವುಗಳನ್ನು ನೆರವೇರಿಸುತ್ತಾ ವಿಶ್ವೇಶ್ವರಲಿಂಗಸ್ಮರಣೆಮಾಡುತ್ತಿರು. ॥೩೭೭-೩೭೮॥

ಆಮರ್ದಕೇಶ್ವರಪೂಜೆ, ಪಾಪಭಕ್ಷೇಶ್ವರಾರಾಧನೆ, ಕಾಲಕುಂಡಜಲಸ್ನಾನ, ಕಾಲಭೈರವದರ್ಶನ ಇವುಗಳನ್ನು ಆಚರಿಸುತ್ತಾ ವಿಶ್ವೇಶ್ವರಲಿಂಗವನ್ನು ಧ್ಯಾನಿಸುತ್ತಿರು. ॥೩೭೯-೩೮೦॥

ನವಗ್ರಹೇಶ್ವರ, ಕಾಲೇಶ್ವರ, ಕೃತ್ತಿವಾಸೇಶ್ವರ, ರತ್ನೇಶ್ವರ ಈ ಲಿಂಗಗಳನ್ನು ದರ್ಶನಮಾಡುತ್ತಾ ವಿಶ್ವೇಶ್ವರಲಿಂಗವನ್ನು ಪೂಜಿಸುತ್ತಿರು. ॥೩೮೧-೩೮೨॥

ಶಿವಗಂಗಾಸ್ನಾನ, ಆಗ್ನೀಧ್ರೇಶ್ವರದರ್ಶನ, ಕಾರ್ಕೋಟಕಕುಂಡಸ್ನಾನ ಕಾರ್ಕೋಟೇಶ್ವರದರ್ಶನ ಇವುಗಳನ್ನು ನೆರವೇರಿಸುತ್ತಾ ವಿಶ್ವೇಶ್ವರದರ್ಶನಮಾಡುತ್ತಿರು. ॥೩೮೩-೩೮೪॥

ಮತ್ಸ್ಯೋದರೀಜಲಸ್ನಾನ, ಓಂಕಾರೇಶ್ವರಪೂಜೆ, ಪಿಲಿಪ್ಪಿಲಾತೀರ್ಥಸ್ನಾನ,

ಪಿಲಿಪ್ಪಿಲಾಜಲಸ್ನಾನಾತ್ತ್ರಿಲೋಚನಸಮರ್ಚನಾತ್ ।
ವಿಶ್ವೇಶ್ವರಾಭ್ಯರ್ಚನಾಚ್ಚ ಮಾ ಮಾ ಪ್ರಮದ ಭೂಪತೇ ॥೩೮೬॥

ಸೋಮೇಶತೀರ್ಥಸ್ನಾನಾಚ್ಚ ತಥಾ ಸೋಮೇಶದರ್ಶನಾತ್ ।
ವಿಶ್ವೇಶ್ವರಾಭ್ಯರ್ಚನಾಚ್ಚ ಮಾ ಮಾ ಪ್ರಮದ ಭೂಪತೇ ॥೩೮೭॥

ಕೇದಾರಕುಂಡಸ್ನಾನಾಚ್ಚ ತಥಾ ಕೇದಾರದರ್ಶನಾತ್ ।
ವಿಶ್ವೇಶ್ವರಾಭ್ಯರ್ಚನಾಚ್ಚ ಮಾ ಮಾ ಪ್ರಮದ ಭೂಪತೇ ॥೩೮೮॥

ದುರ್ಗಾಕುಂಡಜಲಸ್ನಾನಾತ್ತಥಾ ದುರ್ಗಾಸಮರ್ಚನಾತ್ ।
ವಿಶ್ವೇಶ್ವರಾಭ್ಯರ್ಚನಾಚ್ಚ ಮಾ ಮಾ ಪ್ರಮದ ಭೂಪತೇ ॥೩೮೯॥

ಸಿದ್ಧೇಶ್ವರಾಭ್ಯರ್ಚನಾಚ್ಚ ಕಾಮಾಕ್ಷೀದರ್ಶನಾದಪಿ ।
ವಿಶ್ವೇಶ್ವರಾಭ್ಯರ್ಚನಾಚ್ಚ ಮಾ ಮಾ ಪ್ರಮದ ಭೂಪತೇ ॥೩೯೦॥

ಶಿವಭಕ್ತಪ್ರಣಾಮಾಚ್ಚ ಶಿವಭಕ್ತಾರ್ಚನಾದಪಿ ।
ವಿಶ್ವೇಶ್ವರಾಭ್ಯರ್ಚನಾಚ್ಚ ಮಾ ಮಾ ಪ್ರಮದ ಭೂಪತೇ ॥೩೯೧॥

ಸರ್ವದಾ ಶಿವನಾಮಾನಿ ಜಪ ಕಾಶ್ಯಾಂ ಪ್ರಯತ್ನತಃ ।
ಪೂಜಯಸ್ವ ಮಹಾದೇವಂ ಸಂತತಂ ಬಿಲ್ವಪಲ್ಲವೈಃ ॥೩೯೨॥

---

ತ್ರಿಲೋಚನೇಶ್ವರಪೂಜಾ ಇವುಗಳಮೂಲಕ ವಿಶ್ವೇಶ್ವರನನ್ನು ಪೂಜಿಸುವುದನ್ನು ಮರೆಯಬೇಡ. ||೩೮೫-೩೮೬||

ಸೋಮೇಶ್ವರತೀರ್ಥಸ್ನಾನ, ಸೋಮೇಶ್ವರದರ್ಶನ, ಕೇದಾರಕುಂಡಸ್ನಾನ, ಕೇದಾರೇಶ್ವರದರ್ಶನ ಇವುಗಳನ್ನು ಆಚರಿಸುತ್ತಾ ವಿಶ್ವೇಶ್ವರನನ್ನು ತಪ್ಪದೆ ಆರಾಧಿಸು. ||೩೮೭-೩೮೮||

ದುರ್ಗಾಕುಂಡದಲ್ಲಿ ಸ್ನಾನ, ದುರ್ಗಾದೇವಿಯ ಅರ್ಚನೆ, ಸಿದ್ಧೇಶ್ವರಾಭ್ಯರ್ಚನೆ, ಕಾಮಾಕ್ಷೀದರ್ಶನ ಇವುಗಳನ್ನು ತಪ್ಪದೆ ನೆರವೇರಿಸಬೇಕು. ||೩೮೯-೩೯೦||

ಈಶ್ವರಭಕ್ತರಿಗೆ ವಂದಿಸುತ್ತಾ, ಈಶ್ವರಾರ್ಚಕರನ್ನು ಅರ್ಚಿಸುತ್ತಾ, ಶಿವನಾಮಗಳನ್ನು ಸರ್ವದಾ ಜಪಿಸುತ್ತಾ, ಸಂತತವಾಗಿ ಬಿಲ್ವಪತ್ರೆಗಳಿಂದ ವಿಶ್ವೇಶ್ವರಲಿಂಗವನ್ನು ಆರಾಧಿಸುತ್ತಾ ಕಾಶಿಯಲ್ಲಿ ವಾಸಮಾಡು. ||೩೯೧-೩೯೨||

ಭಸ್ಮನೋದ್ಧೂಲನಂ ಕೃತ್ವಾ ತ್ರಿಪುಂಡ್ರಂ ಚ ತತಃ ಪರಂ ।
ರುದ್ರಾಕ್ಷಧಾರಣಂ ಕೃತ್ವಾ ಜಪ ಮಂತ್ರಂ ಶಿವಾತ್ಮಕಂ ॥೩೯೩॥

ಏತಾನಿ ಶಿವಲಿಂಗಾನಿ ತತಸ್ತಲ್ಲಿಂಗಧಾರಣಂ ।
ಅತ್ಯಾವಶ್ಯಕಮನ್ಯತ್ರಾಪ್ಯತಸ್ತತ್ರ ತು ಕಿಂ ಪುನಃ ॥೩೯೪॥

ಶಿವಲಿಂಗಾನಂಕಿತಾನಾಂ ಕಾಶೀವಾಸಫಲಂ ಕುತಃ ।
ಶಿವಲಿಂಗಾನಂಕಿತಾ ಯೇ ನ ತೇ ತತ್ರಾಧಿಕಾರಿಣಃ ॥೩೯೫॥

ಶೈವಾ ಏವ ನೃಪಶ್ರೇಷ್ಠ ಕಾಶೀವಾಸಾಧಿಕಾರಿಣಃ ।
ನಾನ್ಯೇ ಸತ್ಯಮಿದಂ ಸತ್ಯಮುದ್ಧೃತ್ಯ ಭುಜಮುಚ್ಯತೇ ॥೩೯೬॥

ಅಶೈವಾ ಯದಿ ಮೋಹೇನ ಕಾಶ್ಯಾಂ ಕುರ್ವಂತಿ ಸಂಸ್ಥಿತಿಂ ।
ತದಾ ತೇ ಯಾತನಾಂ ಘೋರಾಂ ಪ್ರಾಪ್ನುವಂತ್ಯೇವ ಭೂರಿಶಃ ॥೩೯೭॥

ನಿತ್ಯಯಾತ್ರಾ ಪಕ್ಷಯಾತ್ರಾ ಮಾಸಯಾತ್ರಾಶ್ಚ ಭೂರಿಶಃ ।
ತಥಾ ವಾರುಷಿಕೀ ಯಾತ್ರಾಃ ಕರ್ತವ್ಯಾಸ್ತತ್ರ ಸಾದರಂ ॥೩೯೮॥

ಶಿವಲಿಂಗದರ್ಶನಕಾಲದಲ್ಲಿ ಭಸ್ಮಲೇಪನ, ತ್ರಿಪುಂಡ್ರಧಾರಣ, ರುದ್ರಾಕ್ಷಿಯ ಅಲಂಕರಣ ಇವುಗಳನ್ನು ಧರಿಸಿಕೊಂಡು, ಶಿವಮಂತ್ರಗಳನ್ನು ಜಪಿಸುತ್ತಿರಬೇಕು. ಎಲ್ಲಿದ್ದರೂ ಶಿವಲಿಂಗಾರ್ಚನೆ, ಶಿವಲಿಂಗಧ್ಯಾನ ಇವುಗಳು ಅತ್ಯಾವಶ್ಯಕವಾಗಿರುವಾಗ ಕಾಶಿಯಲ್ಲಿ ನೆಲಸಿರುವವರಿಗೆ ಹೇಳಬೇಕಾದದ್ದೇನು ? ॥೩೯೩-೩೯೪॥

ಶಿವಲಿಂಗದ ಚಿಹ್ನೆಯನ್ನು ಹೊಂದದವರಿಗೆ ಕಾಶೀವಾಸದ ಫಲವು ದೊರೆಯುಲಾರದು. ಅಲ್ಲದೆ ಅವರು ಅಲ್ಲಿ ವಾಸಿಸಲು ಅರ್ಹರೇ ಅಲ್ಲ ಯಾರು ಶಿವನಲ್ಲಿ ಭಕ್ತಿಯುಳ್ಳವರೋ ಅಂತಹವರೇ ಅಲ್ಲಿ ನೆಲಸಬೇಕೇ ವಿನಾ ಮತ್ತಾರಿಗೂ ಅದು ಫಲಪ್ರದವಾಗಲಾರದು. ॥೩೯೫-೩೯೬॥

ಶಿವನಲ್ಲಿ ಭಕ್ತಿಯಿಲ್ಲದ ಜನರು ಕಾಶಿಯಲ್ಲಿ ವಾಸಿಸಿದರೆ ಅವರು ಘೋರ ಯಾತನೆಗೆ ತುತ್ತಾಗುವರು. ಕಾಶೀನಿವಾಸದಲ್ಲಿ ಆಸೆಯುಳ್ಳ ಜನರು ನಿತ್ಯವೂ ಅಥವಾ ಪಕ್ಷಕ್ಕೊಂದುಸಾರಿ ಅಥವಾ ತಿಂಗಳಿಗೊಂದುದಿನವಾಗಲಿ, ವರ್ಷಕ್ಕೊಂದು ದಿನವಾಗಲಿ ಯಾತ್ರೆಯಮೂಲಕ ಅಲ್ಲಿ ನೆಲಸಬಹುದು. ॥೩೯೭-೩೯೮॥

ಪೂಜನೀಯಾಃ ಪ್ರಯತ್ನೇನ ಶೈವಾಃ ಕಾಶೀನಿವಾಸಿನಃ ।
ನಿತ್ಯಂ ಶಿವಕಥಾಶ್ಚ್ರಾವ್ಯಾಃ ಶ್ರೋತವ್ಯಾಸ್ತತ್ರ ಸಾದರಂ ॥೩೯೯॥

ಯದಿ ಮೋಹಾತ್ಪ್ರಮಾದಾದ್ವಾ ತತ್ರ ಭಸ್ಮಾದಿಧಾರಣಂ ।
ತ್ಯಜೇತ್ಸ ಪಾಪೀ ಬಹುಶೋ ಪ್ರಾಪ್ನುಯಾದ್ಯಾತನಾಂ ಧ್ರುವಂ॥೪೦೦॥

ಕಾಶ್ಯಾಂ ಶಿವಕಥಾ ಏವ ಶ್ರೋತವ್ಯಾಃ ಶ್ರದ್ಧಯಾ ದ್ವಿಜೈಃ ।
ಅನ್ಯಥಾ ಭೈರವೀ ಘೋರಾ ಯಾತನಾ ಭವತಿ ಧ್ರುವಂ ॥೪೦೧॥

ಏವಮುಕ್ತಪ್ರಕಾರೇಣ ನಿಯಮೇನಾನ್ವಹಂ ದ್ವಿಜೈಃ ।
ಕಾಶೀವಾಸೋತಿಯತ್ನೇನ ಕರ್ತವ್ಯೋ ಮುಕ್ತಿಕಾಂಕ್ಷಿಭಿಃ ॥೪೦೨॥

ಕಾಶ್ಯಾಂ ಸ್ಥಿತ್ವಾನ್ಯತೀರ್ಥೇಷು ಗಂತವ್ಯಮಿತಿ ಧೀರ್ನೃಪ ।
ಸ್ವಪ್ನೇಪಿ ನೈವ ಕರ್ತವ್ಯಾ ಸಾ ಪಾತನಕರೀ ಯತಃ ॥೪೦೩॥

ಕಾಶ್ಯಾಂ ಸ್ಥಿತ್ವಾ ನೃಪಶ್ರೇಷ್ಠ ಶಿವಸ್ಯೈವಾರ್ಚನಂ ಕುರು ।
ತಥೈವ ಕಾರ್ಯಮನ್ಯತ್ರಾಪ್ಯತಸ್ತತ್ರ ತು ಕಿಂ ಪುನಃ ॥೪೦೪॥

ಕಾಶೀನಿವಾಸಿಗಳಾದ ಶಿವಪೂಜಕರು ಸರ್ವದಾ ಪೂಜ್ಯರೇ. ಅಲ್ಲಿ ಅವರನ್ನು ಪೂಜಿಸಬೇಕು. ನಿತ್ಯವೂ ಶಿವಕಥೆಗಳನ್ನು ಕೇಳುತ್ತಾ, ಶಿವಲೀಲೆಗಳನ್ನು ಸ್ಮರಿಸಿಕೊಳ್ಳುತ್ತಾ ಶಿವನನ್ನು ತೃಪ್ತಿಪಡಿಸಬೇಕು. ಯಾರು ಮರೆತೋ, ಅಥವಾ ಅಜ್ಞಾನದಿಂದಲೋ ಭಸ್ಮಧಾರಣೆಯನ್ನು ಬಿಡುವರೋ, ಅವರು ಘೋರ ನರಕದುಃಖಕ್ಕೆ ಈಡಾಗುವರು. ॥೩೯೯-೪೦೦॥

ದ್ವಿಜರಾಗಿ ಕಾಶಿಯಲ್ಲಿ ನೆಲಸಿರುವವರು, ಕಾಶಿಯಲ್ಲಿ ಸದಾ ಈಶ್ವರ ಕಥೆಗಳನ್ನೇ ಕೇಳಬೇಕು. ಇಲ್ಲದಿದ್ದರೆ ಅವರು ಕಾಲಭೈರವನಿಂದ ಶಿಕ್ಷೆಪಡೆಯುವರು ॥೪೦೧॥

ಮೋಕ್ಷಗಾಮಿಗಳು ಹಿಂದೆ ಹೇಳಿದ ನಿಯಮದಂತೆ ನಡೆಯುತ್ತಾ ಕಾಶಿಯಲ್ಲಿ ಧೈರ್ಯದಿಂದ ವಾಸಿಸಬೇಕು. ॥೪೦೨॥

ಕಾಶಿಯನ್ನು ಬಿಟ್ಟು ತೀರ್ಥಾಂತರಗಳನ್ನು ಕನಸುಮನಸ್ಸಿನಲ್ಲಿಯೂ ಸ್ಮರಿಸಬಾರದು. ಅದು ಪಾಪಕರವಾದದ್ದು. ಅನ್ಯಕಥೆಗಳಲ್ಲಿ ಆಸಕ್ತರಾದವರಿಗೆ ಭಯಂಕರವಾದ ಯಾತನೆಯೊದಗುವುದು ॥೪೦೩॥

ಆದ್ದರಿಂದ ಎಲೈ ರಾಜನೇ, ನೀನು ಸರ್ವದಾ ಕಾಶಿಯಲ್ಲಿಯೇ ವಿಶ್ವೇಶ್ವರ

ಶೈವಧರ್ಮರತೋ ಭೂತ್ವಾ ಕಾಶ್ಯಾಂ ವಸ ನರಾಧಿಪ ।
ಸ್ವಪ್ನೇಽಪಿ ಶೈವಧರ್ಮಾಣಾಂ ನ ಕುರ್ಯಾಲ್ಲಂಘನಂ ಭ್ರಮಾತ್ ॥೪೦೫॥

ಶೈವಧರ್ಮಾನ್ಪರಿತ್ಯಜ್ಯ ಯಃ ಕಾಶ್ಯಾಂ ಸ್ಥಾತುಮಿಚ್ಛತಿ ।
ಸ ಕಾಲಭೈರವೀಂ ಘೋರಾಂ ಯಾತನಾಂ ಪ್ರಾಪ್ತುಮಿಚ್ಛತಿ ॥೪೦೬॥

ಕಿಂ ಚ ಕಾಶ್ಯಾಂ ನಿವಸತಾಂ ಸತಾಮಪಿ ಸಹಸ್ರಶಃ ।
ಉಪಸರ್ಗಾ ಭವಿಷ್ಯಂತಿ ಸೋಢವ್ಯಾಸ್ತೇಽತಿಯತ್ನತಃ ॥೪೦೭॥

ಉಪಸರ್ಗಪರಾಭೂತೋ ಯಃ ಕಾಶೀಂ ತ್ಯಕ್ತುಮಿಚ್ಛತಿ ।
ತನ್ಮುಖಸ್ಥಾ ಮುಕ್ತಿಭಿಕ್ಷಾ ಪತಿಷ್ಯತ್ಯವನೀತಲೇ ॥೪೦೮॥

ಉಪಸರ್ಗಾತ್ಕೋಟಿಶೋಽಪಿ ಸಂಪ್ರಾಪ್ತಾನ್ನಗಣಯ್ಯ ಯಃ ।
ಕಾಶ್ಯಾಂ ತಿಷ್ಠತಿ ಯತ್ನೇನ ತಸ್ಯ ಮೋಕ್ಷೋ ಭವಿಷ್ಯತಿ ॥೪೦೯॥

ಏಕದೈವೋಪಸರ್ಗಾಶ್ಚೇತ್ಕುರ್ವಂತ್ಯುಚ್ಚಾಟನಂ ತದಾ ।
ಭಿತ್ವಾ ಶಸ್ತ್ರೇಣ ಚರಣೌ ಕಾಶ್ಯಾಂ ಸ್ಥಾತವ್ಯಮಾಸ್ತಿಕೈಃ ॥೪೧೦॥

ಲಿಂಗವನ್ನು ಧ್ಯಾನಿಸುತ್ತಾ ಅನ್ಯತ್ರ ಮನಸ್ಸನ್ನಿಡದೆ ಅಲ್ಲಿಯೇ ವಾಸಮಾಡುತ್ತಿರು. ||೪೦೪||

ರಾಜನೇ, ನೀನು ಶಿವಧರ್ಮಗಳನ್ನು ಪಾಲಿಸುತ್ತಾ ಸ್ವಪ್ನದಲ್ಲಿಯೂ ಶೈವ ಮಾರ್ಗವನ್ನು ಉಲ್ಲಂಘಿಸದೆ ನಡೆಯುತ್ತಿರು. ಯಾರು ಕಾಶಿಯಲ್ಲಿದ್ದುಕೊಂಡು, ಶೈವಧರ್ಮಾತಿರಿಕ್ತಧರ್ಮವನ್ನು ಹೊಂದುವರೋ ಅವರಿಗೆ ಕಾಲಭೈರವಕೃತವಾದ ಘೋರದುಃಖವೇ ಪ್ರಾಪ್ತವಾಗುವುದು. ||೪೦೫-೪೦೬||

ಆದರೆ ಕಾಶಿಯಲ್ಲಿ ವಾಸಮಾಡುವವರಿಗೆ ಅನೇಕವಿಧವಾದ ಉಪಟಳಗಳು ಸಂಭವಿಸುತ್ತವೆ. ಅಂತಹ ತೊಂದರೆಗಳಿಗೆ ಹೆದರಿ ಕಾಶಿಯನ್ನು ಬಿಟ್ಹೋಡುವುದು ಬಹಳ ಅನ್ಯಾಯ. ಅವರ ಕೈಗೆ ದೊರೆತಿದ್ದ ಮುಕ್ತಿಭಿಕ್ಷೆಯೆಂಬುದು ಜಾರಿ ನೆಲಕ್ಕೆ ಬಿದ್ದಂತೆಯೇ ಸರಿ. ||೪೦೭-೪೦೮||

ಯಾರು ಕಾಶಿಯಲ್ಲಿ ಒದಗಿದ ಅನೇಕ ಹಿಂಸೆಗಳನ್ನೂ ಸಹಿಸಿಕೊಂಡಿರುವರೋ ಅವರಿಗೆ ಅನಾಯಾಸವಾಗಿ ಮುಕ್ತಿಯು ಲಭಿಸುವುದು. ಒಂದು ಸಾರಿ ಬಂದ

ಕಾಶೀ ಚೇತ್ತ್ಯಜ್ಯತೇ ಮೋಹಾದುಪಸರ್ಗಾಸಹಿಷ್ಣುನಾ ।
ತದಾ ತಸ್ಯಾಪವರ್ಗಸ್ತು ಕದಾಪಿ ನ ಭವಿಷ್ಯತಿ ॥೪೧೧॥

ಯೇನ ಕೇನಾಪಿ ರೂಪೇಣ ಕಾಶ್ಯಾಂ ಸ್ಥಾತವ್ಯಮಾಸ್ತಿಕೈಃ ।
ಮರ್ತವ್ಯಂ ಚ ಪ್ರಯತ್ನೇನ ಕಾಶ್ಯಾಮೇವ ಮುಮುಕ್ಷುಭಿಃ ॥೪೧೨॥

ಮಹಾಶ್ಮಶಾನಸಂವಿಷ್ಟಂ ಕುಣಪಂ ಸರ್ವಥಾ ನರೈಃ ।
ನಾನ್ಯತ್ರ ನೇಯಂ ತತ್ರೈವ ಭಸ್ಮಸಾತ್ಕಾರ್ಯಮಾದರಾತ್ ॥೪೧೩॥

ಮಹಾಶ್ಮಶಾನಮರಣಂ ಸುರಾಣಾಮಪಿ ದುರ್ಲಭಂ ।
ಅತಸ್ತತ್ರ ಪ್ರಯತ್ನೇನ ಮರ್ತವ್ಯಂ ಮುಕ್ತಿಕಾಂಕ್ಷಿಭಿಃ ॥೪೧೪॥

ಯಾಚ್ಯತೇ ಮರಣಂ ಕಾಶ್ಯಾಂ ಬ್ರಹ್ಮವಿಷ್ಣ್ವಾದಿಭಿಸ್ಸುರೈಃ ।
ಕಿಂ ಪುನರ್ಮಾದೃಶೈರ್ಮರ್ತ್ಯೈರ್ಮರ್ತ್ಯಧರ್ಮಸಮಾಶ್ರಿತೈಃ ॥೪೧೫॥

ಬ್ರಹ್ಮವಿಷ್ಣ್ವಾದಿದೇವಾನಾಂ ಕಾಶ್ಯಾಂ ಮರಣಮಿಚ್ಛತಾಂ ।
ಭವಿಷ್ಯತ್ಯೇವ ಮರಣಂ ಪ್ರಲಯೇ ಸಮುಪಸ್ಥಿತೇ ॥೪೧೬॥

ಹಿಂಸೆಗೆ ಹೆದರಿ ಕಾಶಿಯಿಂದ ಓಡಿಹೋಗುವವನ ಕಾಲುಗಳನ್ನು ಕತ್ತರಿಸಿ ಅವನನ್ನು ಕಾಶಿಯಲ್ಲಿಯೇ ನಿಲ್ಲುವಂತೆ ಮಾಡಬೇಕು. ||೪೦೯-೪೧೦||

ತೊಂದರೆಗಳನ್ನು ಸಹಿಸಲಾರದೆ ಕಾಶಿಯನ್ನು ಬಿಟ್ಟು ಓಡುವವನಿಗೆ ಎಂದೂ ಮುಕ್ತಿಯು ದೊರೆಯಲಾರದು. ಆದ್ದರಿಂದ ಯಾವರೀತಿಯಲ್ಲಾದರೂ-ಕಾಶಿಯಲ್ಲಿಯೇ ವಾಸಮಾಡುತ್ತಿದ್ದು, ಅಲ್ಲಿಯೇ ಪ್ರಾಣಬಿಡಲು ಪ್ರಯತ್ನಿಸಬೇಕು. ||೪೧೧-೪೧೨||

ಕಾಶಿಯೆಂಬ ಮಹಾಶ್ಮಶಾನಗತವಾದ ಹೆಣವನ್ನು ಮತ್ತೆಲ್ಲಿಗೂ ಸಾಗಿಸಬಾರದು. ಅಲ್ಲಿಯೇ ಅದನ್ನು ಸುಟ್ಟು ಭಸ್ಮಮಾಡಬೇಕು. ಮಹಾಶ್ಮಶಾನದಲ್ಲಿ ಸಾಯುವಂತಹ ಸುಕೃತವು ದೇವತೆಗಳಿಗೂ ಸಂಭವಿಸಲಾರದು. ಆದ್ದರಿಂದ ಮೋಕ್ಷಾಪೇಕ್ಷಿಗಳು ಅಲ್ಲಿಯೇ ಮರಣಹೊಂದಲು ಯತ್ನಿಸಬೇಕು. ||೪೧೩-೪೧೪||

ಬ್ರಹ್ಮವಿಷ್ಣ್ವಾದಿದೇವತೆಗಳೂ ಕೂಡ ಕಾಶೀಮರಣವನ್ನು ಬಯಸುತ್ತಾರೆ. ಅಲ್ಲದೆ ಅಂತಹ ಮರಣಾಪೇಕ್ಷಿಗಳಾದ ಅವರಿಗೆ ಪ್ರಲಯಕಾಲದಲ್ಲಿ ಕಾಶೀಮರಣವೇ

ಮರಣಂ ಮಂಗಳಂ ಕಾಶ್ಯಾಂ ಕೇವಲಂ ಮರಣೇ ತತಃ ।
ತದರ್ಥಂ ವಿವಿಧಾ ಯತ್ನಾಃ ಕರ್ತವ್ಯಾ ಮುಕ್ತಿಕಾಂಕ್ಷಿಭಿಃ ॥೪೧೭॥

ನೃಪಪೂರ್ವಂ ಶರೀರಾಣಿ ದಗ್ಧಾನ್ಯನ್ಯತ್ರ ಭೂರಿಶಃ ।
ಶರೀರಮೇಕದಾ ಕಾಶ್ಯಾಂ ದಾಹನೀಯಂ ಪ್ರಯತ್ನತಃ ॥೪೧೮॥

ಕಾಶ್ಯಾಂ ಸ್ವದೇಹದಹನಂ ಯಃ ಕರ್ತುಂ ನಾಭಿವಾಂಛತಿ ।
ಸ ವಂಚಿತೋ ಮಹೇಶೇನ ಸತ್ಯಂ ಸತ್ಯಂ ನರಾಧಿಪ ॥೪೧೯॥

ಸ ಕಾಶ್ಯಾಂ ಕಾಶತಿ ಶ್ರೀಮನ್ಮಹೇಶಾನುಗ್ರಹೇಣ ಯಃ ।
ಸ್ವದೇಹದಹನೋದ್ಭೂತಭಸ್ಮರಾಶಿಂ ವಿಲೋಕಯೇತ್ ॥೪೨೦॥

ಶರೀರಂ ಭಸ್ಮಸಾತ್ಕೃತ್ವಾ ಕಾಶ್ಯಾಂ ತೇನೈವ ಭಸ್ಮನಾ ।
ಯಃ ಕಾಂತಿಂ ಭೂಷಯೇತ್ತೇನ ಸಂಪ್ರಾಪ್ತಂ ಶೇಷಭೂಷಣಂ॥೪೨೧॥

ಯೇ ತ್ಯಕ್ತತನವಃ ಕಾಶ್ಯಾಂ ತ ಏವಾತನವಃ ಪುನಃ ।
ವಾಮಾರ್ಧನಾಮತನವಶ್ಚಂದ್ರಚೂಡಾ ಭವಂತಿ ಚ ॥೪೨೨॥

---

ದೊರಕುತ್ತದೆ. ಹಾಗಿರುವಾಗ ಮಾನವರಾದ ನಾವು ಅದನ್ನು ಬಯಸುವುದು ನ್ಯಾಯವಲ್ಲವೆ! ||೪೧೫-೪೧೭||

ಕಾಶೀಮರಣವೇ ಮಂಗಳಪ್ರದವಾದದ್ದು. ಎಲೈ ರಾಜನೇ, ನಮಗೆ ಹಿಂದೆ ಉಂಟಾಗಿದ್ದ ಸಾವಿರಾರು ದೇಹಗಳನ್ನು ಎಲ್ಲೆಲ್ಲಿಯೋ ಭಸ್ಮಮಾಡಿರುವರು. ಅದರಿಂದಲೇ ನಮಗೆ ಜನ್ಮಪ್ರಾಪ್ತಿಯು ತಪ್ಪಿಲ್ಲ ಈ ಜನ್ಮದಲ್ಲಿಯಾದರೋ ಈ ದೇಹವನ್ನು ಅಲ್ಲಿ ಸುಡಲು ಪ್ರಯತ್ನಿಸಬೇಕು. ||೪೧೭-೪೧೮||

ಯಾರು ಕಾಶಿಯಲ್ಲಿ ತನ್ನ ದೇಹವನ್ನು ಸುಡಿಸಲು ಇಷ್ಟಪಡುವುದಿಲ್ಲವೋ ಅವರು ಮಹೇಶ್ವರನ ಮಾಯೆಗೆ ಸಿಲುಕಿದವರೆಂದು ಹೇಳಬೇಕು. ಯಾರು ಮಹೇಶ್ವರಾನುಗ್ರಹದಿಂದ ಕಾಶಿಯಲ್ಲಿ ಮರಣವನ್ನು ಬಯಸುವರೋ, ಅವರು ತಮ್ಮ ದೇಹವು ಕಾಶಿಯಲ್ಲಿ ಭಸ್ಮವಾಗುವುದನ್ನು ದೇವಸನ್ನಿಧಿಯಲ್ಲಿ ನಿಂತು ನೋಡುವರು. ||೪೧೯-೪೨೦||

ಯಾರು ತಮ್ಮ ದೇಹವನ್ನು ಕಾಶಿಯಲ್ಲಿ ಭಸ್ಮಮಾಡಿ, ಆ ಭಸ್ಮದಿಂದ ತಮ್ಮ ದೇಹವನ್ನು ಅಲಂಕರಿಸಿಕೊಳ್ಳುವರೋ, ಅವರು ನಾಗಾಭರಣದಿಂದ

ದೇವತಾಸಾರ್ವಭೌಮತ್ವಂ ಯಸ್ಯಾಭಿಲಷಿತಂ ಭವೇತ್ ।
ತೇನ ಕಾಶ್ಯಾಂ ತನುತ್ಯಾಗಃ ಕರ್ತವ್ಯಃ ಸಾವಧಾನತಃ ॥೪೨೩॥

ಕಾಶ್ಯಾಂ ಶರೀರಮಾತ್ರಸ್ಯ ತ್ಯಾಗೇನೈವ ಮಹೇಶ್ವರಃ ।
ದತ್ವಾ ಪಂಚಾಕ್ಷರಂ ಶೈವಂ ಸ್ವಸ್ವರೂಪಂ ಪ್ರಯಚ್ಛತಿ ॥೪೨೪॥

ಕಾಶ್ಯಾಂ ತ್ಯಕ್ತಶರೀರೇಣ ಶೈವೇನ ಮದನಾಂತಕಃ ।
ಮಹೇಶೋ ದೃಶ್ಯತೇ ಸಾಕ್ಷಾತ್ಸರ್ವಲಕ್ಷಣಸಂಯುತಃ ॥೪೨೫॥

ಯಸ್ಯ ಸಾಕ್ಷಾನ್ಮಹಾದೇವದರ್ಶನಂ ಸಮುಪೇಕ್ಷಿತಂ ।
ತೇನ ಕಾಶ್ಯಾಂ ಪ್ರಯತ್ನೇನ ಮರ್ತವ್ಯಂ ಮುಕ್ತಿಕಾಂಕ್ಷಿಣಾ ॥೪೨೬॥

ಮರಣಾಭಿಮುಖಃ ಕಾಶ್ಯಾಂ ಯದಾ ಭವತಿ ಮಾನವಃ ।
ತದಾ ಶಿವೋತ್ತರೀಯೇಣ ತಂ ವೀಜಯತಿ ಸೇಶ್ವರೀ ॥೪೨೭॥

ತತಸ್ತತ್ಕರ್ಣಕುಹರೇ ಮಹೇಶಸ್ತಾರಕಂ ಪರಂ ।
ಪಂಚಾಕ್ಷರಂ ಜಪತ್ಯೇವ ಶೈವಂ ಸಂಸಾರತಾರಕಂ ॥೪೨೮॥

ಅಲಂಕೃತರಾದಂತಾಗುವರು. ಯಾರು ಕಾಶಿಯಲ್ಲಿ ದೇಹತ್ಯಾಗಮಾಡುವರೋ, ಅವರು ಮತ್ತೆ ದೇಹಧರಿಸದೆ ಶಂಕರನ ಸಾರೂಪ್ಯವನ್ನು ಪಡೆದು ಶಂಕರನರೂಪವನ್ನೇ ಪಡೆಯುವರು. ॥೪೨೧-೪೨೨॥

ದೇವತೆಗಳಿಗೆಲ್ಲಾ ಚಕ್ರವರ್ತಿಯಾಗಬೇಕೆಂಬ ಆಸೆಯಿರುವವರು ಕಾಶೀಮರಣವನ್ನು ಅಪೇಕ್ಷಿಸಬೇಕು. ಅಲ್ಲಿ ಮೃತರಾಗುವವರಿಗೆ ಶಂಕರನೇ ಪಂಚಾಕ್ಷರ ಮಂತ್ರೋಪದೇಶಮಾಡಿ ಅವರಿಗೆ ಸ್ವಸ್ವರೂಪವನ್ನು ಅನುಗ್ರಹಿಸುವನು. ॥೪೨೩-೪೨೪॥

ಶಂಕರನನ್ನು ಸಾಕ್ಷಾತ್ತಾಗಿ ದರ್ಶನಮಾಡಬೇಕೆಂದಿರುವ ಮಹಾತ್ಮರು ಕಾಶಿಯಲ್ಲಿ ದೇಹತ್ಯಾಗಮಾಡಬೇಕು. ಆದ್ದರಿಂದ ಕಾಶೀಮರಣವು ಮಹಾದೇವನ ದರ್ಶನಕ್ಕೆ ಸಾಕ್ಷಾತ್ಕಾರಣವೆನಿಸುವುದು. ॥೪೨೫-೪೨೬॥

ಕಾಶಿಯಲ್ಲಿ ಮರಣಾಭಿಮುಖನಾಗಿರುವ ಮಾನವನಿಗೆ ಪಾರ್ವತಿಯು ಶಂಕರನ ಉತ್ತರೀಯದಿಂದ ಗಾಳಿ ಬೀಸುವಳು. ಶಂಕರನು ತಾನೇ ಸಾಕ್ಷಾತ್ತಾಗಿ

ತದಾ ಗಣಾಸ್ಸಮಾಗತ್ಯ ದುಂದುಭಿಧ್ವನಿಪೂರ್ವಕಂ ।
ಚಾರುಕಂಜಾಮರಕರಾ ಜಯಶಬ್ದಾನ್ವದಂತಿ ಚ ॥೪೨೯॥

ಮುಕ್ತಿಕನ್ಯಾಂ ತತಸ್ತಸ್ಮೈ ಶಿವೋ ಮಂಗಳಪೂರ್ವಕಂ ।
ದದಾತಿ ಮಂಗಳಾಚಾರಾನ್ಕುರ್ವಂತಿ ಚ ಗಣಾಸ್ತತಃ ॥೪೩೦॥

ಮರಣಂ ಮಂಗಲಂ ತಸ್ಮಾತ್ಕಾಶ್ಯಾಂ ಭವತಿ ಭೂಪತೇ ।
ತಾದೃಶಂ ಮಂಗಳಂ ಕ್ವಾಪಿ ನ ಭವತ್ಯೇವ ಸರ್ವಥಾ ॥೪೩೧॥

ಮುಕ್ತಿಕನ್ಯಾವಿವಾಹಾರ್ಥಂ ಕಾಶ್ಯಾಂ ಮರ್ತವ್ಯಮೇಕದಾ ।
ತತಃಪರಂ ನ ಮರಣಂ ಕದಾಚಿದಪಿ ಜಾಯತೇ ॥೪೩೨॥

ಭವತ್ಯನ್ಯತ್ರ ಮರಣೇ ಬಹುಧಾ ಮರಣವ್ಯಥಾ ।
ನ ಭವತ್ಯೇವ ಮರಣೇ ಕಾಶ್ಯಾಂ ತು ಮರಣವ್ಯಥಾ ॥೪೩೩॥

ಮರಣಾಭಿಮುಖೇ ಜೈವೇ ಕಾಶ್ಯಾಂ ತನ್ಮರಣವ್ಯಥಾಂ ।
ದೂರೀಕರೋತಿ ಕೃಪಯಾ ಮಹೇಶೋ ಮಂಗಳಾಯುತಃ ॥೪೩೪॥

ಬಂದು ಅವನ ಕರ್ಣಕುಹರದಲ್ಲಿ ತಾರಕಮಂತ್ರೋಪದೇಶಮಾಡುವನು. ॥೪೨೭-೪೨೮॥

ಒಡನೆಯೇ ಶಿವಗಣಗಳು ಅಲ್ಲಿಗೆ ಬಂದು ಚಾಮರಾದಿಗಳನ್ನು ಬೀಸುತ್ತಾ ಜಯಶಬ್ದಮಾಡಿ ಅವನನ್ನು ಹಿಂಬಾಲಿಸುವರು. ಒಡನೆಯೇ ಶಂಕರನು ಅವನಿಗೆ ಮೋಕ್ಷಪದವಿಯನ್ನಿತ್ತು ಮಂಗಳ ಸಮಾರಂಭಗಳನ್ನು ಗಣಗಳೊಡಗೂಡಿ ನಡೆಸುವನು. ॥೪೨೯-೪೩೦॥

ಕಾಶೀಮರಣವೇ ಮಂಗಳಪ್ರದವಾದದ್ದು. ಏಕೆಂದರೆ ಮುಕ್ತಿಕನ್ಯೆಯ ವಿವಾಹವು ನಡೆಯುವುದು ಈ ಮರಣದಿಂದಲೇ. ಆದಕ್ಕಾಗಿ ಮಂಗಳಪ್ರದವಾದ ಮರಣವನ್ನು ಬಯಸುವವರು ಕಾಶಿಯಲ್ಲಿಯೇ ಮೃತಿಹೊಂದಬೇಕು.॥೪೩೧-೪೩೨॥

ಕಾಶಿಯನ್ನು ಬಿಟ್ಟು ಇತರಕಡೆಗಳಲ್ಲಿ ಸಾಯುವವರಿಗೆ ಮರಣವ್ಯಥೆಯೂ ಬಹಳವಾಗುವುದು. ಕಾಶೀಮರಣಕಾಲದಲ್ಲಿ ಪರಶಿವನು ಪ್ರಾಣಿಗಳಿಗೆ ಮರಣ ದುಃಖವನ್ನು ತಪ್ಪಿಸಿ ರಕ್ಷಿಸುವನು. ಆದ್ದರಿಂದ ಶಿವಾರಾಧಕನಾಗಿ ಕಾಶಿಯಲ್ಲಿ ಮರಣಹೊಂದುವುದೇ ಅತ್ಯಂತ ಶ್ರೇಯಸ್ಕರ. ॥೪೩೩-೪೩೪॥

ದರ್ಶನಾರ್ಥಂ ಮಹೇಶಸ್ಯ ಶಿವಪ್ರಾಪ್ತ್ಯರ್ಥಮೇವ ಚ ।
ಮರ್ತವ್ಯಂ ಮಾನವೈರ್ಧನ್ಯೈಃ ಕಾಶ್ಯಾಂ ಯತ್ನಪುರಸ್ಸರಂ ॥೪೩೫॥

ನಮಂತಿ ಋಷಯಸ್ಸಿದ್ಧಾ ವಿಷ್ಣುಬ್ರಹ್ಮಾದಯೋಽಪಿ ತಂ ।
ಅತ ಏವ ಪ್ರಯತ್ನೇನ ಕಾಶ್ಯಾಂ ಮರ್ತವ್ಯಮೇಕದಾ ॥೪೩೬॥

ಕಾಶ್ಯಾಂ ಯೇನ ತನುತ್ಯಕ್ತಾ ಶೈವೇನ ಶಿವಸನ್ನಿಧೌ ।
ಜಿತಾನಿ ತೇನ ದುಃಖಾನಿ ವಿವಿಧಾನಿ ನರಾಧಿಪ ॥೪೩೭॥

ಯೇನ ಕಾಶ್ಯಾಂ ತನುತ್ಯಕ್ತಾ ಶಿವವೀಕ್ಷಣಪೂರ್ವಕಂ ।
ನ ತಸ್ಮಾದಧಿಕೋ ಧನ್ಯಃ ಕೋಽಪಿ ಲೋಕೇತ್ರ ದೃಶ್ಯತೇ ॥೪೩೮॥

ಯದ್ವಂಶೇ ಯಃ ಸಮುತ್ಪನ್ನಃ ಕಾಶ್ಯಾಂ ತ್ಯಕ್ಷ್ಯೇದಸೂನ್ಮುದಾ ।
ತದ್ವಂಶಜಾಶ್ಚ ಯತ್ನೇನ ಪೂಜನೀಯಾಃ ಸುರೈರ್ಧ್ರುವಂ ॥೪೩೯॥

ಕಾಶ್ಯಾಂ ತು ಮರಣೇ ಜಾತೇ ಜಾಯತೇ ಯೋ ಮಹೋತ್ಸವಃ ।
ಮಹೋತ್ಸವಸ್ತಾದೃಶಸ್ತು ದುರ್ಲಭೋನ್ಯತ್ರ ಸರ್ವಥಾ ॥೪೪೦॥

---

ಕಾಶಿಯಲ್ಲಿ ಮೃತನಾದವನು ಮಹೇಶ್ವರನನ್ನು ಸಾಕ್ಷಾತ್ತಾಗಿ ದರ್ಶನ ಮಾಡುವನಲ್ಲದೆ ಶಿವಸಾಯುಜ್ಯವನ್ನೂ ಪಡೆಯುವನು. ಅಲ್ಲದೆ ಸಮಸ್ತಋಷಿಗಳಿಂದಲೂ, ವಿಷ್ಣುಬ್ರಹ್ಮಾದಿದೇವತೆಗಳಿಂದಲೂ ನಮಸ್ಕರಿಸಲ್ಪಡುವನು. ಆದ್ದರಿಂದ ಕಾಶೀಮರಣಕ್ಕಾಗಿ ಮನುಷ್ಯನು ತ್ವರೆಪಡಬೇಕು. ॥೪೩೫-೪೩೬॥

ಕಾಶಿಯಲ್ಲಿ ಮೃತನಾದವನು ಸಾಂಸಾರಿಕವಾದ ಸಕಲ ದುಃಖಗಳನ್ನೂ ಗೆದ್ದಂತೆಯೇ. ಈಶ್ವರನ ಅನುಗ್ರಹಕ್ಕೆ ಪಾತ್ರನಾಗಿ ಯಾರು ಕಾಶಿಯಲ್ಲಿ ಪ್ರಾಣತ್ಯಾಗಮಾಡುವರೋ ಅವರಿಗಿಂತ ಧನ್ಯರೆನಿಸಿದವರು ಲೋಕದಲ್ಲಿ ಯಾರು ಸಿಗಲಾರರು. ॥೪೩೭-೪೩೮॥

ಯಾವ ವಂಶದಲ್ಲಿ ಜನಿಸಿದವನು ಕಾಶಿಯಲ್ಲಿ ಮೃತನಾಗುವನೋ ಆ ವಂಶೀಯರೆಲ್ಲಾ ಪೂಜ್ಯರೆನಿಸುವರು. ಕಾಶೀಮರಣದಿಂದ ಆತ್ಮಕ್ಕೆ ಯಾವ ಶಾಂತ್ಯುತ್ಸವಗಳು ದೊರಕುವುವೋ, ಅಷ್ಟು ಸುಖಸಂತೋಷಗಳು ಮತ್ತಾವುದರಿಂದಲೂ ಲಭಿಸಲಾರವು. ॥೪೩೯-೪೪೦॥

ಕಿಮುಕ್ತೇನಾತ್ರ ಬಹುನಾ ಯತ್ನೈರ್ನಾನಾವಿಧೈರಪಿ ।
ಮರ್ತವ್ಯಮೇಕದಾ ಕಾಶ್ಯಾಂ ಮೋಕ್ಷಾರ್ಥಂ ಶಿವಸನ್ನಿಧೌ ॥೪೪೧॥

ಯದ್ಯದುಕ್ತಮಿಹಾಸ್ಮಾಭಿಸ್ತತ್ತತ್ಸರ್ವಂ ಶ್ರುತಿಶ್ರುತಂ ।
ಅತಃ ಕೃತ್ವಾ ಶ್ರುತೌ ಶ್ರದ್ಧಾಂ ಗಚ್ಛ ಕಾಶೀಂ ನರಾಧಿಪ ॥೪೪೨॥

ಇತಿ ತದ್ವಚನಂ ಶ್ರುತ್ವಾ ಸ ಕೀರ್ತೀಶೋ ನರಾಧಿಪಃ ।
ಅತ್ಯಂತತುಷ್ಟಹೃದಯಃ ಪೂಜಯಾಮಾಸ ತಾನ್ ದ್ವಿಜಾನ್ ॥೪೪೩॥

ತತೋ ವಸ್ತ್ರಾಣಿ ರತ್ನಾನಿ ಗಜಾನ್ ಗ್ರಾಮಾಂಶ್ಚ ಕೋಟಿಶಃ ।
ಸ ದದೌ ಶಿವಭಕ್ತೇಭ್ಯಸ್ತದೈವ ಪ್ರೀತಮಾನಸಃ ॥೪೪೪॥

ತತಸ್ತಾನ್ ಪ್ರೇಷಯಾಮಾಸ ಜಾಬಾಲಶ್ರುತಿಪಾರಗಾನ್ ।
ತತೋ ರಾಜ್ಯಂ ದದೌ ಸರ್ವಂ ಸ್ವಪುತ್ರಾಯ ನರಾಧಿಪಃ ॥೪೪೫॥

ಜಾಬಾಲೋಕ್ತಪ್ರಕಾರೇಣ ಸಂಕಲ್ಪಾದೀನಿ ಸಾದರಂ ।
ಕೃತ್ವಾ ಸ ನಿರ್ಯಯೌ ರಾಜಾ ಕಾಶೀಮುದ್ದಿಶ್ಯ ಭಕ್ತಿತಃ ॥೪೪೬॥

ಹೆಚ್ಚು ಹೇಳುವುದರಿಂದೇನು? ನಾನಾಪ್ರಯತ್ನಗಳಿಂದಲಾದರೂ, ಮೋಕ್ಷಪ್ರಾಪ್ತಿಗಾಗಿ ಕಾಶಿಯಲ್ಲಿಯೇ ಮರಣಹೊಂದಬೇಕು. ನಾನು ಇಲ್ಲಿನವರೆಗೂ ಹೇಳಿದ ತತ್ತ್ವವೆಲ್ಲಾ ಶ್ರುತಿಸಂಮತವಾದದ್ದು. ಅದರಲ್ಲಿ ಸಂಶಯವಿಲ್ಲ. ಆದ್ದರಿಂದ ವೇದದಲ್ಲಿ ನಂಬಿಕೆಯಿಟ್ಟಿರುವವರು ನಿಜವಾಗಿಯೂ ಕಾಶೀಪ್ರಯಾಣಮಾಡಿ ಅಲ್ಲಿ ಮೃತಿಹೊಂದಬೇಕು. ರಾಜನೇ, ನೀನೂ ಹಾಗೆ ಮಾಡು. ॥೪೪೧-೪೪೨॥

ಹಾಗೆ ಹೇಳಿದ ಆ ಮುನಿಯ ಮಾತುಗಳನ್ನು ಕೇಳಿದ ಕೀರ್ತೀಶನೆಂಬ ಆ ರಾಜನು ಸಂತುಷ್ಟಾಂತರಂಗವುಳ್ಳವನಾಗಿ, ಆ ಶಿವಪೂಜಕರಾದ ಬ್ರಾಹ್ಮಣರಿಗೆ ವಸ್ತ್ರಗಳು, ರತ್ನಗಳು, ಆನೆಗಳು, ಅಗ್ರಹಾರಾದಿಗಳು ಮುಂತಾದುವುಗಳನ್ನು ದಾನವಾಗಿ ಕೊಟ್ಟು ತೃಪ್ತಿಪಡಿಸಿ ಕಳುಹಿಸಿಕೊಟ್ಟನು. ॥೪೪೩-೪೪೪॥

ಹಾಗೆ ಜಾಬಾಲೋಪನಿಷತ್ತಿನ ತತ್ತ್ವವನ್ನು ಚೆನ್ನಾಗಿ ಅರಿತಿದ್ದ ದ್ವಿಜರನ್ನು ತೃಪ್ತಿಗೊಳಿಸಿ ಕಳುಹಿಸಿದ ಮೇಲೂ ರಾಜನು, ಅವರು ಹೇಳಿದಂತೆಯೇ ಕಾಶೀಗಮನಕ್ಕೆ ಸಂಕಲ್ಪಮಾಡಿ, ರಾಜ್ಯಭಾರವನ್ನು ಮಗನಿಗೆ ಒಪ್ಪಿಸಿ, ಕಾಶೀಪ್ರಯಾಣಕ್ಕೆ ಸನ್ನದ್ಧನಾದನು. ॥೪೪೫-೪೪೬॥

ಕಾಶೀಂ ಪ್ರಾಪ ಸ ಭೂಪಾಲಸ್ತ್ಯಕ್ತಭೂಪಾಲಲಕ್ಷಣಃ ।
ನಿಯಮೇನೈವ ಸತತಂ ಕಾಶೀವಾಸಂ ಚಕಾರ ಹಿ ॥೪೪೭॥

ನಿತ್ಯಮಂತರ್ಗೃಹಾದೀನಿ ಕುರ್ವನ್ ಕರ್ಮಾಣಿ ಭೂಪತಿಃ ।
ಕಾಶ್ಯಾಂ ಶಿವಕಥಾಂ ಶೃಣ್ವನ್ನುವಾಸ ವಿಧಿಪೂರ್ವಕಂ ॥೪೪೮॥

ತತಸ್ತಂ ಭೂಪತಿಂ ದೃಷ್ಟ್ವಾ ಕದಾಚಿತ್ಪಾರ್ವತೀಪತಿಃ ।
ಉಪಸರ್ಗಾನ್ ಸಸರ್ಜೇಶೋ ಭೂಪಚಿತ್ತಂ ಪರೀಕ್ಷಯನ್ ॥೪೪೯॥

ಕಾಶೀತ್ಯಾಗರತಿರ್ಜಾತಾ ತಸ್ಯ ಭೂಪಸ್ಯ ತತ್ಕ್ಷಣೇ ।
ತತೋ ಗಂತುಂ ಸಮುದ್ಯುಕ್ತಃ ಸಸ್ಮಾರ ದ್ವಿಜಶಾಸನಂ ॥೪೫೦॥

ಇತಸ್ತತಸ್ತತೋ ಭೂಪಸ್ತದಾ ಗಚ್ಛನ್ ಪಿಶಾಚವತ್ ।
ದುಃಖಿತೋಽಭೂದಿಯಂ ಕಾಶೀ ಕಥಂ ತ್ಯಾಜ್ಯೇತಿ ಭೂರಿಶಃ ॥೪೫೧॥

ತದಾನೀಂ ಸ್ಥಾತುಮೇಕತ್ರ ಕ್ಷಣಮಾತ್ರಮಪಿ ಸ್ಥಿರಂ ।
ನಾಭೂತ್ತಸ್ಯ ಮನೋ ವಿಪ್ರಾ ಗಂತುಕಾಮಸ್ಯ ಭೂಪತೇಃ ॥೪೫೨॥

ರಾಜಗೌರವವನ್ನೂ ಸಹ ದೂರಮಾಡಿ ನಿಯಮದಿಂದ ಕೂಡಿ ಸಾಮಾನ್ಯ ಮನುಷ್ಯನಂತೆ ಕಾಶಿಯನ್ನು ಸೇರಿ, ಅಲ್ಲಿ ನಿತ್ಯವೂ ಶಿವಾರಾಧನೆ ಶಿವಮಂತ್ರಜಪ, ಶಿವಕಥಾಶ್ರವಣ ಮುಂತಾದುವುಗಳನ್ನು ಕೇಳುತ್ತಾ ವಾಸಮಾಡಲಾರಂಭಿಸಿದನು. ||೪೪೭-೪೪೮||

ಒಂದುಸಾರಿ ಪರಶಿವನು ಈ ವಿಷಯವನ್ನು ತಿಳಿದು ಅವನ ಮನಸ್ಸನ್ನು ಪರೀಕ್ಷಿಸಲೆಳಸಿ, ಅವನಿಗೆ ನಾನಾ ತೊಂದರೆಗಳನ್ನು ಕೊಡಲಾರಂಭಿಸಿದನು. ಅದಕ್ಕೆ ಹೆದರಿ ಆ ರಾಜನು ಕಾಶಿಯನ್ನು ಬಿಟ್ಟು ಹೊರಡಲು ಮನಸ್ಸು ಮಾಡಿದನು. ಆದರೆ ಹಿಂದೆ ಹೇಳಿದ್ದ ಆ ಬ್ರಾಹ್ಮಣರ ಮಾತು ಸ್ಮೃತಿಗೆ ಬಂದಿತು. ||೪೪೯-೪೫೦||

ಆಗ ಆ ರಾಜನು ಪಿಶಾಚಿಯಂತೆ ಅಲ್ಲಲ್ಲಿ ಸುತ್ತಾಡುತ್ತಾ ಇಂತಹ ಪವಿತ್ರ ಕಾಶಿಯನ್ನು ಬಿಡುವುದು ಹೇಗೆಂದು ಪರಿತಪಿಸುತ್ತಾ ಒಂದುಕಡೆ ನಿಲ್ಲದೆ ಓಡಾಡುತ್ತಿದ್ದನು. ಆದರೂ ಅಲ್ಲಿಂದ ಹೊರಡಲಿಷ್ಟವುಳ್ಳ ಆ ರಾಜನಿಗೆ ಮನಶ್ಚಾಂಚಲ್ಯವು ಅತಿಯಾಯಿತು. ||೪೫೧-೪೫೨||

ತತೋಽತಿಚಿಂತಾಸಂಕ್ರಾಂತಃ ಸ್ವಶರೀರಂ ಸರಜ್ಜುಭಿಃ ।
ಬಬಂಧಾತಿಪ್ರಯತ್ನೇನ ತರುಮೂಲಸಮನ್ವಿತಂ

ತತಸ್ತತ್ತರುಮೂಲೇಭ್ಯೋ ದಂದಶೂಕಾ ವಿನಿರ್ಗತಾಃ ।
ರಜ್ಜುಬಂಧಂ ತತಶ್ಛಿತ್ವಾ ಭೂಪಸ್ತಸ್ಮಾದ್ವಿನಿರ್ಗತಃ ॥೪೫೪॥

ತತಸ್ಸಂಪಾದ್ಯ ಕಾಷ್ಠಾನಿ ದತ್ವಾ ವಹ್ನಿಂ ಸ ಭೂಪತಿಃ ।
ವಹ್ನಿಂ ಪ್ರದಕ್ಷಿಣೀಕೃತ್ಯ ಪ್ರವಿಷ್ಟಸ್ತತ್ರ ಪಾವಕೇ ॥೪೫೫॥

ತತಸ್ಸಮಭವದ್ವೃಷ್ಟಿಸ್ತಯಾ ವೃಷ್ಟ್ಯಾ ಸ ಪಾವಕಃ ।
ಶಶಾಮ ಸದ್ಯಸ್ಸಹಸಾ ಮಹಾವೃಷ್ಟಿಜಲಾಪ್ಲುತಃ ॥೪೫೬॥

ತತಃಪರಂ ಸ ಭೂಪಾಲಃ ಕಿಂ ಕಾರ್ಯಮಿತಿ ಚಿಂತಯನ್
ಚಕಾರ ಚರಣಚ್ಛೇದಂ ಸ್ವತ ಏವ ತದಾ ದ್ವಿಜಾಃ ॥೪೫೭॥

ತತಃಪರಂ ಮಹಾದೇವೋ ಧೃತ್ವಾ ಮಾನುಷವಿಗ್ರಹಂ ।
॥೪೫೮॥

---

ಆದರೂ ಆ ರಾಜನು ತನ್ನ ಮನಸ್ಸನ್ನು ತಡೆಯುವ ಉದ್ದೇಶದಿಂದ ತನ್ನ ಕಾಲುಗಳಿಗೆ ಹಗ್ಗವನ್ನು ಕಟ್ಟಿ ಒಂದು ಮರದ ಬುಡಕ್ಕೆ ಬಿಗಿದನು. ಆಗಲೂ ಆವನ ಮನಸ್ಸನ್ನು ಪರೀಕ್ಷಿಸಲು ಆ ಮರದ ಬುಡದಿಂದ ಹಾವುಗಳು ಎದ್ದು ಹಗ್ಗಗಳನ್ನು ಕಡಿದುಹಾಕಿದುವು. ಒಡನೆಯೇ ರಾಜನು ಹೆದರಿ ಅಲ್ಲಿಂದ ಓಡಿ ಹೋದನು. ॥೪೫೩-೪೫೪॥

ಮುಂದೆ ಹೋಗಿ ಇನ್ನು ಬದುಕಿರಬಾರದೆಂದು ಯೋಚಿಸಿ, ಸೌದೆಯನ್ನು ಕೂಡಿಹಾಕಿ, ಬೆಂಕಿಹೊತ್ತಿಸಿ ಅದರಲ್ಲಿ ಬಿದ್ದನು. ಈಶ್ವರೇಚ್ಛೆಯಿಂದ ಒಡನೆಯೇ ದೊಡ್ಡಮಳೆ ಬಂದು ಬೆಂಕಿಯು ಆರಿಹೋಯಿತು. ನೀರು ತುಂಬಿಹೋಯಿತು. ॥೪೫೫-೪೫೬॥

ಆ ರಾಜನು ಮುಂದೇನು ಮಾಡಬೇಕೆಂದು ತಿಳಿಯದೆ ಕಾಶಿಯಲ್ಲಿಯೇ ಬಿದ್ದಿರಬೇಕೆಂದು ಯೋಚಿಸಿ, ಒಡನೆಯೇ ತನ್ನ ಎರಡು ಕಾಲುಗಳನ್ನೂ ಕತ್ತರಿಸಿಕೊಂಡನು. ಇದನ್ನು ನೋಡಿ ಪರಶಿವನು ಸಂತೋಷಪಟ್ಟು, ಮಾನುಷವೇಷಧಾರಿಯಾಗಿ, ಕುದುರೆಯನ್ನು ಹತ್ತಿ ಆ ರಾಜನ ಮುಂದೆ ಬಂದು ನಿಂತನು. ಮತ್ತು ರಾಜನೊಡನೆ ಹೀಗೆಂದನು. ॥೪೫೭-೪೫೮॥

|| ಶ್ರೀಸದಾಶಿವ ಉವಾಚ ||

ಕಿಮರ್ಥಂ ಚರಣೌ ಛಿನ್ನೌ ರಕ್ತಪಂಕಜಸನ್ನಿಭೌ ।
ತವ ರಾಜಶರೀರಸ್ಯ ದುಃಖಮುದ್ಭಾಭವನ್ಮಹತ್ ॥೪೫೯॥

ಸಂಯೋಜಯಾಮಿ ಚರಣೌ ಯಥಾಸ್ಥಾನೇ ನರಾಧಿಪ ।
ಅಹಂ ತು ವೈದ್ಯವಿದ್ಯಾಯಾಂ ಸಮರ್ಥೋಽಸ್ಮಿ ನ ಸಂಶಯಃ ॥೪೬೦॥

ರಾಜಂಸ್ತುರಗಮಾರುಹ್ಯ ಶೀಘ್ರಮಾಯಾಹಿ ಮದ್ಗೃಹಂ ।
ಔಷಧಾನ್ಯಪಿ ದಿವ್ಯಾನಿ ಗೃಹೇ ಸಂತಿ ಸಹಸ್ರಶಃ ॥೪೬೧॥

ಸಂತ್ಯೌಷಧಾನಿ ರಾಜೇಂದ್ರ ತಾದೃಶಾನಿ ಮದಾಲಯೇ ।
ಯೇಷಾಂ ಸಂಯೋಗಮಾತ್ರೇಣ ಸ್ವಾಸ್ಥ್ಯಂ ಭವತಿ ತತ್ಕ್ಷಣೇ ॥೪೬೨॥

ಕಾಶ್ಯಾಂ ಯಾತ್ರಾದ್ಯಕರಣೇ ಪ್ರತ್ಯವಾಯೋ ಭವಿಷ್ಯತಿ ।
ಛಿನ್ನಪಾದಸ್ಯ ತೇ ರಾಜನ್ ಕಥಂ ಯಾತ್ರಾದಿಕಂ ಭವೇತ್ ॥೪೬೩॥

ಕಾಶ್ಯಾಂ ವೈಶ್ವೇಶ್ವರಂ ಲಿಂಗಂ ನ ದೃಷ್ಟಂ ಯೇನ ಯದ್ದಿನೇ ।
ತದ್ದಿನೇ ಜಲಪಾನಂ ಚ ತೇನ ಕರ್ತುಂ ನ ಶಕ್ಯತೇ ॥೪೬೪॥

"ಅಯ್ಯಾ ರಾಜನೇ, ಏತಕ್ಕಾಗಿ ನಿನ್ನ ಕಾಲುಗಳನ್ನು ಕತ್ತರಿಸಿಕೊಂಡೆ? ರಾಜನಾದ ನಿನಗೆ ಅದು ಬಹು ವ್ಯಥೆಯನ್ನುಂಟುಮಾಡಿರುವುದಲ್ಲವೆ? ನಾನು ವೈದ್ಯ ವಿದ್ಯೆಯಲ್ಲಿ ಸಮರ್ಥನೆನಿಸಿರುವೆನು. ಈಗ ಕಡಿದುಬಿದ್ದಿರುವ ಕಾಲುಗಳನ್ನು ಮೊದಲಿದ್ದಂತೆಯೇ ಸೇರಿಸಿಬಿಡುವೆನು. ಯೋಚಿಸಬೇಡ ||೪೫೯-೪೬೦||

ಈಗಲೇ ಈ ಕುದುರೆಯಮೇಲೆ ಕುಳಿತು ನನ್ನ ಮನೆಗೆ ಬಾ. ನನ್ನ ಮನೆಯಲ್ಲಿ ಅನೇಕ ದಿವ್ಯೌಷಧಗಳಿರುವುವು. ಅವುಗಳ ಸ್ಪರ್ಶಮಾತ್ರದಿಂದಲೇ ನಿನ್ನ ಕಾಲುಗಳು ಯಥಾಪೂರ್ವಗಳಾಗುವುವು ನೀನು ಎಂದಿನಂತೆ ಆರೋಗ್ಯಶಾಲಿಯಾಗುವೆ. ||೪೬೧-೪೬೨||

ರಾಜನೇ, ಕಾಲುಗಳನ್ನು ಕಳೆದುಕೊಂಡ ನೀನು ಈ ಊರಿನಲ್ಲಿ ಯಾತ್ರೆ ಮಾಡುವುದು ಹೇಗೆ? ಇಲ್ಲಿರುವ ಶಿವಲಿಂಗದರ್ಶನ ಮಾಡಲು ಏನುಮಾಡುವೆ? ಕಾಶಿಯಲ್ಲಿದ್ದು ವಿಶ್ವೇಶ್ವರಲಿಂಗದರ್ಶನಮಾಡದೆ ಜಲಪಾನವನ್ನೂ ಕೂಡ ಮಾಡ

ವಿಶ್ವೇಶ್ವರಮನಭ್ಯರ್ಚ್ಯ ಜಲಂ ನಾ ಯಃ ಪಿಬೇನ್ನರಃ ।
ಸ ನರಃ ಸರ್ವಥಾ ರಾಜನ್ ರೇತಃಪಾಯೀ ಭವೇದ್ಧ್ರುವಂ ॥೪೬೫॥

ಅತ್ರಾನರ್ಚಿತವಿಶ್ವೇಶಾನ್ ಕ್ರೂರಃ ಶ್ರೀ ಕಾಲಭೈರವಃ ।
ಅಘೋರಯಾತನಾಯುಕ್ತಾನ್ ಕರೋತ್ಯಾಚಂದ್ರತಾರಕಂ ॥೪೬೬॥

ಅತ್ಯಂತಕಠಿನೋ ನೂನಂ ಕಾಶೀವಾಸೋ ನರಾಧಿಪ ।
ಸಹಸಾ ಸುಲಭೋ ನಾಯಂ ಕಾಶೀವಾಸೋಽತಿದುರ್ಘಟಃ ॥೪೬೭॥

ಅಸ್ಯಾಂ ಕಾಶ್ಯಾಂ ನಿವಸತಾಂ ನಿಯಮಾಚರಣಂ ವಿನಾ ।
ನ ಸ್ಥಾತುಂ ಶಕ್ಯತೇ ರಾಜನ್ ಕ್ಷಣಮಾತ್ರಮಪಿ ಧ್ರುವಂ ॥೪೬೮॥

ಕಾಶೀ ದೈವವಶಾತ್ಪ್ರಾಪ್ತಾ ಮನುಷ್ಯೇಣ ತ್ವಯಾ ನೃಪ ।
ಸುರಾಣಾಮಪಿ ಕಾಶೀಯಂ ಭವತ್ಯತ್ಯಂತದುರ್ಲಭಾ ॥೪೬೯॥

ಸಂಪ್ರಾಪ್ಯಾಪಿ ನರಃ ಕಾಶೀಂ ವಿಶ್ವೇಶಂ ಪ್ರತ್ಯಹಂ ಯದಿ ।
ನ ಪೂಜಯತಿ ಯತ್ನೇನ ಯಾತನಾರ್ಥಂ ಸ ನಿರ್ಮಿತಃ ॥೪೭೦॥

ಬಾರದೆಂದು ತಿಳಿದವರು ಹೇಳುವರು. ಹೀಗಿರುವಾಗ ನಿನಗೆ ಕಾಲುಗಳು ಬೇಡವೇ ? ||೪೬೩-೪೬೪||

ವಿಶ್ವೇಶ್ವರಲಿಂಗವನ್ನು ಪೂಜಿಸದೆ ಯಾವನು ಜಲಪಾನಮಾಡುವನೋ ಅವನು ನಿಜವಾಗಿಯೂ ರೇತಸ್ಸನ್ನು ಪಾನಮಾಡಿದಂತೆಯೇ ಸರಿ. ಹಾಗೆ ವಿಶ್ವೇಶ್ವ ರಾರ್ಚನೆ ಮಾಡದವರಿಗೆ ಇಲ್ಲಿರುವ ಕಾಲಭೈರವನು ಕ್ರೂರವಾದ ಹಿಂಸೆಗಳನ್ನು ಕೊಟ್ಟು ಶಿಕ್ಷಿಸುವನು. ||೪೬೫-೪೬೬||

ಈ ಕಾಶೀವಾಸವೆಂಬುದು ಅತ್ಯಂತ ಕ್ಲಿಷ್ಟವಾದದ್ದು. ಇದು ದೊರೆಯು ವುದೂ ಸುಲಭವಲ್ಲ. ಆದರೆ ಇಲ್ಲಿ ವಾಸಿಸುವರು ಇಲ್ಲಿಗೆ ಸಂಬಂಧಿಸಿದ ನಿಯಮ ಗಳನ್ನು ಪಾಲಿಸದೆ ಇರುವುದು ಯುಕ್ತವಲ್ಲ. ಕ್ಷಣಕಾಲವೂ ನಿಯಮವನ್ನು ಮೀರಿ ವಾಸಿಸಕೂಡದು ||೪೬೭-೪೬೮||

ದೇವತೆಗಳಿಗೂ ಸುಲಭವಾಗಿ ದೊರೆಯದ ಈ ಕಾಶಿಯು ಮಾನವನಾದ ನಿನಗೆ ಪೂರ್ವಸುಕೃತವಶದಿಂದ ದೊರೆತಿದೆ. ಹಾಗಿರುವಾಗ ನೀನು ಇಲ್ಲಿ ನಿಯಮವನ್ನು ಪಾಲಿಸದಿದ್ದರೆ ದುಃಖಾನುಭವಕ್ಕಾಗಿ ಕಾಶಿಗೆ ಬಂದಂತಾಗುವುದು ||೪೬೯-೪೭೦||

ಕಾಶ್ಯಾಂ ಪದೇಪದೇ ಸಂತಿ ತೀರ್ಥಾನ್ಯತ್ಯುತ್ತಮಾನ್ಯತಃ ।
ತಾನಿ ತೀರ್ಥಾನಿ ಯತ್ನೇನ ಗತ್ವಾ ಸೇವ್ಯಾನಿ ಸಂತತಂ ॥೪೭೧॥

ಪಾಂಚಮುದ್ರಂ ಮಹಾಪೀಠಂ ವೀರೇಶೋ ಯತ್ರ ತಿಷ್ಠತಿ ।
ತತ್ರ ನಿತ್ಯಂ ಪ್ರಯತ್ನೇನ ಗಂತವ್ಯಂ ಮುಕ್ತಿಕಾಂಕ್ಷಿಭಿಃ ॥೪೭೨॥

ಕಾಲತ್ರಯೇಽಪಿ ಕರ್ತವ್ಯಂ ಶ್ರೀವಿಶ್ವೇಶ್ವರದರ್ಶನಂ ।
ನಿತ್ಯಂ ತಥೈವ ಕರ್ತವ್ಯಂ ಶ್ರೀವಿಶ್ವೇಶ್ವರದರ್ಶನಂ ॥೪೭೩॥

ರಾಜನ್ಭವಂತಿ ಕರ್ಮಾಣಿ ಯತ್ರಾಕ್ಷಯ್ಯಾನಿ ಸಂತತಂ ।
ತತ್ರ ವೀರೇಶ್ವರಸ್ಥಾನೇ ಗಂತವ್ಯಂ ಖಲು ಸರ್ವಥಾ ॥೪೭೪॥

ಯತ್ರ ದತ್ತಂ ಹುತಂ ಜಪ್ತಂ ಅನಂತಫಲದಾಯಕಂ ।
ಅಭೀಪ್ಸಿತಾರ್ಥಾಧಿಕದಂ ತತ್ರ ಕೇನ ನ ಗಮ್ಯತೇ ॥೪೭೫॥

ಶತಕೋಟಿಸಹಸ್ರಾಣಿ ಶತಕೋಟಿಶತಾನಿ ಚ ।
ಲಿಂಗಾನಿ ತೇನ ದೃಷ್ಟಾನಿ ವೀರೇಶೋ ಯೇನ ವೀಕ್ಷಿತಃ ॥೪೭೬॥

ಕಾಶಿಯಲ್ಲಿ ಹೆಜ್ಜೆಹೆಜ್ಜೆಗೂ ತೀರ್ಥಕ್ಷೇತ್ರಗಳು ದೊರೆಯುವುವು. ಅವುಗಳನ್ನು ಪ್ರಯತ್ನಪೂರ್ವಕವಾಗಿ ಸೇವಿಸುತ್ತಿರಬೇಕು ಪಂಚಮುದ್ರಾತ್ಮಕವಾದ ಮಹಾ ಪೀಠವೂ ಅದರಲ್ಲಿ ವೀರೇಶ್ವರಸ್ವಾಮಿಯೂ ಇರುವ ಪ್ರದೇಶವನ್ನು ಮೋಕ್ಷಾರ್ಥಿಗಳು ನಿತ್ಯವೂ ದರ್ಶನಮಾಡುತ್ತಿರಬೇಕು. ||೪೭೧-೪೭೨||

ಶ್ರೀ ವಿಶ್ವೇಶ್ವರದರ್ಶನವನ್ನು ತ್ರಿಕಾಲಗಳಲ್ಲಿಯೂ ಮಾಡಬೇಕು. ಹಾಗೆಯೇ ಸಕಲ ಕರ್ಮಗಳಿಗೂ ಅಕ್ಷಯಫಲವನ್ನು ಕೊಡುವ ವೀರೇಶ್ವರಕ್ಷೇತ್ರಕ್ಕೆ ಸರ್ವದಾ ದರ್ಶನಾರ್ಥವಾಗಿ ಹೋಗಲೇಬೇಕು. ಆದರಿಂದ ಪುಣ್ಯಾವೃದ್ಧಿಯಾಗುವುದು. ||೪೭೩-೪೭೪||

ಈ ಕ್ಷೇತ್ರದಲ್ಲಿ ಹೋಮ, ದಾನ, ಜಪ ಇವುಗಳನ್ನಾಚರಿಸುವುದರಿಂದ. ಅನಂತಾನಂತ ಪುಣ್ಯವು ಲಭಿಸುವುದು. ಅಲ್ಲದೆ ಈ ಕ್ಷೇತ್ರದಲ್ಲಿ ಕೋಟ್ಯಂತರ ಶಿವಲಿಂಗಗಳಿವೆ ಎಂಬುದು ನಿನಗೆ ತಿಳಿದಿರಬಹುದು ವೀರೇಶ್ವರ ದರ್ಶನಮಾಡಿದರೆ ಆ ಶಿವಲಿಂಗದರ್ಶನದ ಫಲವೆಲ್ಲಾ ಕೂಡಿ ಬರುವುದೆಂಬುದನ್ನೂ ಮರೆಯಬೇಡ. ||೪೭೫-೪೭೬||

ಸಾಯಂ ವೀರೇಶಲಿಂಗಸ್ಯ ಯೇನ ಭಕ್ತಿಪುರಸ್ಸರಂ ।
ದರ್ಶನಂ ಕ್ರಿಯತೇ ತೇನ ಸರ್ವಪಾಪೈಃ ಪ್ರಮುಚ್ಯತೇ ॥೪೭೭॥

ಯಸ್ಮಿನ್ವೀರೇಶ್ವರಸ್ಥಾನೇ ಜಪ್ತ್ವಾ ಮಂತ್ರಂ ಷಡಕ್ಷರಂ ।
ಭವಂತಿ ಪಾಪನಿರ್ಮುಕ್ತಾಸ್ತತ್ರ ಗಂತವ್ಯಮನ್ವಹಂ ॥೪೭೮॥

ನಿತ್ಯಂ ಪಶುಪತೀಶಸ್ಯ ದರ್ಶನಂ ಕಾರ್ಯಮಾದರಾತ್ ।
ತಸ್ಯ ದರ್ಶನಮಾತ್ರೇಣ ಪುಣ್ಯವೃದ್ಧಿಃ ಪ್ರಜಾಯತೇ ॥೪೭೯॥

ನಿತ್ಯಮತ್ಯಂತಯತ್ನೇನ ದ್ರಷ್ಟವ್ಯಃ ಕಾಲಭೈರವಃ ।
ಸ್ಥಾತುಂ ನ ಶಕ್ಯತೇ ಕಾಶ್ಯಾಂ ವಿನಾ ಭೈರವದರ್ಶನಂ ॥೪೮೦॥

ಶಾಸ್ತಾ ದೇವರ್ಷಿಸಿದ್ಧಾನಾಂ ಕ್ರೂರಃ ಶ್ರೀ ಕಾಲಭೈರವಃ ।
ತದ್ದರ್ಶನಂ ವಿನಾ ಕಾಶ್ಯಾಂ ಸ್ಥಾತುಮೇವ ನ ಶಕ್ಯತೇ ॥೪೮೧॥

ಯಸ್ಯ ದರ್ಶನಮಾತ್ರೇಣ ಮಹಾಪಾತಕಕೋಟಯಃ ।
ವಿನಶ್ಯಂತಿ ಸ ಯತ್ನೇನ ದ್ರಷ್ಟವ್ಯಃ ಕಾಲಭೈರವಃ ॥೪೮೨॥

---

ಪ್ರದೋಷಕಾಲದಲ್ಲಿ ವೀರೇಶಲಿಂಗವನ್ನು ದರ್ಶನಮಾಡುವುದೂ, ಆ ಸನ್ನಿಧಿಯಲ್ಲಿ ಷಡಕ್ಷರೀ ಮಂತ್ರವನ್ನು ಜಪಿಸುವುದೂ (ಪ್ರಣವಯುಕ್ತವಾದ ಶಿವಪಂಚಾಕ್ಷರೀ ಮಂತ್ರ) ಅಲ್ಲಿ ಸಕಲ ಪಾಪನಿವಾರಕವಾದ ಕರ್ಮಗಳು. ಅದಕ್ಕಾಗಿ ನಿತ್ಯವೂ ಪ್ರದೋಷಕಾಲಕ್ಕೆ ಅಲ್ಲಿ ಸೇರಬೇಕು. ॥೪೭೭-೪೭೮॥

ಹಾಗೆಯೇ ನಿತ್ಯವೂ ಪಶುಪತೀಶ್ವರ, ಕಾಲಭೈರವೇಶ್ವರ ಈ ಶಿವಲಿಂಗಗಳನ್ನು ದರ್ಶನಮಾಡುತ್ತಿರಬೇಕು. ಇದರಿಂದ ಪುಣ್ಯವೃದ್ಧಿಯುಂಟು. ಕಾಲಭೈರವದರ್ಶನವಿಲ್ಲದೆ ಒಂದು ದಿನವೂ ಕಾಶಿಯಲ್ಲಿ ವಾಸಮಾಡಕೂಡದು. ಹಾಗೆ ವಾಸಮಾಡಲು ಸಾಧ್ಯ ಇರುವುದಿಲ್ಲ. ॥೪೭೯-೪೮೦॥

ಕಾಲಭೈರವನು, ದೇವತೆಗಳು, ಋಷಿಗಳು, ಸಿದ್ಧರು ಮೊದಲಾದವರನ್ನೂ ಶಿಕ್ಷಿಸಬಲ್ಲನು ಅಂತಹವನ ದರ್ಶನಮಾಡದೆ ಕಾಶಿಯಲ್ಲಿ ವಾಸಿಸುವುದೇ ಯುಕ್ತವಲ್ಲ. ಅವನ ದರ್ಶನದಿಂದ ಮಹಾ ಪಾಪರಾಶಿಯೆಲ್ಲವೂ ನಾಶವಾಗುವುವು. ಅದಕ್ಕಾಗಿಯೂ ನಿತ್ಯವೂ ಕಾಲಭೈರವನ ದರ್ಶನಮಾಡಬೇಕು. ॥೪೮೧-೪೮೨॥

ಯತ್ರ ಬ್ರಹ್ಮಶಿರಶ್ಛೇದೋ ಭೈರವೇನ ಪುರಾ ಕೃತಃ ।
ತತ್ರ ಶ್ರೀ ಕೃತ್ತಿವಾಸೇಶಃ ಪೂಜನೀಯೋಽನ್ವಹಂ ಮುದಾ ॥೪೮೩॥

ಕೃತ್ತಿವಾಸೇಶಲಿಂಗಾದಿಲಿಂಗಾನಿ ನೃಪಸತ್ತಮ ।
ದ್ರಷ್ಟವ್ಯಾನಿ ಪ್ರಯತ್ನೇನ ಪೂಜನೀಯಾನಿ ಚಾನ್ವಹಂ ॥೪೮೪॥

ತಾನಿ ತಾನಿ ಶಿವಸ್ಥಾನಾನ್ಯನ್ವಹಂ ಯತ್ನಪೂರ್ವಕಂ ।
ಸೇವನೀಯಾನಿ ಗತ್ವೈವ ಸೇವ್ಯಾಶ್ಶೈವಾಶ್ಚ ಸಾದರಂ ॥೪೮೫॥

ಗಮನಂ ತು ವಿನಾ ಪದ್ಭ್ಯಾಂ ನ ಭವತ್ಯೇವ ಸರ್ವಥಾ ।
ಅತೋಽಶ್ವಂ ಶೀಘ್ರಮಾರುಹ್ಯ ಸಮಾಯಾಹಿ ಮದಾಲಯಂ॥೪೮೬॥

ಕಾರಯಿಷ್ಯಾಮ್ಯಹಂ ಶೀಘ್ರಮಶ್ವಸ್ಯಾರೋಹಣಂ ನೃಪ ।
ಯತೋಽಶ್ವಾರೋಹಣೇ ಶಕ್ತಿಸ್ತವ ನಾಸ್ತ್ಯಧುನಾ ತತಃ ॥೪೮೭॥

ಇತಿ ತದ್ವಚನಂ ಶ್ರುತ್ವಾ ದುಃಖಿತೋಽಪಿ ನರಾಧಿಪಃ ।
ಧೃತಧೈರ್ಯೋಽಬ್ರವೀದ್ವಾಕ್ಯಂ ಶಿವಂ ಮಾನುಷವಿಗ್ರಹಂ ॥೪೮೮॥

ಬ್ರಹ್ಮನ ಶಿರಶ್ಛೇದಮಾಡಿದ ಭೈರವನು ನೆಲಸಿರುವ ಸ್ಥಳದಲ್ಲಿ ಕೃತ್ತಿವಾಸೇಶ್ವರ ಮೂರ್ತಿಯನ್ನು ಪ್ರತಿದಿನವೂ ಕಾಶಿಯಲ್ಲಿದ್ದವನು ಪೂಜಿಸುತ್ತಿರಬೇಕು. ಹಾಗೆಯೇ ಅಲ್ಲಿರುವ ಕೃತ್ತಿವಾಸೇಶ್ವರಾದಿ ಶಿವಲಿಂಗಗಳನ್ನು ಪ್ರಯತ್ನಪೂರ್ವಕವಾಗಿ ಆರಾಧಿಸುತ್ತಿರಬೇಕು. ||೪೮೩-೪೮೪||

ಶಿವಸ್ಥಾನಗಳಿಗೆಲ್ಲಾ ಹೋಗುತ್ತಿರಬೇಕು. ಶೈವರನ್ನು ಸರ್ವದಾ ಪೂಜಿಸುತ್ತಿರಬೇಕು. ಸೇವಿಸುತ್ತಿರಬೇಕು. ಈ ಕಾರ್ಯಗಳಿಗೆ ಕಾಲುಗಳಿಲ್ಲದಿದ್ದರೆ ಅವು ನಡೆಯುವುದು ಹೇಗೆ? ಆದ್ದರಿಂದ ಎಲೈ ರಾಜನೇ, ಈಗಲೇ ಕುದುರೆಯನ್ನು ಹತ್ತಿ ನನ್ನ ಮನೆಗೆ ಬಾ. ಕಾಲುಗಳನ್ನು ಸರಿಪಡಿಸುವೆನು. ||೪೮೫-೪೮೬||

ನಿನಗೆ ಕುದುರೆಯಮೇಲೆ ಕುಳಿತುಕೊಳ್ಳುವುದಕ್ಕೂ ಆಗದಿರುವುದರಿಂದ ನಿನ್ನನ್ನು ಈಗ ಹತ್ತಿಸಿ ಕೂರಿಸುವೆನು ಏಳು" ಎಂದು ಆ ಮಾನುಷವೇಷಧಾರಿಯಾದ ಶಂಕರನು ಹೇಳುತ್ತಿರಲು, ಅದನ್ನು ಕೇಳಿ ರಾಜನು ಧೀರನಾಗಿ ಹೀಗೆ ಮಾತುಗಳನ್ನಾಡಲುಪಕ್ರಮಿಸಿದನು. ||೪೮೭-೪೮೮||

॥ ರಾಜೋವಾಚ ॥

ತವೌಷಧಪ್ರಯೋಗೇಷು ಶಕ್ತಿಃ ಪ್ರಾಯೋ ಭವಿಷ್ಯತಿ ।
ಕಿಂ ಪದ್ಭ್ಯಾಂ ಜೀವನೇನಾಪಿ ಕಿಂ ದೇಹೇನಾಪಿ ತದ್ವದ ॥೪೮೯॥

ಮರಿಷ್ಯಾಮ್ಯಧುನೈವಾದ್ಯ ದೇಹಾಪೇಕ್ಷಾ ನ ಮೇ ಧ್ರುವಂ ।
ಕಾಶೀತ್ಯಾಗಾರ್ಥಮಿಚ್ಛಾದ್ಯ ಮಮ ಜಾತಾ ಸಹಸ್ರಧಾ ॥೪೯೦॥

ತಾದೃಶೇಚ್ಛಾಪೀಡಿತೇನ ಛಿನ್ನಂ ಪಾದದ್ವಯಂ ಮಯಾ ।
ವಿಚ್ಛಿನ್ನಚರಣಸ್ಯಾಪಿ ಕಾಶೀತ್ಯಾಗರತಿರ್ಮಮ ॥೪೯೧॥

ಅಶಾಂತಾ ಬಾಧತೇ ಸಾ ಮಾಂ ಕಾಶೀತ್ಯಾಗರತಿಃ ಪುನಃ ।
ಅನೇಕಜನ್ಮತಪಸಾ ಕಾಶೀಪ್ರಾಪ್ತಿ ಮಯಾಧುನಾ ॥೪೯೨॥

ಕಾಶೀತ್ಯಾಗಃ ಕಥಂ ಕಾರ್ಯೋ ಯತ್ತ್ಯಾಗಃ ಪಾಪಸಾಧನಂ ।
ಮಯಾ ಚೇತ್ತ್ಯಜ್ಯತೇ ಕಾಶೀ ಮರ್ತವ್ಯಂ ಯತ್ರ ಕುತ್ರಚಿತ್ ॥೪೯೩॥

ತದಾ ಮರಣದುಃಖಾನಿ ಸೋಢವ್ಯಾನಿ ಕಥಂ ಮಯಾ ।
ಶ್ರೀಕಾಶೀ ಭಿನ್ನದೇಶೇಷು ಬಹುಧೈವ ವೃಶಂ ಮಯಾ ॥೪೯೪॥

"ಮಹಾಪುರುಷನೇ, ನಿನ್ನ ಔಷಧಪ್ರಯೋಗದಿಂದ ನನಗೆ ಶಕ್ತಿಯು ಬಂದೀತು. ಆದರೆ ಈ ಕಾಲುಗಳಿಂದಲೂ, ಈ ದೇಹದಿಂದಲೂ ನನಗೆ ಬರುವ ಪ್ರಯೋಜನವೇನು? ನಿಜವಾಗಿಯೂ ನನಗೆ ಈಗ ದೇಹಾಭಿಮಾನವಿಲ್ಲ. ನನಗೆ ಕಾಶೀತ್ಯಾಗಮಾಡಬೇಕೆಂಬ ಬುದ್ಧಿಯುತ್ಪನ್ನವಾಯಿತು. ಇಂತಹ ನನಗೆ ಈಗ ದೇಹಾಭಿಮಾನವೇ ಇರಬಾರದು. ॥೪೮೯-೪೯೦॥

ಕಾಶೀತ್ಯಾಗಬುದ್ಧಿಯಿರಬಾರದೆಂದೇ ನಾನು ನನ್ನ ಕಾಲುಗಳನ್ನು ಕತ್ತರಿಸಿಕೊಂಡೆನು. ಆದರೂ ಆ ಅಲ್ಪಬುದ್ಧಿಯು ಇನ್ನೂ ನನ್ನಿಂದ ದೂರವಾಗಿಲ್ಲ. ಎಷ್ಟೋ ಜನ್ಮಗಳಲ್ಲಿ ಸಂಪಾದಿಸಿದ ಪುಣ್ಯವಶದಿಂದ ಇಂದು ನನಗೆ ಈ ಕಾಶೀವಾಸವು ಲಭಿಸಿದೆ. ಇದನ್ನು ತ್ಯಾಗಮಾಡುವ ಬುದ್ಧಿಬರುವುದುಚಿತವೇ? ॥೪೯೧-೪೯೨॥

ಪಾಪಸಾಧನೆಗಾಗಿ ಕಾಶಿಯನ್ನು ಬಿಡಬೇಕಾಗಿದೆ ಈಗ ಕಾಶಿಯನ್ನು ಬಿಟ್ಟು ಹೋದರೆ ಎಲ್ಲಿಯೋ ಒಂದುಕಡೆ ನನಗೆ ಮರಣಸಂಭವಿಸುವುದು. ಇದರಿಂದ ಕಾಶೀ

ತತೋ ದುಃಖಾನಿ ಭುಕ್ತಾನಿ ಯಮಲೋಕೇಽಪಿ ಭೂರಿಶಃ ।
ಮನುಷ್ಯದೇಹಮಾಸಾದ್ಯ ಪಾತಕಂ ಕ್ರಿಯತೇ ನರೈಃ ॥೯೫॥

ತೇನ ಪಾಪೇನ ದುರ್ಲಂಘ್ಯಾ ಪ್ರಾಪ್ಯತೇ ಯಮಯಾತನಾ ।
ತ್ಯಜ್ಯತೇ ಯೇನ ಕಾಶೀಯಂ ತೇನ ನ ಪ್ರಾಪ್ಯತೇ ಸುಖಂ ॥೯೬॥

ಗರ್ಭವಾಸಾದಿದುಃಖಾನಿ ಪ್ರಾಪ್ತವ್ಯಾನಿ ನ ಸಂಶಯಃ ।
ನಿತ್ಯಾನಂದಮಯೀ ಕಾಶೀ ಯೇನ ತ್ಯಕ್ತಾ ಭವಿಷ್ಯತಿ ॥೯೭॥

ತೇನಾನಂದಃ ಕಥಂ ಪ್ರಾಪ್ಯೋ ನಿತ್ಯಂ ಯಃ ಪ್ರಾಪ್ಯಮೋದತೇ ।
ವಿಚ್ಛಿನ್ನಚರಣಸ್ಯಾಪಿ ಮಮ ದುಃಖಂ ನ ಜಾಯತೇ ॥೯೮॥

ಕಾಶ್ಯಾಮಾನಂದರೂಪಿಣ್ಯಾಂ ಮಯಾಸ್ಯಾಂ ಸ್ಥೀಯತೇ ಯತಃ ।
ಮಯಾ ನಿಷ್ಕಂಟಕಾ ಸರ್ವಾ ಪೃಥಿವೀ ಪಾಲಿತಾ ಯತಃ ॥೯೯॥

ತದೇದೃಶಂ ಸುಖಂ ನಾಪ್ತಂ ಯತ್ಕಾಶೀವಾಸಸಂಭವಂ ।
ಯದಾ ಮಯಾ ಪುರಾ ರಮ್ಯೇ ರತ್ನಸಿಂಹಾಸನೇ ಸ್ಥಿತಂ ॥೧೦೦॥

ಮರಣವು ನನಗೆ ತಪ್ಪಿದಂತಾಗುವುದು. ಎಷ್ಟೋ ಜನ್ಮಗಳಲ್ಲಿ ನನಗೆ ಅನ್ಯತ್ರ ಮರಣವು ಸಂಭವಿಸಿದೆ. ಈ ಜನ್ಮದಲ್ಲಾದರೂ ಈ ಕಾಶೀಮರಣವು ನನಗೆ ಒದಗಲಿ ಎಂಬುದೇ ನನ್ನ ಮನೋಭಿಲಾಷೆ. ॥೯೩-೯೪॥

ಅನ್ಯತ್ರಮರಣದಿಂದ ನಾನು ಯಮಲೋಕದ ಯಾತನೆಗಳನ್ನೆಲ್ಲಾ ಅನುಭವಿಸಿದೆನು. ಮತ್ತೆ ಮನುಷ್ಯ ದೇಹವೆತ್ತಿ ಪಾಪರಾಶಿಯನ್ನು ಸಂಪಾದಿಸಿದೆನು. ಈಗಲೂ ಕಾಶೀಮರಣವು ತಪ್ಪಿದರೆ ನನಗೆ ನರಕವಾಸವು ತಪ್ಪುವುದೆಂದು ? ॥೯೫-೯೬॥

ಈ ಕಾಶಿಯನ್ನು ಈಗ ಬಿಟ್ಟುಹೋದರೆ ಮತ್ತೆ ಮಾತೃಗರ್ಭವಾಸವು ತಪ್ಪುವಂತಿಲ್ಲ. ನಿತ್ಯಾನಂದವು ಲಭಿಸುವಂತಿಲ್ಲ. ಆದ್ದರಿಂದ ಈಗ ನನಗೆ ಕಾಲಿಲ್ಲದಿದ್ದರೂ ವ್ಯಥೆಯಿಲ್ಲ. ॥೯೭-೯೮॥

ಆನಂದಮಯವಾದ ಈ ಕಾಶಿಯಲ್ಲಿ ವಾಸಮಾಡುತ್ತಿರುವುದರಿಂದ ನನಗೆ ಯಾವ ದುಃಖವೂ ಇಲ್ಲ. ನಾನು ನಿಷ್ಕಂಟಕವಾದ ಪೃಥಿವಿಗೆ ರಾಜನಾಗಿದ್ದು ರಾಜಭೋಗವನ್ನು ಅನುಭವಿಸಿದೆನು, ರತ್ನಸಿಂಹಾಸನದಲ್ಲಿ ಕುಳಿತು ಆನಂದಪಟ್ಟೆನು. ಅದಕ್ಕಿಂತ ಹೆಚ್ಚಿನ ಸಂತೋಷವನ್ನು ಈಗ ಇಲ್ಲಿ ಅನುಭವಿಸುತ್ತಿರುವೆನು. ॥೯೯-೧೦೦॥

ತದೇದೃಶಂ ಸುಖಂ ನಾಪ್ತಂ ಯತ್ಕಾಶೀವಾಸಸಂಭವಂ ।
ನತವೈರಿಶಿರೋರತ್ನೈರ್ಮದಂಘ್ರ್ಯೌ ಪೂರಿತಂ ಯದಾ ॥೫೦೧॥

ತದೇದೃಶಂ ಸುಖಂ ನಾಪ್ತಂ ಯತ್ಕಾಶೀವಾಸಸಂಭವಂ ।
ಯದಾ ಸಾಮಂತಭೂಪಾಲೈಃ ಕೃತಂ ಮತ್ಪಾದಪೂಜನಂ ॥೫೦೨॥

ತದೇದೃಶಂ ಸುಖಂ ನಾಪ್ತಂ ಯತ್ಕಾಶೀವಾಸಸಂಭವಂ ।
ರಂಭಾನಿಭಾಮಿತಸ್ತ್ರೀಭಿಃ ಸೇವಿತೋಽಹಂ ಯದಾ ಮುದಾ ॥೫೦೩॥

ತದೇದೃಶಂ ಸುಖಂ ನಾಪ್ತಂ ಯತ್ಕಾಶೀವಾಸಸಂಭವಂ ।
ಏತಾದೃಶಂ ಸುಖಂ ತ್ಯಕ್ತ್ವಾ ಗಂತುಮಿಚ್ಛಾ ಪ್ರಜಾಯತೇ ॥೫೦೪॥

ಅಭಾಗ್ಯಸ್ಯ ಫಲಂ ನೂನಮಿದಮತ್ರ ನ ಸಂಶಯಃ ॥೫೦೫॥

ಕಾಶ್ಯಾಂ ಸಂತ್ಯಕ್ತಯಾತ್ರಾಣಾಂ ಘೋರಾ ಭೈರವಯಾತನಾ ।
ತ್ವಯಾ ಭವಿಷ್ಯತೀತ್ಯುಕ್ತಂ ತತ್ತಥೈವ ನ ಸಂಶಯಃ ॥೫೦೬॥

ಮಯಾ ತ್ವದ್ಯ ಕೃತಾ ಯಾತ್ರಾ ಸರ್ವಾಪಿ ತದನಂತರಂ ।
ಕಾಶೀತ್ಯಾಗರತಿರ್ಜಾತಾ ತತಶ್ಛಿನ್ನಂ ಪದದ್ವಯಂ ॥೫೦೭॥

ನನ್ನಿಂದ ಪರಾಜಿತರಾದ ಶತ್ರುರಾಜರು ಧನಕನಕರಾಶಿಗಳನ್ನು ತಂದು ನನ್ನ ಪಾದದ ಸಮೀಪದಲ್ಲಿಟ್ಟು ನನಗೆ ಶರಣಾಗತರಾದಾಗಲೂ, ಸಾಮಂತರಾಜರು ನನ್ನ ಪಾದಪೂಜೆಮಾಡಿದಾಗಲೂ ಇಷ್ಟು ಸಂತೋಷವಾಗಿರಲಿಲ್ಲ. ಈ ಕಾಶೀವಾಸದಿಂದ ನನಗೆ ಅಷ್ಟು ಆನಂದವು ಲಭಿಸಿದೆ. ॥೫೦೧-೫೦೨॥

ರಂಭೆಗೆ ಸಮಾನರಾದ ಸುಂದರ ಸ್ತ್ರೀಯರಿಂದ ಸೇವಿತನಾದಾಗಲೂ, ಕಾಶೀವಾಸದಷ್ಟು ಸಂತೋಷವುದಯಿಸಲಿಲ್ಲ. ಅಂತಹ ಕಾಶಿಯನ್ನು ಬಿಟ್ಟುಹೋಗಲು ಈಗ ಮನಸ್ಸು ಮುಂದುವರಿಯುವುದಲ್ಲ. ಇದು ನನ್ನ ದುರದೃಷ್ಟದ ಫಲವಲ್ಲವೇ? ಇದರಲ್ಲಿ ಸಂಶಯವೇನು? ॥೫೦೩-೫೦೪-೫೦೫॥

ಕಾಶಿಯಲ್ಲಿದ್ದು ಶಿವಲಿಂಗಗಳ ದರ್ಶನಾರ್ಥವಾಗಿ ಯಾತ್ರೆಮಾಡದಿದ್ದರೆ ಕಾಲಭೈರವನು ಶಿಕ್ಷಿಸುವನೆಂದು ನೀನು ಹೇಳಿದೆಯಲ್ಲವೆ? ಅದು ನಿಜ. ನಾನಾದರೋ ಈಗ ಅಂತಹ ಯಾತ್ರೆಯನ್ನೆಲ್ಲಾ ಮಾಡಿ ಮುಗಿಸಿರುವೆನು. ಈಗ ಕಾಶೀ

ಅಥುನೋದ್ಧೂಳನಂ ಕೃತ್ವಾ ಸಂಪೂಜ್ಯ ಚ ಸದಾಶಿವಂ ।
ತತಃ ಸ್ವಪ್ರಾಣಾನಹಂ ತ್ಯಕ್ಷ್ಯೇ ಶಿರಶ್ಛೇದಪುರಸ್ಸರಂ ॥೫೦೮॥

ತತೋ ಮರಣಮಾತ್ರೇಣ ಮಹಾದೇವಃ ಕೃಪಾನಿಧಿಃ ।
ಶೈವಂ ಪಂಚಾಕ್ಷರಂ ಮಹ್ಯಂ ತಾರಕಂ ದಾಸ್ಯತಿ ಧ್ರುವಂ ॥೫೦೯॥

ಅದ್ಯ ದ್ರಕ್ಷ್ಯೇ ವಿರೂಪಾಕ್ಷಂ ದಾಕ್ಷಾಯಣ್ಯಾ ಸಮನ್ವಿತಂ ।
ತತ್ಪ್ರೇಕ್ಷಣಾನುಕ್ಷಣೇ ಮೇ ಪ್ರೇಕ್ಷ್ಯೋ ಮೋಕ್ಷೋ ಭವಿಷ್ಯತಿ ॥೫೧೦॥

ಇತ್ಯುಕ್ತ್ವೋದ್ಧೂಳ್ಯ ಸರ್ವಾಂಗಂ ಭಸ್ಮನಾಭ್ಯರ್ಚ್ಯ ಚೇಶ್ವರಂ ।
ಚಕರ್ತ ಚ ಶಿರೋ ರಾಜಾ ಪಶ್ಯತಿ ಶ್ರೀಮಹೇಶ್ವರೇ ॥೫೧೧॥

ತತಃ ಪ್ರಸನ್ನೋ ಭಗವಾನ್ಮಹಾದೇವಃ ಕೃಪಾನಿಧಿಃ ।
ಶಿರಸ್ಸಂಯೋಜಯಾಮಾಸ ಯಥಾಸ್ಥಾನಂ ದ್ವಿಜೋತ್ತಮಾಃ ॥೫೧೨॥

ಚರಣಾವಪಿ ಸಂಯುಕ್ತೌ ಯಥಾಸ್ಥಾನಂ ತತಃಪರಂ ।
ತತೋ ಭೂಪತಿರುತ್ಥಾಯ ದದರ್ಶ ಗಿರಿಜಾಪತಿಂ ॥೫೧೩॥

---

ತ್ಯಾಗಬುದ್ಧಿ ಬಂದುದರಿಂದಲೇ ನನ್ನ ಕಾಲುಗಳನ್ನು ನಾನು ಕತ್ತರಿಸಿಕೊಂಡಿರುವೆನು. ॥೫೦೬-೫೦೭॥

ಈಗ ಭಸ್ಮೋದ್ಧೂಳನಮಾಡಿಕೊಂಡು, ಸದಾಶಿವನನ್ನು ಭಕ್ತಿಯಿಂದರ್ಚಿಸಿ ನನ್ನ ತಲೆಯನ್ನು ನಾನೇ ಕಡಿದುಕೊಂಡು ಸಾಯುವೆನು. ಕೃಪಾಶಾಲಿಯಾದ ಮಹಾದೇವನು ಆಗ ಸಂತೋಷಪಟ್ಟು ಶಿವಪಂಚಾಕ್ಷರಿಯೆಂಬ ತಾರಕಮಂತ್ರವನ್ನು ಉಪದೇಶಿಸಿ ನನ್ನನ್ನು ಇಲ್ಲಿ ಉದ್ಧರಿಸುವನು. ॥೫೦೮-೫೦೯॥

ಈಗ ಮೊದಲು ಪಾರ್ವತೀಸಮೇತನಾದ ವಿರೂಪಾಕ್ಷನ ದರ್ಶನಮಾಡುವೆನು. ಆದರಿಂದಲೇ ನನಗೆ ಪಾರ್ವತೀಪತಿಯ ಕಟಾಕ್ಷಪಾತವು ಲಭಿಸುವುದು" ಎಂದು ಹೇಳಿ ಸರ್ವಾಂಗವನ್ನೂ ಭಸ್ಮದಿಂದ ಲೇಪಿಸಿಕೊಂಡು ಪರಶಿವನನ್ನು ಸ್ಮರಿಸುತ್ತಾ ತನ್ನ ಶಿರಸ್ಸನ್ನು ಕತ್ತರಿಸಿಕೊಂಡನು. ॥೫೧೦-೫೧೧॥

ಒಡನೆಯೇ ಪ್ರಸನ್ನನಾದ ಪರಶಿವನು ದಯೆಯಿಂದ ಕೂಡಿ ಕತ್ತರಿಸಿಬಿದ್ದಿದ್ದ ತಲೆಯನ್ನು ಮುಂಡದೊಡನೆಯೂ, ಕಾಲುಗಳನ್ನು ತೊಡೆಗಳೊಡನೆಯೂ ಜೋಡಿಸಿ

ಅನಂತಭಾನುಸಂಕಾಶಂ ಚಂದ್ರಮೌಲಿಂ ಪಿನಾಕಿನಂ ।
ಪಾರ್ವತೀಯುಕ್ತವಾಮಾಂಗಂ ನಾನಾಭರಣಭೂಷಿತಂ ॥೫೧೪॥

ಚಾರುಚಾಮರಹಸ್ತೇನ ವಿಷ್ಣುನಾ ವಿಧಿನಾಪಿ ಚ ।
ಸಂಸೇವಿತಂ ಗಣವರೈರ್ವಿವಿಧೈಶ್ಚ ಮಹೌಜಸಂ ॥೫೧೫॥

ಭಾಸಯಂತಂ ಬಹುವಿಧೈಃ ಸ್ವಪ್ರಭಾಭಿರ್ದಿಶೋ ದಶ ।
ಪ್ರಕಾಶಯಂತಂ ಕರುಣಾಮುಪಾರಾಮನಪಾಯಿನೀಂ ॥೫೧೬॥

ಏತಾದೃಶಂ ಮಹಾದೇವಂ ದೃಷ್ಟ್ವಾ ಭೂಪಃ ಪುನಃಪುನಃ ।
ಪ್ರಣಮ್ಯಾಭ್ಯರ್ಚ್ಯ ಪುಷ್ಪಾದ್ಯೈಸ್ತತಃ ಸ್ತೋತುಂ ಸಮಾರಭೇ ॥೫೧೭॥

ಶ್ರೀಮಹಾದೇವ ದೇವೇಶ ಪ್ರಸೀದ ಕರುಣಾನಿಧೇ ।
ದೇವತಾಸಾರ್ವಭೌಮೇಶ ಶರಣಾಗತವತ್ಸಲ ॥೫೧೮॥

ಮಥ್ಯಮಾನಾಬ್ಧಿಸಂಭೂತಕಾಲಕೂಟವಿಷಾದನ ।
ದೃಪ್ತಗರ್ವಪರಿಭ್ರಾಜನ್ನರಸಿಂಹನಿಷೂದನ ॥೫೧೯॥

---

ಮೊದಲಿದ್ದಂತೆಯೇ ಮಾಡಿದನು. ಒಡನೆಯೇ ರಾಜನು ಎದ್ದು ಎದುರಿನಲ್ಲಿದ್ದ ಪರಶಿವನನ್ನು ದರ್ಶನ ಮಾಡಿದನು. ॥೫೧೨-೫೧೩॥

ಆಗ ಪರಶಿವನು ಅನೇಕ ಸೂರ್ಯರಂತೆ ತೇಜೋರಾಶಿಯಾಗಿ ಕಾಣುತ್ತಿದ್ದನು. ತಲೆಯಲ್ಲಿ ಚಂದ್ರನೂ, ಕೈಯಲ್ಲಿ ಪಿನಾಕವೂ, ಎಡಭಾಗದಲ್ಲಿ ಪಾರ್ವತಿಯೂ ಕಂಡುಬರುತ್ತಿದ್ದರು. ವಿಷ್ಣುಬ್ರಹ್ಮರು ಅಕ್ಕಪಕ್ಕಗಳಲ್ಲಿ ಚಾಮರವನ್ನು ಹಿಡಿದು ನಿಂತು ಸೇವಿಸುತ್ತಿದ್ದರು. ಹಾಗೆಯೇ ಅನೇಕ ಪ್ರಮಥಗಣಗಳು ಪರಶಿವನನ್ನು ನಾನಾರೀತಿಯಲ್ಲಿ ಸೇವಿಸುತ್ತಿದ್ದರು. ॥೫೧೪-೫೧೫॥

ಪರಶಿವನ ದಿವ್ಯ ತೇಜಸ್ಸಿನಿಂದ ದಶದಿಕ್ಕುಗಳೂ ಪ್ರಕಾಶಿಸುತ್ತಿದ್ದುವು. ಹೀಗೆ ಕರುಣಾಮೂರ್ತಿಯಾಗಿ ಎದುರಿನಲ್ಲಿ ನಿಂತಿದ್ದ ಮಹಾದೇವನನ್ನು ನೋಡಿ, ಸಾಷ್ಟಾಂಗ ನಮಸ್ಕಾರವೆಸಗಿ ಈರೀತಿ ಸ್ತುತಿಸಲಾರಂಭಿಸಿದನು. ॥೫೧೬-೫೧೭॥

"ಮಹಾದೇವನೇ, ನೀನು ದೇವದೇವನು, ದಯಾಸಾಗರನು, ಮೊರೆಹೊಕ್ಕವರನ್ನು ಕಾಪಾಡುವುದರಲ್ಲಿ ಅತ್ಯಂತ ದಕ್ಷನು. ದೇವಾಸುರರ ಸಮುದ್ರಮಥನಕಾಲದಲ್ಲಿ ಉದ್ಭವಿಸಿದ ಕಾಲಕೂಟ ವಿಷವನ್ನು ಪಾನಮಾಡಿ ಲೋಕವನ್ನು

ಸೋಮಸೂರ್ಯಾಗ್ನಿನಯನ ಭೂಷಿತಾನಂದಕಾನನ ।
ದಿಗ್ವ್ಯಾಪ್ತನಾನಾವದನ ಧೃತಮೇರುಶರಾಸನ ॥೩೨೦॥

ಸಂಭೃತಾನಂದಪವನಹತಬ್ರಹ್ಮಾರಿಶಾಸನ ।
ದೂರೀಕೃತಾದಿಶಮನ ಮಹಾಪಾತಕಮರ್ದನ ॥೩೨೧॥

ದೂರೀಕೃತಾದಿನಿಸ್ಪೂತ ಶುಚಿಭೂತಿವಿಭೂಷಿತ ।
ಸ್ವತ ಏವ ಸದಾ ಪೂತ ಬ್ರಹ್ಮವಿಷ್ಣ್ವಾದಿವಂದಿತ ॥೩೨೨॥

ನಿರಾಕಾರ ನಿರಾಧಾರ ನಿರೀಶ್ವರ ಪರಾತ್ಪರ ।
ಅನೇಕಾಮೇಯಕಲ್ಯಾಣಗುಣಸಾಗರ ಶಂಕರ ॥೩೨೩॥

ಹರ ಧೀರಾಗಮಾಕಾರ ನಿರೂಪಾಧಿಕೃಪಾಕರ ।
ಧೃತಗುಲ್ಫಪರಿಭ್ರಾಜದನೇಕಮಣಿನೂಪುರ ॥೩೨೪॥

ರಕ್ಷಿಸಿದೆಯಲ್ಲವೆ? ಗರ್ವದಿಂದಮೆರೆದ ನರಸಿಂಹನನ್ನು ಶರಭಾವತಾರಮಾಡಿ ಶಿಕ್ಷಿಸಿದೆಯಲ್ಲವೆ? ॥೩೧೮-೩೧೯॥

ಸೂರ್ಯ, ಚಂದ್ರ, ಅಗ್ನಿ ಇವರನ್ನೇ ನೇತ್ರಗಳನ್ನಾಗಿ ಮಾಡಿಕೊಂಡು, ಆನಂದಮಯನಾಗಿರುವ ಮಹೇಶ್ವರನೇ, ನೀನು ತ್ರಿಪುರಾಸುರದಹನ ಕಾಲದಲ್ಲಿ ಮೇರುಪರ್ವತವನ್ನೇ ಧನುಸ್ಸನ್ನಾಗಿ ಮಾಡಿಕೊಂಡೆಯಲ್ಲವೆ? ಆನಂದಮಯತೆಯಲ್ಲಿ ಮುಳುಗಿ ಕೊಬ್ಬಿಹೋಗಿದ್ದ ಬ್ರಹ್ಮ, ಯಮ ಮೊದಲಾದ ದೇವತೆಗಳನ್ನು ಶಿಕ್ಷಿಸಿ, ಅನೇಕ ಪಾಪರಾಶಿಯನ್ನು ನಿರ್ಮೂಲಗೊಳಿಸಿದವನು ನೀನು. ಇಂತಹ ನಿನಗೆ ನಮಸ್ಕಾರ. ॥೩೨೦-೩೨೧॥

ಪಾಪದೂರನಾಗಿ, ವಿಭೂತಿಯಿಂದ ಶುದ್ಧ ಗಾತ್ರನಾಗಿರುವ ಮಹಾದೇವನೇ, ನೀನು ಸ್ವಯಂಪವಿತ್ರನು. ಬ್ರಹ್ಮಾದಿ ಸಕಲ ದೇವಶ್ರೇಷ್ಠರಿಂದಲೂ ವಂದಿತನು. ನಿನಗೆ ಒಂದು ಆಕಾರವಾಗಲಿ, ಆಧಾರವಾಗಲಿ ತೋರುವುದಿಲ್ಲ. ನಿನಗೆ ಮತ್ತೊಬ್ಬರು ಒಡೆಯರಿಲ್ಲ. ನಿನ್ನಲ್ಲಿ ಪ್ರತಿಫಲಿಸುವ ಕಲ್ಯಾಣಗುಣಗಳ ರಾಶಿಯನ್ನು ಇಷ್ಟೆಂದು ಹೇಳಲು ಸಾಧ್ಯವಿಲ್ಲ. ॥೩೨೨-೩೨೩॥

ಪರಶಿವನೇ, ನೀನು ಪರಮಧೀರನು, ಸರ್ವೋಪಾಧಿವಿನಿರ್ಮುಕ್ತನು, ದಯಾಸಾಗರನು ನಿನ್ನ ಪಾದದ ಹರಡಿನಮೇಲೆ ಅನೇಕ ಮಣಿಮಯವಾದ ಕಾಲಂದಿಗೆ

ಸೇವಕಾಮರಮಂದಾರ ಶಿವಭಕ್ತಾಭಯಂಕರ ।
ಧೃತರತ್ನಕಿರೀಟಾಂಶುಪರಿವೀತನಿಶಾಕರ ॥೫೨೫॥

ನಿರಾಕಾರ ತಿರೋಭೂತಸುಧಾಪೂರಾಮರೇಶ್ವರ ।
ಸೃಷ್ಟಭೂಸುರ ಭೂಸಾರಪಾರಾವಾರ ಮಹೇಶ್ವರ ॥೫೨೬॥

ಪರಿಸೇವಿತದಿಕ್ಪಾಲ ಕಾಲಕಾಲಾಮಲಾಮಲ ।
ವಿಶಾಲಭಾಲವಿಲಸಜ್ಜ್ವಾಲಾಮಾಲಾಕುಲಾಮಲ ॥೫೨೭॥

ಇತಿ ಸ್ತುತ್ವಾ ಮಹಾದೇವಂ ಸ ಭೂಪಾಲಃ ಕೃತಾಂಜಲಿಃ ।
ಪುನಃ ಪ್ರಣಮ್ಯ ಬಹುಧಾ ಪೂಜಯಾಮಾಸ ಸಾದರಂ ॥೫೨೮॥

ತಂ ತಾದೃಶಂ ಧೀರಚಿತ್ತಂ ನೃಪಂ ದೃಷ್ಟ್ವಾ ಮಹೇಶ್ವರಃ ।
ಸಂತೋಷಂ ಜನಯನ್ನಾಹ ಮಂದಹಾಸಪುರಸ್ಸರಂ ॥೫೨೯॥

ಗಳು ಹೊಳೆಯುತ್ತಿವೆ. ಸೇವಕರೆನಿಸಿದ ದೇವಶ್ರೇಷ್ಠರನ್ನು ನೀನು ಅಭಯಪ್ರದಾನ ದಿಂದ ರಕ್ಷಿಸುತ್ತಿರುವೆ. ನಿನ್ನ ಕಿರೀಟಗಳ ಕಾಂತಿಯಿಂದ ಶಿರೋಭಾಗದಲ್ಲಿರುವ ಚಂದ್ರನೂ ಸಹ ವಿರಾಜಿಸುತ್ತಿರುವನು. ॥೫೨೪-೫೨೫॥

ಮಹಾದೇವನೇ ನಿನಗೆ ಯಾವ ಒಂದು ಆಕಾರವೂ ಸ್ಥಿರವಾಗಿಲ್ಲ. ಆದರೂ ನಿನ್ನ ಪ್ರತಿ ಆಕಾರದಲ್ಲಿಯೂ ಅಮೃತಪ್ರವಾಹವು ಅಡಗಿರುವುದು. ಬ್ರಾಹ್ಮಣರಿಗೂ ಭೂಮಿಗೂ ಸಕಲ ಶಕ್ತಿಯನ್ನೂ ಅನುಗ್ರಹಿಸುತ್ತಲಿರುವೆ. ದಿಕ್ಪಾಲರಿಂದಲೂ, ಯಮನಿಂದಲೂ ನಾನಾರೀತಿಯಲ್ಲಿ ಪೂಜಿಸಲ್ಪಟ್ಟವನೇ, ನಿನ್ನ ವಿಶಾಲವಾದ ಹಣೆಯಲ್ಲಿ ಅಗ್ನಿಜ್ವಾಲೆಯು ಉರಿಯುತ್ತಿರುವುದಲ್ಲವೆ! ಮಹಾದೇವನೇ, ನಮ್ಮನ್ನು ರಕ್ಷಿಸು." ॥೫೨೬-೫೨೭॥

ಹೀಗೆಂದು ಆ ರಾಜನು ಅಂಜಲಿಬದ್ಧನಾಗಿ ಮತ್ತೆ ಮತ್ತೆ ವಂದಿಸುತ್ತಾ ಪರಶಿವನನ್ನು ಬಹುವಾಗಿ ಪೂಜಿಸಿದನು. ಅಂತಹ ಸ್ಥಿರಮನಸ್ಸಿನ ರಾಜನನ್ನು ನೋಡಿ ಮಹೇಶ್ವರನು ಸಂತುಷ್ಟನಾಗಿ ಮುಗುಳ್ನಗೆಯಿಂದ ಕೂಡಿ ಹೀಗೆ ನುಡಿದನು. ॥೫೨೮-೫೨೯॥

|| ಶಿವ ಉವಾಚ ||

ನೃಪ ಕೀರ್ತೀಶ್ವರೇತ್ಯೇತನ್ನಾಮ ತೇ ಸಾರ್ಥಕಂ ಧ್ರುವಮ್ ।
ಧನ್ಯೋಽಸಿ ಕೃತಕೃತ್ಯೋಽಸಿ ಪರಲೋಕಪರೋಽಪ್ಯಸಿ ॥೫೩೦॥

ಕಾಶ್ಯಾಂ ತವೇದೃಶೀ ಭಕ್ತಿರ್ಯಾ ಜಾತಾ ಮುಕ್ತಿದಾ ಸ್ವತಃ ।
ಸೇದೃಶೀ ನಾಸ್ತಿ ಕಸ್ಯಾಪಿ ತ್ವದನ್ಯಸ್ಯಾಧುನಾ ನೃಪ ॥೫೩೧॥

ಇಯಂ ಯಾ ಭಕ್ತಿರುತ್ಪನ್ನಾ ಕಾಶ್ಯಾಂ ತವ ನರಾಧಿಪ ।
ಸಾ ಭಕ್ತಿರ್ಭೂರಿಭಾಗ್ಯೇನ ತಪಸಾ ಚಾಭವದ್ಧ್ರುವಮ್ ॥೫೩೨॥

ರಾಜ್ಯಭೋಗಾದಿಕಂ ಸರ್ವಂ ಪರಿಭೂಯ ತ್ವಯಾ ನೃಪ ।
ಶರೀರಂ ತ್ಯಕ್ತುಮುದ್ಯುಕ್ತಂ ಕಾಶ್ಯಾಂ ಭೂರಿತಪೋಬಲಾತ್ ॥೫೩೩॥

ತೃಣೀಕೃತ್ಯೋಪಸರ್ಗಾಂಸ್ತ್ವಂ ಕಾಶ್ಯಾಂ ಮರ್ತುಂ ಸಮುದ್ಯತಃ ।
ಈದೃಶೀ ಮತಿರನ್ಯೇಷಾಂ ದುರ್ಲಭಾ ವಸ್ತುತೋ ನೃಪ ॥೫೩೪॥

ತವೋಪಸರ್ಗಾ ಭೂಪಾಲ ನ ಭವಿಷ್ಯಂತ್ಯತಃಪರಮ್ ।
ಸುಖೇನ ಸಂವಸಾತ್ರೈವ ಮದರ್ಚನಪರಾಯಣಃ ॥೫೩೫॥

"ಎಲೈ ರಾಜನೇ, ನಿನಗಿರುವ ಕೀರ್ತೀಶ್ವರನೆಂಬ ಹೆಸರು ಇಂದಿಗೆ ಸಾರ್ಥಕವಾಯಿತು. ಈಗ ನೀನೇ ಧನ್ಯನು, ಮೋಕ್ಷವನ್ನು ಗಳಿಸಿದವನು. ಕಾಶಿಯಲ್ಲಿ ನಿನ್ನಷ್ಟು ಅಭಿಮಾನವಿಟ್ಟವನು ಮತ್ತಾರೂ ದೊರಕಲಾರರು. ॥೫೩೦-೫೩೧॥

ಇಂತಹ ಅಸದೃಶವಾದ ಭಕ್ತಿಯು ಕಾಶಿಯಲ್ಲಿ ಒದಗಬೇಕಾದರೆ ನೀನು ಅನೇಕ ಜನ್ಮಗಳಲ್ಲಿ ಸುಕೃತಕಾರ್ಯಗಳನ್ನು ನೆರವೇರಿಸಿರಬೇಕು. ಅಲ್ಲದೆ ನೀನು ಮಹಾಧೀರನಂತೆ ರಾಜ್ಯಭೋಗಾದಿಗಳನ್ನು ಪರಿತ್ಯಜಿಸಿ, ಕೊನೆಗೆ ಈ ಕಾಶಿಯಲ್ಲಿಯೇ ದೇಹತ್ಯಾಗಮಾಡಲು ಮನಸ್ಸುಮಾಡಿದುದು ನಿನ್ನ ಅಸದೃಶವಾದ ಸುಕೃತವನ್ನು ತೋರ್ಪಡಿಸುವುದು. ॥೫೩೨-೫೩೩॥

ರಾಜನೇ, ಈ ಕಾಶಿಯಲ್ಲಿ ಒದಗಿದ ಹಿಂಸೆಗಳನ್ನೆಲ್ಲಾ ಸಹಿಸಿಕೊಂಡಿದ್ದು ಕೊನೆಗೆ ಇಲ್ಲಿಯೇ ದೇಹತ್ಯಾಗಕ್ಕೆ ಮನಗೊಟ್ಟಿಯಲ್ಲವೇ! ಇಂತಹ ಸ್ಥಿರಮನಸ್ಸು ಸಾಮಾನ್ಯರಿಗೆ ಬರಲಾರದು. ರಾಜನೇ, ನನ್ನ ವರಬಲದಿಂದ ಇನ್ನು ಮುಂದೆ ಈ

ನೃಪ ತೇ ಜೀವನಾಪೇಕ್ಷಾ ಯಾವತ್ತಾವದನಾತುರಃ ।
ಕಾಶೀವಾಸಂ ಕುರು ಪ್ರೀತ್ಯಾ ಕಾಶೀತ್ಯಾಗಭಯಂ ತ್ಯಜ ॥೫೩೬॥

ಕದಾಪ್ಯತಃಪರಂ ರಾಜನ್ ಕಾಶೀತ್ಯಾಗರತಿಸ್ತ್ವ ।
ನ ಭವಿಷ್ಯತಿ ತತ್ಸತ್ಯಂ ದಾಸ್ಯಾಮ್ಯಭಯಮಪ್ಯಹಂ ॥೫೩೭॥

ನಿತ್ಯಯಾತ್ರಾದಿಕರ್ಮಾಣಿ ಸರ್ವಾಣಿ ಕುರು ಸರ್ವದಾ ।
ಮತ್ಕಥಾಶ್ರವಣಾಸಕ್ತಃ ಸಂತುಷ್ಟಃ ಸರ್ವದಾ ವಸ ॥೫೩೮॥

ನ ಭವಿಷ್ಯತಿ ತೇ ರಾಜನ್ ಕಾಲಭೈರವಯಾತನಾ ।
ಭವಾದೃಶಾನಾಂ ಶೈವಾನಾಂ ನ ಸಾ ಭೈರವಯಾತನಾ ॥೫೩೯॥

ಸ್ವೇಚ್ಛಯಾತ್ರ ತನುತ್ಯಾಗಂ ಕರಿಷ್ಯಸಿ ಯದಾ ಭವಾನ್ ।
ತದಾ ದಾಸ್ಯಾಮ್ಯಹಂ ಮುಕ್ತಿಂ ತುಭ್ಯಮತ್ರ ನ ಸಂಶಯಃ ॥೫೪೦॥

ರಾಜನ್ನಭಯಹಸ್ತೋಽಯಂ ದೀಯತೇ ತವ ಮೂರ್ಧನಿ ।
ತುಭ್ಯಂ ಕಾಶ್ಯಾಂ ತನುತ್ಯಾಗೇ ಮುಕ್ತಿಂ ದಾಸ್ಯಾಮ್ಯಸಂಶಯಂ ॥೫೪೧॥

---

ಕ್ಷೇತ್ರದಲ್ಲಿ ಯಾವ ತೊಂದರೆಗಳೂ ಒದಗಲಾರವು. ಸರ್ವದಾ ಮಹಾದೇವಾರ್ಚನೆ ಮಾಡುತ್ತಾ, ಸೌಖ್ಯದಿಂದ ಇಲ್ಲಿಯೇ ನೆಲಸು. ॥೫೩೪-೫೩೫॥

ರಾಜನೇ, ನಿನಗೆ ಬದುಕಿರಬೇಕೆಂಬ ಅಪೇಕ್ಷೆಯಿರುವವರೆಗೂ ಕಾಶಿಯಲ್ಲಿಯೇ ವಾಸಮಾಡು. ಕಾಶಿಯನ್ನು ಬಿಟ್ಟುಹೋಗುವ ಬುದ್ಧಿಯು ನಿನಗೆ ಎಂದೂ ಬರಬೇಡ. ಆರೀತಿ ವರಕೊಟ್ಟಿರುವೆನು. ಇದು ನಿಜ. ॥೫೩೬-೫೩೭॥

ನೀನು ಇಲ್ಲಿ ನಿತ್ಯಯಾತ್ರೆಯಿಂದ ವಾಸಮಾಡುತ್ತಾ, ನನ್ನ ಕಥೆಯಲ್ಲಿಯೇ ಮನಸ್ಸಿಟ್ಟವನಾಗಿ ಸಂತೋಷದಿಂದಿರು. ನಿನ್ನಂತಹ ಶಿವಪೂಜಕರಿಗೆ ಕಾಲಭೈರವನ ಬಾಧೆಯು ತಟ್ಟಲಾರದು. ನೀನು ನಿನ್ನ ಇಷ್ಟದಂತೆ ಯಾವಾಗ ಇಲ್ಲಿ ದೇಹತ್ಯಾಗ ಮಾಡುವೆಯೋ, ಆಗ ನಿನಗೆ ಸ್ಥಿರಮುಕ್ತಿಯನ್ನು ಕರುಣಿಸುವೆನು ; ಸಂಶಯ ಪಡಬೇಡ. ॥೫೩೮-೫೩೯-೫೪೦॥

ರಾಜನೇ, ಈಗೋ ನನ್ನ ಅಭಯಹಸ್ತವನ್ನು ನಿನ್ನ ಶಿರದಲ್ಲಿಟ್ಟು, ದೇಹತ್ಯಾಗಾನಂತರದಲ್ಲಿ ಮುಕ್ತಿಯನ್ನು ಕರುಣಿಸುವೆನೆಂದು ಹೇಳುವೆನು. ಈ ದೇಹವು ಈ

ಇದಮೇವ ಶರೀರಂ ತೇ ಕಾಶ್ಯಾಂ ದಗ್ಧಂ ಭವಿಷ್ಯತಿ ।
ದಗ್ಧೇ ಶರೀರೇ ಸಂಸಾರಃ ಸರ್ವೋ ದಗ್ಧೋ ಭವಿಷ್ಯತಿ ॥೫೪೨॥

ಯಸ್ಯ ದಗ್ಧಾ ತನುಃ ಕಾಶ್ಯಾಮೇಕದಾ ತಸ್ಯ ಭೂಪತೇ ।
ನ ಭವಿಷ್ಯತಿ ಸಂಸಾರಃ ಸರ್ವೋ ದಗ್ಧೋ ಭವಿಷ್ಯತಿ ॥೫೪೩॥

ಸಂಸಾರಖೇದಖಿನ್ನಾನಾಂ ಕಾಶ್ಯೇಕಾ ಶರಣಂ ನೃಪ ।
ಅಯಮರ್ಥಸ್ತು ನಿರ್ಣೀತೋ ವೇದೈರಪಿ ಸಹಸ್ರಧಾ ॥೫೪೪॥

ಯಶ್ಶೈವಧರ್ಮನಿರತಃ ಕಾಶ್ಯಾಂ ದೃಢತರಂ ವಸೇತ್ ।
ಸ ಮುಕ್ತಿಕಾಂತಾಂ ಲಭತೇ ಮತ್ತಸ್ಸತ್ಯಂ ಮಯೋಚ್ಯತೇ ॥೫೪೫॥

ಅತಃ ಕಾಶ್ಯಾಂ ವಸಾನನ್ಯೋ ಮಾಮೇವಾರಾಧಯನ್ಮುದಾ ।
ಕುರ್ವನ್ನತಿಪ್ರಯತ್ನೇನ ಭಸ್ಮರುದ್ರಾಕ್ಷಧಾರಣಂ ॥೫೪೬॥

ಕುರು ವೇದೋಕ್ತಮಾರ್ಗೇಣ ಸತ್ಕರ್ಮಾಣ್ಯೇವ ಸಂತತಂ ।
ತಾನಿ ಕರ್ಮಾಣಿ ಸರ್ವಾಣಿ ಮಹ್ಯಮೇವ ನಿವೇದಯ ॥೫೪೭॥

ಅಹಮೇಕೋ ವೇದವೇದ್ಯಃ ಸರ್ವವೇದಾಂತಸಂಸ್ತುತಃ ।
ಮತ್ತಃ ಪರತರಂ ನಾಸ್ತಿ ಸರ್ವಥಾ ಸತ್ಯಮುಚ್ಯತೇ ॥೫೪೮॥

ಕಾಶಿಯಲ್ಲಿ ದಗ್ಧವಾದ ಮೇಲೆ ನಿನ್ನ ಸಂಸಾರದುಃಖವೇ ಧ್ವಂಸವಾಯಿತೆಂದು ತಿಳಿ. ಮತ್ತೆ ನಿನಗೆ ಜನನಮರಣಾದಿಗಳು ಸಂಭವಿಸಲಾರವು. ॥೫೪೧-೫೪೨॥

ಕಾಶಿಯಲ್ಲಿ ಒಂದುಸಾರಿ ಮನುಷ್ಯದೇಹವು ದಗ್ಧವಾದರೆ ಮತ್ತೆ ಆತನಿಗೆ ಸಂಸಾರದುಃಖವೇ ಸೇರಲಾರದು. ಸಂಸಾರದಲ್ಲಿ ನರಳಿ ಕೊರಗಿದವರಿಗೆ ಕಾಶಿಯೇ ಗತಿಯೆಂದು ಸಕಲವೇದಗಳೂ ನಿಶ್ಚಯಮಾಡಿವೆ. ॥೫೪೩-೫೪೪॥

ಶಿವಧರ್ಮನಿರತನಾಗಿ ಯಾರು ಕಾಶಿಯಲ್ಲಿ ಬಹುಕಾಲ ವಾಸಮಾಡುವರೋ, ಅವರು ಮುಕ್ತಿಕಾಂತೆಯನ್ನು ನನ್ನಿಂದ ವರಿಸಿದಂತೆಯೇ ಸರಿ. ಆದ್ದರಿಂದ ಎಲೈ ರಾಜನೇ, ನೀನು ಇನ್ನು ಮುಂದೆ ಭಸ್ಮರುದ್ರಾಕ್ಷಧಾರಿಯಾಗಿ ಸರ್ವದಾ ನನ್ನನ್ನೇ ಪೂಜಿಸುತ್ತಾ ಈ ಕಾಶೀಕ್ಷೇತ್ರದಲ್ಲಿಯೇ ನೆಲಸು. ॥೫೪೫-೫೪೬॥

ಇಲ್ಲಿಯೇ ವೈದಿಕಕರ್ಮಗಳನ್ನೆಲ್ಲಾ ಆಚರಿಸುತ್ತಾ, ಆ ಕರ್ಮಫಲವನ್ನೆಲ್ಲಾ ನನಗೆ ಸಮರ್ಪಿಸುತ್ತಿರು. ವೇದವೇದ್ಯನೂ, ವೇದಾಂತ ಪ್ರತಿಪಾದ್ಯನೂ ನಾನೇ

ತಂ ತಾರಯಾಮಿ ಸಂಸಾರಾದ್ಯೋಽನನ್ಯಶರಣೋಽನಿಶಂ ।
ಮಾಮೇವ ಚಿಂತಯೇದ್ಭಕ್ತ್ಯಾ ತ್ಯಕ್ತ್ವಾನ್ಯಾಮರಚಿಂತನಂ ॥೫೪೯॥

ಮಾಮರ್ಚಯ ಪ್ರಯತ್ನೇನ ಕುರು ಮನ್ನಾಮಕೀರ್ತನಂ ।
ಮಾಮೇವ ಚಿಂತಯಾನನ್ಯೋ ಮಾಮೇವ ಶರಣಂ ವ್ರಜ ॥೫೫೦॥

ಧರ್ಮಾನನ್ಯಾನ್ ಪರಿತ್ಯಜ್ಯ ಯಃ ಕುರ್ಯಾನ್ಮಮ ಪೂಜನಂ ।
ಸ ಸರ್ವದಾ ಮದಾಸಕ್ತೋ ಮಾಮೇತ್ಯೇವ ನ ಸಂಶಯಃ ॥೫೫೧॥

ಮಾಮಭ್ಯರ್ಚ್ಯ ನರೋ ಭಕ್ತ್ಯಾ ಕಾಲಕಾಲಮನಾಕುಲಂ ।
ಕಾಲಾತ್ಕಾಲಭಟೇಭ್ಯೋ ವಾ ನ ಬಿಭೇತ್ಯೇವ ಸರ್ವದಾ ॥೫೫೨॥

ದೃಷ್ಟ್ವಾ ಕಾಲೋಽಪಿ ಮದ್ಭಕ್ತಾನನ್ವಹಂ ವಿನಯಾನ್ವಿತಃ ।
ಕೃತಾಂಜಲಿಪುಟೋ ಭೂತ್ವಾ ಸ ಕಂಪಮಧಿತಿಷ್ಠತಿ ॥೫೫೩॥

ಏತೇ ವಿಷ್ಣ್ವಾದಯಸ್ಸರ್ವೇ ಮದ್ಭಕ್ತಾ ಮತ್ಪರಾಯಣಾಃ ।
ಮತ್ಪೂಜಕಾನ್ನರಾನ್ ದೃಷ್ಟ್ವಾ ಪೂಜಯಂತ್ಯೇವ ಸಾದರಂ ॥೫೫೪॥

ಎಂಬುದನ್ನು ನೆನಪಿನಲ್ಲಿಡು. ನನಗಿಂತ ದೊಡ್ಡದಾದ ವಸ್ತುವು ಮತ್ತಾವುದೂ ಇಲ್ಲವೆಂಬುದನ್ನು ದೃಢವಾಗಿ ನಂಬು. ||೫೪೭-೫೪೮||

ಯಾವನು ಅನನ್ಯಗತಿಕನಾಗಿ ನನ್ನನ್ನೇ ಮೊರೆಹೊಗುವನೋ ಅಂತಹವನನ್ನು ಸಂಸಾರಸಾಗರದಿಂದ ಪಾರುಮಾಡುವೆನು ಇದು ನಿಜ. ಆದ್ದರಿಂದ ನೀನು ದೇವತಾಂತರಗಳನ್ನು ಪೂಜಿಸದೆ ಏಕಮನಸ್ಕನಾಗಿ ನನ್ನನ್ನೇ ಪೂಜಿಸುತ್ತಿರು. ನನ್ನ ನಾಮಗಳನ್ನೇ ಉಚ್ಚರಿಸುತ್ತಿರು. ||೫೪೯-೫೫೦||

ಉಳಿದ ಎಲ್ಲಾ ಧರ್ಮಾನುಷ್ಠಾನಗಳನ್ನೂ ಬಿಟ್ಟು ಯಾರು ಸರ್ವದಾ ನನ್ನನ್ನೇ ಧ್ಯಾನಿಸುವರೋ, ಅಂತಹವರು ಕೊನೆಯಲ್ಲಿ ನನ್ನಲ್ಲಿಯೇ ಐಕ್ಯರಾಗುವರು. ಅವರಿಗೆ ಯಮನಿಂದಾಗಲಿ, ಯಮದೂತರಿಂದಾಗಲಿ ಎಂದೂ ಭಯವಿರಲಾರದು. ||೫೫೧-೫೫೨||

ಯಮನು ನನ್ನ ಭಕ್ತರನ್ನು ನೋಡಿ ವಿನಯಶಾಲಿಯಾಗಿ ನಡುಗುತ್ತಾ ದೂರದಲ್ಲಿಯೇ ನಿಲ್ಲುವನು. ಇಲ್ಲಿರುವ ವಿಷ್ಣ್ವಾದಿ ಸಕಲದೇವತೆಗಳೂ ನನ್ನ ಆರಾ

ನೃಪ ವಿಷ್ಣ್ವಾದಿದೇವಾನಾಂ ಮದ್ಭಕ್ತೇಷು ನರೇಷ್ವಪಿ ।
ಭಕ್ತಿರಸ್ತ್ಯತ ಏವೈತೇ ಮದ್ಭಕ್ತಾ ಇತಿ ವಿಶ್ರುತಾಃ ॥೫೫೫॥

ಅಸ್ಮೈ ಮದ್ಭಕ್ತಭಕ್ತಾಯ ಮದ್ಭಕ್ತಾಯ ಚ ವಿಷ್ಣವೇ ।
ಮಯಾ ದತ್ತೋಽಸ್ತಿ ವೈಕುಂಠೋ ದೇಯಾ ಮುಕ್ತಿಶ್ಚ ಭೂಪತೇ ॥೫೫೬॥

ವಿಷ್ಣುನಾನೇನ ಬಹುಧಾ ಮಾಮುದ್ದಿಶ್ಯ ತಪಃ ಕೃತಂ ।
ಅಯಮವ್ಯಭಿಚಾರೇಣ ಕರೋತಿ ಮಮ ಪೂಜನಂ ॥೫೫೭॥

ಭೂಪತೇ ವಿಷ್ಣುನಾನೇನ ಸ್ವನೇತ್ರಕಮಲಂ ಯತಃ ।
ಉತ್ಪಾಟ್ಯ ತೇನ ನೇತ್ರೇಣ ಕೃತಂ ಮತ್ಪಾದಪೂಜನಂ ॥೫೫೮॥

ಮದ್ಭಕ್ತಭಕ್ತೋ ಮದ್ಭಕ್ತೋ ಮಮ ಭಕ್ತಿಪರಾಯಣಃ ।
ನಾರಾಯಣೋಽಯಮೇತಸ್ಮೈ ಕಿಮದೇಯಂ ನರಾಧಿಪ ॥೫೫೯॥

ಮದ್ಭಕ್ತಾನಾಮದೇಯಾರ್ಥೋ ಮಮ ನಾಸ್ತ್ಯೇವ ಸರ್ವಥಾ ।
ಮದ್ಭಕ್ತವಾಂಛಿತಂ ಸರ್ವಂ ಮಯಾ ದೇಯಮಸಂಶಯಂ ॥೫೬೦॥

---

ಥಕರ ವಿಷಯದಲ್ಲಿ ಮರ್ಯಾದೆಕೊಟ್ಟು ಅವರನ್ನು ಸರ್ವದಾ ಪೂಜಿಸುತ್ತಿರುವರು. ॥೫೫೩-೫೫೪॥

ಎಲೈ ರಾಜನೇ, ನನಗೆ ಸೇವಕರೆನಿಸಿರುವ ಸಾಮಾನ್ಯ ಮಾನವನ ವಿಷಯದಲ್ಲಿಯೂ ಈ ವಿಷ್ಣುವೇ ಮೊದಲಾದ ದೇವತೆಗಳು ಭಕ್ತಿಯನ್ನಿಟ್ಟಿರುವರು. ಇಂತಹ ನನ್ನ ಭಕ್ತರಭಕ್ತನಾದ ವಿಷ್ಣುವಿಗೆ ವೈಕುಂಠಾಧಿಪತ್ಯವನ್ನು ಕೊಟ್ಟು ಮುಕ್ತಿಯನ್ನು ಅನುಗ್ರಹಿಸಿರುವವನು ನಾನೇ. ॥೫೫೫-೫೫೬॥

ಈ ವಿಷ್ಣುವು ತನ್ನ ಕಾರ್ಯಸಾಧನೆಗಾಗಿ ಅನೇಕವೇಳೆ ನನ್ನನ್ನು ಕುರಿತು ನಿರ್ಮಲಚಿತ್ತದಿಂದ ತಪಸ್ಸು ಮಾಡಿರುವನು. ಹಿಂದೆ ಒಂದುಸಾರಿ ತನ್ನ ಕಮಲ ನೇತ್ರವೊಂದನ್ನು ಭಕ್ತಿಯಿಂದ ತಾನೇ ಕಿತ್ತು ನನ್ನ ಪಾದಗಳಿಗೆ ಅರ್ಚಿಸಿರುವನು. ॥೫೫೭-೫೫೮॥

ಈ ನಾರಾಯಣನು ನನಗೂ, ನನ್ನ ಭಕ್ತರಿಗೂ ಭಕ್ತನಂತೆಯೇ ವರ್ತಿಸುತ್ತಿರುವನು. ಇಂತಹವನಿಗೆ ನಾನು ಸಕಲ ಇಷ್ಟಾರ್ಥವನ್ನೂ ಸಲ್ಲಿಸುವುದು ನನ್ನ ಕರ್ತವ್ಯ. ನನ್ನ ಭಕ್ತರಿಗೆ ಕೊಡದೆ ಮುಚ್ಚಿಡುವ ವಸ್ತುವು ನನ್ನ ದೃಷ್ಟಿಯಲ್ಲಿ

**ಅತೋ ಮದರ್ಚನಪರೋ ಮದ್ಭಕ್ತಾರ್ಚನತತ್ಪರಃ ।**
**ಕಾಶ್ಯಾಂ ಸಂವಸ ಭೂಪಾಲ ಸಂತುಷ್ಟಹೃದಯಸ್ಸದಾ ॥೫೬೧॥**

**ಇತ್ಯುಕ್ತ್ವಾ ಶ್ರೀಮಹಾದೇವಸ್ತತ್ರೈವಾಂತರಧೀಯತ ।**
**ಸ ಭೂಪಾಲೋಽಪಿ ಸಂತುಷ್ಟಃ ಸ್ಥಿತಃ ಕಾಶ್ಯಾಂ ದ್ವಿಜೋತ್ತಮಾಃ ॥೫೬೨॥**

**ಅತೋ ಧೈರ್ಯೇಣ ಸತತಂ ಕಾಶ್ಯಾಂ ಸ್ಥಾತವ್ಯಮಾಸ್ತಿಕೈಃ ।**
**ಮರ್ತ್ಯಾನಾಂ ತ್ಯಕ್ತಧೈರ್ಯಾಣಾಂ ಕಾಶೀವಾಸಃ ಕಥಂ ಭವೇತ್ ॥೫೬೩॥**

**ಪುರಾ ಕಾಶ್ಯಾಂ ಮುನಿವರಾ ನಿತ್ಯಂ ಧರ್ಮಪರಾಯಣಾಃ ।**
**ನಿತ್ಯಯಾತ್ರಾದಿಸಂಸಕ್ತಾಃ ಸರ್ವದಾ ಕೋಟಿಶಃ ಸ್ಥಿತಾಃ ॥೫೬೪॥**

**ನಿತ್ಯಯಾತ್ರಾದಿಕರ್ಮಾಣ್ಯತ್ಕರ್ಮ ತೈರ್ನ ಕೃತಂ ದ್ವಿಜಾಃ ।**
**ಸರ್ವದಾ ಶಿವಯಾತ್ರಾಸು ನಿಷ್ಣಾತಾ ಏವ ತೇ ಸ್ಥಿತಾಃ ॥೫೬೫॥**

**ದ್ವಿಜೈಸ್ತೈಶ್ಶಿವವಾರ್ತಾನ್ಯವಾರ್ತಾಪಿ ನ ಕೃತಾ ದ್ವಿಜಾಃ ।**
**ನೀತಸ್ತೈರ್ಬಹುಭಿಃ ಕಾಲಃ ಸರ್ವದಾ ಶಿವವಾರ್ತಯಾ ॥೫೬೬॥**

ಯಾವುದೂ ಇಲ್ಲ. ಭಕ್ತರ ಇಷ್ಟಾರ್ಥವನ್ನೆಲ್ಲಾ ನೆರವೇರಿಸುವುದೇ ನನ್ನ ಮುಖ್ಯ ಧ್ಯೇಯ. ॥೫೫೯-೫೬೦॥

ಆದ್ದರಿಂದ ಎಲೈ ರಾಜನೇ, ನೀನು ಸರ್ವದಾ ನನ್ನನ್ನೂ ನನ್ನ ಭಕ್ತರನ್ನೂ ಆರಾಧಿಸುತ್ತಾ ಈ ಕಾಶಿಯಲ್ಲಿಯೇ ನೆಲಸು " ಎಂದು ಹೇಳಿ ಮಹಾದೇವನು ಅಲ್ಲಿಯೇ ಕಣ್ಮರೆಯಾದನು. ರಾಜನಾದರೋ ಬಹು ಸಂತೋಷದಿಂದ ಅಲ್ಲಿಯೇ ವಾಸಿಸಲು ದೃಢಸಂಕಲ್ಪಮಾಡಿದನು. ॥೫೬೧-೫೬೨॥

ಆದ್ದರಿಂದ ಮನುಷ್ಯರಾದವರು ಸ್ಥಿರಮನಸ್ಸಿನಿಂದ ಕಾಶಿಯಲ್ಲಿಯೇ ನೆಲಸಲು ಯತ್ನಿಸಬೇಕು. ಅಧೀರರಾದವರಿಗೆ ಕಾಶೀವಾಸವು ಲಭಿಸಲಾರದು. ಹಿಂದೆ ಕಾಶೀ ನಗರದಲ್ಲಿ ಸದಾ ಧರ್ಮಪರಾಯಣರಾಗಿ ನಿತ್ಯಯಾತ್ರಾದಿಗಳಲ್ಲಿ ನಿರತರಾಗಿ ಕೋಟಿ ಸಂಖ್ಯೆಯಲ್ಲಿ ಮುನಿಗಳು ನೆಲಸಿದ್ದರು. ॥೫೬೩-೫೬೪॥

ಅವರೆಲ್ಲರೂ ಕಾಶಿಯ ನಿತ್ಯಯಾತ್ರಾದಿಗಳಲ್ಲಿಯೇ ಮಗ್ನರಾಗಿ ಇತರ ದೇವತಾರಾಧನೆಗಳಾವುದರಲ್ಲಿಯೂ ಮನವಿಡುತ್ತಿರಲಿಲ್ಲ. ಶಿವಸಂಬಂಧವಾದ ಕಥೆ

ದ್ವಿಜೈಶ್ಶೈವಕಥಾಸಕ್ತೈರ್ಜಲಪಾನಂ ಚ ವಿಸ್ಮೃತಂ ।
ತೈರನ್ನವಸನಾದೀನಿ ತ್ಯಕ್ತಾನೀತಿ ಕಿಮದ್ಭುತಂ ॥೫೬೭॥

ಏವಂ ಸ್ಥಿತಾ ಮುನಿವರಾಃ ಶೈವಧರ್ಮಪರಾಯಣಾಃ ।
ಕಲಿಕಾಲಂ ಸಮಾಯಾಂತಂ ದದರ್ಶುರ್ಯೋಗತತ್ಪರಾಃ ॥೫೬೮॥

ತತಸ್ತೇ ಮುನಯಸ್ಸರ್ವೇ ಸ್ಥಿತ್ವಾ ವಿಶ್ವೇಶಸಂನಿಧೌ ।
ಮುಹುಶ್ಚುಕ್ರುಶುರತ್ಯಂತಂ ಕಲಿಕಾಲಭಿಯಾ ದ್ವಿಜಾಃ ॥೫೬೯॥

ಕಲಿಕಾಲಃ ಸಮಾಯಾತಿ ಕಿಂ ಕರ್ತವ್ಯಮತಃಪರಂ ।
ಕಲಿರಾಯಾಸ್ಯತಿ ಸ್ವೇಚ್ಛಂ ಮಹಾಪಾಪಸಮಾಕುಲಃ ॥೫೭೦॥

ಭುಕ್ತಿಮುಕ್ತಿಪ್ರದಾ ನಿತ್ಯಾಃ ಶೈವಧರ್ಮಾಃ ಶ್ರುತಿಶ್ರುತಾಃ ।
ಘೋರೇ ಕಲಿಯುಗೇ ಪ್ರಾಪ್ತೇ ನ ಸ್ಥಾಸ್ಯಂತಿ ನ ಸಂಶಯಃ ॥೫೭೧॥

ಶೈವಧರ್ಮೇಷು ಗಚ್ಛತ್ಸು ಭುಕ್ತಿಮುಕ್ತಿಕಥಾಕುತಃ ।
ಭುಕ್ತಿಮುಕ್ತಿಕಥಾ ಯಸ್ಮಾತ್ತದಧೀನೇತಿ ನಿರ್ಣಯಃ ॥೫೭೨॥

ಗಳನ್ನು ಬಿಟ್ಟು ಮತ್ತಾವ ದೇವತಾ ನಾಮಗಳೂ ಅವರ ಬಾಯಿಂದ ಹೊರಡುತ್ತಿರಲಿಲ್ಲ. ||೫೬೪-೫೬೬||

ಶಿವಕಥಾಶ್ರವಣ ಕುತೂಹಲಿಗಳಾದ ಆ ಮುನಿಗಳು ಜಲಪಾನವನ್ನು ಸಹ ಮರೆತರು. ಇನ್ನು ಆಹಾರಾದಿಗಳ ವಿಷಯವಾಗಿ ಹೇಳತಕ್ಕದ್ದೇನು ? ಅಂತಹ ಋಷಿಗಳು ತಮ್ಮ ಯೋಗದೃಷ್ಟಿಯಿಂದ ಕಲಿಕಾಲವು ಬರುವುದನ್ನು ಊಹಿಸಿ ತಿಳಿದರು. ಹೀಗೆಯೇ ಶೈವಧರ್ಮದಿಂದ ಅವರು ಅನೇಕಕಾಲ ಜೀವಿಸಿ ;||೫೬೭-೫೬೮||

ಅನಂತರ ಆ ಋಷಿಜನರೆಲ್ಲರೂ ವಿಶ್ವೇಶ್ವರನ ಸನ್ನಿಧಿಗೆ ಹೋಗಿ, ಮುಂದೆ ಕಲಿಪುರುಷನು ಸ್ವೇಚ್ಛೆಯಿಂದ ಮಹಾ ಪಾಪಕಾರ್ಯಗಳನ್ನು ಮಾಡಿಸುತ್ತಾ ಬರುವನು ; ಮುಂದೇನು ಮಾಡುವುದು ಎಂದು ಗೋಳಿಡಲಾರಂಭಿಸಿದರು. ||೫೬೯-೫೭೦||

ಭುಕ್ತಿಮುಕ್ತಿಪ್ರದವಾದ ಶೈವಧರ್ಮಗಳು ಕಲಿಯುಗದಲ್ಲಿ ನಿಲ್ಲಲಾರವು. ಅಂತಹ ವೇದಪ್ರತಿಪಾದ್ಯಮಾನವಾದ ಶೈವಧರ್ಮವು ನಾಶವಾದರೆ, ಮುಂದೆ

ಅಶೈವಧರ್ಮನಿರತಾ ಭವಿಷ್ಯಂತಿ ಕಲೌ ನರಾಃ ।
ಅಶೈವಧರ್ಮನಿರತಾ ಗಮಿಷ್ಯಂತಿ ಯಮಾಲಯಂ ॥೫೭೩॥

ಅಶೈವಧರ್ಮನಿರತಾನ್ ದೃಷ್ಟ್ವೈವ ಯಮಕಿಂಕರಾಃ ।
ಪಾತಯಿಷ್ಯಂತಿ ಘೋರೇಷು ನರಕೇಷು ಪುನಃ ಪುನಃ ॥೫೭೪॥

ಅಶೈವಧರ್ಮನಿಷ್ಠಾನಾಂ ಕಲ್ಪಾಂತೇಽಪಿ ವಿನಿಷ್ಕೃತಿಃ ।
ಅಶೈವಾನಾಂ ಸಮುದ್ಧರ್ತಾ ನರಕೇಭ್ಯೋ ನ ಕಶ್ಚನ ॥೫೭೫॥

ಕಾಶ್ಯಾಮಪಿ ಮೃತಾನ್ ಮರ್ತ್ಯಾನ್ ಶೈವಧರ್ಮವಿವರ್ಜಿತಾನ್ ।
ಆಚಂದ್ರಾರ್ಕಂ ಯಾತನಾಸು ಪಾತಯಿಷ್ಯತಿ ಭೈರವಃ ॥೫೭೬॥

ಕಲೌ ಸದಾಶಿವೇ ಭಕ್ತಿರ್ನಭವಿಷ್ಯತಿ ಸರ್ವಥಾ ।
ಶಿವಾರ್ಚನಪರಿತ್ಯಾಗೇ ಯಾತನೈವ ಭವಿಷ್ಯತಿ ॥೫೭೭॥

ಕಲೌ ಶಿವಾರ್ಚನೇ ಭಕ್ತಿರ್ನ ಭವಿಷ್ಯತಿ ಸರ್ವಥಾ ।
ಶಿವಭಕ್ತಿವಿಹೀನಾನಾಂ ಯಾತನೈವ ಭವಿಷ್ಯತಿ ॥೫೭೮॥

---

ಭಕ್ತರಿಗೆ ಐಹಿಕಾಮುಷ್ಮಿಕ ಸುಖಗಳು ದೊರಕುವುದು ಹೇಗೆ? ಎಂದು ಪರಿತಪಿಸಿದರು. ॥೫೭೧-೫೭೨॥

ಕಲಿಯುಗದಲ್ಲಿ ಜನರೆಲ್ಲರೂ ಶೈವಧರ್ಮವನ್ನು ದೂರಮಾಡುವರು. ಅಂತಹವರನ್ನು ನೋಡಿದೊಡನೆಯೇ ಯಮದೂತರು ಅವರನ್ನು ಘೋರ ನರಕಕ್ಕೆ ತಳ್ಳುವರು. ಅಂತೂ ಅಶೈವರೆಲ್ಲರೂ ನರಕಭಾಗಿಗಳಾಗಿ ಕಷ್ಟವನ್ನನುಭವಿಸುವರು.॥೫೭೩-೫೭೪॥

ಶಿವಧರ್ಮ ದೂರರಾದವರಿಗೆ ಕಲ್ಪಾಂತ್ಯದಲ್ಲಿಯೂ ಮುಕ್ತಿಯು ದೊರಕಲಾರದು. ಅಂತಹ ನಾರಕಿಗಳನ್ನು ಉದ್ಧರಿಸುವ ಸಾಮರ್ಥ್ಯವೂ ಯಾರಿಗೂ ಇಲ್ಲ. ಶಿವಧರ್ಮಾನುಯಾಯಿಗಳಲ್ಲದವರು ಕಾಶಿಯಲ್ಲಿ ಮೃತರಾದರೂ ಸಹ ಅವರಿಗೆ ಸೂರ್ಯಚಂದ್ರರಿರುವ ಪರ್ಯಂತ ಘೋರ ನರಕವು ತಪ್ಪಲಾರದು. ॥೫೭೫-೫೭೬॥

ಕಲಿಯುಗದಲ್ಲಿ ಶಿವವಿಷಯಕವಾದ ಭಕ್ತಿಯೂ, ಶಿವಾರ್ಚನೆಯಲ್ಲಿ ಪ್ರಯತ್ನವೂ ಸುಲಭವಾಗಿ ನಡೆಯಲಾರದು. ಹಾಗೆ ಶಿವಭಕ್ತಿ, ಶಿವಾರ್ಚನೆಯನ್ನು ನಡೆಸದಿರುವವರಿಗೆ ದುಃಖವೇ ತಪ್ಪಲಾರದು. ॥೫೭೭-೫೭೮॥

ಶಿವಸಂಸ್ಮರಣೇ ಭಕ್ತಿಃ ಕಲೌ ನೈವ ಭವಿಷ್ಯತಿ ।
ಶಿವಸಂಸ್ಮರಣತ್ಯಾಗೇ ಯಾತನೈವ ಭವಿಷ್ಯತಿ ॥೫೭೯॥

ಶಿವಸಂಕೀರ್ತನೇ ಭಕ್ತಿಃ ಕಲೌ ನೈವ ಭವಿಷ್ಯತಿ ।
ಶಿವಸಂಕೀರ್ತನತ್ಯಾಗೇ ಯಾತನೈವ ಭವಿಷ್ಯತಿ ॥೫೮೦॥

ಕಲಾವುದ್ಧೂಲನೇ ಭಕ್ತಿರ್ನ ಭವಿಷ್ಯತಿ ಸರ್ವಥಾ ।
ಉದ್ಧೂಲನಪರಿತ್ಯಾಗೇ ಯಾತನೈವ ಭವಿಷ್ಯತಿ ॥೫೮೧॥

ತ್ರಿಪುಂಡ್ರಧಾರಣೇ ಶ್ರದ್ಧಾ ಕಲೌ ನೈವ ಭವಿಷ್ಯತಿ ।
ತ್ರಿಪುಂಡ್ರಧಾರಣತ್ಯಾಗೇ ಯಾತನೈವ ಭವಿಷ್ಯತಿ ॥೫೮೨॥

ರುದ್ರಾಕ್ಷಧಾರಣೇ ಭಕ್ತಿಃ ಕಲೌ ನೈವ ಭವಿಷ್ಯತಿ ।
ರುದ್ರಾಕ್ಷಧಾರಣತ್ಯಾಗೇ ಯಾತನೈವ ಭವಿಷ್ಯತಿ ॥೫೮೩॥

ರುದ್ರಾಧ್ಯಾಯಜಪೇ ಭಕ್ತಿಃ ಕಲೌ ನೈವ ಭವಿಷ್ಯತಿ ।
ರುದ್ರಾಧ್ಯಾಯಜಪತ್ಯಾಗೇ ಯಾತನೈವ ಭವಿಷ್ಯತಿ ॥೫೮೪॥

ಪಂಚಾಕ್ಷರಜಪೇ ಭಕ್ತಿಃ ಕಲೌ ನೈವ ಭವಿಷ್ಯತಿ ।
ಪಂಚಾಕ್ಷರಜಪತ್ಯಾಗೇ ಯಾತನೈವ ಭವಿಷ್ಯತಿ ॥೫೮೫॥

ಕಲೌ ಮಹೇಶಯಾತ್ರಾಸು ಭಕ್ತಿರ್ನೈವ ಭವಿಷ್ಯತಿ ।
ಶಿವಯಾತ್ರಾಪರಿತ್ಯಾಗೇ ಯಾತನೈವ ಭವಿಷ್ಯತಿ ॥೫೮೬॥

ಕಲಿಯುಗದಲ್ಲಿ ಶಿವಮೂರ್ತಿಸ್ಮರಣೆ, ಶಿವನಾಮಸ್ಮರಣೆ, ಇವುಗಳಲ್ಲಿ ಜನರಿಗೆ ಮನಸ್ಸು ಓಡಲಾರದು. ಆದರಿಂದ ಅವರು ಸದಾ ಕಷ್ಟಭಾಗಿಗಳಾಗುವರು. ॥೫೭೯-೫೮೦॥

ಭಸ್ಮಲೇಪನ, ಭಸ್ಮತ್ರಿಪುಂಡ್ರಧಾರಣೆ ಇವುಗಳಲ್ಲಿ ಜನರಿಗೆ ಕಲಿಯುಗದಲ್ಲಿ ಆದರವಿರುವುದಿಲ್ಲ ಅದಿಲ್ಲದಿರುವವರಿಗೆ ದುಃಖವು ತಪ್ಪುವುದೇ ಇಲ್ಲ. ॥೫೮೧-೫೮೨॥

ರುದ್ರಾಕ್ಷಧಾರಣೆಯಲ್ಲಿ ಭಕ್ತಿ, ರುದ್ರಾಧ್ಯಾಯಜಪದಲ್ಲಿ ಆದರ ಇವು ಕಲಿಯುಗದಲ್ಲಿ ಜನರಿಗೆ ಸ್ಫುರಿಸಲಾರದು. ಆದರಿಂದಲೇ ಅವರಿಗೆ ಘೋರಯಾತನೆಗಳು ತಪ್ಪಲಾರವು. ॥೫೮೩-೫೮೪॥

ಶಿವಪಂಚಾಕ್ಷರ ಜಪದಲ್ಲಿಯೂ, ಶಿವತೀರ್ಥಯಾತ್ರೆಗಳಲ್ಲಿಯೂ, ಕಲಿಯುಗದ

ಬಿಲ್ವಪತ್ರಾರ್ಚನೇ ಭಕ್ತಿಃ ಕಲೌ ನೈವ ಭವಿಷ್ಯತಿ ।
ಬಿಲ್ವಾರ್ಚನಪರಿತ್ಯಾಗೇ ಯಾತನೈವ ಭವಿಷ್ಯತಿ ॥೫೮೭॥

ಮೋಕ್ಷಪ್ರದೇ ಶಿವಕ್ಷೇತ್ರೇ ಕಲೌ ಭಕ್ತಿರ್ಗಮಿಷ್ಯತಿ ।
ತಸ್ಯಾಂ ಗತಾಯಾಂ ಮರ್ತ್ಯಾನಾಂ ಯಾತನೈವ ಭವಿಷ್ಯತಿ ॥೫೮೮॥

ಕಲೌ ಕಾಶ್ಯಾಮವಸ್ಥಾನೇ ಭಕ್ತಿರ್ನೈವ ಭವಿಷ್ಯತಿ ।
ತತ್ರ ಭಕ್ತಿಪರಿತ್ಯಾಗೇ ಯಾತನೈವ ಭವಿಷ್ಯತಿ ॥೫೮೯॥

ಕಲೌ ಕಲುಷಚಿತ್ತಾನಾಂ ಕಾಶೀತ್ಯಾಗೋ ಭವಿಷ್ಯತಿ ।
ಕಾಶೀತ್ಯಾಗಾದ್ಭವಿಷ್ಯಂತಿ ಪ್ರಾಪ್ತಾ ಯಾಮಿಯಯಾತನಾಃ ॥೫೯೦॥

ಅಶೈವಾನಾಂ ಕಲೌ ಕಾಶ್ಯಾಂ ಅವಸ್ಥಾ ನ ಭವಿಷ್ಯತಿ ।
ತೇಷಾಂ ಭವಿಷ್ಯತ್ಯನಿಶಂ ಘೋರಾ ಭೈರವಯಾತನಾ ॥೫೯೧॥

ದ್ವಿತ್ರಾಃ ಶೈವಾ ಭವಿಷ್ಯಂತಿ ಕಲೌ ಕಾಶ್ಯಾಂ ಶಿವಪ್ರಿಯಾಃ ।
ತೇಷಾಂ ಶಿವೈಕನಿಷ್ಠಾನಾಂ ಕಾಶ್ಯಾಂ ಮುಕ್ತಿರ್ಭವಿಷ್ಯತಿ ॥೫೯೨॥

ಜನರಿಗೆ ಬುದ್ಧಿಯೋಡುವುದಿಲ್ಲ. ಆಗ ಅವರಿಗೆ ಘೋರ ನರಕಗಳು ತಪ್ಪುವುದೇ ಇಲ್ಲ. ||೫೮೫-೫೮೬||

ಬಿಲ್ವಪತ್ರಾರ್ಚನೆಯಲ್ಲಿ ಕಲಿಯುಗದ ಜನರು ಮನಗೊಡಲಾರರು ಅಂತಹವರಿಗೆ ಸುಖವು ಬರುವುದೆಂತು ? ಹಾಗೆಯೇ ಮೋಕ್ಷಪ್ರದವಾದ ಶಿವಕ್ಷೇತ್ರಗಳಿಗೆ ಹೋಗಲು ಜನರು ಹಿಂಜರಿಯುವರು. ಆಗಲೂ ಅವರಿಗೆ ನರಕವು ತಪ್ಪಲಾರದು. ||೫೮೭-೫೮೮||

ಕಾಶೀವಾಸದಲ್ಲಿಯೂ ಸಹ ಜನರು ಆಗ ಬಹುಬೇಸರಪಡುವರು ಕಾಶೀತ್ಯಾಗ ಮಾಡಿದಂತಹ ಕಲುಷಿತ ಚಿತ್ತರಿಗೆ ಯಮಯಾತನೆಗಳು ಎಂದೂ ತಪ್ಪುವಂತಿಲ್ಲ. ||೫೮೯-೫೯೦||

ಕಲಿಯುಗದಲ್ಲಿ ಶಿವಭಕ್ತಿಯಿಲ್ಲದವರಿಗೆ ಕಾಶೀವಾಸವಾಗಲಿ, ಅದರ ಅಭಿಲಾಷೆಯಾಗಲಿ ಉಂಟಾಗಲಾರದು. ಆದರಿಂದಲೇ ಅವರಿಗೆ ಭೈರವಯಾತನೆಯು ತಪ್ಪಲಾರದು. ಒಂದುವೇಳೆ ಕಾಶೀವಾಸದಲ್ಲಿದ್ದು ಶಿವಭಕ್ತಿಯಿಂದ ಶಂಕರನನ್ನು

ಶೈವಧರ್ಮರತಾಃ ಶಿಷ್ಟಾಃ ಕಲಾವತ್ಯಂತದುರ್ಲಭಾಃ ।
ಶ್ರದ್ಧೈವ ಶೈವಧರ್ಮೇಷು ಕಲೌ ನೈವ ಭವಿಷ್ಯತಿ ॥೫೯೩॥

ಕಲಾವಪಿ ಯದಿ ಶ್ರದ್ಧಾ ಶೈವಧರ್ಮೇಷು ಜಾಯತೇ ।
ತದಾ ಪುಣ್ಯಸ್ಯ ನಾಂತೋಽಸ್ತಿ ಸಾ ಸಾಕ್ಷಾನ್ಮೋಕ್ಷದಾ ಯತಃ ॥೫೯೪॥

ಶೈವಧರ್ಮರತೋ ಭೂತ್ವಾ ಕಲಾವವ್ಯಭಿಚಾರತಃ ।
ಯಃ ಶಿವಂ ಪೂಜಯೇನ್ನಿತ್ಯಂ ತಸ್ಯ ಮುಕ್ತಿರದೂರತಃ ॥೫೯೫॥

ಮಹದ್ಭಾಗ್ಯವತಾಮೇವ ಕಲೌ ಭಕ್ತಿರ್ಮಹೇಶ್ವರೇ ।
ಸೈವ ಭಕ್ತಿರ್ಯತಃ ಸಾಕ್ಷಾದ್ಧರ್ಮಾದಿಫಲದಾಯಿನೀ ॥೫೯೬॥

ಕಲಿಂ ಪ್ರಾಪ್ಯಾಪಿ ಕಾಶ್ಯಾಂ ಯಃ ಶೈವಧರ್ಮರತೋ ಭವೇತ್ ।
ತಸ್ಯ ಭಾಗ್ಯಸ್ಯ ನೇಯತ್ತಾ ಸ ಏವ ಪುರುಷೋತ್ತಮಃ ॥೫೯೭॥

ಕಲೌ ನ ಶೈವಧರ್ಮೇಷು ಪ್ರೀತಿಃ ಕಸ್ಯಾಪಿ ಸರ್ವಥಾ ।
ಕಲಿಸಂಕ್ರಾಂತಚಿತ್ತಾನಾಂ ಪ್ರೀತಿಸ್ತೇಷು ಕಥಂ ಭವೇತ್ ॥೫೯೮॥

---

ತೃಪ್ತಿಗೊಳಿಸಿ ಮೋಕ್ಷಸಂಪಾದಿಸುವವರು ಇಬ್ಬರೋ ಮೂವರೋ ದೊರಕಬಹುದು ||೫೯೧-೫೯೨||

ಒಟ್ಟಿನಲ್ಲಿ ಕಲಿಯುಗದಲ್ಲಿ ಶಿವಧರ್ಮಾನುಯಾಯಿಗಳೂ, ಅದರಲ್ಲಿ ಶ್ರದ್ಧೆ ತೋರಿಸುವವರೂ ಅತ್ಯಂತ ದುರ್ಲಭ. ಒಂದುವೇಳೆ ಅಂತಹವರು ಕಲಿಯುಗದಲ್ಲಿ ಇರುವುದಾದರೆ ಅಂತಹವರ ಸುಕೃತಕ್ಕೆ ಕೊನೆಯೇ ಇಲ್ಲವೆಂದು ಹೇಳಬಹುದು. ಏಕೆಂದರೆ ಶೈವಧರ್ಮದಿಂದಲೇ ಕಲಿಯುಗದಲ್ಲಿ ಮುಕ್ತಿ ಲಭಿಸುವುದು.||೫೯೩-೫೯೪||

ಕಲಿಯುಗದಲ್ಲಿ ಯಾರು ಶಿವಧರ್ಮಾಸಕ್ತರಾಗಿದ್ದು ಸದಾ ಶಿವಾರಾಧನೆಯಲ್ಲಿ ಮನವಿಟ್ಟಿರುವರೋ, ಅವರಿಗೆ ಮುಕ್ತಿಯು ಹಸ್ತಗತವೆಂಬುದು ನಿಜ. ಯಾರು ಅತಿಶಯವಾದ ಭಾಗ್ಯಶಾಲಿಗಳೋ, ಅಂತಹವರಿಗೆ ಶಿವಭಕ್ತಿಯುದಯಿಸುವುದು. ಆ ಶಿವಭಕ್ತಿಯೇ ಧರ್ಮಾದಿ ನಿಖಿಲ ಪುರುಷಾರ್ಥಸಾಧನೆಗೆ ಮುಖ್ಯಸಾಧಕವೆನಿಸುವುದು. ||೫೯೫-೫೯೬||

ಕಲಿಯುಗದಲ್ಲಿಯೂ ದೃಢಮನಸ್ಸಿನಿಂದ ಕಾಶೀವಾಸದಲ್ಲಿ ಆಸಕ್ತರಾದವರ ಸುಕೃತವನ್ನು ಅಷ್ಟಿಷ್ಟೆಂದು ಹೇಳಲು ಸಾಧ್ಯವಿಲ್ಲ. ಏಕೆಂದರೆ ಪಾಪಭೂಯಿಷ್ಠವಾದ

ಅಪ್ರಾಪ್ತಕಲಿಕಾಲಾನಾಂ ಕಾಶ್ಯಾಂ ಯದಿ ಮೃತಿರ್ಭವೇತ್ ।
ತದಾ ಭವತ್ಯವಿಘ್ನೇನ ಮುಕ್ತಿರತ್ಯಂತದುರ್ಲಭಾ ॥೫೯೯॥

ಅಪ್ರಾಪ್ತಕಲಿಕಾಲಾನಾಮಸ್ಮಾಕಮಪಿ ಸತ್ವರಂ ।
ಯದಿ ಕಾಶ್ಯಾಂ ತನುತ್ಯಾಗಸ್ತದಾ ಮುಕ್ತಿರವಿಘ್ನತಾ ॥೬೦೦॥

ಅಸ್ಮಾಭಿಶ್ಶೋಷಣೀಯಾನಿ ಶರೀರಾಣಿ ಪ್ರಯತ್ನತಃ ।
ನೋ ಚೇತ್ಕಲಿಯುಗೇಽಸ್ಮಾಕಂ ಕಾಶ್ಯಾಂ ವಾಸೋಽತಿದುರ್ಲಭಃ ॥೬೦೧॥

ಉಪವಾಸ್ಯೈಃ ಶೋಷಿತಾನಿ ಶರೀರಾಣಿ ಶನೈಶ್ಶನೈಃ ।
ಕಾಶ್ಯಾಮೇವ ಪತಿಷ್ಯಂತಿ ತೇನ ಮುಕ್ತಿರ್ಭವಿಷ್ಯತಿ ॥೬೦೨॥

ನ ಯಾವತ್ಕಲಿರಾಯಾತಿ ತಾವತ್ಕಾಶ್ಯಾಂ ತನುವ್ಯಯಃ ।
ನಾನಾಪ್ರಯತ್ನೈಃ ಕರ್ತವ್ಯಃ ಶೀಘ್ರಂ ನಿರ್ವಿಘ್ನಮುಕ್ತಯೇ ॥೬೦೩॥

ಇತಿ ಸಂಕಲ್ಪ್ಯ ತೇ ಸರ್ವೇ ಮುನಯೋ ಬ್ರಹ್ಮವಾದಿನಃ ।
ನಿತ್ಯಂ ನಿರಶನೇನೈವ ಚೇರುರ್ಯಾತ್ರಾದಿತತ್ಪರಾಃ ॥೬೦೪॥

---

ಕಲಿಗಾಲದಲ್ಲಿ ಜನರಿಗೆ ಪವಿತ್ರವಾದ ಶೈವಧರ್ಮದಲ್ಲಿ ಆಸಕ್ತಿಹುಟ್ಟುವುದು ಬಹು ಕಷ್ಟ. ॥೫೯೭-೫೯೮॥

ಕಲಿಗಾಲ ಬರುವುದರೊಳಗಾಗಿ ಕಾಶೀಮರಣವು ಸಂಭವಿಸುವುದಾದರೆ, ನಮಗೆ ಈಗಲೇ ಮುಕ್ತಿಯು ದೊರಕುತ್ತದೆಂಬುದರಲ್ಲಿ ಸಂಶಯವಿಲ್ಲ. ಆದ್ದರಿಂದ ನಾವು ಕಲಿಯುಗವನ್ನು ಕಾಣುವುದರೊಳಗಾಗಿ ಇಲ್ಲಿ ದೇಹತ್ಯಾಗಮಾಡಿದರೆ ನಿರ್ವಿಘ್ನವಾಗಿ ನಮಗೆ ಮುಕ್ತಿಯು ದೊರಕುವುದು. ॥೫೯೯-೬೦೦॥

ಅದಕ್ಕಾಗಿ ನಾವು ನಮ್ಮ ದೇಹಗಳನ್ನು ಪ್ರಯತ್ನಪೂರ್ವಕವಾಗಿ ಇಲ್ಲಿ ಈಗಲೇ ತ್ಯಾಗಮಾಡಬೇಕು. ಬಹುಕಾಲ ಉಪವಾಸವ್ರತವನ್ನು ಕೈಗೊಂಡರೆ ಆಗ ಈ ದೇಹವು ಒಣಗಿ ಹೋಗಿ ನಾಶವಾಗುವುದು. ಆಗ ನಮಗೆ ಸುಲಭವಾಗಿ ಮುಕ್ತಿಯು ದೊರಕುವುದು. ॥೬೦೧-೬೦೨॥

ಹೇಗಾದರೂ ಮಾಡಿ ಕಲಿಯುಗ ಆವಿರ್ಭವಿಸುವುದರೊಳಗಾಗಿ ಇಲ್ಲಿಯೇ ದೇಹತ್ಯಾಗಮಾಡಬೇಕೆಂದು ಬ್ರಹ್ಮವಾದಿಗಳಾದ ಆ ಸಕಲ ಮಹರ್ಷಿಗಳೂ, ನಿರಶನವ್ರತಧಾರಿಗಳಾಗಿ, ಅಲ್ಲಿಯೇ ತೀರ್ಥಯಾತ್ರಾತತ್ಪರರಾಗಿ ಕಾಲಕಳೆಯಲು ಆರಂಭಿಸಿದರು. ॥೬೦೩-೬೦೪॥

ಬಲಾದ್ದತ್ತಮಪಿ ತ್ಯಕ್ತಂ ಜಲಂ ತೈರ್ಮುನಿಪುಂಗವೈಃ ।
ವಲ್ಕಲಾನ್ಯಪಿ ಯತ್ನೇನ ತ್ಯಕ್ತಾನಿ ವಿಗತತ್ರಪೈಃ ॥೬೦೫॥

ಸರ್ವದೋದ್ಧೂಲಿತಾಂಗಾಸ್ತೇ ರುದ್ರಾಕ್ಷಾಭರಣಪ್ರಿಯಾಃ ।
ಸದಾ ಶಿವಕಥಾಸಕ್ತಾಃ ಸದಾ ಕಾಶ್ಯಾಂ ಸ್ಥಿತಾ ದ್ವಿಜಾಃ ॥೬೦೬॥

ಸರ್ವೇಽಪ್ಯನಶನೇನೈವ ಕಾಶ್ಯಾಂ ತೇ ಮುನಿಪುಂಗವಾಃ ।
ಮೃತಾಶ್ಶಿವಪ್ರಸಾದೇನ ಮುಕ್ತಾಶ್ಚ ಮುನಿಪುಂಗವಾಃ ॥೬೦೭॥

ಅತಃ ಕಾಶ್ಯಾಮನಶನೈಸ್ತಪೋಭಿಶ್ಚ ಪ್ರಯತ್ನತಃ ।
ಶೋಷಯಿತ್ವಾ ಶರೀರಾಣಿ ಮರ್ತವ್ಯಂ ಮುಕ್ತಿಕಾಂಕ್ಷಿಭಿಃ ॥೬೦೮॥

ದೈವಾದನಶನಂ ಜಾತಂ ಭವತಾಮಧುನಾ ದ್ವಿಜಾಃ ।
ಯತ್ನೋಽಪ್ಯತ್ರ ನ ಕರ್ತವ್ಯೋ ವಿನಾ ಯತ್ನೇನ ಸಾಧಿತೇ ॥೬೦೯॥

ಉಪೋಷಣೈಶ್ಶೋಷಿತೇಷು ಶರೀರೇಷು ಶನೈಶ್ಶನೈಃ ।
ಭವಿಷ್ಯತ್ಯೇವ ಮರಣಂ ಕಾಶ್ಯಾಂ ಮೋಕ್ಷೈಕಸಾಧನಂ ॥೬೧೦॥

---

ಕೊನೆಗೆ ಜಲಪಾನವನ್ನೂ ದೂರಮಾಡಿದರು. ಯಾರು ಎಷ್ಟು ನಿರ್ಬಂಧ ಪಡಿಸಿದರೂ ತಮ್ಮ ಉಪವಾಸವ್ರತವನ್ನು ನಿಲ್ಲಿಸಲಿಲ್ಲ. ಕೊನೆಕೊನೆಗೆ ಲಜ್ಜಾದಿಗಳಿಗೂ ಮನಗೊಡದೆ ದಿಗಂಬರರಾಗಿದ್ದು ಸರ್ವದಾ ಭಸ್ಮರುದ್ರಾಕ್ಷಿಗಳನ್ನೇ ಧರಿಸಿಕೊಳ್ಳುತ್ತಾ, ಸದಾಶಿವ ಕಥಾನುಸಂಧಾನಮಾಡುವವರಾಗಿ ಕಾಶಿಯಲ್ಲಿಯೇ ನೆಲಸಿದರು. ||೬೦೫-೬೦೬||

ಹಾಗೆಯೇ ಉಪವಾಸಮಾಡುತ್ತಾ ಶಿವಪ್ರಸಾದವನ್ನು ಮಾತ್ರ ಭಕ್ಷಿಸಿ ಕೊನೆಗೆ ಎಲ್ಲರೂ ಅಲ್ಲಿಯೇ ಮೃತರಾದರು. ಅವರಿಗೆ ಶಾಶ್ವತವಾದ ಮುಕ್ತಿಯೂ ದೊರಕಿತು. ಆದ್ದರಿಂದ ನಾವೂ ಸಹ ಈ ಕಾಶಿಯಲ್ಲಿಯೇ ಇದ್ದು ಉಪವಾಸಾದಿ ಕಠಿನ ನಿಯಮಗಳಿಂದ ದೇಹತ್ಯಾಗಮಾಡುವುದುಚಿತ. ||೬೦೭-೬೦೮||

ಎಲೈ ದ್ವಿಜರೆ, ನಿಮಗೆ ಈಗ ನಿಮ್ಮ ಅದೃಷ್ಟವಶದಿಂದ ಉಪವಾಸವೇ ಒದಗಿದೆ. ಅದಕ್ಕಾಗಿ ನೀವು ಯತ್ನವನ್ನೂ ಮಾಡಬೇಕಾಗಿಲ್ಲ. ಇಂತಹ ಉಪವಾಸದಿಂದ ದೇಹವನ್ನು ಒಣಗಿಸಿದರೆ ನಿಜವಾಗಿಯೂ ಮೋಕ್ಷಸಾಧಕವಾದ ಕಾಶೀ ಮರಣವು ಲಭಿಸಿಯೇ ಲಭಿಸುವುದು. |೬೦೯-೬೧೦||

**ಕಾಶೀಬಹಿಶ್ಶರೀರಾಣಿ ನ ಪತಂತಿ ಯಥಾ ತಥಾ ।**
**ಕರ್ತವ್ಯಮತಿಯತ್ನೇನ ಭವದ್ಭಿರ್ಮುಕ್ತಿಕಾಂಕ್ಷಿಭಿಃ ॥೬೧೧॥**

**ದ್ವಿಜಾ ಮುಕ್ತ್ಯರ್ಥಿನೋ ಯೂಯಂ ಸೋಢ್ವಾ ದುಃಖಾನಿ ಸಂತತಂ।**
**ಕಾಶ್ಯಾಂ ತಿಷ್ಠಂತು ಮುಕ್ತ್ಯರ್ಥಂ ಶಾಂತಾ ನಿಶ್ಚಲಮಾನಸಾಃ॥೬೧೨॥**

**ಇಹಾಮುತ್ರಫಲತ್ಯಾಗಃ ಶಾಂತಿರ್ದಾಂತಿಸ್ತಪೋ ಬಲಂ ।**
**ಯಸ್ಯ ತಸ್ಯೈವ ವಿಹಿತಃ ಕಾಶೀವಾಸಃ ಶ್ರುತಿಶ್ರುತಃ ॥೬೧೩॥**

**ಶ್ರುತ್ಯುಕ್ತಶೈವಧರ್ಮಾಣಾಮನುಷ್ಠಾನಂ ತಪಶ್ಶ್ರುತಂ ।**
**ಶೈವಧರ್ಮಾನ್ಯಧರ್ಮಾಣಾಂ ತ್ಯಾಗ ಏವ ದಮಃ ಸ್ಮೃತಃ ॥೬೧೪॥**

**ಉಪಸರ್ಗಸಹಿಷ್ಣುತ್ವಂ ಶಾಂತಿಃ ಸ್ವಕೃತಕರ್ಮಣಾಂ ।**
**ಸಮರ್ಪಣಂ ಮಹೇಶಾಯ ಫಲಂ ತ್ಯಾಗಃ ಶ್ರುತಿಶ್ರುತಃ ॥೬೧೫॥**

**ಏತಾದೃಶಾನಾಂ ಸತತಂ ಶಿವಯಾತ್ರಾರತಾತ್ಮನಾಂ ।**
**ಕಾಶೀವಾಸಸ್ತತೋ ಮುಕ್ತಿರ್ಮಹೇಶಾನುಗ್ರಹಾದ್ದ್ವಿಜಾಃ ॥೬೧೬॥**

---

ಆದರೆ ನಿಮ್ಮ ದೇಹವು ಕಾಶೀಕ್ಷೇತ್ರದಿಂದ ಹೊರಗೆ ಬೀಳದಂತೆ ನೋಡಿಕೊಳ್ಳಬೇಕು. ನೀವು ಮುಕ್ತಿಪ್ರಾಪ್ತಿಗಾಗಿ ಎಷ್ಟೋ ಕಷ್ಟಪಟ್ಟಿರುವಿರಿ. ಇನ್ನು ಕೆಲವುಕಾಲ ಇಲ್ಲಿಯೇ ನಿಶ್ಚಲಮನಸ್ಕರಾಗಿ ನಿಂತು ಶಾಶ್ವತಸುಖವನ್ನು ಪಡೆಯಿರಿ. ||೬೧೧-೬೧೨||

ಯಾವ ಮುಕ್ತಿಗಾಗಿ, ಎಲ್ಲಾ ಸುಖಗಳನ್ನೂ ಬಿಟ್ಟು, ಶಾಂತಿ, ದಾಂತಿ, ತಪಸ್ಸು ಇವುಗಳನ್ನು ಆಚರಿಸಬೇಕೋ, ಅಂತಹ ಮುಕ್ತಿಯು ಇಲ್ಲಿಯೇ ದೊರೆಯುವಾಗ ಕಾಶೀ ವಾಸವನ್ನು ದೂರಮಾಡುವುದು ಯುಕ್ತವೇ! ಶ್ರುತ್ಯುಕ್ತವಾದ ಶೈವ ಧರ್ಮಗಳನ್ನು ಅನುಷ್ಠಾನಮಾಡುವುದೇ ತಪಸ್ಸು. ಇತರ ಧರ್ಮಗಳನ್ನು ದೂರ ಮಾಡುವುದೇ ಧರ್ಮವು. ||೬೧೩-೬೧೪||

ತಾನು ಮಾಡಿದ ಪಾಪಕರ್ಮಫಲದ ಪರಿಹಾರವಾದ ಪ್ರಾಯಶ್ಚಿತ್ತವೇ, ಈ ಕಾಶಿಯಲ್ಲಿ ಘಟಿಸುವ ಬಾಧೆಗಳನ್ನು ಸಹಿಸುವಿಕೆ. ಶಿವಯಾತ್ರಾಸಕ್ತರಿಗೆ ಮತ್ತು ಕಾಶೀವಾಸದಿಂದ ಈಶ್ವರಾನುಗ್ರಹವನ್ನು ಅಪೇಕ್ಷಿಸುವವರಿಗೆ, ಇಂತಹ ತೊಂದರೆಗಳು ಬರುವುದು ಸಂಭಾವಿತ. ಅದನ್ನು ಸಹಿಸುವುದೇ ಶ್ರೇಯಸ್ಕರ. ||೬೧೫-೬೧೬||

ಪುರಾ ವೇದನಿಧಿರ್ನಾಮ ತಪಸ್ವೀ ಶಿವಪೂಜಕಃ ।
ಅವಿಮುಕ್ತಮಿದಂ ಕ್ಷೇತ್ರಂ ಸಮಾಶ್ರಿತ್ಯ ಸ್ಥಿತೋ ದ್ವಿಜಾಃ ॥೬೧೭॥

ಸ ಸದಾ ಭಸ್ಮಪೂತಾಂಗಃ ಸದಾ ರುದ್ರಾಕ್ಷಭೂಷಣಃ ।
ಸದಾ ರುದ್ರಜಪೋದ್ಯುಕ್ತಃ ಸದಾ ಗೌರೀಪ್ರಿಯಾರ್ಚಕಃ ॥೬೧೮॥

ಕರ್ಮಣಾ ಮನಸಾ ವಾಚಾ ಸ ಮಹೇಶಾರ್ಚನೋತ್ಸುಕಃ ।
ಅವಿಮುಕ್ತಂ ಸಮಾಶ್ರಿತ್ಯ ಸ್ಥಿತಃ ಕಲ್ಪಶತಂ ಮುದಾ ॥೬೧೯॥

ಅವಿಮುಕ್ತಂ ನ ಮುಂಚಾಮೀತ್ಯತಿಯತ್ನೇನ ಸಂತತಂ ।
ಕಾಶೀಮೇತಾಂ ಸಮಾಶ್ರಿತ್ಯ ಸ್ಥಿತೋ ಮೋಕ್ಷಾರ್ಥಿನಾಂ ವರಃ॥೬೨೦॥

ಸ ತೇಷು ತೇಷು ಕಾಲೇಷು ಸಾವಧಾನೇನ ಶಂಕರಂ ।
ಪೂಜಯಾಮಾಸ ಪೂತಾಂಗೋ ಬಿಲ್ವಪತ್ರಾದಿಭಿರ್ಮುದಾ ॥೬೨೧॥

ಸ ಸಂಪೂಜ್ಯ ಮಹಾದೇವಂ ಪೂಜಾಂತೇ ಪ್ರತ್ಯಹಂ ಮುದಾ ।
ಕರೋತಿ ಪ್ರಾರ್ಥನಾಮೇವಂ ಕೃತಾಂಜಲಿಪುಟೋ ದ್ವಿಜಾಃ ॥೬೨೨॥

ಹಿಂದೆ ವೇದನಿಧಿಯೆಂಬ ತಪಸ್ವಿಯೊಬ್ಬನಿದ್ದನು. ಆತನು ಅವಿಮುಕ್ತಕ್ಷೇತ್ರವೆನಿಸಿದ ಈ ಕಾಶಿಯಲ್ಲಿಯೇ ವಾಸಿಸುತ್ತಾ, ಭಸ್ಮರುದ್ರಾಕ್ಷಿಗಳಿಂದ ಸದಾ ಅಲಂಕೃತನಾಗಿ, ರುದ್ರಮಂತ್ರಗಳನ್ನೇ ಜಪಿಸುತ್ತಾ ಈಶ್ವರಾರಾಧನೆಯಲ್ಲಿ ಕಾಲಕಳೆಯುತ್ತಿದ್ದನು. ||೬೧೭-೬೧೮||

ಕಾರ್ಯದಲ್ಲಿಯೂ, ಮನಸ್ಸಿನಲ್ಲಿಯೂ, ಮಾತಿನಲ್ಲಿಯೂ ಸದಾ ಶಿವಧರ್ಮವನ್ನೇ ಅವಲಂಬಿಸಿ, ಅವಿಮುಕ್ತಕ್ಷೇತ್ರವೆನಿಸಿದ ಕಾಶಿಯನ್ನು ಎಂದೂ ಬಿಡುವುದಿಲ್ಲವೆಂದು ಪ್ರತಿಜ್ಞೆಮಾಡಿ, ಮೋಕ್ಷಾರ್ಥಿಯಾಗಿ ನೂರಾರು ಕಲ್ಪಪರ್ಯಂತ ಅಲ್ಲಿಯೇ ವಾಸಮಾಡಿದನು. ||೬೧೯-೬೨೦||

ಕಾಲಕಾಲಕ್ಕೆ ತಕ್ಕಂತೆ ಮಹಾದೇವನನ್ನು ಬಿಲ್ವಪತ್ರಾದಿಪೂಜಾದ್ರವ್ಯಗಳಿಂದ ಪೂಜಿಸುತ್ತಾ ಸಾವಧಾನಮನಸ್ಕನಾಗಿ ಪೂಜೆಯೆಲ್ಲಾ ಆದಮೇಲೆ ಪ್ರತಿದಿನವೂ ಅಂಜಲಿಬದ್ಧನಾಗಿ ಹೀಗೆ ಪ್ರಾರ್ಥಿಸುತ್ತಿದ್ದನು. ||೬೨೧-೬೨೨||

ಹರ ಶಂಭೋ ಮಹಾದೇವ ಕಾಶೀವಾಸಂ ಪ್ರಯಚ್ಛ ಮೇ ।
ತರಸಾ ತನುರೇಷಾ ಮೇ ಕಾಶ್ಯಾಮೇವ ಪತಿಷ್ಯತು ॥೬೨೩॥

ಶಿವ ಶಂಭೋ ಮಹೇಶೇತಿ ಗೌರೀಶೇತ್ಯಪಿ ಸಾದರಂ ।
ವದತೋ ಮೇ ಮಹಾದೇವ ನಿರ್ಯಾಂತು ಪ್ರಾಣವಾಯವಃ ॥೬೨೪॥

ವಿಭೂತಿಭೂಷಿತಾಂಗಸ್ಯ ರುದ್ರಾಕ್ಷಾಭರಣಸ್ಯ ಮೇ ।
ತ್ವನ್ಮೂರ್ತಿಂ ಧ್ಯಾಯತಶ್ಶಂಭೋ ಭೂಯಾತ್ಕಾಶ್ಯಾಂ ತನುವ್ಯಯಃ ॥೬೨೫॥

ಶಿವಲಿಂಗಂ ಪಶ್ಯತೋ ಮೇ ಬಿಲ್ವಪತ್ರೈಸ್ಸಮರ್ಚಿತಂ ।
ಪ್ರಾಣಾ ನಿರ್ಯಾಂತು ಮೇ ಶಂಭೋ ಸತ್ವರಂ ತ್ವದನುಗ್ರಹಾತ್ ॥೬೨೬॥

ಏವಂ ಸಂಪ್ರಾರ್ಥ್ಯ ಗೌರೀಶಂ ದತ್ವಾ ಪುಷ್ಪಾಂಜಲಿಂ ತತಃ ।
ಪ್ರಣಾಮಾದೀನಿ ಕೃತ್ವೇಶಂ ಸಂಸ್ಮರನ್ನೇವ ಸಂಸ್ಥಿತಃ ॥೬೨೭॥

ವಿಭೂತಿಧಾರಣಾದೀನಿ ಶ್ರೌತಾನ್ಯೇತಾನಿ ವಸ್ತುತಃ ।
ಮೋಕ್ಷಂ ಪ್ರತ್ಯಂತರಂಗಾನಿ ಸಾಧನಾನೀತಿ ಮನ್ಮಹೇ ॥೬೨೮॥

---

ಶಂಕರನೇ, ಮಹಾದೇವನೇ, ನನಗೆ ಸರ್ವದಾ ಕಾಶೀವಾಸವು ತಪ್ಪದಿರಲಿ. ಕೊನೆಯಲ್ಲಿ ನನ್ನ ಶರೀರವು ಕಾಶಿಯಲ್ಲಿಯೇ ಬಿದ್ದುಹೋಗಲಿ. ಮರಣಕಾಲದಲ್ಲಿ ನಿನ್ನ ಶಿವ, ಶಂಭು, ಮಹೇಶ್ವರ ಎಂಬ ನಾಮಗಳನ್ನು ಉಚ್ಚರಿಸುವ ಶಕ್ತಿಯು ನನಗೆ ಒದಗಲಿ. ॥೬೨೩-೬೨೪॥

ಸರ್ವದಾ ನನ್ನ ದೇಹವು ವಿಭೂತಿಯಿಂದ ಭೂಷಿತವಾಗಿಯೂ, ರುದ್ರಾಕ್ಷಿಯಿಂದ ಅಲಂಕೃತವಾಗಿಯೂ ಇದ್ದು ಕೊನೆಗೆ ನಿನ್ನ ಆಕಾರವನ್ನೇ ಧ್ಯಾನಿಸುತ್ತಾ ಕಾಶಿಯಲ್ಲಿ ಮುಕ್ತವಾಗಲಿ. ಬಿಲ್ವಪತ್ರಾದಿಗಳಿಂದ ಅರ್ಚಿತವಾದ ಶಿವಲಿಂಗವನ್ನು ನೋಡುತ್ತಲೇ, ನನ್ನ ಪ್ರಾಣಗಳು ನನ್ನ ದೇಹಬಿಡುವಂತೆ ಅನುಗ್ರಹಿಸು. ॥೬೨೫-೬೨೬॥

ಹೀಗೆ ಆ ರಾಜನು ಪ್ರಾರ್ಥಿಸಿ, ಪರಶಿವನಿಗೆ ಪುಷ್ಪಾಂಜಲಿಯನ್ನು ಸಮರ್ಪಿಸಿ, ಪ್ರಣಾಮಮಾಡಿ, ಹೀಗೆ ಧ್ಯಾನಮಾಡುತ್ತಾ ನಿಂತನು. ಲೋಕದಲ್ಲಿ ವಿಭೂತಿ ಧಾರಣೆಯೇ ಮೊದಲಾದ ಶಿವಪ್ರೀತಿಕರಗಳಾದ ಧರ್ಮಾಚರಣೆಗಳು ಸಾಕ್ಷಾತ್ ಮುಕ್ತಿಸಾಧನಗಳು, ಎಂಬುದನ್ನು ನಾನು ಅರಿತಿದ್ದೇನೆ. ॥೬೨೭-೬೨೮॥

ಅತೋ ಮುಕ್ತ್ಯಂತರಂಗಾನಿ ಸಾಧನಾನಿ ಮನೀಷಿಭಿಃ ।
ವಿಭೂತಿಧಾರಣಾದೀನಿ ಸಾಧನೀಯಾನಿ ವಸ್ತುತಃ ॥೬೨೯॥

ಮುಕ್ತ್ಯಂತರಂಗಭೂತೇಷು ಸಾಧನೇಷ್ವಖಿಲೇಷ್ವಪಿ ।
ಶ್ರೌತಂ ಶ್ರೇಷ್ಠತಮಂ ಪುಣ್ಯಂ ಕೇವಲಂ ಶಿವಪೂಜನಂ ॥೬೩೦॥

ವಿಭೂತಿಧಾರಣಾದೀನಿ ಸಾಧನಾನಿ ತು ವಸ್ತುತಃ ।
ವೈದಿಕಾನ್ಯುಪಯುಜ್ಯಂತೇ ಶ್ರೀಮಹಾದೇವಪೂಜನಂ ॥೬೩೧॥

ವಿಭೂತಿಧಾರಣಾದೀನಿ ಕುರ್ವನ್ ಕುರ್ವನ್ ಶಿವಾರ್ಚನಂ ।
ಅನಂತೇಭ್ಯೋಽಪಿ ಪಾಪೇಭ್ಯೋ ನ ಬಿಭೇತಿ ಕದಾಚನ ॥೬೩೨॥

ವಿಭೂತಿಧಾರಣಾದೀನಿ ಕುರ್ವನ್ನಪಿ ವಿಮೋಹಿತಃ ।
ಯದರ್ಚಯೇಚ್ಛಿವಾದನ್ಯಂ ಸ ಯಾತಿ ನರಕಂ ಧ್ರುವಂ ॥೬೩೩॥

ಅಯಮರ್ಥಸ್ತು ಜಾಬಾಲೈರ್ಬಹುಧಾ ಪ್ರತಿಪಾದಿತಃ ।
ಏನಮರ್ಥಂ ವಿದಿತ್ವೈವ ಸ ಶಿವಂ ಶರಣಂ ಗತಃ ॥೬೩೪॥

---

ವಿದ್ವಾಂಸರಾದವರು, ಮುಖ್ಯವಾಗಿ ಮುಕ್ತಿಗೆ ವಿಭೂತಿಧಾರಣೆಯೇ ಮೊದಲಾದ ಶೈವಾಚಾರಗಳು ಅಂತರಂಗಸಾಧನಗಳೆಂದೂ, ಅಂತಹ ಅಂತರಂಗಭೂತವಾದ ಕಾರ್ಯಗಳಲ್ಲೆಲ್ಲಾ ಶ್ರುತಿಪ್ರತಿಪಾದಿತವಾದ ಶಿವಪೂಜೆಯೇ ಮುಖ್ಯಸಾಧನವೆಂದೂ ತಿಳಿಯಬೇಕು. ॥೬೨೯-೬೩೦॥

ಶ್ರೀ ಮಹಾದೇವಾರ್ಚನೆಗೆ ವಿಭೂತಿಧಾರಣೆಯೇ ಮೊದಲಾದ ಸಾಧನಗಳು ವೇದೋಕ್ತವಾದವುಗಳು. ಯಾರು ವಿಭೂತಿಧಾರಣೆಯೇ, ಮುಂತಾದ ಸಾಧನೆಗಳನ್ನು ಅವಲಂಬಿಸುತ್ತಾ ಶಿವಾರ್ಚನೆ ನಡೆಸುವರೋ, ಅವರು ಯಾವ ಪಾಪರಾಶಿಯಿಂದಲೂ ಹೆದರಬೇಕಾಗಿಲ್ಲ. ೬೩೧-೬೩೨॥

ವಿಭೂತಿ, ರುದ್ರಾಕ್ಷಿ ಇವುಗಳನ್ನು ಧರಿಸಿಕೊಂಡರೂ, ಯಾರು ಅಜ್ಞಾನದಿಂದ ಶಿವನನ್ನು ಬಿಟ್ಟು ದೇವತಾಂತರವನ್ನು ಪೂಜಿಸುವರೋ ಅವರಿಗೆ ನರಕಪ್ರಾಪ್ತಿಯಾಗುವುದು. ಹೀಗೆಂದು ಜಾಬಾಲೀಯರು ಬಹುವಾಗಿ ಉಪನಿಷತ್ತಿನಲ್ಲಿ ಪ್ರತಿಪಾದಿಸಿರುವರು. ಇದೇ ಅಭಿಪ್ರಾಯವನ್ನು ನಾನು ತಿಳಿದು ಈಗ ಶಂಕರನನ್ನೇ ಮೊರೆಹೊಕ್ಕಿರುವೆನು. ॥೬೩೩-೬೩೪॥

ಏವಂ ಸ್ಥಿತೋ ವೇದನಿಧಿಃ ಸಾಯಂ ಸಂಪೂಜ್ಯ ಶಂಕರಂ ।
ಪಂಚಾಕ್ಷರಂ ಜಪನ್ನೇವ ಚಕಾರ ಶಯನಂ ದ್ವಿಜಾಃ ॥೬೩೫॥

ತತಸ್ಸ್ವಪ್ನಸ್ಸಮಭವತ್ತಸ್ಯ ವೇದನಿಧೇರ್ದ್ವಿಜಾಃ ।
ಜಾತಸ್ವಪ್ನಃ ಸ ಮಾಮೇತ್ಯ ಮಯಿ ಸ್ವಪ್ನಂ ನ್ಯವೇದಯತ್ ॥೬೩೬॥

ಸ್ವಪ್ನವಾರ್ತಾ ತದುಕ್ತಾದ್ಯಾ ಸ್ಮೃತಾ ಸಂಸ್ಕಾರಯೋಗತಃ ।
ಶ್ರೋತವ್ಯಾ ಸಾವಧಾನೇನ ಸಾ ವಾರ್ತಾ ವಕ್ಷ್ಯತೇಧುನಾ ।೬೩೭॥

ಸ್ವಪ್ನೇ ಕಿಲ ಗತಂ ತೇನ ಧೀಮತಾ ನರ್ಮದಾತಟೇ ।
ತತ್ರ ದೃಷ್ಟಾಸ್ತಪೋನಿಷ್ಠಾ ಮುನಯಸ್ತೇ ನ ಶಾಂಭವಾಃ ॥೬೩೮॥

ದೃಷ್ಟ್ವಾ ತಾನ್ ಶಾಂಭವಾನ್ ಧನ್ಯಾನ್ ಶಂಕರಾರ್ಚನತತ್ಪರಾನ್ ।
ಚಕಾರ ಕಿಲ ಸಾನಂದಂ ತೇಭ್ಯಃ ಪೂಜಾಂ ಯಥಾವಿಧಿ ॥೬೩೯॥

ಸ ಪೃಷ್ಟಸ್ತೈರ್ಮುನಿವರೈಃ ಕುತೋ ವಾದ್ಯ ಸಮಾಗತಂ ।
ಗಮ್ಯತೇ ಚ ಕ್ವ ವೇತ್ಯಾದೌ ವದ ನಾಮೇತಿ ಚಾದರಾತ್ ॥೬೪೦॥

ಹೀಗೆ ಯೋಚಿಸಿ ವೇದನಿಧಿನಾಮಕನಾದ ಆ ಬ್ರಾಹ್ಮಣನು ಯೋಚಿಸಿ, ಹಾಗೆಯೇ ಶಿವಪಂಚಾಕ್ಷರೀ ಮಂತ್ರವನ್ನೇ ಪಠಿಸುತ್ತಾ ನಿದ್ರಿಸಿದನು. ಆ ರಾತ್ರಿ ಅವನಿಗೆ ಒಂದು ಸ್ವಪ್ನವಾಯಿತು. ಅದರ ವಿಷಯವಾಗಿ ನನ್ನಲ್ಲಿ ಬಂದು ಆತನೇ ಹೀಗೆ ಹೇಳಿಕೊಂಡನು. ॥೬೩೫-೬೩೬॥

ಅವನು ಹಿಂದೆ ನನ್ನಲ್ಲಿ ಹೇಳಿದ್ದ ಸ್ವಪ್ನವಿಚಾರವು ಸಂಸ್ಕಾರವಶದಿಂದ ನನ್ನ ಸ್ಮೃತಿಪಥದಲ್ಲಿ ಈಗಲೂ ಇದೆ ಅದನ್ನು ಈಗ ನಿನಗೆ ವಿವರಿಸಿ ಹೇಳುವೆನು. ಆದರದಿಂದ ಕೇಳು—ಸ್ವಪ್ನದಲ್ಲಿ ಆತನು ನರ್ಮದಾತೀರಕ್ಕೆ ಹೋದಂತೆ ಭಾಸವಾಯಿತು ಅಲ್ಲಿ ಅನೇಕ ಶಿವಾರ್ಚಕರಾದ ತಪಸ್ವಿಗಳು ವಾಸಿಸುತ್ತಿದ್ದರು. ॥೬೩೭-೬೩೮॥

ಹಾಗೆ ಅವರು ಸರ್ವದಾ ಶಿವಾರ್ಚನೆಯಲ್ಲಿಯೇ ಕಾಲಕಳೆಯುತ್ತಿರುವುದನ್ನು ನೋಡಿ ಆತನು ಆನಂದಭರಿತನಾದನು. ಒಡನೆಯೇ ಅಲ್ಲಿದ್ದ ಶಾಂಭವರೆಲ್ಲಾ "ನೀನು ಯಾರು ? ನಿನ್ನ ಹೆಸರೇನು ? ಎಲ್ಲಿಂದ ಬಂದೆ? ಏತಕ್ಕೆ ಬಂದೆ? ಮುಂದಿನಪ್ರಯಾಣವೆಲ್ಲಿಗೆ? ಎಂದು ಮುಂತಾಗಿ ಪ್ರಶ್ನಿಸಿದರು. ॥೬೩೯-೬೪೦॥

ಇತಿ ಪೃಷ್ಟಃ ಸ ತೈಃಶೈವೈಃ ಸ್ವನಾಮ ಸಮುದೀರಯತ್ ।
ನನಾಮ ದಂಡವದ್ಭೂಮೌ ತತಶ್ಚ ಸ ಸಮುತ್ಥಿತಃ ॥೬೪೧॥

ತತಸ್ತನ್ನಾಮ ತೇ ಶ್ರುತ್ವಾ ವಿಸ್ಮಿತಾಶ್ಚೈವಪುಂಗವಾಃ ।
ತಮೂಚುರ್ನತಪೂತಾಂಗಂ ಕೃತಾಂಜಲಿಪುಟಂ ದ್ವಿಜಾಃ ॥೬೪೨॥

॥ ಮುನಯ ಊಚುಃ ॥

ತ್ವಂಯಾ ವೇದನಿಧೇ ಪೂರ್ವಂ ಕಾಶ್ಯಾಂ ಸ್ಥಿತಮಿತಿ ಶ್ರುತಂ ।
ಉದ್ಧೂಲನತ್ರಿಪುಂಡ್ರಾದಿ ಶಿವಾರಾಧನಪೂರ್ವಕಂ ।೬೪೩॥

ಕಾಶ್ಯಾಂ ತ್ವಯಾ ತಪಶ್ಚರ್ಯಾ ಕ್ರಿಯತೇತಿ ಶ್ರುತಂ ಪುರಾ ।
ತ್ವತ್ಕೃತೇನೋಗ್ರತಪಸಾ ಪ್ರೀತಃ ಶಂಕರ ಇತ್ಯಪಿ ॥೬೪೪॥

ಈದೃಶೇನ ತ್ವಯಾ ಕಾಶೀ ಕಥಂ ತ್ಯಕ್ತಾ ವದಸ್ವ ನಃ ।
ಕಾಶೀತ್ಯಾಗೇ ಮತಿರಭೂತ್ಕಥಂ ವಾ ತವ ಸತ್ತಮ ॥೬೪೫॥

ವಿಪ್ರವೀರ್ಯೋದ್ಭವಸ್ಯಾಪಿ ತವ ವೇದನಿಧೇರ್ದ್ವಿಜ ।
ಕಥಂ ವಾ ಸಮುಭೂತ್ಸೇಯಂ ಕಾಶೀತ್ಯಾಗರತಿರ್ವದ ॥೬೪೬॥

ಒಡನೆಯೇ ಆತನು ತನ್ನ ಹೆಸರನ್ನು ಹೇಳುತ್ತಾ ಅವರಿಗೆ ಸಾಷ್ಟಾಂಗ ಪ್ರಣಾಮಮಾಡಿದನು. ಅಲ್ಲಿದ್ದ ಮುನಿಗಳೆಲ್ಲರೂ ಅವನ ಹೆಸರನ್ನೂ ಆತನು ವಿಧೇಯನಾಗಿ ನಿಂತಿರುವುದನ್ನೂ ನೋಡಿ ಅಚ್ಚರಿಗೊಂಡು ಹೀಗೆಂದರು. ||೬೪೧-೬೪೨||

"ಅಯ್ಯಾ ವೇದನಿಧಿಯೇ, ಹಿಂದೆ ನೀನು ಕಾಶಿಯಲ್ಲಿದ್ದು, ಸದಾ ಭಸ್ಮ ತ್ರಿಪುಂಡ್ರಾದಿಗಳನ್ನು ಧರಿಸಿಕೊಂಡು ಶಿವಾರಾಧನೆ ಗೈಯ್ಯುತ್ತಾ ಶಿವಪ್ರೀತಿಕರವಾದ ತಪಸ್ಸನ್ನು ಮಾಡಿರುವೆ. ಆದಕ್ಕೆ ಶಂಕರನು ಮೆಚ್ಚಿ ನಿನ್ನಲ್ಲಿ ಪ್ರೀತಿಯಿಟ್ಟಿದ್ದನೆಂದೂ ನಾವು ಕೇಳಿದ್ದೆವು. ||೬೪೩-೬೪೪||

ಅಂತಹವನು ನೀನು ಕಾಶಿಯನ್ನು ಬಿಟ್ಟು ಏತಕ್ಕಾಗಿ ಹೊರಟೆ? ಬ್ರಾಹ್ಮಣ ವಂಶದಲ್ಲಿ ಜನಿಸಿ, ವೇದನಿಧಿಯೆನಿಸಿಕೊಂಡ ನಿನಗೆ ಕಾಶೀ ತ್ಯಾಗದಲ್ಲಿ ಮನಸ್ಸು ಹೇಗೆ ಬಂದಿತೋ ತಿಳಿಯದು! ||೬೪೫-೬೪೬||

ಭವಾನ್ವೇದನಿಧಿರ್ನಾಮ್ನಾ ಕೇವಲಂ ನೇತಿ ಶುಶ್ರುಮಃ ।
ಕಿಂ ತ್ವರ್ಥತೋಽಪೀತ್ಯನಿಶಂ ನಾಮ ಸಂಶ್ರೂಯತೇ ತವ ॥೬೪೭॥

ಘೃತಕೋಶಾತಕೀವ ತ್ವಂ ನಾಮ್ನಾ ವೇದನಿಧಿಸ್ತು ನ ।
ಭವಾನದ್ಧಾರ್ಥನಾಮಾಭ್ಯಾಂ ಶ್ರುತೋ ವೇದನಿಧಿರ್ಧ್ರುವಂ ॥೬೪೮॥

ಭವಾನ್ವಿದಿತವೇದಾರ್ಥಃ ಕಾಶೀತತ್ತ್ವವಿದಪ್ಯತಃ ।
ಏತಾದೃಶೇನ ಭವತಾ ಕಾಶೀತ್ಯಾಗಃ ಕಥಂ ಕೃತಃ ॥೬೪೯॥

ಪ್ರಾಯಶೋ ವಿಸ್ಮೃತಾ ವೇದಾ ವೇದಾರ್ಥೋಽಪಿ ವಿಸ್ಮೃತಸ್ತತಃ ।
ಕಾಶೀತ್ಯಾಗಃ ಕೃತೋ ನೂನಂ ತ್ವಯಾ ದುಷ್ಪಥಗಾಮಿನಾ ॥೬೫೦॥

ವೇದೇ ವಿಸ್ಮರಣೇ ಜಾತೇ ವೇದಾರ್ಥೇ ವಿಸ್ಮೃತೇ ತತಃ ।
ವೇದಾರ್ಥಸ್ಯಾನನುಷ್ಠಾನೇ ಪ್ರಯಾಂತಿ ನರಕಂ ದ್ವಿಜಾಃ ॥೬೫೧॥

ಜಾಬಾಲಪ್ರಮುಖೈರ್ವೇದೈರ್ಯಾ ಕಾಶೀ ಪ್ರತಿಪಾದಿತಾ ।
ಸಾ ಕಾಶೀ ದುರ್ಲಭಾ ಪ್ರಾಪ್ತಾ ಕಥಂ ತ್ಯಕ್ತಾ ತ್ವಯಾ ದ್ವಿಜ ॥೬೫೨॥

---

ನೀನು ಕೇವಲ ಹೆಸರಿನಿಂದ ವೇದನಿಧಿಯೆನಿಸಿದವನಲ್ಲ. ನಿಜವಾಗಿಯೂ ವೇದಪಾರಂಗತನಾಗಿ ಹೆಸರಿಗೆ ತಕ್ಕಂತೆ ಯೋಗ್ಯತೆ ಪಡೆದಿದ್ದೀಯೆ. ಘೃತಕೋಶ ವೆಂಬ ಹೆಸರುಳ್ಳವನು ತುಪ್ಪದಲೇಶವೂ ಇಲ್ಲದೆ, ಕೇವಲ ನಾಮಧೇಯದಿಂದ ಜೀವಿಸುವವನಂತೆ ನೀನಿಲ್ಲ, ಅರ್ಥವತ್ತಾದ ವೇದನಿಧಿಯೆನಿಸಿರುವೆ. ॥೬೪೭-೬೪೮॥

ಸಕಲ ವೇದಗಳನ್ನೂ ತಿಳಿದು, ಕಾಶೀ ತತ್ತ್ವವನ್ನು ಸರಿಯಾಗಿ ಅರಿತ ನೀನು ಕಾಶಿಯನ್ನು ಹೇಗೆ ತ್ಯಜಿಸಿ ದೂರಹೋದೆ? ಪ್ರಾಯಿಕವಾಗಿ ವೇದಗಳು ನಿನಗೆ ಮರೆತುಹೋಗಿರಬೇಕು. ವೇದಾರ್ಥಸ್ಮರಣೆಯೂ ನಿಂತಿರಬೇಕು. ಇಲ್ಲದಿದ್ದರೆ ಕಾಶೀ ತ್ಯಾಗವೆಂಬ ದುರ್ಮಾರ್ಗಕ್ಕೆ ನೀನು ಬೀಳುವುದು ಹೇಗೆ? ॥೬೪೯-೬೫೦॥

ದ್ವಿಜರಾದವರು ತಾವು ಕಲಿತ ವೇದದ ಆನುಪೂರ್ವಿಯನ್ನಾಗಲಿ, ವೇದಾರ್ಥವನ್ನಾಗಲಿ ಮರೆತರೆ ಆಗ ಅವರು ನರಕಭಾಗಿಗಳಾಗುವರು. ಅಲ್ಲದೆ ಜಾಬಾಲೋಪನಿಷತ್ತೇ ಮೊದಲಾದ ಉಪನಿಷತ್ತಿನಿಂದ ವಿಶೇಷವಾಗಿ ಸ್ತುತಿಸಲ್ಪಟ್ಟ ಕಾಶೀವಾಸವನ್ನು ನೀನು ಬಿಟ್ಟು ಬಂದೆ ಹೇಗೆ? ಅದು ಅತ್ಯಂತ ದುರ್ಲಭವಲ್ಲವೆ! ॥೬೫೧-೬೫೨॥

ಯತ್ಕಾಶೀವಾಸಜಂ ಸೌಖ್ಯಂ ದ್ಯುಸದಾಮಪಿ ದುರ್ಲಭಂ।
ತತ್ಸೌಖ್ಯಂ ಜೀವತಾ ವಿಪ್ರ ಕಥಂ ತ್ಯಕ್ತಂ ತ್ವಯಾ ವದ ॥೬೫೩॥

ಯಾ ಕಾಶೀ ತಪಸಾ ಪ್ರಾಪ್ತಾ ಭೂಯಸ್ಸ ಶಿವಸೇವಯಾ।
ಸಾ ಕಾಶೀ ಮುಕ್ತಿದಾ ವಿಪ್ರ ಸಂತ್ಯಕ್ತಾ ಹೇಲಯಾ ಕಥಂ ॥೬೫೪॥

ಕಾಶೀಂ ಯಾಂ ಪ್ರಾಪ್ತುಮಿಚ್ಛಂತಿ ಸ್ವರ್ಗಂ ತ್ಯಕ್ತ್ವಾಪಿ ದೇವತಾಃ।
ಸಾ ಕಾಶೀ ಮುಕ್ತಿದಾ ವಿಪ್ರ ಸಂತ್ಯಕ್ತಾ ಹೇಲಯಾ ಕಥಂ ॥೬೫೫॥

ಸತ್ಯಲೋಕಂ ವಿಹಾಯಾಪಿ ಯಾಂ ಪ್ರಾಪ್ತುಂ ವಿಧಿರುದ್ಯತಃ।
ಸಾ ಕಾಶೀ ಮುಕ್ತಿದಾ ವಿಪ್ರ ಸಂತ್ಯಕ್ತಾ ಹೇಲಯಾ ಕಥಂ ॥೬೫೬॥

ವಿಷ್ಣುಸ್ತ್ಯಕ್ತ್ವಾಪಿ ವೈಕುಂಠಂ ಯಃ ಕಾಶೀಂ ಪ್ರಾಪ್ತುಮುದ್ಯತಃ।
ಸಾ ಕಾಶೀ ಮುಕ್ತಿದಾ ವಿಪ್ರ ಸಂತ್ಯಕ್ತಾ ಹೇಲಯಾ ಕಥಂ ॥೬೫೭॥

ಯಸ್ಯಾಂ ಪಾಪಭಯಂ ನಾಸ್ತಿ ಯಸ್ಯಾಂ ಜನ್ಮಭಯಂ ತಥಾ।
ಸಾ ಕಾಶೀ ಮುಕ್ತಿದಾ ವಿಪ್ರ ಸಂತ್ಯಕ್ತಾ ಹೇಲಯಾ ಕಥಂ ॥೬೫೮॥

ಯಸ್ಯಾಂ ಯಮಭಯಂ ನಾಸ್ತಿ ಮಹಾಪಾತಕಿನಾಮಪಿ।
ಸಾ ಕಾಶೀ ಮುಕ್ತಿದಾ ವಿಪ್ರ ಸಂತ್ಯಕ್ತಾ ಹೇಲಯಾ ಕಥಂ ॥೬೫೯॥

ಕಾಶೀವಾಸದಲ್ಲಿ ದೊರೆಯುವ ಸುಖಸಾಮ್ರಾಜ್ಯವು ದೇವತೆಗಳಿಗೂ ಸುಲಭ ಸಾಧ್ಯವಲ್ಲ. ಅಂತಹ ಸುಖವನ್ನು ನೀನು ಹೇಗೆ ಬಿಟ್ಟುಬಂದೆ? ಅನೇಕ ತಪಸ್ಸಿನಿಂದ ಸಂಪಾದಿಸಬೇಕಾದ ಕಾಶಿಯನ್ನು ಹೇಗೋ ಹೊಂದಿ, ಅಲ್ಲಿ ಶಿವಸೇವೆಯಿಂದ ಪೂತ ನೆನಿಸದೆ, ಮುಕ್ತಿಪ್ರದವಾದ ಕಾಶಿಯನ್ನು ಲೀಲೆಯಿಂದ ಹೇಗೆ ಬಿಟ್ಟೆ? ೬೫೩-೬೫೪॥

ದೇವತೆಗಳು ಸ್ವರ್ಗಲೋಕವನ್ನೂ, ಬ್ರಹ್ಮನು ಸತ್ಯಲೋಕವನ್ನೂ ಬಿಟ್ಟು ಬಂದು ಕಾಶಿಯಲ್ಲಿ ನೆಲಸಲು ಅಪೇಕ್ಷಿಸುವರು. ಹಾಗಿರುವಾಗ ನೀನು ಹೇಗೆ ಬಿಡುವೇ? ॥೬೫೫-೬೫೬॥

ವಿಷ್ಣುವು ವೈಕುಂಠಕ್ಕಿಂತಲೂ ಹೆಚ್ಚಾದ ಪ್ರೀತಿಯನ್ನು ಕಾಶಿಯಲ್ಲಿಟ್ಟಿರುವನು. ಅಲ್ಲಿ ಪಾಪಭಯವಾಗಲಿ, ಮತ್ತೆ ಜನ್ಮತಾಳುವ ಹೆದರಿಕೆಯಾಗಲಿ ಇಲ್ಲ. ಅಲ್ಲಿ ನೆಲಸಿರುವ ಮಹಾಪಾಪಿಗಳಿಗೂ, ಯಮಭಯವಿಲ್ಲ. ಮರಣಕಾಲದಲ್ಲಿಯೂ

ಯಸ್ಯಾಂ ಮೃತ್ಯುಭಯಂ ನಾಸ್ತಿ ಮರಣಾಸನ್ನದೇಹಿನಾಂ।
ಸಾ ಕಾಶೀ ಮುಕ್ತಿದಾ ವಿಪ್ರ ಸಂತ್ಯಕ್ತಾ ಹೇಲಯಾ ಕಥಂ ॥೬೬೦॥

ಯಸ್ಯಾಂ ಕಾಶ್ಯಾಂ ಪ್ರವಿಷ್ಟಾ ಯೇ ತೇ ಪ್ರವಿಷ್ಟಾಃ ಶಿವೋದರೇ।
ಸಾ ಕಾಶೀ ಮುಕ್ತಿದಾ ವಿಪ್ರ ಸಂತ್ಯಕ್ತಾ ಹೇಲಯಾ ಕಥಂ ॥೬೬೧॥

ಯಾ ಕಾಶೀ ಸಂಸ್ಮೃತಾಪ್ಯೇನಾಂಸ್ಯನಿಶಂ ನಾಶಯಿಷ್ಯತಿ।
ಸಾ ಕಾಶೀ ಮುಕ್ತಿದಾ ವಿಪ್ರ ಸಂತ್ಯಕ್ತಾ ಹೇಲಯಾ ಕಥಂ ॥೬೬೨॥

ಯಾ ಕಾಶೀ ಸಂಶ್ರುತಾಪ್ಯಾಶಾಂ ವಿವಿಧಾಂ ಪೂರಯಿಷ್ಯತಿ।
ಸಾ ಕಾಶೀ ಮುಕ್ತಿದಾ ವಿಪ್ರ ಸಂತ್ಯಕ್ತಾ ಹೇಲಯಾ ಕಥಂ ॥೬೬೩॥

ಯಾ ಕಾಶೀ ಸಂಸ್ತುತಾ ಪುಣ್ಯೈರ್ವಿವಿಧೈರ್ಯೋಜಯಿಷ್ಯತಿ।
ಸಾ ಕಾಶೀ ಮುಕ್ತಿದಾ ವಿಪ್ರ ಸಂತ್ಯಕ್ತಾ ಹೇಲಯಾ ಕಥಂ ॥೬೬೪॥

ಯಾ ಕಾಶೀ ಸರ್ವವೇದಾನಾಂ ಸ್ತುತಾ ಸಮುಭವನ್ಮುನೇ।
ಸಾ ಕಾಶೀ ಮುಕ್ತಿದಾ ವಿಪ್ರ ಸಂತ್ಯಕ್ತಾ ಹೇಲಯಾ ಕಥಂ ॥೬೬೫॥

ಯಾದೃಶೀ ಶಂಕರಸ್ಯಾಪಿ ಜಾತಾ ಪ್ರಿಯತಮಾ ಸದಾ।
ಸಾ ಕಾಶೀ ಮುಕ್ತಿದಾ ವಿಪ್ರ ಸಂತ್ಯಕ್ತಾ ಹೇಲಯಾ ಕಥಂ ॥೬೬೬॥

ಅಲ್ಲಿ ಮೃತ್ಯುಭಯವು ದೊರೆಯುವುದಿಲ್ಲ. ಶಿವಮಹಿಮೆಯಿಂದ ಅಲ್ಲಿ ಈ ಯಾವುವೂ ತೋರಿಬರುವುದಿಲ್ಲ ಅಂತಹ ಕ್ಷೇತ್ರವನ್ನು ನೀನು ಹೇಗೆ ಬಿಟ್ಟೆ? ॥೬೫೭-೬೫೮-೬೫೯ ೬೬೦॥

ಕಾಶಿಯನ್ನು ಹೊಕ್ಕವರು ಈಶ್ವರನ ಹೃದಯವನ್ನು ಹೊಕ್ಕಂತೆಯೇ. ಕಾಶಿಯ ಸ್ಮರಣೆ, ಸ್ತುತಿ, ಶ್ರವಣ ಮುಂತಾದುವುಗಳಿಂದಲೂ ಮಾನವರು ಸಕಲ ಇಷ್ಟಾರ್ಥಗಳನ್ನೂ ಪಡೆಯುವರಲ್ಲದೆ, ತಮ್ಮ ಅಖಂಡ ಪಾಪರಾಶಿಯನ್ನೂ ಕಳೆದುಕೊಳ್ಳುವರು. ಅಂತಹ ಕ್ಷೇತ್ರವನ್ನು ಬಿಟ್ಟುಬರುವುದು ಅನುಚಿತವಲ್ಲವೆ! ॥೬೬೧-೬೬೨-೬೬೩-೬೬೪ ೬೬೫॥

ಶಂಕರನಿಗೂ ಅತ್ಯಂತ ಪ್ರೀತಿಕರವಾದ ಕಾಶಿಯು ಸಕಲ ದೇವತೆಗಳಿಗೂ ಪೂಜ್ಯವೆನಿಸಿದೆಯಲ್ಲವೆ! ಸಾಕಾರಬ್ರಹ್ಮಸ್ವರೂಪವೇ ಅದು. ಸತ್, ಚಿತ್, ಆನಂದ

ಯಾ ಕಾಶೀ ಸರ್ವದೇವಾನಾಂ ಆಸೀತ್ಪೂಜ್ಯತಮಾ ಸದಾ।
ಸಾ ಕಾಶೀ ಮುಕ್ತಿದಾ ವಿಪ್ರ ಸಂತ್ಯಕ್ತ್ವಾ ಹೇಲಯಾ ಕಥಂ ॥೬೬೭॥

ಯಾ ಕಾಶೀ ಬ್ರಹ್ಮಸಾಕಾರಂ ಸಚ್ಚಿದಾನಂದಲಕ್ಷಣಂ।
ಸಾ ಕಾಶೀ ಮುಕ್ತಿದಾ ವಿಪ್ರ ಸಂತ್ಯಕ್ತ್ವಾ ಹೇಲಯಾ ಕಥಂ ॥೬೬೮॥

ಯಾ ಕಾಶೀ ಬ್ರಹ್ಮವಿಜ್ಞಾನಮಾನಂದಂ ಪರಮಂ ಪದಂ।
ಸಾ ಕಾಶೀ ಮುಕ್ತಿದಾ ವಿಪ್ರ ಸಂತ್ಯಕ್ತ್ವಾ ಹೇಲಯಾ ಕಥಂ ॥೬೬೯॥

ಯಾ ಕಾಶೀ ನಿಷ್ಕಲಂ ಬ್ರಹ್ಮ ಶಿವಮದ್ವಯಮುಚ್ಯತೇ।
ಸಾ ಕಾಶೀ ಮುಕ್ತಿದಾ ವಿಪ್ರ ಸಂತ್ಯಕ್ತ್ವಾ ಹೇಲಯಾ ಕಥಂ ॥೬೭೦॥

ಯಾ ಕಾಶೀ ಪಾವನೀ ಸಾಕ್ಷಾತ್ಪಾವನಾನಾಂ ಚ ಪಾವನೀ।
ಸಾ ಕಾಶೀ ಮುಕ್ತಿದಾ ವಿಪ್ರ ಸಂತ್ಯಕ್ತ್ವಾ ಹೇಲಯಾ ಕಥಂ ॥೬೭೧॥

ಯಾ ಕಾಶೀ ಪರಮಂ ಜ್ಯೋತಿರನಾದ್ಯಂತಾ ಸನಾತನಾ।
ಸಾ ಕಾಶೀ ಮುಕ್ತಿದಾ ವಿಪ್ರ ಸಂತ್ಯಕ್ತ್ವಾ ಹೇಲಯಾ ಕಥಂ ॥೬೭೨॥

ಯಾ ಕಾಶೀ ಮೋಕ್ಷವನಿತಾ ವಿಲಾಸವಿಲಸತ್‌ಸ್ಥಲೀ।
ಸಾ ಕಾಶೀ ಮುಕ್ತಿದಾ ವಿಪ್ರ ಸಂತ್ಯಕ್ತ್ವಾ ಹೇಲಯಾ ಕಥಂ ॥೬೭೩॥

ಯಾ ಕಾಶೀ ಪರಯಾ ಭಕ್ತ್ಯಾ ಸದಾ ಸೇವ್ಯತಮಾ ಸ್ಮೃತಾ।
ಸಾ ಕಾಶೀ ಮುಕ್ತಿದಾ ವಿಪ್ರ ಸಂತ್ಯಕ್ತ್ವಾ ಹೇಲಯಾ ಕಥಂ ॥೬೭೪॥

ಗಳೇ ಲಕ್ಷಣವಾಗಿ ಉಳ್ಳ ನಿರಾಕಾರಬ್ರಹ್ಮಸ್ವರೂಪವೂ ಆದೇ. ಪರಮಪದವೆನಿಸಿದ ಬ್ರಹ್ಮಜ್ಞಾನವೇ ಅದು. ನಾಶರಹಿತವೂ, ಕಲಾವಿರಹಿತವೂ, ದ್ವಿತೀಯರಹಿತವೂ ಆದ ಶಿವಸ್ವರೂಪವೇ ಕಾಶೀಕ್ಷೇತ್ರ. ಅದನ್ನು ಬಿಟ್ಟಿ ಏಕೆ? ||೬೬೬-೬೬೭-೬೬೮-೬೬೯-೬೭೦||

ಲೋಕದಲ್ಲಿ ಪವಿತ್ರವಸ್ತುಗಳೆನಿಸಿದವುಗಳನ್ನೆಲ್ಲಾ ಕಾಶಿಯು ಮತ್ತೂ ಪವಿತ್ರಗೊಳಿಸುವುದು. ಆದ್ಯಂತರಹಿತವಾದ ಜ್ಯೋತಿಯೆಂದರೆ ಕಾಶಿಯೇ. ಮುಕ್ತಿವನಿತೆಯ ವಿಹಾರಸ್ಥಾನದಂತೆ, ಸರ್ವರಿಂದಲೂ ಭಕ್ತಿಪೂರ್ವಕವಾಗಿ ಸೇವಿಸಲ್ಪಡುವ ಕ್ಷೇತ್ರವೇ ಕಾಶಿ. ಅಲ್ಲಿ ಅನೇಕ ಗಣನಾಥರೂ, ಶಿವಗಣಗಳೂ ಸರ್ವದಾ ಸಂತೋಷ

ಯಾ ಕಾಶೀ ಗಣನಾಥಾದ್ಯೈರ್ಗಣವೃಂದೈರುಪಾಶ್ರಿತಾ ।
ಸಾ ಕಾಶೀ ಮುಕ್ತಿದಾ ವಿಪ್ರ ಸಂತ್ಯಕ್ತ್ವಾ ಹೇಲಯಾ ಕಥಂ ॥೬೭೫॥

ಯಾ ಕಾಶೀ ಕಾಲಕಾಲೇನ ಭೈರವೇಣ ಸಮಾಶ್ರಿತಾ ।
ಸಾ ಕಾಶೀ ಮುಕ್ತಿದಾ ವಿಪ್ರ ಸಂತ್ಯಕ್ತ್ವಾ ಹೇಲಯಾ ಕಥಂ ॥೬೭೬॥

ಯಾ ಕಾಶೀ ವಿವಿಧೈರ್ದೇವೈರ್ಮೂರ್ತಿಮದ್ಭಿರುಪಾಶ್ರಿತಾ ।
ಸಾ ಕಾಶೀ ಮುಕ್ತಿದಾ ವಿಪ್ರ ಸಂತ್ಯಕ್ತ್ವಾ ಹೇಲಯಾ ಕಥಂ ॥೬೭೭॥

ಯಾ ಕಾಶೀ ವಿಶ್ವನಾಥೇನ ಸ್ವಾತ್ಮವದ್ದೃಶ್ಯತೇ ಸದಾ ।
ಸಾ ಕಾಶೀ ಮುಕ್ತಿದಾ ವಿಪ್ರ ಸಂತ್ಯಕ್ತ್ವಾ ಹೇಲಯಾ ಕಥಂ ॥೬೭೮॥

ಯಾ ಕಾಶೀ ವಿವಿಧೈಸ್ತೀರ್ಥೈರ್ಮೂರ್ತಿಮದ್ಭಿರುಪಾಸಿತಾ ।
ಸಾ ಕಾಶೀ ಮುಕ್ತಿದಾ ವಿಪ್ರ ಸಂತ್ಯಕ್ತ್ವಾ ಹೇಲಯಾ ಕಥಂ ॥೬೭೯॥

ಯಾ ಕಾಶೀ ವಿವಿಧೈರ್ದೇವೈರ್ಮೂರ್ತಿಮದ್ಭಿರುಪಾಶ್ರಿತಾ ।
ಸಾ ಕಾಶೀ ಮುಕ್ತಿದಾ ವಿಪ್ರ ಸಂತ್ಯಕ್ತ್ವಾ ಹೇಲಯಾ ಕಥಂ ॥೬೮೦॥

ಯಾ ಕಾಶೀ ವಿಶ್ವನಾಥೇನ ಸ್ವಾತ್ಮವದ್ದೃಶ್ಯತೇ ಸದಾ ।
ಸಾ ಕಾಶೀ ಮುಕ್ತಿದಾ ವಿಪ್ರ ಸಂತ್ಯಕ್ತ್ವಾ ಹೇಲಯಾ ಕಥಂ ॥೬೮೧॥

ದಿಂದ ನೆಲಸಿರುವುವು. ಅಂತಹ ಕ್ಷೇತ್ರತ್ಯಾಗದಲ್ಲಿ ನಿನಗೆ ಮನಸ್ಸು ಹೇಗೆ ಬಂದಿತು ? ॥೬೭೧-೬೭೨-೬೭೩-೬೭೪-೬೭೫॥

ಕಾಲಕಾಲನಾದ ಭೈರವನಿಗೂ, ಮೂರ್ತಿಮತ್ತಾಗಿರುವ ಸಕಲ ದೇವತೆಗಳಿಗೂ ಮೂಲಸ್ಥಾನವೆನಿಸಿದ ಕಾಶಿಯನ್ನು ಶಂಕರನು ತನ್ನ ಆತ್ಮೀಯವಸ್ತುವೆಂದು ಭಾವಿಸಿರುವನು. ಅಲ್ಲಿ ಸಕಲ ಮಹಿಮಾದರ್ಶಕಗಳಾದ ತೀರ್ಥಗಳೆಲ್ಲವೂ ನೆಲಸಿರುವುವು. ಸಕಲ ದೇವತೆಗಳಿಗೂ ಪೂಜ್ಯಮಾತೆಯೆನಿಸಿದ ದೇವಗಂಗೆಗೆ ಆಶ್ರಯಭೂತವಾದದ್ದು ಆ ಕಾಶಿಯೇ ಅಲ್ಲವೆ? ಅಂತಹ ಕ್ಷೇತ್ರವನ್ನು ದೂರಮಾಡಿದುದು ಹೇಗೆ? ॥೬೭೬-೬೭೭-೬೭೮-೬೭೯-೬೮೦॥

ವಿಶ್ವನಾಥನೆನಿಸಿದ ಮಹೇಶ್ವರನ ಆತ್ಮವೇ ಕಾಶಿ ಆತನ ವಿಹಾರಸ್ಥಾನವೇ ಕಾಶಿ. ಅಲ್ಲಿಯ ವಾಸದಿಂದ, ಅನೇಕ ಸುಕೃತರಾಶಿಯಿಂದ ಲಭಿಸುವ ಬ್ರಹ್ಮಾನಂದವು

ಯಾ ಕಾಶೀ ಗಿರಿಜಾಬಂಧೋರ್ವಿಲಾಸಸದನಂ ವಿಭೋಃ ।
ಸಾ ಕಾಶೀ ಮುಕ್ತಿದಾ ವಿಪ್ರ ಸಂತ್ಯಕ್ತ್ವಾ ಹೇಲಯಾ ಕಥಂ ॥೬೮೨॥

ಯಾ ಕಾಶೀ ಭೂರಿಪುಣ್ಯಾಬ್ಧಿ ಬ್ರಹ್ಮಾನಂದಪ್ರವರ್ಧಿನೀ ।
ಸಾ ಕಾಶೀ ಮುಕ್ತಿದಾ ವಿಪ್ರ ಸಂತ್ಯಕ್ತ್ವಾ ಹೇಲಯಾ ಕಥಂ ॥೬೮೩॥

ಯಾ ಕಾಶೀ ಶಂಕರಾಕಾರಾದ್ದುಷ್ಪ್ರಾಪಾ ತಪಸಾಮಪಿ ।
ಸಾ ಕಾಶೀ ಮುಕ್ತಿದಾ ವಿಪ್ರ ಸಂತ್ಯಕ್ತ್ವಾ ಹೇಲಯಾ ಕಥಂ ॥೬೮೪॥

ಯಾ ಕಾಶೀ ಕಾಮಧುಗ್ದೃಷ್ಟೀ ಮುಕ್ತಿದುಗ್ಧಪ್ರದಾಯಿನೀ ।
ಸಾ ಕಾಶೀ ಮುಕ್ತಿದಾ ವಿಪ್ರ ಸಂತ್ಯಕ್ತ್ವಾ ಹೇಲಯಾ ಕಥಂ ॥೬೮೫॥

ಯಾ ಕಾಶೀ ಸುರಮಂದಾರೋ ಮುಕ್ತಿಪುಷ್ಪಫಲಪ್ರದಾ ।
ಸಾ ಕಾಶೀ ಮುಕ್ತಿದಾ ವಿಪ್ರ ಸಂತ್ಯಕ್ತ್ವಾ ಹೇಲಯಾ ಕಥಂ ॥೬೮೬॥

ಯಾ ಕಾಶೀ ಜಲಭುಕ್ಪಾಪದಾವಾನಲವಿನಾಶಿನೀ ।
ಸಾ ಕಾಶೀ ಮುಕ್ತಿದಾ ವಿಪ್ರ ಸಂತ್ಯಕ್ತ್ವಾ ಹೇಲಯಾ ಕಥಂ ॥೬೮೭॥

ಯಸ್ಯಾಂ ಕಾಶ್ಯಾಂ ಸ್ಥಿತಾ ಮರ್ತ್ಯಾ ನಮಸ್ಯಂತೇ ದಿವೌಕಸೈಃ ।
ಸಾ ಕಾಶೀ ಮುಕ್ತಿದಾ ವಿಪ್ರ ಸಂತ್ಯಕ್ತ್ವಾ ಹೇಲಯಾ ಕಥಂ ॥೯೮೮॥

ಯಸ್ಯಾಂ ಕಾಶ್ಯಾಂ ಸ್ಥಿತಾ ಮರ್ತ್ಯಾಃ ನಿವಸಂತಿ ನಿರಾಕುಲಾಃ ।
ಸಾ ಕಾಶೀ ಮುಕ್ತಿದಾ ವಿಪ್ರ ಸಂತ್ಯಕ್ತ್ವಾ ಹೇಲಯಾ ಕಥಂ ॥೬೮೯॥

ಯಸ್ಯಾಂ ಕಾಶ್ಯಾಂ ಸ್ಥಿತಾ ಮರ್ತ್ಯಾಃ ಸ್ವರ್ಗಂ ನೇಚ್ಛಂತಿ ತೇಜಸಾ ।
ಸಾ ಕಾಶೀ ಮುಕ್ತಿದಾ ವಿಪ್ರ ಸಂತ್ಯಕ್ತ್ವಾ ಹೇಲಯಾ ಕಥಂ ॥೬೯೦॥

ಸುಲಭವಾಗಿ ದೊರೆಯುವುದು. ಶಂಕರನ ಸ್ವರೂಪವನ್ನು ದರ್ಶನಮಾಡುವುದು ಎಷ್ಟು ಕಷ್ಟಸಾಧ್ಯವೋ ಅಷ್ಟೇ, ತಪಸ್ಸಿನಿಂದ ಕಾಶಿಯನ್ನು ಹೊಂದಲು ಸಾಧ್ಯವಾದೀತು. ಒಟ್ಟಿನಲ್ಲಿ ಕಾಶಿಯು ಕಾಮಧೇನುವಿನಂತೆ ಭುಕ್ತಿಮುಕ್ತಿ ಇವುಗಳನ್ನು ಆರಾಧಕರಿಗೆ ಕೊಡತಕ್ಕದ್ದು ಅಂತಹ ಕ್ಷೇತ್ರವನ್ನು ಬಿಡುವುದುಚಿತವೇ? ॥೬೮೧-೬೮೨-೬೮೩-೬೮೪-೬೮೫॥

ಕಾಶಿಯೆಂಬುದು ಮುಕ್ತಿಯೆಂಬ ಪುಷ್ಪವನ್ನು ಕೊಡುವ ಮಂದಾರವೃಕ್ಷವೆಂದು ತಿಳಿ. ಕಾಶಿಯಲ್ಲಿ ಜಲಪಾನಮಾಡುವುದರಿಂದ ಮಾನವನ ಪಾಪರಾಶಿ

ಯಸ್ಯಾಂ ಕಾಶ್ಯಾಂ ಸ್ಥಿತಾ ಮರ್ತ್ಯಾ ಧಿಕ್ಕುರ್ವಂತಿ ಹರೇಃ ಪದಂ ।
ಸಾ ಕಾಶೀ ಮುಕ್ತಿದಾ ವಿಪ್ರ ಸಂತ್ಯಕ್ತಾ ಹೇಲಯಾ ಕಥಂ ॥೬೯೧॥

ಯಸ್ಯಾಂ ಕಾಶ್ಯಾಂ ಸ್ಥಿತಾ ಮರ್ತ್ಯಾ ಧಿಕ್ಕುರ್ವಂತಿ ವಿಧೇಃ ಪದಂ ।
ಸಾ ಕಾಶೀ ಮುಕ್ತಿದಾ ವಿಪ್ರ ಸಂತ್ಯಕ್ತಾ ಹೇಲಯಾ ಕಥಂ ॥೬೯೨॥

ಯಸ್ಯಾಂ ಕಾಶ್ಯಾಂ ಸ್ಥಿತಾ ಮರ್ತ್ಯಾ ಧಿಕ್ಕುರ್ವಂತಿ ಶಚೀಪತಿಂ ।
ಸಾ ಕಾಶೀ ಮುಕ್ತಿದಾ ವಿಪ್ರ ಸಂತ್ಯಕ್ತಾ ಹೇಲಯಾ ಕಥಂ ॥೬೯೩॥

ಯಸ್ಯಾಂ ಕಾಶ್ಯಾಂ ಸ್ಥಿತಾ ಮರ್ತ್ಯಾ ನ ಶೋಚಂತಿ ಕದಾಚನ ।
ಸಾ ಕಾಶೀ ಮುಕ್ತಿದಾ ವಿಪ್ರ ಸಂತ್ಯಕ್ತಾ ಹೇಲಯಾ ಕಥಂ ॥೬೯೪॥

ಯಸ್ಯಾಂ ಕಾಶ್ಯಾಂ ಗೃಹಕೃತಂ ದುಃಖಂ ನೈವಾಭಿಜಾಯತೇ ।
ಸಾ ಕಾಶೀ ಮುಕ್ತಿದಾ ವಿಪ್ರ ಸಂತ್ಯಕ್ತಾ ಹೇಲಯಾ ಕಥಂ ॥೬೯೫॥

ಯಸ್ಯಾಂ ಕಾಶ್ಯಾಮಜರಜೋಽಪ್ಯಮರ್ತ್ಯೈರಾದರಾದ್ಧೃತಂ ।
ಸಾ ಕಾಶೀ ಮುಕ್ತಿದಾ ವಿಪ್ರ ಸಂತ್ಯಕ್ತಾ ಹೇಲಯಾ ಕಥಂ ॥೬೯೬॥

ಯಸ್ಯಾಂ ಕಾಶ್ಯಾಂ ಸುರಾಶಾಸ್ಯಂ ಖರಸಮ್ಮಾರ್ಜನೀರಜಃ ।
ಸಾ ಕಾಶೀ ಮುಕ್ತಿದಾ ವಿಪ್ರ ಸಂತ್ಯಕ್ತಾ ಹೇಲಯಾ ಕಥಂ ॥೬೯೭॥

ಯೆಲ್ಲವೂ ನಿರ್ಮೂಲವಾಗುವುದು. ಕಾಶೀವಾಸಿಗಳನ್ನು ದೇವತೆಗಳೂ ಗೌರವಿಸುವರು. ಅವರಿಗೆ ಯಾವ ವಿಪತ್ತುಗಳೂ ಸಂಭವಿಸಲಾರವು. ಅಲ್ಲಿರುವ ತೇಜಸ್ವಿಗಳು ಸ್ವರ್ಗವಾಸವನ್ನು ಸಹ ಬಯಸುವುದಿಲ್ಲ. ||೬೮೬-೬೮೭-೬೮೮-೬೮೯-೬೯೦||

ಕಾಶಿಯಲ್ಲಿ ವಾಸಮಾಡುವ ಜನರು, ವಿಷ್ಣುವಿನ ಸ್ಥಾನವನ್ನೂ, ಬ್ರಹ್ಮಪದವಿಯನ್ನೂ, ಇಂದ್ರಭೋಗವನ್ನೂ ಸಹ ತಿರಸ್ಕರಿಸುವರು. ಅವರು ಎಂದೂ ದುಃಖಪಡುವುದಿಲ್ಲ. ಗೃಹಕೃತ್ಯದ ಈತಿಬಾಧೆಗಳು ಅವರನ್ನು ಎಂದಿಗೂ ಪೀಡಿಸಲಾರವು. ಅಂತಹ ಕಾಶಿಯನ್ನು ಬಿಡುವುದು ನ್ಯಾಯುವೆ? ||೬೯೧-೬೯೨-೬೯೩-೬೯೪-೬೯೫||

ಕಾಶಿಯಲ್ಲಿ ಸಂಚರಿಸುವ ಆಡುಗಳ ಪಾದಧೂಳಿ, ಕತ್ತೆಯ ಕಾಲುಮಣ್ಣು, ಬೀದಿಯ ಕಸ ಇವುಗಳೂ ಪವಿತ್ರವಾದವುಗಳೇ. ಒಟ್ಟಿನಲ್ಲಿ ಕಾಶಿಗತವಾದ ಸಕಲ

ಈದೃಶೀ ಪರಮಾ ಕಾಶೀ ಯೇನ ಸಂತ್ಯಜ್ಯತೇ ಭ್ರಮಾತ್
ನ ತೇನ ಸದೃಶಃ ಪಾಪೀ ಲೋಕೇ ಕ್ವಾಪೀತಿ ದೃಶ್ಯತೇ ॥೧೯೮॥

ವಾನರೇಣ ಯಥಾ ರತ್ನಂ ನ ವಿಜ್ಞಾತಂ ತಥಾ ನರೈಃ ।
ಕಾಶೀತತ್ತ್ವಂ ನ ವಿಜ್ಞಾತಂ ಸತ್ಯಂ ಸತ್ಯಂ ನ ಸಂಶಯಃ ॥೧೯೯॥

ಹೀರಕಂ ನ ವರಾಕಾಣಾಂ ಯಥಾ ಪ್ರಿಯಕರಂ ತಥಾ ।
ಕಾಶೀ ಮಲಿನಚಿತ್ತಾನಾಂ ನೈವ ಪ್ರಿಯಕರಾ ಧ್ರುವಂ ॥೨೦೦॥

ನ ಯಾತಿ ಶುನಕಸ್ಯಾಸ್ಯೇ ನಾರಿಕೇಳಫಲಂ ಯಥಾ ।
ತಥಾ ನ ಯಾತಿ ಕಾಶೀ ಸಾ ಹೃದಯೇ ದುಷ್ಕೃತಾತ್ಮನಾಂ ॥೨೦೧॥

ಕಾಶೀ ನ ಸುಲಭಾ ಪುಂಸಾಂ ವಸನಾಶನಚೇತಸಾಂ ।
ವಿಹಿತಾನೇಕಸಂನ್ಯಾಸಾಂ ವಿಸೃತಾನೇಕಮಾನಸಾಂ ॥೨೦೨॥

ಸುಲಭಾ ಯದಿ ಕಾಶೀ ಸ್ಯಾತ್ತದಾ ಸರ್ವೇಽಪಿ ಜಂತವಃ ।
ಮುಕ್ತಾಸ್ಸ್ಯುರತವಿನ್ನೈಷಾ ಕಾಶೀ ನ ಸುಲಭಾ ಧ್ರುವಂ ॥೨೦೩॥

---

ವಸ್ತುಗಳೂ ದೇವಪೂಜ್ಯಗಳು. ಇಂತಹ ಪವಿತ್ರವಾದ ಕಾಶೀಕ್ಷೇತ್ರವನ್ನು ಯಾವನು ಅಜ್ಞಾನದಿಂದ ದೂರಮಾಡುವನೋ ಅವನಂತಹ ಪಾಪಿಯು ಲೋಕದಲ್ಲಿ ಮತ್ತಾರೂ ದೊರಕಲಾರರು. ॥೧೯೬-೧೯೭-೧೯೮॥

ಕಪಿಗಳು ಹೇಗೆ ರತ್ನದ ಬೆಲೆಯನ್ನು ತಿಳಿಯಲಾರವೋ, ಅಲ್ಪರು ಹೀರಕ ರತ್ನಗಳ ಮಹಿಮೆಯನ್ನು ಹೇಗೆ ಅರಿಯಲಾರರೋ, ಹಾಗೆ ಅಜ್ಞಾನಿಗಳು ಕಾಶೀ ಪುರದ ತತ್ತ್ವವನ್ನು ತಿಳಿದಿರಲಾರರು ಅಂತಹವರಿಗೆ ಅದು ಪವಿತ್ರವಸ್ತುವೂ ಎನಿಸಲಾರದು. ॥೧೯೯-೨೦೦॥

ನಾಯಿಯ ಬಾಯಿಗೆ ನಾರಿಕೇಳ (ತೆಂಗಿನಕಾಯಿ) ಫಲವು ಹೇಗೆ ಅಡಕವಾಗಲಾರದೋ, ಹಾಗೆ ದುಷ್ಟಾತ್ಮರ ಹೃದಯದಲ್ಲಿ ಕಾಶೀಮಹಿಮೆಯು ನಿಲ್ಲಲಾರದು. ಯಾರು ಆಹಾರವಸ್ತ್ರಾದಿಗಳಲ್ಲಿಯೇ ನೆಟ್ಟಮನಸ್ಸುಳ್ಳವರೋ, ಯಾರು ಆಡಂಬರದ ವೇಷಧಾರಿಗಳೋ, ಯಾರ ಮನಸ್ಸು ಅತಿ ಚಂಚಲವಾಗಿ ವಿಹರಿಸುವುದೋ, ಅಂತಹವರಿಗೆ ಕಾಶಿಯು ಸುಲಭಸಾಧ್ಯವಾಗಲಾರದು. ॥೨೦೧-೨೦೨॥

ಕಾಶಿಯು ಎಲ್ಲರಿಗೂ ಸುಲಭಸಾಧ್ಯವಾದುದಾದರೆ, ಸಕಲಜಂತುಗಳೂ ಅದರಿಂದ ಸುಲಭವಾಗಿ ಮುಕ್ತಿಯನ್ನು ಸಂಪಾದಿಸುತ್ತಿದ್ದುವು ಅದರಿಂದಲೇ ಅದು

ಯೇನ ಲಬ್ಧಾ ನ ಕಾಶೀ ಸಾ ಸ ಪಾಪೀ ವಸ್ತುತಸ್ತಥಾ ।
ಯೇನ ಪ್ರಾಪ್ತಾಪಿ ಸಂತ್ಯಕ್ತಾ ಕಾಶೀ ಪಾಪೀ ತತೋಽಪಿ ಸಃ ॥೭೦೪॥

ಅಲಬ್ಧನಿಧಿವತ್ಪಾಪೀ ಲಬ್ಧತ್ಯಕ್ತನಿಧಿರ್ನರಃ ।
ತಥಾ ಪಾಪೀ ಭವತ್ಯೇವ ಕಾಶೀತ್ಯಾಗೀ ನರೋ ಧ್ರುವಂ ॥೭೦೫॥

ಕಾಶೀವಿಯೋಗಜಂ ದುಃಖಂ ಪುಮಾಂಸಂ ಯಂ ನ ಬಾಧತೇ ।
ಸ ವಸ್ತುತಸ್ತು ಪಾಷಾಣಶ್ಚೈತನ್ಯಾನಾಶ್ರಿತೋ ಧ್ರುವಂ ॥೭೦೬॥

ಕಾಶೀರತ್ನಂ ಪರಿತ್ಯಜ್ಯ ದುರ್ಭಗಾಃ ಪಾಪಮೂರ್ತಯಃ ।
ಯತಂತೇ ಕಾಚಮನ್ವೇಷ್ಟುಮಂಗುಲ್ಯಾಭರಣಾಯ ತೇ ॥೭೦೭॥

ಅನಂತೋಗ್ರತಪೋಲಬ್ಧಾ ಕಾಶೀ ಪಾಶುಪತಸ್ಥಲೀ ।
ಯೇನ ತ್ಯಕ್ತಾ ತತೋಽಪ್ಯನ್ಯೋ ನಾಸ್ತಿ ಮೂರ್ಖತರೋ ಭುವಿ ॥೭೦೮॥

ದುರ್ಲಭ. ಯಾವನು ಕಷ್ಟಪಟ್ಟಾದರೂ ಕಾಶಿಯನ್ನು ಸೇರುವುದಿಲ್ಲವೋ, ಅವನು ಪಾಪಿಯೆನಿಸುವುದು ನಿಜ. ಕಾಶಿಯನ್ನು ಸೇರಿದಮೇಲೂ ಅದನ್ನು ಬಿಡಬೇಕೆನ್ನುವವನು ಮತ್ತೂ ಪರಮಪಾಪಿಯಲ್ಲವೆ! ||೭೦೩-೭೦೪||

ನಿಧಿಯನ್ನೇ ಹೊಂದದವನೂ, ಹೊಂದಿದ ನಿಧಿಯನ್ನು ಕಳೆದುಕೊಳ್ಳುವವನೂ ಪಾಪಿಯೇ ಸರಿ. ಅದರಂತೆಯೇ ಸಿಕ್ಕಿದ ಕಾಶಿಯನ್ನು ಬಿಟ್ಟು ದೂರ ಹೋಗುವವನೂ ತತ್ಸದೃಶನೇ. ಯಾರಿಗೆ ಕಾಶೀವಿಯೋಗದಿಂದ ಮನಸ್ಸಿನಲ್ಲಿ ವ್ಯಥೆಯೇ ಆಗುವುದಿಲ್ಲವೋ, ಅಂತಹವನು ನಿಜವಾಗಿಯೂ ಚೈತನ್ಯರಹಿತವಾದ ಕಲ್ಲುಬಂಡೆಯೇ ಸರಿ. ||೭೦೫-೭೦೬||

ಪಾಪಿಗಳೆನಿಸಿದ ದುಷ್ಟರು ತಮ್ಮ ಉಂಗುರಕ್ಕೆ(ಅಂಗುಲ್ಯಾಭರಣ)ಕಾಶಿಯೆಂಬ ದಿವ್ಯರತ್ನವನ್ನು ಬಿಟ್ಟು ಬೇರೆ ಕ್ಷೇತ್ರಗಳೆಂಬ ಗಾಜನ್ನು ಹುಡುಕುವರು. ಅನೇಕ ತಪಸ್ಸುಗಳಿಂದ ಹೊಂದಬಹುದಾದ ಪರಶಿವಕ್ಷೇತ್ರವೆನಿಸಿದ ಕಾಶಿಯನ್ನು ದೂರಮಾಡುವವನಿಗಿಂತ ಮೂರ್ಖನು ಲೋಕದಲ್ಲಿ ಯಾರೂ ಇರುವುದಿಲ್ಲ. ||೭೦೭-೭೦೮||

ಯಸ್ತ್ಯಕ್ತ್ವಾಂ ಯತತೇ ಮೋಹಾತ್ಕಾಶೀಮಾನಂದಮಂಜರೀಂ ।
ಪ್ರಜ್ಞಾನಫಲಸಂಛನ್ನಾಂ ಪುಣ್ಯವೃಂತಸಮನ್ವಿತಾಂ ॥೭೯॥

ಬಹುಭಿರ್ಜನ್ಮಭಿಃ ಪೂರ್ವಮಸ್ಮಾಭಿಸ್ತು ತಪಃ ಕೃತಂ ।
ತಥಾಪ್ಯಸ್ಮಾಭಿರದ್ಯಾಪಿ ಸಾ ಕಾಶೀ ನೈವ ಲಭ್ಯತೇ ॥೭೧೦॥

ನರಕೇಷು ವಿಚಿತ್ರೇಷು ಲುಠಿತ್ವಾ ಸಂಸ್ಥಿತಂ ಪುರಾ ।
ಪುನಃಪುನಶ್ಚ ತೇಷ್ವೇವ ಲುಂಠನಂ ಭಾವಿ ಭೂರಿಶಃ ॥೭೧೧॥

ಭೂರಿಶೋ ಗರ್ಭನರಕೈಃ ಪೀಡಿತಾ ವಯಮೀದೃಶಾಃ ।
ಪುನಶ್ಚ ತೇಷು ಬಹುಧಾ ಪೀಡಾ ಸಂಭಾವಿತಾ ಧ್ರುವಂ ॥೭೧೨॥

ಕದಾ ಪರಾತ್ಪರತರಃ ಕರುಣಾಸಾಗರೋ ಹರಃ ।
ಅಸ್ಮಾಸು ಕರುಣಾಮಾರ್ದ್ರಾಂ ವಿತರಿಷ್ಯತಿ ಸಾದರಂ ॥೭೧೩॥

ಅನಂತಪಾತಕಾಕಾರೋ ಯಸ್ಸಂಸಾರದವಾನಲಃ ।
ಸ ಮಹೇಶಕೃಪಾಸಾರಾದನ್ಯೇನ ನ ವಿನಶ್ಯತಿ ॥೭೧೪॥

ಕಾಶಿಯೆಂಬುದೇ ಒಂದು ಆನಂದಮಯವಾದ ಹೂಗೊಂಚಲು. ಅದರಲ್ಲಿ ಪ್ರಜ್ಞಾನವೆಂಬುದೇ ಫಲ ಪುಣ್ಯರಾಶಿಯೇ ಫಲರಾಶಿ. ಇಂತಹ ಅಪೂರ್ವ ವಸ್ತುವನ್ನು ಬಿಡಲಿಚ್ಛಿಸುವವನು ಪಾಪಿಯಲ್ಲವೆ! ನಾವು ಅನೇಕ ಜನ್ಮಗಳಿಂದ ಘೋರವಾದ ತಪಸ್ಸನ್ನಾಚರಿಸುತ್ತಿದ್ದರೂ ಇಲ್ಲಿನವರಿಗೂ ಕಾಶಿಯು ನಮಗೆ ದೊರೆತಿಲ್ಲ. ॥೭೯.೭೧೦॥

ಚಿತ್ರವಿಚಿತ್ರವಾಗಿ ಹಿಂಸೆಕೊಡುವ ಎಷ್ಟೋ ನರಕಗಳಲ್ಲಿ ಬಿದ್ದುಹೊರಳಾಡಿರುವೆವು ಅನೇಕ ಗರ್ಭಗಳಲ್ಲಿ ನಿಂತು ಜನ್ಮತಾಳಿರುವೆವು. ಮತ್ತು ಅಂತಹ ದುಃಖಕ್ಕೆ ಭಾಗಿಗಳಾಗುತ್ತಿರುವೆವು. ॥೭೧೧-೭೧೨॥

ಯಾವ ಕಾಲಕ್ಕೆ ದಯಾಸಮುದ್ರನಾದ ಪರಶಿವನ ಕರುಣೆಯು ನಮ್ಮ ಮೇಲೆ ಬೀಳುವುದೋ, ಅದನ್ನರಿಯೆವು. ಅನೇಕ ಪಾಪಮಯವಾಗಿ, ಸಂಸಾರರೂಪದಿಂದ ಹಿಂಸೆಕೊಡುವ ಈ ಕಾಡುಕಿಚ್ಚು ಮಹೇಶ್ವರಕೃಪಾವೃಷ್ಟಿಯಿಂದಲ್ಲದೆ ಮತ್ತಾವುದರಿಂದಲೂ ಆಗಲಾರದು. ॥೭೧೩-೭೧೪॥

ಹಾ ಹರಾಮರಮಂದಾರ ಕದಾ ವಾ ಕರುಣಾರಸೈಃ ।
ಸಂಪ್ಲಾವಯಿಷ್ಯಸ್ಯಸ್ಮಾಂಸ್ತ್ವಂ ಕಾಶೀಂ ಸಂಪ್ರಾಪಯಿಷ್ಯಸಿ ॥೭೧೫॥

ಅಪಾರಕರುಣಾಕಾರಸ್ತ್ವಮತೋ ಹರ ಶಂಕರ ।
ಭೂರಿಪುಣ್ಯತಪೋರಾಶಿಂ ಕಾಶೀಂ ವಿಶ್ರಾಣಯಾಶು ನಃ ॥೭೧೬॥

ಜೈಗೀಷವ್ಯ ಉವಾಚ

ಇತ್ಯುಕ್ತಂ ತದ್ವಚಶ್ಶ್ರುತ್ವಾ ತದಾ ವೇದನಿಧಿರ್ದ್ವಿಜಾಃ ।
ಹಾ ಕಾಶೀ ವಿಶ್ವನಾಥೇತಿ ಪ್ರಲಲಾಪ ಮುಹುರ್ಮುಹುಃ ॥೭೧೭॥

ಮಹಾದೇವ ಮಹಾದೇವ ಕಾಶೀತಃ ಪುಣ್ಯರಾಶಿತಃ ।
ಶ್ರೌತಭಸ್ಮಸಮಾವೀತಃ ಕಥಂ ನಿಷ್ಕಾಸಿತೋಽಸ್ಮ್ಯಹಂ ॥೭೧೮॥

ಹಾ ಕಾಶೀಶ ಮಹೇಶಾನ ಕಿಂ ಕೃತಂ ಪಾತಕಂ ಮಯಾ ।
ಕಾಶೀ ಬಹಿಃ ಪಾತಿತೇಯಂ ಕಥಂ ಮಮ ತನುಃ ಪ್ರಭೋ ॥೭೧೯॥

ಪ್ರಾಯಶಸ್ತನುರೇಷಾ ಮೇ ಕಾಶ್ಯಾಮೇವ ಪತಿಷ್ಯತಿ ।
ಮುಕ್ತಿರ್ಭವಿಷ್ಯತೀತ್ಯೇಷಾ ಪ್ರತ್ಯಾಶಾ ಭೂಯಸೀ ಸ್ಥಿತಾ ॥೭೨೦॥

ಮಂದಾರವೃಕ್ಷಸದೃಶನಾದ ಪರಶಿವನೇ, ಯಾವಾಗ ನಿನ್ನ ಕರುಣಾರಸದಿಂದ ನಮ್ಮನ್ನು ಉದ್ಧರಿಸುವೆ? ನಮ್ಮನ್ನು ಎಂದು ಕಾಶೀಕ್ಷೇತ್ರಕ್ಕೆ ಒಯ್ಯುವೆ? ಪುಣ್ಯರಾಶಿಯಂತಿರುವ ಕಾಶಿಯಲ್ಲಿ ನೆಲಸುವಂತಹ ವರವನ್ನು ನಮಗೆ ಅನುಗ್ರಹಿಸಬಾರದೆ! ನೀನು ದಯಾಸಮುದ್ರನಲ್ಲವೆ! ॥೭೧೫-೭೧೬॥

ಹೀಗೆಂದ ಮಾತನ್ನು ಕೇಳಿ ಆ ವೇದನಿಧಿಯು ಬಹುವಾಗಿ ಗೋಳಿಡುತ್ತಾ "ಅಯ್ಯೋ ಮಹಾದೇವ, ಪುಣ್ಯರಾಶಿಯಂತಿದ್ದ ಕಾಶೀನಗರದಿಂದ ನನಗೆ ವಿಯೋಗವೊದಗಿತಲ್ಲಾ! ಶ್ರೌತಭಸ್ಮಲಿಪ್ತನಾಗಿದ್ದ ನನಗೆ ಇದು ಹೇಗೆ ಸಂಭವಿಸಿತು? ॥೭೧೭-೭೧೮॥

ಕಾಶೀ ಕ್ಷೇತ್ರಾಧಿಪತಿಯಾದ ಶಂಕರನೇ, ನಾನು ಎಂತಹ ಪಾಪಿಯು! ಈ ನನ್ನ ಪಾಪಿದೇಹವು ಕಾಶಿಯಿಂದ ಹೊರಗೆ ಬಂದು ಬಿದ್ದಿರುವುದಲ್ಲಾ! ಒಂದು ವೇಳೆ ಈ ದೇಹವು ಕಾಶಿಯಲ್ಲಿಯೇ ಬಿದ್ದಿದ್ದರೆ ಆಗ ಶಾಶ್ವತ ಮುಕ್ತಿಯು ದೊರಕುತ್ತಿದ್ದಿತು. ಆ ಆಸೆಯೂ ಈಗ ತಪ್ಪಿತಲ್ಲಾ! ॥೭೧೯-೭೨೦॥

ಕಾಶ್ಯಾಂ ಕೃತಾಘಸಂಗಸ್ಯ ಮಮ ಶ್ರೀಕಾಲಭೈರವಃ ।
ಶಾಸ್ತಿಂ ಕರಿಷ್ಯತೀತ್ಯೇಷಾ ಪ್ರತ್ಯಾಶಾ ಭೂಯಸೀ ಸ್ಥಿತಾ ।೭೨೦॥

ಯಾತನಾಸ್ತಂಭಸಂಬಂಧಃ ಕಾಶ್ಯಾಂ ಮಮ ಭವಿಷ್ಯತಿ ।
ತತ್ರ ನಶ್ಯಂತ್ಯಘಾನೀತಿ ಪ್ರತ್ಯಾಶಾ ಭೂಯಸೀ ಸ್ಥಿತಾ ॥೭೨೨॥

ಯಾತನಾಸಮಯೇ ಚಾಹಂ ಸಾಕ್ಷಾದ್ದ್ರಕ್ಷ್ಯಾಮಿ ಭೈರವಂ ।
ತೇನ ಮುಕ್ತೋ ಭವಾಮೀತಿ ಪ್ರತ್ಯಾಶಾ ಭೂಯಸೀ ಸ್ಥಿತಾ ॥೭೨೩।

ಯಾತನಾಂತೇ ಮಹಾದೇವಂ ಚಂದ್ರಚೂಡಮುಮಾಪತಿಂ ।
ದ್ರಕ್ಷ್ಯಾಮಿ ಸರ್ವಥೈವೇತಿ ಪ್ರತ್ಯಾಶಾ ಭೂಯಸೀ ಸ್ಥಿತಾ ॥೭೨೪॥

ಯಾತನಾಂತೇ ಮಹಾದೇವಃ ಶೈವಂ ಪಂಚಾಕ್ಷರಂ ಪರಂ ।
ಮಹ್ಯಂ ಪ್ರದಾಸ್ಯತೀತ್ಯೇಷಾ ಪ್ರತ್ಯಾಶಾ ಭೂಯಸೀ ಸ್ಥಿತಾ ॥೭೨೫॥

ಯಾತನಾಂತೇ ಶಿವಃ ಸ್ವೀಯಮುತ್ತರೀಯಾಂಚಲಂ ಮಯಿ ।
ಪ್ರಚಾಲಯಿಷ್ಯತೀತ್ಯೇಷಾ ಪ್ರತ್ಯಾಶಾ ಭೂಯಸೀ ಸ್ಥಿತಾ ॥೭೨೬॥

ಪಾಪರಾಶಿಯೆನಿಸಿದ್ದ ನನ್ನ ಪಾಪವೆಲ್ಲಾ ಕಾಲಭೈರವನ ದಯೆಯಿಂದ ನಾಶವಾಗುವುದೆಂಬ ಆಸೆಯು ನನಗೆ ಬಹಳವಾಗಿತ್ತು. ಯಾತನಾಮಯವಾದ ಈ ಸಂಸಾರಪಾಶವು ಪಾಪನಾಶದಿಂದ ಕಾಶಿಯಲ್ಲಿ ನಿವೃತ್ತಿಯಾಗುವುದೆಂದೂ ಬಹಳವಾಗಿ ನಂಬಿದ್ದೆನು. ॥೭೨೧-೭೨೨॥

ಪ್ರಾಣಹೋಗುವ ಕಾಲದಲ್ಲಿ ಕಾಲಭೈರವದರ್ಶನಮಾಡಿ, ಅದರಿಂದ ಮುಕ್ತನಾಗುತ್ತೇನೆಂದೂ, ತನ್ಮೂಲಕ ಚಂದ್ರಶೇಖರನೆನಿಸಿದ ಮಹಾದೇವನ ದರ್ಶನ ಮಾಡುತ್ತೇನೆಂದೂ ನಾನು ಬಹಳವಾದ ಆಸೆಯಿಂದಿದ್ದೆನು- ॥೭೨೩-೭೨೪॥

ಪ್ರಾಣಪ್ರಯಾಣಕಾಲದಲ್ಲಿ ಶಂಕರನು ಶಿವಪಂಚಾಕ್ಷರೀಮಂತ್ರೋಪದೇಶ ಮಾಡುವನೆಂದೂ, ಆನಂತರ ಪರಶಿವನ ಉತ್ತರೀಯದ ಸೆರಗು ನನ್ನಮೇಲೆ ಬೀಳುವುದೆಂದೂ, ಅದರಿಂದ ಆನಂದಮಯವಾದ ಮುಕ್ತಿಯು ನನಗೆ ದೊರಕುವುದೆಂದೂ ಭಾವಿಸಿದ್ದೆನು. ॥೭೨೫-೭೨೬॥

ಯಾತನಾಂತೇ ಮಹೇಶಾಂಕೇ ದುಕೂಲಸಮಲಂಕೃತೇ ।
ಕ್ಷಣಮಾತ್ರಂ ಶಯಾಮೀತಿ ಪ್ರತ್ಯಾಶಾ ಭೂಯಸೀ ಸ್ಥಿತಾ ॥೭೨೭॥

ಯಾತನಾಂತೇ ಮಹಾದೇವೋ ಮುಕ್ತಿಕಾಂತಾಮಯತ್ನತಃ ।
ಮಹ್ಯಂ ಪ್ರದಾಸ್ಯತೀತ್ಯೇಷಾ ಪ್ರತ್ಯಾಶಾ ಭೂಯಸೀ ಸ್ಥಿತಾ ॥೭೨೮॥

ಯಾತನಾಂತೇ ಮಹಾದೇವೋ ವಿಭೂತಿಂ ಸ್ವಕರಸ್ಥಿತಾಂ ।
ಮಹ್ಯಂ ಪ್ರದಾಸ್ಯತೀತ್ಯೇಷಾ ಪ್ರತ್ಯಾಶಾ ಭೂಯಸೀ ಸ್ಥಿತಾ ॥೭೨೯॥

ಮುಕ್ತಿಪ್ರದಾನಸಮಯೇ ಬ್ರಹ್ಮವಿಷ್ಣುಪುರೋಗಮೈಃ ।
ಪೂಜಿತೋಽಹಂ ಭವಾಮೀತಿ ಪ್ರತ್ಯಾಶಾ ಭೂಯಸೀ ಸ್ಥಿತಾ ॥೭೩೦॥

ಮುಕ್ತಿಪ್ರದಾನಸಮಯೇ ಬ್ರಹ್ಮವಿಷ್ಣುಪುರೋಗಮೈಃ ।
ಪೂಜಿತೋಽಹಂ ಭವಾಮೀತಿ ಪ್ರತ್ಯಾಶಾ ಭೂಯಸೀ ಸ್ಥಿತಾ ॥೭೩೧॥

ಮುಕ್ತಿಪ್ರದಾನಸಮಯೇ ದೇವದುಂದುಭಿವಾದನಂ ।
ಶ್ರೋಷ್ಯಾಮಿ ಸರ್ವಥೈವೇತಿ ಪ್ರತ್ಯಾಶಾ ಭೂಯಸೀ ಸ್ಥಿತಾ ॥೭೩೨॥

ಸಂಸಾರಪಾಶವನ್ನು ಕಳೆದುಕೊಂಡು ದುಕೂಲಪರಿವೇಷ್ಟಿತವಾದ ಶಂಕರನ ತೊಡೆಯಮೇಲೆ ಸ್ವಲ್ಪಹೊತ್ತು ಮಲಗಿಕೊಳ್ಳುವೆನೆಂದೂ, ಮಹಾದೇವಾನುಗ್ರಹದಿಂದ ಮುಕ್ತಿಯೆಂಬ ಕಾಂತೆಯನ್ನು ವಿವಾಹವಾಗುವೆನೆಂದೂ ನಂಬಿದ್ದೆನು. ||೭೨೭-೭೨೮||

ಮುಕ್ತಿಪ್ರಾಪ್ತಿಕಾಲದಲ್ಲಿ ಮಹಾದೇವನು ತನ್ನ ಕೈಯಿಂದಲೇ ನನಗೆ ವಿಭೂತಿಯನ್ನಿಟ್ಟು, ಬ್ರಹ್ಮ, ವಿಷ್ಣು ಮೊದಲಾದ ದೇವತೆಗಳಿಂದಲೂ ಪೂಜೆ ಮಾಡಿಸಿ, ಮೋಕ್ಷಾನುಗ್ರಹಮಾಡುವನೆಂಬ ಆಶೆಯೊಂದು ನನಗೆ ಬಹಳವಾಗಿದ್ದಿತು. ||೭೨೯-೭೩೦||

ಮುಕ್ತಿಯು ದೊರಕುವ ಕಾಲದಲ್ಲಿ ಬ್ರಹ್ಮವಿಷ್ಣ್ವಾದಿಗಳು ಬಂದು ಸೇವಿಸುವುದನ್ನೂ, ದೇವದುಂದುಭಿಗಳು ಮೊಳಗುವುದನ್ನೂ ನೋಡಿ ಆನಂದಪಡಬೇಕೆಂಬ ಆಸೆಯು ನನಗೆ ಬಹಳವಾಗಿತ್ತು. ||೭೩೧-೭೩೨||

ಯಾ ಪೂರ್ವಮೀದೃಶೀ ವೃತ್ತಾ ಪ್ರತ್ಯಾಶಾಂ ಸಾ ಮಮಾಧುನಾ ।
ವಿಫಲಾ ಸಮಭೂಚ್ಛಂಭೋ ಕಿಂ ಕರ್ತವ್ಯಮತಃ ಪರಂ ॥೭೩೩॥

ದುರ್ಲಭಾಪ್ಯಧುನಾ ಕಾಶೀ ಸುಲಭಾ ಭೂನ್ಮಮೇತ್ಯಹಂ ।
ಪ್ರಹರ್ಷೇಣ ಸ್ಥಿತಃ ಪೂರ್ವಂ ಪ್ರಹರ್ಷಸ್ಸಂಗತೋಽಧುನಾ ॥೭೩೪॥

ಪಾಪೌಘಪರಿಪಾಕೇನ ಕಾಶೀ ತ್ಯಾಗೋ ಮಮಾಭವತ್ ।
ಅತಃ ಪರಮಹಂ ನಿಃಸ್ವೋ ಹಾ ಹತೋಽಸ್ಮಿ ಮಹೇಶ್ವರ ॥೭೩೫॥

ಮಮ ಕಾಶೀ ವಿಯೋಗೇನ ಯಾ ಬಭೂವಾದ್ಯ ವೇದನಾ ।
ಈದೃಶೀ ವೇದನಾ ಪೂರ್ವಂ ನಾನುಭೂತಾ ಕದಾಚನ ॥೭೩೬॥

ಅನೇಕನರಕಾವಾಸಃ ಶಕ್ಯತೇ ಸೋಢುಮನ್ವಹಂ ।
ಕಾಶೀ ವಿಯೋಗಜಂ ದುಃಖಂ ಸೋಢುಮೇವ ನ ಶಕ್ಯತೇ ॥೭೩೭॥

ಕಾಶ್ಯಾಂ ಮಯಾ ಜೀವತಾಪಿ ಬ್ರಹ್ಮಾನಂದಮನಾಮಯಂ ।
ಪುರಾನುಭೂತಮಧುನಾ ದುಃಖಂ ದುಸ್ಸಹಮಾಪ್ಯತೇ ॥೭೩೮॥

ಪರಶಿವನೇ, ನನಗಿದ್ದ ಅಂತಹ ಆಸೆಯೆಲ್ಲವೂ ಈಗ ನಿರಾಸೆಯಾಯಿತಲ್ಲಾ! ದುರ್ಲಭವಾದ ಕಾಶಿಯು ನನಗೆ ಮಾತ್ರ ಸುಲಭವಾಗಿ ದೊರೆಯಿತೆಂದು ನಂಬಿದ್ದೆನು. ಅದೂ ಈಗ ಬಯಲಾಯಿತಲ್ಲಾ! ||೭೩೩-೭೩೪||

ಈ ಅತಿಯಾದ ಪಾಪರಾಶಿಯನ್ನು ನಾನು ಸಂಪಾದಿಸಿದುದರಿಂದಲೇ ಇಂದು ನಾನು ಕಾಶೀವಾಸವನ್ನು ಕಳೆದುಕೊಂಡೆನು. ಕಾಶಿಯಿಂದ ಹೊರಗೆಬಂದು ಬಿದ್ದೆನು. ಕಾಶೀ ವಿಯೋಗದಿಂದ ಈಗ ನನಗಾಗಿರುವಷ್ಟು ವೇದನೆಯು ಹಿಂದೆ ಯಾವ ಕಾರಣದಿಂದಲೂ ನನಗೆ ಉಂಟಾಗಿರಲಿಲ್ಲ. ||೭೩೫-೭೩೬||

ಇದರಿಂದ ನನಗೆ ನರಕವಾಸವು ತಪ್ಪುವುದಿಲ್ಲ. ಕಾಶಿಯಲ್ಲಿ ನೆಲಸಿರುವಷ್ಟು ಕಾಲವೂ ನಾನು ನಿರ್ದುಷ್ಟವಾದ ಬ್ರಹ್ಮಾನಂದವನ್ನನುಭವಿಸಿದೆನು ಅದನ್ನು ಬಿಟ್ಟುಬಂದ ನಾನು ಈಗ ಅಷ್ಟೊಅಷ್ಟು ದುಃಖಕ್ಕೀಡಾಗಿರುವೆನು. ||೭೩೭-೭೩೮||

ಕಾಶೀವಿಯೋಗಸಂಭೂತದುಃಖಸ್ಯಾಸ್ಯ ನಿವಾರಕಃ ।
ನ ಶಂಕರಂ ವಿನಾನ್ಯಸ್ತು ಶ್ರುತಿಷು ಶ್ರೂಯತೇ ಧ್ರುವಂ ॥೭೩೯॥

ಭೂರಿಪುಣ್ಯತಪೋಲಬ್ಧಾ ಕಾಶೀ ತ್ಯಕ್ತಾ ಮಯಾಧುನಾ ।
ಅತಃ ಪರಂ ಪುನಃ ಕಾಶೀ ಕಥಂ ಪ್ರಾಪ್ಯಾ ಮಯಾ ಭವೇತ್ ॥೭೪೦॥

ಸದುಗ್ಧಾಜ್ಯಾಂ ಸಿತಾಂ ತ್ಯಕ್ತ್ವಾ ಮಲಾಶನ ಇವಾಧುನಾ ।
ವಿಹಾಯ ಮೋಕ್ಷದಾಂ ಕಾಶೀಂ ವಸಾಮ್ಯತ್ರ ಪಿಶಾಚವತ್ ॥೭೪೧॥

ಮಮೇದಂ ಜೀವನಂ ಧಿಗ್ಧಿಕ್ ಧಿಕ್ಕಾಶೀತೋ ಪರಾಙ್ಮುಖಂ ।
ಕಾಶೀವಿಯೋಗಸಂಭೂತಜೀವನೇನಾಪಿ ಕಿಂ ಮಮ ॥೭೪೨॥

ಕಾಶೀವಿಯುಕ್ತಮೇತನ್ಮೇ ಶರೀರಮಧುನಾ ಮಮ ।
ಭಾರಾಯ ತೇ ವೃಥಾ ಯಸ್ಮಾಚ್ಛರೀರಸ್ಯಾಸ್ಯ ಧಾರಣಂ ॥೭೪೩॥

ವರಂ ದುಃಖಾಬ್ಧಿಸಂಬಂಧೋ ವರಂ ನರಕಯಾತನಾ ।
ಕಾಶೀವಿಯೋಗೋ ನ ವರಂ ಸತ್ಯಂ ಸತ್ಯಂ ನ ಸಂಶಯಃ ॥೭೪೪॥

ಈ ಕಾಶೀವಿಯೋಗದಿಂದ ಒದಗಿರುವ ನನ್ನ ದುಃಖವನ್ನು ನಿವಾರಿಸಲು ಶಂಕರನೊಬ್ಬನೇ ಸಮರ್ಥನಾದಾನು. ಇದನ್ನೇ ಶ್ರುತಿಯೂ ಒಪ್ಪಿದೆ. ಅನೇಕ ಪುಣ್ಯ ಕರ್ಮಾಚರಣೆಯಿಂದ ಪಡೆದಿದ್ದ ಕಾಶಿಯನ್ನು ಈಗ ಮತ್ತೆ ಹೊಂದುವುದು ಹೇಗೆ? ॥೭೩೯-೭೪೦॥

ತುಪ್ಪ, ಸಕ್ಕರೆ ಇವುಗಳಿಂದ ಬೆರೆತ ಹಾಲನ್ನು ದೂರಮಾಡಿ, ಮಲಪ್ರಾಶನೆ ಮಾಡಿದ ಅವಿವೇಕಿಯಂತೆ ನಾನು ಮೋಕ್ಷಪ್ರದವಾದ ಕಾಶಿಯನ್ನು ತ್ಯಜಿಸಿ ಇಲ್ಲಿಗೆ ಬಂದೆನಲ್ಲಾ! ಇಂತಹ ನನ್ನ ಜನ್ಮಕ್ಕೆ ಧಿಕ್ಕಾರವಿರಲಿ. ಇಂತಹ ಜೀವನದಿಂದಾದರೂ ನನಗೆ ಬರುವ ಭಾಗ್ಯವಾವುದು? ॥೭೪೧-೭೪೨॥

ಕಾಶೀವಿಯೋಗದಿಂದ ಈಗ ನನಗೆ ಈ ಶರೀರವೇ ಭಾರವೆನಿಸಿದೆ ಶರೀರ ಧಾರಣೆಯಲ್ಲಿ ಜುಗುಪ್ಸೆಯುಂಟಾಗಿದೆ ದುಃಖದ ರಾಶಿಯಲ್ಲಿ ಮುಳುಗಬಹುದು ನರಕದಲ್ಲಿ ಬೀಳಬಹುದು, ಕಾಶೀವಿಯೋಗವನ್ನು ಸಹಿಸುವುದು ಸಾಧ್ಯವಲ್ಲ ಇದು ಸತ್ಯವಾದದ್ದು. ॥೭೪೩-೭೪೪॥

ಶ್ರೀಮದ್ವಿಶ್ವೇಶ್ವರಂ ಲಿಂಗಂ ನ ದೃಷ್ಟಂ ಯದ್ದಿನೇ ಮುದಾ ।
ತದ್ದಿನೇ ಜೀವನಂ ವ್ಯರ್ಥಮನರ್ಥಾನಾಂ ಚ ಸಾಧನಂ ॥೭೪೫॥

ಶ್ರೀಮದ್ವಿಶ್ವೇಶ್ವರಂ ಲಿಂಗಂ ಯದ್ದಿನೇ ನಾರ್ಚಿತಂ ಮುದಾ ।
ತದ್ದಿನೇ ಜೀವನಂ ಯಸ್ಯ ಸ ಜೀವನ್ಮೃತ ಉಚ್ಯತೇ ॥೭೪೬॥

ಶ್ರೀಮದ್ವಿಶ್ವೇಶ್ವರಂ ಲಿಂಗಂ ಯದ್ದಿನಂ ಪೂಜಿತಂ ಮುದಾ ।
ತದ್ದಿನಂ ಸುದಿನಂ ಧನ್ಯಂ ಜೀವಿತಂ ಚ ಸುಜೀವಿತಂ ॥೭೪೭॥

ಕಾಶೀವಿಯೋಗೇ ಜಾತೇಽಪಿ ಪುನರ್ಜೀವಾಮ್ಯಹಂ ಜಡಃ ।
ಅತೋಽಹಂ ದುರ್ಭಗೋ ದುಷ್ಟಃ ಪಾಪಿಷ್ಠಶ್ಚ ನ ಸಂಶಯಃ ॥೭೪೮॥

ಕಾಶೀವಿಯುಕ್ತಮೇತನ್ಮೇ ಶರೀರಂ ಚ ಶರೀರವತ್ ।
ಪರಿತ್ಯಾಜ್ಯಂ ನ ಸಂದೇಹೋ ಮಲಮೂತ್ರಾದಿದೂಷಿತಂ ॥೭೪೯॥

ಏವಂ ಸ್ವಪ್ನದಶಾಂ ಪ್ರಾಪ್ಯ ವಿಲಪ್ಯ ಚ ಸಮುತ್ಥಿತಃ ।
ಮಹ್ಯಂ ನಿವೇದಯಾಮಾಸ ಸ್ವಪ್ನವೃತ್ತಾಂತಮಾದಿತಃ ॥೭೫೦॥

ಯಾವ ದಿನ ಕಾಶೀ ವಿಶ್ವೇಶ್ವರಲಿಂಗದ ದರ್ಶನವಿರುವುದಿಲ್ಲವೋ, ಯಾವ ದಿನ ವಿಶ್ವೇಶ್ವರಲಿಂಗಾರ್ಚನೆ ನಮ್ಮಿಂದ ನಡೆಯುವುದಿಲ್ಲವೋ, ಆ ದಿನಗಳು ನಿಜವಾಗಿಯೂ ನಮ್ಮ ಜೀವನದಲ್ಲಿ ವ್ಯರ್ಥಗಳೆನಿಸುವುವು. ಆ ದಿನಗಳಲ್ಲಿ ಆತನು ಜೀವನ್ಮೃತನಂತಿರುವನು. ||೭೪೫-೭೪೬||

ವಿಶ್ವೇಶ್ವರಲಿಂಗದ ದರ್ಶನವಾದ ದಿನವೇ ಸುದಿನ. ಆ ದಿನವೇ ಅವನ ಆಯುಸ್ಸಿನಲ್ಲಿ ಶ್ರೇಷ್ಠವಾದ ಕಾಲ. ಅಂತಹ ಕಾಶೀಕ್ಷೇತ್ರವಿಯೋಗವಾದರೂ ನಾನು ಇನ್ನೂ ಬದುಕಿರುವೆನಲ್ಲಾ! ನಾನು ಎಂತಹ ಮೂಢನು! ಎಂತಹ ಪಾಪಿಯು? ||೭೪೭-೭೪೮||

ಕಾಶೀವಿಯೋಗದಿಂದ ಬದುಕಿರುವ ಈ ಶರೀರವನ್ನು ಮಲಮೂತ್ರಾದಿಗಳಿಂದ ದೂಷಿತವಾದ ದೇಹದಂತೆ ದೂರಮಾಡಬಹುದು," ಎಂಬುದಾಗಿ ಆದ ಸ್ವಪ್ನದಿಂದ ಎಚ್ಚೆತ್ತು ಸುತ್ತಲೂ ನೋಡಿ ಭಯಗೊಂಡವನಾಗಿ, ಒಡನೆಯೇ ನನ್ನಲ್ಲಿಗೆ ಬಂದು ಕನಸಿನಲ್ಲಿ ನಡೆದ ಆಡಿದ ಈ ಎಲ್ಲಾ ಮಾತುಕತೆಗಳನ್ನೂ ಪೂರ್ಣವಾಗಿ ವಿವರಿಸಿ ಹೇಳಿದನು. ||೭೪೯-೭೫೦||

ತತಃಪರಮುವಾಚೇದಂ ಸ ವೇದನಿಧಿರಾದರಾತ್ ।
ಇದಂ ಶರೀರಮಧುನಾ ತ್ಯಕ್ಷ್ಯಾಮ್ಯೇವ ನ ಸಂಶಯಃ ॥೭೫೧॥

ಆಯಾಸ್ಯತಿ ಕಥಂ ಕಾಲಃ ಕದಾ ಕಾಶೀ ಶಿವಾತ್ಮಿಕಾ ।
ತ್ಯಾಜ್ಯಾ ಭವಿಷ್ಯತ್ಯಮಲಾ ತನ್ನ ಜಾನೇ ಹಿ ಸರ್ವಥಾ ॥೭೫೨॥

ಅಧುನೈವ ಶರೀರಂ ಚೇತ್ಕಾಶ್ಯಾಂ ತ್ಯಕ್ತುಂ ಮಯಾ ತದಾ ।
ಮುಕ್ತಿಃ ಪ್ರಾಪ್ಯಾ ನ ಸಂದೇಹಃ ಶ್ರೀಮಹೇಶಕೃಪಾವಶಾತ್ ॥೭೫೩॥

ಸಕಾಲೋಽಯಮಿತೋಽನ್ಯಸ್ತು ಕಾಲೋಽತಿಕಠಿನೋ ಭವೇತ್ ।
ಅತ ಏವಾಧುನಾ ದೇಹಃ ಕಾಶ್ಯಾಂ ತ್ಯಾಜ್ಯೋ ನ ಸಂಶಯಃ ॥೭೫೪॥

ಕಾಶೀವಿಯೋಗೋ ಯೋ ಜಾತಃ ಸ್ವಪ್ನೇ ತೇನಾಪಿ ಮೇಽಧುನಾ
ಬಹುದುಃಖಂ ಸಮುತ್ಪನ್ನಂ ಕಂಪಮಾವಹತೇ ತನುಃ ॥೭೫೫॥

ಯದಿ ಜಾಗ್ರದವಸ್ಥಾಯಾಂ ಕಾಶೀತ್ಯಾಗೋ ಭವಿಷ್ಯತಿ ।
ತದಾ ಭೂಯಾಂಸಿ ದುಃಖಾನಿ ಭವಿಷ್ಯಂತಿ ನ ಸಂಶಯಃ ॥೭೫೬॥

ಹಾಗೆಯೇ ಮುಂದುವರಿದು ವೇದನಿಧಿಯು ಹೀಗೆಂದನು. "ಈ ಶರೀರವನ್ನು ಈಗಲೇ ದೂರಮಾಡುವೆನು? ಆದರೆ ಶಿವಸ್ವರೂಪವಾದ ಕಾಶಿಯು ಹೇಗೆ ನನಗೆ ದೂರವಾಗುತ್ತದೆ? ಅದನ್ನು ನಾನು ತಿಳಿಯೆನಲ್ಲಾ! ||೭೫೧-೭೫೨||

ಆದ್ದರಿಂದ ಈಗಲೇ ಈ ದೇಹವನ್ನು ಈ ಕಾಶೀಕ್ಷೇತ್ರದಲ್ಲಿಯೇ ತ್ಯಾಗಮಾಡಿದರೆ ಶಿವಾನುಗ್ರಹದಿಂದ ನನಗೆ ಮುಕ್ತಿಯು ಲಭಿಸುವುದು. ಮುಂದೆ ಎಂತಹ ವಿಷಮಕಾಲವು ಬಂದೀತೋ! ಆದ್ದರಿಂದ ಈಗಲೇ ಈ ದೇಹವನ್ನು ಇಲ್ಲಿ ಬಿಡುವೆನು. ನಿಜ. ||೭೫೩-೭೫೪||

ಸ್ವಪ್ನದಲ್ಲಿ ನನಗೆ ಕಾಶೀವಿಯೋಗವುಂಟಾದ್ದರಿಂದಲೇ ನನ್ನ ಮನಸ್ಸು ಹೀಗೆ ಕಳವಳಗೊಂಡಿದೆ ದೇಹವೆಲ್ಲಾ ನಡುಗುತ್ತಿದೆ. ಹೀಗಿರುವಾಗ ನಿಜವಾಗಿಯೂ ಕಾಶೀವಿಯೋಗವು ಉಂಟಾದದ್ದೇ ಆದರೆ ಮುಂದೆಷ್ಟು ದುಃಖಗಳು ಒದಗುವುವೋ ತಿಳಿಯೆನಲ್ಲಾ! ||೭೫೫-೭೫೬||

ಅತಃ ಕಾಶ್ಯಾಂ ಪ್ರಯತ್ನೇನ ತನುಮುದ್ಧೂಲ್ಯ ಭಸ್ಮನಾ ।
ಸಮಭ್ಯರ್ಚ್ಯ ಚ ವಿಶ್ವೇಶಂ ತ್ಯಕ್ಷ್ಯಾಮ್ಯೇವ ತನುಂ ಧ್ರುವಂ ॥೭೫೭॥

ಭವದಾದಿಷು ಪಶ್ಯತ್ಸು ಶೈವಧರ್ಮೇಷು ಸಾದರಂ ।
ಯದಿ ತ್ಯಕ್ಷ್ಯಾಮ್ಯಹಂ ದೇಹಂ ತದಾ ಧನ್ಯೋ ಭವಾಮ್ಯಹಂ ॥೭೫೮॥

ಕಾಶೀತ್ಯಾಗೇ ಮಮಾಭೂದ್ಯಃ ಸ್ವಪ್ನೇ ತಜ್ಜನ್ಯಪಾತಕಂ ।
ನಾಶಯಿಷ್ಯಾಮಿ ಯತ್ನೇನ ಶ್ರೀಪಂಚಕ್ರೋಶಯಾತ್ರಯಾ ॥೭೫೯॥

ಇತ್ಯುಕ್ತ್ವಾ ಸತ್ವರಂ ವಿಪ್ರೋ ಜ್ಞಾನವಾಪ್ಯಾಂ ಪ್ರಯತ್ನತಃ ।
ಸ್ನಾತ್ವಾ ಜಗ್ರಾಹ ವಿಧಿವತ್ಪಂಚಗವ್ಯಂ ಸಮಾಹಿತಃ ॥೭೬೦॥

ತತಃ ಸ್ನಾತ್ವಾ ವಿಧಾನೇನ ಕೃತ್ವೋದ್ಧೂಲನಮಾದರಾತ್ ।
ತ್ರಿಪುಂಡ್ರಧಾರಣಂ ಚಕ್ರೇ ತತೋ ರುದ್ರಾಕ್ಷಧಾರಣಂ ॥೭೬೧॥

ತತಸ್ಸಮರ್ಚಯಾಮಾಸ ಜ್ಞಾನೇಶಂ ಯತ್ನಪೂರ್ವಕಂ ।
ತತಸ್ಸಮರ್ಚಯಾಮಾಸ ದಂಡನಾಯಕಮಾದರಾತ್ ॥೭೬೨॥

ಈಗಲೇ ವಿಶ್ವೇಶ್ವರಲಿಂಗವನ್ನರ್ಚಿಸಿ, ಭಸ್ಮಲಿಪ್ತಗಾತ್ರನಾಗಿ ದೇಹತ್ಯಾಗ ಮಾಡುವೆನು. ಶೈವಧರ್ಮನಿರತರಾದ ನಿಮ್ಮೆಲ್ಲರ ಎದುರಿನಲ್ಲಿಯೇ ಈ ದೇಹವನ್ನು ದೂರೀಕರಿಸಿ, ನಾನು ಧನ್ಯನೆನಿಸಿಕೊಳ್ಳುವೆನು. ಇದು ಸತ್ಯ. ||೭೫೭-೭೫೮||

ಸ್ವಪ್ನದಲ್ಲಿ ಕಂಡುಬಂದ ಕಾಶೀಪರಿತ್ಯಾಗದಿಂದಲೂ ನನಗೆ ಈಗ ಬಹುವಾದ ಪಾಪರಾಶಿಯು ಸಂಘಟಿಸಿದೆ. ಅದನ್ನು ಪರಿಹರಿಸಿಕೊಳ್ಳಲು ಪಂಚಕ್ರೋಶಯಾತ್ರೆ (ಕಾಶೀಕ್ಷೇತ್ರ ಪ್ರದಕ್ಷಿಣೆ) ಮಾಡುವೆನು. ಎಂದು ಆ ಬ್ರಾಹ್ಮಣನು ಒಡನೆಯೇ ಜ್ಞಾನವಾಪಿಯಲ್ಲಿ ಸ್ನಾನಮಾಡಿ, ಪಂಚಗವ್ಯಪ್ರಾಶನದಿಂದ ದೇಹಶುದ್ಧಿಮಾಡಿ ಕೊಂಡನು. ||೭೫೯-೭೬೦||

ಹಾಗೆಯೇ ಭಸ್ಮೋದ್ಧೂಲನಪೂರ್ವಕವಾಗಿ ತ್ರಿಪುಂಡ್ರಧಾರಣೆಮಾಡಿಕೊಂಡು ರುದ್ರಾಕ್ಷಿಯನ್ನು ಧರಿಸಿ, ಜ್ಞಾನೇಶ್ವರನನ್ನೂ, ದಂಡನಾಯಕನನ್ನೂ ಭಕ್ತಿಯಿಂದ ಪೂಜಿಸಿದನು ||೭೬೧-೭೬೨||

ತತಸ್ಸಮರ್ಚಯಾಮಾಸ ಮೋದಾದೀನ್ ಗಣನಾಯಕಾನ್ ।
ತತಸ್ಸಮರ್ಚಯಾಮಾಸ ಧುಂಢಿಂ ಸರ್ವಾರ್ಥದಾಯಕಂ ॥೭೬೩॥

ಆನಂದಭೈರವಂ ನತ್ವಾ ತತಃ ಷಣ್ಮುಖಮೇವ ಚ ।
ತತಸ್ಸಮರ್ಚಯಾಮಾಸ ನಂದಿಕೇಶಂ ಶಿವಾಗ್ರತಃ ॥೭೬೪॥

ತತಃ ಪ್ರದಕ್ಷಿಣೀಕೃತ್ಯ ಶ್ರೀಮದ್ವಿಶ್ವೇಶ್ವರಾಲಯಂ ।
ತತಸ್ಸಮರ್ಚಯಾಮಾಸ ವಿಷ್ಣ್ವಾದೀನ್ ದ್ವಾರಪಾಲಕಾನ್ ॥೭೬೫॥

ತತೋ ನತ್ವಾ ದೇಹಲೀಶಂ ಕೃತಾಂಜಲಿಪುಟಸ್ತತಃ ।
ಪ್ರಣನಾಮ ಸುರಾಧೀಶಂ ಶ್ರೀಮದ್ವಿಶ್ವೇಶ್ವರಂ ಮುದಾ ॥೭೬೬॥

ತತೋ ವೇದಾಂತಸಂವೇದ್ಯಂ ಜ್ಯೋತೀರೂಪಮುಮಾಪತಿಂ ।
ಧ್ಯಾತ್ವಾ ವಿಶ್ವೇಶ್ವರಂ ದೇವಂ ವಿಶ್ವೇಶಾಭಿಮುಖಸ್ಥಿತಃ ॥೭೬೭॥

ತತೋ ವಿಶ್ವೇಶ್ವರಂ ಲಿಂಗಮಭಿಷಿಚ್ಯ ಶುಭೋದಕೈಃ ।
ಭಸ್ಮನಾ ಬಿಲ್ವಪತ್ರೈಶ್ಚ ಪೂಜಯಾಮಾಸ ಸಾದರಂ ॥೭೬೮॥

ತತಃ ಪ್ರದಕ್ಷಿಣೀಕೃತ್ಯ ನತ್ವಾ ಸ್ತುತ್ವಾ ಚ ಶಂಕರಂ ।
ಮುಕ್ತಿಮಂಡಪಮಾಸಾದ್ಯ ದಧ್ಯೌ ಗೌರೀಮನೋಹರಂ ॥೭೬೯॥

ಅನಂತರ ಇಷ್ಟಾರ್ಥಪ್ರದವಾದ ಮೋದಗಣಪತಿ, ಧುಂಡಿಗಣಪತಿ, ಆನಂದ ಭೈರವ, ಷಣ್ಮುಖ, ನಂದೀಶ್ವರ ಮುಂತಾದ ದೇವತೆಗಳನ್ನೆಲ್ಲಾ ಭಕ್ತಿಯಿಂದ ಶಿವಲಿಂಗದ ಮುಂದೆ ಪೂಜಿಸಿದನು. ||೭೬೩-೭೬೪||

ವಿಶ್ವೇಶ್ವರ ದೇವಾಲಯವನ್ನು ಪ್ರದಕ್ಷಿಣೆಮಾಡಿ, ವಿಷ್ಣ್ವಾದಿದೇವತೆಗಳನ್ನೂ ಇತರ ದ್ವಾರಪಾಲಕರನ್ನೂ, ದೇಹಲೀಶನನ್ನೂ ಅರ್ಚಿಸಿ, ಶ್ರೀವಿಶ್ವೇಶ್ವರಲಿಂಗವನ್ನೂ ದರ್ಶನಮಾಡಿದನು. ||೭೬೫-೭೬೬||

ವೇದಾಂತಪ್ರತಿಪಾದ್ಯವೂ, ತೇಜೋರೂಪವೂ ಆದ ವಿಶ್ವೇಶ್ವರಲಿಂಗದ ಮುಂದೆ ನಿಂತು, ಭಕ್ತಿಯಿಂದ ಧ್ಯಾನಿಸಿ, ಶುದ್ಧೋದಕದಿಂದ ಶಿವಲಿಂಗವನ್ನು ಅಭಿಷೇಕಮಾಡಿ, ಭಸ್ಮಬಿಲ್ವಾದಿಗಳಿಂದ ಅರ್ಚನೆಮಾಡಿದನು. ||೭೬೭-೭೬೮||

ಹಾಗೆಯೇ ಪ್ರದಕ್ಷಿಣಾದಿಗಳನ್ನು ನೆರವೇರಿಸುತ್ತಾ, ಮುಕ್ತಿಮಂಟಪಕ್ಕೆ ಹೋಗಿ, ಅಲ್ಲಿ ಗೌರೀಪತಿಯಾದ ಶಂಕರನ ತೃಪ್ತ್ಯರ್ಥವಾಗಿ, ರುದ್ರಾಧ್ಯಾಯಜಪ,

ತತೋ ರುದ್ರಜಪಂ ಕೃತ್ವಾ ಪಂಚಾಕ್ಷರಜಪಂ ತತಃ ।
ಅಂತರ್ಗೃಹಸ್ಯ ಯಾತ್ರಾಂ ಚ ಚಕಾರ ವಿಧಿಪೂರ್ವಕಂ ॥೨೨೦॥

ತತಃಪರಂ ಕೃತಾಂ ಯಾತ್ರಾಂ ಶ್ರೀಮದ್ವಿಶ್ವೇಶ್ವರೇ ಮುದಾ ।
ನಿವೇದ್ಯ ಶ್ರೀಮಹಾದೇವಂ ಪುನರ್ದಧ್ಯೌ ಯಥಾವಿಧಿ ॥೨೨೧॥

ತತೋ ವೀರೇಶ್ವರಾದೀನಿ ದೃಷ್ಟ್ವಾ ಲಿಂಗಾನಿ ಸಾದರಂ ।
ಪೂಜಯಾಮಾಸ ಯತ್ನೇನ ಬಿಲ್ವಪತ್ರಫಲಾದಿಭಿಃ ॥೨೨೨॥

ತತೋ ದದರ್ಶ ಯತ್ನೇನ ಶೀಘ್ರಂ ಶ್ರೀ ಕಾಲಭೈರವಂ ।
ಪೂಜಯಾಮಾಸ ಪುಷ್ಪಾದ್ಯೈರ್ಭೈರವಂ ಭೀಮವಿಕ್ರಮಂ ॥೨೨೩॥

ತತಃ ಪುನಸ್ಸಮಾಗತ್ಯ ಶ್ರೀಮದ್ವಿಶ್ವೇಶ್ವರಾಲಯಂ ।
ಪೂಜಯಾಮಾಸ ವಿಶ್ವೇಶಂ ಬಿಲ್ವಪತ್ರೈರನೇಕಧಾ ॥೨೨೪॥

ತತಃಪರಂ ನಿತ್ಯಯಾತ್ರಾಂ ಕೃತ್ವಾ ತದನು ಸಾದರಂ ।
ಪೂಜಯಾಮಾಸ ಯತ್ನೇನ ಬಿಲ್ವಪತ್ರಫಲಾದಿಭಿಃ ॥೨೨೫॥

ಶ್ರೀಮದ್ವಿಶ್ವೇಶ್ವರಂ ಲಿಂಗಂ ಸಮಾಲಿಂಗ್ಯ ಪ್ರಣಮ್ಯ ಚ ।
ತುಷ್ಟಾವ ರುದ್ರಸೂಕ್ತೇನ ರುದ್ರಮಂತ್ರೈಸ್ತಥಾಪರೈಃ ॥೨೨೬॥

ಪಂಚಾಕ್ಷರೀ ಮಂತ್ರ ಪುರಶ್ಚರಣೆ ಮುಂತಾದುವುಗಳನ್ನು ನೆರವೇರಿಸುತ್ತಾ, ಅಂತರ್ಗೃಹಯಾತ್ರೆಯನ್ನೂ ಪೂರ್ಣಗೊಳಿಸಿದನು. ||೨೧೯-೨೨೦||

ತಾನು ಮಾಡಿದ ಯಾತ್ರಾಕ್ರಮವನ್ನೆಲ್ಲಾ ವಿಶ್ವೇಶ್ವರನಿಗೆ ವರದಿಹೇಳಿ, ವೀರೇಶ್ವರಾದಿ ಶಿವಲಿಂಗಗಳನ್ನು ದರ್ಶನಮಾಡಿ, ಬಿಲ್ವಪತ್ರಾದಿಗಳಿಂದಲೂ, ಫಲಾದಿಗಳಿಂದಲೂ ಪೂಜಿಸಿದನು. |೨೨೧-೨೨೨||

ಅನಂತರ ಕಾಲಭೈರವನನ್ನು ದರ್ಶನಮಾಡಿ ಪೂಜಿಸಿ, ಮತ್ತೆ ವಿಶ್ವೇಶ್ವರಾಲಯಕ್ಕೆ ಬಂದು, ಬಿಲ್ವಪತ್ರಾದಿಸಾಮಗ್ರಿಗಳಿಂದ ಭಕ್ತಿಯುತವಾಗಿ ಪೂಜಿಸಿದನು. ||೨೨೩-೨೨೪||

ಹಾಗೆಯೇ ನಿತ್ಯವೂ ಶಿವತೀರ್ಥಯಾತ್ರೆಮಾಡುತ್ತಾ, ಶಿವಲಿಂಗಗಳನ್ನು ಬಿಲ್ವಪತ್ರಾದಿಗಳಿಂದ ಪೂಜಿಸುತ್ತಾ ಅದನ್ನೆಲ್ಲಾ ವಿಶ್ವೇಶ್ವರಲಿಂಗಕ್ಕೆ ವರದಿ

ಪುನಃ ಪ್ರಣಮ್ಯ ಸಂಪೂಜ್ಯ ಪುನರ್ನತ್ವಾ ಮಹೇಶ್ವರಂ ।
ಪುನಸ್ಸಮರ್ಚಯಾಮಾಸ ಬಿಲ್ವಪತ್ರೈಸ್ಸಹಸ್ರಧಾ ॥೭೭೭॥

ತತಃ ಪ್ರದಕ್ಷಿಣೀಕೃತ್ಯ ನತ್ವಾ ವಿಶ್ವೇಶ್ವರಂ ತತಃ ।
ಮಧ್ಯಾಹ್ನಕಾಲೇ ಸಂಪ್ರಾಪ್ತೇ ಮಣಿಕರ್ಣೀತಟಂ ಯಯೌ ॥೭೭೮॥

ಮಣಿಕರ್ಣೀಜಲೇ ಸ್ನಾತ್ವಾ ಕೃತ್ವಾ ಚೋದ್ಧೂಲನಂ ತತಃ ।
ತ್ರಿಪುಂಡ್ರಧಾರಣಂ ಚಕ್ರೇ ತತೋ ರುದ್ರಾಕ್ಷಧಾರಣಂ ॥೭೭೯॥

ತತಸ್ಸಮರ್ಚಯಾಮಾಸ ಮೃನ್ಮಯಂ ಲಿಂಗಮುತ್ತಮಂ ।
ತತೋ ಜಜಾಪ ಯತ್ನೇನ ಶೈವಂ ಪಂಚಾಕ್ಷರಂ ದ್ವಿಜಾಃ ॥೭೮೦॥

ತತಃ ಪ್ರದಕ್ಷಿಣೀಕೃತ್ಯ ಪ್ರಣಮ್ಯ ಚ ಮುಹುರ್ಮುಹುಃ ।
ತುಷ್ಟಾವ ಗಿರಿಜಾನಾಥಂ ರುದ್ರಸೂಕ್ತೈರನೇಕಧಾ ॥೭೮೧॥

ತತಃ ಪಂಚಾಕ್ಷರಂ ಶೈವಂ ಜಪನ್ನೇವ ಸತಾರಕಂ ।
ಜಹೌ ಪ್ರಾಣಾನ್ ಪ್ರಯತ್ನೇನ ಯೋಗಮಾರ್ಗಮುಪಾಶ್ರಿತಃ॥೭೮೨॥

ಮಾಡುತ್ತಾ ರುದ್ರಸೂಕ್ತಾದಿಗಳಿಂದಲೂ, ರುದ್ರಮಂತ್ರಾದಿಗಳಿಂದಲೂ, ನಿತ್ಯವೂ ವಿಶ್ವೇಶ್ವರಲಿಂಗವನ್ನು ಧ್ಯಾನಿಸುತ್ತಾ ಆಲಿಂಗಿಸಿಕೊಳ್ಳುತ್ತಿದ್ದನು. ||೭೭೫-೭೭೬||

ಪದೇ ಪದೇ ಪರಶಿವನನ್ನು ಅರ್ಚಿಸುತ್ತಾ, ಬಿಲ್ವಪತ್ರಾದಿಗಳನ್ನು ಸಮರ್ಪಿಸುತ್ತಾ, ವಿಶ್ವೇಶ್ವರಲಿಂಗವನ್ನು ಪೂಜಿಸುತ್ತಾ ಮಧ್ಯಾಹ್ನಕಾಲವಾಗುತ್ತಲೇ ಮಣಿಕರ್ಣಿಕಾ ಕ್ಷೇತ್ರದಲ್ಲಿ ಹೋಗಿ ನೆಲಸುತ್ತಿದ್ದನು. ||೭೭೭-೭೭೮||

ಅಲ್ಲಿಯೂ ಸ್ನಾನಮಾಡಿ, ತ್ರಿಪುಂಡ್ರರುದ್ರಾಕ್ಷಿಗಳನ್ನು ಧರಿಸಿ, ಮೃನ್ಮಯವಾದ ಶಿವಲಿಂಗವನ್ನು ನಿರ್ಮಿಸಿ, ಅದನ್ನು ಅಲ್ಲಿ ಭಕ್ತಿಯಿಂದ ಪೂಜಿಸಿ, ಶಿವಪಂಚಾಕ್ಷರೀಮಂತ್ರವನ್ನು ಜಪಿಸುತ್ತಾ, ಕಾಲಕಳೆದನು. ||೭೭೯-೭೮೦||

ಹಾಗೆಯೇ ಪರಶಿವನನ್ನು ಮತ್ತೆ ಪ್ರದಕ್ಷಿಣಾದಿಗಳಿಂದಲೂ, ರುದ್ರಸೂಕ್ತ ಪಠನಾದಿಗಳಿಂದಲೂ ತೃಪ್ತಿಪಡಿಸಿ, ಶಿವಪಂಚಾಕ್ಷರೀಮಂತ್ರವನ್ನೇ ಜಪಿಸುತ್ತಾ, ಯೋಗಮಾರ್ಗದಿಂದ ತನ್ನ ದೇಹತ್ಯಾಗಮಾಡಿದನು. ||೭೮೧-೭೮೨||

ತತೋ ದುಂದುಭಯೋ ನೇದುಃ ಪುಷ್ಪವೃಷ್ಟಿರಭೂತ್ತದಾ ।
ತತಃ ಪ್ರಸನ್ನೋ ಭಗವಾನುಮಾಕಾಂತಃ ಕೃಪಾನಿಧಿಃ ॥೭೮೩॥

ತತೋ ವೇದನಿಧಿಂ ಶಂಭುಃ ಸ್ವಾಂಕೇ ಸಂವೇಶ್ಯ ಸಾದರಂ ।
ದತ್ವಾ ವಿಭೂತಿಂ ರುದ್ರಾಕ್ಷಾನ್ ಪೂತಾತ್ಮಾನಂ ಚಕಾರ ಸಃ ॥೭೮೪॥

ವಿಶ್ವೇಶಸ್ತಾರಕಂ ಬ್ರಹ್ಮ ವ್ಯಾಚಷ್ಟೇ ತದನಂತರಂ ।
ಯೇನಾಸಾವಮೃತೀಭೂತ್ವಾ ಮೋಕ್ಷೀಭವತಿ ಶಂಕರಃ ॥೭೮೫॥

ಅವಿಮುಕ್ತಂ ನಿಷೇವೇತ ತಸ್ಮಾದ್ಯತ್ನೈರ್ದ್ವಿಜೋತ್ತಮಾಃ ।
ಅವಿಮುಕ್ತಂ ನ ಮೋಕ್ತವ್ಯಂ ನ ಮೋಕ್ತವ್ಯಂ ಕದಾಚನ ॥೭೮೬॥

ವ್ಯಾಚಷ್ಟೇ ತಾರಕಂ ಬ್ರಹ್ಮ ಸದಾ ವಿಶ್ವೇಶ್ವರಃ ಸ್ವಯಂ ।
ತದಾ ವಿಷ್ಣುಮುಖಾ ದೇವಾಃ ಪ್ರಣೇಮುಸ್ತಂ ದ್ವಿಜೋತ್ತಮಂ॥೭೮೭॥

ತತೋ ದದೌ ಮಹಾದೇವಃ ಕಿರೀಟಂ ಚಂದ್ರಸಂಯುತಂ ।
ಸಶೇಷಾಭರಣಂ ಭವ್ಯಂ ಲಲಾಟೇ ಲೋಚನಂ ಯಥಾ ॥೭೮೮॥

ಇದರಿಂದ ಆಶ್ಚರ್ಯಚಕಿತರಾದ ದೇವತೆಗಳು ನಗಾರಿಗಳನ್ನು ಬಾರಿಸಿದರು. ಪುಷ್ಪವೃಷ್ಟಿಕರೆದರು. ಪರಮೇಶ್ವರನಾದರೋ, ವಾತ್ಸಲ್ಯಾತಿಶಯದಿಂದ, ವೇದನಿಧಿಯನ್ನು ತನ್ನ ತೊಡೆಯಮೇಲೆ ಕುಳ್ಳಿರಿಸಿಕೊಂಡು, ವಿಭೂತಿರುದ್ರಾಕ್ಷಿಗಳನ್ನು ತನ್ನ ಕೈಯಿಂದಲೇ ಕೊಟ್ಟು ಅವನನ್ನು ಮತ್ತೂ ಪವಿತ್ರಗೊಳಿಸಿದನು. ||೭೮೩-೭೮೪||

ಮತ್ತು ತಾರಕಮಂತ್ರೋಪದೇಶ ಮಾಡಿ, ಆತನಿಗೆ ಶಾಶ್ವತವಾದ ಮುಕ್ತಿಯನ್ನು ಅನುಗ್ರಹಿಸಿಕೊಟ್ಟನು. ಆದ್ದರಿಂದ ಎಲೈ ಬ್ರಾಹ್ಮಣಶ್ರೇಷ್ಠರೇ, ಸರ್ವರಿಗೂ ಮುಕ್ತಿಪ್ರದವಾದ ಅವಿಮುಕ್ತಕ್ಷೇತ್ರವನ್ನು ಎಂದಿಗೂ ಬಿಡಬಾರದು. ಅಲ್ಲಿಯೇ ವಾಸಿಸಲು ಪ್ರಯತ್ನಿಸಬೇಕು. ||೭೮೫-೭೮೬||

ಪರಶಿವನು ವೇದನಿಧಿಗೆ ತಾರಕಮಂತ್ರೋಪದೇಶವನ್ನು ಕೊಟ್ಟು ಚಂದ್ರಕಲಾಲಂಕೃತವಾದ ಕಿರೀಟವನ್ನೂ, ನಾಗಾಭರಣವನ್ನೂ, ಅಗ್ನಿನೇತ್ರವನ್ನೂ ಅನುಗ್ರಹಿಸಿದನು. ಆಗ ವಿಷ್ಣುವೇ ಮೊದಲಾದ ಸಕಲ ದೇವತೆಗಳೂ ಅಲ್ಲಿಗೆ ಬಂದು ಅವನಿಗೆ ನಮಸ್ಕರಿಸಿ ನಿಂತರು. ||೭೮೭-೭೮೮||

ತತಃ ಪರಂ ಮಹಾದೇವೇ ಸಚ್ಚಿದಾನಂದವಿಗ್ರಹೇ ।
ಲೀನೋ ವೇದನಿಧಿರ್ವಿಪ್ರ ಮಹೇಶಾನುಗ್ರಹಾತ್ತದಾ ॥೭೮೯॥

ಪ್ರಾಪ್ತಂ ತೇನೇದೃಶಂ ಭಾಗ್ಯಂ ಕಾಶ್ಯಾಂ ಮರಣಮಾತ್ರತಃ ।
ಈದೃಶಂ ಭಾಗ್ಯಮನ್ಯತ್ರ ನಾಸ್ತಿ ನ ಶ್ರೂಯತೇಽಪಿ ಚ ॥೭೯೦॥

ಈದೃಶೀ ಮುಕ್ತಿದಾ ಕಾಶೀ ನ ತ್ಯಾಜ್ಯಾ ಸಾಧುಕರ್ಮಭಿಃ ।
ನೂನಂ ಸ್ವಪ್ನೇಽಪಿ ನ ತ್ಯಾಜ್ಯಾ ನ ತ್ಯಾಜ್ಯಾ ಸರ್ವಥಾ ದ್ವಿಜೈಃ ॥೭೯೧॥

ಹಿತಮೇವೋಚ್ಯತೇ ವಿಪ್ರಾ ನಾಹಿತಂ ವಚ್ಮಿ ಸರ್ವಥಾ ।
ಇತ್ಥಂ ಕಾಶೀ ನ ಮೋಕ್ತವ್ಯಾ ನ ಮೋಕ್ತವ್ಯೈವ ಮುಕ್ತಿದಾ ॥೭೯೨॥

ಭವತಾಂ ಶಾಂಭವಾನಾಂ ಚೇತ್ಕಾಶೀತ್ಯಾಗರತಿರ್ಭವೇತ್ ।
ಕಾಶೀತ್ಯಾಗರತಾತ್ಮಾನೋ ಭವಂತಃ ಶಾಂಭವಾಃ ಕಥಂ ॥೭೯೩॥

ಕಾಶ್ಯಾಂ ಸ್ಥಾತವ್ಯಮನಿಶಂ ವಿಶ್ವೇಶಾರಾಧನೋತ್ಸುಕೈಃ ।
ಮರ್ತವ್ಯಂ ಚ ಪ್ರಯತ್ನೇನ ಕಾಶ್ಯಾಮೇವ ಮುಮುಕ್ಷುಭಿಃ ॥೭೯೪॥

ಆಗ ವೇದನಿಧಿಯು ಈಶ್ವರಾನುಗ್ರಹದಿಂದ ಸಚ್ಚಿದಾನಂದರೂಪಿಯೆನಿಸಿದ ಪರಶಿವನಲ್ಲಿ ಐಕ್ಯನಾದನು. ಒಟ್ಟಿನಲ್ಲಿ ಆತನು ಕಾಶೀಮರಣದಿಂದ ಇಂತಹ ಶಾಶ್ವತವಾದ ಮುಕ್ತಿಯನ್ನು ಸಂಪಾದಿಸಿದನು. ಇಂತಹ ಭಾಗ್ಯವನ್ನು ಮತ್ತಾವುದರಿಂದ ತಾನೇ ಸಂಪಾದಿಸಬಹುದು? ||೭೮೯-೭೯೦||

ಎಲೈ ವಿಪ್ರರೇ, ಇಷ್ಟು ಸುಲಭವಾಗಿ ಸ್ಥಿರಮುಕ್ತಿಯನ್ನೀಯುವ ಕಾಶೀಕ್ಷೇತ್ರವನ್ನು ಬಿಡುವುದುಂಟೆ? ನಿಜವಾಗಿಯೂ ಕಾಶೀಪರಿತ್ಯಾಗವು ಹಿತವಲ್ಲ. ನಿಮಗೆ ಎಂದೂ ನಾನು ಅಹಿತವನ್ನು ಹೇಳತಕ್ಕವನಲ್ಲ. ಆದ್ದರಿಂದ ಮುಕ್ತಿಪ್ರದವಾದ ಕಾಶೀಕ್ಷೇತ್ರವನ್ನು ಸರ್ವಪ್ರಕಾರದಿಂದಲೂ ಬಿಡಲು ಯತ್ನಿಸಬೇಡಿರಿ. ||೭೯೧-೭೯೨||

ಶಂಭುವಿನ ಭಕ್ತರೆನಿಸಿದ ನೀವೇ ಕಾಶೀ ತ್ಯಾಗದಲ್ಲಿ ಮನಸ್ಸುಮಾಡಿದರೆ ನಿಮ್ಮನ್ನು ಶಾಂಭವರೆಂದು ಹೇಳುವುದು ಹೇಗೆ? ವಿಶ್ವೇಶ್ವರನ ಆರಾಧನೆಮಾಡಬೇಕೆಂದಿರುವವರು ನಿಜವಾಗಿಯೂ ಕಾಶಿಯಲ್ಲಿಯೇ ನಿಲ್ಲಬೇಕು. ಮತ್ತು ಅಲ್ಲಿಯೇ ಸಾಯಬೇಕು. ಇದರಿಂದಲೇ ದುಃಖಮೋಕ್ಷವಾಗುವುದು. ||೭೯೩-೭೯೪||

ಪುರಾ ಕೇದಾರಮಾಸಾದ್ಯ ದಧೀಚಿರ್ಮುನಿಪುಂಗವಃ ।
ಉದ್ಧೂಲಿತಾಂಗೋ ದೇವೇಶಂ ಮಹೇಶಂ ಪೂಜಯನ್ ಸ್ಥಿತಃ ॥೭೯೫॥

ತದಾ ಬ್ರಹ್ಮಾದಯೋ ದೇವಾಸ್ತಂದೃಷ್ಟ್ವಾ ಮುನಿಪುಂಗವಂ ।
ಪ್ರಣಮ್ಯ ದಂಡವದ್ಭೂಮೌ ಪಪ್ರಚ್ಛುಃ ಪ್ರೀತಮಾನಸಂ ॥೭೯೬॥

॥ ದೇವಾ ಊಚುಃ ॥

ಮುನಿಪುಂಗವ ಸರ್ವಾಂಗಭಸ್ಮರುದ್ರಾಕ್ಷಭೂಷಣ ।
ಸರ್ವದಾ ಪ್ರೀತಚಿತ್ತೇನ ಸ್ಥೀಯತೇತ್ರ ಕಥಂ ತ್ವಯಾ ॥೭೯೭॥

ಫಲಾನಿ ನೈವ ಭಕ್ಷ್ಯಂತೇ ಶುಷ್ಕಪರ್ಣಾನ್ಯಪಿ ದ್ವಿಜ ।
ನ ಪೀಯತೇ ಜಲಂ ಚಾತ್ರ ತೃಪ್ತಿರ್ಭವತಿ ತೇ ಕಥಂ ॥೭೯೮॥

ಆಹಾರೇಣ ವಿನೈವಾತ್ರ ಬಹುಕಾಲಂ ಪ್ರಯತ್ನತಃ ।
ಕ್ರಿಯತೇ ದೇವದೇವಸ್ಯ ಮಹೇಶಸ್ಯಾರ್ಚನಂ ತ್ವಯಾ ॥೭೯೯॥

ಶಾರೀರಂ ಮಾನುಷಂ ಪ್ರಾಪ್ಯ ತ್ಯಕ್ತಾಹಾರೋ ವನೀತಲೇ ।
ನ ಕೋಪಿ ದೃಶ್ಯತೇಸ್ಮಾಭಿರ್ಭವಾನೇಕೋ ನ ತಾದೃಶಃ ॥೮೦೦॥

ಹಿಂದೆ ಒಂದುಸಾರಿ ದಧೀಚಿಮುನಿಯು ಕೇದಾರಕ್ಷೇತ್ರಕ್ಕೆ ಹೋಗಿ, ಭಸ್ಮೋದ್ಧೂಲಿತಗಾತ್ರನಾಗಿ ಮಹಾದೇವನನ್ನು ಪೂಜಿಸುತ್ತಾ ನಿಂತನು. ಆಗ ಬ್ರಹ್ಮಾದಿಗಳೂ ಅಲ್ಲಿಗೆ ಬಂದು ಆ ಋಷಿಗೆ ನಮಸ್ಕರಿಸಿ, ಸಂತೋಷದಿಂದ ಕುಳಿತಿದ್ದ ಋಷಿಯನ್ನು ಕುರಿತು ಹೀಗೆ ಕೇಳಿಕೊಂಡರು. ॥೭೯೫-೭೯೬॥

"ಸರ್ವದಾ ಭಸ್ಮರುದ್ರಾಕ್ಷಧಾರಿಯಾಗಿರುವ ಎಲೈ ಮಹರ್ಷಿಯೇ, ಇಲ್ಲಿ ನೀನು ಸರ್ವದಾ ಸಂತುಷ್ಟಹೃದಯನಾಗಿರುವೆಯಲ್ಲಾ! ಆಹಾರವಾಗಿ ಹಣ್ಣುಹಂಪಲುಗಳನ್ನಾಗಲಿ, ಒಣಗಿದ ಎಲೆಯನ್ನಾಗಲಿ ತೆಗೆದುಕೊಂಡಂತೆ ಕಾಣುವುದಿಲ್ಲ. ಹಾಗಿದ್ದರೂ ನೀನು ತೃಪ್ತನಾಗಿರುವಂತೆ ಕಾಣುವೆಯಲ್ಲಾ! ಅದು ಹೇಗೆ? ॥೭೯೭-೭೯೮॥

ಯಾವ ಆಹಾರವನ್ನೂ ತಿಗೆದುಕೊಳ್ಳದೆ ಇಷ್ಟು ಕಾಲ ಮಹೇಶ್ವರಾರ್ಚನೆಯಲ್ಲಿಯೇ ಹೇಗೆ ತೊಡಗಿದ್ದೆ? ಭೂಲೋಕದಲ್ಲಿ ಮನುಷ್ಯನೆನಿಸಿದವನು ಯಾವನು

ಸರ್ವದಾ ಪ್ರೀತಹೃದಯೋ ಭುಕ್ತ್ವಾನ್ನ ಇವ ತಿಷ್ಠಸಿ ।
ಕಿಂ ಪ್ರೀತಿಮೂಲಂ ವಿಪ್ರೇಂದ್ರ ತನ್ನೋ ವದ ವಿಶೇಷತಃ ॥೮೦೧॥

ಯದ್ಯುಚ್ಯತೇ ತದಾಸ್ಮಾಭಿಸ್ತ್ಯಕ್ತ್ವೈವಾಮೃತಮನ್ವಹಂ ।
ಶಕ್ಯಂತೇ ಸ್ಥಾತುಮತ್ರೈವ ತ್ವತ್ಪ್ರಸಾದಾನ್ನ ಸಂಶಯಃ ॥೮೦೨॥

ನಿರಾಹಾರೇಣ ಗೌರೀಶಂ ಪೂಜಯಾಮೋ ಮಹೇಶ್ವರಂ ।
ತುಷ್ಟೋ ಭವತಿ ಗೌರೀಶೋ ನಿರಾಹಾರೇಣ ಪೂಜನೇ ॥೮೦೩॥

ಅಸ್ಮಭ್ಯಮುಪಕಾರೋಽಯಂ ಕರ್ತವ್ಯೋಽದ್ಯ ತ್ವಯಾ ಮುನೇ ।
ಯತೋ ದೀನದಯಾಳುತ್ವಂ ರಾಗದ್ವೇಷಾದಿವರ್ಜಿತಃ ॥೮೦೪॥

॥ ದಧೀಚಿರುವಾಚ ॥

ಇತಿ ಪೃಷ್ಟಸ್ತದಾ ದೇವೈರ್ದಧೀಚಿರ್ಮುನಿಪುಂಗವಃ ।
ಸಮಾಪ್ಯ ನಿಯಮಂ ಸ್ವೀಯಂ ದೇವಾನಾಹ ವಿಚಕ್ಷಣಃ ॥೮೦೫॥

ಯಾವನು ತಾನೇ ನಿರಾಹಾರಿಯಾಗಿ ಹೀಗೆ ಬದುಕಿದ್ದಾನು ? ನೀನೊಬ್ಬನೇ ಹಾಗೆ ನಮಗೆ ನಿರಾಹಾರಿಯಾಗಿ ಕಾಣುತ್ತಿರುವೆ. ॥೭೯೯-೮೦೦॥

ಹೀಗೆ ಆಹಾರವನ್ನು ತೆಗೆದುಕೊಳ್ಳದಿದ್ದರೂ, ಊಟಮಾಡಿದವನಂತೆ ಕಾಣುವ ನಿನ್ನ ಮನಸ್ಸಿನಲ್ಲಿ ಯಾವುದೋ ಒಂದು ತೃಪ್ತಿಯಿದೆ. ಅದನ್ನು ನಮಗೆ ಹೇಳುವೆಯಾ ! ಹಾಗೆ ಆದರಿಂದ ನಮಗೂ ಆ ತೃಪ್ತಿಯುಂಟಾಗುವುದಾದರೆ, ನಾವೂ ಸಹ ಅಮೃತಪಾನವನ್ನು ಬಿಟ್ಟು, ನಿನ್ನ ಜೊತೆಯಲ್ಲಿ ಅಲ್ಲಿಯೇ ವಾಸಮಾಡುವೆವು. ॥೮೦೧-೮೦೨॥

ಆಹಾರವನ್ನು ಸ್ವೀಕರಿಸದೆ ಶಂಕರನನ್ನು ಪೂಜಿಸುವುದರಿಂದ ಗೌರೀಪತಿಯು ತೃಪ್ತಿಪಡುವುದಾದರೆ ನಾವೂ ಅದೇ ರೀತಿ ಮಾಡುವೆವು. ನೀನು ದೀನದಯಾಳುವೆನಿಸಿ, ರಾಗದ್ವೇಷಾದಿಗಳಿಂದ ದೂರನಾಗಿರುವ ಕಾರಣ ನಮಗೆ ಆ ರೀತಿ ಉಪಕಾರಮಾಡುವೆಯಾ ! ಮಹರ್ಷಿಯೇ, ನಿನ್ನ ನಿಜವಾದ ತೃಪ್ತಿಕಾರಣವನ್ನು ವಿವರಿಸು." ॥೮೦೩-೮೦೪॥

ಹೀಗೆ ದೇವತೆಗಳಿಂದ ಪ್ರಾರ್ಥಿತನಾದ ದಧೀಚಿಯು ದೇವತೆಗಳನ್ನು ಕುರಿತು, ತನ್ನ ತಪಸ್ಸನ್ನು ನಿಲ್ಲಿಸಿ ಹೀಗೆ ಹೇಳಲಾರಂಭಿಸಿದನು. " ಎಲೈ ದೇವತೆ

ಪುರಾ ಕೈಲಾಸಶಿಖರೇ ಸಮಾಸೀನಂ ಮಹೇಶ್ವರಂ ।
ನತ್ವಾ ಸಂಪೂಜ್ಯ ನಂದೀಶಃ ಕೃತಾಂಜಲಿರಭಾಷತ ॥೮೦೬॥

॥ ನಂದೀಶ ಉವಾಚ ॥

ದೇವದೇವ ಮಹಾದೇವ ಸರ್ವದೇವೋತ್ತಮ ಪ್ರಭೋ ।
ಆಹಾರೇಣ ವಿನಾ ತೃಪ್ತಿಃ ಕಥಂ ಭವತಿ ತದ್ವದ ॥೮೦೭॥

ಇತಿ ತದ್ವಚನಂ ಶ್ರುತ್ವಾ ಮಹಾದೇವಃ ಕೃಪಾನಿಧಿಃ ।
ನಂದಿಕೇಶಂ ವಿಲೋಕ್ಯಾಹ ಸಾದರಂ ಭಕ್ತವತ್ಸಲಃ ॥೮೦೮॥

॥ ಶ್ರೀ ಶಿವ ಉವಾಚ ॥

ಅಸ್ತ್ಯೇದಮನ್ನಪೂರ್ಣಾಯಾಃ ನಾಮ್ನಾಮಷ್ಟೋತ್ತರಂ ಶತಂ ।
ತದಾವೃತ್ತ್ಯಾ ವಿನಾಹಾರಂ ತೃಪ್ತಿರ್ಭವತಿ ಸರ್ವದಾ ॥೮೦೯॥

ಧನಧಾನ್ಯಾದಿವೃದ್ಧಿಶ್ಚ ತದಾವೃತ್ಯಾ ಭವಿಷ್ಯತಿ ।
ಆಯುರಾರೋಗ್ಯವೃದ್ಧಿಶ್ಚ ಜಾಯತೇ ನಾತ್ರ ಸಂಶಯಃ ॥೮೧೦॥

ಗಳಿರಾ, ಹಿಂದೆ ಒಂದುಸಾರಿ ಶಂಕರನು ಕೈಲಾಸಶಿಖರದಲ್ಲಿ ಸಂತೋಷದಿಂದ ಕುಳಿತಿರುವಾಗ, ನಂದೀಶ್ವರನು ಅಂಜಲಿಬದ್ಧನಾಗಿ ನಮಸ್ಕರಿಸಿ ಹೀಗೆ ಪ್ರಾರ್ಥಿಸಿಕೊಂಡನು. ||೮೦೫-೮೦೬||

" ದೇವದೇವನಾದ ಮಹಾದೇವನೇ, ಆಹಾರವಿಲ್ಲದೆ ಮನಸ್ಸಿಗೆ ತೃಪ್ತಿಯಾಗುವ ವಿಧಾನವನ್ನು ದಯವಿಟ್ಟು ವಿವರಿಸಬೇಕು " ಎಂದು ಕೇಳಿಕೊಂಡ ನಂದಿಯ ಮಾತಿಗೆ ಉತ್ತರವಾಗಿ ಪರಶಿವನು ದಯೆಯಿಂದ ಕೂಡಿ ಹೀಗೆ ಉತ್ತರವಿತ್ತನು. ||೮೦೭-೮೦೮||

" ನಂದೀಶ್ವರನೇ, ನಿನ್ನ ಇಷ್ಟದಂತೆ ಆಹಾರವಿಲ್ಲದೆ ತೃಪ್ತಿಪಡೆಯಬೇಕಾದರೆ ಅನ್ನಪೂರ್ಣಾಷ್ಟೋತ್ತರವನ್ನು ನಿತ್ಯವೂ ಪಠಿಸಬೇಕು. ಅದು ಧನಧಾನ್ಯಾದಿಗಳನ್ನೂ, ಆಯುರಾರೋಗ್ಯಗಳನ್ನೂ ಹೆಚ್ಚಿಸಿ, ಮನುಷ್ಯರನ್ನು ಕೃತಾರ್ಥರನ್ನಾಗಿ ಮಾಡುವುದು. ಇದರಲ್ಲಿ ಸಂಶಯವಿಲ್ಲ ||೮೦೯-೮೧೦||

ತನ್ನಾಮಾನಿ ಪ್ರಯತ್ನೇನ ಶುಚಿರ್ಭೂತೇನ ಸಾದರಂ ।
ಅನ್ನಪೂರ್ಣಾಲಯೇ ಸ್ಥಿತ್ವಾ ಜಪನೀಯಾನಿ ಭಕ್ತಿತಃ ॥೮೧೧॥

ತನ್ನಾಮಾವರ್ತನಾತ್ಪೂರ್ವಮುದ್ಧೂಲ್ಯಾಂಗಾನಿ ಭಸ್ಮನಾ ।
ರುದ್ರಾಕ್ಷಧಾರಣಂ ಕೃತ್ವಾ ಧ್ಯಾತವ್ಯಾ ಪರಮೇಶ್ವರೀ ॥೮೧೨॥

ದುಕೂಲಪರಿವೀತಾಂಗಾಂ ನಾನಾಭರಣಶೋಭಿತಾಂ ।
ಸ್ಮಿತಸಂಪೂರ್ಣವದನಾಂ ಧ್ಯಾತ್ವಾ ಕಾರ್ಯೋ ಜಪಸ್ತತಃ ॥೮೧೩॥

ಓಂ ನಮಸ್ತೇ ಅನ್ನಪೂರ್ಣಾಯೈ ಶ್ರೀರೂಪಿಣ್ಯೈ ನಮೋ ನಮಃ ।
ಓಂ ನಮಸ್ತೇ ಅನ್ನಪೂರ್ಣಾಯೈ ಧೀರೂಪಿಣ್ಯೈ ನಮೋ ನಮಃ ॥೮೧೪॥

ಓಂ ನಮಸ್ತೇ ಅನ್ನಪೂರ್ಣಾಯೈ ಜಗದ್ಧಾತ್ರ್ಯೈ ನಮೋ ನಮಃ ।
ಓಂ ನಮಸ್ತೇ ಅನ್ನಪೂರ್ಣಾಯೈ ಹ್ರೀರೂಪಿಣ್ಯೈ ನಮೋ ನಮಃ ॥೮೧೫॥

ಓಂ ನಮಸ್ತೇ ಅನ್ನಪೂರ್ಣಾಯೈ ವಿದ್ಯಾಧಾತ್ರ್ಯೈ ನಮೋ ನಮಃ ।
ಓಂ ನಮಸ್ತೇ ಅನ್ನಪೂರ್ಣಾಯೈ ಲಕ್ಷ್ಮೀಧಾತ್ರ್ಯೈ ನಮೋ ನಮಃ ॥೮೧೬॥

ಓಂ ನಮಸ್ತೇ ಅನ್ನಪೂರ್ಣಾಯೈ ಬ್ರಹ್ಮಧಾತ್ರ್ಯೈ ನಮೋ ನಮಃ ।
ಓಂ ನಮಸ್ತೇ ಅನ್ನಪೂರ್ಣಾಯೈ ವಿಷ್ಣುಧಾತ್ರ್ಯೈ ನಮೋ ನಮಃ ॥೮೧೭॥

ಓಂ ನಮಸ್ತೇ ಅನ್ನಪೂರ್ಣಾಯೈ ವೇದಧಾತ್ರ್ಯೈ ನಮೋ ನಮಃ ।
ಓಂ ನಮಸ್ತೇ ಅನ್ನಪೂರ್ಣಾಯೈ ಪೃಥ್ವೀಧಾತ್ರ್ಯೈ ನಮೋ ನಮಃ ॥೮೧೮॥

---

ಅನ್ನಪೂರ್ಣೆಯ ದಿವ್ಯನಾಮಗಳನ್ನು ಮನಶ್ಶುದ್ಧಿಯಿಂದ ಅನ್ನಪೂರ್ಣಾಲಯದಲ್ಲಿ ನಿಂತು ಜಪಿಸಬೇಕು. ಆದಕ್ಕೆ ಮುಂಚೆ ಭಸ್ಮೋದ್ಧೂಳನ ಮತ್ತು ರುದ್ರಾಕ್ಷಾಭರಣ ಇವುಗಳಿಂದ ಪವಿತ್ರಗಾತ್ರನಾಗಿ ಅನ್ನಪೂರ್ಣಾದೇವಿಯನ್ನು ಧ್ಯಾನಿಸಬೇಕು. ॥೮೧೧-೮೧೨॥

ಅನ್ನಪೂರ್ಣಾದೇವಿಯು ಸದಾ ಪೀತಾಂಬರಧಾರಿಣಿಯು. ಅನೇಕವಾದ ಆಭರಣಗಳಿಂದ ದೇವಿಯು ಸದಾ ಶೋಭಿಸುತ್ತಾ ಮುಗುಳ್ನಗೆಯಿಂದ ಕೂಡಿದ ಮುಖವುಳ್ಳವಳಾಗಿ ಭಕ್ತರ ಇಷ್ಟಾರ್ಥಗಳನ್ನೆಲ್ಲಾ ಸಲ್ಲಿಸುತ್ತಿರುವಳು. ॥೮೧೩॥

ಹೀಗೆ ಅನ್ನಪೂರ್ಣೆಯು ಶ್ರೀ, ಧೀ, ಹ್ರೀ ರೂಪದಿಂದ ಪ್ರಕಾಶಿಸುತ್ತಿರುವಳು. ವಿದ್ಯಾ, ಲಕ್ಷ್ಮೀ ಮುಂತಾದ ಸಕಲ ದೇವತೆಗಳಿಗೂ ಉತ್ಪತ್ತಿಕಾರಣಳು ಮತ್ತು

ಓಂ ನಮಸ್ತೇ ಅನ್ನಪೂರ್ಣಾಯೈ ಶೈಲಧಾತ್ರ್ಯೈ ನಮೋ ನಮಃ ।
ಓಂ ನಮಸ್ತೇ ಅನ್ನಪೂರ್ಣಾಯೈ ವನಧಾತ್ರ್ಯೈ ನಮೋ ನಮಃ ॥೮೧೯॥

ಓಂ ನಮಸ್ತೇ ಅನ್ನಪೂರ್ಣಾಯೈ ನದೀಧಾತ್ರ್ಯೈ ನಮೋ ನಮಃ ।
ಓಂ ನಮಸ್ತೇ ಅನ್ನಪೂರ್ಣಾಯೈ ಅಬ್ಧಿಧಾತ್ರ್ಯೈ ನಮೋ ನಮಃ ॥೮೨೦॥

ಓಂ ನಮಸ್ತೇ ಅನ್ನಪೂರ್ಣಾಯೈ ದ್ವೀಪಧಾತ್ರ್ಯೈ ನಮೋ ನಮಃ ।
ಓಂ ನಮಸ್ತೇ ಅನ್ನಪೂರ್ಣಾಯೈ ಅನ್ನಧಾತ್ರ್ಯೈ ನಮೋ ನಮಃ ॥೮೨೧॥

ಏವಂ ಸ್ತುತ್ವಾ ಹೃದಿ ಧ್ಯಾತ್ವಾ ಬ್ರಹ್ಮವಿಷ್ಣ್ವಾದಿಸೇವಿತಾಂ ।
ಅನ್ನಪೂರ್ಣಾಂ ಪ್ರಯತ್ನೇನ ಜಪಃ ಕಾರ್ಯಸ್ಸಮಾಹಿತೈಃ ॥೮೨೨॥

ಓಂ ಅಸ್ಯಶ್ರೀಮದನ್ನಪೂರ್ಣಾಷ್ಟೋತ್ತರ ಶತದಿವ್ಯ
ನಾಮ ಮಹಾಮಂತ್ರಸ್ಯ, ಅನುಷ್ಟುಪ್ ಛಂದಃ ।
ಪರಮಾತ್ಮಾ ಸದಾಶಿವೋಂ ಋಷಿಃ ।
ಶ್ರೀಮದನ್ನಪೂರ್ಣಾ ದೇವತಾ ।
ಸ್ವಾಹಾ ಶಕ್ತಿಃ ಸ್ವಧಾಬೀಜಂ ।
ಹ್ರೀಂ ಕೀಲಕಂ ಸರ್ವಾಭೀಷ್ಟಸಿದ್ಧಿಃ ಫಲಂ ।
ಶ್ರೀಮದನ್ನಪೂರ್ಣಾಪ್ರೀತ್ಯರ್ಥೇ ಜಪೇ ವಿನಿಯೋಗಃ ।

ಓಂ ಅನ್ನಪೂರ್ಣಾ ಶಿವಾ ದೇವೀ ಭೀಮಾ ಪುಷ್ಟಿಸ್ಸರಸ್ವತೀ ।
ಸರ್ವಜ್ಞಾ ಪಾರ್ವತೀ ದುರ್ಗಾ ಶಿವಾನೀ ಶಿವವಲ್ಲಭಾ ॥೮೨೩॥

ಬ್ರಹ್ಮವಿಷ್ಣ್ವಾದಿಸೇವಿತಳು ಎಂಬುದಾಗಿ ಭಾವಿಸುತ್ತಾ, ದೇವಿಯನ್ನು ತದೇಕಧ್ಯಾನದಿಂದ ಸೇವಿಸಬೇಕು. ॥೮೧೪-೮೧೫-೮೧೬-೮೧೭-೮೧೮ ೮೧೯-೮೨೦ ೮೨೧-೮೨೨॥

ಈಗ ಹೇಳುವ ಅನ್ನಪೂರ್ಣಾಷ್ಟೋತ್ತರದಿವ್ಯನಾಮಸ್ತೋತ್ರಕ್ಕೆ ಪರಮಾತ್ಮನೂ, ಸದಾಶಿವನೂ ಆದ ನಾನೇ ಋಷಿಯು. ಅಂದರೆ ನನಗೆ ಮೊದಲು ಗೋಚರಿಸಿತು. ಅನ್ನಪೂರ್ಣಾದೇವಿಯೇ ಈ ಮಂತ್ರಾಭಿಮಾನದೇವತೆ. ಸ್ವಾಹಾ, ಸ್ವಧೆಗಳೇ ಶಕ್ತಿಬೀಜಗಳು. ಹ್ರೀಂ ಕಾರವೇ ಕೀಲಕ. ಸರ್ವಾಭೀಷ್ಟಸಿದ್ಧಿಯೇ ಇದರ ಫಲ. ಎಂದು ತಿಳಿದು ಈ ಅಷ್ಟೋತ್ತರಶತನಾಮಗಳಿಂದ ದೇವಿಯನ್ನು ಹೀಗೆ ಧ್ಯಾನಿಸಬೇಕು.

ಅನ್ನಪೂರ್ಣಾದೇವಿಯು ಸರ್ವದಾ ಭಕ್ತರಿಗೆ ಮಂಗಳಪ್ರದಳು. ಶತ್ರುಗಳಿಗೆ

ವೇದವಿದ್ಯಾ ಮಹಾವಿದ್ಯಾ ವಿದ್ಯಾಧಾತ್ರೀ ವಿಶಾರದಾ ।
ಕುಮಾರೀ ಯುವತೀ ಬಾಲಾ ಲಕ್ಷ್ಮೀಃ ಶ್ರೀರ್ಭಯಹಾರಿಣೀ॥೮೨೪॥

ಭವಾನೀ ವಿಷ್ಣುಜನನೀ ಬ್ರಹ್ಮಾದಿಜನನೀ ಪರಾ ।
ಗಣೇಶಜನನೀ ಶಕ್ತಿಃ ಕುಮಾರಜನನೀ ಶುಭಾ ॥೮೨೫॥

ಭಾಗ್ಯಾಶ್ರಯಾ ಭಗವತೀ ಭಕ್ತಾಭೀಷ್ಟಪ್ರದಾಯಿನೀ ।
ಭವರೋಗಹರಾ ಭವ್ಯಾ ಸುಭ್ರೂಃ ಪರಮಮಂಗಳಾ ॥೮೨೬॥

ಶರ್ವಾಣೀ ಚಂಚಲಾಪಾಂಗೀ ಚಾರುಚಂದ್ರಕಲಾಧರಾ ।
ವಿಶಾಲಾಕ್ಷೀ ವಿಶ್ವಮಾತಾ ವಿಶ್ವವಂದ್ಯಾ ವಿಲಾಸಿನೀ ॥೮೨೭॥

ಆರ್ಯಾ ಕಲ್ಯಾಣನಿಲಯಾ ರುದ್ರಾಣೀ ಕಮಲಾಸನಾ ।
ಶುಭಪ್ರದಾ ಶುಭಾ ವಾರ್ತಾ ವೃತ್ತಪೀನಪಯೋಧರಾ ॥೮೨೮॥

---

ಭಯಂಕರಳಾದವಳು, ಪುಷ್ಟಿಪ್ರದಳು, ವಿದ್ಯಾಭಿಮಾನಿನಿಯು, ಸರ್ವವನ್ನೂ ತಿಳಿದವಳು, ಪರ್ವತರಾಜಪುತ್ರಿಯೆನಿಸಿದವಳು, ದುರ್ಗಾದೇವಿಯೆನಿಸಿ ಈಶ್ವರಪತ್ನಿ ಯೆನಿಸಿದವಳು, ವೇದವಿದ್ಯಾರೂಪಿಣಿಯು, ಬ್ರಹ್ಮವಿದ್ಯಾಸ್ವರೂಪಳು, ಜ್ಞಾನ ಪ್ರದಳು, ಕುಮಾರಿಯಂತೆಯೂ, ಯುವತಿಯಂತೆಯೂ, ಕೇವಲ ಬಾಲಿಕೆ ಯಂತೆಯೂ ಕಾಣುವವಳು. ಲಕ್ಷ್ಮೀನಾಮಾಂಕಿತಳು. ಭಕ್ತರಿಗೆ ಸಂಪತ್ತನ್ನಿತ್ತು ಅವರ ಭಯವನ್ನು ನಿವಾರಿಸುವವಳು. ||೮೨೩-೮೨೪||

ಭವಪತ್ನಿಯು, ವಿಷ್ಣುಮಾತೆಯು. ಬ್ರಹ್ಮಾದಿಗಳನ್ನು ಸೃಷ್ಟಿಸಿದವಳು. ಗಣಪತಿಗೆ ತಾಯಿಯೆನಿಸಿದವಳು. ಶಕ್ತಿರೂಪಿಣಿಯು. ಸ್ಕಂದಮಾತೆಯು. ಮಂಗಳ ಕರಳು. ಸಕಲ ನಿಧಿಗೂ ಆಶ್ರಯವಿತ್ತವಳು. ಐಶ್ವರ್ಯಾದಿಸಕಲಸದ್ಗುಣಗಳಿಂದ ಕೂಡಿದವಳು. ಭಕ್ತರಿಗೆ ಸಕಲ ಅಭೀಷ್ಟಗಳನ್ನೂ ಒದಗಿಸುವವಳು. ಸಂಸಾರವೆಂಬ ರೋಗವನ್ನು ಪರಿಹರಿಸುವವಳು ಸೌಂದರ್ಯರೂಪಿಣಿಯು. ಶ್ರೇಷ್ಠವಾದ ಹುಬ್ಬುಗಳು ಳ್ಳವಳು. ಮಂಗಳಸ್ವರೂಪಳು. ||೮೨೫-೮೨೬||

ಈಶ್ವರಪತ್ನಿಯು, ಚಂಚಲನೇತ್ರಳು, ಚಂದ್ರಕಲೆಯನ್ನು ಶಿರಸ್ಸಿನಲ್ಲಿ ಧರಿಸಿರುವವಳು, ವಿಶಾಲವಾದ ನೇತ್ರವುಳ್ಳವಳು, ಪ್ರಪಂಚಮಾತೆಯು, ಲೋಕ ಪೂಜ್ಯಳು, ಸಕಲ ಮಂಗಳಗಳಿಗೂ ಆಶ್ರಯವಿತ್ತವಳು, ರುದ್ರಪ್ರಿಯಳು, ಕಮಲದ

ಅಂಬಾ ಸಂಸಾರಮಥನೀ ಮೃಡಾನೀ ಸರ್ವಮಂಗಳಾ ।
ವಿಷ್ಣುಸಂಸೇವಿತಾ ಶುದ್ಧಾ ಬ್ರಹ್ಮಾದಿಸುರಸೇವಿತಾ ॥೮೨೯॥

ಪರಮಾನಂದದಾ ಶಾಂತಿಃ ಪರಮಾನಂದರೂಪಿಣೀ ।
ಪರಮಾನಂದಜನನೀ ಪರಮಾನ್ನಪ್ರದಾಯಿನೀ ॥೮೩೦॥

ಪರೋಪಕಾರನಿರತಾ ಪರಮಾ ಭಕ್ತವತ್ಸಲಾ ।
ಪೂರ್ಣಚಂದ್ರಾಭವದನಾ ಪೂರ್ಣಚಂದ್ರನಿಭಾಂಶುಕಾ ॥೮೩೧॥

ಶುಭಲಕ್ಷಣಸಂಪನ್ನಾ ಶುಭಾನಂತಗುಣಾರ್ಣವಾ ।
ಶುಭಸೌಭಾಗ್ಯನಿಲಯಾ ಶುಭಾಚಾರರತಾ ಪ್ರಿಯಾ ॥೮೩೨॥

ಚಂಡಿಕಾ ಚಂಡಮಥನೀ ಚಂಡದರ್ಪನಿವಾರಿಣೀ ।
ಚಂಡಮಾರ್ತಾಂಡನಯನಾ ಚಂದ್ರಾಗ್ನಿನಯನಾ ಸತೀ ॥೮೩೩॥

ಮೇಲೆ ಕುಳಿತಿರುವವಳು, ಶುಭವನ್ನು ಅನುಗ್ರಹಿಸುವವಳು, ಶುಭಸಮಾಚಾರವನ್ನು ಕೊಡುವವಳು, ದುಂಡಾದ ಮತ್ತು ದಪ್ಪವಾದ ಕುಚಗಳುಳ್ಳವಳು. ॥೮೨೭-೮೨೮॥

ಜಗನ್ಮಾತೆಯು, ಭಕ್ತರ ಸಂಸಾರದುಃಖವನ್ನು ನಾಶಗೊಳಿಸುವವಳು, ಈಶ್ವರ ಪತ್ನಿಯು, ವಿಷ್ಣುವಿನಿಂದ ಸೇವಿತಳಾದವಳು, ಶುದ್ಧರೂಪಿಣಿಯು, ಬ್ರಹ್ಮಾದಿ ವಂದಿತಳು, ಪರಮಾನಂದಪ್ರದಳು, ಶಾಂತಿರೂಪಿಣಿಯು, ದಿವ್ಯವಾದ ಅನ್ನವನ್ನು ಅನುಗ್ರಹಿಸುವಳು. ॥೮೨೯-೮೩೦॥

ಪರೋಪಕಾರದಲ್ಲಿ ನಿರತಳಾದವಳು, ಪರಮಮಹಿಮಳು, ಭಕ್ತರಲ್ಲಿ ಪ್ರೀತಿಯನ್ನಿಟ್ಟಿರುವವಳು, ಪೂರ್ಣಚಂದ್ರನಂತೆ ವಿಶಾಲವಾದ ಮುಖವುಳ್ಳವಳು, ಅವನಷ್ಟೇ ಕಾಂತಿಯುಳ್ಳವಳು, ಶುಭಲಕ್ಷಣಗಳಿಂದ ಕೂಡಿದವಳು, ಅತಿಶಯವಾದ ಗುಣಗಳಿಗೆ ಸಮುದ್ರದಂತಿರುವವಳು, ಸಕಲ ಸಂಪತ್ತುಗಳಿಗೂ ಆಶ್ರಯಸ್ಥಾನಳೆನಿಸಿದವಳು, ಶುಭಕರವಾದ ಆಚಾರವುಳ್ಳವಳು, ಸಕಲರಿಗೂ ಪ್ರೀತಿಪಾತ್ರಳು. ॥೮೩೧-೮೩೨॥

ಚಂಡೀಸ್ವರೂಪಳು, ದುಷ್ಟ ರಾಕ್ಷಸರನ್ನು ನಾಶಮಾಡಿದವಳು, ದುಷ್ಟರ ಗರ್ವವನ್ನು ಹೋಗಲಾಡಿಸುವವಳು, ತೀಕ್ಷ್ಣಕಿರಣನಾದ ಸೂರ್ಯನನ್ನೂ, ಚಂದ್ರ,

ಪುಂಡರೀಕಕರಾ ಪುಣ್ಯಾ ಪುಣ್ಯದಾ ಪುಣ್ಯರೂಪಿಣೀ ।
ಪುಣ್ಯಜ್ಞೇಯಾ ಪುಣ್ಯವೇದ್ಯಾ ಪುಣ್ಯಮೂರ್ತಿಃ ಪುರಾತನಾ ॥೮೩೪॥

ಅನವದ್ಯಾ ವೇದವೇದ್ಯಾ ವೇದವೇದಾಂತರೂಪಿಣೀ ।
ಮಾಯಾತೀತಾ ಸೃಷ್ಟಮಾಯಾ ಸೃಷ್ಟಧರ್ಮಾತ್ಮವಂದಿತಾ ॥೮೩೫॥

ಅಸೃಷ್ಟಾಸಂಗರಹಿತಾ ಸೃಷ್ಟಿಹೇತುಃ ಕಪರ್ದಿನೀ ।
ವೃಷಾರೂಢಾ ಶೂಲಹಸ್ತಾ ಸ್ಥಿತಿಸಂಹಾರಕಾರಿಣೀ ॥೮೩೬॥

ಮಂದಸ್ಮಿತಾ ಶುದ್ಧರೂಪಾ ಶುದ್ಧಚಿತ್ತಮುನಿಸ್ತುತಾ ।
ಮಹಾಭಾಗ್ಯವತೀ ದಕ್ಷಾ ದಕ್ಷಾಧ್ವರವಿನಾಶಿನೀ ॥೮೩೭॥

ಅಪರ್ಣಾನನ್ಯಶರಣಾ ಭಕ್ತಾಭೀಷ್ಟಫಲಪ್ರದಾ ।
ನಿತ್ಯಸುಂದರಸರ್ವಾಂಗೀ ಸಚ್ಚಿದಾನಂದಲಕ್ಷಣಾ ॥೮೩೮॥

---

ಅಗ್ನಿ ಇವುಗಳನ್ನೇ ನಯನಗಳನ್ನಾಗಿ ಉಳ್ಳವಳು, ಪತಿವ್ರತಾರೂಪಿಣಿಯು, ಪುಣ್ಯದಿಂದ ತಿಳಿಯಲ್ಪಡುವವಳು. ಪುಣ್ಯವಿಶೇಷದಿಂದ ಕಾಣಿಸಿಕೊಳ್ಳತಕ್ಕವಳು, ಪುಣ್ಯಮೂರ್ತಿಸ್ವರೂಪಳು, ಆದಿಯಿಲ್ಲದವಳು. ॥೮೩೩-೮೩೪॥

ದೋಷವಿವರ್ಜಿತಳು, ವೇದಪ್ರತಿಪಾದಿತಳು, ವೇದವೇದಾಂತರೂಪಿಣಿಯು, ಮಾಯಾವಿವರ್ಜಿತಳು, ಮಾಯೆಯನ್ನೇ ಸೃಷ್ಟಿಸಿದವಳು, ಧರ್ಮಾತ್ಮರನ್ನು ಸೃಷ್ಟಿಸಿ ಅವರಿಂದ ಸ್ತುತಿಸಲ್ಪಡುವವಳು, ತಾನು ಯಾರಿಂದಲೂ ಸೃಷ್ಟಿಸಲ್ಪಟ್ಟವಳಲ್ಲ. ಲೋಕಸೃಷ್ಟಿಗೆ ಮುಖ್ಯ ಕಾರಣಳೆನಿಸಿದವಳು, ಜಟಾಜೂಟವುಳ್ಳವಳು, ವೃಷಭಾರೂಢಳು, ತ್ರಿಶೂಲವನ್ನು ಕೈಯ್ಯಲ್ಲಿ ಧರಿಸಿದವಳು, ಲೋಕದ ಸೃಷ್ಟಿಸಂಹಾರಗಳನ್ನು ನಡೆಸುವವಳು. ॥೮೩೫-೮೩೬॥

ಸದಾ ಮುಗುಳ್ನಗೆಯಿಂದ ಕೂಡಿದವಳು, ಮಾಯಾರಹಿತಳು, ಶುದ್ಧಚಿತ್ತಳು, ಮುನಿಗಳಿಂದ ಸ್ತುತಳಾದವಳು, ಹೆಚ್ಚಾದ ಐಶ್ವರ್ಯದಿಂದ ಕೂಡಿದವಳು, ಸರ್ವಸಮರ್ಥಳು, ದಕ್ಷಬ್ರಹ್ಮನ ಯಾಗನಾಶಕ್ಕೆ ಮೂಲಕಾರಣಳು, ಋಣತ್ರಯ ನಿರ್ಮುಕ್ತಳು. (ಅಥವಾ ತಪಸ್ಸಿನಕಾಲದಲ್ಲಿ ಎಲೆಯನ್ನೂ ಸಹ ತಿನ್ನದೆ ಜೀವಿಸಿದವಳು,) ಇತರ ರಕ್ಷಕರಾರೂ ಇಲ್ಲದವಳು, ಭಕ್ತರಿಗೆ ಸಕಲ ಇಷ್ಟಾರ್ಥಗಳನ್ನೂ ಕೊಡುವವಳು, ನಿತ್ಯವೂ ಸುಂದರವಾಗಿ ಕಾಣುವ ಸರ್ವಾವಯವವುಳ್ಳವಳು, ಸಚ್ಚಿದಾನಂದ ಲಕ್ಷಣಗಳಿಂದ ಕೂಡಿದವಳು. ॥೮೩೭-೮೩೮॥

ನಾಮ್ನಾಮಷ್ಟೋತ್ತರಶತಮಂಬಾಯಾಃ ಪುಣ್ಯಕಾರಣಂ ।
ಸರ್ವಸೌಭಾಗ್ಯಸಿದ್ಧ್ಯರ್ಥಂ ಜಪನೀಯಂ ಪ್ರಯತ್ನತಃ ॥೮೩೯॥

ಇದಂ ಸ್ವಸ್ತ್ಯಯನಂ ಧನ್ಯಂ ಮಹಾಪಾತಕನಾಶಕಂ ।
ಸರ್ವಾಭೀಷ್ಟಪ್ರದಂ ಪುಣ್ಯಂ ನಿತ್ಯಮಂಗಳದಾಯಕಂ ॥೬೪೦॥

ಇಯಂ ನಾಮಾವಲೀ ತುಭ್ಯಂ ಮಯಾದ್ಯ ಸಮುದೀರಿತಾ ।
ಗೋಪನೀಯಾ ಪ್ರಯತ್ನೇನ ನಾಖ್ಯೇಯಾ ಯಸ್ಯ ಕಸ್ಯ ಚಿತ್॥೮೪೧॥

ಭಕ್ತಾಯ ಸುವಿನೀತಾಯ ಶುಭಾಚಾರಾಯ ಧೀಮತೇ ।
ಆಖ್ಯಾಯೇಯಂ ನ ಚಾನ್ಯಸ್ಮೈ ನಂದಿನ್ ಸ್ವಪ್ನೇಪಿ ಸರ್ವಥಾ॥೮೪೨॥

ಶುಚಿಭಿರ್ಭಾವಿತೈರಿಯಂ ಜಪ್ಯಾ ದ್ವಿಜೈರ್ನಾಮಾವಳೀಶುಭಾ ।
ಅನ್ಯಥಾ ವೈಪರೀತ್ಯೇನ ಭವಿಷ್ಯತಿ ಫಲಂ ಧ್ರುವಂ ॥೮೪೩॥

ತ್ವಯಾಪ್ಯತ್ಯಂತಯತ್ನೇನ ಕೃತ್ವೈವೋದ್ಧೂಲನಾದಿಕಂ ।
ಶಿವಾನೀನಿಕಟೇ ನಿತ್ಯಂ ಜಪನೀಯಂ ಯಥಾಕ್ರಮಂ ॥೮೪೪॥

---

ಮೇಲೆ ಹೇಳಿದ ಅನ್ನಪೂರ್ಣಾಷ್ಟೋತ್ತರಸ್ತೋತ್ರವು ಅತ್ಯಂತ ಪುಣ್ಯಪ್ರದವಾದದ್ದು. ಸಕಲ ಸೌಭಾಗ್ಯಗಳನ್ನೂ ಒದಗಿಸತಕ್ಕುದು. ಆದ್ದರಿಂದಲೇ ಇದನ್ನು ನಿತ್ಯವೂ ಯತ್ನಪೂರ್ವಕವಾಗಿ ಜಪಿಸಬೇಕು. ಇದು ಸಕಲರಿಗೂ ಮಂಗಳಪ್ರದವೆನಿಸಿ, ಸಕಲ ಪಾಪನಾಶಕವಾಗಿ, ಜಪಿಸಿದವರ ಸಕಲ ಇಷ್ಟಾರ್ಥಗಳನ್ನೂ ಸಲ್ಲಿಸುವುದು. ||೮೩೯-೮೪೦||

ಎಲೈ ಭಕ್ತಶ್ರೇಷ್ಠನೇ, ಈ ಅನ್ನಪೂರ್ಣಾದೇವಿಯ ನಾಮಾವಳಿಯನ್ನು ನಿನಗೆ ರಹಸ್ಯವಾಗಿ ಈಗ ಉಪದೇಶಿಸಿರುವೆನು. ಇದನ್ನು ಭಕ್ತರಲ್ಲದವರಿಗೆ ಎಂದೂ ಉಪದೇಶಿಸಬೇಡ ಯಾರಿಗೆ ನಿಜವಾದ ಭಕ್ತಿಯಿಲ್ಲವೋ, ಯಾರ ಮನಸ್ಸು ದೃಢವಾಗಿಲ್ಲವೋ ಅಂತಹವರಿಗೆ ನೀನು ಸ್ವಪ್ನದಲ್ಲಿಯೂ ಈ ಸ್ತೋತ್ರವನ್ನು ಉಪದೇಶಿಸಬೇಡ. ||೮೪೧-೮೪೨||

ಈ ಅಷ್ಟೋತ್ತರಶತನಾಮಾವಳಿಯನ್ನು ದ್ವಿಜರಾದವರು, ಶುದ್ಧಮನಸ್ಕರಾಗಿ ಜಪಿಸಬೇಕು. ನಿಯಮವಿಲ್ಲದೆ ಜಪಿಸಿದ ಇದು ವಿರುದ್ಧಫಲಕೊಡುವುದು. ಆದ್ದ

ಏತನ್ನಾಮಜಪಂ ಕೃತ್ವಾ ಸ್ತುತ್ವಾ ಚ ಪುನರಂಬಿಕಾಂ ।
ಶುಚಿರ್ಭೂತೇನ ಸತತಂ ಸ್ಥಾತವ್ಯಂ ಯತ್ನಪೂರ್ವಕಂ ॥೮೪೫॥

ಏತನ್ನಾಮಜಪಾಸಕ್ತಾಃ ಸತತಂ ಯಶ್ಶುಚಿರ್ಭವೇತ್ ।
ಸ ಸರ್ವಾನ್ ಲಭತೇ ಕಾಮಾನ್ನಾತ್ರ ಕಾರ್ಯಾ ವಿಚಾರಣಾ ॥೮೪೬॥

ಇತೀಶ್ವರವಚಃ ಶ್ರುತ್ವಾ ನಂದಿಕೇಶಃ ಪ್ರಯತ್ನತಃ ।
ಜಪ್ತ್ವೈತಾನ್ಯೇವ ನಾಮಾನಿ ಸರ್ವಾನ್ ಕಾಮಾನವಾಪ ಸಃ ॥೮೪೭॥

ಸ್ಕಂದೋಽಪ್ಯೇತಾನಿ ನಾಮಾನಿ ಜಜಾಪ ಸ್ವೇಷ್ಟಸಿದ್ಧಯೇ ।
ಶಿವೋದಿತಾನಿ ನಾಮಾನಿ ಸ್ಕಂದಶ್ಶುಶ್ರಾವ ಸಾದರಂ ॥೮೪೮॥

ಸ್ಕಂದಾದಗಸ್ತ್ಯಃ ಶುಶ್ರಾವ ನಾಮಾನ್ಯೇತಾನಿ ಸಾದರಂ ।
ಶ್ರುತ್ವಾ ಜಜಾಪ ನಾಮಾನಿ ಸೋಽಪಿ ಸರ್ವಾರ್ಥಸಿದ್ಧಯೇ ॥೮೪೯॥

ಶ್ರುತಾನ್ಯಗಸ್ತ್ಯೋದಿತಾನಿ ಮಯಾ ನಾಮಾನಿ ಸಾದರಂ ।
ಜಪ್ಯಂತೇ ಶುಚಿಚಿತ್ತೇನ ಭವಾನೀ ಸನ್ನಿಧೌ ಸದಾ ॥೮೫೦॥

---

ರಿಂದ ನೀನು ಭಸ್ಮೋದ್ಧೂಲನಾದಿಗಳಿಂದ ಶುದ್ಧನಾಗಿ ಪಾರ್ವತಿಯು ಸಮೀಪದಲ್ಲಿ ನಿಂತು ಈ ಸ್ತೋತ್ರವನ್ನು ಪಠಿಸು. ॥೮೪೩-೮೪೪॥

ಹಾಗೆಯೇ ಇದನ್ನು ಪುನಃಪುನಃ ಪಠಿಸುತ್ತಾ ಸದಾ ದೇವಿಯ ಸಮೀಪದಲ್ಲಿಯೇ ನೆಲಸಿರಬೇಕು. ಯಾರು ಇದನ್ನು ಭಕ್ತಿಯಿಂದ ಜಪಿಸುತ್ತಾ ದೇವಿಯ ಅನುಗ್ರಹವನ್ನು ಸಂಪಾದಿಸುವರೋ, ಅವರು ಸಕಲ ತಮ್ಮ ಇಷ್ಟಾರ್ಥಗಳನ್ನೆಲ್ಲಾ ಪಡೆದು ಸುಖವಾಗಿರುವರು." ॥೮೪೫-೮೪೬॥

ಹಾಗೆ ಶಂಕರನು ಉಪದೇಶಿಸಿದುದನ್ನು ಕೇಳುತ್ತಲೇ ನಂದೀಶ್ವರನು, ಅದರಂತೆಯೇ ದೇವಿಯ ಅನುಗ್ರಹದಿಂದ ಸಕಲ ಇಷ್ಟಾರ್ಥಗಳನ್ನೂ ಪಡೆದನು. ಅದೇರೀತಿ ಕುಮಾರಸ್ವಾಮಿಯೂ ಕೂಡ ಈ ಮಂತ್ರಜಪದಿಂದ ತನ್ನ ಕೋರಿಕೆಗಳನ್ನೆಲ್ಲಾ ಹೊಂದಿದನು. ॥೮೪೭॥

ಹಾಗೆ ಈಶ್ವರನು ಹೇಳಿದ ಅನ್ನಪೂರ್ಣಾಷ್ಟೋತ್ತರಶತನಾಮಾವಳಿಗಳನ್ನು ಕುಮಾರಸ್ವಾಮಿಯು ಕೇಳಿ, ಅದನ್ನು ಅಗಸ್ತ್ಯಮಹರ್ಷಿಗೆ ಉಪದೇಶಿಸಿದನು. ಅವನಿಂದ ನಾನು ತಿಳಿದುಕೊಂಡೆನು. ಈ ನಾವೆಲ್ಲರೂ ನಿಯಮಾನ್ವಿತರಾಗಿ ದೇವಿ

ಆವಹಂತೀತಿ ಮಂತ್ರೇಣ ಯುಕ್ತಾನ್ಯೇತಾನಿ ಸಾದರಂ ।
ಯೋ ಜಪೇತ್ಸತತಂ ಭಕ್ತ್ಯಾ ಸ ಕಾಮಾನ್ ಲಭತೇ ಧ್ರುವಂ ॥೮೫೦॥

ದೇವ್ಯಾ ವೈದಿಕನಾಮಾನಿ ಸರ್ವಾಣ್ಯೇತಾನಿ ತಾನ್ಯತಃ ।
ಶುಚಿರ್ಭೂತೇನ ಮನಸಾ ಜಪನೀಯಾನಿ ಸರ್ವದಾ ॥೮೫೨॥

ಏತಜ್ಜಪಾಧಿಕಾರಸ್ತು ವಿಪ್ರಾಣಾಮೇವ ವಸ್ತುತಃ ।
ತತೋ ವೇದರತೈರೇವ ಜಪನೀಯಾನಿ ಸಂತತಂ ॥೮೫೩॥

ಕಾರ್ಯಾಣ್ಯಾವಾಹನಾದೀನಿ ದೇವ್ಯಾಃ ಶುಚಿರತಾತ್ಮಭಿಃ ।
ಆವಹಂತೀತಿ ಮಂತ್ರೇಣ ಪ್ರತ್ಯೇಕಂ ಚ ಯಥಾಕ್ರಮಂ ॥೮೫೪॥

ಕರ್ತವ್ಯಂ ತರ್ಪಣಂ ಚಾಪಿ ತೇನ ಮಂತ್ರೇಣ ಮೂಲವತ್ ।
ತದನ್ವಿತೈಸ್ತು ಹೋಮೋಽಪಿ ಕರ್ತವ್ಯಸ್ತೈಶ್ಚ ಮೂಲವತ್ ॥೮೫೫॥

ಏತಾನಿ ದಿವ್ಯನಾಮಾನಿ ಶ್ರುತ್ವಾ ಧ್ಯಾತ್ವಾಪಿ ಸಂತತಂ ।
ಸ್ಮೃತ್ವಾ ದೇವೀಂ ಚ ಸತತಂ ಸರ್ವಾನ್ ಕಾಮಾನವಾಪ್ನುಯಾತ್॥೮೫೬॥

---

ಯನ್ನು ಇದರಿಂದ ಸ್ತುತಿಸಿ ಸಕಲ ವರಗಳನ್ನೂ ಪಡೆದಿರುವೆವು. ॥೮೪೮-೮೪೯-೮೫೦॥

ಈ ನಾಮಾವಳಿಯ ಪ್ರಾರಂಭದಲ್ಲಿ "ಆವಹಂತೀ ವಿತನ್ವಾನಾ" ಎಂಬ ಮಂತ್ರವನ್ನು ಜಪಿಸುತ್ತಾ ಯಾರು ದೇವಿಯನ್ನು ಪ್ರಾರ್ಥಿಸುವರೋ ಅವರು ಸಕಲ ಇಷ್ಟಾರ್ಥಗಳನ್ನೂ ಪಡೆಯುವರು. ಈ ದೇವಿಯ ನಾಮಗಳೆಲ್ಲಾ ವೇದಪ್ರಸಿದ್ಧಗಳಾಗಿವೆ. ಆದ್ದರಿಂದ ಇವುಗಳನ್ನು ಶುಚಿಯಾಗಿ ಸರ್ವದಾ ಪಠಿಸುತ್ತಿರಬೇಕು. ॥೮೫೧-೮೫೨॥

ವೇದಾಧ್ಯಯನ ಸಂಪನ್ನರಾಗಿರುವ ವಿಪ್ರರಿಗೇ ಇದನ್ನು ಜಪಿಸುವ ಯೋಗ್ಯತೆಯುಂಟಾಗುವುದು. ತದಂಗವಾಗಿ, ದೃಢಭಕ್ತಿಯಿಂದ ದೇವಿಯ ಆವಾಹನಾದ್ಯುಪಚಾರಗಳನ್ನು "ಆವಹಂತೀ" ಎಂಬ ಮಂತ್ರದಿಂದಲೇ ನೆರವೇರಿಸಬೇಕು. ॥೮೫೩-೮೫೪॥

ಅದೇ ಮಂತ್ರವನ್ನೇ ಮೂಲಮಂತ್ರವನ್ನಾಗಿ ಭಾವಿಸಿ, ದೇವೀ ತೃಪ್ತ್ಯರ್ಥವಾಗಿ ಹೋಮ, ತರ್ಪಣಾದಿಗಳನ್ನು ನೆರವೇರಿಸಬೇಕು ಯಾರು ಭಕ್ತಿಯಿಂದ ಈ

ಏತಜ್ಜಪಪ್ರಸಾದೇನ ನಿತ್ಯತೃಪ್ತೋ ವಸಾಮ್ಯಹಂ ।
ನ ಕದಾಪ್ಯನ್ನಪಾನೇಚ್ಛಾ ಜಾಯತೇ ಮಮ ಸರ್ವಥಾ ॥೮೫೭॥

ಸಂತುಷ್ಟಹೃದಯೋ ನಿತ್ಯಂ ವಸಾಮ್ಯತ್ರಾರ್ಚಯನ್ ಶಿವಾಂ ।
ಪ್ರತ್ಯೂಹಾಶ್ಚ ನ ಬಾಧಂತೇ ಭವಾನ್ಯಾ ಪೂಜನಾದ್ಧ್ರುವಂ ॥೮೫೮॥

ಯದಾ ಯದಾಭಿಲಷಿತಂ ಯದ್ಯದ್ಭವತಿ ನೋ ಸುರಾಃ ।
ತದಾ ತದಾಭಿಲಷಿತಂ ತತ್ತತ್ಸಂಪ್ರಾಪ್ಯತೇ ಮಯಾ ॥೮೫೯॥

ತನ್ನಾಮಜಪಸಾಮರ್ಥ್ಯಾತ್ಸಮರ್ಥೋಽಹಂ ಸದಾ ಸುರಾಃ ।
ಪಿಪಾಸಾದೀನಿ ದುಃಖಾನಿ ಜಿತಾನ್ಯೇವ ಮಯಾ ಸದಾ ॥೮೬೦॥

ಅತ ಏವಾತ್ರ ಸತತಂ ನಿರಾಹಾರೇಣ ಶಂಕರಂ ।
ಪ್ರತ್ಯೂಹಮಾತ್ರರಹಿತಃ ಪೂಜಯಿತ್ವಾ ವಸಾಮ್ಯಹಂ ॥೮೬೧॥

ಇತಿ ಬ್ರಹ್ಮಾದಯೋ ದೇವಾಃ ಶ್ರುತ್ವಾ ನಾಮಾನಿ ತನ್ಮುಖಾತ್ ।
ತಾನಿ ಜಪ್ತ್ವಾ ಸ್ಥಿತಾಸ್ತತ್ರ ಬಹುಕಾಲಂ ಶಿವಾರ್ಚಕಾಃ ॥೮೬೨॥

ದಿವ್ಯನಾಮಗಳನ್ನು ಪಠಿಸುತ್ತಾ, ದೇವಿಯನ್ನು ಸ್ಮರಿಸುವರೋ, ಅವರು ಸಕಲ ಇಷ್ಟಾರ್ಥಗಳನ್ನೂ ಪಡೆಯುವುದರಲ್ಲಿ ಸಂಶಯವಿಲ್ಲ. ॥೮೫೫-೮೫೬॥

ಈ ಸ್ತೋತ್ರಪಾರಾಯಣದ ಬಲದಿಂದಲೇ ನಾನು ಸದಾ ಸಂತುಷ್ಟಚಿತ್ತನಾಗಿ ವಾಸಿಸುತ್ತಿರುವೆನು. ನನ್ನ ಇಷ್ಟಾರ್ಥಗಳೆಲ್ಲಾ ಸಿದ್ಧಿಸಿವೆ. ವಿಘ್ನಗಳೆಲ್ಲಾ ನಿವಾರಣೆಯಾಗಿವೆ. ದೇವಿಯ ಆರಾಧನೆಯಿಂದ ನಾವು ಇದೆಲ್ಲವನ್ನೂ ಸುಲಭವಾಗಿ ಪಡೆಯಬಹುದು. ॥೮೫೭-೮೫೮॥

ನನಗೆ ಯಾವಾಗ, ಯಾವ ವಸ್ತುವಿನಲ್ಲಿ ಆಸೆಹುಟ್ಟಿದರೂ, ಅದು ಆಗಲೇ ದೇವಿಯ ವರದಿಂದ ಸುಲಭವಾಗಿ ಸಿದ್ಧಿಸುವುದು. ಆ ದೇವಿ ನಾಮಗಳ ಜಪದ ಬಲದಿಂದ ನನಗೆ ಹಸಿವು ಬಾಯಾರಿಕೆಗಳು ಸಹ ಉದಯಿಸಲಾರವು. ॥೮೫೯-೮೬೦॥

ಆದರೆ ನಾನು ಮಾತ್ರ ಕಾಲನಿಯಮವನ್ನನುಸರಿಸಿ, ತಪ್ಪದೆ ನಿರಾಹಾರಿಯಾಗಿ ಈ ಸ್ತೋತ್ರದಿಂದ ದೇವಿಯನ್ನು ಆರಾಧಿಸುವೆನು. ಅಗಸ್ತ್ಯಮಹರ್ಷಿಯಿಂದಲೇ ಬ್ರಹ್ಮಾದಿದೇವತೆಗಳೂ ಸಹ ದೇವಿಯ ನಾಮಾವಳಿಗಳನ್ನು ತಿಳಿದುಕೊಂಡು, ಜಪಿಸಿ ಕೃತಾರ್ಥರಾಗಿರುವರು. ॥೮೬೧-೮೬೨॥

ಶ್ರುತಾನಿ ತಾನಿ ನಾಮಾನಿ ಮಯಾ ವಿಷ್ಣುಮುಖಾದ್ದ್ವಿಜಾಃ ।
ಶ್ರುತಾನಿ ತಾನಿ ನಾಮಾನಿ ಜಪ್ಯಂತೇ ವಿಧಿಪೂರ್ವಕಂ ॥೮೬೩॥

ನಿರಾಹಾರೇಣ ಸತತಂ ಮಯಾ ಕಾಶ್ಯಾಂ ಪ್ರಯತ್ನತಃ ।
ತನ್ನಾಮಜಪಸಾಮರ್ಥ್ಯಾತ್ ಸ್ಥೀಯತೇ ಭಕ್ತಿಪೂರ್ವಕಂ ॥೮೬೪॥

ತನ್ನಾಮಜಪಸಾಮರ್ಥ್ಯಂ ಭವತಾಂ ನಾಧುನಾ ದ್ವಿಜಾಃ ।
ಸಕಲ್ಮಷಾ ಯತೋ ಯೂಯಂ ಕಾಶೀಂ ತ್ಯಕ್ತುಂ ಸಮುದ್ಯತಾಃ॥೮೬೫॥

ಕಾಶೀತ್ಯಾಗಾರ್ಥಮುದ್ಯುಕ್ತಾ ಭವಂತಃ ಪಾಪಕಾರಿಣಃ ।
ತನ್ನಾಮಜಪಸಾಮರ್ಥ್ಯಂ ಭವತಾಮತ ಏವ ನ ॥೮೬೬॥

ಕಾಶೀತ್ಯಾಗೋದ್ಯೋಗಜನ್ಯಪಾಪನಾಶಾಯ ಸಾದರಂ ।
ಪಂಚಕ್ರೋಶಶತಂ ಕೃತ್ವಾ ಸಮಾಯಾಂತ್ವಿಹ ಸತ್ವರಂ ॥೮೬೭॥

ತತಃಪರಂ ಶುಚಿರ್ಭೂತಾ ಭವಂತೋಽಪಿ ಭವಿಷ್ಯಥ ।
ತತಸ್ಸುಖೇನ ಭವತಾಂ ಕಾಶೀವಾಸೋ ಭವಿಷ್ಯತಿ ॥೮೬೮॥

ವಿಷ್ಣ್ವಾದಿದೇವತೆಗಳೂ ಈ ದೇವಿಯ ನಾಮಾವಳಿಗಳನ್ನು ನನ್ನಿಂದಲೇ ಕೇಳಿ ತಿಳಿದುಕೊಂಡು, ಅದನ್ನು ಜಪಿಸಿ ಧನ್ಯರಾಗಿರುವರು. ನಾನಾದರೋ ತಪ್ಪದೆ ಕಾಶಿಯಲ್ಲಿ ಆಹಾರತ್ಯಾಗಮಾಡಿ, ಸದಾ ದೇವಿಯನ್ನೇ ಜಪಿಸುತ್ತಾ ಕಾಲ ಕಳೆಯುವೆನು. ॥೮೬೩-೮೬೪॥

ಎಲೈ ದ್ವಿಜರೇ, ನಿಮಗೆ ಮಾತ್ರ ಆ ದೇವಿಯ ನಾಮಾವಳಿಗಳನ್ನು ಜಪಿಸುವ ಅಧಿಕಾರವಿಲ್ಲ. ಏಕೆಂದರೆ, ನಿಮ್ಮ ಮನಸ್ಸು ಕಲ್ಮಶದಿಂದ ಕೂಡಿ ಕಾಶೀಪರಿತ್ಯಾಗಕ್ಕೆ ಅವಕಾಶಗೊಟ್ಟಿದೆ ಪವಿತ್ರವಾದ ಕಾಶಿಯನ್ನು ಬಿಟ್ಟುಹೊರಡಲು ಅನುವಾದ ನೀವು ನಿಜವಾಗಿಯೂ ಪಾಪಿಗಳು. ದೇವಿಯ ನಾಮಾವಳಿಗಳನ್ನು ಜಪಿಸುವ ಅಧಿಕಾರವೇ ನಿಮಗಿಲ್ಲ ॥೮೬೫-೮೬೬॥

ಕಾಶಿಯನ್ನು ಬಿಡಲು ತೊಡಗಿದ್ದರಿಂದಲೇ ನೀವು ಈಗ ಪರಮ ಪಾಪಿಗಳಾಗಿರುವಿರಿ. ಅದನ್ನು ಪರಿಹರಿಸಿಕೊಳ್ಳಲು ನೀವು ಶುಚಿಯಾಗಿ ಕಾಶಿಯಲ್ಲಿ ಪಂಚಕ್ರೋಶ ಶತ (ನೂರುಸಾರಿ ಕಾಶೀಕ್ಷೇತ್ರಪ್ರದಕ್ಷಿಣೆ) ಯಾತ್ರೆಯನ್ನು ಮುಗಿಸಿಕೊಂಡು

|| ಶ್ರೀ ಶಿವ ಉವಾಚ ||

ತತಃಪರಂ ಭವಂತೋऽಪಿ ನಿತ್ಯತೃಪ್ತಾ ಭವಿಷ್ಯಥ ।
ತತಸ್ಸುಖೇನ ಭವತಾಂ ಕಾಶೀವಾಸೋ ಭವಿಷ್ಯತಿ ||೮೬೯||

ಇತಿ ತದ್ವಚನಂ ಶ್ರುತ್ವಾ ಸಂತುಷ್ಟಾಸ್ತೇ ಮುನೀಶ್ವರಾಃ ।
ಶತವಾರಂ ಪ್ರಯತ್ನೇನ ಚಕ್ರುಃ ಕ್ಷೇತ್ರಪ್ರದಕ್ಷಿಣಂ ||೮೭೦||

ತತಸ್ತೇ ಜೈಗೀಷವ್ಯಾಚ್ಚ ಶ್ರುತ್ವಾ ನಾಮಾನಿ ಭಕ್ತಿತಃ ।
ಚಕ್ರುರ್ನಾಮಜಪಂ ಸರ್ವೇ ಭಸ್ಮರುದ್ರಾಕ್ಷಭೂಷಣಾಃ ||೬೭೧||

ತತಃಪರಂ ಸ್ವಸ್ಥಚಿತ್ತಾ ಬಭೂವುಸ್ತೇ ಮುನೀಶ್ವರಾಃ ।
ಉಪಸರ್ಗಾಶ್ಚ ತೇ ಸರ್ವೇ ಸರ್ವತಶ್ಶಾಮಿತಾ ಮಯಾ ||೮೭೨||

ವೃಕ್ಷಾಸ್ಸಪಲ್ಲವಾ ಜಾತಾ ಮುನಿವೃಂದನಿಷೇವಿತಾಃ ।
ಜಾತಾನಿ ಸರ್ವಕುಂಡಾನಿ ಸ ಜಲಾನಿ ಮನೋರಮೇ ||೮೭೩||

ಇಲ್ಲಿಗೆ ಬನ್ನಿರಿ. ಅನಂತರ ನೀವು ಹಿಂದಿನಂತೆ ಸುಕೃತಿಗಳೆನಿಸಿ, ಕಾಶೀವಾಸದಲ್ಲಿ ಅರ್ಹತೆಯನ್ನು ಪಡೆಯುವಿರಿ ನಿಮಗೆ ಸುಖವು ಲಭಿಸುವುದು. ||೮೬೭-೮೬೮||

,ನಿಮಗೆ ನಿತ್ಯತೃಪ್ತಿಯು ಅದರಿಂದಲೇ ಒದಗುವುದು. ಮೊದಲು ನೀವು ಅದರಂತೆ ನಡೆಯಿರಿ" ಎಂದು ಹೇಳಿದೊಡನೆಯೇ ಆ ಋಷಿಜನರೆಲ್ಲರೂ ಜ್ಞಾನಿಗಳಾಗಿ ಒಡನೆಯೇ ಪ್ರಯತ್ನಪುರಸ್ಸರವಾಗಿ ನೂರುಸಾರಿ ಆ ಕಾಶೀಕ್ಷೇತ್ರಪ್ರದಕ್ಷಿಣೆ ಮಾಡಿದರು. ||೮೬೯-೮೭೦||

ಹಾಗೆಯೇ ಜೈಗೀಷವ್ಯ ಮಹರ್ಷಿಯ ದೆಸೆಯಿಂದ ಈ ದೇವತಾನಾಮಗಳನ್ನೆಲ್ಲಾ ತಿಳಿದುಕೊಂಡು, ಅದನ್ನೇ ಸದಾ ಜಪಿಸುತ್ತಾ ಸಂತುಷ್ಟಮನಸ್ಕರಾಗಿ, ವಿಘ್ನವಿಲ್ಲದ ಸುಖಗಳಿಂದ ಆನಂದವಾಗಿ ವಾಸಿಸುತ್ತಿದ್ದರು. ಆಗ ಕಾಶಿಗೆ ಒದಗಿದ್ದ ವಿಪತ್ತುಗಳನ್ನೆಲ್ಲಾ ನಾನು ಪರಿಹಾರಮಾಡಿದೆನು. ||೮೭೧-೮೭೨||

ಆ ಕಾಶಿಯಲ್ಲಿ ಒಣಗಿಹೋಗಿದ್ದ ಮರಗಳೆಲ್ಲವೂ ಚಿಗುರಿದುವು. ಬತ್ತಿಹೋಗಿದ್ದ ಕೊಳಗಳೆಲ್ಲಾ ನಿರ್ಮಲೋದಕದಿಂದ ತುಳುಕಿದುವು. ಆಗಾಗ ಒದಗು

ವ್ಯಾಧಯಸ್ಸರ್ವತಶ್ಶಾಂತಾಃ ಸರ್ವೇಽಪಿ ಸುಖಿನಃ ಸ್ಥಿತಾಃ ।
ಮದರ್ಚನಪರಾ ಜಾತಾಃ ಸರ್ವೇಽಪಿ ಸ್ಥಿರಮಾನಸಾಃ ॥೮೭೪॥

ಸೋಢ್ವೇವ ಬಹುಕಾಲೀನಾನುಪಸರ್ಗಾನ್ ಮುನೀಶ್ವರಾಃ ।
ಅಸಂಖ್ಯಾತಾ ಸ್ಥಿತಾ ದೇವಿ ತೇ ಮುಕ್ತಾಶ್ಚ ತತಃ ಪರಂ ॥೮೭೫॥

ಅತ್ರೋಪಸರ್ಗಾನ್ಯೇ ಸೋಢ್ವಾ ತಿಷ್ಠಂತಿ ಗತಕಲ್ಮಷಾಃ ।
ತೇಷಾಂ ಮುಕ್ತಿರ್ಭವತ್ಯೇವ ಮಂಗಲೇ ಮದನುಗ್ರಹಾತ್ ॥೮೭೬॥

ಕಾಶೀಯಂ ಚಂಚಲಾಪಾಂಗೀ ಸರ್ವದಾ ಸರ್ವದೇಹಿನಾಂ ।
ಭುಕ್ತಿಮುಕ್ತಿಪ್ರದಾ ತಸ್ಮಾತ್ಸರ್ವೇ ತಿಷ್ಠಂತಿ ಸರ್ವದಾ ॥೮೭೭॥

ಸರ್ವದುಃಖಪ್ರಶಮನೀ ಸರ್ವಸೌಭಾಗ್ಯದಾಯಿನೀ ।
ಕಾಶ್ಯೇವಾತಃ ಪ್ರಯತ್ನೇನ ಸೇವನೀಯಾ ಮನೀಷಿಭಿಃ ॥೮೭೮॥

ಯಸ್ಯಾಂ ಕಾಶ್ಯಾಮಹಂ ದೇವೋ ವಿಧಿವಿಷ್ಣ್ವಾದಿಸೇವಿತಃ ।
ತಸ್ಯಾಮಸ್ಯಾಂ ಶಿವೇ ಕಾಶ್ಯಾಂ ದುಃಖಂ ನಾಸ್ತ್ಯೇವ ಸರ್ವಥಾ ॥೮೭೯॥

ತ್ತಿದ್ದ ವ್ಯಾಧಿಗಳೆಲ್ಲಾ ಬಯಲಾದುವು. ಸರ್ವರೂ ಶಿವಭಕ್ತಿಯುತರಾಗಿ ಸುಖದಿಂದ ಕೂಡಿ ಸನ್ಮಾರ್ಗಗಾಮಿಗಳೆನಿಸಿದರು. ॥೮೭೩-೮೭೪॥

ಅಲ್ಲಿನವರೆಗೆ ಅನೇಕ ಕಷ್ಟಗಳನ್ನು ಸಹಿಸಿಕೊಂಡು ಅಲ್ಲಿಯೇ ಜೀವಿಸಿದ್ದ ಅಸಂಖ್ಯಾತರಾದ ಮುನಿಗಳೆಲ್ಲರಿಗೂ ಅಲ್ಲಿಯೇ ಮುಕ್ತಿಯು ದೊರೆಯಿತು. ಆದ್ದರಿಂದ ಕಾಶಿಯಲ್ಲಿ ಒದಗಿದ ಅನೇಕ ಉಪಟಳಗಳನ್ನು ಸಹಿಸಿಕೊಂಡು ಯಾರು ಜೀವಿಸುವರೋ, ಅವರಿಗೆ ನನ್ನ ಅನುಗ್ರಹದಿಂದ ಶಾಶ್ವತವಾದ ಮುಕ್ತಿಯು ದೊರೆಯುವುದು. ॥೮೭೫-೮೭೬॥

ಈ ಕಾಶಿಯೆಂಬುದು ಸಕಲ ಪ್ರಾಣಿಗಳಿಗೂ ಭುಕ್ತಿ, ಮುಕ್ತಿ, ಇವುಗಳನ್ನು ಒದಗಿಸುವ ಚಂಚಲಾಕ್ಷಿಯೆಂದು ತಿಳಿ. ಇದು ಸಕಲರ ದುಃಖಗಳನ್ನೂ ನಿವಾರಿಸುವುದು ಮಾತ್ರವಲ್ಲದೆ ಸಕಲ ಸಂಪತ್ತುಗಳನ್ನೂ ಒದಗಿಸಿಕೊಡುವುದು. ಆದ್ದರಿಂದ ತಿಳಿದವರು ತಪ್ಪದೆ ಈ ಕಾಶಿಯನ್ನು ಸರ್ವದಾ ಸೇವಿಸಬೇಕು ॥೮೭೭-೮೭೮॥

ಈ ಕಾಶಿಯಲ್ಲಿ ನಾನು ಬ್ರಹ್ಮವಿಷ್ಣ್ವಾದಿಗಳಿಂದ ಸೇವಿತನಾಗಿ ಸರ್ವದಾ ವಾಸಿಸುತ್ತಿರುವೆನು ಆದ್ದರಿಂದಲೇ ಇಲ್ಲಿ ಯಾರಿಗೂ ದುಃಖಸಂಬಂಧವು ಒದಗಲಾ

ಯೇ ವಸಂತ್ಯತ್ರ ವಿಶ್ವಸ್ಯ ಕಾಶ್ಯಾಂ ಮುಕ್ತ್ಯರ್ಥಿನೋ ನರಾಃ ।
ತೇ ಮದೀಯಾಃ ಶಿವೇ ತೇಭ್ಯೋ ಮುಕ್ತಿಂ ದಾಸ್ಯಾಮ್ಯಸಂಶಯಂ ॥೮೮೦॥

ಮುಕ್ತಿಕಾಂತಾಂ ಪ್ರಯಚ್ಛಾಮಿ ಯಸ್ಯಾಂ ಕಾಶ್ಯಾಮಹಂ ಶಿವೇ ।
ತಸ್ಯಾಂ ನ ಸ್ಥಾತುಮಿಚ್ಛಂತಿ ಕೇ ವಾ ಮುಕ್ತ್ಯರ್ಥಿನೋ ನರಾಃ ॥೮೮೧॥

ಮಾಮೇವಾಭ್ಯರ್ಚಯಂತೋಽತ್ರ ಕಾಶ್ಯಾಂ ತಿಷ್ಠಂತಿ ಯೇ ಶಿವೇ ।
ತೇಭ್ಯೋ ಮುಕ್ತಿಂ ಪ್ರಯಚ್ಛಾಮಿ ಸತ್ಯಂ ಸತ್ಯಂ ನ ಸಂಶಯಃ ॥೮೮೨॥

ಕರ್ಮಣಾ ಮನಸಾ ವಾಚಾ ಕಾಶ್ಯಾಂ ಮಯಿ ಚ ಯೇ ರತಾಃ ।
ತೇಭ್ಯೋ ಮುಕ್ತಿಪ್ರದಾನಾರ್ಥಂ ಪ್ರಭುಶ್ಚ ಪ್ರತಿಭೂರಹಂ ॥೮೮೩॥

ಪಶ್ಯೈತಾನ್ ಶಾಂತಹೃದಯಾನ್ ಶಿವೇ ಮೋಕ್ಷಾರ್ಥಮುತ್ಸುಕಾನ್ ।
ಭಸ್ಮೋದ್ಧೂಲಿತಸರ್ವಾಂಗಾನ್ ಸ್ತ್ರಿಪುಂಡ್ರಾಂಕಿತಮಸ್ತಕಾನ್ ॥೮೮೪॥

ರುದ್ರಾಕ್ಷಮಾಲಾಭರಣಾನ್ ಮನ್ನಾಮಜಪತತ್ಪರಾನ್ ।
ಮಲ್ಲಿಂಗಪೂಜನಾಸಕ್ತಾನ್ಮತ್ಕಥಾಶ್ರವಣಪ್ರಿಯಾನ್ ॥೮೮೫॥

ರದು. ಮೋಕ್ಷಾಪೇಕ್ಷೆಯಿಂದ ಇಲ್ಲಿ ನೆಲಸಿರುವವರೆಲ್ಲಾ ನನ್ನವರು. ಅವರಲ್ಲಿ ನಾನು ಸ್ಥಿರವಾದ ಅಭಿಮಾನವನ್ನಿಟ್ಟಿರುವೆನು. ಇದರಲ್ಲಿ ಸಂಶಯವಿಲ್ಲ. ||೮೭೯-೮೮೦||

ಯಾರು ಭಕ್ತಿಯಿಂದ ನನ್ನನ್ನೇ ಆರಾಧಿಸುತ್ತಾ ಕಾಶಿಯಲ್ಲಿಯೇ ನೆಲಸಿರುವರೋ, ಅಂತಹವರಿಗೆ ಶಾಶ್ವತವಾದ ಮುಕ್ತಿಯೆಂಬ ಸ್ತ್ರೀಯನ್ನು ಅರ್ಪಿಸುವೆನು. ಅವರನ್ನು ಹೆಚ್ಚುಕಾಲ ಕಾಶಿಯಲ್ಲಿಯೂ ನಿಲ್ಲಿಸದೆ ನನ್ನ ಸಾನ್ನಿಧ್ಯಕ್ಕೆ ಒಯ್ಯುವೆನು. ಈ ಮಾತಿನಲ್ಲಿ ಸಂಶಯವಿಲ್ಲ. ಇದು ನಿಜ. ||೮೮೧-೮೮೨||

ಯಾರು ದೇಹದಿಂದಲೂ, ಮನಸ್ಸಿನಿಂದಲೂ, ಕಾರ್ಯದಿಂದಲೂ ನನ್ನನ್ನೇ ಧ್ಯಾನಿಸುತ್ತಾ ಕಾಶಿಯಲ್ಲಿ ವಾಸಿಸುವರೋ, ಅಂತಹವರಿಗೆ ಮುಕ್ತಿಯನ್ನು ಒದಗಿಸುವ ಸಲುವಾಗಿಯೇ ನಾನು ಪ್ರಭುಪದವಿಯಲ್ಲಿರುವೆನು. ಇಗೋ ಇಲ್ಲಿನೋಡು. ಮೋಕ್ಷಾಪೇಕ್ಷೆಯಿಂದ ಭಸ್ಮತ್ರಿಪುಂಡ್ರಾದಿಗಳನ್ನು ಹಣೆಯಲ್ಲಿ ಧರಿಸಿ ಕಾಶಿಯಲ್ಲಿ ಶಾಂತರೀತಿಯಿಂದ ವಾಸಿಸುವ ಜನರನ್ನು ನೋಡು ||೮೮೩-೮೮೪||

ರುದ್ರಾಕ್ಷಮಾಲೆಗಳನ್ನು ಧರಿಸಿ, ನನ್ನ ನಾಮಗಳನ್ನೇ ಜಪಿಸುತ್ತಾ ಶಿವಲಿಂಗಗಳನ್ನೇ ಆರಾಧಿಸುತ್ತಾ ಶಿವಕಥೆಗಳನ್ನಾಲಿಸುತ್ತಾ ಇಲ್ಲಿ ವಾಸಿಸುವ ಮಹಾತ್ಮರನ್ನು

ಏತಾದೃಶಾನಾಂ ಧನ್ಯಾನಾಂ ನಿತ್ಯಂ ಮದ್ಗತಚೇತಸಾಂ ।
ಮುಕ್ತಿರ್ಭವತಿ ನಿರ್ವಿಘ್ನಂ ಮತ್ಪ್ರಸಾದಾದ್ವರಾನನೇ ॥೮೮೬॥

ಪಶ್ಯೈನಂ ಜಯಗೀಷವ್ಯಂ ಮದರ್ಚನಪರಾಯಣಂ ।
ಮದರ್ಚನಾರ್ಥಮಾಯಾತಿ ಪೂಜಾಸಾಧನಪೂರ್ವಕಂ ॥೮೮೭॥

ಅತಿವೃದ್ಧೋಯಮಮಲೇ ನಿತ್ಯಂ ಕಾಲತ್ರಯೇಪಿ ಮಾಂ ।
ಸಮರ್ಚಯತಿ ಬಿಲ್ವಾದ್ಯೈಃ ಶಿವಲಿಂಗಸ್ವರೂಪಿಣಂ ॥೮೮೮॥

ಕಲ್ಪಕೋಟಿಸಹಸ್ರಾಣಿ ಕಲ್ಪಕೋಟಿಶತಾನಿ ಚ ।
ಜಾತಾನ್ಯೇತಸ್ಯ ಮತ್ಪೂಜಾನಿರತಸ್ಯ ವರಾನನೇ ॥೮೮೯॥

ಕದಾಪ್ಯನೇನ ನ ಕೃತಂ ಮದನ್ಯಾರಾಧನಂ ಶಿವೇ ।
ನಿತ್ಯಂ ಮದರ್ಚನೇನೈವ ಪೂತಮಸ್ಯ ಕರದ್ವಯಂ ॥೮೯೦॥

ಶಿವೇ ಕದಾಪಿ ನ ಧ್ಯಾತೋ ಮದನ್ಯೋಽನೇನ ಸಾದರಂ ।
ಮದನ್ಯೋ ನೇಕ್ಷಿತೋನೇನ ಕದಾಚಿದಪಿ ಯತ್ನತಃ ॥೮೯೧॥

ನೋಡು. ಇವರಿಗೆಲ್ಲಾ ನನ್ನ ಅನುಗ್ರಹದಿಂದ ನಿರ್ವಿಘ್ನವಾಗಿ ಮುಕ್ತಿಯು ದೊರಕುವುದು. ||೮೮೫-೮೮೬||

ಈಕಡೆ ಜೈಗೀಷವ್ಯಮಹರ್ಷಿಯೆಂಬ ವೃದ್ಧನೊಬ್ಬನು ಸದಾ ಶಿವಲಿಂಗವನ್ನು ಕಾಲತ್ರಯದಲ್ಲಿಯೂ, ಅನೇಕ ಸಾಧನದ್ರವ್ಯಗಳಿಂದ ಅರ್ಚಿಸುತ್ತಾ, ಸದಾ ನನ್ನಲ್ಲಿಯೇ ಮನಸ್ಸನ್ನು ಸ್ಥಿರಗೊಳಿಸಿರುವನು. ಸರ್ವದಾ ಬಿಲ್ವಪತ್ರಾದಿಗಳಿಂದ ಈಶ್ವರಾರಾಧನೆ ಮಾಡುತ್ತಿರುವನು. ||೮೮೭-೮೮೮||

ಈತನಿಗೆ ಕೋಟ್ಯಂತರ ಕಲ್ಪಗಳ ಆಯುಸ್ಸು ಕಳೆದಿದೆ. ಇಲ್ಲಿನವರೆಗೂ ಈತನು ಸದಾ ನನ್ನನ್ನೇ ಆರಾಧಿಸುತ್ತಾ, ಇತರ ಯಾವ ದೇವತೆಗಳನ್ನೂ ಲಕ್ಷಿಸದೇ ತನ್ನ ಕೈಗಳನ್ನೂ ಶಿವಾರ್ಚನಾದಿಗಳಿಂದ ಪವಿತ್ರಗೊಳಿಸಿಕೊಂಡಿರುವನು. ||೮೮೯-೮೯೦||

ಪಾರ್ವತಿಯೇ, ಈತನು ಇಲ್ಲಿನವರೆಗೂ ನನ್ನನ್ನು ಬಿಟ್ಟು ಮತ್ತಾವ ದೇವರನ್ನೂ ಧ್ಯಾನಮಾಡಿಲ್ಲ. ದರ್ಶನಮಾಡಿಲ್ಲ ಮತ್ತಾರಿಗೂ ಈತನು ತಲೆಬಗ್ಗಿಸಿ ನಮಸ್ಕರಿ

ಪ್ರಣಾಮೋ ನ ಕೃತೋಽನೇನ ಮದನ್ಯಸ್ಯ ವರಾನನೇ ।
ಮತ್ಕಥಾನ್ಯಕಥಾನೇನ ನ ಶ್ರುತಾ ಭಕ್ತಿಪೂರ್ವಕಂ ॥೮೯೨॥

ಶ್ರುತಂ ನಾನೇನ ನಾಮಾಪಿ ಮದನ್ಯಸ್ಯ ಪ್ರಯತ್ನತಃ ।
ಜಿಹ್ವೈತಸ್ಯಾತಿವಿಮಲಾ ನಾನ್ಯನಾಮಾನುವಾದಿನೀ ॥೮೯೩॥

ಸರ್ವದಾ ಶಿವಕಾಶೀಶ ಮಹೇಶ ಮೃಡ ಶಂಕರ ।
ವಿಶ್ವನಾಥೇತಿ ನಾಮಾನಿ ಜಪತ್ಯಯಮನಾಕುಲಃ ॥೮೯೪॥

ಏತಾನಿ ಪಂಚನಾಮಾನಿ ಮಮ ದಿವ್ಯಾನಿ ಶೈಲಜೇ ।
ವಿಶ್ವನಾಥೇತಿ ನಾಮ್ನಾಪಿ ಯುಕ್ತಾನಿ ಶ್ರುತಿಗಾನ್ಯತಃ ॥೮೯೫॥

ಜಪನೀಯಾನಿ ಯತ್ನೇನ ಮುಕ್ತಿಕಾಂಕ್ಷಿಭಿರಾದರಾತ್ ।
ಪ್ರಿಯಾಣಿ ಮಮ ನಾಮಾನಿ ನಿರ್ಮಿತಾನಿ ಮಯಾ ಪುರಾ ॥೮೯೬॥

ಯತ್ರ ಪಶ್ಯತಿ ತತ್ರಾಯಂ ಸದಾ ಮಾಮೇವ ಪಶ್ಯತಿ ।
ಮದನ್ಯಂ ಗಿರಿಜೇ ಕ್ವಾಪಿ ಭ್ರಮೇಣಾಪಿ ನ ಪಶ್ಯತಿ ॥೮೯೭॥

ಸಿಲ್ಲ. ಯಾವ ದೇವತಾಂತರ ಕಥೆಗಳನ್ನೇ ಆಗಲಿ ಈತನು ಕಿವಿಯಿಂದ ಕೇಳಿಲ್ಲ. ||೮೯೧-೮೯೨||

ನನ್ನ ನಾಮಗಳನ್ನು ಬಿಟ್ಟು ಮತ್ತಾರ ನಾಮಾವಳಿಗಳನ್ನೂ ಈತನು ಕೇಳಿಲ್ಲ, ಹೇಳಿಲ್ಲ. ಆದರಿಂದಲೇ ಈತನ ನಾಲಿಗೆಯು ಪವಿತ್ರವಾಗಿರುವುದು. ಸರ್ವದಾ ಈತನು ಕಾಶೀಪತೇ, ಮಹೇಶನೇ, ಮೃಡನೇ, ಶಿವನೇ, ವಿಶ್ವೇಶ್ವರನೇ ಮೊದಲಾದ ನನ್ನ ಹೆಸರುಗಳನ್ನೇ ಸಂತೋಷದಿಂದ ಪಠಿಸುತ್ತಿರುವನು. ||೮೯೩-೮೯೪||

ದೇವಿಯೇ, ಮೇಲೆ ಹೇಳಿದ ಆ ನನ್ನ ಐದು ನಾಮಗಳು ಅತಿ ಪವಿತ್ರವಾದವುಗಳು. ಮೋಕ್ಷಾಪೇಕ್ಷಿಗಳು ಆ ನನ್ನ ಪ್ರಿಯತಮಗಳಾದ ನಾಮಗಳನ್ನು ಸದಾ ಜಪಿಸುತ್ತಿರಬೇಕು. ಆದರಿಂದ ನಾನು ತೃಪ್ತನಾಗುವೆನು. ಈ ನಾಮಗಳನ್ನು ನಿರ್ಮಿಸಿಕೊಂಡಿರುವವನು ನಾನೇ. ||೮೯೫-೮೯೬||

ಈ ಜೈಗೀಷವ್ಯನು ನೋಡುವುದಾದರೆ ನನ್ನ ಆಕಾರವೊಂದನ್ನೇ. ಮತ್ತಾರನ್ನು ಎಂದೂ ಅಜ್ಞಾನದಿಂದಲೂ ನೋಡಲಾರನು. ಈತನು ರುದ್ರಾಧ್ಯಾಯವನ್ನು

ರುದ್ರಾಧ್ಯಾಯಜಪ್ತೋನೇನ ಕೃತಸ್ತಾವಾನ್ಪ್ರಯತ್ನತಃ ।
ಯಾವಾನನ್ಯೇನ ನ ಕೃತೋ ಗಣನಾ ವಿಷಯೋಪಿ ನ ॥೯೯೮॥

ಪಂಚಾಕ್ಷರಜಪ್ತೋನೇವ ಕೃತಸ್ತಾವಾನ್ ಪ್ರಯತ್ನತಃ ।
ಯಾವಾನನ್ಯೇನ ನ ಕೃತೋ ಗಣನಾ ವಿಷಯೋಪಿ ನ ॥೯೯೯॥

ಕಾಶ್ಯಾಮನೇನ ಲಿಂಗಾನಿ ಸ್ಥಾಪಿತಾನಿ ಯಥಾವಿಧಿ ।
ಏತತ್ಸ್ಥಾಪಿತಲಿಂಗಾನಾಂ ಸಂಖ್ಯಾಂ ಕರ್ತುಂ ನ ಶಕ್ಯತೇ ॥೬೦೦॥

ಕಾಶ್ಯಾಂ ಕೃತಾನ್ಯನೇನೈವ ಲಿಂಗದಾನಾನಿ ಕೋಟಿಶಃ ।
ಶೈವಾನಾಹೂಯ ವಿಧಿವಚ್ಛೈವೇಭ್ಯೋ ಭಕ್ತಿಪೂರ್ವಕಂ ॥೬೦೧॥

॥ ಪಾರ್ವತ್ಯುವಾಚ ॥

ದೇವದೇವ ಮಹಾದೇವ ಲಿಂಗದಾನವಿಧಿಂ ವದ ।
ಲಿಂಗದಾನಫಲಂ ಚಾಪಿ ವದ ಮಹ್ಯಂ ಕೃಪಾನಿಧೇ ॥೬೦೨॥

ಭಕ್ತಿಪೂರ್ವಕವಾಗಿ ಜಪಿಸಿರುವಷ್ಟು ಮತ್ತಾರೂ ಹೇಳಿರಲಾರರು. ಸಂಖ್ಯೆಗೆ ಮೀರಿದಷ್ಟುಸಲ ಈತನು ಆ ಮಂತ್ರವನ್ನು ಪಠಿಸಿರುವನು. ॥೯೯೭-೯೯೮॥

ಲೆಕ್ಕವಿಲ್ಲದಷ್ಟುಸಾರಿ ಈತನು ಶಿವಪಂಚಾಕ್ಷರೀ ಮಂತ್ರವನ್ನು ಜಪಿಸಿರುವನು. ಈತನು ಕಾಶಿಯಲ್ಲಿ ಸ್ಥಾಪನೆಮಾಡಿರುವ ಶಿವಲಿಂಗಗಳನ್ನು ಎಣಿಸಿ, ಒಟ್ಟು ಮೊತ್ತವನ್ನು ಹೇಳಲು ಸಾಧ್ಯವೇ ಇಲ್ಲದಂತಾಗಿದೆ. ॥೯೯೯-೬೦೦॥

ಎಲೌ ದೇವಿಯೇ, ಈತನು ಬಹುಕಾಲ ಬಹುಸಂಖ್ಯೆಯಲ್ಲಿ ಶಿವಾರ್ಚಕರಿಗೆ ಭಕ್ತಿಯಿಂದ ಶಿವಲಿಂಗಗಳನ್ನು ಕಾಶಿಯಲ್ಲಿ ದಾನಮಾಡಿರುವನು" ಎಂದು ಹೇಳಿದ ಸದಾಶಿವನ ಮಾತುಗಳನ್ನು ಕೇಳಿದೊಡನೆಯೇ, ದೇವಿಯು "ಸ್ವಾಮಿಯೇ! ಲಿಂಗದಾನಮಾಡುವ ಕ್ರಮ ಹೇಗೆ? ಅದರಿಂದ ದೊರಕುವ ಫಲವೆಂತಹುದು? ಇದನ್ನು ನನಗೆ ವಿಸ್ತಾರವಾಗಿ ಹೇಳಬೇಕು" ಎಂದು ಮಹೇಶ್ವರನನ್ನು ಪ್ರಾರ್ಥಿಸಿದಳು. ॥೬೦೧-೬೦೨॥

॥ ಶ್ರೀ ಸದಾಶಿವ ಉವಾಚ ॥

ಕಾಶ್ಮೀರಕಾಂಚನಾದೀನಿ ಲಿಂಗಾನಿ ವಿವಿಧಾನ್ಯಪಿ ।
ದೇಯಾನ್ಯನಂತಯತ್ನೇನ ಮತ್ಪ್ರೀತ್ಯರ್ಥಂ ಮುಮುಕ್ಷುಭಿಃ ॥೯೦೩॥

ಶೈವೇಭ್ಯ ಏವ ದೇಯಾನಿ ಸರ್ವದಾನಾನಿ ತೇ ಯತಃ ।
ದಾನಯೋಗ್ಯಾಸ್ತದನ್ಯೇ ತು ದಾನಯೋಗ್ಯಾ ನ ವಸ್ತುತಃ ॥೯೦೪॥

ನಾನ್ಯತ್ರ ದತ್ತಮಕ್ಷಯ್ಯಂ ಪರಂ ತು ಕ್ಷಯ್ಯಮೇವ ತತ್ ।
ದತ್ತಂ ದಾನಮಶೈವೇಭ್ಯೋ ವೃಥಾ ಭವತಿ ಸರ್ವಥಾ ॥೯೦೫॥

ಜ್ವಲಂತಮಗ್ನಿಮುತ್ಸೃಜ್ಯ ನಹಿ ಭಸ್ಮನಿ ಹೂಯತೇ ।
ತಥಾ ಶೈವಂ ಪರಿತ್ಯಜ್ಯ ದಾನಂ ನಾನ್ಯತ್ರ ದೀಯತೇ ॥೯೦೬॥

ಅತ್ಯಲ್ಪಮಪಿ ದತ್ತಂ ಯತ್ ಯಸ್ಮಿನ್ನಕ್ಷಯ್ಯಮಂಬಿಕೇ ।
ತಾದೃಶಃ ಶೈವ ಏವಾತೋ ದಾನಂ ಶೈವಾಯ ದೀಯತೇ ॥೯೦೭॥

ಶಿವರಾತ್ರೌ ಸೋಮವಾರೇ ಗ್ರಹಣೇ ಚಂದ್ರಸೂರ್ಯಯೋಃ ।
ಸಂಕ್ರಾಂತಿಷ್ವಪಿ ಕರ್ತವ್ಯಂ ಲಿಂಗದಾನಂ ಮುಮುಕ್ಷುಭಿಃ ॥೯೦೮॥

ಆಗ ಸದಾಶಿವನು ಹೀಗೆಂದನು. "ಪಾರ್ವತಿಯೇ ಕೇಳು. ಕಾಶ್ಮೀರದೇಶದ ಸುವರ್ಣನಿರ್ಮಿತವಾದ ಶಿವಲಿಂಗಗಳನ್ನು ನನ್ನ ಪ್ರೀತ್ಯರ್ಥವಾಗಿ ದಾನಮಾಡಬೇಕು. ಆದರಿಂದ ಮುಕ್ತಿಯು ಲಭಿಸುವುದು. ದಾನಕ್ಕೆ ಯೋಗ್ಯರಾದವರೆಂದರೆ ಶೈವರೇ ಹೊರತು ಇತರರಲ್ಲ. ಆದ್ದರಿಂದ ಸಕಲ ಶಿವಪ್ರೀತಿಕರಗಳಾದ ದಾನಗಳನ್ನೆಲ್ಲಾ ಶೈವರಿಗೇ ಕೊಡಬೇಕು. ॥೯೦೩-೯೦೪॥

ಶೈವರಲ್ಲದವರಿಗೆ ಕೊಟ್ಟ ದಾನಗಳೆಲ್ಲಾ ನಾಶವಾಗುವ ಫಲವನ್ನು ಕೊಡತಕ್ಕವುಗಳು. ಆದರಿಂದ ಶಾಶ್ವತವಾದ ಆನಂದವು ದೊರೆಯಲಾರದು. ಉರಿಯುವ ಅಗ್ನಿಯನ್ನು ಬಿಟ್ಟು ಬೂದಿಯಲ್ಲಿ ಹೋಮಮಾಡಿದಂತೆ, ಶೈವೇತರನಿಗೆ ಕೊಟ್ಟ ದಾನಗಳು ವ್ಯರ್ಥವೆನಿಸುವುವು. ॥೯೦೫-೯೦೬॥

ಅಲ್ಪದಾನವಿತ್ತರೂ ಹೆಚ್ಚಿನ ಸುಕೃತವು ದೊರೆಯುವುದೆಂದರೆ ಕೇವಲ ಶೈವನಿಗೆ ದಾನಮಾಡುವುದರಿಂದಲೇ. ಶಿವರಾತ್ರಿ, ಸೋಮವಾರ, ಸೂರ್ಯಚಂದ್ರರ

ಉಪೋಷ್ಯ ಪೂರ್ವದಿವಸೇ ಶೈವಾನ್ ಸಂಪೂಜ್ಯ ಸಾದರಂ ।
ಪ್ರಾರ್ಥನೀಯಾಸ್ತದಾ ಶೈವಾ ಲಿಂಗದಾನಾರ್ಥಮಾದರಾತ್ ॥೯೦೯॥

ತತೋ ದೇಯಾನಿ ಲಿಂಗಾನಿ ಕ್ಷೀರಾಜ್ಯೈರ್ವಿಧಿಪೂರ್ವಕೈಃ
ಅಭಿಷಿಚ್ಯಾರ್ಚನೀಯಾನಿ ಬಿಲ್ವಪತ್ರಾದಿಭಿಶ್ಶಿವೇ ।೯೧೦॥

ಸೌವರ್ಣೇ ರಾಜತೇ ವಾಪಿ ತಾಮ್ರೇವಾ ಭಾಜನೇನ ವಾ ।
ನವವಸ್ತ್ರಸಮಾಸ್ತೀರ್ಣೇ ಶಿವಲಿಂಗಂ ನಿವೇಶಯೇತ್ ॥೯೧೧॥

ತತಃ ಪುನಃ ಪ್ರಯತ್ನೇನ ಭಸ್ಮಬಿಲ್ವದಲಾದಿಭಿಃ ।
ಸಂಪೂಜ್ಯ ಕ್ಷೀರಪಕ್ವಾನ್ನೈರ್ನೈವೇದ್ಯಾನಿ ಸಮರ್ಪಯೇತ್ ॥೯೧೨॥

ರಾತ್ರೌ ಜಾಗರಣಂ ಕಾರ್ಯಂ ಭಕ್ತಿಶ್ರದ್ಧಾಪುರಸ್ಸರಂ ।
ತಥಾ ಮದೀಯಾ ಶ್ರೋತವ್ಯಾ ಮನ್ಮೂರ್ತಿಧ್ಯಾನಪೂರ್ವಕಂ ॥೯೧೩॥

ಪ್ರತಿಕ್ಷಣೇಽಪಿ ಕರ್ತವ್ಯಂ ಬಿಲ್ವಪತ್ರೈರ್ಮದರ್ಚನಂ ।
ನೈವೇದ್ಯಂ ದೇಯಮಮಲಂ ಮಹ್ಯಂ ಯಾಮಚತುಷ್ಟಯಂ॥೯೧೪॥

---

ಗ್ರಹಣಕಾಲ, ಸಂಕ್ರಮಣದಿನಗಳು, ಇಂತಹ ದಿನಗಳಲ್ಲಿ ಮೋಕ್ಷಾಪೇಕ್ಷಿಗಳು ಶಿವಲಿಂಗದಾನ ಮಾಡಬೇಕು. ॥೯೦೭-೯೦೮॥

ಶಿವಲಿಂಗ ದಾನಮಾಡುವವನು ಪೂರ್ವದಿನದಲ್ಲಿ ಉಪವಾಸವಿದ್ದು, ಆದಿನವೇ ಲಿಂಗಪ್ರತಿಗ್ರಹಕ್ಕೆ ಯೋಗ್ಯರಾದ ಶೈವರನ್ನು ಲಿಂಗದಾನಕ್ಕಾಗಿ ಆಹ್ವಾನಿಸಬೇಕು. ಮತ್ತು ದಾನಮಾಡುವ ಶಿವಲಿಂಗಗಳನ್ನು ವಿಧಿವತ್ತಾಗಿ, ಕ್ಷೀರ, ಆಜ್ಯ ಮೊದಲಾದ ಪಂಚಾಮೃತಗಳಿಂದ ಅಭಿಷೇಕಮಾಡಿ, ಬಿಲ್ವಪತ್ರಾದಿಗಳಿಂದ ಅರ್ಚಿಸಬೇಕು. ॥೭೦೯-೯೧೦॥

ದಾನಮಾಡಲಿರುವ ಲಿಂಗವನ್ನು, ಚಿನ್ನದ ಅಥವಾ ಬೆಳ್ಳಿ ಅಥವಾ ತಾಮ್ರ ಇವುಗಳ ಪಾತ್ರೆಗಳಲ್ಲಿ ಒಂದು ಹೊಸ ವಸ್ತ್ರವನ್ನು ಹರಡಿ, ಅದರ ಮೇಲೆ ಶಿವ ಲಿಂಗವನ್ನಿಟ್ಟು, ಭಸ್ಮ, ಬಿಲ್ವದಳ ಮುಂತಾದುವುಗಳಿಂದ ಪೂಜಿಸಿ, ಹಾಲು, ಅನ್ನ ಇವುಗಳನ್ನು ನಿವೇದಿಸಬೇಕು. ॥೯೧೧-೯೧೨॥

ರಾತ್ರಿಯೆಲ್ಲಾ ಜಾಗರಣೆಮಾಡುತ್ತಾ, ಭಕ್ತಿಶ್ರದ್ಧೆಯಿಂದ, ನನ್ನ ಸಂಬಂಧ ವಾದ ಕಥಾಲಾಪಾದಿಗಳನ್ನು ಕೇಳಬೇಕು. ಅಲ್ಲದೆ ರಾತ್ರಿಯ ನಾಲ್ಕು ಯಾಮ

ತತಃ ಪ್ರಾತಸ್ಸಮುತ್ಥಾಯ ಕೃತ್ವಾ ಸ್ನಾನಾದಿಕಂ ತತಃ ।
ಶೈವಾನಾಂ ಪೂಜನಂ ಕಾರ್ಯಂ ಮಧುಪರ್ಕಪುರಸ್ಸರಂ ॥೯೧೫॥

ತತಸ್ಸುವರ್ಣಸಹಿತಂ ವಸ್ತ್ರಯುಗ್ಮಸಮನ್ವಿತಂ ।
ಗ್ರಾಹ್ಯಂ ಸಪಾತ್ರಂ ಹಸ್ತೇನ ಶಿವಲಿಂಗಂ ಮದಾತ್ಮಕಂ ॥೯೧೬॥

ತತಃ ಪರಮಯಂ ಮಂತ್ರೋ ಮನ್ಮೂರ್ತಿಧ್ಯಾನಪೂರ್ವಕಂ
ದೇಶಕಾಲಾದಿ ಸಂಕೀರ್ತ್ಯ ಪಠನೀಯೋ ಮನೀಷಿಭಿಃ ॥೯೧೭॥

ಶಿವಲಿಂಗೇ ಶಿವಾಕಾರೇ ಭುವನಾನಿ ಚತುರ್ದಶ ।
ತಸ್ಮಾದಸ್ಯ ಪ್ರದಾನೇನ ಪ್ರೀಯತಾಂ ಭಗವಾನ್ ಶಿವಃ ॥೯೧೮॥

ಇತಿ ಮಂತ್ರಂ ಸಮುಚ್ಚಾರ್ಯ ಶಿವಲಿಂಗಂ ಮದಾತ್ಮಕಂ ।
ಮದ್ಭಕ್ತಾಯ ಪ್ರದಾತವ್ಯಂ ಜಲದಾನಪುರಸ್ಸರಂ ॥೯೧೯॥

ದೇವಸ್ಯತ್ವೇತಿ ರಾಜಾ ತ್ವಾ ವೇತಿ ಮಂತ್ರಾಸ್ತತಃಪರಂ ।
ಪ್ರತಿಗೃಹೀತ್ವಾ ಯತ್ನೇನ ಪಠನೀಯಾ ಯಥಾಕ್ರಮಂ ॥೯೨೦॥

---

ಗಳಲ್ಲಿಯೂ, ಬಿಲ್ವಾರ್ಚನೆ, ಮಧುರವಾದ ನೈವೇದ್ಯ, ಇವುಗಳಿಂದ ಶಿವಲಿಂಗವನ್ನು ಅರ್ಚಿಸಬೇಕು. ॥೯೧೩-೯೧೪॥

ಮಾರನೆಯ ದಿನ ಪ್ರಾತಃಕಾಲದಲ್ಲಿ ತನ್ನ ನಿತ್ಯಕರ್ಮಗಳನ್ನು ಮುಗಿಸಿಕೊಂಡು, ದಾನವನ್ನು ಸ್ವೀಕರಿಸುವ ಶೈವರನ್ನು ಮಧುಪರ್ಕಾದಿಗಳಿಂದ ಪೂಜಿಸಿ, ಆತನಿಗೆ ಸುವರ್ಣಸಮೇತವಾಗಿ ಒಂದು ಜೊತೆ ವಸ್ತ್ರದೊಡನೆ ಶಿವಲಿಂಗವನ್ನು ಪಾತ್ರೆಯ ಸಮೇತವಾಗಿ ಕೈಯಲ್ಲಿ ಹಿಡಿದು ದಾನಮಾಡಬೇಕು. ॥೯೧೫-೯೧೬॥

ದಾನಕಾಲದಲ್ಲಿ ಈ ಮಂತ್ರವನ್ನು ಪಠಿಸಬೇಕು. ದಾನಕಾಲದಲ್ಲಿ ನನ್ನ ಆಕಾರವನ್ನೇ ಧ್ಯಾನಿಸುತ್ತಾ, ಪ್ರಾಣಾಯಾಮ ಪುರಸ್ಸರವಾಗಿ ದೇಶಕಾಲಾದಿಗಳನ್ನುಚ್ಚರಿಸಿ, "ಶಿವಸ್ವರೂಪವಾದ ಶಿವಲಿಂಗದಲ್ಲಿ ಹದಿನಾಲ್ಕು ಲೋಕಗಳೂ ಅಡಗಿಕೊಂಡಿವೆ. ಇಂತಹ ಶಿವಲಿಂಗದ ದಾನದಿಂದ ಪೂಜ್ಯನಾದ ಪರಶಿವನು ಸುಪ್ರೀತನಾಗಲಿ" ಎಂದು ಹೇಳಬೇಕು. ॥೯೧೭-೯೧೮॥

ಈ ಮಂತ್ರವನ್ನುಚ್ಚರಿಸುತ್ತಾ, ಜಲಧಾರಾಪೂರ್ವಕವಾಗಿ ನನ್ನ ಭಕ್ತನೆನಿಸಿದ ಶೈವನಿಗೆ ದಾನಮಾಡಬೇಕು. ಪ್ರತಿಗ್ರಹೀತೃವಾದರೋ, "ದೇವಸ್ಯತ್ವಾಪ್ರಸವೇ,

ದಕ್ಷಿಣಾ ತಾವತೀ ದೇಯಾ ತೃಪ್ತಿರ್ಭವತಿ ಯಾವತಾ ।
ಸುವರ್ಣಾನಾಂ ಸಹಸ್ರಂ ವಾ ಯದ್ವಾ ದೇಯಾ ಸ್ವಶಕ್ತಿತಃ ॥೯೨೦॥

ದಶದಾನಾನಿ ಕಾರ್ಯಾಣಿ ತತಶ್ಶಕ್ತ್ಯನುಸಾರತಃ ।
ತತಃ ಕಾರ್ಯಂ ಕೃತಂ ಕರ್ಮ ಶಿವೇ ಸರ್ವಂ ಮದರ್ಪಣಂ ॥೯೨೨॥

ಏವಂ ಯಃ ಕುರುತೇ ಭಕ್ತ್ಯಾ ಲಿಂಗದಾನಂ ಯಥಾವಿಧಿ ।
ಸ ಮಹಾಪಾಪಸಂಘೇಭ್ಯಃ ಸದ್ಯ ಏವ ಪ್ರಮುಚ್ಯತೇ ॥೯೨೩॥

ಯಂ ಯಮರ್ಥಂ ಸಮುದ್ದಿಶ್ಯ ಲಿಂಗದಾನಂ ಕರೋತಿ ಯಃ ।
ಸ ತಂ ತಮರ್ಥಮಾಪ್ನೋತಿ ಮತ್ಪ್ರಸಾದಾನ್ಮನೋರಮೇ ॥೯೨೪॥

ಲಿಂಗದಾನಸಮಂ ದಾನಂ ನಾಸ್ತಿ ಕುತ್ರಾಪಿ ಶೈಲಜೇ ।
ಲಿಂಗದಾನಂ ಮಹಾದಾನಂ ಸರ್ವದಾನೋತ್ತಮೋತ್ತಮಂ ॥೯೨೫॥

ಲಿಂಗದಾನಂ ಮಹಾದಾನಂ ಮದನುಗ್ರಹಕಾರಣಂ ।
ಯಃ ಕರೋತಿ ವಿಧಾನೇನ ಸ ಮಮಾತಿಪ್ರಿಯಶ್ಶಿವೇ ॥೯೨೬॥

ರಾಜಾತ್ವಾವಾ" ಎಂಬ ಮಂತ್ರಗಳನ್ನು ಪಠಿಸುತ್ತಾ, ಶಿವಲಿಂಗವನ್ನು ತೆಗೆದುಕೊಳ್ಳಬೇಕು ॥೯೧೯-೯೨೦॥

ದಾನಕಾಲದಲ್ಲಿ ಪ್ರತಿಗ್ರಹೀತೃವಿಗೆ ತೃಪ್ತಿಯಾಗುವಷ್ಟು, ಅಥವಾ ತನಗೆ ಶಕ್ತಿಯಿರುವಷ್ಟು, ಸಹಸ್ರಸುವರ್ಣನಾಣ್ಯವನ್ನಾಗಲಿ ಕೊಡಬಹುದು. ತದಂಗವಾಗಿ, ತನ್ನ ಶಕ್ತಿಯನ್ನು ಅನುಸರಿಸಿ, ಗೋ, ಭೂ, ತಿಲಾದಿಯಾದ ದಶದಾನಗಳನ್ನು ನೆರವೇರಿಸಿ, ಆ ದಾನಫಲವನ್ನೆಲ್ಲಾ ನನಗೆ ಸಮರ್ಪಿಸಬೇಕು. ॥೯೨೧-೯೨೨॥

ಹೀಗೆ ಯಾರು ಭಕ್ತಿಯಿಂದ ಶಿವಲಿಂಗದಾನಮಾಡುವರೋ, ಅವರು ಸಮಸ್ತ ಪಾಪರಾಶಿಗಳಿಂದಲೂ ಬಿಡಲ್ಪಟ್ಟವರಾಗಿ, ಯಾವ ಫಲಪ್ರಾಪ್ತಿಯಲ್ಲಿ ಉತ್ಸುಕರಾಗಿರುವರೋ, ಅಂತಹ ಫಲವನ್ನು ನನ್ನ ಅನುಗ್ರಹದಿಂದ ಬಹಳ ಜಾಗ್ರತೆಯಾಗಿ ಹೊಂದುವರು ಎಂಬುದರಲ್ಲಿ ಸಂದೇಹವಿಲ್ಲ. ॥೯೨೩-೯೨೪॥

ಎಲೌ ಪಾರ್ವತಿಯೇ, ಲಿಂಗದಾನಕ್ಕೆ ಸಮನಾದ ಮತ್ತೊಂದು ದಾನವಿಲ್ಲ. ಸರ್ವದಾನಗಳಲ್ಲಿಯೂ ಇದು ಶ್ರೇಷ್ಠವೆಂದೆನಿಸಿ ಮಹಾದಾನವೆನಿಸಿದೆ. ಈ ದಾನದಿಂದ ನನ್ನ ಅನುಗ್ರಹವು ಅವರಿಗೆ ಸುಲಭವಾಗಿ ದೊರೆಯುವುದು. ಯಾರು ವಿಧಿ

॥ ರಾಜೋವಾಚ ॥

ಪುರಾ ಚಕ್ರಪುರಾಧೀಶೋ ರಾಜಾ ಪರಪುರಂಜಯಃ ।
ಬ್ರಾಹ್ಮಣಾನ್ ಶಿವತತ್ವಜ್ಞಾನ್ ಪ್ರಣಮ್ಯಾಹ ಕೃತಾಂಜಲಿಃ ॥೯೨೭॥

ಧನಮಸ್ತಿ ಯಥೇಚ್ಛಂ ಮೇ ಮಮ ಲಿಪ್ಸಾಪಿ ಜಾಯತೇ ।
ಕಥಂ ದ್ರವ್ಯವ್ಯಯಃ ಕಾರ್ಯೋ ದಾನಪಾತ್ರಂ ಚ ಕೀದೃಶಂ ॥೯೨೮॥

॥ ಬ್ರಾಹ್ಮಣಾ ಊಚುಃ ॥

ಇತಿ ತದ್ವಚನಂ ಶ್ರುತ್ವಾ ಧರ್ಮಜ್ಞಾ ವೀತಮತ್ಸರಾಃ ।
ಶ್ರುತಿತತ್ತ್ವಂ ವಿಚಾರ್ಯಾಹುರ್ದ್ರವ್ಯಲೋಭಪರಾಙ್ಮುಖಾಃ ॥೯೨೯॥

ಬಹೂನಿ ಸಂತಿ ದಾನಾನಿ ತೇಷು ದಾನೇಷು ವಸ್ತುತಃ ।
ಲಿಂಗದಾನಂ ಪರಂ ದಾನಂ ತತ್ತು ಸರ್ವಾರ್ಥಸಾಧಕಂ ॥೯೩೦॥

ವತ್ತಾಗಿ ಲಿಂಗದಾನ ಮಾಡುವರೋ ಅವರು ನನ್ನ ಪ್ರೀತಿಗೆ ಪಾತ್ರರೆನಿಸುವರು. ॥೯೨೪-೯೨೬॥

ಹಿಂದೆ ಚಕ್ರಪುರವೆಂಬ ಪಟ್ಟಣದಲ್ಲಿ ಪರಪುರಂಜಯನೆಂಬ ರಾಜನಿದ್ದನು. ಆತನು ಒಂದುಸಾರಿ ಶಿವತತ್ತ್ವವನ್ನು ಚೆನ್ನಾಗಿ ತಿಳಿದ ಬ್ರಾಹ್ಮಣರನ್ನು ಕರೆದು ನಮಸ್ಕರಿಸಿ ಹೀಗೆಂದನು "ಬ್ರಾಹ್ಮಣಶ್ರೇಷ್ಠರೇ, ನನ್ನಲ್ಲಿ ವಿಶೇಷವಾದ ಧನವಿದೆ. ಅದನ್ನು ದಾನಮಾಡುವ ಆಸೆಯೂ ನನಗೀಗ ಪ್ರಾಪ್ತವಾಗಿದೆ ಸನ್ಮಾರ್ಗದಲ್ಲಿ ಅದನ್ನು ದಾನಮಾಡುವ ಕ್ರಮವೊಂದನ್ನು ನನಗೆ ತಿಳಿಸಿರಿ ದಾನಕ್ಕೆ ಸತ್ಪಾತ್ರರಾರೆಂಬುದನ್ನೂ ವರ್ಣಿಸಿರಿ." ॥೯೨೭-೯೨೮॥

ಹಾಗೆಂದ ರಾಜನ ಮಾತುಗಳನ್ನು ಕೇಳಿ, ದ್ರವ್ಯಾಸೆಯನ್ನು ದೂರಮಾಡಿದ್ದ ಆ ಬ್ರಾಹ್ಮಣರು ವೇದಾರ್ಥವನ್ನೆಲ್ಲಾ ವಿಮರ್ಶಿಸಿ ಹೀಗೆಂದರು "ಎಲೈ ರಾಜನೇ, ಲೋಕದಲ್ಲಿ ಉತ್ತಮವುಗಳೆನಿಸಿದ ಅನೇಕ ದಾನಗಳಿವೆ. ಅದರಲ್ಲಿ ಲಿಂಗದಾನವೆಂಬುದು ಅತ್ಯಂತ ಶ್ರೇಷ್ಠವಾದುದು. ಅದರಿಂದ ಸಕಲ ಇಷ್ಟಾರ್ಥಗಳೂ ಸಿದ್ಧಿಸುವುವು. ॥೯೨೯-೯೩೦॥

ಲಿಂಗದಾನೇನ ಭಗವಾನ್ ಯಥಾ ತುಷ್ಯತಿ ಶಂಕರಃ ।
ತಥಾ ನಾನ್ಯೇನ ದಾನೇನ ತುಷ್ಟೋ ಭವತಿ ಶಂಕರಃ ॥೯೩೧॥

ಸರ್ವಕಾಮಪ್ರದಂ ದಾನಂ ಲಿಂಗದಾನಮಿತಿ ಶ್ರುತಂ ।
ಲಿಂಗದಾನಂ ತತಃ ಕಾರ್ಯಂ ವಿಧಿವದ್ಯತ್ನಪೂರ್ವಕಂ ॥೯೩೨॥

ತುಲಾದಾನಾದಿದಾನಾನಿ ಸರ್ವಾಣ್ಯಪಿ ನರಾಧಿಪ ।
ಶಿವಲಿಂಗಪ್ರದಾನಸ್ಯ ಕಲಾಂ ನಾರ್ಹಂತಿ ಷೋಡಶೀಂ ॥೯೩೩॥

ಪ್ರಾಪ್ತವ್ಯಂ ಲಿಂಗದಾನೇನ ಧರ್ಮಾದ್ಯರ್ಥಚತುಷ್ಟಯಂ ।
ಲಿಂಗದಾನಸಮಂ ದಾನಮತ ಏವ ನ ದೃಶ್ಯತೇ ॥೯೩೪॥

ಸುವರ್ಣಮಮಿತಂ ಶುದ್ಧಂ ಯಸ್ಯ ದಾನಸ್ಯ ದಕ್ಷಿಣಾ ।
ತಾದೃಶಂ ದಾನಮುತ್ಕೃಷ್ಟಂ ಲಿಂಗದಾನಂ ಶ್ರುತಿಶ್ರುತಂ ॥೯೩೫॥

ಶಿವಲಿಂಗಪ್ರದೋ ವಂಶಾನ್ ಮಾತೃತಃ ಪಿತೃತಃ ಶತಂ ।
ಗೃಹೀತ್ವಾ ಯಾತಿ ಸಂತುಷ್ಟಃ ಶ್ರೀಮಹಾದೇವಸನ್ನಿಧಿಂ ॥೯೩೬॥

ಶಿವಲಿಂಗದಾನದಿಂದ ಶಂಕರನಿಗೆ ತೃಪ್ತಿಯಾಗುವಂತೆ ಮತ್ತಾವದಾನದಿಂದಲೂ ಆಗಲಾರದು. ಸರ್ವಾಭೀಷ್ಟಪ್ರದವಾದ ದಾನವೆಂದರೆ ಶಿವಲಿಂಗದಾನವೆಂದೇ ವೇದಗಳೂ ಹೇಳುತ್ತಿವೆ. ಆದ್ದರಿಂದ ಎಲೈ ರಾಜನೇ, ನೀನು ಈಗ ಶಿವಲಿಂಗದಾನವನ್ನು ವಿಧಿವತ್ತಾಗಿ ನಡೆಸಬಹುದು. ॥೯೩೧-೯೩೨॥

ಸುವರ್ಣ ತುಲಾಭಾರವೇ ಮೊದಲಾದ ಇತರ ಯಾವ ಮಹಾದಾನಗಳೂ, ಶಿವಲಿಂಗದಾನದ ಹದಿನಾರನೆಯ ಒಂದುಪಾಲಿನಷ್ಟೂ ಫಲಪ್ರದಗಳಲ್ಲ ಧರ್ಮ, ಅರ್ಥ, ಕಾಮ, ಮೋಕ್ಷಗಳೆಂಬ ಚತುರ್ವಿಧ ಪುರುಷಾರ್ಥಗಳೂ ಈ ಲಿಂಗದಾನದಿಂದಲೇ ಸಿದ್ಧಿಸುವುವು. ಆದ್ದರಿಂದಲೇ ತತ್ಸದೃಶವಾದ ಮತ್ತೊಂದು ದಾನವು ಎಲ್ಲಿಯೂ ತೋರಿಬರುತ್ತಿಲ್ಲ. ॥೯೩೩-೯೩೪॥

ಯಾವದಾನಕ್ಕೆ ಅಸಂಖ್ಯಾತವಾದ ಸುವರ್ಣನಾಣ್ಯವು ದಕ್ಷಿಣೆಯಾಗಿರುವುದೋ, ಅಂತಹ ದಾನದ ಸಂಪೂರ್ಣಪುಣ್ಯವೂ ಶಿವಲಿಂಗದಾನದಿಂದಲೇ ಸಿದ್ಧಿಸುವುದು. ಶಿವಲಿಂಗದಾನಮಾಡುವವನು ತನ್ನ ಮಾತಾಪಿತೃಗಳ ನೂರು ವಂಶವನ್ನೂ ಶ್ರೀಮಹಾದೇವನ ಸನ್ನಿಧಿಗೈಸುವನು. ॥೯೩೫-೯೩೬॥

ಶೈವೇಭ್ಯ ಏವ ದಾತವ್ಯಂ ಲಿಂಗದಾನಂ ಪ್ರಯತ್ನತಃ ।
ಅಶೈವೇಭ್ಯೋ ಭ್ರಮೇಣಾಪಿ ನ ದಾತವ್ಯಂ ಮನೀಷಿಭಿಃ ॥೯೩೭॥

ಲಿಂಗದಾನಾನ್ಯದಾನಾನಾಮಪಿ ಪಾತ್ರಂ ಶಿವಾರ್ಚಕಾಃ ।
ಕಿಂ ಪುನರ್ಲಿಂಗದಾನಸ್ಯ ಶೈವಾಃ ಪಾತ್ರಂ ನೃಪೋತ್ತಮ ॥೯೩೮॥
(। ತತೋ ನೃಪ। ಪಾ. ರ.)

ಶಿವಪಾರಿಷದಾಶ್ಶೈವಾಃ ಪೂಜನೀಯಾಸ್ಸುರೈರಪಿ ।
ಅತೋಽವಶ್ಯಂ ಲಿಂಗದಾನಂ ಶೈವೇಭ್ಯೋ ದೇಯಮಾಸ್ತಿಕೈಃ॥೯೩೯॥

ಲಿಂಗದಾನಮಶೈವಾಯ ಯೋ ದದ್ಯಾನ್ಮೋಹಸಂಗತಃ ।
ಸ ತದ್ದಾನಫಲಂ ರಾಜನ್ನ ಪ್ರಾಪ್ನೋತ್ಯೇವ ಸರ್ವಥಾ ॥೯೪೦॥

ಮುಖಾವಲೋಕನಂ ವಾಪಿ ಶೈವಾನ್ಯಾನಾಂ ನರಾಧಿಪ ।
ನ ಕರ್ತವ್ಯಂ ತತಸ್ತೇಭ್ಯೋ ದಾನಂ ದೇಯಂ ಕಥಂ ಭವೇತ್॥೯೪೧॥

ಪುರಾ ದಾನರತೈರ್ಭೂಪೈರ್ಲಿಂಗದಾನಾನಿ ಕೇವಲಂ ।
ಕೃತಾನಿ ಬಹುಧಾ ರಾಜನ್ ಶಿವಸನ್ನಿಧಿಕಾಂಕ್ಷಿಭಿಃ ॥೯೪೨॥

ಲಿಂಗದಾನವನ್ನೂ ಕೇವಲ ಶೈವರಿಗೇ ಕೊಡಬೇಕು. ಶಿವಪೂಜೆಮಾಡದವರಿಗೆ ಅಜ್ಞಾನದಿಂದಲೂ ಶಿವಲಿಂಗವನ್ನು ಕೊಡಬಾರದು. ಸಕಲದಾನಗಳಿಗೂ ಶೈವರೇ ಸತ್ಪಾತ್ರರೆಂದು ಹೇಳಿರುವಾಗ ಶಿವಲಿಂಗದಾನಕ್ಕೆ ಶೈವರೇ ಯೋಗ್ಯರೆಂದು ಮತ್ತೆ ಹೇಳಬೇಕೇ? ॥೯೩೭-೯೩೮॥

ಶೈವರೆಂಬುವರು ಶಿವನಿಗೆ ಸಭ್ಯರಂತಿರುವರು. ಅಂದರೆ ಶಿವಸಭೆಯಲ್ಲಿ ಶೈವರಿಗೆ ಹೆಚ್ಚಿನ ಮರ್ಯಾದೆಯುಂಟು. ಅಂತಹವರಿಗೆ ಲಿಂಗದಾನಮಾಡದೆ ಇತರರಿಗೆ ಕೊಡುವುದರಿಂದ ದಾನಕೊಟ್ಟವನಿಗೆ ಯಾವವಿಧವಾದ ಫಲವೂ ದೊರೆಯಲಾರದು ॥೯೩೯-೯೪೦॥

ಶೈವೇತರರ ಮುಖಾವಲೋಕನವನ್ನೂ ಮಾಡಬಾರದು. ಹಾಗಿರುವಾಗ ಅವರು ದಾನಕ್ಕೆ ಹೇಗೆ ಪಾತ್ರರೆನಿಸುವರು? ಹಿಂದೆ ಅನೇಕ ರಾಜರು ದಾನಮಾಡುವ ಅಪೇಕ್ಷೆಯುಳ್ಳವರಾಗಿ, ಶಿವಸನ್ನಿಧಿಯನ್ನು ಪಡೆಯಬೇಕೆಂದು ಶಿವಲಿಂಗದಾನಗಳನ್ನು ಅತಿಶಯವಾಗಿ ನಡೆಸಿರುವರು. ॥೯೪೧-೯೪೨॥

ನ ಕೃತಂ ಯೇನ ವಿಧಿವಲ್ಲಿಂಗದಾನಂ ಪ್ರಯತ್ನತಃ ।
ತಜ್ಜನ್ಮ ನಿಷ್ಫಲಂ ಜ್ಞೇಯಂ ತಜ್ಜೀವನಮಪಿ ಧ್ರುವಂ ॥೯೪೩॥

ಕೇವಲಂ ಲಿಂಗದಾನೇನ ಯತ್ಪುಣ್ಯಂ ಲಭತೇ ನರಃ ।
ತತ್ಪುಣ್ಯಮನ್ನದಾನಾನಾಂ ಕೋಟಿಭಿಶ್ಚ ನ ಲಭ್ಯತೇ ॥೯೪೪॥

ಲಿಂಗದಾನಫಲಂ ವಕ್ತುಂ ಬ್ರಹ್ಮಣಾಪಿ ನ ಶಕ್ಯತೇ ।
ಪರಂ ತು ತತ್ಫಲಂ ವಕ್ತುಂ ಸಮರ್ಥಃ ಪಾರ್ವತೀಪತಿಃ ॥೯೪೫॥

ಅತಃ ಕುರು ನೃಪಶ್ರೇಷ್ಠ ಲಿಂಗದಾನಂ ಪ್ರಯತ್ನತಃ ।
ಲಿಂಗದಾನೇನ ಸುಪ್ರೀತೋ ಭವಿಷ್ಯತಿ ಮಹೇಶ್ವರಃ ॥೯೪೬॥

ಇತಿ ತದ್ವಚನಂ ಶ್ರುತ್ವಾ ಸ ರಾಜಾ ವಿಧಿಪೂರ್ವಕಂ ।
ಚಕಾರ ಲಿಂಗದಾನಾನಿ ಮತ್ಪ್ರೀತ್ಯರ್ಥಂ ಸಹಸ್ರಶಃ ॥೯೪೭॥

ಶೈವಾನಾಹೂಯ ಶೈವಾನಾಂ ಯಾವದ್ದ್ರವ್ಯಮಪೇಕ್ಷಿತಂ ।
ತಾವದ್ದತ್ವಾ ದದೌ ತೇಭ್ಯಃ ಶಿವಲಿಂಗಾನಿ ಭೂಪತಿಃ ॥೯೪೮॥

ಯಾವನು ತನ್ನ ಜೀವಿತಕಾಲದಲ್ಲಿ ಲಿಂಗದಾನಮಾಡುವುದಿಲ್ಲವೋ ಅವನ ಜೀವನವು ವ್ಯರ್ಥವೆಂದೇ ತಿಳಿಯಬೇಕು. ಕೇವಲ ಶಿವಲಿಂಗದಾನದಿಂದ ದೊರೆಯುವ ಸುಕೃತವು ಕೋಟಿಜನರಿಗೆ ಅನ್ನದಾನಮಾಡುವುದರಿಂದಲೂ ಲಭಿಸಲಾರದು. ॥೯೪೩-೯೪೪॥

ಶಿವಲಿಂಗದಾನದಿಂದ ಲಭಿಸುವ ಪುಣ್ಯಫಲವನ್ನು ವರ್ಣಿಸಲು ಬ್ರಹ್ಮನಿಗೂ ಸಾಧ್ಯವಿಲ್ಲ. ಮಹೇಶ್ವರನೊಬ್ಬನು ಹೇಳಿದರೆ ಹೇಳಬಹುದು. ಆದ್ದರಿಂದ ಎಲೈ ರಾಜನೇ, ನೀನು ಮಹೇಶ್ವರ ಪ್ರೀತಿಗಾಗಿ ನಿಜವಾಗಿಯೂ ಶಿವಲಿಂಗದಾನಮಾಡು. ಅದು ಅತ್ಯುತ್ತಮವಾದ ದಾನ.'' ॥೯೪೫-೯೪೬॥

ಹೀಗೆಂದು ಹೇಳಿದ ಆ ಬ್ರಾಹ್ಮಣರ ಮಾತನ್ನು ಕೇಳಿ ರಾಜನು ಒಡನೆಯೇ ಸಹಸ್ರಾರು ಶಿವಲಿಂಗಗಳನ್ನು ದಾನಮಾಡಲು ಪ್ರಯತ್ನಿಸಿದನು. ಅನೇಕ ಶೈವರನ್ನು ಕರೆಸಿದನು. ಅವರಿಗೆ ತೃಪ್ತಿಯಾಗುವಷ್ಟು ದ್ರವ್ಯವನ್ನು ಕೊಟ್ಟು, ಶಿವಲಿಂಗಗಳನ್ನು ದಾನರೂಪವಾಗಿ ಅವರಿಗಿತ್ತನು. ॥೯೪೭-೯೪೮॥

ನ ಯಾವದ್ದ್ರವ್ಯಮುಭವತ್ಕುಬೇರಸ್ಯಾಪಿ ಶೋಭನೇ ।
ತಾವದ್ದ್ರವ್ಯಮಭೂತ್ತಸ್ಯ ಭೂಪತೇರ್ನ್ಯಾಯಸಂಚಿತಂ ॥೯೪೯॥

ತತ್ಸರ್ವಂ ವಿವಿಧಂ ದ್ರವ್ಯಂ ಲಿಂಗದಾನಪುರಸ್ಸರಂ ।
ಶೈವೇಭ್ಯಃ ಪ್ರದದೌ ಭೂಪೋ ಮತ್ಪ್ರೀತ್ಯರ್ಥಂ ವರಾನನೇ ॥೯೫೦॥

ಸ ವಂಶಕೋಟಿಸಂಯುಕ್ತೋ ಮಾತೃತಃ ಪಿತೃತೋ ನೃಪಃ ।
ಮತ್ಸನ್ನಿಧಿಮವಾಪಾಂತೇ ಗಾಣಾಪತ್ಯಂ ಚ ಲಬ್ಧವಾನ್ ॥೯೫೧॥

ಲಿಂಗದಾನೇನ ಬಹುಭಿರ್ಗಾಣಾಪತ್ಯಮುಪಾಗತಂ ।
ಮತ್ಸಾಯುಜ್ಯಂ ಚ ಸಂಪ್ರಾಪ್ತಂ ತತೋ ಯತ್ನಂ ವಿನಾ ಶಿವೇ ॥೯೫೨॥

ಏತಸ್ಯೈವ ಪ್ರಸಾದೇನ ಬಹೂನಾಂ ಭಾವಿತಾತ್ಮನಾಂ ।
ಕಾಶೀವಾಸೋಽಭವತ್ಪೂರ್ವಂ ಸಾಕ್ಷಾನ್ಮುಕ್ತಿಪ್ರದಾಯಕಃ ॥೯೫೩॥

ಪಶ್ಯ ಪಾಶುಪತಾನ್ ವೃದ್ಧಾನ್ ಸಮಾಯಾಂತ್ಯರ್ಘ್ಯಪಾಣಯಃ ।
ಏತೇ ಮದರ್ಚನಪರಾ ಮದೇಕಶರಣಾಃ ಶಿವೇ ॥೯೫೪॥

ಎಲೌ ಪಾರ್ವತಿಯೇ, ಆ ರಾಜನ ಸಮೀಪದಲ್ಲಿ ಕುಬೇರನ ಐಶ್ವರ್ಯಕ್ಕಿಂತಲೂ ಹೆಚ್ಚಾದ ನಿಧಿಯಿತ್ತು. ಅದೆಲ್ಲವೂ ನ್ಯಾಯದಿಂದ ಆರ್ಜಿತವಾದದ್ದೇ. ಅಂತಹ ಸಕಲೈಶ್ವರ್ಯವನ್ನೂ ನನ್ನ ಪ್ರೀತ್ಯರ್ಥವಾಗಿ ಶಿವಲಿಂಗದಾನೋದ್ದೇಶದಿಂದ ನನ್ನ ಭಕ್ತರಿಗೆ ದಾನಮಾಡಿಬಿಟ್ಟನು. ॥೯೪೯-೯೫೦॥

ಆ ರಾಜನು ಆದರಿಂದ ಮಾತಾಪಿತೃಗಳ ಕೋಟಿವಂಶ ಸಮೇತನಾಗಿ ನನ್ನ ಸನ್ನಿಧಿಯನ್ನು ಹೊಂದಿ, ಇಲ್ಲಿ ಗಾಣಾಪತ್ಯಪದವಿಗೆ ಏರಿಸಲ್ಪಟ್ಟನು. ಇದೇ ರೀತಿ ಹಿಂದೆ ಅನೇಕರು ಶಿವಲಿಂಗದಾನಗಳನ್ನು ನಡೆಸಿ, ನನ್ನ ಸಾಯುಜ್ಯವನ್ನು ಪಡೆದರಲ್ಲದೆ ತಮ್ಮ ವಂಶದವರನ್ನೆಲ್ಲಾ ಉದ್ಧರಿಸಿರುವರು. ॥೯೫೧-೯೫೨॥

ಇವನ ಅನುಗ್ರಹದಿಂದಲೇ ಅನೇಕ ಜಿತೇಂದ್ರಿಯರಾದ ಶೈವರಿಗೆ ಕಾಶೀ ಕ್ಷೇತ್ರವಾಸವು ದೊರಕಿತು. ಇಲ್ಲಿನೋಡು. ಪಶುಪತಿಯನ್ನು ಆರಾಧಿಸುವ ವೃದ್ಧರನೇಕರು ನನ್ನನ್ನೇ ಶರಣುಹೊಂದಿ ನನ್ನ ಆರಾಧನೆಗಾಗಿ ಪೂಜಾಯೋಗ್ಯವಸ್ತುಗಳನ್ನು ಕೈಯ್ಯಲ್ಲಿ ಹಿಡಿದು ಬರುತ್ತಿರುವರು. ॥೯೫೩-೯೫೪॥

ಏತಾದೃಶೈಃ ಪಾಶುಪತೈಃ ಕಾಶೀವ್ಯಾಪ್ತಾ ವರಾನನೇ
ಏತೇ ಮದೇಕಮನಸೋ ಮದೇಕಶರಣಾಃ ಶಿವೇ ॥೯೫೫॥

ಏತೇ ಪಾಶುಪತಾಶ್ಶುದ್ಧಾಃ ಕಾಶೀಂ ಪಾಶುಪತಸ್ಥಲೀಂ ।
ಮಹಾಪದ್ಯದಿಘೋರಾಯಾಂ ನ ತ್ಯಜಿಷ್ಯಂತಿ ಸುವ್ರತಾಃ ॥೯೫೬॥

ಕೋಟ್ಯರ್ಬುದಸಹಸ್ರಾಣಿ ಶತಕೋಟ್ಯರ್ಬುದಾನಿ ಚ ।
ಕೋಟ್ಯರ್ಬುದಾರ್ಬುದಂ ಸಂತಿ ಕಾಶ್ಯಾಂ ಪಾಶುಪತಾಶ್ಶಿವೇ ॥೯೫೭॥

ಏತೇ ಸರ್ವೇಽಪಿ ಸತತಂ ಮಲ್ಲಿಂಗಾರ್ಚನತತ್ಪರಾಃ ।
ಮನ್ಮಯಾರಾಧನಂ ಕೃತ್ವಾ ತಿಷ್ಠಂತ್ಯತ್ರ ಮುಮುಕ್ಷವಃ ॥೯೫೮॥

ಪಶ್ಯೈತಾನ್ ಭಸ್ಮದಿಗ್ಧಾಂಗಾನ್ ರುದ್ರಾಕ್ಷಾಭರಣಪ್ರಿಯಾನ್ ।
ಅನರ್ಘಾರ್ಘ್ಯಾರ್ಘ್ಯಕರಾನ್ ಧನ್ಯಾನ್ ಮನ್ನಾಮಸ್ಮರಣೋತ್ಸುಕಾನ್ ॥೯೫೯॥

ಮಹಾದೇವೇತಿ ಮಾಮುಚ್ಚೈರ್ವದಂತಃ ಪ್ರೀತಿಪೂರ್ವಕಂ ।
ಕಥಮೇತೇ ಸಮಾಯಾಂತಿ ಪಶ್ಯ ಪಶ್ಯ ವರಾನನೇ ॥೯೬೦॥

ಇಂತಹ ಪಾಶುಪತರು ಕಾಶಿಯಲ್ಲಿ ಅನೇಕರಿರುವರು. ಅವರು ಸರ್ವದಾ ನನ್ನನ್ನೇ ಧ್ಯಾನಿಸುತ್ತಾ, ಮರೆಹೋಗುತ್ತಾ, ಪವಿತ್ರವಾದ ಈ ಕಾಶೀಕ್ಷೇತ್ರವನ್ನು ಘೋರವಾದ ವಿಪತ್ಕಾಲದಲ್ಲಿಯೂ ಸಹ ಬಿಡದೆ ಸೇವಿಸುತ್ತಿರುವರು. ॥೯೫೫-೯೫೬॥

ಈ ಕಾಶಿಯಲ್ಲಿ ಕೋಟಿಗಟ್ಟಲೆ ಅರ್ಬುದಗಟ್ಟಲೆ ಅತಿಶಯವಾದ ಸಂಖ್ಯೆಯಲ್ಲಿ ಪಾಶುಪತರಿರುವರು. ಇವರೆಲ್ಲರೂ ಶಿವಲಿಂಗವನ್ನೇ ಪೂಜಿಸುತ್ತಾ, ನನ್ನ ಸ್ವರೂಪವನ್ನೇ ಯಾವಾಗಲೂ ಚಿಂತಿಸುತ್ತಾ ಮೋಕ್ಷಾಪೇಕ್ಷಿಗಳಾಗಿ ನೆಲಸಿರುವರು. ॥೯೫೭-೯೫೮॥

ಇವರೆಲ್ಲರೂ ಭಸ್ಮಲಿಪ್ತರಾಗಿರುವರು. ರುದ್ರಾಕ್ಷಿಮಾಲೆಗಳನ್ನು ಧರಿಸಿ, ಪೂಜಾದ್ರವ್ಯಗಳನ್ನು ಕೈಯ್ಯಲ್ಲಿ ಹಿಡಿದು, ಸದಾ ನನ್ನ ನಾಮಸ್ಮರಣೆಮಾಡುತ್ತಾ, ಮಹಾದೇವನೇ ಎಂದು ಗಟ್ಟಿಯಾಗಿ ನನ್ನನ್ನೇ ಶರಣುಹೊಂದುತ್ತಾ ನನ್ನ ಭಕ್ತರಾಗಿರುವರು. ॥೯೫೯-೯೬೦॥

ಏತದುಚ್ಚರಿತಃ ಶ್ರಾವ್ಯೋ ಮಹಾದೇವೇತ್ಯಯಂ ಧ್ವನಿಃ ।
ಅಮೃತಾಮೃತಭೂತೋಽಯಂ ಶಿವೇ ರುಚಿಕರೋ ಮಮ ॥೯೬೧॥

ಮಹಾದೇವೇತಿ ಪೀಯೂಷಂ ಪಿಬಂತ್ಯೇವ ಪುನಃಪುನಃ ।
ಪಶ್ಯ ಪಶ್ಯ ಪುನಃ ಪ್ರೀತ್ಯಾ ಮಹಾದೇವೇತಿ ನಾದಿನಃ ॥೯೬೨॥

ನಾನಾದಿಗ್ಭ್ಯಃ ಸಮಾಯಾಂತಿ ಪಶ್ಯ ಪಾಶುಪತೋತ್ತಮಾನ್ ।
ಅರ್ಘ್ಯಹಸ್ತಾನ್ ಮಹಾದೇವೇತ್ಯುಚ್ಚೈರುತ್ತರತೋ ಮುದಾ ॥೯೬೩॥

ಕಥಂ ಭಾಂತಿ ಶುಚಿರ್ಭೂತಾ ಭಸ್ಮಭಾಸಿತವಿಗ್ರಹಾಃ ।
ಸರ್ವೇಽಪ್ಯೇತೇ ಭಸ್ಮಫಾಲಾ ಮಮ ಪಾರಿಷದಾರ್ಹಿಣೇ ॥೯೬೪॥

ಮದರ್ಚನಂ ವಿನೈತೇಷಾಮನ್ಯತ್ಕಾರ್ಯಂ ನ ದೃಶ್ಯತೇ ।
ಏತೇ ಕಾಲತ್ರಯೇಽಪ್ಯೇವಮಾಗತ್ಯಾಭ್ಯರ್ಚಯಂತಿ ಮಾಂ ॥೯೬೫॥

ಶಿವೇ ಪಶ್ಯ ಮಹಾಶೈವಾನ್ಮುಕ್ತಿಮಂಡಪಸಂಸ್ಥಿತಾನ್ ।
ಪಂಚಾಕ್ಷರಜಪಾಸಕ್ತಾನ್ ಮಲ್ಲಿಂಗಾಲೋಕನೋತ್ಸುಕಾನ್ ॥೯೬೬॥

ಈ ಪಾಶುಪತರು ಉಚ್ಚರಿಸುವ ಮಹಾದೇವಶಬ್ದವು ಅಮೃತಧಾರೆಯಂತೆ ನನಗೆ ಹಿತಕರವಾಗಿ ಕೇಳುತ್ತಿರುವುದು. ಅಮೃತಧಾರೆಯಂತಿರುವ ಮಹಾದೇವ ಶಬ್ದವನ್ನು ಈ ಪಾಶುಪತರು ಸರ್ವದಾ ಪಾನಮಾಡುತ್ತಾ ಮಹಾದೇವನೆಂದು ಸರ್ವದಾ ಪ್ರೀತಿಯಿಂದ ತಾವೂ ಹೇಳುತ್ತಾ ಕಾಲಕಳೆಯುವರು. ॥೯೬೧-೯೬೨॥

ನಾನಾ ದಿಕ್ಕುಗಳಿಂದ ಮಹಾದೇವ ಶಬ್ದವನ್ನುಚ್ಚರಿಸುತ್ತಾ, ಪೂಜಾದ್ರವ್ಯಗಳನ್ನು ಕೈಯಲ್ಲಿ ಹಿಡಿದು ಸಾಲುಸಾಲಾಗಿ ಇಲ್ಲಿಗೆ ಬರುತ್ತಲಿರುವ ಪಾಶುಪತರ ಗುಂಪನ್ನು ನೋಡು. ಅವರೆಲ್ಲರೂ ಶುಚೀಭೂತರಾಗಿ, ಭಸ್ಮದಿಂದ ಬಳಿಯಲ್ಪಟ್ಟ ಶುದ್ಧ ದೇಹವುಳ್ಳವರಾಗಿ, ಹಣೆಯಲ್ಲಿ ಭಸ್ಮತ್ರಿಪುಂಡ್ರವನ್ನಿಟ್ಟು ಬರುತ್ತಿರುವರು. ಅವರೆಲ್ಲರೂ ನನ್ನ ಸಭೆಯಲ್ಲಿ ಕುಳಿತುಕೊಳ್ಳುವುದಕ್ಕೆ ಅರ್ಹರಾದವರು. ॥೯೬೩-೯೬೪॥

ಇವರು ನನ್ನನ್ನು ಅರ್ಚಿಸದೆ ಮತ್ತಾವಕಾರ್ಯವನ್ನೂ ಮಾಡುವುದಿಲ್ಲ. ಕಾಲತ್ರಯದಲ್ಲಿಯೂ ನನ್ನನ್ನೇ ಅರ್ಚಿಸುತ್ತಾ ವಾಸಿಸುತ್ತಿರುವರು. ಈ ಮಹಾಶೈವ

ರುದ್ರಾಧ್ಯಾಯಜಪಾಸಕ್ತಾನ್ ಪಶ್ಯ ಶೈವಾನ್ ಗಿರೀಂದ್ರಜೇ ।
ಧ್ಯಾಯಂತಿ ಮಾಮಜಂ ನಿತ್ಯಂ ಪಶ್ಯೈತಾನ್ ಶೈವಪುಂಗವಾನ್ ॥೯೬೭॥

ಏತೇ ನೃತ್ಯಂತಿ ಶೈವೇಂದ್ರಾ ಮಾಮಭ್ಯರ್ಚ್ಯ ಯಥಾವಿಧಿ ।
ಸಾಷ್ಟಾಂಗಂ ಪ್ರಣಮಂತ್ಯೇತೇ ಶತಧಾ ಪಶ್ಯ ತಾನ್ ಶಿವೇ ॥೯೬೮॥

ಕರ್ಪೂರದೀಪಾನ್ ಧೃತ್ವೈತೇ ನಾಮಾನಿ ಶುಭದಾನಿ ಮೇ ।
ಗಾಯಂತ್ಯೇತೇ ಗಾನಲೋಲಂ ವಿದಿತ್ವಾ ಮಾಮಜಂ ಶಿವೇ ॥೯೬೯॥

ಸರ್ವೇಽಪ್ಯೇತೇ ನಿತ್ಯತೃಪ್ತಾ ನಿತ್ಯಾನಂದಾ ನಿರಾಮಯಾಃ ।
ಧ್ಯಾಯಂತಿ ಸಚ್ಚಿದಾನಂದಂ ಮಾಮೇವೈತೇ ಸದಾ ಮುದಾ ॥೯೭೦॥

ಮತ್ಕಥಾಕರ್ಣನಾಸಕ್ತಾ ನಿರ್ವಾಣಪದವಾಂಛಯಾ ।
ತಿಷ್ಠಂತ್ಯತ್ರಾನಿಶಂ ದೇವಿ ಮಾಮೇವ ಶರಣಂ ಗತಾಃ ॥೯೭೧॥

ಪಶ್ಯ ಪಶ್ಯ ಗಣಾನ್ ದೇವಿ ಭೈರವಾದೀನ್ವಿಲೋಕಯ ।
ಸೇವಂತೇ ಮಾಮಜಂ ನಿತ್ಯಮನಂತವಿಜಯಾನ್ವಿತಾಃ ॥೯೭೨॥

---

ರೆಲ್ಲರೂ, ಮುಕ್ತಿಮಂಟಪದಲ್ಲಿ ಶಿವಪಂಚಾಕ್ಷರೀ ಮಂತ್ರವನ್ನುಚ್ಚರಿಸುತ್ತಾ, ಶಿವಲಿಂಗವನ್ನೇ ದರ್ಶನಮಾಡುತ್ತಾ ಕುಳಿತಿರುವರು. ॥೯೬೫-೯೬೬॥

ಅವರು ರುದ್ರಾಧ್ಯಾಯವನ್ನೇ ಸರ್ವದಾ ಜಪಿಸುತ್ತಿರುವರು. ಉತ್ಪತ್ತಿರಹಿತನಾದ ನನ್ನನ್ನೇ ಸರ್ವದಾ ಧ್ಯಾನಿಸುತ್ತಿರುವರು. ಭಕ್ತಿಯಿಂದ ನನ್ನನ್ನು ಆರಾಧಿಸಿದಮೇಲೆ ಸಾಷ್ಟಾಂಗ ಪ್ರಣಾಮಮಾಡುತ್ತಾ ನರ್ತನಮಾಡುತ್ತಿರುವರು. ॥೯೬೭-೯೬೮॥

ಇವರು ಕರ್ಪೂರ ನೀರಾಜನವನ್ನೆತ್ತುತ್ತಾ ನನ್ನ ಶುಭನಾಮಗಳನ್ನುಚ್ಚರಿಸುತ್ತಾ ಗಾನದಿಂದ ನನ್ನನ್ನು ಹೊಗಳುತ್ತಿರುವರು. ಆದ್ದರಿಂದಲೇ ಅವರು ನಿತ್ಯತೃಪ್ತರೂ, ನಿತ್ಯಾನಂದಾನುಭವಿಗಳೂ, ವ್ಯಾಧಿಪೀಡಾವಿದೂರರೂ ಆಗಿ ಸಚ್ಚಿದಾನಂದರೂಪಿಯಾದ ನನ್ನನ್ನೇ ಧ್ಯಾನಿಸುವ ಮನಸ್ಸುಳ್ಳವರಾಗಿರುವರು. ॥೯೬೯-೯೭೦॥

ಇಲ್ಲಿ ಭೈರವಾದಿ ಸಕಲ ದೇವತೆಗಳೂ, ನನ್ನ ಕಥಾಶ್ರವಣಕುತೂಹಲರಾಗಿ ನನ್ನನ್ನೇ ಭಜಿಸುತ್ತಾ, ಸಕಲ ವಿಜಯಗಳಿಂದಲೂ ಕೂಡಿದವರಾಗಿ ನನ್ನ ಸೇವೆಯಿಂದ ಕಾಲಕಳೆಯುತ್ತಿರುವರು. ॥೯೭೧-೯೭೨॥

ತದಾ ದಧೀಚಿರಘ್ಯಾರ್ಘ್ಯೈರ್ಮಾಮಭ್ಯರ್ಚ್ಯ ಪ್ರಯತ್ನತಃ ।
ಸತ್ವರಂ ಗಂತುಮುದ್ಯುಕ್ತಃ ಸಂಮರ್ದಮಸಹಂಸ್ತದಾ । ॥೯೮೫॥

ತದಾ ತು ಮುನಯಸ್ಸರ್ವೇ ಬಹವಸ್ತೇನ ಸಂಗತಾಃ ।
ಗಂತುಂ ಸಮುದ್ಯತಾ ದೇವಿ ಸಂಮರ್ದೋಽಭೂತ್ತದಾ ಬಹು ॥೯೮೬॥

ತದಾ ವೇತ್ರಂ ಸಮಾದಾಯ ವಿಷ್ಣುರೇಷಃ ಪ್ರಯತ್ನತಃ ।
ಸತ್ವರಂ ಭ್ರಾಮಯಾಮಾಸ ವೇತ್ರಮುಂಚಲಕಾಂಚನಂ ॥೯೮೭॥

ತದಾ ದಧೀಚಿಃ ಸಂಕ್ರುದ್ಧೋ ಗೃಹೀತ್ವಾ ವಿಷ್ಣುಮುದ್ಧತಂ ।
ದ್ವಾರಾನ್ನಿಷ್ಕಾಸಯಾಮಾಸ ಪಶ್ಯತ್ಸ್ವೇವ ಗಣೇಷ್ವಪಿ ॥೯೮೮॥

ತದಾ ಯುದ್ಧಮಭೂದ್ಘೋರಂ ತಯೋರನ್ಯೋನ್ಯಮಂಬಿಕೇ ।
ತದಾ ಪಾಶುಪತಾಸ್ತ್ರೇಣ ಬಬಂಧ ಸ ಜನಾರ್ದನಂ ॥೯೮೯॥

ತದಾ ನಂದೀ ಸಮಾಗತ್ಯ ಪ್ರಸಾದ್ಯ ಮುನಿಪುಂಗವಂ ।
ಅಪರಾಧಾನ್ ಕ್ಷಮಸ್ವಾಸ್ಯ ವಿಷ್ಣೋರಿತ್ಯಾಹ ಸಾದರಂ ॥೯೯೦॥

ಆಗ ದಧೀಚಿಮಹರ್ಷಿಯು ಅಲ್ಲಿಗೆ ಬಂದು ಪೂಜಾದ್ರವ್ಯಗಳಿಂದ ನನ್ನನ್ನು ಪೂಜಿಸಿ, ಆ ಗುಂಪಿನಲ್ಲಿ ಸೇರಿರಲು ಇಷ್ಟಪಡದೆ ಅಲ್ಲಿಂದ ಜಾಗ್ರತೆಯಾಗಿ ಹೊರಟನು. ಅನೇಕರು ಅವನ ಜೊತೆ ಹೊರಡಲು ಇಷ್ಟಪಟ್ಟರು. ಆಗ ಋಷಿಗಳೆಲ್ಲರೂ ಗುಂಪುಗುಂಪಾಗಿ ಹೊರಡಲು ಸಿದ್ಧರಾದರು. ॥೯೮೫-೯೮೬॥

ಆಗ ವಿಷ್ಣುವು ಚಿನ್ನದ ಬೆತ್ತವನ್ನು ಹಿಡಿದು ಸುತ್ತಿಸುತ್ತಾ ಈ ಮುನಿಗಳನ್ನೆಲ್ಲಾ ಹೆದರಿಸಿದನು. ಆಗ ದಧೀಚಿಯು ಕೋಪಿಸಿಕೊಂಡು, ಉದ್ಧತನಾದ ವಿಷ್ಣುವನ್ನು ಸಕಲ ಶಿವಗಣಗಳೂ ನೋಡುತ್ತಿರುವಂತೆಯೇ ಬಾಗಿಲಿನಿಂದ ಹೊರಕ್ಕೆ ತಳ್ಳಿದನು. ॥೯೮೭-೯೮೮॥

ಇದರಿಂದ ದಧೀಚಿ ಮತ್ತು ವಿಷ್ಣು ಇವರಿಬ್ಬರಿಗೂ ಘೋರವಾದ ಯುದ್ಧವೇ ಪ್ರಾಪ್ತವಾಯಿತು. ಕೊನೆಗೆ ದಧೀಚಿಮಹರ್ಷಿಯು ಕೋಪದಿಂದ ಪಾಶುಪತಾಸ್ತ್ರವನ್ನು ಪ್ರಯೋಗಿಸಿ ವಿಷ್ಣುವನ್ನು ಕಟ್ಟಿಹಾಕಿದನು. ಒಡನೆಯೇ ನಂದೀಶ್ವರನು ಬಂದ ಎದಧೀಚಿಮಹರ್ಷಿಯಲ್ಲಿ ವಿಷ್ಣುವಿನ ಅಪರಾಧವನ್ನು ಕ್ಷಮಿಸಬೇಕೆಂದು ಪ್ರಾರ್ಥಿಸಿದನು. ॥೯೮೯ ೯೯೦॥

ತತಸ್ತಂ ಮೋಚಯಿತ್ವೈನಂ ನಂದಿಕೇಶೋ ಮುನೀಶ್ವರಃ ।
ಸಮಾಶ್ರಿತ್ಯ ಪುನಃ ಪೂಜಾಂ ಚಕಾರ ಮಮ ಸಾದರಂ ॥೯೯೧॥

ತತಃಪರಂ ಋಷಿಗಣಾಃ ಸರ್ವೇಽಪಿ ಮದನುಗ್ರಹಾತ್ ।
ಸಂಪೂಜ್ಯ ನಿಶಿ ಯತ್ನೇನ ಚಕ್ರುರ್ಜಾಗರಣಂ ಶಿವೇ ॥೯೯೨॥

ಕಾರ್ತಿಕಸ್ಯ ಚತುರ್ದಶ್ಯಾಂ ಬಿಲ್ವೈಶ್ಚ ಕನಕಾಹ್ವಯೈಃ ।
ದ್ರೋಣಪುಷ್ಪೈಶ್ಚ ತೇ ಪೂಜಾಂ ಚಕ್ರುರ್ಮಯಿ ಮಹೇಶ್ವರೇ॥೯೯೩॥

ತಿಲೈಃ ಸಸರ್ಷಪೈಃ ಶುಕ್ಲೈಶ್ಚಕ್ರುಃ ಪೂಜಾಂ ಮಯಿ ಪ್ರಿಯೇ ।
ಕೃತ್ಸ್ನಗೋಘೃತದೀಪಾನಾಂ ಮಹ್ಯಂ ಸಾರ್ಧಶತತ್ರಯಂ ॥೯೯೪॥

ದತ್ತಂ ಕ್ಷೀರಾನ್ನಮಾಜ್ಯಾಕ್ತಂ ದತ್ತಂ ಮಹ್ಯಂ ವರಾನನೇ ।
ಧೂಪದೀಪೌ ಪುನರ್ದತ್ತ್ವಾ ದತ್ತಃ ಪುಷ್ಪಾಂಜಲಿಸ್ತತಃ ॥೯೯೫॥

ಪ್ರದಕ್ಷಿಣನಮಸ್ಕಾರಾನ್ ಕೃತ್ವಾ ಚ ತದನಂತರಂ ।
ರಾತ್ರಿರ್ನೀತಾ ಪ್ರಯತ್ನೇನ ಮತ್ಕಥಾಶ್ರವಣಾದಿಭಿಃ ॥೯೯೬॥

ಹಾಗೆ ದಧೀಚಿಮಹರ್ಷಿಯಿಂದ ವಿಷ್ಣುವನ್ನು ಬಿಡಿಸಲು ಎಲ್ಲರೂ ಸಂತುಷ್ಟರಾಗಿ ಈಶ್ವರನನ್ನು ಪೂಜಿಸಿದರು. ಆ ಋಷಿಗಳೆಲ್ಲರೂ ನನ್ನ ಅನುಗ್ರಹದಿಂದ ಸಂತೋಷಪಟ್ಟವರಾಗಿ ರಾತ್ರಿಯೆಲ್ಲಾ ನನ್ನನ್ನು ಆರಾಧಿಸುತ್ತಾ ಜಾಗರಣೆ ಮಾಡಿದರು. ॥೯೯೧-೯೯೨॥

ಅದೇ ಕಾರ್ತಿಕಚತುರ್ದಶಿಯ ರಾತ್ರಿ ನನ್ನನ್ನು ಅವರು ಚಿನ್ನದ ತುಂಬೆ ಹೂವುಗಳಿಂದಲೂ, ತಿಲಾಕ್ಷತೆಗಳಿಂದಲೂ ಪೂಜಿಸಿ, ಮುನ್ನೂರೈವತ್ತು ಹಸುವಿನ ತುಪ್ಪದ ದೀಪಗಳಿಂದ ನನ್ನನ್ನು ಆರಾಧನೆ ಮಾಡಿದರು ॥೯೯೩-೯೯೪॥

ಹಾಗೆಯೇ, ಕ್ಷೀರಾನ್ನ, ಘೃತಾನ್ನಗಳನ್ನು ನೈವೇದ್ಯವಾಗಿ ನನಗೆ ಅರ್ಪಿಸಿ, ಮತ್ತೆ ಧೂಪದೀಪಗಳನ್ನೂ, ಪುಷ್ಪಾಂಜಲಿಯನ್ನೂ ಸಮರ್ಪಿಸಿ, ಪ್ರದಕ್ಷಿಣ ನಮಸ್ಕಾರಗಳನ್ನು ಮಾಡುತ್ತಾ, ರಾತ್ರಿಯೆಲ್ಲಾ ನನ್ನ ಕಥಾಶ್ರವಣಮಾಡುತ್ತಲೇ ಕಾಲ ಕಳೆದರು. ॥೯೯೫-೯೯೬॥

ತತೋಽರುಣೋದಯೇ ಜಾತೇ ಸ್ನಾತ್ವಾ ಸ್ನಾತ್ವಾ ಚ ಭಸ್ಮನಾ ।
ತ್ರಿಪುಂಡ್ರಧಾರಣಂ ಕೃತ್ವಾ ಕೃತ್ವಾ ರುದ್ರಾಕ್ಷಧಾರಣಂ ॥೯೯೭॥

ಸಂಧ್ಯಾಂ ಸಮಾಪ್ಯ ವಿಶ್ವೇಶಂ ಸಮಾಮಭ್ಯರ್ಚ್ಯ ಯಥಾವಿಧಿ ।
ಮದ್ಭಕ್ತಾನ್ಭೋಜಯಾಮಾಸುಃ ಋಷಯೋ ಬುಭುಜುಸ್ತತಃ ॥೯೯೮॥

ಯಶ್ಶುಕ್ಲೋರ್ಜಚತುರ್ದಶ್ಯಾಮುಪೋಷ್ಯ ಪ್ರಯತಶ್ಶಿವೇ ।
ಮಾಮರ್ಚಯತಿ ವಿಶ್ವೇಶಂ ಸ ಮುಕ್ತೋ ಭವತಿ ಧ್ರುವಂ ॥೯೯೯॥

ಮಲ್ಲಿಂಗಪೂಜನಂ ಪುಣ್ಯಂ ಸರ್ವದಾ ಸರ್ವಕಾಮದಂ ।
ಊರ್ಜಶುಕ್ಲಚತುರ್ದಶ್ಯಾಮರ್ಚಿತಂ ಬಹುಪುಣ್ಯದಂ ॥೧೦೦೦॥

ಕಾರ್ತಿಕಸ್ಯ ಚತುರ್ದಶ್ಯಾಂ ಸಿತಾಯಾಂ ಪ್ರಾಪ್ಯ ಯತ್ನತಃ ।
ಯಃ ಪೂಜಯತಿ ಪುಣ್ಯಾತ್ಮಾ ಸ ಮುಕ್ತೋ ನಾತ್ರ ಸಂಶಯಃ ॥೧೦೦೧॥

ಇದಂ ವೈಶ್ವೇಶ್ವರಂ ಲಿಂಗಂ ಸಾಕ್ಷಾನ್ಮದ್ರೂಪಮುತ್ತಮಂ ।
ಕೋ ವಾ ನಾತಿಪ್ರಯತ್ನೇನ ಸಮಾರಾಧಯತಿ ಪ್ರಿಯೇ ॥೧೦೦೨॥

ಮಾರನೆಯ ಬೆಳಗ್ಗೆ ಅರುಣೋದಯವಾದೊಡನೆಯೇ, ಗಂಗೆಯಲ್ಲಿ ಸ್ನಾನಮಾಡಿ, ಭಸ್ಮತ್ರಿಪುಂಡ್ರವನ್ನೂ ರುದ್ರಾಕ್ಷಮಾಲೆಯನ್ನೂ ಧರಿಸಿಕೊಂಡು, ಸಂಧ್ಯಾವಂದನಾದಿಗಳನ್ನೂ ವಿಶ್ವೇಶ್ವರಾರ್ಚನೆಯನ್ನೂ ನೆರವೇರಿಸಿ, ನನ್ನ ಭಕ್ತರಿಗೆ ಉಣಬಡಿಸಿ, ತಾವೂ ಊಟಮಾಡಿದರು. ॥೯೯೭-೯೯೮॥

ಯಾವನು ಕಾರ್ತಿಕಶುದ್ಧ ಚತುರ್ದಶಿಯದಿನ ಉಪವಾಸದಿಂದಿದ್ದು ಭಕ್ತಿಯಿಂದ ವಿಶ್ವೇಶ್ವರಾರ್ಚನೆ ಮಾಡುವನೋ ಅವನು ನಿಜವಾಗಿಯೂ ಮುಕ್ತನಾಗುವನು. ಆದಿನ ಶಿವಲಿಂಗಾರ್ಚನೆಮಾಡುವುದು ಸಕಲ ಇಷ್ಟಾರ್ಥವನ್ನೂ ಸಲ್ಲಿಸುವುದು ಮಾತ್ರವಲ್ಲದೆ ಸುಕೃತರಾಶಿಯನ್ನೊದಗಿಸುವುದು. ॥೯೯೯-೧೦೦೦॥

ಯಾರು ಕಾರ್ತಿಕಶುದ್ಧ ಚತುರ್ದಶಿಯದಿನ ಪ್ರಯತ್ನಪೂರ್ವಕವಾಗಿ ವಿಶ್ವೇಶ್ವರಲಿಂಗವನ್ನು ಆರಾಧಿಸುವರೋ, ಅವರು ನಿಜವಾಗಿಯೂ ಮೋಕ್ಷವನ್ನು ಸಂಪಾದಿಸುವರು. ಅದಕ್ಕಾಗಿ ದೇವಿಯೇ, ಪ್ರಯತ್ನಪೂರ್ವಕವಾಗಿ ಶಿವಲಿಂಗವನ್ನು ಆರಾಧಿಸಬೇಕು. ॥೧೦೦೧-೧೦೦೨॥

ಅಸ್ಯ ಲಿಂಗಸ್ಯ ಮಾಹಾತ್ಮ್ಯಂ ವೇದೈರ್ನಜ್ಞಾಯತೇ ಶಿವೇ ।
ನ ವಿಷ್ಣುನಾ ಬ್ರಹ್ಮಣಾ ವಾ ಕಿಂತು ತದ್ಜ್ಞಾಯತೇ ಮಯಾ॥೧೧೦೩॥

ಮಾಹಾತ್ಮ್ಯಂ ಜ್ಞಾತುಮೇತಸ್ಯ ವೇದೈಸ್ತಪ್ತಂ ತಪಃ ಪುರಾ ।
ವಿಷ್ಣುನಾಪಿ ತಪಸ್ತಪ್ತಂ ಬ್ರಹ್ಮಣಾಪಿ ವರಾನನೇ ॥೧೧೦೪॥

ಏತೇ ತಪ್ತ್ವಾ ತಪೋ ಘೋರಂ ಬಹುಕಾಲಂ ಪ್ರಯತ್ನತಃ ।
ತತಸ್ತತ್ವಮವಿಜ್ಞಾಯ ವಿರತಾಸ್ತಪಸಃ ಶಿವೇ ॥೧೧೦೫॥

ಏತಾದೃಶಮಿದಂ ಲಿಂಗಂ ಸರ್ವವೇದಾಂತಸಂಸ್ತುತಂ ।
ಸುರಾಸುರಾರ್ಚಿತಂ ಲಿಂಗಂ ನಾನಾಮುನಿಗಣಾರ್ಚಿತಂ ॥೧೧೦೬॥

ಮಮ ಲಿಂಗಮಿದಂ ದೇವಿ ಪೂಜಿತಂ ಭುಕ್ತಿಮುಕ್ತಿದಂ ।
ಪೂಜಯಸ್ವಾದ್ಯ ಯತ್ನೇನ ನವಬಿಲ್ವದಳಾದಿಭಿಃ ॥೧೧೦೭॥

ಅಭಿಷೇಚಯ ಮಲ್ಲಿಂಗಂ ಕ್ಷೀರಾದ್ಯೈರ್ಭಕ್ತಿಪೂರ್ವಕಂ ।
ತತೋಽಸ್ಯ ಕುರು ಲಿಂಗಸ್ಯ ಕರ್ಪೂರಾದ್ಯನುಲೇಪನಂ ॥೧೧೦೮॥

---

ಈ ಶಿವಲಿಂಗದ ಮಹಿಮೆಯು ವೇದಗಳಿಗೂ ಗೋಚರವಾಗಿಲ್ಲ. ವಿಷ್ಣು, ಬ್ರಹ್ಮ, ಮುಂತಾದ ದೇವತೆಗಳೂ, ಚತುರ್ವೇದಗಳೂ ಶಿವಲಿಂಗಮಹಿಮೆಯನ್ನರಿಯಲು ಬಹುಕಾಲ ತಪಸ್ಸನ್ನಾಚರಿಸಿದರು. ॥೧೧೦೩-೧೧೦೪॥

ಅವರು ಹೀಗೆ ಘೋರವಾದ ತಪಸ್ಸುಮಾಡಿ, ಕೊನೆಗೂ ಶಿವಲಿಂಗಮಹಿಮೆಯನ್ನರಿಯದೆ ನಿಲ್ಲಿಸಿದರು. ಇಂತಹ ಶಿವಲಿಂಗವು ಸರ್ವವೇದಾಂತ ಸಂಸ್ತುತವಾಗಿಯೂ, ದೇವರಾಕ್ಷಸರಿಂದ ಪೂಜಿತವಾಗಿಯೂ ಇದ್ದು ಮಹಾಮಹಿಮೆಯುಳ್ಳದ್ದಾಗಿರುವುದು. ॥೧೧೦೫-೧೧೦೬॥

ಎಲೌ ದೇವಿಯೇ, ಒಟ್ಟಿನಲ್ಲಿ ಶಿವಲಿಂಗವೇ ಭಕ್ತರಿಗೆ ಐಹಿಕ ಮತ್ತು ಆಮುಷ್ಮಿಕ ಸುಖಗಳನ್ನು ಕೊಡತಕ್ಕದ್ದು. ಆದ್ದರಿಂದ ಅದನ್ನು ಹೊಸ ಬಿಲ್ವದಳಗಳಿಂದ ಪೂಜಿಸು. ಕ್ಷೀರಾದಿಪಂಚಾಮೃತಗಳಿಂದ ಅಭಿಷೇಕಮಾಡು. ಕರ್ಪೂರಾದಿಗಳ ಲೇಪನವನ್ನೂ ಮರೆಯಬೇಡ. ॥೧೧೦೭-೧೧೦೮॥

ತತೋ ಮಂದಾರಕುಸುಮೈರ್ಬಿಲ್ವಪತ್ರೈಶ್ಚ ಕೋಟಿಶಃ ।
ಸಂಪೂಜ್ಯ ಕುರು ನೈವೇದ್ಯಂ ಸಘೃತಂ ಕ್ಷೀರಮುತ್ತಮಂ ॥೧೦೯॥

ಕೃತ್ವಾ ಪ್ರದಕ್ಷಿಣಾದೀನಿ ಲಿಂಗಧ್ಯಾನಂ ಕುರುಷ್ವ ಮೇ ।
ನಿತ್ಯಮೇತಸ್ಯ ಲಿಂಗಸ್ಯ ಭಕ್ತಿಂ ಕುರು ಮನೋರಮೇ ॥೧೧೦॥

ದೃಷ್ಟ್ವೇದಂ ಲಿಂಗಮಮಲಂ ಸರ್ವೇಽಪ್ಯಭ್ಯರ್ಚಯಂತ್ಯತಃ ।
ಪ್ರಿಯೇ ತ್ವಮಪಿ ಯತ್ನೇನ ಕುರು ಮಲ್ಲಿಂಗಪೂಜನಂ ॥೧೧೧॥

ಮಮಾಪಿ ಜಾಯತೇ ಭಕ್ತಿರ್ಮಲ್ಲಿಂಗಾಭ್ಯರ್ಚನೇ ಶಿವೇ ।
ದೃಷ್ಟ್ವೇದಂ ಲಿಂಗಮಮಲಂ ಕೋ ವಾ ನಾಭ್ಯರ್ಚಯಿಷ್ಯತಿ ॥೧೧೨॥

ಮಮ ಪ್ರಿಯತರಂ ಲಿಂಗಂ ಸರ್ವವೇದಸ್ತುತಂ ಪ್ರಿಯೇ ।
ಇದಮೇವ ನ ಚೈತಸ್ಮಾದನ್ಯತ್ಪ್ರಿಯತರಂ ಮಮ ॥೧೧೩॥

ಇದಂ ಲಿಂಗಂ ಸ್ವಪ್ರಕಾಶಮೇತದ್ಭಾಸೈವ ಕೇವಲಂ ।
ವಿಭಾತಿ ಸರ್ವಮೇತದ್ಯದ್ದೃಶ್ಯತೇ ಸಚರಾಚರಂ ॥೧೧೪॥

---

ಮಂದಾರ, ಬಿಲ್ವಪತ್ರೆ ಮುಂತಾದ ಪುಷ್ಪಪತ್ರೆಗಳಿಂದ ಪೂಜಿಸಿ, ಘೃತಮಿಶ್ರಿತ ವಾದ ಕ್ಷೀರವನ್ನು ನಿವೇದಿಸಿ, ಪ್ರದಕ್ಷಿಣೆಮಾಡುತ್ತಾ, ಶಿವಲಿಂಗಧ್ಯಾನಮಾಡು. ಶಿವಲಿಂಗದಲ್ಲಿ ಅಚಲವಾದ ಭಕ್ತಿಯನ್ನಿಟ್ಟು ಪೂಜಿಸು. ಆ ಪೂಜೆಯು ಮಂಗಳ ಪ್ರದವಾದುದು. ॥೧೦೯-೧೧೦॥

ಈ ಪರಿಶುದ್ಧವಾದ ವಿಶ್ವೇಶ್ವರಲಿಂಗವನ್ನು ನೋಡಿದೊಡನೆಯೇ ಸರ್ವರೂ ಪೂಜಿಸಿ ಧನ್ಯರಾಗುವರು. ಆದುದರಿಂದ ಎಲೌ ದೇವಿಯೇ, ನೀನೂ ಸಹ ನನ್ನ ಶಿವಲಿಂಗವನ್ನು ಅರ್ಚಿಸಿ ಧನ್ಯಳಾಗು. ಈ ಶಿವಲಿಂಗವನ್ನು ಪೂಜಿಸುವವನ ವಿಷಯದಲ್ಲಿ ನನಗೂ ಭಕ್ತಿಯುಂಟಾಗುವುದು. ಇಂತಹ ಪವಿತ್ರವಾದ ಶಿವಲಿಂಗ ವನ್ನು ನೋಡಿ ಪೂಜಿಸದಿರುವವನು ಯಾವನು ? ॥೧೧೧-೧೧೨॥

ಈ ಶಿವಲಿಂಗವು ನನಗೆ ಅತ್ಯಂತ ಪ್ರಿಯವಾದುದು. ಸಕಲ ವೇದಗಳೂ ಇದನ್ನೇ ಸ್ತುತಿಸುತ್ತಿವೆ. ಇದಕ್ಕಿಂತ ಪ್ರಿಯವಾದ ಲಿಂಗವು ನನಗೆ ಮತ್ತಾವುದೂ ಇಲ್ಲ. ಇದು ಸ್ವಪ್ರಕಾಶಕವಾದ ಶಿವಲಿಂಗವು. ಇದರ ಕಾಂತಿಯಿಂದಲೇ ಚರಾಚರಾ ತ್ಮಕವಾದ ಈ ಜಗತ್ತೆಲ್ಲಾ ಪ್ರಕಾಶಿಸುತ್ತಿರುವುದು. ॥೧೧೩-೧೧೪॥

ನೇದಂ ಪ್ರಭಾಸಯತ್ಯರ್ಕೋ ನ ಭಾಸಯತಿ ಚಂದ್ರಮಾಃ ।
ನ ತಾರಕಾ ಭಾಸಯಂತಿ ವಿದ್ಯುತೋಽಪಿ ಕುತೋಽನಲಃ ॥೧೧೧೫॥

ಏತಾದೃಶಮಿದಂ ಲಿಂಗಮವಿಕಾರಂ ಮದಾತ್ಮಕಂ ।
ದ್ರಷ್ಟವ್ಯಮರ್ಚನೀಯಂ ಚ ಧ್ಯಾತವ್ಯಂ ಚ ಪ್ರಯತ್ನತಃ ॥೧೧೧೬॥

ಸರ್ವೋಽಪಿ ಪುಣ್ಯಕಾಲೋಽತ್ರ ಕಾಶ್ಯಾಂ ಮಲ್ಲಿಂಗಪೂಜನೇ ।
ವ್ಯತೀಪಾತಾದಯೋ ಯೋಗಾಃ ಸರ್ವದಾಪಿ ವರಾನನೇ ॥೧೧೧೭॥

ಸರ್ವದಾ ಗ್ರಹಣಾನ್ಯತ್ರ ಸರ್ವದಾಪ್ಯಯನಾದಿಕಂ ।
ಸರ್ವದಾ ಪುಣ್ಯಕರ್ಮಾಣಿ ಸರ್ವದಾ ವಿಷುವಾದಿಕಂ ॥೧೧೧೮॥

ಯದೇದಂ ಪೂಜ್ಯತೇ ಲಿಂಗಂ ಮದ್ಭಕ್ತೈರ್ಭಕ್ತಿಪೂರ್ವಕಂ ।
ತದೈವಾಯಾಂತಿ ಸುಭಗೇ ಪುಣ್ಯಕಾಲಾಸ್ಸಹಸ್ರಶಃ ॥೧೧೧೯॥

ಅಸ್ಮಿನ್ನೇತಾದೃಶೇ ಲಿಂಗೇ ಪ್ರವಿಶ್ಯ ಸತತಂ ಶಿವೇ ।
ಸಾದರಂ ಪ್ರತಿಗೃಹ್ಣಾಮಿ ಮದ್ಭಕ್ತಕೃತಪೂಜನಂ ॥೧೧೨೦॥

ಸ್ವಪ್ರಕಾಶಕವಾದ ಈ ಲಿಂಗವನ್ನು, ಸೂರ್ಯ, ಚಂದ್ರ, ನಕ್ಷತ್ರಗಳು, ಮಿಂಚು, ಅಗ್ನಿ ಮುಂತಾದ ತೇಜೋರೂಪವಾದ ವಸ್ತುಗಳೂ ಸಹ ಬೆಳಗಿಸಲಾರವು. ಇದರ ತೇಜಸ್ಸಿನ ಮುಂದೆ ಅವು ನಿಲ್ಲಲಾರವು. ಇಂತಹ ನಿರ್ವಿಕಾರವೆನಿಸಿದ ಈ ಶಿವಲಿಂಗವನ್ನು ದರ್ಶನಮಾಡಬೇಕು, ಹಾಗೆಯೇ ಅರ್ಚಿಸಬೇಕು, ಸದಾ ಧ್ಯಾನಮಾಡಬೇಕು. ॥೧೧೧೫-೧೧೧೬॥

ಕಾಶಿಯಲ್ಲಿರುವ ಈ ವಿಶ್ವೇಶ್ವರಲಿಂಗದ ಅರ್ಚನೆಗೆ ಸರ್ವಕಾಲವೂ ಪುಣ್ಯಕಾಲವೆಂದೆನಿಸುವುದು. ವ್ಯತೀಪಾತಾದಿ ಮಹಾಯೋಗಗಳು, ಗ್ರಹಣಕಾಲ, ಅಯನಗಳು, ಪವಿತ್ರನಕ್ಷತ್ರಗಳು, ವಿಷುವತ್ಸಂಕ್ರಮಣಸಮಯಗಳು ಸರ್ವದಾ ಕಾಶಿಯಲ್ಲಿಯೇ ನೆಲಸಿ ಈ ಲಿಂಗಾರ್ಚನೆಗೆ ಪುಣ್ಯವನ್ನು ಒದಗಿಸುತ್ತವೆಯೆಂದು ತಿಳಿಯಬೇಕು. ॥೧೧೧೭-೧೧೧೮॥

ನನ್ನ ಭಕ್ತರು ಬಂದು ಎಂದು ಭಕ್ತಿಯಿಂದ ಈ ಶಿವಲಿಂಗವನ್ನು ಆರಾಧಿಸುವರೋ, ಅಂದೇ ಮೇಲೆ ಹೇಳಿದ ಪುಣ್ಯಕಾಲಗಳೆಲ್ಲಾ ಸೇರಿವೆ ಎಂದು ಭಾವಿಸ

|| ಸೂತ ಉವಾಚ ||

ಇತಿ ಶ್ರೀ ವಿಶ್ವನಾಥಸ್ಯ ಶ್ರುತ್ವಾ ವಚನಮಂಬಿಕಾ ।
ಭಕ್ತ್ಯಾ ವೈಶ್ವೇಶ್ವರಂ ಲಿಂಗಂ ಪೂಜಯಾಮಾಸ ಚೇಶ್ವರೀ ॥೧೦೨೧॥

ತತಸ್ತಸ್ಮಿನ್ಮಹಾಲಿಂಗೇ ಸರ್ವದೇವಶಿಖಾಮಣಿಃ ।
ಉಮಯಾ ಸಹ ಸುಪ್ರೀತಶ್ಚಕಾರ ವಸತಿಂ ಶಿವಃ ॥೧೦೨೨॥

ತದೇವ ಲಿಂಗಮಧುನಾ ಬ್ರಹ್ಮವಿಷ್ಣ್ವಾದಿಭಿಸ್ಸುರೈಃ ।
ಸರ್ವದಾ ಪೂಜ್ಯತೇ ಭಕ್ತ್ಯಾ ಶ್ರೀ ಮಹೇಶಗಣೈರಪಿ ॥೧೦೨೩॥

ಶ್ರೀಮದ್ವಿಶ್ವೇಶ್ವರಂ ಲಿಂಗಂ ಆನಂದಘನಮದ್ವಯಂ ।
ಶ್ರುತಂ ಸ್ಮೃತಂ ವಾ ದೃಷ್ಟಂ ವಾ ಭುಕ್ತಿಮುಕ್ತಿಪ್ರದಂ ಧ್ರುವಂ॥೧೦೨೪॥

ಶ್ರೀಮದ್ವಿಶ್ವೇಶ್ವರಂ ಲಿಂಗಂ ಪ್ರಸಂಗಾದಪಿ ಸಂಶ್ರುತಂ ।
ಚತುರ್ವರ್ಗಮಿದಂ ವಿಪ್ರಾಃ ಸತ್ಯಂ ಸತ್ಯಂ ಮಯೋಚ್ಯತೇ ॥೧೦೨೫॥

---

ಬೇಕು. ನಾನಾದರೋ ನಿಜವಾಗಿಯೂ ಈ ವಿಶ್ವೇಶ್ವರಲಿಂಗದಲ್ಲಿ ಅಡಗಿದವನಾಗಿ ನನ್ನ ಭಕ್ತರು ಮಾಡುವ ಪೂಜಾದಿಗಳನ್ನು ವಿಶ್ವಾಸದಿಂದ ಸ್ವೀಕರಿಸುವೆನು. ಇದು ನಿಶ್ಚಯ." ||೧೦೧೯-೧೦೨೦||

ಹಾಗೆ ಹೇಳಿದ ಮಹಾದೇವನ ಮಾತುಗಳನ್ನು ಕೇಳಿ ಪಾರ್ವತಿಯು ಅಲ್ಲಿಂದಲೇ ವಿಶ್ವೇಶ್ವರಲಿಂಗವನ್ನು ಭಕ್ತಿಯಿಂದಾರಾಧಿಸತೊಡಗಿದಳು. ಆಗ ವಿಶ್ವೇಶ್ವರಲಿಂಗದಲ್ಲಿ ಮಹಾದೇವನು ವಿರಾಜಿಸುತ್ತಾ ಅತ್ಯಂತಾನಂದಭರಿತನಾಗಿ ಪಾರ್ವತಿಯೊಡನೆ ಅಲ್ಲಿಯೇ ಶಾಶ್ವತವಾದ ವಾಸವನ್ನವಲಂಬಿಸಿದನು. ||೧೦೨೧-೧೦೨೨||

ಅದೇ ವಿಶ್ವೇಶ್ವರಲಿಂಗವನ್ನು ಈಗಲೂ ಬ್ರಹ್ಮವಿಷ್ಣ್ವಾದಿದೇವತೆಗಳೂ, ಗಣನಾಯಕರೂ ಸರ್ವದಾ ಪೂಜಿಸುತ್ತಿರುವರು. ಈ ಶಿವಲಿಂಗವು ಆನಂದಮಯವಾದುದು, ನಾಶರಹಿತವಾದುದು, ಸಜಾತೀಯವಾದ ದ್ವಿತೀಯವಸ್ತುರಹಿತವಾದದ್ದು, ಇದರ ದರ್ಶನ, ಪೂಜನ, ಸ್ಮರಣ ಇವೊಂದೊಂದೂ ಐಹಿಕಾಮುಷ್ಮಿಕ ಸುಖಗಳಿಗೆ ಸಾಧಕವೆನಿಸುವುದು. ೧೦೨೩-೧೦೨೪||

ಪರಮಪೂಜ್ಯವಾದ ಈ ವಿಶ್ವೇಶ್ವರಲಿಂಗವು ಅಕಸ್ಮಾತ್ತಾಗಿ ಒಂದುಸಾರಿ ಸ್ಮರಿಸಲ್ಪಟ್ಟರೂ, ಭಕ್ತರಿಗೆ ಅವರಿಂದ ಧರ್ಮಾದಿಚತುರ್ವಿಧಪುರುಷಾರ್ಥಗಳೂ ಸಿದ್ಧಿಸುವುವು, ಇದು ಸತ್ಯ. ಎಲೈ ವಿಪ್ರರೇ, ಹೀಗೆ ಸಕಲ ಲೋಕಗಳಿಗೂ ದೇವ

ಸಕಲಭುವನದೇವಂ ದೇವತಾಸಾರ್ವಭೌಮಂ
ವಿವಿಧನಿಗಮವೇದ್ಯಂ ಬ್ರಹ್ಮವಿಷ್ಣ್ವಾದಿವಂದ್ಯಂ ।
ಭಜತ ಮುಹುರನಂತಂ ಶಂಭುಮಾದ್ಯಂತಶೂನ್ಯಂ
ಶುಭದಮನಿಶಮೀಶಂ ಸಾವಧಾನೇನ ವಿಪ್ರಾಃ ॥೧೦೨೬॥

ಪಿಬತ ಶೈವರಹಸ್ಯರಸಾಮೃತಂ
ಶಿವರಹಸ್ಯಕಥಾಮೃತಮುತ್ತಮಂ ।
ಭಜತ ಶಂಕರಮೇವ ಸದಾ ಮುದಾ
ಲಭತ ಮುಕ್ತಿಮುಮಾಪತಿಸೇವಯಾ ॥೧೦೨೭॥

ಚಂದ್ರಚೂಡಚರಣೌ ರಮಣೀಯೌ
ಮುಕ್ತಿಬೀಜಕರಣೌ ವರಣೀಯೌ ।
ಭೂರಿಪುಣ್ಯಗುಣವದ್ಗಣನೀಯೌ
ಆದರಾದಹರಹಃ ಸ್ಮರಣೀಯೌ ॥೧೦೨೮॥

ಇತಿ ಶ್ರೀಶಿವರಹಸ್ಯೇ ಸಪ್ತಮಾಂಶೇ ಪೂರ್ವಾರ್ಧೇ ಶ್ರೀಶಿವಗೌರೀ ಸಂವಾದೇ ಕಾಶೀಪ್ರಭಾವೇ ಅನ್ನಪೂರ್ಣಾಷ್ಟೋತ್ತರಶತ ವಿಶ್ವೇಶ್ವರಲಿಂಗ ಮಹಿಮಾನುವರ್ಣನಂ ನಾಮ ಏಕೋನತ್ರಿಂಶೋಧ್ಯಾಯಃ.

## ಸಪ್ತಮಾಂಶಃ ಸಮಾಪ್ತಃ

---

ದೇವನೆನಿಸಿ; ದೇವೋತ್ತಮನೆಂದು ಸಕಲ ವೇದರಾಶಿಯಿಂದಲೂ ಸ್ತುತಿಸಲ್ಪಟ್ಟು, ಬ್ರಹ್ಮವಿಷ್ಣ್ವಾದಿಗಳಿಗೂ ಪೂಜ್ಯವಸ್ತುವೆನಿಸಿ, ಆದ್ಯಂತಶೂನ್ಯನೂ, ಶುಭದಾಯಕನೂ ಎನಿಸಿದ ಮಹಾದೇವನನ್ನು ನೀವು ಅತ್ಯಂತ ಭಕ್ತಿಯಿಂದ ಭಜಿಸಿರಿ. ಶಂಕರನು ನಿಮಗೆ ಸಂಪೂರ್ಣ ಮಂಗಳವನ್ನುಂಟುಮಾಡುವನು. ॥೧೦೨೪-೧೦೨೬॥

ವಿಪ್ರರೇ, ಈ ಶಿವರಹಸ್ಯವೆಂಬ ಸ್ವಾದುರಸವನ್ನು ಪಾನಮಾಡಿರಿ. ಶಿವಕಥಾಮೃತವನ್ನು ತಪ್ಪದೆ ಸೇವಿಸಿರಿ. ಮಹಾದೇವನನ್ನು ಭಕ್ತಿಯಿಂದರ್ಚಿಸಿರಿ. ತನ್ಮೂಲಕ ನೀವು ಶಾಶ್ವತವಾದ ಮುಕ್ತಿಯನ್ನು ಗಳಿಸಿರಿ. ॥೧೦೨೭॥

ರಮಣೀಯವಾದ ಶಂಕರನ ಪಾದದ್ವಂದ್ವಗಳು, ಭಕ್ತರಿಗೆ ಮುಕ್ತಿಯನ್ನು ಒದಗಿಸುವುದರಲ್ಲಿ ಮೂಲಕಾರಣಗಳು, ಭಕ್ತರ ಇಷ್ಟಾರ್ಥಗಳನ್ನು ಸಲ್ಲಿಸತಕ್ಕವುಗಳು,

ಜನ್ಮಾಂತರಗಳಲ್ಲಿ ಪುಣ್ಯಸಂಪಾದಿಸಿದವರಿಗೆ ಮಾತ್ರ ದೊರಕತಕ್ಕವುಗಳು. ಆದ್ದರಿಂದ ಇಂತಹ ಶಿವಪೂಜ್ಯಪಾದಗಳನ್ನು ಸರ್ವದಾ ನೀವು ಅರ್ಚಿಸುತ್ತಿರಿ. ಎಂದು ಸೂತ ಮಹರ್ಷಿಗಳು ಅಲ್ಲಿ ನೆರೆದಿದ್ದ ಭಕ್ತವೃಂದಕ್ಕೆ ಕಾಶೀಮಹಿಮೆ, ವಿಶ್ವೇಶ್ವರಲಿಂಗದ ಪ್ರಾಶಸ್ತ್ಯ ಇವುಗಳನ್ನು ಬೋಧಿಸಿದರು. ||೧೦೮||

ಇಲ್ಲಿಗೆ ಶ್ರೀ ಶಿವರಹಸ್ಯದ ಏಳನೆಯ ಅಂಶದ ಪೂರ್ವಾರ್ಧದಲ್ಲಿ
ಇಪ್ಪತ್ತೊಂಬತ್ತನೆಯ ಅಧ್ಯಾಯವು ಮುಗಿದುದು.

ಏಳನೆಯ ಅಂಶದ ಪೂರ್ವಾರ್ಧವು ಮುಗಿದುದು.

॥ ಶ್ರೀವಿಶ್ವೇಶ್ವರಾರ್ಪಣಮಸ್ತು ॥

॥ ಓಂ ತತ್ಸತ್ ।

ಸ್ಕಂದಂ ಸುಂದರಕುಂದದಂತಮನಘಂ ಶಂಭೋರ್ಗುರುಂ ಶಾಶ್ವತಂ
ಸುಬ್ರಹ್ಮಣ್ಯಮಗಣ್ಯಪುಣ್ಯಚರಿತಂ ವಂದೇ ಪರಂ ದೇಶಿಕಂ ॥೧೮೭॥

ಬ್ರಹ್ಮಾಂಡೈಕಸಹಸ್ರಕಾಷ್ಠಭರಣಪ್ರಾಚುರ್ಯ ಧೈರ್ಯಸ್ಫುರತ್
ಕೋಪಾಟೋಪದುರಾಪಪಾಪಘಟಿತಾಹಂಕಾರಶೂರಾಂತಕಂ ।
ಸೇನಾನ್ಯಂ ಸುರಮಾನ್ಯಮುನ್ನತಭುಜಂ ಚಿಂತಾಬ್ಧಿಕುಂಭೋದ್ಭವಂ
ಸುಬ್ರಹ್ಮಣ್ಯಮಗಣ್ಯಪುಣ್ಯಚರಿತಂ ವಂದೇ ಪರಂ ದೇಶಿಕಂ ॥೧೮೮॥

ಶರ್ವಾಣೀಪ್ರಣವೋಪದೇಶಚತುರಶ್ರೀಕಂಠ ಕಂಠೀರವ
ಶ್ರೋತಾರಂ ಜನನೀ ಶುಭಾಂಕವಿಲಸತ್ಸಿಂಹಾಸನಸ್ಥಂ ಗುಹಂ ।
ಭೂಯಸ್ತಚ್ಛ್ರವಣಾಕುಲೋಗ್ರಜನಿತಂ ಸ್ವರ್ಣಾಹಿರಾಜಾಕೃತಿಂ
ಸುಬ್ರಹ್ಮಣ್ಯಮಗಣ್ಯಪುಣ್ಯಚರಿತಂ ವಂದೇ ಪರಂ ದೇಶಿಕಂ ॥೧೮೯॥

ದಂತಪಂಕ್ತಿಯುಳ್ಳವನು. ಶಂಭುವಿಗೂ ಗುರುವಿನಂತಿರುವವನು. ಇಂತಹ ಶಾಶ್ವತ ಮೂರ್ತಿಯಾದ ಕುಮಾರಸ್ವಾಮಿಯನ್ನು ನಾನು ತಪ್ಪದೆ ಧ್ಯಾನಮಾಡುವೆನು. ॥೧೮೭॥

ಬ್ರಹ್ಮಾಂಡವನ್ನೇ ಆಭರಣಾದಿಗಳಿಂದಲೂ, ಧೈರ್ಯಶೌರ್ಯಾದಿಗಳಿಂದಲೂ ಬೆರಗುಗೊಳಿಸಿ ಕೋಪಾಟೋಪದಿಂದ ಮೆರೆಯುತ್ತಿದ್ದ ಶೂರರ ತಂಡಕ್ಕೆ ಯಮನಂತೆ ವರ್ತಿಸಿ ವೀರಸೇನಾಪತಿಯೂ, ದೇವಪೂಜ್ಯನೂ ಎನಿಸಿದ ಷಣ್ಮುಖಸ್ವಾಮಿಯು ಭಕ್ತರ ಚಿಂತಾಸಮುದ್ರಕ್ಕೆ ಅಗಸ್ತ್ಯನಂತೆ ನಾಶಕನೆನಿಸಿರುವನು. ಇಂತಹ ಸುಬ್ರಹ್ಮಣ್ಯಸ್ವಾಮಿಯನ್ನು ನಾನು ಸದಾ ಧ್ಯಾನಿಸುವೆನು. ॥೧೮೮॥

ಪರಶಿವನು ಪಾರ್ವತಿಗೆ ಪ್ರಣವಮಂತ್ರೋಪದೇಶಮಾಡುವ ಗಂಭೀರ ಧ್ವನಿಯನ್ನು ಪಾರ್ವತಿಯ ಪವಿತ್ರವಾದ ತೊಡೆಯೆಂಬ ಸಿಂಹಾಸನದ ಮೇಲೆ ಕುಳಿತು ಆನಂದದಿಂದ ಕೇಳುತ್ತಾ, ಪದೇ ಪದೇ ಅದನ್ನೇ ಅನುಸಂಧಾನಮಾಡಿ, ಅದರಿಂದ ಸುವರ್ಣರಂಜಿತವಾದ ಆದಿಶೇಷನ ಆಕಾರವನ್ನು ಪಡೆದು ವಿರಾಜಿಸುವ ಸುಬ್ರಹ್ಮಣ್ಯಸ್ವಾಮಿಯನ್ನು ನಾನು ಸರ್ವದಾ ಧ್ಯಾನಮಾಡುವೆನು. ॥೧೮೯॥

ಮಾರ್ತಂಡಾಯುತಭಾಸಮಾನ ಮಣಿಭೃಲ್ಲಾವಣ್ಯತಾರುಣ್ಯಜಿತ್
ಕಾರುಣ್ಯೈಕಶರಣ್ಯಪಂಚಕಮಣಿಪ್ರೋದ್ಯತ್ಫಣಾಶಾಲಿನಂ ।
ದಿವ್ಯಾಂಗಂ ಭವಭಂಗ ಸಂಗತಕೃಪಾತುಂಗೋತ್ತರಂಗಾಲಯಂ
ಸುಬ್ರಹ್ಮಣ್ಯಮಗಣ್ಯಪುಣ್ಯಚರಿತಂ ವಂದೇ ಪರಂ ದೇಶಿಕಂ ॥೧೯೦॥

ಸೇವಾತತ್ಪರಮಾನವಾರ್ಪಿತಬೃಹತ್ಕೂಷ್ಮಾಂಡಪಾದಾವನೀ
ತೂಲಸ್ಥೂಲಮರೀಚಿಸರ್ಷಪಸಮುಗ್ರೋಪಾಯಿನಂ ಮಾಯಿನಂ ।
ನಾನಾವಾದ್ಯಮೃದಂಗಶಂಖಪಟಲೀಘೋಷಾಂಕಪೂಜಾನ್ವಿತಂ
ಸುಬ್ರಹ್ಮಣ್ಯಮಗಣ್ಯಪುಣ್ಯಚರಿತಂ ವಂದೇ ಪರಂ ದೇಶಿಕಂ ॥೧೯೧॥

ಪುತ್ರಸ್ನೇಹವಿಮೋಹವರ್ಧಿತಶಿವಾ ವಕ್ಷೋಜಕುಂಭಸ್ರವ
ನ್ನೀರಾಪೂರಕುಮಾರಪೂರ್ವವಿಲಸದ್ಧಾರಾತಟೀವಾಸಿನಂ ।
ವಿಷ್ಣುಬ್ರಹ್ಮಸುರಾರ್ಚಿತಮಣಿಸ್ವರ್ಣೋಜ್ಜ್ವಲತ್ಪಾದುಕಂ
ಸುಬ್ರಹ್ಮಣ್ಯಮಗಣ್ಯಪುಣ್ಯಚರಿತಂ ವಂದೇ ಪರಂ ದೇಶಿಕಂ ॥೧೯೨॥

---

ಹತ್ತುಸಾವಿರ ಸೂರ್ಯರಂತೆ ಹೊಳೆಯುತ್ತಲಿರುವ ದಿವ್ಯಮಣಿಗಳನ್ನು ತನ್ನ ಹೆಡೆಯಲ್ಲಿ ಪಡೆದು, ಕರುಣಾರಸಪೂರಿತವಾದ ದೃಷ್ಟಿಗಳಿಂದ ಕೂಡಿ ಐದು ಹೆಡೆಗಳಿಂದ ವಿರಾಜಿಸುವ ಸುಬ್ರಹ್ಮಣ್ಯದೇವನು. ಸಂಸಾರಿಗಳ ಕಷ್ಟನಷ್ಟಗಳನ್ನೆಲ್ಲಾ ಕ್ಷಣಕಾಲದಲ್ಲಿ ನಿವಾರಣೆಮಾಡುವ ಶಕ್ತಿಯುಳ್ಳವನು. ಇಂತಹ ಸುಬ್ರಹ್ಮಣ್ಯ ದೇಶಿಕನನ್ನು ನಾನು ಸದಾ ಧ್ಯಾನಮಾಡುತ್ತಿರುವೆನು. ॥೧೯೦॥

ಸುಬ್ರಹ್ಮಣ್ಯಸ್ವಾಮಿಯು ತನ್ನ ಭಕ್ತರು ಭಕ್ತಿಯಿಂದ ಸೇವಾತತ್ಪರರಾಗಿ, ಕುಂಬಳಕಾಯಿ, ಹತ್ತಿ, ಮೆಣಸು, ಸಾಸವೆ ಮುಂತಾದ ವಸ್ತುಗಳನ್ನು ಕೈಗಾಣಿಕೆಯಾಗಿ ಕೊಟ್ಟರೂ ಅದನ್ನು ಪ್ರೀತಿಯಿಂದ ಸ್ವೀಕರಿಸುವನು. ನಾನಾವಿಧವಾದ ಮೃದಂಗ, ಶಂಖ, ತಮಟೆ ಮುಂತಾದ ವಾದ್ಯಘೋಷಗಳಿಂದ ಸದಾ ಆನಂದಿಸುತ್ತಿರುವವನು. ಇಂತಹ ಪುಣ್ಯಚರಿತನಾದ ಸುಬ್ರಹ್ಮಣ್ಯಸ್ವಾಮಿಯನ್ನು ನಾನು ಸದಾ ಧ್ಯಾನಿಸುವೆನು. ॥೧೯೧॥

ತನ್ನ ಮಗನ ಮೇಲಿನ ವಾತ್ಸಲ್ಯದಿಂದ ಪಾರ್ವತಿಯ ಸ್ತನಕಲಶದಿಂದ ಸ್ತನ್ಯವು ಹೊರಗೆರಚುತ್ತಿರುವಾಗ ಕುಮಾರಸ್ವಾಮಿಯು ಅಲ್ಲಿಯೇ ಕುಳಿತು ಅದನ್ನು ಆಸ್ವಾದಿಸುವನು. ಬ್ರಹ್ಮ, ವಿಷ್ಣು ಇವರೇ ಮೊದಲಾದ ದೇವಶ್ರೇಷ್ಠರಿಂದ ಪೂಜಿಸ

ದೇವಂ ಶಕ್ತಿಧರಂ ಕುಮಾರಮತುಲಂ ದಿವ್ಯಾವತಾರಂ ವಟುಂ
ಭಾವಾತೀತಮತೀತಸಂಸೃತಿಮನಃಪದ್ಮಾಗ್ರಸದ್ಮಪ್ರಿಯಂ ।
ಭಕ್ತ್ಯಾ ಯೇ ಪ್ರಣಮಂತಿ ತೇ ಗತಭಯಾ ಕಾರುಣ್ಯಕಲ್ಯಾಣಗಾ
ಭುಕ್ತ್ವಾ ಭೋಗಸುಖಂ ತ್ವದೀಯಕೃಪಯಾ ಮುಕ್ತಾಭವಂತಿ ಧ್ರುವಂ ॥೧೯೩॥

ವೃಂದಾರವೃಂದಾ ಮುನಿವರ್ಯಸಂಘಾ
ಗಣೇಶ್ವರಾ ಸ್ಕಂಧಸಹಸ್ರನಾಮಭಿಃ ।
ತಥಾಷ್ಟನಾಮ್ನಾಂ ಶತಕೇನ ತತ್ರ
ದೇವಂ ಮುದಾ ತಂ ಕವಚೇನ ತುಷ್ಟುವುಃ ॥೧೯೪॥

ಸ್ಕಂದೋ ಮುದಾ ತಾನನುಗೃಹ್ಯ ದೇವಾನ್
ಮುನೀನ್ ಗಣೇಶಾನ್ ಭಗಣೇಶಚೂಡಹೃತ್ ।
ಸಭಕ್ತವರ್ಯಾನಕರೋತ್ಸುರೋತ್ತಮಾನ್
ಕುಮಾರವರ್ಯೋಽಥ ಸಮರ್ಚಿತಾರ್ಯಃ ॥೧೯೫॥

---

ಲ್ಪಟ್ಟ ರತ್ನಪಾದುಕೆಗಳುಳ್ಳವನು. ಇಂತಹ ಪುಣ್ಯಸ್ವರೂಪನಾದ ಗುರುಸುಬ್ರಹ್ಮಣ್ಯಸ್ವಾಮಿಯನ್ನು ಶಿರಸಾ ವಂದಿಸುವೆನು. ॥೧೯೨॥

ಶಕ್ತ್ಯಾಯುಧವನ್ನು ಧರಿಸಿ, ಭಾವಾತೀತನಾಗಿ, ಸಂಸಾರದ ಕಷ್ಟಸುಖಗಳನ್ನು ಲಕ್ಷಿಸದೆ, ಸಂಸಾರಿಗಳ ಹೃದಯಕುಹರದಲ್ಲಿ ವಿಹರಿಸುತ್ತಾ ಸಂಚರಿಸುವ ವಟುವಾದ ಸುಬ್ರಹ್ಮಣ್ಯಸ್ವಾಮಿಯನ್ನು ಯಾರು ಭಯಭಕ್ತಿಯಿಂದ ವಂದಿಸುವರೋ ಅವರು ಸಮಸ್ತ ಭಯದಿಂದಲೂ ದೂರರಾಗಿ ಸಂಪೂರ್ಣವಾದ ಐಹಿಕಸುಖಸಮುದ್ರದಲ್ಲಿ ತೇಲಾಡಿ ಸುಬ್ರಹ್ಮಣ್ಯಕೃಪೆಯಿಂದ ಧನ್ಯರಾಗುವರು. ॥೧೯೩॥

ಆಗ ದೇವತೆಗಳೂ, ಋಷಿಶ್ರೇಷ್ಠರೂ, ಗಣನಾಯಕರೂ ಒಟ್ಟುಗೂಡಿ, ಸ್ಕಂದಸ್ವಾಮಿಯನ್ನು ಅಷ್ಟೋತ್ತರಶತಸಹಸ್ರನಾಮಸ್ತೋತ್ರಗಳಿಂದಲೂ, ಸ್ಕಂದಕವಚದಿಂದಲೂ ಸ್ತುತಿಸಿ ಸಂತೋಷಪಡಿಸಿದರು ॥೧೯೪॥

ಆದರಿಂದ ತೃಪ್ತನಾದ ಕುಮಾರಸ್ವಾಮಿಯು ಸಂತೋಷದಿಂದ ಅವರನ್ನು ಅನುಗ್ರಹಿಸಿ, ಈಶ್ವರಪ್ರಿಯಪುತ್ರನಾದ ಷಣ್ಮುಖನು ಎಲ್ಲರಿಂದಲೂ ಪೂಜಿತನಾಗಿ ದೇವತೆಗಳನ್ನೆಲ್ಲಾ ತನ್ನ ಭಕ್ತರನಾಗಿ ಮಾಡಿಕೊಂಡು ಅವರಿಗೆ ಆನಂದವನ್ನುಂಟು ಮಾಡಿದನು. ॥೧೯೫॥

ಸ್ಕಂದಂ ಮುದಾ ಸ್ತೋತ್ರವರ್ಯೈಃ ಸುಭಕ್ತಿತೋ
ಯಸ್ತೋಷ್ಯತಿ ಪ್ರೀತಮನಾಃ ಪ್ರಹರ್ಷತಃ ।
ತಸ್ಮಿನ್ ಪ್ರಹೃಷ್ಟೋ ವಿದಧಾತಿ ಕಾಮಾನ್
ಅಕಾಮಯುಕ್ತೋಽಪಿ ವಿಮುಕ್ತಿದೋ ಭವೇತ್ ॥೧೯೬॥

ಇತಿ ಶ್ರೀ ಶಿವರಹಸ್ಯೇ ಈಶಾಖ್ಯೇ ದ್ವಾದಶಾಂಶೇ ಶಿವಗೌರೀಸಂವಾದೇ ಸ್ಕಂದಸಹಸ್ರನಾಮ ಅಷ್ಟೋತ್ತರಶತನಾಮ ಕವಚಸ್ತೋತ್ರನಿರೂಪಣಂ ನಾಮ ಅಷ್ಟತ್ರಿಂಶೋಽಧ್ಯಾಯಃ

---

ಆದ್ದರಿಂದ ಯಾರು ಕುಮಾರಸ್ವಾಮಿಯನ್ನು ಹಿಂದೆ ಹೇಳಿದ ಅಷ್ಟೋತ್ತರ ಶತನಾಮಸ್ತೋತ್ರ, ಸಹಸ್ರನಾಮಸ್ತೋತ್ರ, ಸುಬ್ರಹ್ಮಣ್ಯಕವಚ ಇವೇ ಮುಂತಾದ ಸ್ತುತಿವಚನಗಳಿಂದ ಹೊಗಳಿ ತೃಪ್ತಿಪಡಿಸುವರೋ ಅಂತಹವರ ವಿಷಯದಲ್ಲಿ ಕುಮಾರಸ್ವಾಮಿಯು ಸಂತುಷ್ಟನಾಗಿ ಸಕಲ ವಿಧಗಳಾದ ಇಷ್ಟಾರ್ಥಗಳನ್ನೂ ಅವರಿಗೆ ಕರುಣಿಸುವನು. ಒಂದುವೇಳೆ ನಿಷ್ಕಾಮರಾಗಿ ಸುಬ್ರಹ್ಮಣ್ಯಸ್ವಾಮಿಯನ್ನು ಸೇವಿಸುವವನು ಶಿವ ಮತ್ತು ಕುಮಾರಸ್ವಾಮಿಯವರ ಅನುಗ್ರಹದಿಂದ ಶಾಶ್ವತವಾದ ಮುಕ್ತಿಯನ್ನು ಪಡೆಯುವರು. ಇದರಲ್ಲಿ ಸಂಶಯವಿಲ್ಲ. ಎಂದು ಸೂತಮಹರ್ಷಿಗಳು ಶಿವರಹಸ್ಯ ಶ್ರವಣ ಕುತೂಹಲಿಗಳಾದ ಇತರ ಮುನಿಗಳಿಗೆ ವಿವರವಾಗಿ ತಿಳಿಸಿದರು. ॥೧೯೬॥

ಇಲ್ಲಿಗೆ ಶ್ರೀಶಿವರಹಸ್ಯದ ಈಶನಾಮಕವಾದ ಹನ್ನೆರಡನೆಯ ಅಂಶದಲ್ಲಿ ಶಿವಗೌರೀ ಸಂವಾದರೂಪವಾಗಿ ಸುಬ್ರಹ್ಮಣ್ಯಸಹಸ್ರನಾಮ ಅಷ್ಟೋತ್ತರಶತನಾಮ, ಸುಬ್ರಹ್ಮಣ್ಯ ಕವಚಸ್ತೋತ್ರ ಇವುಗಳನ್ನು ವಿವರಿಸುವ ಮೂವತ್ತೆಂಟನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

|| ಶ್ರೀ ಶಿವಾಯನಮಃ ||

# ಅಥ ಶ್ರೀಶಿವರಹಸ್ಯೇ

## ಈಶಾನಾಖ್ಯೇ

## ದ್ವಾದಶಾಂಶೇ

## ಏಕೋನ ಚತ್ವಾರಿಂಶೋಽಧ್ಯಾಯಃ

|| ಮುನಯ ಊಚುಃ ||

ವ್ರಜಾಮ ಕಿಲ ಕಾಶಿಕಾಮಘಕುಲಾದಿಸಂನಾಶಿಕಾಂ
ವಿಶಾಮ ಮಣಿಕರ್ಣಿಕಾಂ ದ್ವಿಜಭಜಾಮ ತಾಂ ಕಾಲಿಕಾಂ ।
ಪಶ್ಯೇಮ ವಿಶ್ವೇಶ್ವರಮೇವ ತತ್ರ
ಯಜೇಮ ಬಿಲ್ವೈಶ್ಚ ಸಮರ್ಚಯಾಮಃ ॥೧॥

ಸ್ನಾಸ್ಯಾಮ ಗಂಗಾಂಭಸಿ ಪಾಪಮುಕ್ತ್ಯೈ ।
ವ್ರಜೇಮ ಮುಕ್ತಿಂ ಪರಮಾಮಥಾಂತೇ ॥೨॥

## ಮೂವತ್ತೊಂಬತ್ತನೆಯ ಅಧ್ಯಾಯ

ಸೂತಮಹರ್ಷಿಯಿಂದ ಕಾಶೀಮಹಿಮೆಯನ್ನರಿತ ಸಕಲ ಮುನಿಗಳೂ ಕೊನೆಯಲ್ಲಿ ಈ ರೀತಿ ಪ್ರತಿಜ್ಞೆಮಾಡಿದರು. ಇನ್ನು ಮೇಲೆ ನಾವೆಲ್ಲರೂ ಸಮಸ್ತ ಪಾಪನಾಶಕವಾದ ಕಾಶೀಕ್ಷೇತ್ರದಲ್ಲಿಯೇ ವಾಸಮಾಡುತ್ತೇವೆ. ಮಣಿಕರ್ಣಿಕಾ ತೀರ್ಥದಲ್ಲಿಯೇ ಸ್ನಾನಮಾಡುತ್ತೇವೆ. ಕಾಲಿಕಾದೇವಿಯನ್ನು ಸೇವಿಸುತ್ತೇವೆ. ವಿಶ್ವೇಶ್ವರಲಿಂಗದ ದರ್ಶನವನ್ನು ತಪ್ಪದೆ ಮಾಡುತ್ತೇವೆ. ಬಿಲ್ವದಳಗಳಿಂದ ವಿಶ್ವೇಶ್ವರಮೂರ್ತಿಯನ್ನು ತಪ್ಪದೆ ಆರಾಧಿಸುತ್ತೇವೆ. ||೧||

ಗಂಗಾನದಿಯಲ್ಲಿ ಸ್ನಾನಮಾಡಿ ಪಾಪಮುಕ್ತರಾಗುತ್ತೇವೆ. ತನ್ಮೂಲಕ ಶಾಶ್ವತವಾದ ಮುಕ್ತಿಯನ್ನು ಗಳಿಸುತ್ತೇವೆ. ಹೀಗೆಂದು ದೃಢಪ್ರತಿಜ್ಞೆಮಾಡಿ, ಸಮಸ್ತ ಋಷಿಗಳೂ ನಯವಿನಯಸಂಪನ್ನರಾಗಿ ತಮ್ಮ ಪತ್ನೀಪುತ್ರಾದಿಗಳ

ಮುನಯೋ ವಿನಯೋಜ್ವಲಾಸ್ತದಾನೀಂ
ತನಯೈಃ ಸ್ವೈಃ ಸ್ವಕಲತ್ರಶಿಷ್ಯಸಂಘೈಃ ।
ಮಥಿತಾಗ್ನಯ ಏವ ಭಗ್ನದುಃಖಾಃ
ಶಿವಪೂಜನಚರ್ಯಯಾಯುಸ್ತದಾವಿಮುಕ್ತಂ ॥೩॥

ಸೂತೇನ ತೇನ ಮುನಯೋಽಪಿ ಚ ಭಸ್ಮಭೂಷಾ
ಯೋಷಾದಿರಕ್ತಹೃದಯಾ ಸದಯಾ ತದಾನೀಂ ।
ಕಾಷಾಯಮಾತ್ರವಸನಾ ಯಯುರೀಶಕಾಶೀಂ
ವಾಸಾಯ ಚಾರುತಪಸೇ ಧೃತನಿಶ್ಚಯಾಸ್ತೇ ॥೪॥

ಇತಿ ಹೋಚುರಚುಂಬಿತಾಕ್ಷರೋರುವಾಚಂ
ಕೃತಕೃತ್ಯಾ ಪ್ರಸಮಾಪಿತೋರುಸತ್ರಾಃ ।
ಸ್ತುತಿ ನಿತ್ಯಾ ಪ್ರತಿಪೂಜ್ಯ ಸೂತಮಿಷ್ಟಂ
ಶಿಪಿವಿಷ್ಟೋರುಕಥಾಮೃತಾಪ್ತತಂ ತದಾ ॥೫॥

॥ ಋಷಯ ಊಚುಃ

ಕಿಂ ಸತ್ರೈರಖಿಲೈರ್ವ್ರತಾದಿಕರಣೈರ್ದಾನೈಶ್ಚ ದೀನಾವನೈಃ
ಕಿಂ ವಾ ಪಾವನತೀರ್ಥಗಾಹನಮಹಾಧರ್ಮೈರಲಂ ನಃ ಫಲಂ ।

ನ್ನೊಳಗೊಂಡು ಅಗ್ನಿಹೋತ್ರಾದಿಗಳನ್ನೂ ಶಿವಾರಾಧನೆಯನ್ನೂ ನೆರವೇರಿಸಿಕೊಂಡು ಸಂತುಷ್ಟಾಂತರಂಗವುಳ್ಳವರಾಗಿ ಕಾಶೀಕ್ಷೇತ್ರವನ್ನು ಕುರಿತು ತೆರಳಲು ಸಿದ್ಧರಾದರು. ॥೨-೩॥

ಜೊತೆಯಲ್ಲಿ ಸೂತಮಹಾಮುನಿಗಳೂ ಹೊರಟರು. ಒಟ್ಟಿನಲ್ಲಿ ಎಲ್ಲ ಋಷಿಗಳು ಭಸ್ಮಭೂಷಿತರಾಗಿ ಪತ್ನೀಪುತ್ರಾದಿಗಳಿಂದ ಕೂಡಿ ದಯಾರ್ದ್ರಚಿತ್ತರಾಗಿ ಕಾಷಾಯವಸ್ತ್ರಗಳನ್ನುಟ್ಟು, ದೃಢಮನಸ್ಸಿನಿಂದ ಕಾಶಿಯಲ್ಲಿ ನೆಲಸಿ ತಪಸ್ಸನ್ನು ಮುಂದುವರಿಸಲು ಪ್ರಯಾಣಸನ್ನದ್ಧರಾದರು. ॥೪॥

ಆಗ ಯಾಗ ಸಮಾಪ್ತಿಮಾಡಿ ಧನ್ಯರಾಗಿದ್ದ ಆ ಋಷಿಗಳ ತಂಡವು ಈಶ್ವರ ಕಥಾಮೃತಸೇಚನದಿಂದ ತಮ್ಮನ್ನು ಕೃತಕೃತ್ಯರನ್ನು ಮಾಡಿದ ಸೂತಮಹರ್ಷಿಯನ್ನು ಕುರಿತು ಈರೀತಿ ಪ್ರಾರ್ಥಿಸಿದರು. ॥೫॥

ಸೂತಮಹಾಮುನಿಯೇ, ಅತಿಕ್ಲೇಶಕರಗಳಾದ ವ್ರತ, ಯಜ್ಞ, ದಾನ

ಪ್ರಾಪ್ಯೈನಂ ಶ್ರುತಿರಾಶಿಶೇಖರಲಸತ್ಕೈಲಾಸವಾಸಂ ಕದಾ
ನೋದಾಯ್ಯೈವ ಸದಾಸ್ತು ಶಂಕರಕೃಪಾಪೀಯೂಷಕಂ ಕೇವಲಂ ॥೬॥

ಕಿಂ ತತ್ಪ್ರೀತಿಕರಂ ಮಹೇಂದ್ರಸದನಂ ಯತ್ರೈವ ತಸ್ಮಾನ್ಮಹೇ
ಸ್ಮಾದೇಹಾಂತವಿಭೂತಿಧಾರಣಯುತಾ ಪುಂಡ್ರಾಕ್ಷಮಾಲಾಧರಾಃ ।
ದಿವ್ಯಶ್ರೀ ಶಿವಲಿಂಗಪೂಜನರತಾ ಬಿಲ್ವೈಶ್ಚ ನೀರೈಃ ಪರಂ
ನಿಶ್ರೇಯಾಯ ಸದಾವಿಮುಕ್ತಸದನೇ ವಾಸೋಸ್ತು ನಶ್ರೇಯಸೇ ।೭॥

॥ ಸೂತ ಉವಾಚ ॥

ನಮತಾಮಭಿಷಾಯ ನೋ ನಮೋಸ್ತು
ನಮನಂ ನೋಸ್ತು ಗಿರೀಂದ್ರಜಾದ್ಯಪಾದೇ ।
ಸುನತಿರ್ನೋಸ್ತು ಸದೈವ ವಿಘ್ನರಾಜೇ
ನಮನಂ ನೋಸ್ತು ಹೃದೈವ ಷಣ್ಮುಖಾಯ ॥೮॥

---

ಧರ್ಮಗಳು, ತೀರ್ಥಸ್ನಾನಾದಿಗಳು ಇವುಗಳಿಂದ ನಮಗೆ ಒದಗುವ ಪ್ರಯೋಜನ ವೇನು? ಚಂದ್ರಶೇಖರನೆನಿಸಿದ ಪರಶಿವನ ಸನ್ನಿಧಿಯಿಂದ ಮೆರೆಯುವ ಕೈಲಾಸ ವಾಸವೂ ಅಲ್ಲಿ ಶಂಕರಕೃಪಾಮೃತವೂ ನಮಗೆ ದೊರೆತರೆ ಸಾಕು. ಮತ್ತಾವುದೂ ನಮಗೆ ಹಿತಕಾರಿಯಲ್ಲ. ॥೬॥

ಯಜ್ಞಾಚರಣೆಯೇ ಮೊದಲಾದ ಧರ್ಮಕಾರ್ಯಗಳಿಂದ ನಮಗೆ ಇಂದ್ರ ಪದವಿಯು ದೊರಕುವುದಾದರೂ ಅದು ನಮಗೆ ಬೇಡ. ಏಕೆಂದರೆ ಅದೂ ಶಾಶ್ವತ ವಾದ ಸುಖಸ್ಥಾನವಲ್ಲ. ನಾವು ಮರಣಪರ್ಯಂತವಾಗಿ ದೇಹಕ್ಕೆ ಭಸ್ಮೋದ್ಧೂಲನ ಮಾಡಿಕೊಂಡು, ಭಸ್ಮತ್ರಿಪುಂಡ್ರ, ರುದ್ರಾಕ್ಷಮಾಲೆ ಇವನ್ನು ಧರಿಸಿ ಸದಾ ಕಾಶೀಕ್ಷೇತ್ರದಲ್ಲಿ ವಾಸಿಸುತ್ತಾ ಜಲಧಾರೆಯಿಂದಲೂ, ಬಿಲ್ವಪತ್ರೆಗಳಿಂದಲೂ ಪರಶಿವನನ್ನು ಪೂಜಿಸುತ್ತಾ ಕಾಲಕಳೆಯುವುದೇ ನಮಗೆ ಶ್ರೇಯಸ್ಸಾಧನವು. ಅಂತಹ ಕಾಶೀವಾಸವು ನಮಗೆ ಒದಗಿದರೆ ಸಾಕು. ಎಂದು ಹೇಳಲು ಆಗ ಸೂತಮಹಾಮುನಿಯು ಹೀಗೆಂದನು. ॥೭॥

ನಮಸ್ಕರಿಸಿ ಬೇಡಿದವರಿಗೆಲ್ಲಾ ಇಷ್ಟಾರ್ಥಪ್ರದನಾದ ಮಹಾದೇವನಿಗೂ, ಪಾರ್ವತಿಯ ಚರಣದ್ವಂದ್ವಗಳಿಗೂ, ವಿಘ್ನರಾಜನಾದ ಮಹಾಗಣಪತಿಗೂ, ಈಶ್ವರ ಪ್ರಿಯಪುತ್ರನಾದ ಷಣ್ಮುಖನಿಗೂ ಮೊದಲು ನಮಸ್ಕರಿಸುತ್ತೇನೆ ॥೮॥

ಯೂಯಂ ಮಾಯಾದಿನೋಃಹಪ್ರಶಮಿತದುರಿತಾ ಭಸ್ಮರುದ್ರಾಕ್ಷಭಾಜಾ
ಶಾಂತಾ ದಾಂತಾ ಭವಂತಃ ಸುಕೃತಕೃತಿವರಾಃ ಸತ್ರಿಣೋ ಮಿತ್ರಪಾತ್ರಾಃ ।
ಶಾಂತಾ ಲಿಂಗಸಮರ್ಚನಾರ್ಜಿತಯಶಾ ತುಂಗಾಂಗಸಂಗಾಚ್ಚ ನೋ
ಭೂಯಾತ್ಪಾತಕಭಂಗಮೇವ ನಿಯತಂ ಶಂಭೋಃ ಸ್ಫುಲಿಂಗೇಕ್ಷಣಾತ್ ॥೯॥

॥ ಋಷಯ ಊಚುಃ ॥

ಧನ್ಯೋ ಮಾನ್ಯೋಽಸ್ತಿ ಕೋಽನ್ಯಸ್ತ್ವನ ಸದೃಶಗುಣಂ ನಾನ್ಯಮಾತ್ಮಾ ಮಹೇದ್ಯಂ
ವೈದ್ಯಂ ವೇದ್ಯಪದಾರ್ಥಬೋಧನರ್ಥತಂ ಸಂಸಾರರುಜ್ಞಾಶಕಂ ।
ತ್ವಾಮೇವಾತ್ಮಗುಣಪ್ರಧಾನಮಧುನಾ ಶಂಭೋಃ ಕಥಾಸಾದರಂ
ಸಂಸಾರಾಂಬುಧಿತಾರಕಂ ಹರಕೃಪಾಪನ್ನಂ ಸದಾನೋ ನಮಃ ॥೧೦॥

ಕೋ ವಾ ಪರಂ ಶಿವರಹಸ್ಯಮಧುಃಪ್ರಕೃಷ್ಟಂ
ನಿಷ್ಠಾವತಾದ್ಯ ಸುಹೃದಾ ಶಿಪಿವಿಷ್ಟಮಿಷ್ಟಂ ।

---

ಮುನಿಗಳೇ, ನೀವು ಪುಣ್ಯಶಾಲಿಗಳು. ಭಸ್ಮರುದ್ರಾಕ್ಷಧಾರಣದಿಂದ ಮಾಯಾದಿಗಳನ್ನು ಜಯಿಸಿ ಪಾಪಮುಕ್ತರಾಗಿದ್ದೀರಿ. ನಿಮ್ಮಲ್ಲಿ ಶಾಂತಸ್ವಭಾವವೂ, ಸಹನ ಶಕ್ತಿಯೂ ಬಹಳವಾಗಿದೆ. ಯಜ್ಞಾಚರಣೆಯಿಂದ ಸುಕೃತಿಗಳಾಗಿರುವಿರಿ. ಶಿವಲಿಂಗಾರ್ಚನೆಯಿಂದ ಕೀರ್ತಿಯನ್ನು ಗಳಿಸಿರುವಿರಿ. ನನ್ನ ಉಪದೇಶದಿಂದ ಈಗ ನೀವು ಜ್ಞಾನಿಗಳಾಗಿರುವಿರಿ. ಈಗ ನಿಮ್ಮಿಷ್ಟದಂತೆ ಪರಮೇಶ್ವರನ ಕೃಪಾದೃಷ್ಟಿಯು ನಿಮಗೆ ಲಭಿಸಿ ಮತ್ತೂ ಸುಕೃತಿಗಳೆನಿಸಿರಿ. ಎಂದು ಸೂತಮಹಾಮುನಿಯು ಸಮಸ್ತ ಋಷಿವೃಂದವನ್ನು ಹೊಗಳಿ ಅವರ ದೃಢನಿಶ್ಚಯಕ್ಕೆ ಒತ್ತಾಸೆಯಿತ್ತನು. ॥೯॥

ಆಗ ಋಷಿಗಳು ಸೂತರನ್ನು ಕುರಿತು, “ಮಹರ್ಷಿಯೇ, ನಿನಗಿಂತ ಶ್ರೇಷ್ಠನಾದ ಆತ್ಮಜ್ಞಾನಿಯನ್ನು ನಾವು ಮತ್ತೆಲ್ಲಿ ನೋಡುವೆವು? ಅಜ್ಞಾನನಾಶಕವಾದ ಉಪನಿಷದರ್ಥವನ್ನೂ ಆತ್ಮಸ್ವರೂಪವನ್ನೂ ಬೋಧಿಸುವುದರಲ್ಲಿ ನಿನಗಿಂತ ಮೇಲಿನವರು ಯಾರೂ ಇಲ್ಲ. ಸಂಸಾರವೆಂಬ ರೋಗನಾಶಕವಾದ ಮತ್ತು ಸಂಸಾರ ಸಾಗರದಿಂದ ಉದ್ಧರಿಸುವ ಶಿವಕೃಪಾಪೂರ್ಣವಾದ ಈಶ್ವರಮಹಿಮೆಯನ್ನು ವಿವರಿಸಿ ನಮ್ಮನ್ನು ಕೃತಾರ್ಥರನ್ನಾಗಿ ಮಾಡಿದ ನೀನೇ. ನಮಗೆ ಮಾನ್ಯನು. ಅಂತಹ ನಿನ್ನನ್ನೇ ಸದಾ ನಾವು ವಂದಿಸುವೆವು. ॥೧೦॥

ಈ ಶಿವರಹಸ್ಯವೆಂಬ ಮಧುವನ್ನು ಸ್ಪಷ್ಟವಾದ ಮಾತಿನಿಂದ ನಮಗೆಲ್ಲಾ

ವೇತ್ತ್ಯಂ ಚ ಧರ್ತುಮಥವಾ ಕಿಮು ವಕ್ತುಮೇವಂ
ಶಿಷ್ಟೋ ವರಿಷ್ಠಮಹಿಮಾ ಭಗವಾಂಸ್ತ್ವಮೇವ ॥೧೧॥

ನಂದೀಶ ವಿಘ್ನೇಶಸಮೋಽಸಿ ಷಣ್ಮುಖ
ಪ್ರಭಾವತುಲ್ಯಪ್ರತಿಪಾತ್ರಮೇವ ।
ತ್ವನ್ನೋ ಗುರುಃ ಶಿವಕಥಾಸುರಸಾಮೃತಸ್ಯ
ದಾತಾ ಹಿ ದೀನವದನಾ ನ ಭವಾಮ ಭಾವಾಃ ॥೧೨॥

ಸತ್ರಂ ಪವಿತ್ರಮಧುನಾ ಸತತಂ ತ್ರಿನೇತ್ರ
ಚಾರಿತ್ರಪಾತ್ರಮಧುವತ್ಪ್ರಪಿಬಾಮ ಶ್ರೋತ್ರೈಃ ।
ಚಿತ್ರಂ ವಿಚಿತ್ರಪದಯಂತ್ರಿಕೆ ತಂತ್ರಮಂತ್ರ
ಸಾರಾರ್ಥಸಿಂಧುಸುರಹಸ್ಯಮಮುತ್ರ ಪುತ್ರ್ಯಂ ॥೧೩॥

---

ತಿಳಿಯಪಡಿಸಿ, ಅದರ ಆನಂದಾನುಭವವನ್ನು ತಾನೂ ಸವಿದು, ನಿಜವಾದ ಶಿವಮಹಿಮೆಯನ್ನು ಅರಿತವರಲ್ಲಿ ನೀನೇ ಮೊದಲಿನವನಲ್ಲವೆ? ಪೂಜ್ಯನಾದ ಸೂತಮಹರ್ಷಿಯೇ, ಇಗೋ ನಿನಗೆ ವಂದಿಸುವೆವು: ॥೧೧॥

ಸೂತಮಹರ್ಷಿಯೇ, ನೀನು ನಂದೀಶ್ವರ, ವಿಘ್ನೇಶ್ವರ, ಕುಮಾರಸ್ವಾಮಿ ಇವರುಗಳಂತೆ ಈಶ್ವರನಿಗೆ ಪ್ರೀತಿಪಾತ್ರನೆನಿಸಿರುವೆ. ಮಹಿಮೆಯಲ್ಲಿಯೂ ನೀನು ಅವರಿಗೆ ಸರಿಸಮನೆನಿಸಿರುವೆ. ಶಿವಕಥಾಮೃತವನ್ನು ನಮಗೆ ಉಪದೇಶಿಸಿದ ಗುರುವೇ ನೀನು. ನೀನೇ ಈ ಕಥಾಮೃತದಾತನು. ನಾವಾದರೋ ದೀನಮುಖವುಳ್ಳವರು. ಇಂತಹ ನಾವು ಶಿವನನ್ನು ತೃಪ್ತಿಪಡಿಸುವುದಾದರೂ ಹೇಗೆ? ॥೧೨॥

ಮಹರ್ಷಿಯೇ, ಇಷ್ಟು ವರ್ಷ ಪರ್ಯಂತ ನಡೆಸಿದ ಈ ಸತ್ರಾತ್ಮಕವಾದ ಮಹಾಯಜ್ಞದಲ್ಲಿ ಈ ಶಿವಚರಿತೆಯೆಂಬ ಕಥಾಮೃತವನ್ನು ನಮ್ಮ ಕಿವಿಗಳ ಮೂಲಕ ಪಾನಮಾಡಿ ಧನ್ಯರಾದೆವು. ಈ ಶಿವರಹಸ್ಯವು ಅರ್ಥಗರ್ಭಿತಗಳಾದ ಪದಗಳಿಂದಲೂ, ಮಂತ್ರತಂತ್ರಗಳ ಸಾರಾಂಶದಿಂದಲೂ ಕೂಡಿ, ರಹಸ್ಯವಾದ ವಿಷಯಗಳನ್ನೊಳಗೊಂಡು, ಪುತ್ರಪೌತ್ರಾದಿ ಸಂಪತ್ತುಗಳನ್ನು ಕೊಡುವುದಾಗಿದೆ. ಇಂತಹ ಪವಿತ್ರ ಗ್ರಂಥವನ್ನು ನಾವು ಪೂರ್ಣವಾಗಿ ನಿನ್ನ ದಯೆಯಿಂದ ಅರಿತಿದ್ದೇವೆ. ॥೧೩॥

ತತ್ರ ತ್ರಿನೇತ್ರಸುಪವಿತ್ರಕಥಾಷ್ಟವಾತ್ರ
ಸಂತ್ರಸ್ತ ಪಾತಕಭರಾಸ್ತಪಸಾರ್ಚಯಾಮಃ ।
ದೇಹಾಂತ ಏವ ಹಿ ಭವೇದವಿಮುಕ್ತವಾಸ
ಪುಣ್ಯೈಃ ಪಚೇಲಿಮಫಲೈರ್ಧವಲಾದ್ರಿವಾಸಃ ॥೧೪॥

ತತ್ರೈವ ಶಂಕರಗಣಾ ಪ್ರಭವಾಮ ಸಾಮಿಸೋಮ
ಪ್ರಕಾಮಶಿರಸೋ ಸಿತಭಸ್ಮಭೂಷಾಃ ।
ಯೋಷಾರ್ಧಗಾತ್ರಕಮನೀಯಸರಿಜ್ಜಟಾಲ
ಲೋಲಾಲಕಾಃ ಶಿವಪದಾಂಬುಜಸೇವಕಾಶ್ಚ ॥೧೫॥

ಕಿಂ ನೋ ಬ್ರಹ್ಮಪದೇಷು ವೈಷ್ಣವಯಶಸ್ಥಿತೇ ಪದೇ ವಾ ಪದಾಂ
ಸ್ತ್ರಾಪ್ಯೇನಾಪ್ಯಮಹೋ(?) ಮಹೇಂದ್ರಸದನೇ ದಿಕ್ಪಾಲಕಾನಾಂ ಪದೇ ।
ತತ್ರತ್ಯಾಕುಲ ಶಂಕರಾಚಲ ಮಹಾಕೈಲಾಸವಾಸಾಧಿಕಂ
ನಾಪ್ನೋತ್ಯೇವ ಫಲಂ ಸುಮುಕ್ತಿಷು ಪರಂ ವಾಂಛಾಪಿ ನಿಃಶ್ರೇಯಸೀ॥೧೬॥

ಪರಶಿವನ ಪವಿತ್ರ ಕಥಾಮೃತಪಾನದಿಂದ ತೃಪ್ತರಾಗಿ ನಾವು ಈಗ ಪಾಪ ನಿವಾರಣೆಗಾಗಿ ಪರಶಿವನನ್ನು ತಪಸ್ಸಿನಿಂದ ಅರ್ಚಿಸುತ್ತೇವೆ. ದೇಹಾಂತ್ಯಕಾಲದಲ್ಲಿ ಅವಿಮುಕ್ತಕ್ಷೇತ್ರವೆನಿಸಿದ ಕಾಶಿಯಲ್ಲಿ ವಾಸಮಾಡುತ್ತಾ, ಅಲ್ಲಿ ಶಿವಾರ್ಚನಾದಿಗಳಿಂದ ಪುಣ್ಯರಾಶಿಯನ್ನು ಸಂಪಾದಿಸಿ ತತ್ಪ್ರಯುಕ್ತವಾದ ಕೈಲಾಸವಾಸವನ್ನು ಪಡೆಯಲು ಪ್ರಯತ್ನಿಸುತ್ತೇವೆ. ||೧೪||

ಕೈಲಾಸದಲ್ಲಿ ಅರ್ಧಚಂದ್ರಶೇಖರನಾದ ಪರಶಿವನ ಗಣಗಳಲ್ಲಿ ಸೇರಿ, ಶುಭ್ರವಾದ ಭಸ್ಮಭೂಷಿತಾಂಗರಾಗಿ, ಅರ್ಧನಾರೀಶ್ವರನೂ, ದೇವಗಂಗಾಧರನೂ ಆದ ಪರಮೇಶ್ವರನ ಪಾದಸೇವಕರಾಗಿ ಶಿವಾನಂದವನ್ನನುಭವಿಸುತ್ತಾ ವಾಸಿಸಲು ಇಷ್ಟಪಡುತ್ತೇವೆ. ||೧೫||

ಬ್ರಾಹ್ಮಪದವಿ, ವಿಷ್ಣುಸನ್ನಿಧಿ, ದೇವೇಂದ್ರಗೃಹ, ದಿಕ್ಪಾಲಕರ ಸ್ಥಾನ ಇವುಗಳನ್ನು ಸುಲಭವಾಗಿ ಪಡೆಯಬಹುದು. ಆದರೆ ಆಯಾ ಸ್ಥಾನಗಳಲ್ಲಿ ಯಾವ ವಿಧವಾದ ಆನಂದವೂ ಲಭಿಸಲಾರದು. ಕೈಲಾಸವಾಸದಿಂದ ಯಾವ ಆನಂದಾದಿಗಳು ದೊರೆಯುವುವೋ, ಅಂತಹ ಸುಖಸಮೃದ್ಧಿಯು ಮೇಲೆ ಹೇಳಿದ ಯಾವ ಸ್ಥಳ

ಕೈಲಾಸವಹೌಲಿ ತರವಃ ಪಶವೋಲ್ಪಕೀಟಾ
ನಿತ್ಯಾಶ್ಶಿವಸ್ಯ ಕೃಪಯಾ ಖಲು ಸರ್ವದಾಪಿ ।
ಲೋಕ್ಯಾ ಪುನರ್ದಿವಿಷದಃ ಪ್ರತಿಕಲ್ಪನಾಶಾ
ಬ್ರಹ್ಮೇಂದ್ರ ವಿಷ್ಣುಮರುತೋ ವಸವೋರ್ಕರುದ್ರಾಃ ॥೧೭॥

ಕೈಲಾಸವಾಸಾಯ ಶಿವಪ್ರಸಾದತಃ
ಕಾಶೀನಿವಾಸಾಯ ಲಭೇಮ ಪುಷ್ಪೈಃ ।
ಯಜ್ಞೈರಥಾಜ್ಞಾನವಿನಷ್ಟಮಾನಸಾ
ವ್ರಜಾಮ ಶೀಘ್ರಂ ಕಿಲ ಮುಕ್ತಿಸಿದ್ಧ್ಯೈ ॥೧೮॥

ಕೈವಲ್ಯವಲ್ಲೀಮಿವ ತಾಂ ಪುರೀಂ ತದಾ
ಮುದಾ ಪುರಾರೇರ್ವಿವಿಶುಃ ಪ್ರಹೃಷ್ಟಾಃ ।
ಭಿಲ್ಲಾಕೃತೇಃ ಶಂಕರಕಾರ್ಮುಕಪ್ರಭಾ
ತೇ ವಾಲಖಿಲ್ಯಾಃ ಶಿಥಿಲಾಘಸಂಘಾಃ ॥೧೯॥

---

ದಲ್ಲಿಯೂ ಯಾರಿಗೂ ಸಿಗಲಾರದು. ಮತ್ತು ಅಲ್ಲಿ ಸೇರಿದವರಿಗೆ ಮುಕ್ತಿಸ್ಥಾನವನ್ನು ಪಡೆಯಬೇಕೆಂಬ ಅಭಿಲಾಷೆಯು ತಪ್ಪುವುದೇಇಲ್ಲ. ॥೧೬॥

ಶಿವಾನುಗ್ರಹದಿಂದ ಕೈಲಾಸಗಿರಿಶಿಖರದಲ್ಲಿ ಜನ್ಮತಾಳುವ ಮರಗಳು, ಪಶುಗಳು, ಕ್ರಿಮಿಕೀಟಗಳು, ಇವೆಲ್ಲಕ್ಕೂ ಪುನರ್ಜನ್ಮವೇ ಇರುವುದಿಲ್ಲ. ಇವೆಲ್ಲಾ ಸ್ಥಿರಜೀವಿಗಳಾಗುವುವು. ಮತ್ತೆ ದೇವಲೋಕದವರು, ಬ್ರಹ್ಮ, ವಿಷ್ಣು, ಇಂದ್ರ, ಮರುದ್ಗಣಗಳು ಅಷ್ಟವಸುಗಳು ದ್ವಾದಶಾದಿತ್ಯರು ಏಕಾದಶರುದ್ರರು ಇವರೆಲ್ಲರಿಗೂ ಪುನರ್ಜನ್ಮವಿರುವುದಲ್ಲದೆ ಪ್ರತಿಕಲ್ಪವೂ ಬೇರೆ ಬೇರೆ ದೇಹಗಳನ್ನು ಪಡೆಯುವರು. ॥೧೭॥

ತಪೋಯಜ್ಞಾದಿಪುಣ್ಯಕರ್ಮಾಚರಣೆಗಳಿಂದ ಕಾಶೀವಾಸವನ್ನು ಪಡೆಯುತ್ತೇವೆ. ಅಲ್ಲಿ ಶಿವಾನುಗ್ರಹವನ್ನು ಸಂಪಾದಿಸಿ ಅಲ್ಲಿಂದ ಕೈಲಾಸದಲ್ಲಿ ವಾಸಮಾಡುವ ಯೋಗ್ಯತೆಯನ್ನು ಹೊಂದುತ್ತೇವೆ. ಅಲ್ಲಿಯೇ ನಮಗೆ ಆನಂದಾನುಭವ ರೂಪವಾದ ಮುಕ್ತಿಯು ಸುಲಭವಾಗಿ ದೊರೆಯುವುದಲ್ಲವೆ! ॥೧೮॥

ಹೀಗೆ ಹೇಳುತ್ತಾ ಆ ವಾಲಖಿಲ್ಯಾದಿ ಸಮಸ್ತ ಮುನಿವರ್ಗವೂ ಮೋಕ್ಷ ಫಲವನ್ನು ಕೊಡುವ ಲತೆಯಂತೆ ವಿಶಾಲವಾಗಿ ಸುಂದರವಾಗಿರುವ, ಶಂಕರನ ಆವಾಸ

ದದರ್ಶುರಾದರ್ಶತಲಸ್ಥಿತೇವ ತಾಂ
ಗಂಗಾಂ ದ್ವಿಜಾ ತುಂಗತರಂಗಭಂಗಾಂ ।
ಉತ್ತುಂಗಲಿಂಗಾವಲಿಸೌಧಕುಂಭಾ
ಮಂಭೋಧರಾಂಕೆಪ್ರತಿಮಾಂ ಚ ಕಾಂತಾಂ ॥೨೦॥

ಕೈಲಾಸಶೈಲಮಣಿಮೌಲಿಗ ದಿವ್ಯಮಾಲೀ
ವ್ಯಾಲೀವ ತುಂಗಾವಲಿಸೌಧಕೇಲೀಂ ।
ಸಸ್ನುಃ ಸಮಸ್ತಾಘಹರೇ ಪ್ರಶಸ್ತಾಂ
ದಿವ್ಯಾಂ ಚ ತಾಂ ಶ್ರೀ ಮಣಿಕರ್ಣಿಕಾಂ ದ್ವಿಜಾಃ ॥೨೧॥

ಸಂತರ್ಪ್ಯ ದೇವರ್ಷಿಪಿತೄಂಸ್ತದಾ ಮುದಾ
ಗಂಗಾತಟೇ ತೇ ಕೃತಭಸ್ಮಭೂಷಣಾಃ ।

ಸ್ಥಾನವಾದ, ಮತ್ತು ಬೇಡನ ಆಕಾರವನ್ನು ಪಡೆದ ಪರಶಿವನ ಧನುಸ್ಸಿನ ಪ್ರಭೆಯನ್ನು ಬೆಳಗಿಸುವ ಕಾಶೀಕ್ಷೇತ್ರವನ್ನು ಕುರಿತು ಪ್ರಯಾಣ ಮಾಡಿದರು. ||೧೯||

ಆ ಕಾಶೀಕ್ಷೇತ್ರವಾದರೋ ವಿಶಾಲವಾದ ಕನ್ನಡಿಯಂತೆ ಸಮಮಟ್ಟವಾದ ಭೂಭಾಗದಿಂದ ಪ್ರಕಾಶಿಸುತ್ತಿದ್ದಿತು. ಅಲ್ಲಿ ದೊಡ್ಡ ದೊಡ್ಡ ಅಲೆಗಳಿಂದಲೂ, ಪಕ್ಷಿಗಳ ಹಾರಾಟದಿಂದಲೂ, ಗಂಗಾನದಿಯು ಪ್ರವಹಿಸುತ್ತಿತ್ತು. ಎತ್ತರವಾದ ಶಿವಲಿಂಗಗಳೂ ಉನ್ನತಗಳಾದ ಉಪ್ಪರಿಗೆಯ ಮನೆಗಳೂ ವಿರಾಜಿಸುತ್ತಿದ್ದುವು. ಇಂತಹ ಸುಂದರವಾದ ಶಿವಕ್ಷೇತ್ರವು ಗಂಗಾಧರನಾದ ಶಿವನ ತೊಡೆಯಮೇಲೆ ಪ್ರಕಾಶಿಸುವ ಗೌರೀದೇವಿಯಂತೆ ಮನೋಹರವಾಗಿ ಕಾಣುತ್ತಿದ್ದಿತು. ||೨೦||

ಕಾಶಿಯಲ್ಲಿ ಗಂಗಾನದಿಯು ಹರಿಯುವ ಮಣಿಕರ್ಣಿಕೆಯೆಂಬ ತೀರ್ಥವು ಕೈಲಾಸ ಪರ್ವತವೆಂಬ ನಾಗಮಣಿಯನ್ನು ಹೊಂದಿರುವ ಸರ್ಪದೋಪಾದಿಯಲ್ಲಿ ವಿಶಾಲವಾಗಿ ವ್ಯಾಪಿಸಿದ್ದಿತು. ಅದರ ಸುತ್ತಲೂ ಎತ್ತರವಾದ ಸೌಧರಾಜಿಗಳಿದ್ದುವು. ಇಂತಹ ಸಂಪದ್ಭರಿತವಾದ ಮಣಿಕರ್ಣಿಕಾ ತೀರ್ಥದಲ್ಲಿ ಆ ಋಷಿಗಳೆಲ್ಲರೂ ಸ್ನಾನ ಮಾಡಿದರು. ||೨೧||

ಆ ಗಂಗಾತೀರದಲ್ಲಿ ದೇವ ಋಷಿ ಪಿತೃತರ್ಪಣಗಳನ್ನು ನೆರವೇರಿಸಿಕೊಂಡು, ಅಲ್ಲಿಯೇ ಭಸ್ಮತ್ರಿಪುಂಡ್ರ, ರುದ್ರಾಕ್ಷಮಾಲೆ ಇವುಗಳಿಂದ ಅಲಂಕೃತರಾಗಿ ಬಿಲ್ವಪತ್ರೆ

